# ಬಿ.ಎಚ್. ಶ್ರೀಧರ

# ಸಮಗ್ರ ಸಾಹಿತ್ಯ

ಸಂಪುಟ–೮

## ಬಿಡಿಲೇಖನಗಳು – ೨



ಸಂಪಾದಕರು

**ರಾಜಶೇಖರ ಹೆಬ್ಬಾರ**



**ತೇಜು ಪಬ್ಲಿಕೇಷನ್ಸ್**

ಬಿ.ಎಚ್. ಶ್ರೀಧರ ಸಮಗ್ರ ಸಾಹಿತ್ಯ

ಸಂಪುಟ – ೮

# ಬಿಡಿಲೇಖನಗಳು – ೨

ಸಂಪಾದಕರು

**ರಾಜಶೇಖರ ಹೆಬ್ಬಾರ**




**ತೇಜು ಪಬ್ಲಿಕೇಷನ್ಸ್**
ನಂ. 1014, 24ನೇ ಮುಖ್ಯರಸ್ತೆ, 16ನೇ ಕ್ರಾಸ್,
ಬಿ.ಎಸ್.ಕೆ. 2ನೇ ಹಂತ, ಬೆಂಗಳೂರು – 560 070.

B.H. Shridhar's Complete Works
Volume - 8
**BIDILEKHANAGALU - 2**

Edited by
**Rajashekhar Hebbar**

Published by
V. Padmavathi, on behalf of **Teju Publications**
# 233, 7th 'A' Cross, Shastrinagar,
Bangalore - 560 028. Mob : 9900195626



First Edition : 2022

Pages : 452 (Box Binding)

Price : ₹ 500 ಬೆಲೆ : ರೂ. ೫೦೦

No. of Copies : 1000

70 GSM N.S. Maplitho – 1/8 Demy

***Cover Design :*** **Bagur Markandaya**

***Typeset at :*** **Page Designers**
Bangalore - 560 004. Ph : 41691270 E-mail : bsmadhu75@gmail.com

***Printed at :*** **Satyananada Printers**
Pipeline Service Road, Magadi Road,
Bangalore.

# ಅರ್ಪಣೆ

ನೋವು ನುಂಗಿ ನಕ್ಕ ಶ್ರೀಧರರ ಧರ್ಮಪತ್ನಿ

**ಶ್ರೀಮತಿ ರಮಾದೇವಿಯವರಿಗೆ**



## ಚಂದ್ರಲೋಕದ ತಾಯಿ

ತುಸುವೆ ನೋಡಿದೆವು ಎನ್ನುವಂತಿಲ್ಲ
ಅರೆಗಳಿಗೆ ಕಂಡರೂ ಅದು ಪೂರ್ಣವೇ
ಕಂಡದ್ದಲ್ಲ, ಕಣ್ಣ ತುಂಬಿತು ನೋಟ
ಕಣ್ಣುತುಂಬಿದ ಮೇಲೆ ಮನ ಬಾಕಿಯೇ?

ಹಲವೊಮ್ಮೆ ನೋಡಿದ್ದಕ್ಕೆ ಹೆಚ್ಚಾಗಲಿಲ್ಲ
ಹೊಟ್ಟೆಯಲಿ ಹುಟ್ಟಿದ್ದಕ್ಕೇ ಮಕ್ಕಳೆನಿಸಿದ್ದಲ್ಲ
ದೂರ ನಿಂತವರೂ ತಮ್ಮ ಹತ್ತಿರದ ಬಂಧುಗಳೇ
ಅರಿಯದಿದ್ದವರೂ ತಮ್ಮ ಸ್ವಂತದವರೇ!

ಹುಲ್ಲು ಸಸಿ ಕಲ್ಲುಗಳೆಲ್ಲವನೂ ಹಾದು
ಹೊಳೆಸುತ್ತ ಹರಿಸುತ್ತ ಮತ್ತೆ ಹಡೆದಿರಿ ತಾವು
ಭೂಮಿಯೆಂದೆನಲಾರೆ ಚಂದ್ರನಂಥವರನ್ನು
ಮಣ್ಣಾಗಬಹುದೇ ಬೆಳದಿಂಗಳು?

**–ಎಸ್.ಮಂಜುನಾಥ್**

(ಖ್ಯಾತ ಕವಿ)

# ಕವಿ ಕಾವ್ಯ ವಿಚಾರ

ಕವಿ, ಚಿಂತಕ, ವಿಮರ್ಶಕ, ವಾಗ್ಮಿ, ಬಹುಶ್ರುತ ವಿದ್ವಾಂಸ ಪ್ರೊ.ಬಿ.ಎಚ್.ಶ್ರೀಧರರ ಜನನ ೧೯೧೮, ಏಪ್ರಿಲ್ ೨೪ ರಂದು ಬಿಜೂರಿನ (ದ.ಕನ್ನಡ) ಬವಲಾಡಿಯಲ್ಲಿ. ತಂದೆ ಸೀತಾರಾಮ ಹೆಬ್ಬಾರ, ತಾಯಿ ನಾಗಮ್ಮ. ಲಕ್ಷ್ಮಿಯದಿಲ್ಲದಿದ್ದರೂ ಸರಸ್ವತಿಯ ಕೃಪಾಕಟಾಕ್ಷ ಧಾರಾಳವಾಗಿ ಇದ್ದ ಆಶುಕವಿಗಳ, ಪಂಡಿತರ, ಸತ್ಯವ್ರತರ ಕುಟುಂಬ. ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಜ್ಞಾನನಿಧಿಗಳೂ, ಗುಣನಿಧಿಗಳೂ ಆದ ಶಿಕ್ಷಕರಿಂದ ಬೋಧನೆ, ಸಂಸ್ಕೃತ ಎಮ್.ಎ. ಪೂರೈಕೆ (೧೯೪೨). ರಮಾದೇವಿಯವರೊಡನೆ ೧೯೪೬ರಲ್ಲಿ ವಿವಾಹ. ನಾಲ್ಕು ಹೆಣ್ಣು, ಒಂದು ಗಂಡು ಮಕ್ಕಳ ತಂದೆ. ೧೯೪೨ರಲ್ಲಿ ಮಿಲಿಟರಿ ಅಕೌಂಟ್ಸ್ ಆಫೀಸಿನಲ್ಲಿ ಗುಮಾಸ್ತಗಿರಿಯಿಂದ ಆರಂಭವಾದ ಉದ್ಯೋಗಪರ್ವ ಶಿಕ್ಷಕವೃತ್ತಿ, ಪತ್ರಿಕೋದ್ಯಮ ಪ್ರಾಚಾರ್ಯಗಿರಿಯವರೆಗೆ ಹಬ್ಬಿದೆ. ಈ ಎಲ್ಲ ಕಾಲಘಟ್ಟಗಳಲ್ಲೂ (೧೯೪೫ರಿಂದಲೇ) ವಿವಿಧ ಸಾಹಿತ್ಯಪ್ರಕಾರಗಳಲ್ಲಿ ಅವಿರತವಾಗಿ ಬರಹ, ಬರಹ–ದೇಹ ಸಂಪೂರ್ಣವಾಗಿ ಸೋಲುವ (ನಿಧನ ೧೯೯೦ ಏಪ್ರಿಲ್ ೨೪) ತುಸು ಮುಂಚಿನವರೆಗೂ. ಶಿಶುಸಾಹಿತ್ಯದಿಂದ ಹಿಡಿದು ವಿಮರ್ಶೆ, ಇತಿಹಾಸ, ದರ್ಶನಗಳವರೆಗೂ ಶ್ರೀಧರರ ಆಸಕ್ತಿ, ಅಭ್ಯಾಸ, ಕೊಡುಗೆ. ಕಾವ್ಯಸೂತ್ರ, ಜ್ಞಾನಸೂತ್ರ, ರಾಷ್ಟ್ರಸೂತ್ರಗಳು ಸೂತ್ರತ್ರಯಗಳೆನಿಸಿಕೊಂಡವುಗಳು, ಬಹು–ಬಹುಮಾನಿತವಾದವುಗಳು. ಜೀವನದ ಮತ್ತು ಸಾಹಿತ್ಯ ಶ್ರೇಷ್ಠತೆಯ ನಿಕಷದ ಅನ್ವೇಷಣೆಯಲ್ಲಿ ಪಾಶ್ಚಾತ್ಯ–ಪೌರಾತ್ಯ ಇತಿಹಾಸ, ಸಾಹಿತ್ಯ, ದರ್ಶನಗಳನ್ನು ಅಭ್ಯಸಿಸಿ ಅರಗಿಸಿಕೊಂಡು ನಿಖರ ನಿಲುವಿಗೆ ಬಂದು ಅದನ್ನು ತಮ್ಮ ಐವತ್ತಕ್ಕೂ ಹೆಚ್ಚಿನ ಕೃತಿಗಳಲ್ಲಿ, ಅಸಂಖ್ಯಾತ ಲೇಖನಗಳಲ್ಲಿ ಸ್ಪಷ್ಟವಾಗಿ ("ಧರ್ಮಾದರ್ಥಶ್ಚ ಕಾಮಶ್ಚ" ಎಂದ ವ್ಯಾಸನಷ್ಟೇ ಖಚಿತವಾಗಿ) ಅಭಿವ್ಯಕ್ತಿಸಿದ ವಿಶಿಷ್ಟ ಲೇಖಕ.

# ಬಿಡಿಲೇಖನಗಳ ಬೆನ್ನುಹತ್ತಿ.....

ಕವಿ, ವಿಮರ್ಶಕ, ಚಿಂತಕ ಬಿ.ಎಚ್. ಶ್ರೀಧರರ ಅಲಭ್ಯವಾಗಿದ್ದ ಕೃತಿಗಳ ಪುನರ್ಮುದ್ರಣ ಆರು ಸಂಪುಟಗಳಲ್ಲಿ (ಕಾವ್ಯ, ವಿಮರ್ಶೆ, ವಿಚಾರ, ಸಂಕೀರ್ಣ, ಅನುವಾದ–೧ ಮತ್ತು ಅನುವಾದ–೨) "ಬಿ.ಎಚ್. ಶ್ರೀಧರ ಸಮಗ್ರಸಾಹಿತ್ಯ ಸರಣಿ"ಯ ಭಾಗವಾಗಿ ಪೂರ್ಣವಾಗಿರುವುದು ಸುವೇದ್ಯ. ತದನಂತರ, 'ವೇದರಹಸ್ಯ' (ಶ್ರೀ ಅರವಿಂದರ The Secret of the Veda ಕೃತಿಯ ಕನ್ನಡಾನುವಾದ), 'ಬೇತಾಳಗಳ ಕುಣಿತ' (ಹರಟೆ), 'ಪಂಚಮುಖಿ' (ಪ್ರಬಂಧ ಸಂಕಲನ) ಮತ್ತು 'ಶ್ರೀರಮಣ ಮಾರ್ಗ ಭಾಗ–೧, ಭಾಗ–೨' (ಶ್ರೀ ಸಾಧು ಓಂ ಅವರ The Path of sri Ramana - Part One ಮತ್ತು Part Two ಕೃತಿಗಳ ಕನ್ನಡಾನುವಾದ) ಕೃತಿಗಳು ಪ್ರತ್ಯೇಕವಾಗಿ ಬಂದವು.

ಹಾಗಾದರೆ, ಇಲ್ಲಿಗೆ ಶ್ರೀಧರ ಸಾಹಿತ್ಯದ ಮುದ್ರಣಕ್ಕೆ ಪೂರ್ಣವಿರಾಮವೇ ಎಂದರೆ, ಹಾಗಲ್ಲ. ೪೦ರ ದಶಕದಿಂದಲೇ ಬರೆಯಲು ಆರಂಭಿಸಿದ್ದ ಶ್ರೀಧರರು ೮೦ರ ದಶಕದ ಕೊನೆಯವರೆಗೂ ಬರೆಯುತ್ತಲೇ ಇದ್ದರು. ಜೀವನ, ಜಯಂತಿ, ಜಯಕರ್ನಾಟಕ, ಕನ್ನಡನುಡಿ, ತಾಯಿನುಡಿ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಪ್ರಬುದ್ಧ ಕರ್ನಾಟಕ, ಯುಗಪುರುಷ, ಮಂಜುವಾಣಿ, ಹಲವಾರು ಅಭಿನಂದನ ಗ್ರಂಥಗಳು, ವಿಶೇಷಾಂಕಗಳು.... ಒಂದೇ, ಎರಡೇ? ಎಲ್ಲೆಲ್ಲಿಯೂ ಶ್ರೀಧರರ ಲೇಖನಗಳಿದ್ದವು. ಅವುಗಳ ಸಂಕಲನವಾಗದೇ ಶ್ರೀಧರ ಸಾಹಿತ್ಯಕ್ಕೆ ಸಮಗ್ರತೆ ಸಿದ್ಧಿಸದು. ಆದರೆ ಅಸಂಖ್ಯ ಪ್ರಮಾಣದಲ್ಲಿ ಅಲ್ಲಿ ಇಲ್ಲಿ ಹಂಚಿಹೋಗಿರುವ ಬಿಡಿಲೇಖನಗಳನ್ನು ಒಂದೆಡೆ ಸೇರಿಸುವ ಕೆಲಸ ಸುಲಭದ್ದಲ್ಲ. ಆದರೂ ಈ ನಿಟ್ಟಿನಲ್ಲಿ ಕಿಂಚಿತ್ ಪ್ರಯತ್ನ ಪ್ರಾರಂಭಿಸಿದ್ದಾಯ್ತು.

ಶ್ರೀಧರರ ಸ್ವಂತ ಸಂಗ್ರಹದಲ್ಲಿದ್ದ ಕೆಲ ಲೇಖನಗಳನ್ನು ಮೊದಲು ಸೇರಿಸಿ ಬಳಿಕ ಇನ್ನುಳಿದ, ಹೊಳೆದ ಮೂಲಗಳನ್ನು ಹುಡುಕುವ ಕಾರ್ಯದಲ್ಲಿ ತೊಡಗಿಕೊಂಡೆವು. ಈ 'ಹುಡುಕುವ' ಕೆಲಸಕ್ಕೆ ಮಾರ್ಗದರ್ಶಕರಾಗಿ, ಸ್ಫೂರ್ತಿಯಾಗಿ ನಿಂತವರು ನಮ್ಮವರೇ ಆದ ಖ್ಯಾತ ವಿಮರ್ಶಕ ಡಾ. ಎಮ್.ಜಿ. ಹೆಗಡೆಯವರು. ಬಿಬಿಲೋಗ್ರಫಿಯಿಂದಲೋ, ಇನ್ನಾವಾವ ಮೂಲಗಳಿಂದಲೋ ಅವರು ಕಳಿಸುತ್ತಿದ್ದ ಲೇಖಕ ಸೂಚಿಯಿಂದ ಒಂದಿಷ್ಟು ಲೇಖನಗಳ ಪಟ್ಟಿ ಸಿದ್ಧವಾಯಿತು. ಆ ಪಟ್ಟಿಯ ಬೆನ್ನುಹತ್ತಿ ಹೊರಟವರು ಶ್ರೀಧರರ ಅಳಿಯ ಶ್ರೀ ಕೃಷ್ಣಲೋಕರೆಯವರು. ಬೆಂಗಳೂರಿನ ಕರ್ನಾಟಕ ಸಾಹಿತ್ಯ ಪರಿಷತ್ತಿನಲ್ಲಿ ಜಯಂತಿ, ಜಯಕರ್ನಾಟಕ, ಪ್ರಬುದ್ಧ ಕರ್ನಾಟಕ, ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆಗಳಲ್ಲಿನ

ಕೆಲವು ಲೇಖನಗಳು ದೊರೆತವು. "ಮಾಸ್ತಿ ಕನ್ನಡದ ಆಸ್ತಿ" ಎಂದು ಶ್ರೀಧರರು ಅಕ್ಕರೆಯಿಂದ ಕರೆದಿದ್ದ ಶ್ರೀಮಾಸ್ತಿಯವರ "ಜೀವನ" ಪತ್ರಿಕೆಯ ಶ್ರೀಧರ ಲೇಖನಗಳ ಯಾದಿಯನ್ನು ತಾವೇ ತಯಾರಿಸಿ ಸಕಾಲದಲ್ಲಿ ನಮಗೆ ಅವುಗಳನ್ನು ಒದಗಿಸಿದ್ದು ಮಾಸ್ತಿಯವರ ಮೊಮ್ಮಗಳು ಡಾ. ವಿ. ವಸಂತಶ್ರೀ! ಅವರಿಗೆ ನಮ್ಮ ತುಂಬು ಹೃದಯದ ಕೃತಜ್ಞತೆಗಳು ಸಲ್ಲಲೇಬೇಕು. ಹಾಗೆಯೇ, ಕಿನ್ನಿಗೋಳಿಯ ಶ್ರೀಭುವನಾಭಿರಾಮರು ನೀಡಿದ ಸಾದರ ಸಹಕಾರದಿಂದ 'ಯುಗಪುರುಷ' ಸಂಚಿಕೆಯಲ್ಲಿನ ಹಲವು ಲೇಖನಗಳು ದೊರೆತವು. ಅಷ್ಟೇ ಆಸಕ್ತಿಯಿಂದ ಧರ್ಮಸ್ಥಳದ ಶ್ರೀಜಯೇಂದ್ರರು 'ಮಂಜುವಾಣಿ'ಯ ೮೦ರ ದಶಕದ ಸಂಚಿಕೆಗಳನ್ನು ನೀಡಿದರು. ಅಲ್ಲಿಂದ ಶ್ರೀಧರರು ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದ ಕುಮಟೆಯ ಕೆನರಾ ಕಾಲೇಜಿನ ಗ್ರಂಥಾಲಯದಿಂದ ವಾರ್ಷಿಕ ಸಂಚಿಕೆಗಳನ್ನು ಪಡೆದು ಕೆಲವು ಬರಹಗಳನ್ನು ಸಂಗ್ರಹಿಸಿದೆವು. ಈ ಸಂಗ್ರಹಕಾರ್ಯದಲ್ಲಿ ಸಹಕರಿಸಿದ ಎಲ್ಲ ಮಹನೀಯರಿಗೂ ಹಾರ್ದಿಕ ಧನ್ಯವಾದಗಳು.

ಅಂತೂ ನಿಧಿ ಹುಡುಕಲು ಹೊರಟ ಈ ರೋಚಕ ಪಯಣದಲ್ಲಿ ಈವರೆಗೆ ದೊರೆತ ಲೇಖನಗಳನ್ನು ಸೇರಿಸಿ ನೋಡಿದಾಗ ಸಾವಿರಕ್ಕೂ ಅಧಿಕ ಪುಟಗಳಷ್ಟಿದ್ದವು ಅವು! ಸದ್ಯಕ್ಕೆ ಎರಡು ಸಂಪುಟಗಳಲ್ಲಿ ಅವುಗಳನ್ನು ತಂದುಬಿಡೋಣವೆಂದು ತಮ್ಮ ಎಂದಿನ ಆಸಕ್ತಿ, ಉತ್ಸಾಹಗಳಿಂದ ಸೂಚಿಸಿದವರು 'ಬಿ.ಎಚ್. ಶ್ರೀಧರ – ಸಮಗ್ರ ಸಾಹಿತ್ಯ ಸರಣಿ'ಯನ್ನು ಪ್ರಕಟಿಸಿದ 'ತೇಜು ಪಬ್ಲಿಕೇಷನ್ಸ್'ನ ಮಾರ್ಗದರ್ಶಕರಾದ ಶ್ರೀ ಎನ್. ರಾಮನಾಥರು. ಅಲ್ಲಿಗೆ ಈಗ ಶ್ರೀಧರರ ಬಿಡಿಲೇಖನಗಳು ಎರಡು ಸಂಪುಟಗಳಲ್ಲಿ ಬರುತ್ತಿವೆ. ಸ್ಥೂಲವಾಗಿ ಅವುಗಳನ್ನು ಸಾಹಿತ್ಯಿಕ, ವ್ಯಕ್ತಿಚಿತ್ರ, ಚಾರಿತ್ರಿಕ, ತಾತ್ವಿಕ ಇತ್ಯಾದಿಯಾಗಿ ವರ್ಗೀಕರಿಸಿಕೊಂಡಿದ್ದೇವೆ. ಶ್ರೀಧರರ ಈವರೆಗಿನ ಕೃತಿಗಳಲ್ಲಿ ಕಂಡಿರದ ನೋಟವುಳ್ಳ ವಿಶಿಷ್ಟ ಲೇಖನಗಳು ಇಲ್ಲಿ ಸಿಗುತ್ತವೆ. ಆ ವೈಶಿಷ್ಟ್ಯವನ್ನು ತೋರಿಸುವ ಕೆಲವು ಉದಾಹರಣೆಗಳು.

**(i) ವಿಚಾರಕ್ಕೆ ಬಹಿಷ್ಕಾರ**

ವಿಚಾರಕ್ಕೆ ವ್ಯಕ್ತಿಹಿತ, ಸಮಾಜಹಿತ, ರಾಷ್ಟ್ರಹಿತ, ವರ್ಗಹಿತ, ಕುಟುಂಬಹಿತ, ಜಾತಿಹಿತ ಮುಂತಾದ ಅನೇಕ ಸರ್ಪಗಳು ಪರಿಬಂಧಗಳಾಗುತ್ತವೆ. ವ್ಯಕ್ತಿಯಲ್ಲೇ ಪ್ರಿಯ ಮತ್ತು ಹಿತಗಳಲ್ಲಿ ವಿರೋಧ ಉಂಟಾಗುವುದುಂಟು. ಈ ಹಿತ–ಪ್ರಿಯಗಳ ವೈಯಕ್ತಿಕ, ಸಾಮೂಹಿಕ, ಐಹಿಕ, ಆಮುಷ್ಮಿಕ ವಿರೋಧಗಳ ತಾಂಡವದಿಂದ ಭ್ರಾಂತಿಯೆದ್ದಿರುವುದನ್ನು ಮಾನವೇತಿಹಾಸ ತೋರಿಸುತ್ತದೆ. ವೇದವಾದಿಗಳಿಂದ ಹಿಡಿದು ವ್ಯಾಪಾರಿಗಳವರೆಗೆ ತಮ್ಮ ತಮ್ಮ ಹಿತಸಂರಕ್ಷಕ ತತ್ವ, ಧ್ಯೇಯ, ಆದರ್ಶಗಳ ಆರಾಧನೆ ಅಂತಃಸತ್ಯವಾಗಿದೆ, ಬಹಿಃಸತ್ಯವಾಗಿಯೂ ಪ್ರಕಟವಾಗಿದೆ. ಪ್ರಪಂಚಪ್ರಜ್ಞೆಯುಳ್ಳ ಮನದ ವಿಚಾರ ವ್ಯಂಜಿಸುವ ಸತ್ಯ ಸರ್ವಥಾ ನ್ಯೂನ, ಅವ್ಯಾಪಕ, ಅಸಾರ್ವತ್ರಿಕ ಎಂದು ತಿಳಿದ ಮನ "ನ ಧರ್ಮೋ ನ ಚಾರ್ಥೋ ನ ಕಾಮೋ ನ ಮೋಕ್ಷಃ। ಚಿದಾನಂದರೂಪಃ ಶಿವೋಹಂ ಶಿವೋಹಂ" ಎಂದ (choiceless) ಅವಧೂತ ಸ್ಥಿತಿಯನ್ನಲ್ಲದೆ ಮತ್ತೇನನ್ನು ಹಿಡಿದೀತು?

## (ii) ವಿಗ್ರಹಾರಾಧನೆ

ಸ್ಪೃಶ್ಯ – ದೃಶ್ಯವಾದ ಪದಾರ್ಥವು ಇದ್ದರೇನೇ ಆ ಪದಾರ್ಥದ ಅದೃಶ್ಯ – ಅಸ್ಪೃಶ್ಯವಾದ ಚಿತ್ರ ಮನೋಭಿತ್ತಿಯಲ್ಲಿ ನಿಲ್ಲುವುದು. ಆದುದರಿಂದ ವಿಗ್ರಹದ ಅವಶ್ಯಕತೆಯುಂಟಾಯಿತು. ದೃಶ್ಯ ಪ್ರಪಂಚದ ಸಾಕಾರ ಕಲ್ಪನೆ ಇಲ್ಲದೆ ಸ್ಪಷ್ಟವಾದ ಆಲೋಚನೆಯನ್ನು ಮಾಡುವುದು ಅಸಾಧ್ಯವಾದುದರಿಂದಲೇ ಸಾಕ್ಷಾತ್ ಮೂರ್ತಿಯನ್ನಲ್ಲದಿದ್ದರೂ ಶಿಲುಬೆಯನ್ನು, ಚಂದ್ರನಕ್ಷತ್ರಗಳನ್ನು – ಕ್ರಿಶ್ಚಿಯನ್ನರೂ, ಮುಸಲ್ಮಾನರೂ ಪ್ರತೀಕಗಳನ್ನಾಗಿ ಆರಿಸಿಕೊಂಡಿದ್ದಾರೆ. ಅತಿಯಾದ ಭಾವಿಕತೆಯಿಂದ ಭಕ್ತಿಯೋಗ ಅಧಃಪತಿತವಾದಂತೆ, ಅತಿ ಬೌದ್ಧಿಕತೆಯಿಂದ ಜ್ಞಾನಯೋಗ ಕೆಲವೊಮ್ಮೆ ಅಧಃಪಾತ ಹೊಂದಿತು; ಚಾರ್ವಾಕತೆ ಅಥವಾ ವಂಚಕ ಪಾರಮಾರ್ಥಿಕತೆಗೆ ಇಳಿದಿತು; ಭೌತವಾದಕ್ಕೆ ಬಂದು ಮುಟ್ಟಿತು. ಪೂಜ್ಯಪೂಜಾವ್ಯತಿಕ್ರಮ, ಅಪೂಜ್ಯಪೂಜೆ ಮತ್ತು ಅಪೂಜೆ ಈ ಮೂರೂ ಸಮಾಜ ಕಂಟಕಗಳು.

## (iii) ಸಾಹಿತ್ಯ ಮತ್ತು ಮಹಾಕಲ್ಪನೆ

ಭಾರತ ಸ್ವಾತಂತ್ರ್ಯವನ್ನು ಸಂಪಾದಿಸುವಾಗ ಹೋರಾಟದ ಗುರಿ ಎಂದಿಟ್ಟುಕೊಂಡಿದ್ದ ಸ್ವರಾಜ್ಯದ ಕಲ್ಪನೆ ಕೂಡ 'ಮಹಾ' ಎನ್ನಿಸಲಿಲ್ಲ ಎನ್ನಬಹುದು. ಅನಂತರ ಹುಟ್ಟಿದ ಸಾಹಿತ್ಯಕೃತಿಗಳನ್ನು ಅವಲೋಕಿಸಿದರೆ. ಏಕೆ? ಸ್ವರಾಜ್ಯವೊಂದು ಸಾಧನವಲ್ಲದೆ ಸಿದ್ಧಿಯಲ್ಲ – ಸಿದ್ಧಿಗೆ ಮುಟ್ಟಬೇಕಾದ ಸಾಧ್ಯವು ಅಥವಾ ಜನಜೀವನದ ಅಂತಃ ಸಮಾಧಾನಕ್ಕೆ ಕಾರಣವಾದ ಮಹಾಮೌಲ್ಯವು ಸ್ವರಾಜ್ಯ, ಸ್ವಾತಂತ್ರ್ಯಗಳಲ್ಲ – ಶಾಂತಿ. "ಅಶಾಂತಸ್ಯ ಕುತಃ ಸುಖಃ" ಎಂಬುದು ಹೃದ್ಗತವಾಗಿ ನೆಲೆ ನಿಂತಿರುವ ಜನಾಂತರಂಗವು ಸತ್ವಪೂರ್ಣವಾದ ಶಾಂತಿಯನ್ನಲ್ಲದೆ ಅದಕ್ಕಿಂತ ಕಡಿಮೆ ಮಟ್ಟದ ಸಾಧನಾತ್ಮಕ ಕಲ್ಪನೆಯನ್ನು ಸರ್ವದಾರಾಧ್ಯವನ್ನಾಗಿ ಗ್ರಹಿಸೀತೇ? ಮಹಾಯುದ್ಧವನ್ನು ಚಿತ್ರಿಸುವ ಮಹಾಭಾರತದ ಮಹಾರಸ ಶಾಂತ – ವೀರವಲ್ಲ!

## (iv) ನವ್ಯಕಾವ್ಯದ ನವ್ಯ ಸೌಂದರ್ಯ

ಜೀವನದ ಬಗ್ಗೆ ವಾಸ್ತವಿಕ ಜ್ಞಾನವಿಲ್ಲದೆ ಹಳೆಯ ಕಾಲದ ಕನಸು–ಕಲ್ಪನೆಗಳನ್ನೇ ಇಟ್ಟುಕೊಂಡು ಸರ್ವತ್ರ ಅವನ್ನೇ ಕಾಣಬಯಸುವ ಜಡಮನಗಳು ನವ್ಯಕಾವ್ಯವನ್ನು ಮೆಚ್ಚಲಾರವು. ಹಳೆಯ ಬಾಳಿನಲ್ಲಿಯ ನಿತ್ಯ ನೂತನ ಕಲ್ಪನೆಗಳನ್ನು ಬಿಡದೆ ಅದರಲ್ಲಿಯ ಹೆಣವಾದ ಕಲ್ಪನೆಗಳನ್ನೂ, ಭಾವನಾಂಶಗಳನ್ನೂ ಬಿಟ್ಟು, ಯುಕ್ತವೆನಿಸಿದ ಹೊಸ ಬಾಳ್ಗನಸುಗಳನ್ನು ಗ್ರಹಿಸಿ, ಅಯುಕ್ತವನ್ನು ಬತ್ತಲೆಯಾಗಿ ಬಿಂಬಿಸಿ, ಹೊಸ ಓಜಸ್ಸಿನಿಂದ ಹರಿಯುವುದು ನವ್ಯಕಾವ್ಯಧಾರೆಯ ನೀಳ್ನಡೆ. ಕನ್ನಡದ ನವ್ಯಕವಿದೃಷ್ಟಿ ಪಾಶ್ಚಾತ್ಯ ಅಥವಾ ಇತರ ನವ್ಯವಾದದ ದಾಸ್ಯದಲ್ಲಿಲ್ಲ. ಅದು ಪರಪುಷ್ಟವೆಂದೊಮ್ಮೆ ಹೇಳಿಸಿಕೊಂಡರೂ ಪರಜಾತವಲ್ಲ, ಪರಕೀಯವಲ್ಲ, ಪರಾನುಕರಣಪರವಲ್ಲ. ವಿಮರ್ಶಕ ಘಟೋತ್ಕಚನ ವಕೀಲಿಯ ಮಾಯೆಯನ್ನು ಅವಲಂಬಿಸಿ ಪ್ರತಿಷ್ಠೆಯನ್ನದು ಸಂಪಾದಿಸಬೇಕಿಲ್ಲ. ಇಂದಿನ

ನಿರ್ವೀರ್ಯ ಬಾಳಿಗೆ ಅಮೃತವೆರೆದು ಓಜಸೇಜೋದ್ಯುತಿಗಳನ್ನು ಉಂಟು ಮಾಡಬಲ್ಲ ಮಂತ್ರಕಾವ್ಯವೇ ಆದರ್ಶ ನವ್ಯಕಾವ್ಯ. ಅದಕ್ಕೆ ಐಹಿಕ ತ್ಯಾಜ್ಯವಲ್ಲ, ಪಾರತ್ರಿಕ ನಿಂದ್ಯವಲ್ಲ.

ಇವು ಕೆಲವು ಸಂಕ್ಷಿಪ್ತ ನೋಟಗಳಷ್ಟೆ. ಶ್ರೀಧರಚಿಂತನದ ಒಟ್ಟಂದವನ್ನು, ವಿಸ್ತಾರವನ್ನೂ ಅರಿಯಲು ಅವರ ಎಲ್ಲ ಬರಹಗಳನ್ನೂ ವಾಚಿಸುವುದಷ್ಟೇ ದಾರಿ. ಈ ಬಿಡಿಲೇಖನಗಳ ಸಂಕಲನದ ಸಂದರ್ಭದಲ್ಲಿ ಶ್ರೀ ಎಮ್.ಜಿ. ಹೆಗಡೆಯವರು ಹೇಳಿದ ಒಂದು ಮಾತು ನೆನಪಾಗುತ್ತದೆ – "ಶ್ರೀಧರರ ಬಿಡಿಲೇಖನಗಳು ಸಂಪೂರ್ಣವಾಗಿ ಸಂಕಲಿತವಾಗದೇ ಇರುವಾಗ ಶ್ರೀಧರ ಸಾಹಿತ್ಯ 'ಸಮಗ್ರ' ಎನ್ನಿಸಿಕೊಳ್ಳುವುದು ಹೇಗೆ? ಈ ಕಾರ್ಯದಲ್ಲಿರುವ ದುಷ್ಕರತೆಯನ್ನು ಗಮನಿಸಿದರೆ ಇದು ಇಷ್ಟೊಂದು ಸಮೃದ್ಧ ಸಾಹಿತ್ಯ ಸೃಷ್ಟಿಸಿದ ಶ್ರೀಧರರ ಗೆಲುವು ಮತ್ತು ನಾವು ಹೆಮ್ಮೆಯಿಂದ ಒಪ್ಪಿಕೊಳ್ಳಬೇಕಾದ ಸೋಲು!" ಅಲ್ಲವೇ? ಹಾಗೆಂದು ಸುಲಭದಲ್ಲಿ ಸೋಲೊಪ್ಪಿಕೊಳ್ಳದೆ ಈ ನಮ್ಮ 'ಹುಡುಕಾಟ'ದ ಕಾಯಕವನ್ನಂತೂ ಮುಂದುವರಿಸುತ್ತೇವೆ!

ಇನ್ನೊಂದು ಸಂಪುಟಕ್ಕಾಗುವಷ್ಟಿರುವ ಬಿಡಿಲೇಖನಗಳು, ಶ್ರೀಧರರ ನೋಟ್‌ಬುಕ್ಕುಗಳಲ್ಲಿ ಮಲಗಿರುವ 'ಅನಿಮಿಷಾಂತರಂಗ' ಎಂಬ ಕವನಸಂಗ್ರಹ, 'ವೇದಪಾಠ' ಎಂಬ ಋಗ್ವೇದದ ಆಯ್ದಸೂಕ್ತಗಳ ಕನ್ನಡಾನುವಾದ, ವಿವಿಧ ಸಂಚಿಕೆಗಳಲ್ಲಿನ ಬಿಡಿಪದ್ಯಗಳ ಸಂಗ್ರಹ, ಇಂಗ್ಲೀಷ್ ಲೇಖನಗಳ ಸಂಗ್ರಹ... ಇನ್ನೂ ಹಲವು... ಬೆಳಕು ಕಾಣಬೇಕಿದೆ; ಕಾಣುತ್ತವೆ. ಈ ಎಲ್ಲ ಸು–ಸಾಹಸಗಳಿಗೆ ಸದಭಿರುಚಿಯ ವಾಚಕರ ಪ್ರೋತ್ಸಾಹ ಇರಲೆಂಬುದೇ ಆಶಯ.

**– ರಾಜಶೇಖರ ಹೆಬ್ಬಾರ**

**ವಿ.ಸೂ.** – ಬಿ.ಎಚ್. ಶ್ರೀಧರರ ಕೃತಿಗಳು 'ಸಂಚಯ'ದ ಶ್ರೀ ಓಂ ಶಿವಪ್ರಕಾಶರಿಂದ ವ್ಯವಸ್ಥಿತವಾಗಿ ಡಿಜಿಟಲೀಕರಣಗೊಂಡು ಆಸಕ್ತರ ಓದಿಗೆ ಮುಕ್ತವಾಗಿ ಲಭ್ಯವಿದೆ. ಅವುಗಳನ್ನು ಓದಲು ಈ ಕೆಳಗಿನ ಕೊಂಡಿಯನ್ನು ಬಳಸಬಹುದು.

https://bhshridhar.sanchaya.net/

# ಪ್ರಕಾಶಕರ ಮಾತು

ಗೂಗಲ್ ಮ್ಯಾಪಿನ ಮಾತಿರಲಿ, ಅಟ್ಲಾಸನ್ನೇ ರಚಿಸಿರದ ಕಾಲದಲ್ಲಿ, ಪಕ್ಕದ ಊರು ಯಾವುದೆಂದು ಅರಿಯಬೇಕಾದರೆ ಅಲ್ಲಿಗೆ ಹೋಗಿಯೇ ತಿಳಿಯಬೇಕಾಗಿದ್ದ ದಿನಗಳಲ್ಲಿ ಕಾಳಿದಾಸನು 'ಎಲೈ ಮೋಡವೆ, ಇಂತಿಷ್ಟು ಅವಧಿ ನೇರವಾಗಿ ಹೋಗು, ಬಲಕ್ಕೆ ತಿರುಗಿದರೆ ನಿನಗೆ ಇಂತಹ ದೃಶ್ಯಗಳುಳ್ಳ ಇಂತಹ ಸ್ಥಳವು ಕಾಣಬರುತ್ತದೆ. ಅಲ್ಲಿ ಇಂತಿಷ್ಟೇ ಕೋನದಲ್ಲಿ ತಿರುಗಿ ಮುಂದೆ ಸಾಗಿದರೆ...' ಎಂದು ಬರೆಯಬೇಕಾದರೆ ಅವನು ಆ ಮಾರ್ಗದ ಮಾಹಿತಿಯನ್ನು ಹೇಗೆ ಪಡೆದನೆಂಬುದೇ ವಿಸ್ಮಯದ ಸಂಗತಿ. ವಿದ್ವಾಂಸರೂ, ವಿಮರ್ಶಕರೂ ಆದ ಶ್ರೀ ಬಿ.ಎಚ್. ಶ್ರೀಧರರು ಕಾಳಿದಾಸನು ಅಂದು ಕಂಡ ಭಾರತವನ್ನು ಇಂದು ನಮ್ಮ ಮುಂದಿರಿಸಿದ್ದಾರೆ.

ವ್ಯಾಸನ ಭಾರತವನ್ನು ವ್ಯಾಸಾಯನ ಎಂದು ಕರೆದಿರುವ ಶ್ರೀಧರರು ರಾಮಾಯಣಕಾಲದ ಸಂಸ್ಕೃತಿಯು ಹೇಗಿದ್ದಿತ್ತೆಂಬುದನ್ನು ಇಂದಿನ ಪೀಳಿಗೆಗೆ ಪರಿಚಯಿಸಿದ್ದಾರೆ. ಪುರಾಣದಿಂದ ಇತಿಹಾಸದತ್ತ ಸರಿದರೆ ಹೈವನಾಡು, ಹೊನ್ನಾವರ, ಸಿರಸಿ ಮುಂತಾದ ಸ್ಥಳಗಳ ಚರಿತೆಯ ಪರಿಚಯವನ್ನು ಮಾಡಿಕೊಡುವ ಲೇಖನಗಳ ಮಾಲೆಯಿದೆ. ಸ್ಥಳಗಳ ಇತಿಹಾಸವಲ್ಲದೆ ನಮ್ಮ ಗ್ರಂಥಾಲಯಗಳು ನಡೆದುಬಂದ ಪರಿಯನ್ನು ಪರಿಚಯಿಸುವ ಲೇಖನವೂ ಈ ಕೃತಿಯಲ್ಲಿದೆ.

ನಮ್ಮಲ್ಲಿ ವಿದ್ವಾಂಸರೆಂದರೆ ವಿಜ್ಞಾನಲೋಕಕ್ಕೆ ಹೊರತಾದವರು; ಅವೈಜ್ಞಾನಿಕತೆಯತ್ತ ಸುಲಭವಾಗಿ ವಾಲುವವರು ಎಂದೆಲ್ಲ ಅಭಿಪ್ರಾಯವಿದೆ. ಶ್ರೀಧರರು ಯಾವುದನ್ನೂ ಕೂಲಂಕಷವಾಗಿ ಅಧ್ಯಯನ ಮಾಡದೆ ನಂಬುತ್ತಿರಲಿಲ್ಲ ಎನ್ನುವುದಕ್ಕೆ 'ವಿಜ್ಞಾನ ಮತ್ತು ಜೀವನ ಮೌಲ್ಯಗಳು' ಮತ್ತು 'ವಿಜ್ಞಾನ ಮತ್ತು ವೇದಾಂತ' ಲೇಖನಗಳೇ ಸಾಕ್ಷಿ. 'ವಿಗ್ರಹಾರಾಧನೆ', 'ವೈದಿಕ ಸಂಸ್ಕಾರಗಳ ಆಧುನೀಕರಣ', 'ನಡತೆ' ಮುಂತಾದ ಲೇಖನಗಳಲ್ಲಿ ಶ್ರೀಧರರು ಪುರಾತನ ಪದ್ಧತಿಗಳು, ಆಚಾರಗಳು ಮತ್ತು ವಿಚಾರಗಳನ್ನು ಅಂದಿನ ಹಿನ್ನೆಲೆಯಲ್ಲಿಯೇ ಪರಿಚಯಿಸಿ ಇಂದು ಅವುಗಳ ಬದಲಾಗಿರುವ ರೀತಿಯನ್ನು ವೈಚಾರಿಕವಾಗಿ ವಿಶ್ಲೇಷಿಸಿದ್ದಾರೆ. ಶ್ರೀಧರರು ಇಂಗ್ಲಿಷ್ ಸಾಹಿತ್ಯವನ್ನೂ ಸಾಕಷ್ಟು ಅಧ್ಯಯನ ಮಾಡಿದ್ದರೆಂಬುದಕ್ಕೆ ಅವರ ಸಮಗ್ರ ಕೃತಿ ಸಂಚಯದ 'ಅನುವಾದ' ಭಾಗದಲ್ಲಿ ಸಾಕಷ್ಟು ಪುರಾವೆ ಸಿಗುವುದಲ್ಲದೆ ಈ ಬಿಡಿ ಲೇಖನಗಳ ಎರಡನೆಯ ಸಂಕಲನದಲ್ಲಿಯೂ 'ಎರಡನೆಯ ರಿಚರ್ಡ್; ಪದಚ್ಯುತಿಯ ದೃಶ್ಯ' ಎಂಬ ನಾಟಕದ ಅಂಕವೊಂದನ್ನು ಸೇರ್ಪಡೆ ಮಾಡಲಾಗಿದೆ.

ಆಂಗ್ಲಸಾಹಿತ್ಯದ ಅತಿ ಕ್ಲಿಷ್ಟ ಕವನವೆನಿಸಿರುವ, ಅರವಿಂದರು ಬರೆದಿರುವ 'ಸಾವಿತ್ರಿ'ಯ ಹಿನ್ನೆಲೆಯ ಬಗ್ಗೆ ಬರೆದಿರುವುದು ಶ್ರೀಧರರ ತಾತ್ತ್ವಿಕ – ಆಂಗ್ಲ – ಅನುವಾದಿಕ ಗರಿಮೆಗಳ ದ್ಯೋತಕವಾಗಿದೆ.

ತತ್ತ್ವಶಾಸ್ತ್ರ ಶ್ರೀಧರರಿಗೆ ಪ್ರಿಯವಾದ ವಿಚಾರ. ಅದೇ ವಿಷಯವನ್ನು ಕುರಿತು 'ತತ್ತ್ವಚರ್ಚೆಯ ಕಲೆ', 'ವೇದಕಾಲೀನ ಲೌಕಿಕತೆ', 'ಉಪನಿಷತ್ತುಗಳ ಸಂದೇಶ' ಮುಂತಾದ ಲೇಖನಗಳನ್ನು ಬರೆದಿದ್ದಾರೆ. 'ಹಿಂದೂ ಧರ್ಮ ಮತ್ತು ದೇವರು' ಹಾಗೂ 'ಮಾನವಿಕತೆ ಮತ್ತು ಭಾರತೀಯತೆ' ಲೇಖನಗಳು ನಮ್ಮ ಸಮಾಜದ ರೀತಿರಿವಾಜುಗಳ ಸತ್ಯನಿಷ್ಠ ಪ್ರತಿಪಾದನೆಗಳಾಗಿವೆ.

ಶ್ರೀಧರರು ವಿಡಂಬನೆಯಲ್ಲಿಯೂ ವಿಜೃಂಭಿಸಿರುವುದು ಅವರ ಲೇಖನಗಳಲ್ಲಿ ವಿದಿತ. 'ಅಪ್ಟುಡೇಟ್ ಆಕಾಶಪುರಾಣ', 'ಹಕ್ಕೀ ಅರಸಾ ಹೇಳಿದ ಮಾತು' ಇತ್ಯಾದಿ ಲೇಖನಗಳಲ್ಲಿ ವ್ಯಂಗ್ಯ, ಕಟಕಿ, ವಿಡಂಬನೆ, ತಿಳಿಹಾಸ್ಯ ಮುಂತಾದ ಹಾಸ್ಯಪ್ರಕಾರಗಳು ರಂಜನೀಯವೂ, ಬೋಧಪ್ರದವೂ ಆಗಿ ಕಂಡುಬರುತ್ತವೆ.

ಶ್ರೀಧರರ ಸಾಹಿತ್ಯಾಸಕ್ತ ಮಕ್ಕಳಾದ ರಾಜಶೇಖರ ಹೆಬ್ಬಾರ ಮತ್ತು ರಾಜೇಶ್ವರಿ ಲೋಕರೆಯ ಹಾಗೂ ಅಳಿಯ ಕೃಷ್ಣ ಲೋಕರೆಯವರ ಅವಿರತ ಪ್ರಯತ್ನದಿಂದ ಬಿ.ಎಚ್. ಶ್ರೀಧರರ 'ಬಿಡಿಲೇಖನಗಳು – ೨' ನಿಮ್ಮ ಕೈ ಸೇರಲು ಸಾಧ್ಯವಾಗಿದೆ. ಶ್ರೀಧರರ ಬಿಡಿಲೇಖನಗಳನ್ನೂ ಒಳಗೊಂಡಂತಹ ಸಮಗ್ರ ಸಾಹಿತ್ಯವನ್ನು ಪ್ರಕಟಿಸಲು ಅವಕಾಶ ನೀಡಿದುದು ನಮಗೆ ಸಂದ ಗೌರವವೆಂದೇ ನಮ್ಮ ಪ್ರಕಾಶನವು ಪರಿಗಣಿಸುತ್ತದೆ.

ಓದುಗಪ್ರಭುಗಳ ಶ್ರೀರಕ್ಷೆ ಎಂದಿನಂತೆ ಇರಲೆಂದು ವಿನಮ್ರವಾಗಿ ಕೋರುತ್ತಾ,

**ಎನ್. ರಾಮನಾಥ್**

# ಪ್ರಸ್ತಾವನೆ

ಶ್ರೀಧರರ ಸಮಸ್ತ ಸಾಹಿತ್ಯ ಪ್ರಕಟಣೆಯ ಯೋಜನೆ ಮುಕ್ತಾಯಕ್ಕೆ ಬರುತ್ತಿದೆ. ಅವರ ಪೂರ್ವಪ್ರಕಟಿತ ಕೃತಿಗಳನ್ನೆಲ್ಲ ಒಳಗೊಂಡ ಯೋಜನೆ ಇದೀಗ ಅವರ ಅಸಂಗ್ರಹಿತ ಪತ್ರಿಕಾ ಬರಹಗಳ ಎರಡು ಸಂಪುಟಗಳನ್ನು ಓದಿಗೆ ಲಭ್ಯವಾಗಿಸುತ್ತಿದೆ. ಇಷ್ಟಾದರೂ ಶ್ರೀಧರರ 'ಸಮಸ್ತ ಸಾಹಿತ್ಯ' ಎಂಬುದೇ ಮರೀಚಿಕೆಯಂತೆ. ಅದೊಂದು ಎಂದೂ 'ಸಮಸ್ತ'ವಾಗದ ಯೋಜನೆ ಎಂದೇ ಅನಿಸುತ್ತದೆ. ಅವರ ಸಮಗ್ರ ಕಾವ್ಯ ಸಂಪುಟ ಪ್ರಕಟವಾದ ಮೇಲೂ ಆ ಸಂಪುಟವನ್ನು ಪ್ರಕಟಣೆಗೆ ಸಿದ್ಧಗೊಳಿಸುವಾಗ ಕಣ್ಣಿಗೆ ಬೀಳದಿದ್ದ ಕವನಗಳು ಅವರ ಗದ್ಯ ಬರಹಗಳನ್ನು ಹುಡುಕುವಾಗ ಕಣ್ಣಿಗೆ ಬಿದ್ದಿದ್ದಿದೆ. ಹೀಗಾಗಿ ಈ ಪತ್ರಿಕಾ ಬರಹಗಳ ಸಂಪುಟಗಳೂ 'ಸಮಸ್ತ'ವಾಗಲಾರವು. ನಲವತ್ತರಿಂದ ಎಂಭತ್ತರ ದಶಕದವರೆಗಿನ ಸಾಹಿತ್ಯ ಪತ್ರಿಕೆಗಳು, ವಿಶೇಷಾಂಕಗಳು, ಅಭಿನಂದನ ಗ್ರಂಥಗಳು, ವೃತ್ತಪತ್ರಿಕೆಗಳು ಕಡ್ಡಾಯವೆಂಬಂತೆ ಶ್ರೀಧರರ ಬರಹವನ್ನು ಒಳಗೊಂಡಿರುತ್ತಿದ್ದವು. ನವಚೇತನ, ನಂದಿನಿ, ಸಹಚರ, ಜನತಾ, ಕಡಲಧ್ವನಿ, ರಾಯಭಾರಿ, ಕರ್ಮವೀರದಂತಹ ಎಷ್ಟೋ ಪತ್ರಿಕೆಗಳ ಸಂಚಿಕೆಗಳು ಇಂದು ಎಲ್ಲಿಯೂ ದೊರಕುವುದಿಲ್ಲ. ಶ್ರೀಧರರು ಬೇರೆ ಬೇರೆ ಹೆಸರಿನಲ್ಲಿ ಬರೆಯುತ್ತಿದ್ದುದೂ ಅವುಗಳನ್ನು ಗುರುತಿಸುವಲ್ಲಿ ಒಂದು ತೊಡಕು. ಸ್ವತಃ ಶ್ರೀಧರರು ತಾವು ಬರೆದದ್ದನ್ನಾಗಲಿ, ಪ್ರಕಟಿಸಿದ್ದನ್ನಾಗಲಿ ವ್ಯವಸ್ಥಿತವಾಗಿ ಕಾಪಿಡುವ ಶಿಸ್ತಿನವರಾಗಿರಲಿಲ್ಲ. ಅಚ್ಚಿನ ಮನೆ ಸೇರಿದ್ದ ಅವರ ಇಡೀ ಪುಸ್ತಕವೇ ಅಚ್ಚಾಗದೇ ಅಲ್ಲೇ ಉಳಿದಿದ್ದು ಶ್ರೀಧರರು ಗತಿಸಿದ ದಶಕಗಳ ನಂತರ ಅವರ ಕುಟುಂಬವರ್ಗದ ಕೈಸೇರಿದ್ದೂ ಇದೆ. ಈ ಹಿನ್ನೆಲೆಯಲ್ಲಿ ಸುಲಭ ಲಭ್ಯವಿಲ್ಲದ ಇಷ್ಟೆಲ್ಲ ಬರಹಗಳನ್ನು ಅಪಾರ ಶ್ರಮದಿಂದ ಸಂಗ್ರಹಿಸಿ ಪ್ರಕಟಿಸುತ್ತಿರುವ ಸಂಪಾದಕರೂ ಪ್ರಕಾಶಕರೂ ಅಭಿನಂದನಾರ್ಹರು.

ಹಲವು ಸಾವಿರ ಪುಟಗಳಾಗುವ ಈ ಲಲಿತ ಹಾಗೂ ವೈಚಾರಿಕ ಬರವಣಿಗೆಯ ಹಿಂದಿನ ಪ್ರೇರಣೆ ಒತ್ತಾಸೆಯಾದರೂ ಏನು? ಸಾಹಿತ್ಯ ಪರಿಷತ್ಪತ್ರಿಕೆ, ಸಾಧನೆ, ಮಾನವಿಕ ಕರ್ನಾಟಕದಂತಹ ವಿದ್ವತ್ ಪ್ರೌಢಿಮೆಯಿಂದ ಕೂಡಿದ ಲೇಖನಗಳಿಗಾಗಿ ಮೀಸಲಾದ ನಿಯತಕಾಲಿಕೆಗಳಾಗಿರಲಿ, ಜೀವನ ಜಯಂತಿಯಂತಹ ವಿಶೇಷ ಆಸಕ್ತಿಯ ಕಿರುಪತ್ರಿಕೆಗಳಾಗಿರಲಿ, ಶಿರಸಿ ಸಮಾಚಾರ, ತಾಯಿನುಡಿ, ಸಹಚರದಂತಹ ಸ್ಥಳೀಯ ಪ್ರಸಾರದ ಪತ್ರಿಕೆಯೇ ಆಗಿರಲಿ ಶ್ರೀಧರರ ಬರಹದ ಶೈಲಿಯಲ್ಲಾಗಲಿ, ಓಘದಲ್ಲಾಗಲಿ, ಅವರು ಓದುಗರನ್ನು ಪರಿಭಾವಿಸುವ ಕ್ರಮದಲ್ಲಾಗಲಿ ಯಾವ ವ್ಯತ್ಯಾಸವನ್ನೂ

ಕಾಣಲಾರೆವು. 'ಕೌಸ್ತುಭ'ದ ಸಂಪಾದಕರು ಶ್ರೀಧರರ ಬರಹವೊಂದಕ್ಕೆ 'ಮಂಡನೆ ವಿದ್ವತ್ಪೂರ್ಣವಾಗಿದ್ದರೂ ಬರವಣಿಗೆ ಸಾಮಾನ್ಯರಿಗೆ ನಿಲುಕದಂಥ ಕ್ಲಿಷ್ಟ ಶೈಲಿಯಲ್ಲಿ ಮೂಡಿಬಂದಿದೆ' ಎಂಬ ಟಿಪ್ಪಣಿಯನ್ನು ಸೇರಿಸಿದ್ದರು. ಇದನ್ನೆಲ್ಲ ಶ್ರೀಧರರು ಖಂಡಿತಕ್ಕೂ ಸಂಪತ್ತಿಗೊ, ಯಶಸ್ಸಿಗೊ, ಕೀರ್ತಿಗೊ ಬರೆದದ್ದಲ್ಲ. ಪ್ರತಿಫಲಾಪೇಕ್ಷೆಯಾದ ಬರವಣಿಗೆಯೇ ಅದಲ್ಲ. ವೃತ್ತಿಯಿಂದಲೂ ಪ್ರವೃತ್ತಿಯಿಂದಲೂ ಪ್ರಾಧ್ಯಾಪಕರಾಗಿದ್ದ ಅವರು ಜನಶಿಕ್ಷಣವನ್ನು ಕರ್ತವ್ಯವೆಂದು ತಿಳಿದು ಬರೆದ ಬರೆಹವು ಅವು, ತಾವು ಓದಿದ, ಅರಿತುಕೊಂಡ, ಆಲೋಚಿಸಿದ ಸಂಗತಿಗಳ ಬುತ್ತಿಯನ್ನು ಸಹಯಾತ್ರಿಕರೊಂದಿಗೆ ಹಂಚಿಕೊಳ್ಳುವುದರಲ್ಲೇ ಕೃತಕೃತ್ಯವಾಗುವ ಬರವಣಿಗೆಯದು. ಕಲೆ, ಸಾಹಿತ್ಯ ರಂಗದಲ್ಲಿ 'ಅಭಿರುಚಿ ದಾಸ್ಯ'ವನ್ನೋ ಶುಚಿರುಚಿಗಳ ಅರಕೆಯನ್ನೋ ಭಾಷೆಯ ಬಳಕೆಯಲ್ಲಿ ಸ್ವಾಚ್ಛಂದ್ಯವನ್ನೊ ಅನೌಚಿತ್ಯವನ್ನೊ ಕಂಡಾಗಲೆಲ್ಲ ವ್ಯಗ್ರರಾಗುತ್ತಿದ್ದ ಶ್ರೀಧರರು ಶುಚಿರುಚಿಗಳು ಸಾಪೇಕ್ಷ ಕಲ್ಪನೆಗಳೆನ್ನುವುದನ್ನು ಪೂರ್ತಿಯಾಗಿ ಮರೆತು ನಿರ್ಭಿಡೆಯಿಂದ ಅವನ್ನು ಖಂಡಿಸಲು ಮುಂದಾಗುತ್ತಿದ್ದರು. ಇದರಿಂದ ಅವರ ಮಂಡನೆಯಲ್ಲಿ ಅತ್ಯುಕ್ತಿ, ವಿಷಯಾಂತರ, ಪೂರ್ವಾಭಿಮಾನ, ಆಗ್ರಹಗಳೆಲ್ಲ ಸೇರಿಕೊಂಡು ಬರವಣಿಗೆ ಸಮತೋಲನ ದೃಷ್ಟಿಗೆ ಎರವಾಗಿರುವುದೂ ಇದೆ; ಅವರು ಅನುಶಾಸನಕ್ಕಾಗಿ ಆಗ್ರಹಿಸಿರುವುದೂ ಇದೆ. ಆದರೆ ಶ್ರೀಧರರ ಪಾಂಡಿತ್ಯ, ಪಾಠಶ್ರದ್ಧೆ, ಪ್ರಾಮಾಣಿಕತೆಗಳಿಂದಾಗಿ ಅರಕೆಗಳನ್ನು ಅತಿ ಮಾಡದೇ ಮನನಕ್ಕೆ ಮುಂದಾಗುವಂತಾಗುತ್ತದೆ.

ಪ್ರಸ್ತುತ ಶ್ರೀಧರರ ಪತ್ರಿಕಾ ಬರಹಗಳ ಎರಡು ಸಂಪುಟಗಳಲ್ಲಿ ಮೊದಲನೆಯದು ಸಾಹಿತ್ಯ ಸಮೀಕ್ಷೆಗಳನ್ನು ಒಳಗೊಂಡಿದ್ದರೆ ಎರಡನೆಯದು ಅವರ ಬಹುಶ್ರುತ ಅಭಿರುಚಿಯ ಇನ್ನೊಂದು ಕೇಂದ್ರವಾದ ಸಂಸ್ಕೃತ, ಸಂಸ್ಕೃತಿ ಮತ್ತು ಇವುಗಳಿಗೆ ಸಂಬಂಧಿಸಿದ ಬರಹಗಳ ಸಂಪುಟವಾಗಿದೆ. ಸಾಹಿತ್ಯ ಸಮೀಕ್ಷೆಯ ಬರಹಗಳಲ್ಲಿ ಸಮೀಕ್ಷಕನ ಚಾರಿತ್ರ್ಯ, ವಿದ್ವತ್ತೆ, ಅನುಭವಗಳು ಪಕ್ವವಾಗಿರಬೇಕೆಂದು ಶ್ರೀಧರರು ಒಂದೆಡೆ ಹೇಳುತ್ತಾರೆ; ವೈದಗ್ಧ್ಯ ಮತ್ತು ಪಾಂಡಿತ್ಯಗಳ ನಡುವೆ ವ್ಯತ್ಯಾಸವನ್ನು ಕಲ್ಪಿಸುವ ಅವರು ಮನಃಶಾಸ್ತ್ರ ಅಲಂಕಾರಶಾಸ್ತ್ರವೇ ಮೊದಲಾದ ಹತ್ತು ಜ್ಞಾನಶಾಖೆಗಳ ಸಾಮಾನ್ಯ ಆಳದ ತಿಳಿವಳಿಕೆಯೂ ಭಾಷಾತ್ರಯ ಜ್ಞಾನವೂ ಇದ್ದಾಗ ವಿದ್ವಾಂಸರು "ವಿದಗ್ಧ" ಎನ್ನಿಸಿಕೊಳ್ಳುತ್ತಾನೆ ಎಂದು ಅಭಿಪ್ರಾಯಪಡುತ್ತಾರೆ. ಶ್ರೀಧರರು ಪಳಗಿದ್ದು ಇಂತಹ ವಿದಗ್ಧ ಪಂಡಿತರ ಗರಡಿಯಲ್ಲಿ ಎಂಬುದು 'ಮೈಸೂರಿನಲ್ಲಿ ಮಹನೀಯರೊಡನೆ' ಲೇಖನದಿಂದ ವಿದಿತವಾಗುತ್ತದೆ. ಶ್ರೀಧರರ ವ್ಯಕ್ತಿತ್ವ ಮೂಲತಃ ಪಾಂಡಿತ್ಯಕ್ಕೆ ಒಲಿದದ್ದಾದರೂ ಅವರು ಮುಂದುವರಿಸಲು ಬಯಸಿದ್ದು ತಾವು ಗುರುಸ್ಥಾನದಲ್ಲಿದ್ದು ಗೌರವಿಸಿದ ಮಹನೀಯರ ಘನವಾದ ಪರಂಪರೆಯನ್ನೇ.

ಶ್ರೀಧರರ ವಿಮರ್ಶೆಯ ವ್ಯಾಪ್ತಿ ಸಾಮಸ್ತ್ಯದ ಕಡೆ ಮುಖಮಾಡಿದ್ದು, ಪ್ರಸ್ತುತ ಸಾಹಿತ್ಯ ಸಂಬಂಧಿ ಬರಹಗಳಲ್ಲಿ ಒಂದು ಗುಚ್ಛ ಸಾಹಿತ್ಯ ಮೀಮಾಂಸೆ, ಪರಿಭಾಷೆ, ಪ್ರಕಾರ, ಪ್ರಸ್ಥಾನಗಳನ್ನು ಚರ್ಚಿಸುತ್ತದೆ. ಛಂದಸ್ಸು ಮೀಮಾಂಸೆಗಳನ್ನು ಅತಿಶಯವಾದ

ಆಸಕ್ತಿಯಿಂದ ವ್ಯಾಸಂಗ ಮಾಡಿದ ಅವರ ಈ ಬಗೆಯ ಬರಹಗಳಲ್ಲಿ ಮಿಂಚುನೋಟಗಳು ಹಾದುಹೋಗುತ್ತವೆ. ಅಂತೆಯೇ ಇವುಗಳಲ್ಲಿ ಆಗ್ರಹವೂ ಮಿಗಿಲಾಗಿದೆ. ಪ್ರಬಂಧ ಸಾಹಿತ್ಯದ ಬೆಳವಣಿಗೆ, ಕಾರವಾರ ಜಿಲ್ಲೆಯ ಕೊಡುಗೆ, ನವ್ಯಕಾವ್ಯ, ಮೀಮಾಂಸೆಯ ಕೃತಿಗಳು ಮೊದಲಾದ ನಿರ್ದಿಷ್ಟ ಪ್ರಕಾರದಲ್ಲೋ, ಸಾಹಿತ್ಯ ಮಾರ್ಗದಲ್ಲೊ ಆದ ಬೆಳವಣಿಗೆಯನ್ನೂ ಮುಖ್ಯ ಕೃತಿಗಳನ್ನೂ ಸಮೀಕ್ಷಿಸುವ ಪ್ರಬಂಧಗಳದು ಇನ್ನೊಂದು ಗುಂಪು. ಮೂರನೆಯದು ಸಾಹಿತ್ಯ ಕ್ಷೇತ್ರದ ಮಹನೀಯರ ಗುಣವನ್ನು ಗೌರವಿಸುವ ಬರಹಗಳ ಗುಚ್ಛ. ಬಹುತೇಕವಾಗಿ ಅಭಿನಂದನ ಗ್ರಂಥಗಳಲ್ಲಿ ಪ್ರಕಟವಾದ ಇವು ಮುಖ್ಯವಾಗಿ ವ್ಯಕ್ತಿತ್ವವನ್ನೂ ಆನುಷಂಗಿಕವಾಗಿ ಕರ್ತೃತ್ವದ ಗುಣವಿಶೇಷವನ್ನೂ ನಿರೂಪಿಸುತ್ತವೆ. ನಾಲ್ಕನೆಯದು ಸಾಹಿತ್ಯ ಕೃತಿಗಳ ರಸವಿಮರ್ಶೆಯ ಬರಹಗಳ ಗೊಂಚಲು. ಇವುಗಳಲ್ಲಿ ಮುದ್ದಣನ ಕುರಿತಾದ ಲೇಖನವನ್ನು ವಿಶೇಷವಾಗಿ ಉಲ್ಲೇಖಿಸಬೇಕು. ಮುದ್ದಣನ ಬಾಲ್ಯದ ಗೆಳೆಯರಾಗಿದ್ದ ಬವಲಾಡಿ ವೆಂಕಟರಮಣ ಹೆಬ್ಬಾರರೊಂದಿಗಿನ ಮಾತುಕತೆಯಲ್ಲಿ ಬಂದಿರುವ ವಿವರಗಳು ಮುದ್ದಣನ ವ್ಯಕ್ತಿತ್ವ ಮತ್ತು ಶ್ರೀರಾಮಪಟ್ಟಾಭಿಷೇಕ ಪತ್ಯದ ತೊಡಕಿನ ಮೇಲೆ ಹೊಸ ಬೆಳಕು ಚೆಲ್ಲುತ್ತವೆ. ಇದೇ ರೀತಿ ಅಡಿಗರ 'ಗೊಂದಲಪುರ' ಪ್ರಕಟವಾದ ಮರುವರ್ಷವೇ ಬಂದ ಶ್ರೀಧರರ 'ರಿವ್ಯು' ನವ್ಯಕಾವ್ಯದ ಆರಂಭಿಕ ವಿಮರ್ಶೆಗಳಲ್ಲೊಂದು. 'ರಸಿಕನಿಗೆ ರಸತಾದಾತ್ಮ್ಯವಿದೆಯಲ್ಲದೇ ಲೇಖಕತಾದಾತ್ಮ್ಯವಿಲ್ಲ' ಎಂಬ ಶ್ರೀಧರರ ನಿಲುವಿಗೆ ನಿದರ್ಶನವಾದ ಬರಹವದು. ಬೇಂದ್ರೆಯವರ 'ಕನ್ನಡ ಮೇಘದೂತ'ದ ಸಮೀಕ್ಷೆ ಹಾಗೂ ಚೌಂಡರಸನ ಅಭಿನವ ದಶಕುಮಾರ ಚರಿತೆ ಅನುವಾದದ ಸಮಸ್ಯೆಯನ್ನು ಚರ್ಚಿಸುವ ತೌಲನಿಕ ವಿಮರ್ಶೆಯ ಮಾದರಿಗಳು. ನಲ್ಮೆ, ರಂಗಬಿನ್ನಪ, ಕುವೆಂಪು ಕಾವ್ಯ ಮೊದಲಾದ ಲೇಖನಗಳ ಧಾಟಿ ವರ್ಣನಾತ್ಮಕವೂ, ರಸಪರಿಚಯಾತ್ಮಕವೂ ಆಗಿದ್ದರೆ ಅವುಗಳ ಧಾತು ಗುಣಗ್ರಾಹಕತೆ, ಸಹೃದಯತೆ. ಐದನೆಯದು ಭಾಷೆಯ ಕುರಿತಾದ ಬರಹಮಂಜರಿ. ಭಾಷೆಯ ಉದ್ದೇಶ, ಸಾಂಸ್ಕೃತಿಕ ಮಹತ್ತ್ವ, ಭಾಷಾಭಿಮಾನ, ಕುಂದಗನ್ನಡ ಕಡಲ್ಗನ್ನಡದಂತಹ ಪ್ರಾದೇಶಿಕ ಪ್ರಭೇದಗಳು ಇವುಗಳ ಚರ್ಚೆ ಇಲ್ಲಿ ಸಮಾವೇಶಗೊಂಡಿದೆ.

ಬಿಡಿಬರಹಗಳ ಇನ್ನೊಂದು ಸಂಪುಟವು ಸಂಸ್ಕೃತಿ ಚಿಂತನೆ, ಅನುವಾದ ಹಾಗೂ ಲಘು ಬರಹಗಳನ್ನೊಳಗೊಂಡು ಮಿಶ್ರ ಸ್ವರೂಪದ್ದಾಗಿದೆ. ಭಾರತೀಯ ಸಂಸ್ಕೃತಿ, ಸಂಸ್ಕೃತ ಭಾಷೆ ಮತ್ತು ಸಾಹಿತ್ಯ ಇವುಗಳ ಕುರಿತಾದ ಲೇಖನಗಳಲ್ಲಿ ಪೈತ್ರಕ ಸಂಪತ್ತಿಯ ಸತ್ತ್ವ ಮತ್ತು ಸ್ವರೂಪದ ಪರಿಶೀಲನೆಯಿದ್ದರೆ ಪ್ರಾದೇಶಿಕ ಚರಿತ್ರೆಯನ್ನು ನಿರೂಪಿಸುವ ಲೇಖನಗಳು ಆಯಾ ಪ್ರಾದೇಶಿಕರಲ್ಲಿ ಅಭಿಮಾನವನ್ನು ಚೋದಿಸುವಂತಿವೆ. ಈ ಎರಡೂ ಬಗೆಯ ಬರಹಗಳಲ್ಲಿ ಚರಿತ್ರೆಯನ್ನು ಒಂದು ಪ್ರಕ್ರಿಯೆಯಾಗಿ ಪರಿಭಾವಿಸುವುದಕ್ಕಿಂತ ಒಂದು ಮೌಲ್ಯವಾಗಿ ಗ್ರಹಿಸಿರುವಂತಿದೆ; ಒಂದು ಮಹಾಜನತೆಯ ಸಮಷ್ಟಿ ವ್ಯಕ್ತಿತ್ವವನ್ನು ಇವು ಗ್ರಹೀತವಾಗಿ ಇಟ್ಟುಕೊಂಡಿರುವಂತಿವೆ. ಹೀಗಾಗಿಯೇ ತುಂಬಾ ಚರ್ಚಾಸ್ಪದವಾದ ತೀರ್ಮಾನಗಳಿಗೆ ಅವು ಬರುತ್ತವೆ.

ಇಲ್ಲಿಯೇ ಗಮನಿಸಬೇಕಾದ ಒಂದು ಅಂಶವೆಂದರೆ ಐದು ದಶಕಗಳಷ್ಟು ಸುದೀರ್ಘ ಅವಧಿಯಲ್ಲಿ ಪ್ರಕಟವಾಗಿರುವ ಈ ಬರಹಗಳಲ್ಲಿ ಶ್ರೀಧರರ ನಿಲುವಿನಲ್ಲಿ ತೀರ್ಮಾನಗಳಲ್ಲಿ ಬದಲಾವಣೆಗಳಾಗಿರುವುದನ್ನು ಗುರುತಿಸುವುದು ಸಾಧ್ಯ. ಉದಾಹರಣೆಗೆ ಆರ್ಯ ಸಮಸ್ಯೆ, ಶುರುವಾತಿನಲ್ಲಿ ಆರ್ಯರು ಮಧ್ಯ ಏಶಿಯದಿಂದ ಹೊರಟು ಭಾರತವನ್ನು ತಲುಪಿದರು ಎಂಬ ತೀರ್ಮಾನವನ್ನು ಅವರು ಒಪ್ಪಿಕೊಂಡಿದ್ದರು. ೧೯೫೦ರ 'ಭಾರತೀಯ ಪುರಾತನ ನಾಗರಿಕತೆ' ಲೇಖನ ಆರಂಭವಾಗುವುದೇ ಈ ಮಾತಿನಿಂದ. ೧೯೬೯ರಲ್ಲಿ ಕಾರಂತರ 'ಯಕ್ಷಗಾನ ಬಯಲಾಟ'ವನ್ನು ವಿಮರ್ಶಿಸುತ್ತ ಆರ್ಯರ ಮೂಲದ ಕುರಿತು ಪೂರ್ತಿ ವಿರುದ್ಧವಾದ ನಿಲುವು ತಳೆಯುತ್ತಾರೆ; ಕುಲಶಾಸ್ತ್ರದ ಶಾಸ್ತ್ರೀಯತೆಯನ್ನೇ ಪ್ರಶ್ನಿಸುತ್ತಾರೆ. ತೀರ ಇತ್ತೀಚಿನ ಲೇಖನಗಳಲ್ಲಿ ಆರ್ಯ ಸಮಸ್ಯೆಯ ಕುರಿತು ಇತ್ಯಾತ್ಮಕವಾಗಿ ತೀರ್ಮಾನಿಸಲು ಪ್ರಮಾಣಗಳಿಲ್ಲವೆನ್ನುತ್ತಾರೆ. ಇದೇ ರೀತಿ ನವ್ಯ ಕಾವ್ಯಶಾಸ್ತ್ರದ ಕುರಿತ ಅರವತ್ತರ ದಶಕದ ಬರಹಗಳ ತೀರ್ಮಾನಗಳಿಗೂ ಆ ನಂತರದ ಲೇಖನಗಳ ತೀರ್ಮಾನಗಳಿಗೂ ತುಂಬ ವ್ಯತ್ಯಾಸವಿದೆ. ಹೀಗೆ ಸತತ ವ್ಯಾಸಂಗ ಮತ್ತು ಚಿಂತನೆ, ಚಿಂತನೆಯ ಬೆಳಕಿನಲ್ಲಿ ತೀರ್ಮಾನಗಳ ಪುನರ್ವಿಮರ್ಶೆ, ಪುನರ್ವಿಮರ್ಶೆಯ ಫಲಿತವನ್ನು ದಾಖಲಿಸುವ ಪ್ರಾಮಾಣಿಕತೆ – ಇದು ಶ್ರೀಧರರ ವೈಶಿಷ್ಟ್ಯ.

**– ಡಾ। ಎಂ.ಜಿ. ಹೆಗಡೆ**

# ಪರಿವಿಡಿ

**ಇತರ ಲೇಖನಗಳು**

# ೧. ವ್ಯಾಸಾಯನ

ವ್ಯಾಸನ ಮಹಾಭಾರತವು ಒಳಗೊಂಡಿರುವುದು ಕ್ರಿಸ್ತಪೂರ್ವ ೧ ಅಥವಾ ೨ ಸಾವಿರಕ್ಕೂ ಹಿಂದೆ ನಡೆದ ಕೆಲ ಗಣ್ಯವಾದ ಐತಿಹಾಸಿಕ ಘಟನೆಗಳನ್ನು–ಎಂಬುದು ಅನೇಕ ವಿದ್ವಾಂಸರ ಮತ. ಅವುಗಳಲ್ಲಿ ಪರಸ್ಪರ ಗ್ರಂಥದ ರಚನಾವಧಿ ಕ್ರಿ.ಪೂ.೪೦೦ರಿಂದ ಕ್ರಿ.ಶ.೪೦೦ರವರೆಗೆ ಎಂಬುದು ಪ್ರಸಿದ್ಧ ಸಂಶೋಧಕರಲ್ಲಿ ಕೆಲ ಗಣ್ಯರ ಮತ. ಅದು ಶತಸಹಸ್ರ ಪದ್ಯಗಳಿಂದ ಕೂಡಿದ್ದೆಂದು ಪರಂಪರೆಯಲ್ಲಿ ನಡೆದು ಬಂದ ನಂಬಿಕೆ ದೃಷ್ಟಾಂತ ಸಿದ್ಧವಾಗಿದೆ.

ಮಹಾಭಾರತ ತೋರಿಸುವ ಭಾರತೀಯ ಜನಜೀವನದ ಚಿತ್ರವು ಅಸಂಸ್ಕೃತ(ಅಪ್ರಬುದ್ಧ) ಎಂದು ಸಂಶೋಧಕ–ವಿಮರ್ಶಕರಾರಿಗೂ ಎನ್ನಿಸಿಲ್ಲ.

ವೃಕ್ಷ ಹೊಸದಾದರೆ ಅದರ ಬೀಜ ಅದಕ್ಕಿಂತ ಹಳೆಯದಾಗಿರುವಂತೆ ಭಾರತದ ನವತ್ವ ಇರಬಲ್ಲುದು, ಇರಬೇಕು–ಬಹುಸಂಖ್ಯರಿಲ್ಲಿ ಹಿಂದು ಸಂಸ್ಕೃತಿಗೆ ಸೇರಿರುವವರೆಗೆ, 'ಹಿಂದು' ಎಂಬುದು 'ಇಸ್ಲಾಂ', 'ಕ್ರೈಸ್ತ' ಎಂಬ ಮತಗಳಂತೆ 'ಮತ'ವಲ್ಲ; ಅದೊಂದು ಧರ್ಮ ಅಥವಾ ಸಂಸ್ಕೃತಿ, ನಾಗರಿಕತೆ; ಮತವೆಂದರೆ ಇದನ್ನು ಕರೆಯುವವರು ಮಧ್ಯ ಪೂರ್ವದ ನಾಗರಿಕತೆಯನ್ನು ಇಸ್ಲಾಮೀಯವೆಂದೂ, ಪಾಶ್ಚಾತ್ಯ ನಾಗರಿಕತೆಯನ್ನು ಕ್ರಿಸ್ತೀಯವೆಂದು ಒಪ್ಪಿಕೊಳ್ಳಬೇಕಾಗುತ್ತದೆ. ಆಗ ಮತವನ್ನು ಸಂಸ್ಕೃತಿ, ನಾಗರಿಕತೆಗಳಷ್ಟು ವ್ಯಾಪಕಾರ್ಥವುಳ್ಳ ಧರ್ಮವೆಂದು ಅರ್ಥಮಾಡಬೇಕಾಗುತ್ತದೆ. ಪಾಶ್ಚಾತ್ಯವೆಲ್ಲವನ್ನೂ 'ಆಧುನಿಕ' ಎಂದು ತಿಳಿದುಕೊಂಡದ್ದು ಸರಿಯಲ್ಲವೆಂದು ಮೊದಲು ತೋರಿಸಿಕೊಟ್ಟವರು ದಿವಂಗತ ರವೀಂದ್ರನಾಥ ಠಾಕೂರರು. ಅದು ಪಾಶ್ಚಾತ್ಯ ಅಥವಾ ಕ್ರೈಸ್ತ–ಸಾಂಸ್ಕೃತಿಕವಾಗಿ.

ಜೀವ, ಜ್ಞಾನ ಮುಂತಾದ ಎಲ್ಲವೂ ಜಡವಾದ ನಿಸರ್ಗವೆಂಬ ಊಹ್ಯ ವಸ್ತುವಿನಿಂದ ಹುಟ್ಟಿದ್ದೆಂಬ ತರ್ಕಾಭಾಸವು ಹಿಂದೆ ಹೇಳಿದಂತೆ ಆಧುನಿಕ ವೈಜ್ಞಾನಿಕತೆಯ ಮೂಲಾಧಾರ. ಈ ಆಧಾರವು ಪ್ರಯೋಗ ಪರೀಕ್ಷೆಗೆ ಅತೀತವಾದುದು. ಇಂಥ ಅತೀತತ್ವದಲ್ಲಿದ್ದುದು ಭಾರತ ಹೇಳಿದ ಮನೋವಾಗತೀತ ಬ್ರಹ್ಮ ಚೈತನ್ಯಕ್ಕೆ ಸರಿದೊರೆ. ಮಾನವತ್ವವು ಈ ನಿಸರ್ಗ ಅಥವಾ ಪ್ರಕೃತಿ ಎಂಬ ಅನವಚ್ಛಿನ್ನ ಪದಾರ್ಥದ ಅರ್ಥವ್ಯಾಪ್ತಿಯ ಹೊರಗಿನದಾಗಿಲ್ಲ. ನಿಸರ್ಗವಿಕಾಸವಾದದ ಪ್ರಕಾರ, ಹಿಂದು ಅಥವಾ ಭಾರತೀಯ ಧರ್ಮದಲ್ಲಿ ಬ್ರಹ್ಮಚೈತನ್ಯವೇ ಸರ್ವಮೂಲ. ಒಬ್ಬನು ಉತ್ತರ ಧ್ರುವದಿಂದ ದಕ್ಷಿಣಕ್ಕೆ ಹೊರಟರೆ, ಇನ್ನೊಬ್ಬನು ದಕ್ಷಿಣದಿಂದ ಉತ್ತರಕ್ಕೆ ಹೊರಡುತ್ತಾನೆ. ಆದರೆ ಈ ಇಬ್ಬರು ಪ್ರಯಾಣಿಕರೂ ದೇಶಕಾಲಗಳಿಂದ ಅವಚ್ಛಿನ್ನವಾದ ಇಂದ್ರಿಯಾನುಭವದ ಈ ವಿಶ್ವದಲ್ಲಿ ಸಂಧಿಸುತ್ತಾರೆ. ಇಹಜೀವನ ಇಬ್ಬರಿಗೂ ಸಾಧಾರಣ. ವಿಜ್ಞಾನದ ಕಕ್ಷೆಯ ಹೊರಗಿನ ನೀತಿಶಾಸ್ತ್ರವೂ ಮೂಲತತ್ವಗಳಲ್ಲಿ ವ್ಯಾವಹಾರಿಕವಾಗಿ ಸಾಧಾರಣ. ಭಾರತದ ಅಹಿಂಸಾದಿ

ಪಂಚಮಹಾಧರ್ಮಗಳ ಆದರ್ಶವು ವಿಶ್ವಸಾಮಾನ್ಯ; ಅವುಗಳ ಆಚರಣೆಯ ವ್ಯಾಪ್ತಿ, ಅಂಶ, ಕ್ಷೇತ್ರ–ಪಾತ್ರ ಪ್ರಕಾರಗಳು ಮಾತ್ರ ಭಿನ್ನ; ರಾಜಕೀಯ ಸರಕಾರದ ವಿಧಿಗಳ ಮೂಲಕ ಅವುಗಳನ್ನು ಸಾರ್ವತ್ರಿಕ ವ್ಯವಹಾರಕ್ಕಿಳಿಸುವುದರಲ್ಲಿಯೂ ಆ ಬಗೆಯ ಭೇದವಿದೆ.

ವಿಜ್ಞಾನದ ಸಂಶೋಧನ–ನವನಿರ್ಮಾಣಗಳೆಲ್ಲವೂ ಬುದ್ಧಿ ಮೂಲವಾದವುಗಳು. ಕಾರ್ಲ್‌ಜಿ ಯುಂಗ್ ಮಹಾಶಯನ ಪ್ರಕಾರ ಬುದ್ಧಿಯು ಮಾಡುವ ಆಲೋಚನೆ ಎಂಬ ಕಾರ್ಯವು ಕೇವಲ ಒಂದು ಸಮೀಕ್ರಿಯೆ, ಅದರಲ್ಲಿ ನಾವು ಹಾಕಿದಷ್ಟು ಮಾತ್ರ ನಮಗೆ ಸಿಗುತ್ತದೆ–ಬುದ್ಧಿಯ ಕ್ರಿಯೆಯೇ ಅಂಥದು; ಆ ಬಗೆಯ ತಿಳಿವಳಿಕೆ ಮಾತ್ರ ನಮಗೆ ಲಭ್ಯ. ವಿಚಾರ, ಆಲೋಚನೆ, ಚಿಂತನ ಎಂಬ ಮನೋವ್ಯಾಪಾರವು ಆರ್ಥಿಕ ವ್ಯಾಪಾರಕ್ಕೆ ಸರಿದೊರೆ; ಅಥವಾ ಅದಕ್ಕೂ ಕಡಿಮೆ ಲಾಭದಾಯಕ: ಏಕೆಂದರೆ ಸಾಮಂತ ಅಥವಾ ಬಂಡವಾಳ ಪದ್ಧತಿಯು ತಾನು ಹಾಕಿದ್ದಕ್ಕಿಂತ ಹೆಚ್ಚನ್ನು ಹಾಕಿದವನಿಗೆ ಕೊಡಿಸುತ್ತದೆ! 'ಬುದ್ಧಿರುತ್ಪದ್ಯತೇ ಕಾರ್ಯಾತ್' ಎಂಬ ವ್ಯಾಸವಾಣಿಗೆ ಉಕ್ತ ಅರ್ಥವ್ಯಾಪ್ತಿ ಇದೆ. ಮನಸ್ಸಿನ ಕ್ರಿಯೆ ಅಥವಾ ಕಾರ್ಯವೆಂದರೆ ಇಚ್ಛಾಮೂಲವಾದ ಭಾವನೆ. ಇಚ್ಛೆ ಭಾವನೆಗಳು ಅವಿನಾಭಾವಿಗಳು ಮತ್ತು ಪರಸ್ಪರ ಪ್ರೇರಕಗಳು. ಅವೇ ಬುದ್ಧಿಯ ಬುಡ–ತಲೆಗಳು. ಅವು ಅಬೌದ್ಧಿಕ ಪ್ರಜ್ಞೆಗಳು. ಬುದ್ಧಿಯು ಅವುಗಳ ಸೇವಕ, ಹೆಚ್ಚೆಂದರೆ ಸಾರಥಿ ಅಥವಾ ಮಂತ್ರಿ. ಈ ಮೂರರ ಒಟ್ಟಿನ ಹೆಸರು ಜಾಗ್ರತ ಮನಸ್ಸು ಎಂದು. ಅಹಂಕಾರ–ಮಮಕಾರಗಳು ಇದರ ವೇಷಾಂತರಗಳೆಂಬುದು ವೈಯಕ್ತಿಕ ಮನದ ಪಾಶ್ಚಾತ್ಯ ವ್ಯಾಖ್ಯೆ. ಮನಸ್ಸುಗಳ ಮನಸ್ಸುತನವೆಂಬುದು ಅತಿ ಭೌತವಾದ ಆತ್ಮ, ಜೀವಾತ್ಮ ಅಥವಾ ಅಹಂಕಾರ ತಾಳಬಲ್ಲ, ದೇಹಾತ್ಮಭಾವ ಉಳ್ಳ ವಿಜ್ಞಾತೃ, ಅನುಭವ ಭೋಕ್ತೃ–ಎಂಬುದು ಮಹಾಭಾರತ. ಮಾನಸಸಂವೇದನೆ, ಸ್ಮೃತಿ, ಕಲ್ಪನೆ, ಭಾವನೆ, ಊಹನೆ, ತರ್ಕ, ಮಾನಸಿಕ ಪ್ರಯತ್ನ ಮುಂತಾದವುಗಳಿಗೆ ಮನಸ್ಸು ಕರ್ತೃ ಎಂಬುದು ಮನಃಶಾಸ್ತ್ರದ ಪಾಶ್ಚಾತ್ಯ ವಿವರಣೆ. ಆದುದರಿಂದ ಈ ಮನಸ್ಸು ಭಾರತದ ಜೀವಾತ್ಮನ ಅರ್ಥವನ್ನು ಒಳಗೊಂಡದ್ದಾಗಿದೆ. ಇಂಥ ಮನೋವಂತ ದೇಹವೇ ವ್ಯಕ್ತಿ. ಮನಸ್ಸು ದೇಹದ ಕೃತ್ಯ ಎಂಬುದಕ್ಕೆ ಅರಿಸ್ಟಾಟಲ್, ಹಾಬ್ಸ, ಹೆಗೆಲ್ ಮತ್ತು ವರ್ತನಾವಾದಿ ಮನಃಶಾಸ್ತ್ರಜ್ಞರ ಸಹಿಯಿದೆ;ಅದು ದೇಹದ ಮಾನಸಿಕ ಅಭ್ಯಾಸ ಎಂಬುದಕ್ಕೆ ಬರ್ಕ್ಲಿ, ಲಿಬ್ನಿಜ್, ಷೋಪೆನ್ ಹೋರರ ರುಜುವಿದೆ.

ಮಹಾಭಾರತದಲ್ಲಿ–ಬ್ರಹ್ಮದಲ್ಲಿ ಅವ್ಯಕ್ತವೂ, ಅವ್ಯಕ್ತದಲ್ಲಿ ಮಹತ್ತೂ, ಮಹತ್ತಿನಲ್ಲಿ ಬುದ್ಧಿಯೂ, ಬುದ್ಧಿಯಲ್ಲಿ ಮನಸ್ಸೂ, ಮನಸ್ಸಿನಲ್ಲಿ ಇಂದ್ರಿಯಗಳೂ ವ್ಯಾಪ್ಯಗಳಾಗಿವೆ. ಬ್ರಹ್ಮವು ವಿಶ್ವದ ಒಳಹೊರಗಿರುವ ಅನಂತ ಚೈತನ್ಯ ಶಕ್ತಿ. ಅವ್ಯಕ್ತ ಅಥವಾ ಪ್ರಕೃತಿಯು ಅದರ ಹೊರ ಸ್ವಭಾವ. ಮಹತ್ತು ದೇಹಿಗಳ ಒಳಗಿನ ಅತಿಮಾನಸ ಕರ್ತೃವಾದ ಜೀವಾತ್ಮ; ಬುದ್ಧಿ ಅದರ ಸಾಧನ. ಮನಸ್ಸು ಸಂಕಲ್ಪ–ವಿಕಲ್ಪಾತ್ಮಕ; ಇಂದ್ರಿಯಗಳೂ ಅದರ ಮಂತ್ರಿಗಳು! ಸತ್ವ–ರಜಸ್ತಮಗಳ ಒಂದು ಮೊತ್ತವೇ ಪ್ರಕೃತಿ. ಸತ್ವವೆಂದರೆ

ನಿಶ್ಚಿತಜ್ಞಾನ. ಅದರ ಧಾರಣೆ, ಸ್ಮೃತಿ ಮತ್ತು ಸಂತೋಷ. ರಜಸ್ಸೆಂದರೆ ಅತ್ಯಾಶೆ, ಸಿಟ್ಟು, ಅತಿಕಾಮ, ಭಯ, ಸುಸ್ತು ಅಥವಾ ಮಾನಸಿಕ ಶ್ರಮ ಮತ್ತು ಅನವಧಾನ. ತಮಸ್ಸೆಂದರೆ ದುಃಖ, ನೋವು, ವಂಚನೆ, ಜಂಭ ಮತ್ತು ಕ್ರೌರ್ಯ. ಮೊದಲನೆಯದು ಬ್ರಾಹ್ಮ, ಎರಡನೆಯದು ಕ್ಷಾತ್ರ, ಮೂರನೆಯದು ವೈಶ್ಯ. ದುಃಖವು ಅಸಂತೋಷ.

ಸಾಮಾಜಿಕ ಗುಂಪುಗಳ ಸಾಧನ, ರೂಢಿ ಮತ್ತು ಸಂಸ್ಥೆಗಳನ್ನು ಸಂಸ್ಕೃತಿ ಎಂದು ಹೇಳಿದವನು ಸ್ಪೆಂಗ್ಲರ್. ವಿಶ್ವದ ಮತ್ತು ಸಮಾಜದ ಹಕ್ಕು, ಸುಗುಣ, ಕರ್ತವ್ಯ, ಬಳಕೆ(ರೂಢಿ), ಕಾಯದೆ(ವಿಧಿ)ಗಳನ್ನು ಧರ್ಮವೆಂದು ಸಾರಿದ್ದು ಮಹಾಭಾರತ. ಸಮಾಜವೆಂದರೊಂದು ಭೌತಿಕ ಪದಾರ್ಥ, ಅವಯವಿ(ಅದರಲ್ಲೂ ಜಟಿಲ ಅಂಗಿ), ವಿವಿಧ ವಂಶೀಯರ ಸಂಘರ್ಷದಿಂದ ಹುಟ್ಟಿದ ರಚನೆ ಹಾಗೂ ಸಂಸ್ಥೆಗಳ ಸಂಬಂಧಗಳ ವ್ಯಾವಹಾರಿಕತೆ(ವಾಸ್ತವಿಕತೆ), ಸಾಂಘಿಕ ಮನ ಎಂದಿರುವುದು ಪಾಶ್ಚಾತ್ಯ. ವೃತ್ತಿ ವಿಭಾಗಗಳನ್ನು ವರ್ಣಗಳೆಂದು ಹೇಳಿದ್ದು ಮಹಾಭಾರತ. ವರ್ಣಗಳ ವ್ಯವಸ್ಥಿತವಾದ ಸಣ್ಣ ಅಥವಾ ದೊಡ್ಡ ಗುಂಪಿನಲ್ಲಿ ಸಮಾಜ. ಭಾರತೀಯ ಸಮಾಜ ಶಾಸ್ತ್ರದಲ್ಲಿ ವರ್ಣವು ಬಣ್ಣವಲ್ಲ. ವೃತ್ತವು ವೃತ್ತಿ ಪ್ರಭಾವಿತ; ಶೀಲವು ನೀತಿ ಜನಿತ. ನೀತಿಯು ಸಾಮಾಜಿಕ ಸಂಬಂಧ, ಸಂಸ್ಕೃತಿಯು ಅದರ ಫಲ. ಸಂಬಂಧವು ಸುಸಂಬಂಧ ಅಥವಾ ಸಮನ್ವಿತ ಜೀವನಮಾರ್ಗ, ನೀತಿಯು ವಂಶಪಾರಂಪರಿಕ; ವೃತ್ತವು ಪ್ರಭಾವಿ ಮನಃಪ್ರವೃತ್ತಿಗೆ ಸಹಜವಾಗಿ ಆಯ್ದುಕೊಂಡ ಕರ್ಮಾಭ್ಯಾಸದ ಫಲ. ಒಂದು ಮಾನವ ಜನ್ಮ ಸಹಜ; ಇನ್ನೊಂದು ಆವರಣ ಸಂಸ್ಕಾರಜನ್ಯ.

'ಸುಪ್ರಜ್ಞಮಪಿ ಚೇಚ್ಛೂರಂ ಋದ್ಧಿರ್ಮೋಹಯತೇನರಂ'–ಶೂರವಿದ್ವಾಂಸನನ್ನೂ ಸಿರಿಯು ಅಜ್ಞಾನ, ಅಹಂಕಾರ ಕಾಮ ಕ್ರೋಧಗಳಿಗೆ ಯಜಮಾನಿಕೆ ವಹಿಸಿಕೊಟ್ಟು ಆ ಮೂಲಕ ಅವನು ಪಾಪ(ಪರಹಿಂಸೆ, ಪರಶೋಷಣೆ) ಮಾಡಲು ಕಾರಣವಾಗುತ್ತದೆ– ಎಂಬ ನಿತ್ಯನೂತನ ಎಚ್ಚರಿಕೆ ಕೊಟ್ಟದ್ದು ಮಹಾಭಾರತ. ಇಂಥ ಎಚ್ಚರಿಕೆಗಳೇ ನಿಜವಾದ ಸಮಾಜ ಶಿಕ್ಷಣ.

**ಪ್ರಣಷ್ಟಃ ಶಾಶ್ವತೋ ಧರ್ಮ ಸದಾಚಾರೇಣ ಮೋಹಿತಃ ।**

**ತೇನ ವೈದ್ಯಸ್ತಪಸ್ವೀವಾ ಬಲವಾನ್ ವಾ ವಿಮುಹ್ಯತೇ ॥**

ನಿಷ್ಕೃಷ್ಟವೃತ್ತಿಗಳುಳ್ಳ ವರ್ಣಿಗಳಿಗೂ ಅನಿಷ್ಕೃಷ್ಟ ವೃತ್ತಿಗಳುಳ್ಳ ಅವರ್ಣಿ(ಲಿಂಗ)ಗಳಿಗೂ ಸಾಮಾನ್ಯವಾದ ಅಹಿಂಸಾದಿ ಧರ್ಮಗಳ ವ್ಯಾವಹಾರಿಕ ಅಭಿವ್ಯಕ್ತಿಯನ್ನು ಗುರುತಿಸುವ ಶಕ್ತಿಯನ್ನು ಜನರು ಇತಿಹಾಸದ ಅಂಧಕಾರ ಯುಗದಲ್ಲಿ ಕಳೆದುಕೊಳ್ಳುತ್ತಾರೆ; ವಿದ್ಯಾವಂತರೂ ತಪಸ್ವಿಗಳೂ(ಸಂಶೋಧಕರೂ) ಪೌರುಷಬಲಸಂಪನ್ನರೂ ಒಮ್ಮೆ ಅಂಥ ಅಜ್ಞಾನಕ್ಕೆ ಆಗ ಇಳಿಯುವುದುಂಟು. ವಿಜ್ಞಾನಿಗಳಿದಕ್ಕೆ ಹೊರತಲ್ಲ. 'ವಿಜ್ಞಾನವು' ಜ್ಞಾನ(ಸಮನ್ವಿತ ಜೀವನದ ಜ್ಞಾನ)ವಲ್ಲ.

ಕ್ರೈಸ್ತ ಹೇಳಿದಂತೆ ಯೆಹೂದ್ಯಮತದಿಂದ ಪ್ರವಾದಿಗಳನ್ನೂ ಉತ್ತರಕಾಲೀನ ಪ್ರಕ್ಷೇಪಗಳನ್ನೂ ಕಿತ್ತೆಸೆದರೆ ಅದು ಜಗತ್ತಿನ ಮನುಕುಲದ ಎಲ್ಲ ಸಂಕಟಗಳನ್ನೂ ಪರಿಹರಿಸಬಲ್ಲ ಉಪದೇಶಗಳಿಂದಕೂಡಿದ ಧರ್ಮವೆನ್ನಿಸುತ್ತದೆ–ಎಂದು ಹೇಳಿದ್ದು ಆಲ್ಬರ್ಟ್ ಐನ್‌ಸ್ಟೀನ್–೧೯೩೫ರಲ್ಲಿ. ಇಂಥ ಮಾತನ್ನು ಮಹಾಭಾರತಕ್ಕೆ ಇನ್ನೂ ಹೆಚ್ಚಾಗಿ ಅನ್ವಯಿಸಿ ಹೇಳಬಹುದು. ಅದರ ಮತೀಯ ಹಾಗೂ ತಾತ್ಕಾಲಿಕ ಹಿತಾರ್ಥಾಂಶಗಳನ್ನು ಬದಿಗಿಟ್ಟು ನೋಡಿದಾಗ ಅದರಲ್ಲಿರುವ ಉಪದೇಶಗಳು ತಮ್ಮ ವಿಶ್ವವ್ಯಾಪಕತೆಯಲ್ಲಿ ಅಪ್ರತಿಮವಾಗಿ ತೋರದಿರಲಾರವು. ಮಾನವ ನಾಗರಿಕತೆಯ ಉಳಿವು, ಅದು ನಿರ್ಮಿಸುವ ನೈತಿಕ ಶಕ್ತಿಯನ್ನೇ ಹೆಚ್ಚಾಗಿ ಅವಲಂಬಿಸಿದೆ–ಎಂದು ಅಭಿಪ್ರಾಯಪಟ್ಟದ್ದು ಉಕ್ತ ಜ್ಞಾನವೃದ್ಧನೇ. 'ಯತೋಧರ್ಮಸ್ತತೋ ಜಯಃ' ಎಂದದ್ದು ಮಹಾಭಾರತ; 'ಧರ್ಮಾದರ್ಥಶ್ಚ ಕಾಮಶ್ಚ ಸಕಿಮರ್ಥಂನ ಸೇವ್ಯತೇ' ಎಂದದ್ದೂ ಅದರ ದ್ರಷ್ಟಾರನೇ. ಆದರೆ ವಿಶ್ವವ್ಯಾಪಕ ಧರ್ಮಸೂತ್ರಗಳಪ್ರಭಾವವನ್ನು ಅಡಿಗಿಸುವ ಹಾಗೆ ಅಲ್ಪವ್ಯಾಪ್ತಿಯ ಸೂತ್ರಗಳನ್ನು ಪ್ರಚುರ ಪಡಿಸುತ್ತ ಬಂದುದರಿಂದ ಹಿಂದುಧರ್ಮವು ಇತರ ಧರ್ಮಗಳಂತೆ ಪರಕೀಯರಿಗೆ ಒಂದು ಮತವಾಗಿ ತೋರಿತು. **ಸಾರ್ವನೈತಿಕ ಸೂತ್ರಗಳಿಗೆ ವಿರುದ್ಧವಾಗಿ ಪರಿಣಮಿಸುವ ಸದಾಚಾರ ಶಿಷ್ಟಾಚಾರಗಳು ಒಂದು ಧರ್ಮವನ್ನು ಮತದ ಸಂಕುಚಿತತೆಗಿಳಿಸುತ್ತವೆ.** ದೇಶ(ಅವಕಾಶ), ಕಾಲಗಳು ವ್ಯಾಪ್ತಿಯ ಸೀಮಾ ರೇಖೆಗಳು. ಅವುಗಳನ್ನು ಬಹಳ ಸಣ್ಣ ಸಣ್ಣ ತುಂಡುಗಳನ್ನಾಗಿ ಮಾಡುತ್ತ ಹೋದುದೇ ಅನವಶ್ಯಕ ಜಾತಿಸ್ತರಗಳ ನಿರ್ಮಾಣ ಭಾರತದಲ್ಲಿ ಆಗುವಂತಾಯ್ತು; 'ಭೇದವು ಭಯಾವಹ' ಎಂಬ ಯಾಜ್ಞವಲ್ಕ್ಯೋಕ್ತಿಯಂತೆ ಜಾತಿಭೇದಗಳನ್ನು ರಾಜಶಕ್ತಿಯು ಜನಶೋಷಣೆಗೆ ಉಪಾಯವನ್ನಾಗಿ ಮಾಡಿದ ಭಯಂಕರ ಸನ್ನಿವೇಶವು ಉಂಟಾಯಿತು. ಅಧಿಕಾರ ಬಲಸಂಪನ್ನರಲ್ಲಿ ಅನೇಕರು ಇತಿಹಾಸದ ವಿವಿಧ ಅವಧಿಗಳಲ್ಲಿ ಜಾತಿಗಳಲ್ಲಿ ಒಡಕನ್ನು ಎಚ್ಚರಿಸಿ, ಸ್ವಾಧಿಕಾರ ಪ್ರಮತ್ತರಾಗಿ ವರ್ತಿಸಿದರು. ಆದುದರಿಂದ ಹಿಂದುವಿಂದು ಜಾತ್ಯತೀತನಾಗಲು ಯೋಜಿಸುವುದು ಕ್ರಮಪ್ರಾಪ್ತ; ಆದರೆ ಅದಕ್ಕೆ ಬೇಕಾದದ್ದು ಪಂಚವಾರ್ಷಿಕ ಯೋಜನೆಯಲ್ಲ, ಶತವಾರ್ಷಿಕ ಯೋಜನೆ; ಉಪಜಾತಿಯ ಭೇದಗಳಿಂದ ಮುಕ್ತನಾಗಲು ದಶವಾರ್ಷಿಕ ಯೋಜನೆಯೊಂದು ಸಾಕು. ಶಾಸ್ತ್ರವಿಧಿಯಂತೆ(ಅಂದರೆ ಯೋಜನಾ ಬದ್ಧವಾಗಿ) ಮಾಡಹೋದರೆ ಮಾತ್ರ ಸುಧಾರಣೆ ಚಿರಸ್ಥಾಯಿಯಾದೀತು. ದ್ವೇಷವೆಂದೂ ಐಕ್ಯವನ್ನು ಸಾಧಿಸಿಕೊಡದು; ತಿರಸ್ಕಾರವೆಂದೂ ಪುರಸ್ಕಾರವನ್ನು ಗಳಿಸಿಕೊಡದು; ಕಾಲಕ್ರಮಣಕ್ಕೆ ಅವಕಾಶಕೊಡದೆ ಯಾವುದೂ ಸಿದ್ಧಿಸದು. ಜಾತಿಭೇದನಿರಸನವು ಸಾಂಸ್ಕೃತಿಕ ಮಟ್ಟಗಳ ಅವನತಿಗೆ ಕಾರಣವಾಗುವಂತೆ ವರ್ತಿಸುವುದು ನರಕಕ್ಕೆ ಬರಲು ಆಮಂತ್ರಣ ಕೊಟ್ಟಂತೆಯೇ ಸರಿ; ಸಾಂಸ್ಕೃತಿಕ ಅಧಃಪತನವು ಸಮಾಜವನ್ನು ಜೀವಚ್ಛವದ ದರ್ಜೆಗೆ ಇಳಿಸುತ್ತದೆ. ಹಾಗೇ ತಜ್ಞರಲ್ಲಿ ನಿರಾಶಾಜನಕವಾಗುವಷ್ಟು ಅಭಿಪ್ರಾಯ ಭೇದಗಳು ಆ ವಿಷಯದ ಬಗ್ಗೆ ಉಂಟಾಗುವುದೂ ಅಧಃಪತನ ಹೇತು.

ಜೀವನನಿರ್ವಾಹದ ಅರ್ಥಾರ್ಜನೆಗೆ ನೇರವಾಗಿ ಸಂಬಂಧಿಸಿದ ಕೆಲಸಗಳು ಸಾಂಸ್ಕೃತಿಕವೆಂದದ್ದು ಐನ್‌ಸ್ಟೀನ್ ಮಹಾಶಯನೇ. ಜ್ಞಾನಿಗಳಿಂದ ಭಿನ್ನರಾದ ಕರ್ಮಿಗಳು(ಜ್ಞಾನಕರ್ಮಿಗಳಲ್ಲದ ಕರ್ಮ ಜ್ಞಾನಸಂಪನ್ನ ಕರ್ಮಿಗಳು) ಯಾವಾಗಲೂ ಬಹುಸಂಖ್ಯಾತರು. ಅವರು ತಮ್ಮ ಸಂತಾನದ ಕ್ರಮಿಕ ಸಾಂಸ್ಕೃತಿಕ ವಿಕಾಸಕ್ಕಾಗಿ ಅಲ್ಪಸಂಖ್ಯಾತ ಜ್ಞಾನಿಗಳನ್ನು ಪೋಷಿಸಿಕೊಂಡು ಬರುವುದು ಸರ್ವಮಾನವ ಸಾಧಾರಣ. ವೇದವ್ಯಾಸನೇ ಅಂಥ ಜ್ಞಾನಿ; ಆಳುವವರೂ ಉಳುವವರೂ ಇತರ ಐಹಿಕ ಸಾಧನೋತ್ಪಾದಕರೂ ಕೊಡು–ಕೊಳ್ಳುವ ವ್ಯವಹಾರ ನಿರ್ವಾಹಕರು ಕರ್ಮಿಗಳು. ಮತವಿರೋಧಗಳು ಜ್ಞಾನಿಗಳನ್ನು ಜನರು ಸಮಾನಪೂಜ್ಯರೆಂದು ಗಣಿಸಲು ವಿಘ್ನಕಾರಿಯಾಗುತ್ತವೆ. ಜ್ಞಾನಿಮಾನಿಗಳೊರೆದ ಮರಣೋತ್ತರ ಕಾಲೀನ ಅವಸ್ಥೆಗಳ ಬಗೆಗಿನ ಭಿನ್ನಾಭಿಪ್ರಾಯಗಳು ಅಂಥ ವಿಘ್ನಕಾರಿತ್ವಕ್ಕೆ ಒಂದು ದೃಷ್ಟಾಂತ. ಹಲವು ಸಲ ಅಭಿಪ್ರಾಯ ಭೇದಗಳು ಶಬ್ದಭೇದ, ವಿಚಾರಕ್ರಮಭೇದ, ಕಲ್ಪನಾಪ್ರಕಾರ ಭೇದಗಳಿಂದ ಅನವಶ್ಯಕವಾಗಿಯೂ ಉಂಟಾಗುತ್ತವೆ; ಅನಂತರ, ಅಪತರ್ಕ, ಅಪೂರ್ಣತರ್ಕ, ಅಸಮನ್ವಯದೃಷ್ಟಿಯತರ್ಕ, ಕಲ್ಪನಾಪೋಢತರ್ಕ, ಕಲ್ಪನಾದರಿದ್ರತರ್ಕ ಮುಂತಾದವುಗಳ ದೆಸೆಯಿಂದ ಮೋಕ್ಷೇತರ ಪುರುಷಾರ್ಥಗಳ ಬಗೆಗೂ ನಿರುಪಯುಕ್ತವಾಗುವ ವಾದವಿವಾದಗಳು ನಡೆಯುತ್ತವೆ, ಇವೂ ಸಾಂಸ್ಕೃತಿಕ ಪ್ರಗತಿಗೆ ಕಂಟಕವಾಗಬಲ್ಲವು. ಮುಳ್ಳಿಲ್ಲದ ಗುಲಾಬಿ ಇಲ್ಲವಂತೆ. ಈ ಜಗತ್ತು ಇಂಥದೆ! ಮೋಕ್ಷವೊಂದೇ(ಸ್ವರ್ಗವಲ್ಲ) ಮುಳ್ಳಿಲ್ಲದ ಗುಲಾಬಿ–ಎಂಬುದು ಮಹಾಭಾರತೀಯ ಸಿದ್ಧಾಂತ. ಅದನ್ನು ವ್ಯಾಸನು ಕರ್ಮಿಗಳಾದ ಲೌಕಿಕರ ಮೇಲೆ ಹೇರಲಿಲ್ಲ; ಅವನು ಹೇರಹೊರಟದ್ದು ಧರ್ಮವೊಂದನ್ನೇ. ಅದು ಸಾಮಾಜಿಕ ಆರೋಗ್ಯಕ್ಕೆ ಅಗತ್ಯವಾದ ಪೌಷ್ಟಿಕ ರಸಾಯನ. ಪ್ರತಿಯೊಬ್ಬ ವ್ಯಕ್ತಿಯಲ್ಲೂ ಸಮಾಜಾಂಶ–ವ್ಯಕ್ತಿ ವಿಶಿಷ್ಟಾಂಶಗಳಿರುತ್ತವೆ. ಸಮಾಜಸಾಧಾರಣಾಂಶವೆಂಬುದು ಯಾವಾಗಲೂ ವ್ಯಕ್ತಿಯ ತಾತ್ಕಾಲಿಕ ಲಾಭಾಲಾಭ, ಜಯಾಪಜಯ, ಸುಖದುಃಖಗಳಲ್ಲಿ ವ್ಯಕ್ತಿವಿಶಿಷ್ಟಾಂಶಗಳಿಗಿಂತ ಸಂಘರ್ಷ ಸಂದರ್ಭಗಳೆಲ್ಲವುಗಳಲ್ಲೂ ಬಲವತ್ತರವೆಂದು ಭಾವಿಸಬೇಕಾದುದೇ ಸಾಮಾನ್ಯ ಧರ್ಮದ ಆತ್ಮ, ಶಾಶ್ವತ ಧರ್ಮದ ಸಾರ. ಅಸಂಘರ್ಷ ಸಂದರ್ಭ(ಅವಿರೋಧ ಸಂದರ್ಭ)ಗಳಲ್ಲೂ ವ್ಯಕ್ತಿಭೋಗ್ಯವನ್ನು ಬಹಿಷ್ಕರಿಸಲು ಭಾರತಧರ್ಮವು ಮುಂದಾಗದು. ಸಂಘರ್ಷ–ಸಂಘರ್ಷಾಭಾಸಗಳು ಉಂಟಾಗುವ ಸನ್ನಿವೇಶವನ್ನು ದೃಷ್ಟಿಯಲ್ಲಿಟ್ಟುಕೊಂಡೇ–

**ದೃಶ್ಯತೇಹಿ ಧರ್ಮರೂಪೇಣಾ ಧರ್ಮಂ ಪ್ರಾಕೃತಶ್ಚರನ್**
**ಧರ್ಮಂಚಾ ಧರ್ಮರೂಪೇಣ ಕಶ್ಚಿದಪ್ರಾ ಕೃತಶ್ಚರನ್–**

'ಪ್ರಾಕೃತನ(ಅಸಂಸ್ಕೃತನ, ಅನಾಗರಿಕನ) ಅಧರ್ಮಾಚರಣೆ(ಎಷ್ಟೋ ಸಲ) ಧರ್ಮವೆಂದು ತೋರುತ್ತದೆ; ಅಪ್ರಾಕೃತನ ಧರ್ಮಾಚರಣೆ ಹಾಗೇ ಅಧರ್ಮವೆಂದು ಕಾಣುತ್ತದೆ' ಎಂದು ಮಹಾಭಾರತದಲ್ಲಿ ಹೇಳಲಾಗಿದೆ. ಇರುವಿಕೆಯಂತೆ ತೋರಿಸುವುದೂ ಇಲ್ಲದ್ದನ್ನು ಇರುವಂತೆ ತೋರಿಸುವುದೂ ಮನುಷ್ಯರ ಸಮೂಹಗಳಲ್ಲಿ ಕಂಡುಬರುವ

ಸಂದರ್ಭಗಳು ಅನೇಕ ಸಲ ತಪ್ಪಾಗಿ ಗ್ರಹಿಸಲ್ಪಡುವ ಉದಾಹರಣೆಗಳಿರುವುದರಿಂದ ಜೀವನದ ಬಗೆಗಿನ ವೇದವಾದಗಳಂತೆಯೇ ವಿಜ್ಞಾನವಾದಗಳೂ ಅನೇಕವಾಗಿವೆ; ವಿಶ್ವದ–ಸೃಷ್ಟಿ–ಲಯಗಳ ಬಗೆಗಿನ ಅನೇಕ ಉಭಯಜಾತಿಯವಾದಗಳೂ ಪೌರಾಣಿಕವಾಗಿರುವುದು ನಿದರ್ಶನ. ಜೀವನವು ಸ್ಥಿತಿಯೆಂಬ ಅವಸ್ಥೆ. ಅದಕ್ಕೆ ಅಸ್ಮಿತಾ ಜ್ಞಾನವು ಪ್ರಧಾನ ಕೇಂದ್ರ. ಅಂಥ ಜ್ಞಾನವು ಪಂಚವಿಧ; ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ; ಇವುಗಳಲ್ಲಿ ಇಂದ್ರಿಯ ಗ್ರಾಹ್ಯವಾದ ಅನ್ನಮಯ(ಶಾರೀರಿಕ) ಅಸ್ತಿತ್ವಜ್ಞಾನವು ಸಾರ್ವಜನಿಕವಾದ ಆಂಶಿಕಸತ್ಯ (ಸಾಪೇಕ್ಷಸತ್ಯ). ಮಿಕ್ಕ ನಾಲ್ಕು ಇದಕ್ಕಿಂತ ಕಡಿಮೆ ವ್ಯಾಪ್ತಿಗಳನ್ನುಳ್ಳವುಗಳಾಗಿರುವುದು ಅಸ್ಮಿತಾಪ್ರಜ್ಞೆಯುಳ್ಳ ಜೀವಿಗಳ ಸಂಖ್ಯಾಮಾನದಿಂದ.

ವ್ಯಕ್ತಿನಿಷ್ಠ ಮತ್ತು ವಸ್ತುನಿಷ್ಠ ಎಂದು ಗ್ರಹಿಸುವ ಗುಣಗಳೆರಡನ್ನೂ ವ್ಯಾವಹಾರಿಕ ಸತ್ಯವೆಂಬುದು ಮಾನವ ಸಾಧಾರಣ. ಮಹಾಭಾರತ ಇದಕ್ಕೆ ಎರಡಾಡದು. ಅದರ ಧರ್ಮೋಪನ್ಯಾಸ ಈ ಪರಸ್ಪರ ಭೇದವನ್ನು ಮರೆತಿಲ್ಲ. ಮಾನವರ ಸಾಮಾಜಿಕ ಸಂಬಂಧಗಳಿಗೆ ಸತ್ಯದ ಈ ಸ್ವರೂಪವೇ ನೆಲೆ, ಆಧಾರ. ಅಡಿಗಲ್ಲು: ಅಂಥ ಸಂಬಂಧಗಳಿಂದಸುಖ, ತೃಪ್ತಿ, ಸಂತೋಷ ಉಂಟಾಗಬೇಕೆಂಬುದೇ ಅವನ ಬಯಕೆ. ಅಂಥ ಸುಖವು ಹೆಚ್ಚು ಹೆಚ್ಚು ಸಾತತ್ಯ ಉಳ್ಳಂತಾಗುವುದು ಅಪೇಕ್ಷಿತ. ಅದಕ್ಕೇನು ಮಾಡಬೇಕೆಂಬುದೇ ಧರ್ಮವು ಪರಿಹರಿಸಲು ಎತ್ತಿಕೊಳ್ಳುವ ಪ್ರಶ್ನೆ. ಅದು ನಿತ್ಯವಾಗಬೇಕಾದರೆ ತನ್ನ ಸ್ವರೂಪವನ್ನು ಬದಲಾಯಿಸಿಕೊಡು ಆನಂದತ್ವವನ್ನು ಹೊಂದಬೇಕಾಗುತ್ತದೆ. ಆನಂದವೇ ಮೋಕ್ಷ, ಸಂಪೂರ್ಣಾರ್ಥದ ಬಿಡುಗಡೆ.

'ಪಾಶ್ಚಾತ್ಯ ರಾಜನೈತಿಕ ತತ್ವಜ್ಞಾನಿಗಳು' ಎಂಬ ಗ್ರಂಥದ ಮುನ್ನುಡಿಯಲ್ಲಿ ಮಾರಿಸ್ ಕ್ರಾನ್ಸ್‌ಟನ್ನನು ಪೌರಸ್ತ್ಯ ತತ್ವಜ್ಞಾನಿಗಳು ಐಹಿಕ ಮುಕ್ತತೆಗೆ(ರಾಜಕೀಯ ಸ್ವಾತಂತ್ರ್ಯಕ್ಕೆ) ವಿಶೇಷ ಮಹತ್ವವನ್ನು ಕೊಟ್ಟಿಲ್ಲವೆಂಬ ಆರೋಪವನ್ನು ಮಾಡಿದ್ದಾನೆ. ಪೌರಸ್ತ್ಯ ಜೀವನ ಧರ್ಮಶಾಸ್ತ್ರವಾದ ಮಹಾಭಾರತವು ಕರ್ತವ್ಯಾರ್ಥದ ಧರ್ಮವನ್ನು ಹೇಳುವಾಗ ಜೀವನ ಸ್ವಾತಂತ್ರ್ಯವನ್ನು ಹೇಳಿದೆ ಎಂಬುದನ್ನವನರಿಯ. ವೃತ್ತಿವರ್ಣ(ವರ್ಗ)ಗಳ ಕರ್ತವ್ಯದಲ್ಲಿ ಸ್ವಾತಂತ್ರ್ಯದ ಕಲ್ಪನೆ ಬಂದಿದೆ. ಹಾಗೆ ಬಂದಿರುವುದು ಸಮಾಜಾಧಿಕ್ಯ–ವ್ಯಕ್ತ್ಯಾಧಿಕ್ಯಗಳೆಂಬ ಅತಿವಾದಗಳ ಘರ್ಷಣೆಗೆ ಅವಕಾಶವಿಲ್ಲದಂತೆ ಮಾಡಿದೆ. ವೃತ್ತಿನಿಷ್ಠವಾದ ನಾಲ್ಕು ವರ್ಣಗಳು ತಮ್ಮ ತಮ್ಮ ವೃತ್ತಿನಿಯಮಗಳಂತೆ ನಡೆದುಕೊಂಡರೆ ಒಂದು ರಾಜಕೀಯ ಸರಕಾರದ ಆಳ್ವಿಕೆಗೆ ಒಳಪಟ್ಟ ಪ್ರತಿಯೊಬ್ಬನೂ ಸ್ವತಂತ್ರತೆಯನ್ನು ಅನುಭವಿಸುವುದು ಸಹಜವಾಗುತ್ತದೆ. ವೃತ್ತಿಯು ವ್ಯಕ್ತಿಲಾಭ–ಸಮಾಜೋಪಕಾರಗಳೆರಡನ್ನೂ ಸಾಧಿಸುವಂತಹ ನಿಯಮಗಳಿಂದ ಬದ್ಧವಾಗಿರುವುದು ನಾಗರಿಕವಾದುದು. ಅದರ ಆ ನಾಗರಿಕತೆಯು ನ್ಯೂನವಾಗದಂತೆ ನೋಡಿಕೊಳ್ಳುವುದು ಪ್ರಭುಶಕ್ತಿ, ಪ್ರಶಾಸನ ಕರ್ತವ್ಯನಿಷ್ಠೆ: ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ, ಪ್ರತಿಗ್ರಹವೆಂಬ ಕೆಲಸಗಳನ್ನು ಮಾಡುವುದು ಬ್ರಾಹ್ಮವರ್ಗ. ಸತ್‌ಪರಂಪರಾಗತವಾದ ವೃತ್ತಿನಿಯಮಗಳನ್ನು ದಕ್ಷತೆಯಿಂದ ಪಾಲಿಸುವಂತೆ

ನೋಡಿಕೊಳ್ಳುವುದು ಕ್ಷಾತ್ರಧರ್ಮ. ಕೃಷಿ, ಗೋರಕ್ಷೆ, ವಾಣಿಜ್ಯಗಳೆಂಬ ಉತ್ಪಾದನ–ವಿತರಣ ಕಾರ್ಯಗಳನ್ನು ಸದಾಚಾರದ ಮಟ್ಟಗಳಂತೆ ನಡೆಸಿಕೊಂಡು ಹೋಗುವುದು ವೈಶ್ಯ ಧರ್ಮ. ಅಧಿಕಾರಿ, ನೌಕರ, ಸೇವಕ ಮುಂತಾದವರ ಕೆಲಸಗಳನ್ನು ಪ್ರತಿಫಲರೂಪದ ವೇತನಗಳನ್ನು ಪಡೆದು ಆಯಾ ನಿಯಮಗಳಂತೆ ಪ್ರಭುಶಕ್ತಿಯ ಕೈಂಕರ್ಯವನ್ನು ಯಥಾವಿಧಿ ಮಾಡುವುದು ಶೂದ್ರಧರ್ಮ. ಕುಲಕಸುಬುದಾರಿಕೆಯ ಪರಂಪರೆ ಶತಮಾನಗಟ್ಟಲೆ ನಡೆಯುತ್ತ ಬಂದುದೇ ಸಾಮಾಜಿಕ ಮೇಲು ಕೀಳುತನಗಳ ಕಲ್ಪನೆಗೆ ಕಾರಣವಾಯ್ತು. ಅದಿಂದು ಸೌಕರ್ಯಬಲದಿಂದ ತ್ಯಜಿಸಲ್ಪಡುತ್ತ ಹೋಗಿದೆ; ಆದರೆ ಪ್ರಶಾಸನಶಕ್ತಿ ಮಾತ್ರ ಇಂದು ರೋಗಗ್ರಸ್ತವಾಗಿದೆ. ತತ್ಫಲವಾಗಿ ಪ್ರಜಾರಾಜರ ಕಣ್ಣೆದುರೇ ಅವರ ಆಜ್ಞಾಭಂಗ ಸಕಲ ವರ್ಗಗಳಿಂದಲೂ ಮಿತಿಮೀರಿ ನಡೆಯಲಾರಂಭಿಸಿದೆ.

ಜಾನ್ ಸ್ಟೂಅರ್ಟ್ ಮಿಲ್ಲನು ಬಲಾತ್ಕಾರವು ಸ್ವಾತಂತ್ರ್ಯಕ್ಕೆ ವಿರುದ್ಧವಾದುದೆಂದು ಸಾರಿ ಪ್ರಜಾಶಕ್ತಿ ಪದ್ಧತಿಯ ಮಹಾವಕ್ತಾರನಾದನು. ವ್ಯಕ್ತಿ, ಸಂಘ, ಪಕ್ಷಗಳ ವಾಕ್ ಸ್ವಾತಂತ್ರ್ಯವನ್ನು ಅವನು ಅದ್ವಿತೀಯವಾಗಿ ಸಮರ್ಥಿಸಿದನು; ಖಂಡನೆ–ಮಂಡನೆಗಳ ಹೋರಾಟವು ಆರೋಗ್ಯಕರವಾದ ವ್ಯವಹಾರ ಸತ್ಯಗಳ ಚಿರಸ್ಥಾಯಿತ್ವವನ್ನು ಸಾಧಿಸಿಕೊಡುತ್ತದೆ ಎಂದ. ಆದರೆ ಅವುಗಳ ಆಭಾಸಗಳನ್ನೇ ಮಾಡುತ್ತ ಹೋಗುವ ವಿದ್ಯಾವಂತಿಕೆ ಒಂದು ಜನತೆಯ ವಿವಿಧ ವರ್ಗಗಳಲ್ಲಿ ಅತಿಯಾದಾಗ? ಕೇವಲ ಗೊಂದಲವನ್ನಷ್ಟೇ ಕೇಳುವಂತಾಗುತ್ತದೆ. ಅದರ ಫಲವನ್ನು ಒಡೆದಾಳುವ ರಾಜಶಕ್ತಿ–ವೈಶ್ಯಶಕ್ತಿಗಳು ಚೆನ್ನಾಗಿ ಬಳಸಿಕೊಂಡು ಪ್ರಜಾಶೋಷಣೆ(ಪರಹಿಂಸೆ)ಯನ್ನು ಸಮರ್ಥವಾಗಿ ಮಾಡುತ್ತವೆ. ಪ್ರಜೆಗಳ ಪ್ರಜಾಧರ್ಮ ಜ್ಞಾನ–ಪ್ರಜಾಧರ್ಮನಿಷ್ಠೆಗಳೂ ಪ್ರತಿನಿಧಿತ್ವ ಸಂಪಾದಕನ ಸಂಪಾದನ ಧರ್ಮವೂ ಕೇವಲ ಬಾಹ್ಯ ಸೌಂದರ್ಯ ಪ್ರದರ್ಶಕವಾದಾಗ ವ್ಯವಹಾರ ಆಡಳಿತಗಳ ಉದಾರನೀತಿಯು ಬಲಿಷ್ಠರ ಉದರನೀತಿಗೆ ಅತ್ಯಧಿಕ ಅವಕಾಶಕೊಟ್ಟು ರಾಜ್ಯಭಾರವನ್ನು ವಿವಿಧ ಭ್ರಷ್ಟಾಚಾರಗಳಿಗಿಳಿಸಿ, ಶೋಷಣೆ(ಹಿಂಸೆ) ಬಹು–ಸಂಖ್ಯಾತ ಪ್ರಜೆಗಳಿಗೆ ನಾನಾ ರೂಪಗಳಲ್ಲಿ ಬಂದೊದಗುವುದು. ಅಲ್ಪಸಂಖ್ಯಾತ ಲೋಭಿಗಳಿಗಷ್ಟೇ ಸ್ವಾತಂತ್ರ್ಯ ದೊರಕಿ ಅಗ ಬಹುಸಂಖ್ಯಾತರಿಗೆ ಗುಲಾಮಗಿರಿ ಲಭಿಸುತ್ತದೆ.

'ಭೇದೇ ಗಣಾ ವಿನಶ್ಯುರ್ಹಿ ಭಿನ್ನಾಸ್ತು ಸುಜಯಾಃ ಪರೈಃ–ಒಡಕು ಉಂಟಾದರೆ ಗಣರಾಜ್ಯಗಳು ನಾಶವಾಗುತ್ತವೆ; ಒಡಕುಗಳಿಂದ ತುಂಬಿದ ಗಣಪ್ರಭುತ್ವಗಳು ಸುಲಭವಾಗಿ ಶತ್ರುಗಳಿಂದ ಪರಾಜಯ ಹೊಂದುತ್ತವೆ' ಎಂದಿದೆ ಮಹಾಭಾರತ. ವ್ಯಕ್ತಿಗಳ, ಗುಂಪುಗಳ,ಜಾತಿಗಳ, ಮತಗಳ, ಕುಲಗಳ, ಪಕ್ಷಗಳ, ಪ್ರಾದೇಶಿಕತೆಗಳ ದೆಸೆಯಿಂದ ಪ್ರಜೆಗಳಲ್ಲಿ ಪರಿಹರಿಸಲು ಸಾಧ್ಯವಾಗದ ಒಡಕು ಸ್ವಾರ್ಥದೃಷ್ಟಿಯಿಂದ ಉಂಟಾದರೆ, ಸರ್ವಹಿತಕ್ಕೆ ಧಕ್ಕೆಯನ್ನುಂಟು ಮಾಡುವ ಸ್ವರಾಜ್ಯದ ಅಥವಾ ಪರರಾಜ್ಯದ ಶತ್ರುಗಳು ಒಂದು ಗಣರಾಜ್ಯದ ಪ್ರಭುತ್ವವನ್ನು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಕಸಿದುಕೊಂಡು ಹೋಗುವುದು ಖಂಡಿತ. ಸದ್ಯದ ರಾಜಕೀಯ ಪಕ್ಷಗಳ ಪರಸ್ಪರ ವಿರೋಧವು ಕ್ರಮೇಣ ಹೊರಗಿನ ವೈರಿಗಳೊಡನೆ ಒಳಸಂಚು ಮಾಡುವವರೆಗೆ ಹೋಗಬಹುದು; ಇಲ್ಲವೇ

ಅಧಿಕಾರಾರೂಢ ಪಕ್ಷವು ತನ್ನ ಸದಸ್ಯರ ಪರಸ್ಪರ ಪಾಪ ಸ್ಪರ್ಧೆಯನ್ನು ನಿಲ್ಲಿಸಲಾರದೆ, ಒಕ್ಕಟ್ಟಿನಿಂದ , ಜನವಂಚನೆಯ ನಾನಾ ಉಪಾಯಗಳನ್ನು ಹಿಡಿದು, ಪರಪಕ್ಷೀಯರಲ್ಲಿಯ ಗಣ್ಯರನ್ನು ಆಮಿಷಗಳಿಂದ ತಟಸ್ಥಗೊಳಿಸಿ, ತನ್ನ ಸ್ಥಾನವನ್ನು ಭದ್ರ ಮಾಡಿಕೊಂಡು ಜನರಲ್ಲಿ ಬಹು ಸಂಖ್ಯಾತರ ರಕ್ತವನ್ನು ನಯವಾಗಿ, ಪ್ರಚ್ಛನ್ನವಾಗಿ ಚಿರಕಾಲ ಹೀರುತ್ತ ಹೋಗಬಹುದು. ಜ್ಞಾನಿಗಳ ಸತ್ಯಪ್ರಚಾರಶಕ್ತಿಯನ್ನೂ ಅಂಥ ರೂಢ ಮೂಲ ಪಕ್ಷವು ಮಿಲ್ ಮಹಾಶಯನ ವಕೀಲಿಯನ್ನು ಯಾರಿಂದಲಾದರೂ ಪಡೆದರೂ ಅಮೇರಿಕದ ಸಂಯುಕ್ತ ರಾಜ್ಯದಲ್ಲಿ ಒಮ್ಮೆ ಮಾಡಿದಂತೆ ಸಂಪೂರ್ಣ ಅಹಿಸಾತ್ಮಕವೆಂದು ತೋರುವ ಕ್ರಮಗಳಿಂದ ನಿಷ್ಫಲಗೊಳಿಸಬಹುದು.

'ಕಾಯಿದೆಗಳು ನಮ್ಮ ಹಕ್ಕುಗಳನ್ನು ಪರಿಚ್ಛೇದಿಸಿ ನಿರ್ಣಯಿಸಿಟ್ಟಿವೆ; ಅವುಗಳಷ್ಟೇ ನಮ್ಮ ಹಕ್ಕುಗಳು' ಎಂಬುದು ನೋಯಲ್ ಅನ್ನನ್ನನ ಅಭಿಪ್ರಾಯ. ಆಗ ರಾಜ್ಯಶಕ್ತಿಯು ಅಲ್ಪಬಲದ ವ್ಯಕ್ತಿಯ ಅಥವಾ ಗುಂಪಿನ ಶೋಷಣೆಗಾಗಿ ಕಾಯಿದೆ ಮಾಡಿ, ಅದನ್ನು ಆಚರಣೆಗೆ ತಂದರೂ ಅದನ್ನು ನ್ಯಾಯವೆನ್ನಬೇಕಾಗುವುದು. ಆತ್ಮ, ಆತ್ಮಸಾಕ್ಷಿ, ಶೌರ್ಯ, ಮಾನ, ಮಾನವೀಯತೆಯ ಮರ್ಯಾದೆಗಳಲ್ಲಿ ನಂಬಿಕೆಯಿಲ್ಲದ ಅಥವಾ ನಂಬಿಗೆ ಇದ್ದರೂ ಶರೀರ ಮನಗಳಿಗೆ ಬರುವ ಶಿಕ್ಷೆಗಳನ್ನು ಸಹಿಸಿಕೊಳ್ಳಲಾರದ ವ್ಯಕ್ತಿಗಳಷ್ಟೇ ಮನಸ್ಸಿಲ್ಲದ ಮನಸ್ಸಿನಿಂದ ಅಥವಾ ವಂಚನಾಹಿತ ಸಮಾಧಾನಗಳ ದೆಸೆಯಿಂದ ಸ್ಪಷ್ಟವಾಗಿ ಅನ್ಯಾಯವೆಂದು ಗೊತ್ತಾದ ಯೋಜನೆಯನ್ನು ಅಥವಾ ಅದರ ಆಚರಣೆಯನ್ನು ಪ್ರತಿಭಟಿಸದೆ ಉಳಿದರು!

ಮಹಾಭಾರತವು ಆತ್ಮಕ್ಕೆ ಶರೀರದ ಇತರ ಎಲ್ಲ ಅಂಗಗಳಿಗಿಂತಲೂ ಅಧಿಕ ಬೆಲೆ ಕೊಡುತ್ತದೆ. ಸ್ಪಷ್ಟವಾಗಿ ಅನ್ಯಾಯವೆಂದು ಆತ್ಮಸಾಕ್ಷಿಯಾಗಿ ಗೊತ್ತಾದುದನ್ನು ಒಪ್ಪುವ ಅಥವಾ ಒಪ್ಪದಿದ್ದರೂ ನಿಷ್ಕ್ರಿಯ ತಾಟಸ್ಥ್ಯವನ್ನು ವಹಿಸುವ ನಾಗರಿಕತ್ವವು ನಾಗರಿಕತೆಯಲ್ಲ, ಅಸಹಾಯಕತೆ ಅಥವಾ ನಿರ್ಲಜ್ಜತೆ. ಆದುದರಿಂದಲೇ ರಾಜನಿಗಿಂತಲೂ ರಾಜಗುರು ಶ್ರೇಷ್ಠನೆಂಬ ತಿಳಿವಳಿಕೆ ಪ್ರಚಲಿತವಾಗಿದ್ದ ಅವಧಿಯಲ್ಲಿಯೂ–

**'ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ ।**
**ಉತ್ಪಥಪ್ರತಿಪನ್ನಸ್ಯ ದಂಡೋಭವತಿ ಶಾಶ್ವತಃ'**

'ಗರ್ವಿಷ್ಠನೂ, ಅವಿವೇಕಿಯೂ, ದುರ್ಮಾರ್ಗಗಾಮಿಯೂ ಆದ ಗುರು(ಅಥವಾ ಹಿರಿಯು) ಯಾವಾಗಲೂ ಶಿಕ್ಷಾರ್ಹನು'–ಎಂಬುದು ವ್ಯಾಸ ಸಿದ್ಧಾಂತ. ರಾಜಶಕ್ತಿಸಂಪನ್ನನು(ಅಥವಾ ಸಂಪನ್ನರು) ಹಾಗಾದಾಗ ಅವನಿಗೂ ಈ ನ್ಯಾಯವೇ ಅನ್ವಯಿಸುವುದರಿಂದ ಬ್ರಿಟಿಷರ ವಿರುದ್ಧವಾಗಿ ಭಾರತ ನಡೆಸಿದ ಸತ್ಯಾಗ್ರಹ ಯುದ್ಧ ಮುಂತಾದವು ರಾಜದ್ರೋಹವೆಂಬ ಅಧರ್ಮ ಸ್ವರೂಪದ್ದೆನ್ನಿಸಲಿಲ್ಲ. ಮನು ಕೂಡ ಪ್ರಜಾಕ್ರೋಶದಿಂದ ವೇನಾದಿ ದೊರೆಗಳು ಹತರಾದುದನ್ನು ಉಲ್ಲೇಖಿಸಿದ್ದಾನೆ.

ದುರುಪಯುಕ್ತವಾದಾಗ ರಾಜಶಕ್ತಿಯನ್ನು(ಪ್ರಭುತ್ವಸಂಪನ್ನರನ್ನು) ಎಲ್ಲ ಪ್ರಜೆಗಳೂ ಪ್ರತಿಭಟಿಸುವ ಸಾಮರ್ಥ್ಯವನ್ನು ಸಂಪಾದಿಸಿಕೊಂಡಿರುವುದೇ ಸ್ವರಾಜ್ಯ ಎಂದು ಗಾಂಧಿಯವರು ಹೇಳಿದ್ದು ಮಹಾಭಾರತೀಯ. ಮಾನವ ಮನದ ಅಜ್ಞಾತ ಪ್ರಜ್ಞಾಸ್ತರದಲ್ಲಿ ವಿಶ್ವಾತ್ಮ ಕೇಂದ್ರ(ವಿಶ್ವೇಶ್ವರಕೇಂದ್ರ) ದಿಂದ ಬರುವ ಒತ್ತಡವೇ ಆತ್ಮಸಾಕ್ಷಿ ಅಥವಾ ದಿವ್ಯವಾಣಿ ಎನ್ನುತ್ತಾನೆ ಯೂಂಗ್.



**['ಜೀವನ']**

# ೨. ರಾಮಾಯಣದ ಸಂಸ್ಕೃತಿ

ರಾಮಾಯಣವು ಪೂರ್ಣ ಜೀವನದ ಬಹುಮುಖದ ಚಿತ್ರವನ್ನು ಕೊಡುತ್ತದೆ. ಅಂಥ ಬಾಳು ದೈನಂದಿನ ಜಂಜಡದಿಂದ ಮುಕ್ತವಾಗಿ ಕಾಡಿನಲ್ಲಿ ಉಳಿದು ಸ್ಥಿತಪ್ರಜ್ಞೆ ಅಥವಾ ದಿವ್ಯದರ್ಶನ ಉಂಟಾಗುವವರೆಗೆ ಸತತವಾಗಿ ಆತ್ಮಾನುಸಂಧಾನ ಮಾಡಿದ ಲಕ್ಷಣವುಳ್ಳದ್ದು ಎಂದು ಭಾವಿಸುವ ರೂಢಿ ನಮ್ಮದು. 'ರಾಮಾಯಣ'ವು ಇಂಥ ಪಾಕ್ಷಿಕ ದರ್ಶನಕ್ಕಷ್ಟೇ ಸೀಮಿತವಾಗಿಲ್ಲ. ಅಂಥ ಉಗ್ರಸಂಯಮದ ಬಾಳಿಗೆ ಒಳಪಟ್ಟ ಋಷಿಮುನಿಗಳೊಡನೆ ಅವರೆಲ್ಲರನ್ನೂ ಮೀರುವ ಎತ್ತರವನ್ನುಳ್ಳ, ಅವರೆಲ್ಲರಿಗೂ ಪೂಜ್ಯನೆನ್ನಿಸಿದ ಮತ್ತು ಧರ್ಮರಕ್ಷಣೆಗಾಗಿ ವಿಶೇಷ ಅವತಾರವನ್ನು ತಾಳಿ ಬಂದ, ಪ್ರಭುವೆಂದು ರಾಮನನ್ನು ಚಿತ್ರಿಸಲಾಗಿದೆ. ರಾಮಾಯಣದಲ್ಲಿ ಕಠಿನವೂ ಹಿಮ್ಮೆಟ್ಟಿಸುವಂಥವೂ ದುರಂತಕಾರಕವೂ ಆದ ಸನ್ನಿವೇಶಗಳ ಸರಮಾಲೆ ನಮಗೆದುರಾಗುತ್ತದೆ; ಅಂಥ ಸನ್ನಿವೇಶಗಳಿಂದ ಶ್ರೀರಾಮನೂ ಇತರ ಮುಖ್ಯ ಪಾತ್ರಗಳೂ ಶ್ರುತಿಗಳಲ್ಲಿ ಹೇಳಲಾದ ಆಧ್ಯಾತ್ಮಿಕ ಜೀವನದ ಅತ್ಯುನ್ನತ ತತ್ವಗಳಿಗೆ ಎಳ್ಳಷ್ಟೂ ಚ್ಯುತಿಯುಂಟಾಗದಂತೆ ಹೇಗೆ ಅಂತ್ಯದಲ್ಲಿ ಪಾರಾದರೆಂಬುದನ್ನು ತೋರಿಸಲಾಗಿದೆ. ಸಾತ್ವಿಕಕಾರ್ಯಗಳ ರೂಪದಲ್ಲಿ ಪ್ರಕಟವಾಗುವ ಆಂತರಿಕ ಪೂರ್ಣತೆಯು ದುಷ್ಟಶಕ್ತಿಯನ್ನು ದಮಿಸಿ ದುಷ್ಟನನ್ನು ಪರಿವರ್ತನಗೊಳಿಸುವುದೇ ವಾಲ್ಮೀಕಿಯ ಕಾವ್ಯದ ಮುಖ್ಯೋದ್ದೇಶ.[೧]

## ರಾಜ್ಯದ ಅಭಿವೃದ್ಧಿ

ಅಂಥ ಧೀರೋದಾತ್ತ ದೃಷ್ಟಿಕೋನದ ಅರಸರು ಸರಕಾರದ ಆಡಳಿತ ಸೂತ್ರಗಳನ್ನು ಕೈಗೆ ತೆಗೆದುಕೊಂಡಾಗ ದೇಶದ ಚಟುವಟಿಕೆಗಳ ಪ್ರತಿಯೊಂದು ಶಾಖೆಯಲ್ಲಿಯೂ ಪ್ರಗತಿಯು ಕಂಡು ಬಂದೇ ಬರುತ್ತದೆ. ಇಕ್ಷ್ವಾಕು ಮಹಾರಾಜನ ಸಂತತಿಯ ಪ್ರತಿಯೊಬ್ಬ ದೊರೆಯೂ ಅಪವಾದವಿಲ್ಲದಂತೆ ತನ್ನ ಧರ್ಮಬದ್ಧ ಆಚಾರಕ್ಕೂ ಪ್ರಜೆಗಳ ಯೋಗಕ್ಷೇಮದಲ್ಲಿಯ ನಿಷ್ಠೆಗೂ ಹೆಸರಾಗಿದ್ದನು. ಅದರಲ್ಲೂ ವಿಶೇಷವಾಗಿ, ದಶರಥನ ಸುದೀರ್ಘವಾದ ಆಳಿಕೆಯಲ್ಲಿ ಅಯೋಧ್ಯಾನಗರವೂ(ಅದನ್ನು ರಾಜಧಾನಿಯನ್ನಾಗಿ ಪಡೆದ ಕೋಸಲದೇಶದ) ವಿವಿಧ ಪ್ರಾಂತಗಳಂತೂ ಉನ್ನತ ಮಟ್ಟದ ಸಮೃದ್ಧಿಯನ್ನು ಪಡೆದವು; ಕುದುರೆ, ದನಕರು, ಧನಧಾನ್ಯ ಮುಂತಾದ ಸಕಲೈಶ್ವರ್ಯಗಳೂ ಜನರ ಹಸ್ತಗತವಾಗಿದ್ದವೆಂದು ವಾಲ್ಮೀಕಿಯು ಪದೇ ಪದೇ ಎತ್ತಿ ಹೇಳಿದ್ದಾನೆ.[೨] ದಶರಥನ ಸಮರ್ಥ ಆಡಳಿತದಲ್ಲಿ ಎಲ್ಲ ಪ್ರಜೆಗಳೂ ತಮ್ಮ ತಮ್ಮ ವರ್ಣಾಶ್ರಮಧರ್ಮಗಳನ್ನು ಚೆನ್ನಾಗಿ ಪರಿಪಾಲಿಸುತ್ತಿದ್ದರು; ಮತ್ತು ದೊರೆಯೂ ಆತನ ಪ್ರಮುಖಾಧಿಕಾರಿಗಳೂ ಪಾಲಿಸುತ್ತಿದ್ದ ಧರ್ಮಾಚಾರದ ಫಲವಾಗಿ ಪ್ರಜೆಗಳ ಸಾಂಸ್ಕೃತಿಕ ಮಟ್ಟವು ಸುಗಮವಾಗಿ

ಉನ್ನತಿಯನ್ನೈದುವುದು ಅನಿವಾರ್ಯವಾಯಿತು. ದಶರಥನನ್ನು ಕುರಿತು ಹೇಳುವಾಗ ವಾಲ್ಮೀಕಿಯು ಅವನ ಆಳಿಕೆಯಲ್ಲಿ ನಾಸ್ತಿಕ, ಅಸತ್ಯವಾದಿ, ಅಲ್ಪವಿದ್ಯ ಅಥವಾ ಅನಕ್ಷರಸ್ಥ ಎನ್ನಿಸಿಕೊಂಡ ಒಬ್ಬನೂ ಇರಲಿಲ್ಲವೆಂದು ಮತ್ತೆ ಮತ್ತೆ ಬಣ್ಣಿಸಿದುದಕ್ಕಿಂತ ಹೆಚ್ಚಿನ ಪ್ರಶಸ್ತಿಯನ್ನು–ಯಾವ ರಾಜನಿಗೇ ಆಗಲಿ–ಯಾರಾದರೂ ಕೊಡಲು ಸಾಧ್ಯವಾದೀತೇ?

ಸ್ವತಃ ರಾಜಧಾನಿಯು ಪ್ರತಿಯೊಂದು ವಿಷಯದಲ್ಲಿಯೂ ಆಕರ್ಷಣೆಯ ಆಕರವಾಗಿತ್ತು. ಅದರ ರಸ್ತೆಗಳು ವಿಶಾಲವೂ ಸುದೃಢವೂ ಆಗಿದ್ದವಲ್ಲದೆ, ಯಾವಾಗಲೂ ನೀರೆರೆದು ಧೂಳು ತೊಳೆದು ಅವುಗಳನ್ನು ಚೊಕ್ಕವಾಗಿ ಇಡಲಾಗುತ್ತಿತ್ತು. ಪ್ರತಿಯೊಂದೂ ಶುಚಿಯಾಗಿತ್ತು; ಬಳಸುತ್ತಿದ್ದ ಆಹಾರ ನಿರ್ಮಲವಾಗಿತ್ತು. ದೊರಕುತ್ತಿದ್ದ ನೀರು 'ಕಬ್ಬಿನ ಹಾಲಿನಷ್ಟು ಸಿಹಿಯಾಗಿ ಇರುತ್ತಿತ್ತು'. ಒಕ್ಕಲಿಗರಿಗೂ ಹರದರಿಗೂ ಪ್ರತ್ಯೇಕ ಲಕ್ಷ್ಯವೂ ವಿಶೇಷ ಸಂರಕ್ಷಣೆಯೂ ದೊರಕುತ್ತಿದ್ದವು. ಅಯೋಧ್ಯೆ ಒದಗಿಸಿದ ಅನುಕೂಲಗಳ ಪ್ರಯೋಜನವನ್ನು ಪಡೆಯಲು ಸ್ವಾಭಾವಿಕವಾಗಿ ವಿವಿಧ ದೇಶಗಳ ವಣಿಗ್ಜನರು ಮುಗಿದು ಬೀಳುತ್ತಿದ್ದರು; ಮತ್ತು ಸುವ್ಯವಸ್ಥಿತವಾದ ಅಂಗಡಿ ಸಾಲುಗಳಿಂದ ಅದರ ರಸ್ತೆಗಳು ಸುಂದರವಾಗಿ ತೋರುತ್ತಿದ್ದವು. ಅರಮನೆಗೆ ಹಿಂದಿರುಗೆಂದು ರಾಮನನ್ನು ಒಲಿಸಲು ಭರತನು ಕಾಡಿಗೆ ಹೋಗಿ ಅವನನ್ನು ಸಂದರ್ಶಿಸಿದಾಗ ರಾಮನು ಕೇಳಿದ ಮಾರ್ಮಿಕ ಪ್ರಶ್ನಮಾಲೆ ಆಡಳಿತದ ಈ ಶಾಖೆಗೆ ಸಂಬಂಧಿಸಿದ್ದೇ ಆಗಿತ್ತು. ಇತರ ಪ್ರಶ್ನೆಗಳ ನಡುವೆ ರಾಮನು ಕೇಳಿದ: 'ಕೋಸಲದ ಪ್ರಾಂತಗಳು ಸಮೃದ್ಧ ಜನರಿಂದಲೂ ದೇವಾಲಯಗಳಿಂದಲೂ ಕೆರೆ ಕಾಲುವೆಗಳಿಂದಲೂ ಅರವಟ್ಟಿಗೆಗಳಿಂದಲೂ ತುಂಬಿರುವುವೇನು? ನೀರಿನ ಸರಬರಾಜಿಗೆ ಕೆರೆಗಳನ್ನಾಧರಿಸಿ, ಗಣಿಗಳಿಂದ ಅಲಂಕೃತವಾಗಿ, ಘೋರ ಮೃಗಗಳ ಮತ್ತು ಅಧಾರ್ಮಿಕ ಮನುಷ್ಯರ ಭಯದಿಂದ ಸಂಪೂರ್ಣ ಮುಕ್ತವಾಗಿ, ಪ್ರಾಂತಗಳು ಸುಖಸಂತೃಪ್ತಿಗಳಿಂದ ಕೂಡಿರುವುವೇನು? ಒಕ್ಕಲಿಗರೂ ದನಗಾಹಿಗಳೂ ತಕ್ಕ ಅನುಗ್ರಹಕ್ಕೆ ಪಾತ್ರರಾಗಿದ್ದಾರೆಂದು ನಿನಗೆ ತೋರುವುದೇ? ತಮ್ಮ ತಮ್ಮ ಕಸುಬುಗಳಲ್ಲಿ ನಿರತರಾಗಿರುವ ಅವರು ನಿನ್ನಿಂದ ತಮಗೆ ಬೇಕಾದವುಗಳನ್ನು ಪಡೆಯುತ್ತಾರೆಯೇ? ತಮಗೆ ಹಾನಿಕಾರವಾದವುಗಳಿಂದ ಪಾರಾಗುತ್ತಿದ್ದಾರೆಯೇ?' ದೊರೆಯ ಮತ್ತು ಸಚಿವರ ಜಾಗ್ರತ ಪರಿಶೀಲನೆಯ ಫಲವಾಗಿ ಅನ್ಯಾಯಮೂಲವಾದ ಸ್ಪರ್ಧೆಯೂ ಶೋಷಣೆಯೂ ಮಾಯವಾಗಿ ಸಮಾಜದ ಎಲ್ಲ ವರ್ಗಗಳೂ ಎಡರುತೊಡರುಗಳಿಲ್ಲದೆ ಸಾರ್ಥಕವಾಗಿ ಪೂರ್ಣ ಆತ್ಮಾಭಿವ್ಯಕ್ತಿಗೆಂದು ಶ್ರಮಿಸುವುದು ಸಾಧ್ಯವಾಗುವಂತಾಯಿತು.

## ಸೈನಿಕ ಸಜ್ಜಿಕೆ ಮತ್ತು ದಕ್ಷತೆ

ಸುಸಜ್ಜಿತವೂ ಸುಶಿಕ್ಷಿತವೂ ಆದ ದಂಡಿನ ನೆರವಿನಿಂದ ಇಂಥ ಸುಸ್ಥಿತಿಯನ್ನು ಕಾಯ್ದುಕೊಳ್ಳುವುದು ಶಕ್ಯವಾಯಿತು ಎಂಬುದು ಅರ್ಧ ಸತ್ಯ–ಅಂದರೆ, ಹಾಗೆ ಕಾಯ್ದುಕೊಳ್ಳುವುದರಲ್ಲಿ ಅಂಥ ಸೈನ್ಯದ ಹೊಣೆ ಅರ್ಧ ಮಾತ್ರ–ಎಂದು ಅರ್ಥ.

ವಿವಿಧ ಕೋಟೆಗಳಲ್ಲಿ ಸೈನ್ಯಗಳನ್ನು ಇಡಲಾಗುತ್ತಿತ್ತು. ಆ ಕೋಟೆಗಳಿಗೆ ಬೇಕಾದಷ್ಟು ಧನ, ಧಾನ್ಯ, ಜಲ, ಆಯುಧ, ಯಂತ್ರೋಪಕರಣ ಮತ್ತು ಕುಶಲಕರ್ಮಿಗಳು–ಇವನ್ನು ಎಚ್ಚರಿಕೆಯಿಂದ ಒದಗಿಸಲಾಗುತ್ತಿತ್ತು. ಸ್ವತಃ ರಾಜಧಾನಿಯಲ್ಲಿ ಸುಸಂಸ್ಕೃತರೂ ಸುಶಿಕ್ಷಿತರೂ ಆರ್ಜವಸಂಪನ್ನರೂ ಬಲಿಷ್ಠರೂ ಆದ ವೀರ ಸರದಾರರು ಇರುತ್ತಿದ್ದರು. ಸಾವಿರಾರು ರಥಿಕರು ಅಲ್ಲಿ ಇದ್ದರು. ಅವರ ಅಂಬುಗಳು ಅಪ್ರತಿಹತ ವೇಗವುಳ್ಳವುಗಳಾಗಿದ್ದವು. ಆದರೆ ಅವರೆಂದೂ ಧರ್ಮಯುದ್ದದ[೫] ನಿಯಮಗಳನ್ನು ಭಂಗಿಸಿ ಓಡಿಹೋಗುತ್ತಿರುವ ಪ್ರಾಣಭಯಗ್ರಸ್ತನ ಮೇಲೆ ಬಾಣ ಪ್ರಯೋಗ ಮಾಡುತ್ತಿರಲಿಲ್ಲ. ತಮಗೆ ದೊರೆತ ದಯಾರ್ದ್ರವೂ ಗೌರವಯುಕ್ತವೂ ಆದ ಸನ್ಮಾನದ ಫಲವಾಗಿ ಮತ್ತು ತಮ್ಮ ಅಂತರ್ಗತವಾದ ಆತ್ಮಗೌರವ–ಕರ್ತವ್ಯದ ದೃಷ್ಟಿಗಳ ಪರಿಣಾಮವಾಗಿ ಅವರು ತಮ್ಮ ಅರಸನಿಗೂ ನಾಡಿಗೂ ಪ್ರೀತಿನಿಷ್ಠರಾಗಿ ಇರುತ್ತಿದ್ದರು. ಲವಣಾಸುರನೊಡನೆ ಶತ್ರುಘ್ನ ಕಾದಲು ಹೊರಟಾಗ ರಾಮನೆಂದನು: 'ಯೋಧರಿಗೆ ಸಮೃದ್ಧಿಯಾಗಿ ಆಹಾರ ದೊರೆತು ಅವರು ಸಂತುಷ್ಟರಾಗಿರುವಂತೆಯೂ ನಿನ್ನಿಂದ ಬೇಸರ ಪಡೆಯದಂತೆಯೂ ನೋಡಿಕೋ. ಮಧುರವಾಣಿಗಳಿಂದ ಅವರನ್ನು ಹರ್ಷಗೊಳಿಸು. ಏಕೆಂದರೆ, ಹಗೆಗಳ ಮೇಲ್ವಾಯ್ದು ಹೋಗುವಾಗ ಆ ಯೋಧರ ಹತ್ತಿರ ಅವರನ್ನು ಜಯಘೋಷಗಳಿಂದ ಹುರಿದುಂಬಿಸಲು ಅವರ ಗೆಳೆಯರಾಗಲಿ, ಹೆಂಡಂದಿರಾಗಲಿ ಇರುವುದಿಲ್ಲ. ಅವರಿಗೆ ಸುಖ–ಸಂತೋಷಗಳನ್ನು ಕೊಡಬಲ್ಲವುಗಳೆಂದರೆ ಸಾಕಾದಷ್ಟು ಆಹಾರ ಮತ್ತು ಪಾರಿತೋಷಕಗಳು ಮಾತ್ರ.' ಇದೇ ಮಾದರಿಯಲ್ಲಿ ಭರತನಿಗೂ ಆತ ಹೇಳಿದ: 'ತಕ್ಕ ಅವಧಿಯಲ್ಲಿ ನೀನು ನಿನ್ನ ಭಟರಿಗೆ ಕರ್ತವ್ಯಾನುಸಾರವಾಗಿ ಆಹಾರ ಮತ್ತು ವೇತನಗಳನ್ನು ಕೊಡುವುದಿಲ್ಲವೇ?' 'ಇವುಗಳನ್ನು ಸಕಾಲದಲ್ಲಿ ಕೊಡದೆ ಹೋದರೆ ಸೇವಕರು ಯಜಮಾನನ ಮೇಲೆ ಸಿಟ್ಟಿಗೆದ್ದು ತೊಂದರೆ ಕೊಡುತ್ತಾರೆ; ಅದರಿಂದುಂಟಾಗುವ ಕೇಡು ಅಪಾರವಾದುದು–ಎಂಬುದನ್ನು ನೆನಪಿನಲ್ಲಿಡು'[೬] ಎಂಬ ಎಚ್ಚರಿಕೆಯನ್ನೂ ಆತನು ವಿವೇಕದಿಂದ ಭರತನಿಗೆ ಕೊಟ್ಟನು.

ಭರತನ ವನಗಮನದ[೭] ಮತ್ತು ವಾನರರಿಂದಾದ ಸೇತುರಚನೆಯ[೮] ವರ್ಣನೆಗಳಿಂದ ಆಗಿನ ಕಾಲದ ಸೈನಿಕ ಸ್ಥಾಪತ್ಯದ ಉನ್ನತ ಮಟ್ಟದ ದಕ್ಷತೆಯ ನಿದರ್ಶನಗಳು ಸಿಗುತ್ತವೆ. ರಾಜಸಭೆಯಲ್ಲಿ ಭರತನೆಂದನು: 'ನಾನು ಹೋಗುವ ಮಾರ್ಗದ ರಚನೆಗಾಗಿ ಮಾರ್ಗಶಿಲ್ಪಿಗಳನ್ನೂ ದುರಸ್ತುಗಾರರನ್ನೂ, ಅವರೊಟ್ಟಿಗೇ ವಿಶ್ವಾಸಕ್ಕಾಗಿಯೂ ಧನಕ್ಕಾಗಿಯೂ ಸೇವೆ ಮಾಡಹೊರಟವರನ್ನೂ ಕಳಿಸಿಕೊಟ್ಟಿದ್ದೇನೆ.'[೯] ಈ ತಜ್ಞಮಂಡಲದಲ್ಲಿ ಮಣ್ಣಿನ ಜಲಾರ್ದ್ರತೆಯನ್ನು ಅಳೆಯಬಲ್ಲವರು, ಧೀರರಾದ ಉತ್ಖನನಕಾರರು, ಶಿಲ್ಪಶಾಸ್ತ್ರಜ್ಞರು ಮತ್ತು ನಾಲೆ–ತೋಡುಗಳನ್ನು ತೋಡಿಸಬಲ್ಲವರು ಸೇರಿದ್ದರು ಎಂಬುದು ಕವಿವಾಣಿಯಿಂದ ಸ್ಪಷ್ಟವಾಗುತ್ತದೆ. ಅವರ ಸಂಘಟಿತ ಕಾರ್ಯದಿಂದ ಮರಗಳಿಲ್ಲದಿದ್ದಲ್ಲಿ ಮರಗಳನ್ನು ನೆಡಿಸಲಾಯಿತು; ಏರುಗಳನ್ನು ಸಮತಟ್ಟಾಗಿ ಮಾಡಲಾಯಿತು; ತಗ್ಗುಗಳನ್ನು ತುಂಬಿಸಲಾಯಿತು; ಬಂಡೆಗಳಲ್ಲಿ ಸುರಂಗಗಳನ್ನು ಕೊರೆಯಲಾಯಿತು; ವಿಸ್ತಾರವಾದ

ಜಲಾಶಯಗಳಿಗೆ ಅಡ್ಡವಾಗಿ ಸೇತುವೆಗಳನ್ನು ಕಟ್ಟಲಾಯಿತು; ನೀರಿಲ್ಲದೆ ಒಣಗಿದ್ದ ಸ್ಥಳಗಳಲ್ಲಿ ಯಥೇಷ್ಟವಾಗಿ ನೀರು ತುಂಬಿ ಹರಿಯುವಂತೆ ಮಾಡಲಾಯಿತು. ಕಡಲಿಗೆ ಸೇತುವೆಯನ್ನು ಕಟ್ಟುವಾಗ ಶ್ರೀರಾಮನ ದಳದವರು ಮೇಲ್ಮಟ್ಟದ ಚುರುಕುತನವನ್ನೂ ಜಾಣ್ಮೆಯನ್ನೂ ಪ್ರದರ್ಶಿಸಿದರು. ಮರಮಟ್ಟು, ಸೊಪ್ಪುಸದೆ, ಮಣ್ಣುಮೆಕ್ಕಲು, ಕಲ್ಲುಮರಳುಗಳನ್ನು ಕಿತ್ತು, ಅಗೆದು, ಯಂತ್ರಗಳ ಮೂಲಕ ಸಾಗಿಸಿ ಸಮುದ್ರದಲ್ಲಿ ಸುರಿದು ಅವರು ರಾಶಿಮಾಡಿದ್ದು ಗಗನಚುಂಬಿಯಾಗಿತ್ತಂತೆ! ಅವರಲ್ಲಿ ಕೆಲವರು ನೇರ್ಪಿಗಾಗಿ ಸೂತ್ರಗಳನ್ನು ಹಿಡಿದರೆ, ಮತ್ತೆ ಕೆಲವರು ಅಳೆಗೋಲುಗಳನ್ನು ಹಿಡಿದು ಹೊರಟರಂತೆ. ಅವರ ಸಹಕಾರದ ಪರಿಪೂರ್ಣತೆಯೆಷ್ಟಿತ್ತೆಂದರೆ ಆ ಅದ್ಭುತವಾದ ಸೇತುರೂಪದ ರಚನೆ ಐದೇ ದಿನಗಳಲ್ಲಿ ಪೂರ್ಣಗೊಂಡು ಎದ್ದು ನಿಂತಿತ್ತು.[೧೦]

## ರಾಜ್ಯಭಾರದಲ್ಲಿ ಜನತೆಯ ಪಾಲು

ದೇಶ ಸಾಧಿಸಿದ ಪ್ರಗತಿಗೆ ನಿಸ್ಸಂದಿಗ್ಧವಾಗಿಯೂ ದೊರೆಯ ವ್ಯಕ್ತಿತ್ವವೇ ಮುಖ್ಯವಾದ ಸ್ಫೂರ್ತಿಕೇಂದ್ರವಾಗಿದ್ದರೂ ಅದೆಂದೂ ಕೇವಲ ಏಕವ್ಯಕ್ತಿಯ ಮೆರೆತವಾಗಿದ್ದಿಲ್ಲ. ಪೌರಸ್ತ್ಯಖಂಡವು ಯಾವಾಗಲೂ ನಿರಂಕುಶ ರಾಜಪ್ರಭುತ್ವವನ್ನು ಮೆಚ್ಚಿಕೊಳ್ಳುವ ಭೂಭಾಗವೆಂಬ ಪ್ರಸಿದ್ಧಿಯನ್ನು ಪದೇ ಪದೇ ಬಣ್ಣಿಸಲಾಗಿದೆ. ಆದರೆ 'ರಾಮಾಯಣ'ವು ಸಂಪೂರ್ಣ ತದ್ವಿರುದ್ಧವಾದ ಚಿತ್ರವನ್ನು ನಮ್ಮ ಮುಂದಿಡುತ್ತದೆ. ಏಕೆಂದರೆ ಹೆಜ್ಜೆ ಹೆಜ್ಜೆಗೂ ಸಚಿವರೂ ವಿದ್ವಾಂಸರೂ ಸೇನೆಯ ಮುಖ್ಯಾಧಿಕಾರಿಗಳೂ ಪರಸ್ಪರ ಸಮಾಲೋಚಿಸಿ ರಾಜ್ಯದ ಧೋರಣೆಯನ್ನು ರೂಪಿಸುತ್ತಿದ್ದುದು ನಮಗೆ ಕಂಡುಬರುತ್ತದೆ. ಮುಖ್ಯ ಸಂದರ್ಭಗಳಲ್ಲಿ ದೇಶದ ನಾನಾ ಭಾಗಗಳಿಂದ ಬಂದ ಜನರು ಸಭೆ ಸೇರಿ ಚರ್ಚೆಗಳಲ್ಲಿ ಭಾಗವಹಿಸುತ್ತಿದ್ದರು. ಅನಿರ್ಬಂಧವಾಗಿ ಯಾರು ಬೇಕಾದರೂ ತಮ್ಮ ಅಭಿಪ್ರಾಯಗಳನ್ನು ವ್ಯಕ್ತ ಮಾಡಬಹುದಾಗಿತ್ತು. ಯಾರೇ ಆಗಲಿ, ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವುದರ ಮೊದಲು ಪರಸ್ಪರ ಸಮಾಲೋಚನೆ ಮತ್ತು ಸ್ವತಂತ್ರ ವಿಚಾರಗಳನ್ನು ಮಾಡಿ ಮುಗಿಸಿರಬೇಕಾಗಿತ್ತು. ಶ್ರೀರಾಮನನ್ನು ಯುವರಾಜ ಪಟ್ಟಕ್ಕೇರಿಸುವ ಪ್ರಕರಣದಲ್ಲಿ ಅಭೂತಪೂರ್ವ ಸಂಖ್ಯೆಯಲ್ಲಿ ಮಹಾಜನರು ಸಭೆ ಸೇರಿದ್ದು ಒಂದು ನಿದರ್ಶನ. ಆಗ ದಶರಥನು ತನ್ನ ಗಂಭೀರವೂ, ಕಂಚಿನಂತಹುದೂ, ಬಲಿಷ್ಠವೂ ಆದ ಸ್ವರದಿಂದ, ಆಡಳಿತದ ಭಾರವಾದ ಕರ್ತವ್ಯಗಳಿಂದ ನಿವೃತ್ತನಾಗಿ ಅತ್ಯವಶ್ಯಕವಾದ ವಿಶ್ರಾಂತಿಯನ್ನು ತನ್ನ ದೇಹಕ್ಕೆ ಕೊಡಬೇಕೆಂಬ ಸಂಕಲ್ಪವನ್ನು ಸಾರಿದನು: 'ನಾನು ಸೂಚಿಸಿದ್ದು ಯೋಗ್ಯವೂ ನಿಮ್ಮ ಮೆಚ್ಚಿಗೆಗೆ ಪಾತ್ರವೂ ಆದದ್ದೆನ್ನಿಸಿದರೆ, ಅದಕ್ಕೆ ನಿಮ್ಮ ಒಪ್ಪಿಗೆಯನ್ನು ಕೊಡಿ, ಅಲ್ಲದೆ ನಾನು ಇನ್ನೇನನ್ನು ಯಾವ ರೀತಿಯಿಂದ ನೆರವೇರಿಸಬೇಕೆಂಬ ಬಗ್ಗೆ ನನಗೆ ಬುದ್ಧಿವಾದವನ್ನು ಹೇಳಿ. ಆದರೆ ನನ್ನ ಈ ವಿಚಾರವು ಕೇವಲ ಸ್ವಂತದ ತೃಪ್ತಿಗಾಗಿ ಮಾಡಿದ್ದು ಎಂದು ನಿಮಗೆ ತೋರಿದರೆ ನನ್ನ ಯೋಗಕ್ಷೇಮಕ್ಕೆ ಇನ್ನಾವುದಾದರೂ ಮಾರ್ಗವನ್ನು ನೀವು ಹುಡುಕಿಕೊಡಿ'–ಎಂದು ಕೊನೆಯ ಮಾತಾಗಿ ಹೇಳಿದನು![೧೧]

ಅನಂತರ ಅವನು ಅನಿರ್ಬಂಧವಾದ ಚರ್ಚೆಗೆ ಆಮಂತ್ರಣವಿತ್ತನು. ನಿಷ್ಪಕ್ಷಪಾತವಾದ ನಿರ್ಣಯಗಳಿಗೆ ಬರಲು ಅದು ಅತ್ಯಂತ ಖಾತರಿಯಾದ ಪದ್ಧತಿ ಎಂದು ಎಲ್ಲರೂ ನಂಬಿದ್ದರು. ನಾಯಕರೂ ನಾಗರಿಕರೂ ಪ್ರಾಂತವಾಸಿಗಳೂ ಪರಸ್ಪರ ವಿಚಾರವಿನಿಮಯ ಮಾಡಿ ತಮ್ಮ ಸರ್ವೈಕಮತ್ಯದ ಬೆಂಬಲವನ್ನು ಕೊಟ್ಟಮೇಲೂ ದಶರಥನು ಅವರೆಲ್ಲರೂ ಪುನರಾಲೋಚನೆ ಮಾಡಬೇಕೆಂದು ಬಯಸಿ, ಅವರ ಅಭಿಪ್ರಾಯವನ್ನು ತಿಳಿಯದವನಂತೆ ಮತ್ತೆ ಇಂತೆಂದನು: 'ನನ್ನ ಮಾತನ್ನು ಕೇಳಿದೊಡನೆಯೇ ನೀವೆಲ್ಲರೂ ರಾಮನಿಗೆ ಯುವರಾಜ ಪಟ್ಟವಾಗಬೇಕೆಂದು ಬಯಸಿದಿರಿ. ಇದು ನನ್ನ ಮನದಲ್ಲಿ ಸಂಶಯಗಳನ್ನು ಹುಟ್ಟಿಸಿದೆ. ಆದುದರಿಂದ ನೀವೆಲ್ಲರೂ ನಿಮ್ಮ ಮನಸ್ಸಿನಲ್ಲಿರುವುದನ್ನು ಸತ್ಯವಾಗಿ ಹೇಳಿರಿ. ನಾನು ಧರ್ಮಾನುಸಾರವಾಗಿ ರಾಜ್ಯಭಾರವನ್ನು ಮಾಡುತ್ತಿರುವಾಗ ನನ್ನ ಮಗನಿಗೆ ಪಟ್ಟಾಭಿಷೇಕವಾಗಬೇಕೆಂದು ನೀವೇಕೆ ಬಯಸುತ್ತೀರಿ?'[೧೨]

ಮುಖ್ಯ ಸಂದರ್ಭಗಳೆಲ್ಲವುಗಳಲ್ಲೂ ಜನರ ಅಭಿಪ್ರಾಯವನ್ನು ಖಚಿತವಾಗಿ ತಿಳಿದುಕೊಳ್ಳುವ ಮತ್ತು ಅವರ ಸಲಹೆಯನ್ನು ಕೇಳುವ ತತ್ವವನ್ನು ಪ್ರಾಚೀನ ರಾಜರು ಪಾಲಿಸುತ್ತಿದ್ದರು. ಅದರ ಅತ್ಯುತ್ಕಟ ಉದಾಹರಣೆಯನ್ನಾಗಿ ಮದುಕನೂ ಕುರುಡನೂ ಆಗಿದ್ದ ಧೃತರಾಷ್ಟ್ರನು ಕಾಡಿಗೆ ಹೋಗಿ ವಿಶ್ರಮಿಸಲು ತನಗೆ ಅನುಮತಿ ಕೊಡಬೇಕೆಂದು ತನ್ನ ಪ್ರಜೆಗಳೊಡನೆ ಚರ್ಚಿಸುವುದನ್ನೂ, ಆ ಬಗ್ಗೆ ಅವರನ್ನುಒಲಿಸುವುದನ್ನೂ ತೆಗೆದುಕೊಳ್ಳಬಹುದು. 'ಈ ಗಾಂಧಾರಿ ಕೂಡ ವೃದ್ಧೆಯೂ ನಿರುತ್ಸಾಹವತಿಯೂ ಆಗಿದ್ದಾಳೆ. ಇವಳೂ ತನ್ನ ಮಕ್ಕಳನ್ನು ಕಳೆದುಕೊಂಡು ಅಸಹಾಯಳಾದವಳು. ಮಕ್ಕಳನ್ನು ಕಳೆದುಕೊಂಡ ದುಃಖದಿಂದ ಸಂತಪ್ತಳಾದ ಈಕೆ ನನ್ನೊಡನೆ ನಿಮ್ಮನ್ನು ಪ್ರಾರ್ಥಿಸುತ್ತಾಳೆ. ಇದೆಲ್ಲವನ್ನೂ ಅರಿತು ನಾವು ಕೇಳುವ ಅನುಮತಿಯನ್ನು ನಮಗೆ ಕೊಡಿರಿ, ನಿಮಗೆ ಒಳ್ಳೆಯದಾಗಲಿ, ನಾವು ನಿಮ್ಮ ರಕ್ಷಣೆಯನ್ನು ಕೋರುತ್ತೇವೆ'[೧೩]–ಎಂದು ಆತನು ಪ್ರತಿಪಾದಿಸಿದನು. ರಾವಣನಂಥ ಹಟಮಾರಿಯೂ ಸ್ವೈರಶಾಸಕನೂ ಆಗಿದ್ದ ರಾಜನು ತನ್ನ ಸಭೆಯಲ್ಲಿ ಅನಿರ್ಬಂಧವಾದ ಚರ್ಚೆಗೆ ಅವಕಾಶ ಕೊಟ್ಟನೆಂದು ಹೇಳಲಾಗಿದೆ. ವಿಭೀಷಣನಷ್ಟೇ ಅಲ್ಲದೆ, ಕುಂಭಕರ್ಣ ಕೂಡ ಬೇರೆ ಬೇರೆ ದೃಷ್ಟಿಕೋನಗಳಿಂದ ಅವನು ಸೀತೆಯೆದುರು ನಡೆದುಕೊಂಡದ್ದನ್ನು ಆವೇಶಭರಿತನಾಗಿ ಖಂಡಿಸಿದನು. ಕೊನೆಯವರೆಗೂ ಅಣ್ಣನ ಬೆಂಬಲಿಗನಾಗಿರುವ ನಿರ್ಧಾರವನ್ನು ಮಾಡಿದವನಾದರೂ ಕುಂಭಕರ್ಣನು ತನಗೆ ಸಹಜವಾದ ನಿರ್ಭೀತಿಯ ಖಂಡತುಂಡವಾದ ರೀತಿಯಿಂದ ಅಣ್ಣನಿಗೆ ಎಲ್ಲರೆದುರು ಬುದ್ಧಿ ಹೇಳಲು ಹಿಂಜರಿಯಲಿಲ್ಲ. 'ಇದನ್ನೆಲ್ಲಾ ನೀನು ಮಾಡಿದ್ದು ನಿನಗೆ ತಕ್ಕಂಥದಲ್ಲ. ನಮ್ಮನ್ನೇನಾದರೂ ನೀನು ಮೊದಲೇ ಕೇಳಿದ್ದರೆ ತಕ್ಕ ಕ್ರಮವನ್ನು ಕೈಕೊಂಡು, ನಾವು ಹೀಗೆ ನೀನು ಮಾಡಕೂಡದೆಂದು ಬೋಧಿಸುತ್ತಿದ್ದೆವು' ಎಂದು ಆತ ರಾವಣನೆದುರು ಒದರಿಬಿಟ್ಟ! ಅವನು ಮತ್ತೂ ಮುಂದುವರಿದು, 'ಗಂಭೀರವಾಗಿ ವಿಚಾರ ಮಾಡದೆ ಇಂಥ ಭಯಂಕರ ಕೃತ್ಯವನ್ನೆಸಗಿದ ನಿನ್ನನ್ನು ರಾಮನು ಇನ್ನೂ ಸಂಹರಿಸದೆ ಬಿಟ್ಟದ್ದು ನಿನ್ನ ಸುದೈವ' ಎಂದು ಕೂಡ ಹೇಳಿದನು.[೧೪]ರಾವಣನ ತಾಯಿಯ

ಕಡೆಯ ಅಜ್ಜನಾದ ಮಾಲ್ಯವಂತನು ಸಭೆಯಲ್ಲಿ ಸ್ಪಷ್ಟವಾಗಿ ಮಾತನಾಡಿ, ದುರ್ಮಾರ್ಗಗಮನ,[೧೫] ವಿಷಯಲಂಪಟತೆ, ಕರ್ತವ್ಯಭ್ರಷ್ಟತೆಗಳಿಗಾಗಿ ಅವನನ್ನು ಜರೆದನು.

## ವಿದ್ಯಾಭ್ಯಾಸದ ವ್ಯಾಪ್ತಿ ಮತ್ತು ಪ್ರಾಶಸ್ತ್ಯ

ಸಾಂವಿಧಾನಿಕ ಕ್ರಮಗಳು ಮತ್ತು ಸೈನಿಕ ದಕ್ಷತೆಗಳೇ ಮುಖ್ಯವಾಗಿ ಜನರ ಯೋಗಕ್ಷೇಮಕ್ಕೆ ಸಾಧಕಗಳಾಗಿದ್ದವು ಎಂದರೆ ವಾಸ್ತವಿಕವಾಗಲಾರದು. ವಸ್ತುಸ್ಥಿತಿಯನ್ನು ತದ್ವಿರುದ್ಧವಾಗಿ ಬಣ್ಣಿಸುವುದೇ ಸ್ತುತ್ಯಕ್ರಮವಾದೀತು: ಅಂದು ಸಾರ್ವತ್ರಿಕವಾಗಿದ್ದ ಉಚ್ಚ ಮಟ್ಟದ ವಿದ್ಯಾಭ್ಯಾಸದ ದೆಸೆಯಿಂದ ರಾಜನೂ ಮಂತ್ರಿಗಳೂ ಸಾಂವಿಧಾನಿಕವಾಗಿ ವರ್ತಿಸುತ್ತಿದ್ದರು, ಯೋಧರೂ ಇತರ ಪ್ರಜೆಗಳೂ ಪರಸ್ಪರರ ಅಧಿಕಾರ ಕ್ಷೇತ್ರಗಳಲ್ಲಿ ಪ್ರವೇಶಿಸಿದೆ ಆತ್ಮಸಾಕ್ಷಿಯಾಗಿ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದರು. ಸರಕಾರಿ ಕ್ರಮಗಳೂ ಸಾಂಸ್ಕೃತಿಕ ಮಟ್ಟವೂ ವಿಶೇಷವಾಗಿ ಪರಸ್ಪರಾವಲಂಬಿಗಳಾಗುತ್ತ ಹೋದುದರಿಂದ ಅಂದು ಯಾವುದು ಕಾರಣ, ಯಾವುದು ಕಾರ್ಯ ಎಂದು ಬಿಡಿಸಿ ಹೇಳುವುದೇ ಕಷ್ಟವಾಗಿತ್ತು. ಸಮಾಜದ ಪ್ರತಿಯೊಂದು ವಿಭಾಗಕ್ಕೂ ತನ್ನದೇ ಆದ ವಿಶಿಷ್ಟ ಕರ್ತವ್ಯದ ವಿವರಗಳಷ್ಟೇ ಅಲ್ಲದೆ, ಸಾಮಾನ್ಯ(ಸಾಮಾಜಿಕ) ಯೋಜನೆಯಲ್ಲಿ ತನ್ನ ಕೊಡುಗೆಯ ತಾರತಮ್ಯ ವಿವೇಕ ಎಂಥದೆಂಬುದೂ ಗೊತ್ತಿತ್ತು. ವಿಶೇಷಾಭಿಹಿತವಾದ ಆರೋಗ್ಯಕರ ಎಲ್ಲೆಯೊಳಗೇ ಸ್ಪರ್ಧೆಯನ್ನು ಪರಿಸೀಮಿಸಲು ತಕ್ಕ ಮನಃಪ್ರಣಾಳಿಯನ್ನು ನಿರ್ಮಿಸುವುದೂ ಶಿಕ್ಷಣಧ್ಯೇಯದ ಒಂದು ಅಂಗವಾಗಿತ್ತು. ಸಮಾಜದ ವಿವಿಧ ವಿಭಾಗಗಳಿಗೆ ಉಚಿತವಾದ ಶಿಕ್ಷಣ ದೊರಕುವಂತೆ ಮಾಡುವುದೂ ವ್ಯಷ್ಟಿ–ಸಮಷ್ಟಿಗಳೆರಡೂ ತಮ್ಮ ತಮ್ಮ ಕ್ಷೇತ್ರದಲ್ಲಿ ಅರಳಿ ಪರಿಮಳ ಹರಡಲು ನೆರವಾಗುವುದು ರಾಜನ ಮತ್ತು ಮುಖಂಡರ ಕೆಲಸಗಳಾಗಿದ್ದವು. ಬ್ರಾಹ್ಮಣನನ್ನು ಕುರಿತು ಮಾಡಲಾಗುತ್ತಿದ್ದ ರಾಜನ ಪ್ರಶ್ನೆ ಹೀಗಿತ್ತೆಂದು ಉದಾಹರಿಸಬಹುದು: 'ತಮ್ಮ ಅಧ್ಯಯನದ ಅವಧಿಯಲ್ಲಿ ನಿನ್ನ ವಿದ್ಯಾರ್ಥಿಗಳು ನಿನ್ನ(ಉಪದೇಶಕ್ಕಾಗಿ) ಕಾದು ಕುಳಿತುಕೊಳ್ಳುತ್ತಾರೆಯೇ?' ಕ್ಷತ್ರಿಯನನ್ನು ಕುರಿತು ಕೇಳಲಾಗುತ್ತಿದ್ದ ರಾಜನ ಪ್ರಶ್ನೆ ಇಂತಿರುತ್ತಿತ್ತು: 'ನಿನ್ನ ಶಿಷ್ಯರು ಉಕ್ಕಿನ ಕವಚಗಳನ್ನು ಯಾವಾಗಲೂ ಧರಿಸಿರುತ್ತಾರೆಯೇ?' ಹೀಗೆಯೇ ಆವಶ್ಯಕವಾದ ಬದಲಾವಣೆಯೊಂದಿಗೆ ಇತರ ಸಮಾಜ ವಿಭಾಗದವರನ್ನೂ ಪ್ರಶ್ನಿಸಲಾಗುತ್ತಿತ್ತು.[೧೬] ರಾಜನ ತರಬೇತು ಸರ್ವಸಂಗ್ರಾಹಕವಾಗಿರಬೇಕಾಗಿತ್ತು. ಏಕೆಂದರೆ, ಆತನೇ ಕಾರ್ಯಪಾಲಕ ನಾಯಕ, ಮುಖ್ಯ ಆಡಳಿತಗಾರ; ಆದುದರಿಂದ ಆತನು ವಿವಿಧ ಮನೋವೃತ್ತಿಯ ಜನರಿಂದ ಅವರಲ್ಲಿಯ ಉತ್ತಮಾಂಶಗಳೇ ಪ್ರಕಟವಾಗುವಂತೆ ನೋಡಿಕೊಳ್ಳುವ ಕಲೆಯನ್ನು ಅರಿತಿರಬೇಕಾಗುತ್ತಿತ್ತು. ಆ ಜನರೇ ಅವನ ರಾಜ್ಯದ ನಿಜವಾದ ಸಂಪತ್ತು! ಅವನೇ ದೇಶದ ಚಟುವಟಿಕೆಗಳ ಪ್ರತಿಯೊಂದು ಶಾಖೆಯ ಪೋಷಕನಾಗಿದ್ದುದರಿಂದ ಜನರಲ್ಲಿಯ ಸ್ವಂತಿಕೆ ನವನಿರ್ಮಾಣ ಶಕ್ತಿಗಳು ಪ್ರಚೋದಿಸಲ್ಪಡುವಂತಹ ಉತ್ಸವ–ಪ್ರದರ್ಶನಾದಿಗಳನ್ನು ಆತ ಏರ್ಪಡಿಸಬೇಕಾಗಿತ್ತು.

## ರಾಜಪ್ರೋತ್ಸಾಹ

ಕಾಡಿಗೆ ಹೋಗುವ ಕಾಲದಲ್ಲಿ ಶ್ರೀರಾಮನು ಲಕ್ಷ್ಮಣನಿಗೆ ಮಾಡಿದ ಉಪದೇಶದಿಂದ ರಾಜಕುಟುಂಬದ ಸದಸ್ಯರು ಪ್ರತಿಯೊಂದು ಕ್ಷೇತ್ರದ ತಜ್ಞರಿಗೂ ಎಷ್ಟರ ಮಟ್ಟಿನ ಅವಕಾಶಗಳನ್ನು ಕಲ್ಪಿಸಿಕೊಡುತ್ತಿದ್ದರು ಎಂಬ ಅಂಶವು ತಿಳಿದುಬರುತ್ತದೆ. ಆತ ಹೇಳಿದ: 'ನನ್ನನ್ನು ಅವಲಂಬಿಸಿ ಜೀವಿಸುತ್ತಿರುವ ಬ್ರಾಹ್ಮಣರು, ತಪಸ್ವಿಗಳು ಮತ್ತು ಇತರ ಅನೇಕರಲ್ಲಿ ನಿನ್ನೊಡನೆ ನನ್ನ ಆಸ್ತಿಯನ್ನು ಹಂಚಲು ಬಯಸುತ್ತೇನೆ.' ವಿವರಗಳನ್ನು ಕೊಡುತ್ತ ಆತನು, 'ಪ್ರತಿದಿನವೂ ಕೌಸಲ್ಯೆಗೆ ಸ್ವಸ್ತಿವಾಚನ ಮಾಡುವ ತೈತ್ತಿರೀಯ ಶಾಖಾಧ್ಯಾಪಕನಾದ ಬ್ರಾಹ್ಮಣನಿಗೆ ರೇಶಿಮೆಬಟ್ಟೆ, ವಾಹನಗಳು ಮುಂತಾದವುಗಳನ್ನು ಯಥೇಷ್ಟವಾಗಿ ಕೊಡು'– ಎಂದು ಹೇಳಿದನು. ಅದೇ ಪ್ರಕಾರ ಯಜುರ್ವೇದದ ಕಥಾಭಾಗವನ್ನು ಅಭ್ಯಸಿಸುತ್ತಿದ್ದ ತನ್ನ ದಂಡಧರರಿಗೂ ಶ್ರೀರಾಮನು ತಕ್ಕ ದಾನಗಳನ್ನು ಕೊಟ್ಟನು.[೧೭] ಲಕ್ಷ್ಮಣನು ರಾಮನು ಹೇಳಿದ ಪ್ರಕಾರ ದಾನ ಕೊಡಲು ಪ್ರಾರಂಭಿಸಿದಾಗ ಒಂದು ತಮಾಷೆಯ– ಆದರೆ ಹೃದಯಸ್ಪರ್ಶಿಯಾದ–ಸಂಗತಿ ನಡೆಯಿತು. ಬಡವನೂ ವಿದ್ವಾಂಸನೂ ಆದ ತ್ರಿಜಟನೆಂಬ ಬ್ರಾಹ್ಮಣನೊಬ್ಬನಿದ್ದ. ತನಗೆ ಬಹಳ ಮಕ್ಕಳಿವೆಯೆಂದೂ, ಅವುಗಳನ್ನು ಸಾಕಲು ತನಗೆ ದ್ರವ್ಯಸಹಾಯ ನೀಡಬೇಕೆಂದೂ ಅವನು ರಾಮನನ್ನು, ತನ್ನ ಹೆಂಡತಿಯ ಒತ್ತಾಯಕ್ಕೆ ಒಳಗಾಗಿ ಬೇಡಿದನು. ಆಗ ರಾಮನು ಆಕಸ್ಮಿಕವಾದ ವಿನೋದ ಬುದ್ಧಿಯಿಂದ, 'ಇದ್ದಷ್ಟು ಶಕ್ತಿಯನ್ನು ಉಪಯೋಗಿಸಿ ಒಂದು ಸರಳನ್ನು ಆದಷ್ಟು ದೂರ ಎಸೆ' ಎಂದು ಆ ಬ್ರಾಹ್ಮಣನಿಗೆ ಹೇಳಿದನು. ಅವನು ಹಾಗೆಯೇ ಮಾಡಲಾಗಿ ಆ ಸರಳು ಅನಿರೀಕ್ಷಿತವಾಗಿ ಸರಯೂ ನದಿಯ ಆಚೆಯ ದಂಡೆಯಲ್ಲಿ ಬಿದ್ದಿತು. 'ಅಲ್ಲಿಯವರೆಗೆ ಮೇಯುತ್ತ ನಿಂತಿರುವ ಹಸುಗಳೆಲ್ಲವೂ ನಿನಗೆ' ಎಂದು ಹೇಳಿ, ಶ್ರೀರಾಮಚಂದ್ರ ಉದಾರವಾಗಿ ಅ ದಾನವನ್ನು ಸಾರಿದ ಮೇಲೆ, ತಾನು ಮಾಡಿದ ತಮಾಷೆಗಾಗಿ ಆತನ ಕ್ಷಮೆಯನ್ನು ಯಾಚಿಸಿದನು. ಅದರಿಂದ ಆ ಬ್ರಾಹ್ಮಣನ ಕಷ್ಟವು ಪರಿಹಾರವಾಯಿತು.[೧೮] ತನ್ನ ಸ್ನೇಹಿತನಾದ ಕುಚೇಲನ ಹತ್ತಿರ ತನಗೆ ಸಹಜವಾದ ಪರಿಪೂರ್ಣ ಚಾತುರ್ಯದಿಂದ ಇಂಥ ಹಗರಣವನ್ನು ಶ್ರೀಕೃಷ್ಣ ನಡೆಸಿದ್ದು ಇಲ್ಲಿ ನೆನಪಾಗದಿರದು![೧೯]

## ಯಾಗಗಳ ವಿವಿಧ ಮುಖಗಳು

ಪ್ರತಿಯೊಂದು ಯಜ್ಞವೂ ಸಮಾಜದ ಎಲ್ಲ ವಿಭಾಗದವರೂ ಒಟ್ಟಾಗಿ ಸೇರಲು ಅವಕಾಶವನ್ನು ಕಲ್ಪಿಸಿಕೊಡುತ್ತಿತ್ತು. ಅದನ್ನು ಸಮರ್ಪಕವಾಗಿ ಮುಗಿಸುವುದಕ್ಕೆ ಆ ಎಲ್ಲರೂ ತಮ್ಮ ಜಾಣ್ಮೆಯನ್ನು ಮೀಸಲಾಗಿ ಇಡುತ್ತಿದ್ದರು ಮತ್ತು ಯಥೇಷ್ಟ ಬಹುಮಾನಗಳನ್ನೂ ಪಡೆಯುತ್ತಿದ್ದರು. ಅದು ಪ್ರಾಚೀನಕಾಲದ 'ಜಾಗತಿಕ ಜಾತ್ರೆ' ಅಥವಾ 'ಮತಧರ್ಮಗಳ ಸಂಸತ್ತು' ಎನ್ನಬಹುದಾಗಿದೆ. ಬಲಿಷ್ಠರಾದ ರಾಜರು ಕೆಲವು ವಿಶಿಷ್ಟ ಯಾಗಗಳನ್ನು ಮಾಡುತ್ತಿದ್ದರು. ಸ್ನೇಹಬಲದಿಂದಲೋ ದಂಡಯಾತ್ರೆಯಲ್ಲಿ ಗೆದ್ದೋ ಅವರು ತಮ್ಮ ಭ್ರಾತೃರಾಜರು ಕೂಡಿಟ್ಟಿದ್ದ ಐಶ್ವರ್ಯವನ್ನು ತಂದು ತಮಗೆ

ಬೇಕಾದ ಯಾಗ ಕೇಂದ್ರವೊಂದರಲ್ಲಿ ತಮಗೊಪ್ಪಿಗೆಯಾದ ನ್ಯಾಯವನ್ನೂ ಅರ್ಹತಾಮಾನವನ್ನೂ ಆಧರಿಸಿ ವಿವಿಧ ಕರ್ಮಶಾಖೆಗಳಲ್ಲಿ ನುರಿತ ತಜ್ಞರಿಗೆ ಹಂಚುತ್ತಿದ್ದರು. ಶ್ರೀರಾಮನು ಅಂಥ ಯಾಗವೊಂದನ್ನು ಮಾಡಿದನು. 'ಉತ್ತರ ರಾಮಚರಿತ'ದಲ್ಲಿ ಹೇಳಿದಂತೆ ಅಶ್ವಮೇಧದ ಪವಿತ್ರಾಶ್ವಕ್ಕಾಗಿ ನಡೆದ ಸಂಗ್ರಾಮವೇ ರಾಮನಿಗೆ ತನ್ನ ಮಕ್ಕಳಾದ ಕುಶಲವರನ್ನು ಗುರುತಿಸುವ ಅವಕಾಶನ್ನು ಒದಗಿಸಿಕೊಟ್ಟದ್ದು: ಆಗಲೇ ಅವನು ಅವರನ್ನು ಅರಮನೆಗೆ ಕರೆದೊಯ್ದದ್ದು! (ವಿಶ್ವಜಿತ್ ಎಂಬ) ಒಂದು ಯಾಗವು ಎಲ್ಲ ಯಾಗಗಳಲ್ಲಿ ಅತ್ಯಂತ ಶ್ರೇಷ್ಠವಾದದ್ದು. ಅದರಲ್ಲಿ ಯಜಮಾನನು ಶಾಸ್ತ್ರೋಕ್ತ ಮಾರ್ಗಗಳಿಂದ ಸಂಗ್ರಹಿಸಿದ ಸರ್ವಾರ್ಥಗಳಷ್ಟನ್ನಲ್ಲದೆ, ತನ್ನ ಮೂಲಸಂಪತ್ತನ್ನು ವ್ಯಯಿಸುತ್ತಾನೆ. ಆ ಯಾಗ ಮುಗಿದ ಮರುದಿನ ಅವನು ತನ್ನ ಜೀವನಕ್ಕಾಗಿ ಕೂಡ ಕಷ್ಟಪಟ್ಟು ದುಡಿಯಲು ಪ್ರಾರಂಭಿಸಬೇಕಾಗುತ್ತದೆ. ಸಾರ್ವಭೌಮ ಅಧಿಕಾರದಲ್ಲಿರುವ ಚಕ್ರವರ್ತಿಯು ವಿಶ್ವಜಿತ್ತನ್ನು ನೆರವೇರಿಸುವಾಗ ಸರ್ವೈಶ್ವರ್ಯ ತ್ಯಾಗವನ್ನು[೨೦] ಮಾಡಿ ಬಡವನಾಗುವುದು ಬಹಳ ಮಂಗಲಕರ ಎಂದು ಗ್ರಹಿಸಲಾಗುತ್ತಿತ್ತು. ವರತಂತುವಿನ ಶಿಷ್ಯನಾದ ಕೌತ್ಸನು ಗುರುದಕ್ಷಿಣೆ ಕೊಡಲು ಹಣವಿಲ್ಲವೆಂದು ಬೇಡಲು ಬಂದಾಗ ರಘು ಅಂಥ ಪರಿಸ್ಥಿತಿಯಲ್ಲೇ ಇದ್ದನು. ಅತಿಥಿಸತ್ಕಾರ ಮಾಡಲು ಅವನಲ್ಲಿ ಕೇವಲ ಮಣ್ಣಿನ ಕುಡಿಕೆಗಳಿದ್ದವು. ಆದರೆ ಧೀರೋದಾತ್ತನಾದ ರಘುಮಹಾರಾಜನು ಅವನಿಗೆ ಅಗತ್ಯವಾಗಿದ್ದ ಆಶ್ವಾಸನವನ್ನು ಕೊಡಲು ತಡಮಾಡಲಿಲ್ಲ. ವೇದವೇತ್ತನಾದವನೊಬ್ಬ ರಘುಮಹಾರಾಜನ ಹತ್ತಿರ ಬಂದು ತನ್ನ ಗುರುವಿಗೆ ದಕ್ಷಿಣೆಯನ್ನು ಕೊಡಲು ಹಣ ಕೇಳಲು ಹೋಗಿ, ನಿರಾಶನಾಗಿ, ಮತ್ತೊಬ್ಬ ದಾನಿಯ ಬಳಿಗೆ ತೆರಳಬೇಕಾಗಿ ಬಂದ ಅಭೂತಪೂರ್ವವಾದ ಅಪಕೀರ್ತಿಗೆ ಆತನು ಅವಕಾಶ ಕೊಡಲು ಹೇಗೆ ಶಕ್ತನಾದಾನು? ದೇವತೆಗಳ ಸಹಾಯದಿಂದ ಈ ಸಂಕಟ ಪರಿಹಾರವಾಯಿತು: ಅವರು ಯಥೇಷ್ಟ ದ್ರವ್ಯವನ್ನು ಒದಗಿಸಿದರು. ಆಗ ರಘುವು ಕೌತ್ಸನನ್ನು ಬೇಕಾದುದಕ್ಕಿಂತ ಹೆಚ್ಚು ಹಣವನ್ನು ತೆಗೆದುಕೋ ಎಂದು ಒತ್ತಾಯಿಸುವ ಮತ್ತು ಕೌತ್ಸನು ಗುರುದಕ್ಷಿಣೆಗೆ ಅಗತ್ಯವಾದ ಹಣಕ್ಕಿಂತ ಒಂದು ಕವಡೆಯನ್ನೂ ಹೆಚ್ಚಾಗಿ ತೆಗೆದುಕೊಳ್ಳಲಾರೆನೆಂದು ಹಟಹಿಡಿದು ಕುಳಿತಿರುವ ದೃಶ್ಯವನ್ನು ಸಾಕೇತದ ಜನರು ಗುಂಪುಗುಂಪಾಗಿ ಬಂದು ನೋಡುವಂತೆ ಆಯಿತು.[೨೧]

ದಕ್ಷಿಣೆ, ಉಪಾಯನದಾನಗಳಿಲ್ಲದೆ ಯಾವ ಯಜ್ಞವೂ ಪೂರ್ಣವಾಗಲಾರದು. ಯಜ್ಞದಿಂದ ಯಜಮಾನನಿಗೆ ಐಶ್ವರ್ಯ, ಅಧಿಕಾರ, ದೀರ್ಘಾಯುಷ್ಯ, ಸಂತತಿ ಮತ್ತುಸ್ವರ್ಗ ದೊರಕಬೇಕೆಂಬ ಅಪೇಕ್ಷೆಯಿದ್ದರೆ, ಇಡಿ ಸಮಾಜಕ್ಕಾದರೋ ಆಹಾರ, ಉಪಚಾರ, ಗೌರವ, ಅರ್ಹತೆಗೆ ತಕ್ಕ ಬಹುಮಾನ, ಕುಶಲತಾ ಸ್ಪರ್ಧೆಯ ಅವಕಾಶ ಮತ್ತು ಐಶ್ವರ್ಯ–ರಾಜ್ಯಾಧಿಕಾರಗಳ ಪುನರ್ವಿತರಣ ಲಭ್ಯವಾಗುತ್ತಿದ್ದವು. ದಶರಥ ನೆರವೇರಿಸಿದ ಪುತ್ರಕಾಮೇಷ್ಟಿಯ ಸಂದರ್ಭದಲ್ಲಿ ವಸಿಷ್ಠನು ಕೇವಲ ಕರ್ಮಪಟುಗಳಾದ ಪುರೋಹಿತರನ್ನಲ್ಲದೆ, ಅನುಭವಿಕರಾದ ರಥಕಾರರನ್ನೂ ಬಹಳ ವೃದ್ಧರೂ ಧಾರ್ಮಿಕರೂ

ಅದ ಜನರನ್ನೂ ವಿವಿಧ ಕಾರ್ಯಗಳಲ್ಲಿ ನೆರವೀಯಬಲ್ಲ ಸೇವಕರನ್ನೂ, ಕಲೆಗಾರರನ್ನೂ, ಬಡಿಗರನ್ನೂ ಗುದ್ದಲಿಗರನ್ನೂ, ಜೋಯಿಸರನ್ನೂ,ಕುಶಲಕರ್ಮಿಗಳನ್ನೂ, ನರ್ತಕರನ್ನೂ, ರಂಗಸ್ಥಳ ಸೂತ್ರಧಾರರನ್ನೂ ಮತ್ತು ವಿವಿಧ ವಿದ್ಯಾಶಾಖೆಗಳಲ್ಲಿ ಪರಿಣತರಾಗಿ ನಿರ್ಮಲಶೀಲರೆನ್ನಿಸಿದ್ದ ವಿದ್ವಾಂಸರನ್ನೂ ಆಮಂತ್ರಿಸಲು ತಕ್ಕ ಮುಂಜಾಗ್ರತೆಯನ್ನು ವಹಿಸಿದ್ದು ಉದಾಹರಣೆಯಾಗಬಲ್ಲುದು. ಬ್ರಾಹ್ಮಣರಿಗೂ, ಪೌರರಿಗೂ, ಜನಪದವಾಸಿಗಳಿಗೂ ವಿಶಾಲವೂ ಹಿತಕರವೂ ಅದ ವಸತಿಗೃಹಗಳನ್ನು ಒದಗಿಸಲು ವಸಿಷ್ಠ ಆಜ್ಞೆಯನ್ನು ಕೊಟ್ಟನು. ವಿದೇಶಗಳಿಂದ ಬರುವ ರಾಜರಿಗೆ ಪ್ರತ್ಯೇಕವಾದ ಉಳಿವನೆಗಳನ್ನೂ, ಕುದುರೆಗಳಿಗಾಗಿ ಲಾಯಗಳನ್ನೂ, ದೇಶ–ವಿದೇಶಗಳ ಯೋಧರಿಗಾಗಿ ನೇಪಥ್ಯಗೃಹ ಮತ್ತು ವಿಶಾಲವಾದ ಕೋಣೆಗಳನ್ನೂ ಒದಗಿಸಬೇಕೆಂದು ಆತ ಅಪ್ಪಣೆಯನ್ನಿತ್ತನು. ಈ ಎಲ್ಲರಿಗಾಗಿ ಅತ್ಯುತ್ತಮವಾದ ಆಹಾರಸಾಮಗ್ರಿಗಳನ್ನು ಶೇಖರಿಸಿ ಇಡುವ ಮತ್ತು ತೇರು ಜಾತ್ರೆಗಳಿಗೆ ಸಹಜವಾದ ಅಲಕ್ಷ್ಯವನ್ನು ಬದಿಗಿಟ್ಟು ಮರ್ಯಾದೆಯಿಂದ ಅವುಗಳನ್ನು ಸರ್ವರಿಗೂ ಒದಗಿಸುವ ವ್ಯವಸ್ಥೆಯನ್ನು ಮಾಡಲಾಯಿತು. ಸಿಟ್ಟಿನಿಂದ ಯಾರನ್ನೂ ಅನಾದರಕ್ಕೆ ಈಡುಮಾಡುವಂತಿದ್ದಿಲ್ಲ; ಸ್ಥಾನ–ಮಾನಗಳ ತಾರತಮ್ಯವಿಲ್ಲದೆ ಪ್ರತಿಯೊಬ್ಬ ಸಂದರ್ಶಕನನ್ನೂ ಗೌರವದಿಂದ ಸತ್ಕರಿಸಬೇಕಾಗಿತ್ತು.[೨೨] ಈ ಸಂದೇಶಗಳನ್ನು ಅಕ್ಷರಶಃ ಪಾಲಿಸಲಾಯಿತು; ಮತ್ತು ದೇವತೆಗಳಿಗೆ ಹವಿರ್ಭಾಗಗಳನ್ನು ಸಲ್ಲಿಸುತ್ತಿದ್ದಾಗ ಮಾನವರಿಗೂ ಪಾಕಶಾಸ್ತ್ರದಲ್ಲಿ ಹೇಳಿದ ಅತಿ ರುಚಿಕಟ್ಟಾದ ಪಂಚಭಕ್ಷ್ಯ ಪರಮಾನ್ನಗಳನ್ನು ಒದಗಿಸಲಾಗುತ್ತಿತ್ತು. ಮುಕ್ತಾಹಾರ ಪದಕಾದಿಗಳಿಂದ ಅಲಂಕೃತರಾದ ಮಹಿಳೆಯರು ಬ್ರಾಹ್ಮಣ ಮತ್ತು ಶೂದ್ರ, ತಪಸ್ವಿ ಮತ್ತು ಶ್ರಮಣ, ವೃದ್ಧ ಮತ್ತು ದುರ್ಬಲ, ಹೆಂಗಸರು ಮತ್ತು ಮಕ್ಕಳು ಎಲ್ಲರಿಗೂ ಸತತವಾಗಿ ಬಡಿಸುತ್ತಿದ್ದರೆಂದು ಹೇಳಲಾಗಿದೆ.[೨೩] ಸಮಾರಂಭಗಳ ನಡುವಿನ ಅವಧಿಗಳನ್ನು ಉಪಯುಕ್ತವಾಗಿ ಕಳೆಯಲಾಗುತ್ತಿತ್ತು. ಸಾತ್ವಿಕರೂ ವಾಗ್ಮಿಗಳೂ ಆದ ಪಂಡಿತರು ಪರಸ್ಪರರನ್ನು ಗೆಲ್ಲುವ ಆಸೆಯಿಂದ ವಿವಿಧ ವಾದಗಳನ್ನು ಮಾಡುತ್ತಿದ್ದರು.[೨೪] ಇಂಥ ವೈಭವಪೂರ್ಣವಾದ ಒಂದು ಯಜ್ಞವನ್ನು ನಡೆಯಿಸುತ್ತಿದ್ದಾಗಲೇ ಶ್ರೀ ರಾಮಚಂದ್ರನು ಬೀದಿಗಳಲ್ಲಿ ಹಾಡುತ್ತಿದ್ದ ಕುಶಲವರನ್ನು ಕಂಡು, ಎಲ್ಲರಿಗೂ ಸುಸಂಗೀತ ಶ್ರವಣವನ್ನೂ ಪದ್ಯರಸಿಕರಿಗೆ ಬೌದ್ಧಿಕವಾದ ಹಬ್ಬವನ್ನೂ ಅವರ ಸೇವೆಯ ಮೂಲಕ ಒದಗಿಸಬಹುದೆಂದು ಆಲೋಚಿಸಿದ್ದು. ಸ್ವತಃ ಸಂಗೀತಶಾಸ್ತ್ರಜ್ಞನಾಗಿದ್ದ[೨೫] ಆತನು ಕುಶಲವರ ಸಂಗೀತ ಕಾರ್ಯಕ್ರಮಕ್ಕೆ ಯಜ್ಞಕ್ಕೆ ಬಂದಿದ್ದ ಸಂಗೀತತಜ್ಞರನ್ನು ವಿಶೇಷತಃ ಆಮಂತ್ರಿಸಿದನು. ಆಳವಾದ ಸಾಹಿತ್ಯವನ್ನು ಅಭ್ಯಸಿಸಿದವರನ್ನೂ, ಇತಿಹಾಸಕೋವಿದರನ್ನೂ, ಇತರ ವಿವಿಧ ಶಾಸ್ತ್ರಜ್ಞರನ್ನೂ ವಿಶೇಷವಾಗಿ ಕರೆಯಿಸಲಾಯಿತು. ಕುಶಲವರ ಸಂಗೀತದ ಮಾಧುರ್ಯವನ್ನೂ, ಕಥಾವಸ್ತುವಿನ ವೈಭವವನ್ನೂ,ಗಾಯಕರ ಆಕರ್ಷಕ ಆಕೃತಿಗಳನ್ನೂ ಕಂಡು ವಿಸ್ಮಿತರಾಗಿ ಎಲ್ಲರೂ ಪುನಃ ಪುನಃ ಅವರ ಗಾಯನವನ್ನು ಕೇಳಬೇಕೆಂಬ ತಮ್ಮ ಅಪೇಕ್ಷೆಯನ್ನು ವ್ಯಕ್ತಪಡಿಸಿದರು. ಯಾರಲ್ಲಿ ದೊಡ್ಡತನ ಕಂಡುಬಂದರೂ ಅದನ್ನು

ಬಹುಮಾನಿಸುವ ರೂಢಿಯನ್ನಿಟ್ಟುಕೊಂಡಿದ್ದ ಶ್ರೀರಾಮನು ಕೂಡಲೇ ಕುಶಲವರಿಗೆ ೧೮೦೦೦ ಸುವರ್ಣ ನಾಣ್ಯಗಳನ್ನೂ ಇತರ ಅನೇಕ ಅಮೂಲ್ಯ ಪಾರಿತೋಷಕಗಳನ್ನೂ ಕೊಡಲು ಲಕ್ಷ್ಮಣನಿಗೆ ಆಜ್ಞಾಪಿಸಿದನು.

## ಅರಣ್ಯವಾಸಿಗಳು ಸಲ್ಲಿಸುತ್ತಿದ್ದ ಸೇವೆ

'ನಾವು ಅರಣ್ಯವಾಸಿಗಳು. ಫಲಮೂಲಗಳಸ್ನು ಆಧರಿಸಿ ನಾವು ಬದುಕುತ್ತೇವೆ' ಎಂಬ ಅರ್ಥಪೂರ್ಣವಾದ ಉತ್ತರ ಕುಶಲವರಿಂದ ರಾಮನಿಗೆ ದೊರಕಿತು. 'ಅರಣ್ಯದಲ್ಲಿ ವಾಸಿಸುವ ನಮಗೆ ಚಿನ್ನದ ನಾಣ್ಯಗಳಿಂದ ಏನಾಗಬೇಕಾಗಿದೆ?' ಎಂಬುದು ಗಾಯಕರ ಸವಾಲು. ಪ್ರಾಚೀನ ಯುಗದ ಎಲ್ಲ ಸಾಂಸ್ಕೃತಿಕ ಶಿಕ್ಷಣಗಳ ಲಕ್ಷಣವೂ ಇದೇ ಆಗಿತ್ತು.ಸ್ವತಃ ಉದಾತ್ತಜೀವಿಗಳಾದ ಮನುಷ್ಯರು ಉಚಿತವಾಗಿಯೇ ತರುಣರ ತರಬೇತಿನ ಕಾರ್ಯವನ್ನು ವಹಿಸಿಕೊಂಡು, ಏನನ್ನೂ ನಿರ್ಬಂಧಿಸಿ ತೆಗೆದುಕೊಳ್ಳದೆ, ಅವರಿಗೆ ತಮ್ಮಲ್ಲಿರುವ ಅತ್ಯುತ್ತಮ ವಿದ್ಯೆಗಳನ್ನು ದಾನ ಮಾಡುವ ವಿಶಾಲ ಹೃದಯದವರಾಗಿದ್ದರು. ಅಂಥ ಶಿಕ್ಷಣದ ಬೆಲೆಯನ್ನು ಅರಿತುಕೊಂಡ ಸಮಾಜವು ಆ ಗುರುಗಳು ನಗರಗಳಲ್ಲಿರಲಿ, ಹಳ್ಳಿಗಾಡುಗಳಲ್ಲಿರಲಿ–ಅವರ ಕುಟುಂಬಗಳ ಮತ್ತು ಶಿಷ್ಯವರ್ಗಗಳ ಪೋಷಣೆಗೆ ಬೇಕಾದ ಎಲ್ಲ ಸೌಕರ್ಯಗಳನ್ನೂ ಒದಗಿಸಿಕೊಡುತ್ತಿತ್ತು. ದೊರೆಗಳೂ, ಸರದಾರರೂ ಬೇಟೆಗೆಂದು ಕಾಡುಮೇಡುಗಳತ್ತ ಹೋದಾಗ ಸ್ವತಃ ಗುರುಕುಲಗಳನ್ನು ಸಂದರ್ಶಿಸಿ ತನಿಖೆ ಮಾಡಿ, ಅಲ್ಲಿಯ ಉಪಾಧ್ಯಾಯರಿಗೂ ಶಿಷ್ಯರಿಗೂ ಬೇಕಾದ ಸುಖಸಾಧನಗಳನ್ನು ಕೊಡಿಸಿ ಹೋಗುತ್ತಿದ್ದರು. ಹೆಚ್ಚಾಗಿ ಋಷಿಗಳೇ ಗುರುಗಳಾಗಿರುತ್ತಿದ್ದರಲ್ಲದೆ, ಅವರೂ ಅವರ ಬಾಲ್ಯದಲ್ಲಿ ಹೇಳಿಕೊಟ್ಟ ಧರ್ಮದಂತೆ ಜನರು ನಡೆದುಕೊಳ್ಳುತ್ತಿದ್ದಾರೋ ಇಲ್ಲವೋ ಎಂಬುದನ್ನು ಪದೇ ಪದೇ ಕೇಳಿ ತಿಳಿದುಕೊಳ್ಳುತ್ತಿದ್ದರು. ತಮ್ಮ ಅಧ್ಯಾಪನ, ಸಂರಕ್ಷಣ, ಧರ್ಮವ್ರತಾಚಾರಗಳಿಗೆ ವಿಘ್ನ ಉಂಟಾದಾಗ ಅವರು ದುಷ್ಟದಮನಕ್ಕಾಗಿ ರಾಜರನ್ನು, ಸೈನಿಕಸಹಾಯವನ್ನು ಸಲ್ಲಿಸಲು ಕೇಳಿಕೊಳ್ಳುತ್ತಿದ್ದರು. ಶ್ರೀರಾಮನು ದೇಶತ್ಯಾಗದ ಅವಧಿಯಲ್ಲಷ್ಟೇ ಅಲ್ಲದೆ, ಅದರ ಹಿಂದುಮುಂದಿನ ಅವಧಿಗಳಲ್ಲಿಯೂ ಅಂಥ ಸಹಾಯವನ್ನು ಒದಗಿಸಿದ ಉದಾಹರಣೆಗಳು ಹೇರಳವಾಗಿವೆ. ಜನರಲ್ಲಿಯ ಗೃಹಸ್ಥವರ್ಗಗಳ ಯೋಗಕ್ಷೇಮಗಳಿಗೆಂದು ಇನ್ನೂ ಎಷ್ಟೋ ಅಮೂಲ್ಯ ಸಹಾಯವನ್ನು ನಿಶ್ಶಬ್ದವಾಗಿ ಅರಣ್ಯವಾಸಿಗಳು ಸಲ್ಲಿಸುತ್ತಿದ್ದರು. ಪಾಂಡುವಿಗೂ ಅವನ ಕುಟುಂಬಕ್ಕೂ ಹೇಗೋ ಹಾಗೇ, ಎಷ್ಟೋ ಜನರಿಗೆ ಅನೇಕ ಕಾರಣಗಳಿಗಾಗಿ ವಿರಾಮ ಜೀವನವನ್ನು ನಡೆಸಲು ಆಶ್ರಯವನ್ನು ಕೊಡುತ್ತಿದ್ದರು. ಸೀತೆಗೂ ಅವಳ ಮಕ್ಕಳಿಗೂ ವಾಲ್ಮೀಕಿ ಮಾಡಿದ್ದು ಮತ್ತು ಶಕುಂತಲೆಗೆ ಕಣ್ವ ಮಾಡಿದ್ದು, ಪರಿತ್ಯಕ್ತರೂ ದುಃಖಿಗಳೂ ಆದ ವ್ಯಕ್ತಿಗಳ ಸೇವೆಯಲಿಸ್ಲ, ಪ್ರತಿಫಲರೂಪದಲ್ಲಿ ದ್ರವ್ಯವನ್ನು ಕೊಡಬಂದರೆ ಅದನ್ನು ತಿರಸ್ಕರಿಸಿ ಅಪಾರ ಪ್ರೇಮವನ್ನು ಅನಾಸಕ್ತಿಯೋಗದಿಂದ ಹರಿಯಿಸುತ್ತಿದ್ದುದಕ್ಕೆ ಮಾದರಿಯ ಉದಾಹರಣೆಗಳಾಗಿವೆ.

## ಧರ್ಮದ ಆದರ್ಶ

ಅಂದು ಮಾನವರ ಜೀವನವನ್ನು ರೂಪಿಸುವುದರಲ್ಲಿ ಧರ್ಮವು ಮುಖ್ಯ ಪಾತ್ರವನ್ನು ವಹಿಸಿತ್ತು. ಕಲಾವಿದನ ಕಲಾದೃಷ್ಟಿಯು ಹೇಗೆ ಅವನ ವ್ಯಕ್ತಿವೈಶಿಷ್ಟ್ಯದ ಮತ್ತು ಸೌಂದರ್ಯದ ಸ್ಪರ್ಶವನ್ನು ಅವನ ವರ್ಣಚಿತ್ರಕ್ಕೆ ಅಥವಾ ಸಂಗೀತಕ್ಕೆ ಮಾತ್ರವಲ್ಲದೆ, ಅವನ ಲೇಖನ ಭಾಷಣಗಳಿಂದ ಹಿಡಿದು ಉಣ್ಣುವ, ತಿನ್ನುವ, ನಿಲ್ಲುವ, ನಡೆವ ಮತ್ತು ಕುಳಿತುಕೊಳ್ಳುವ ಮುಂತಾದ ಎಲ್ಲ ಕಾರ್ಯಗಳಿಗೂ ಕೊಡುವ ಹಾಗೆ, ಧರ್ಮವು ತನ್ನ ಭಕ್ತನ ಮನಃಪ್ರಣಾಲಿಗೆ ಪವಿತ್ರವೂ ಪ್ರೇಮಾದರ್ಶವೂ ಧೀರೋದಾತ್ತವೂ ಅದ ಒಂದು ಸಂಸ್ಕಾರವನ್ನು ಕೊಟ್ಟು ಅವನ ದೈನಂದಿನ ಚಟುವಟಿಕೆಗಳೆಲ್ಲವುಗಳಲ್ಲೂ ತನ್ನ ವಿಶಿಷ್ಟವಾದ ಪರಿಮಳ ಮತ್ತು ಮಾಧುರ್ಯ ಪ್ರವೇಶಿಸುವಂತೆ ಮಾಡುವುದು ಉದ್ದೇಶಿತವಾಗಿತ್ತು. ತನ್ನ ವಿಚಾರ ಮತ್ತು ವಿವಿಧ ಸಂಪರ್ಕಗಳ ಮೂಲಕ ಪ್ರತಿಯೊಬ್ಬನೂ ಸ್ತಿಮಿತಗತಿಯಿಂದ ವಿಕಾಸ ಹೊಂದಬೇಕಾಗಿತ್ತು ಮತ್ತು ಸಮಾಜದ ಸೇವೆಗಾಗಿ ತನ್ನ ಸುಗುಣಗಳ್ನು ಮುಡಿಪಿಡಬೇಕಾಗಿತ್ತು. ಬೇರೆ ಬೇರೆ ಗುಂಪಿನ ಜನರಿಗೆ ಬೇರೆ ಬೇರೆ ಧರ್ಮಗಳಿದ್ದವು. ಆದರೆ ಅವರ ಆಚಾರದ ಪರಿಣಾಮವಾಗಿ ಘರ್ಷಣ, ದುಃಖ ಮತ್ತು ಆಧ್ಯಾತ್ಮಿಕ ವಿಕಾಸಕ್ಕೆ ವಿಘ್ನ ಉಂಟಾದರೆ ವ್ಯಕ್ತಿಯಾಗಲಿ, ಗುಂಪಾಗಲಿ, ಧರ್ಮಾನುಸಾರವಾಗಿ ನಡೆದುಕೊಂಡಿತೆಂದು ತಿಳಿಯಲಾಗುತ್ತಿದ್ದಿಲ್ಲ. ವ್ಯಕ್ತಿತ್ವದ ಬೆಳವಣಿಗೆಯು ಮತಧಾರ್ಮಿಕ ಕರ್ಮ, ದಾನಧರ್ಮ, ನಾಗರಿಕ ಕರ್ತವ್ಯ. ಅಧ್ಯಯನ, ವಿವೇಕ, ತ್ಯಾಗಬುದ್ಧಿ ಮುಂತಾದವುಗಳಿಂದ ಸಾಧ್ಯ ಎಂದು ಗ್ರಹಿಸಲ್ಪಟ್ಟಿತ್ತು. ಆದರೆ ಇವುಗಳಲ್ಲಿ ಪ್ರತಿಯೊಂದನ್ನೂ ಒಬ್ಬ ಕೆಲಕಾಲ ಮಾತ್ರ ಸ್ವೀಕರಿಸಬಹುದಾಗಿರುವುದರಿಂದ ಮತ್ತು ಹಾಗೆ ತಿಳಿದೋ ತಿಳಿಯದೆಯೋ ಸ್ವೀಕರಿಸಿ ಆ ಮೂಲಕ ಕ್ರಮೇಣ ಅನ್ಯರ ಮೇಲೆ ಪ್ರಭುತ್ವವನ್ನು ಸಂಪಾದಿಸಿ ತನ್ನ ಸ್ವಾರ್ಥಸಾಧನೆಗಾಗಿ ಅವರನ್ನು ಶೋಷಿಸಬಹುದಾದುದರಿಂದ ಯಾವುದಾದರೂ ಒಂದು ಕರ್ಮವು ಧರ್ಮಾನುರೂಪವಾಗಿ ನಡೆಯುತ್ತಿದೆಯೋ ಅಥವಾ ತದ್ವಿರುದ್ಧವಾಗಿ ನಡೆಯುತ್ತಿದೆಯೋ ಎಂಬುದನ್ನು ನಿರ್ಣಯಿಸುವ ಪೂರ್ವದಲ್ಲಿ ಅದರ ಪ್ರಚ್ಛನ್ನ ಲಕ್ಷ್ಯಗಳನ್ನೂ ಇಡೀ ಸಮಾಜದ ಮೇಲೆ ಅದರಿಂದಾದ ಪರಿಣಾಮಗಳನ್ನೂ ತೂಗಿ ನೋಡಲಾಗುತ್ತಿತ್ತು.

ಈ ಅಂಶಕ್ಕೆ ರಾವಣನನ್ನು ಉದಾಹರಣೆಯನ್ನಾಗಿ ತೆಗೆದುಕೊಳ್ಳಬಹುದು. ಆತನಿಗೆ ಬ್ರಾಹ್ಮಣಜನ್ಮವಿತ್ತು, ವೇದಾಧ್ಯಯನವಾಗಿತ್ತು. ಕಾಲಕ್ರಮೇಣ ಆತನೂ, ಆತನ ಮಗನೂ ತಮ್ಮನಾದ ಕುಂಭಕರ್ಣನೂ ದೇವಾತುನುಗ್ರಹವನ್ನು ಪಡೆಯಲು ಮಹೋಗ್ರ ತಪಸ್ಸನ್ನು ಮಾಡಿದರು ಮತ್ತು ಆ ಮೂಲಕ ಅದನ್ನೂ ಪಡೆದೂ ಪಡೆದರು; ಅಂಥ ಅನುಗ್ರಹವನ್ನು ಪಡೆಯಲು ಎಷ್ಟೋ ಜನ ಋಷಿಗಳಿಗೆ ಇಡೀ ಜೀವಮಾನವೆಲ್ಲಾ ಪ್ರಯತ್ನಿಸಬೇಕಾಗುತ್ತಿತ್ತು. ಇಷ್ಟಾದರೂ ಅವರಿಗಾದ ದಿವ್ಯದರ್ಶನ ಮಾಯವಾಗಿ, ವರಗಳು ಅವರಿಗೆ ಸಿಕ್ಕಿದಕೂಡಲೇ, ಅವರು ತಮಗೆ ದೊರೆತ ಅಧಿಕ ಸಾಮರ್ಥ್ಯವನ್ನು ಲೋಕೋದ್ಧಾರಕ್ಕಾಗಿ ಬಳಸುವುದರ ಬದಲು, ಸಾತ್ವಿಕರ ಶೋಷಣೆಗಾಗಿ ಬಳಸಿದರು. ಅವರಲ್ಲೂ ಹೆಚ್ಚಾಗಿ ರಾವಣನ

ಮಗನಿಗೆ ಯಜ್ಞ ಮಾಡಲು ತನ್ನವೇ ಆದ ಅನುಕೂಲ ಕಾರಣಗಳಿದ್ದವು; ಆದರೆ ವರಗಳು ಆತನ ತಂದೆಯಲ್ಲಿ ಮತ್ತು ಇತರ ಪ್ರತಿಯೊಬ್ಬ ದೈತ್ಯಸ್ವಭಾವದವನಲ್ಲಿ ಹೇಗೋ ಹಾಗೇ ಆತನಲ್ಲಿಯೂ, ಕೃತಕವಾಗಿ ಆವಾಹಿಸಿಕೊಂಡಿದ್ದ ಧರ್ಮಬುದ್ಧಿಯನ್ನು ಸಡಿಲಿಸಿ,(ಸನ್ಮಾರ್ಗೋನ್ಮುಖ) ಮನಸ್ಸು ತನಗೆ ಸಹಜವಾಗಿದ್ದ ಆಕ್ರಮಣಶೀಲ ಮತ್ತು ಕೊಲೆಪಾತಕ ಮಟ್ಟಗಳತ್ತ ಒಲೆಯಿತು. ಆದುದರಿಂದ ದೇವತಾ ಕೃಪೆಯಿಂದ ಬಂದ ಅಸಾಧಾರಣ ಶಕ್ತಿಯನ್ನು ಆ ದೈತ್ಯರು ತಮ್ಮ ದುರುದ್ದೇಶಗಳನ್ನು ಸಾಧಿಸಿಕೊಳ್ಳಲು ಬಳಸಿದರಲ್ಲದೆ, ಧರ್ಮಾಭಿವೃದ್ಧಿಗಾಗಿ ಬಳಸಲಿಲ್ಲ. ಆದುದರಿಂದಲೇ ಕಾಡಿನಲ್ಲಿ ವಿಶ್ವಾಮಿತ್ರಾದಿ ಮುನಿಗಳ ಯಜ್ಞಯಾಗಗಳನ್ನು ಸಂರಕ್ಷಿಸಲು ಯುದ್ಧಮಾಡಿ ರಾಮನೇ ಇಂದ್ರಜಿತ್ತಿನ ಹೋಮನೇಮಗಳನ್ನು ಮೊದಲು ಭಂಗಿಸಿ, ಆ ಮೂಲಕ ಅವನು ಪಡೆಯುತ್ತಿದ್ದ ಅಪ್ರತಿಭಟನೀಯ ಶಕ್ತಿಯ ಆಕರವನ್ನು ನಾಶ ಮಾಡಿ, ಅನಂತರ ಅವನನ್ನೇ ಕೊಲ್ಲಬೇಕಾಗಿ ಬಂದಿತು. ಯಜ್ಞಯಾಗ–ಹೋಮನೇಮಗಳೂ, ತಪಸ್ಸುಗಳೂ, ದೇವತಾ ಸಾಕ್ಷಾತ್ಕಾರಗಳೂ ಧಾರ್ಮಿಕ ಜೀವನದ ಲಕ್ಷಣಗಳೆಂಬುದೇನೋ ನಿಜ; ಆದರೆ ಅವು ಆಕ್ರಮಣಶೀಲವೂ ಸಂಕುಚಿತವೂ ಆದ ಅಹಂಕಾರದ ಕಿಡಿಗಳನ್ನು ಮುಂದೊಗೆದಾಗ ಮಾತ್ರ ಧರ್ಮವಿರುದ್ಧವೆಂದು ಗಣಿಸಲ್ಪಡುತ್ತಿದ್ದವು. ಸರ್ವಭೂತಹಿತಕರ ಸಾತ್ವಿಕ ಚಟುವಟಿಕೆಗಳಲ್ಲಿ ಪರಿಣಮಿಸಿದಾಗಲೇ ಧರ್ಮಾನುರುದ್ಧವೆಂದು ಗ್ರಹಿಸಲ್ಪಡುತ್ತಿದ್ದವು.

## ವಿಭೀಷಣ

ವಿಭೀಷಣನ ನಡತೆಯು(ಅವನ ಸೋದರರ ನಡತೆಗೆ) ಅಚ್ಚರಿ ಪಡುವಷ್ಟು ವಿರುದ್ಧವಾಗಿತ್ತು. ಆತನು ರಾವಣನಂತೆಯೇ ನಿಕಷೆಯ ಮಗ; ಆದರೆ ತನ್ನ ತಪದ ಮೂಲೋದ್ದೇಶಗಳಲ್ಲಿ ಅಣ್ಣನಿಗಿಂತ ಬೇರೆಯೇ ಆಗಿದ್ದನು. ಧರ್ಮವು ಅವನ ಮಾರ್ಗದರ್ಶಕ ತತ್ವವಾಗಿದ್ದುದರಿಂದ ವ್ಯಕ್ತಿವಿಕಾಸದ ಚರಮಸ್ಥಿತಿಯೊಂದೇ ದೇವರ ಕೈಯಿಂದ ಸ್ವೀಕರಿಬಹುದಾದ ವರ ಎಂದಷ್ಟೇ ಅವನು ವಿಚಾರ ಮಾಡಬಲ್ಲವನಾಗಿದ್ದ. ಅಂಜಲಿಹಸ್ತನಾಗಿ ಆತನೆಂದ: 'ಎಂಥ ಅಪಾಯದಲ್ಲಿ ಬಿದ್ದಾಗಲೂ ನನ್ನ ಮನಸ್ಸು ಧರ್ಮದಲ್ಲೇ ನೆಲೆಸಿರಲಿ. ಯಾವ ಉಪದೇಶವೂ ಇಲ್ಲದೆಯೇ ನನಗೆ ನಿಜವಾದ ಜ್ಞಾನವು ದೊರಕಲಿ!' ಪ್ರಹ್ಲಾದನಲ್ಲಿ ಹೇಗೋ ಹಾಗೇ ರಾಕ್ಷಸ ಜನ್ಮ ಮತ್ತು ಸಹಜವಾದ ಬಾಂಧವ–ರಾಜ–ದೇಶಗಳ ಮೇಲಿನ ಪ್ರೀತಿಗಳನ್ನು ಮೀರಿ ಧರ್ಮವು ಆವಿರ್ಭವಿಸಿ ನಿಲ್ಲುವ ಒಂದೇ ಒಂದು ನಿದರ್ಶನ–ಇವನ್ನು ನಾವು ವಿಭೀಷಣನಲ್ಲಿ ಕಾಣಬಲ್ಲೆವು. ಪ್ರತಿಯೊಬ್ಬ ಧರ್ಮಾನುಯಾಯಿಯೂ ತಪ್ಪದೆ ಪಡೆದಿರುವಂತೆ ಸ್ವಚ್ಛ ದೃಷ್ಟಿಯನ್ನೂ, ಸಾಮರ್ಥ್ಯವನ್ನೂ ಪಡೆದಿದ್ದ ವಿಭೀಷಣನು ತನ್ನ ಅಣ್ಣನಾದ ರಾವಣನು ಎಷ್ಟರ ಮಟ್ಟಿಗೆ ಧರ್ಮಮಾರ್ಗದಿಂದ ದೂರ ಸರಿದು ವಿನಾಶೋನ್ಮುಖನಾಗಿದ್ದಾನೆ ಎಂಬುದನ್ನು ಬಹುಬೇಗ ಅರಿತುಕೊಂಡನು. ಅಣ್ಣನ ರಾಜಸಭೆಯಲ್ಲಿ ಆತನು ನಿರ್ಭಯವಾಗಿ ತನಗೆನ್ನಿಸಿದ್ದನ್ನು ಹೇಳಿದನು. ಅಣ್ಣನು ತನ್ನ ನಿರ್ಧಾರವನ್ನು ಬದಲಾಯಿಸುವಂತೆ

ಮಾಡಲು ತನ್ನಲ್ಲಿರುವ ಶಕ್ತಿ ಎಲ್ಲವನ್ನೂ ವ್ಯಯಿಸಿದ ಮೇಲೆಯೇ ಆತ ರಾಮನಿಗೂ ಅವನ ಸೈನ್ಯಕ್ಕೂ ಶರಣಾಗತನಾಗಿ ಹೋದದ್ದು. ನಿಜವಾದ ದೈವಭಕ್ತನೂ ಕರ್ಮಶೂರನೂ ಆಗಿದ್ದುದರಿಂದಲೇ ಆತ ರಾಮನು ತನ್ನಲ್ಲಿಟ್ಟಿದ್ದ ವಿಶ್ವಾಸವು ಅನುಚಿತವಲ್ಲವೆಂಬುದನ್ನು ಸಂಪೂರ್ಣವಾಗಿ ಸಮರ್ಥಿಸಿ ತೋರಿಸಿದನು. ಯಾವಾಗಲೂ ಅವನು ದಂಡಿನ ಮುಂಚೂಣಿಯಲ್ಲಿ ನಿಂತೇ ಯುದ್ಧ ಮಾಡುತ್ತಿದ್ದನು. ಪ್ರತಿಯೊಂದು ಸಂಕಟದ ಅವಧಿಯಲ್ಲೂ ವಿಭೀಷಣನ ಶಾಂತತೆ, ವಿವೇಕ ಮತ್ತುಪ್ರತ್ಯುತ್ಪನ್ನಮತಿಗಳೇ ಸೈನಿಕರಲ್ಲಿ ಧೈರ್ಯವನ್ನು ಹುಟ್ಟಿಸಿ ಯುದ್ಧದ ಭವಿಷ್ಯವನ್ನು ಬದಲಾಯಿಸಿದ್ದು. ರಾಮ–ಲಕ್ಷ್ಮಣರನ್ನು ಎರಡನೆಯ ಸಲ ಇಂದ್ರಜಿತ್ತು ಸೋಲಿಸಿದ್ದು, [೨೬] ಅವನು ನಿಕುಂಭಲದಲ್ಲಿ ವಿಶೇಷವಾಗಿ ಹೋಮಾದಿಗಳನ್ನು ನಡೆಸಿದ್ದು, ಮಾಯಾ ಸೀತಾಪಹರಣವನ್ನು ಮಾಡಿದ್ದು[೨೭] ಮುಂತಾದವು ಅಂಥ ಸಂಕಟದ ದೃಷ್ಟಾಂತಗಳು. ದೈವಕೃಪೆ ಮತ್ತು ಅನುವಂಶಿಕ ಉತ್ತಮಾಂಶಗಳನ್ನು ಸ್ವಾರ್ಥ ಸಾಧನೆಗಾಗಿ ಹಾಳುಮಾಡುವವರನ್ನು ರಾವಣನು ಪ್ರತಿನಿಧಿಸಿದರೆ, ಅನುವಂಶಿಕ ಅಧಮಾಂಶಗಳನ್ನೂ ಕೆಟ್ಟ ಆವರಣದ ಪ್ರಲೋಭನೆ ಮತ್ತು ಅಪಾಯಗಳನ್ನೂ ಕ್ರಮಬದ್ಧವಾಗಿ ಗೆದ್ದು ಧರ್ಮಕ್ಕೆ ಅಂಟಿಕೊಂಡ ಧೀರೋದಾತ್ತ ಆತ್ಮಗಳನ್ನು ವಿಭೀಷಣನು ಪ್ರತಿನಿಧಿಸುತ್ತಾನೆ.

## ಹನುಮಂತ

ರಾಕ್ಷಸರಲ್ಲಿ ವಿಭೀಷಣನಿದ್ದ ಹಾಗೆ ವಾನರರಲ್ಲಿ ಹನುಮಂತನಿದ್ದ. ಈ ಇಬ್ಬರೂ ವಿಶ್ವಸನೀಯ, ನಿಷ್ಠಾವಂತರು, ಬಲಿಷ್ಠರು, ಮೇಧಾವಿಗಳು ಮತ್ತು ದೀರ್ಘಾಯುಷಿಗಳು. ವಾಲ್ಮೀಕಿ ಕೊಟ್ಟಿರುವ ಹಲವಾರು ಸುಂದರವಾದ ಸದೃಶ ಪಾತ್ರಗಳಿಗೆ ಇವರದೊಂದು ಮಾದರಿ. ಪ್ರಥಮ ಸಂದರ್ಶನದ ಕಾಲದಿಂದಲೇ ರಾಮನು ಹನುಮಂತನ ಬಗ್ಗೆ ಬಹಳ ಗೌರವವನ್ನು ತಾಳಿದ್ದನು. ಲಕ್ಷ್ಮಣನತ್ತ ತಿರುಗಿ ಆತನೆಂದ 'ವೇದ–ವೇದಾಂಗಗಳನ್ನು ಅಭ್ಯಸಿಸದೆ ಯಾರೂ ಹೀಗೆ ಮಾತನಾಡಲಾರರು; ಅಷ್ಟೇ ಅಲ್ಲ–ಈತನ ಮುಖಚರ್ಯೆ, ಕಣ್ಣು, ಹಣೆ, ಹುಬ್ಬು ಅಥವಾ ಇತರ ಯಾವ ಅಂಗದಲ್ಲೂ ನ್ಯೂನತೆಯೆಂಬುದಿಲ್ಲ. ಈತನ ಸ್ವರಭಾವವು ಆಶ್ಚರ್ಯಕರ, ಶುಭಕರ ಮತ್ತು ಆಕರ್ಷಕವಾಗಿದೆ. (ಇವನ ಮಾತಿಗೆ) ಕತ್ತಿಯೆತ್ತಿದ ಹಗೆ ಕೂಡ ಕರಗದಿರನು. ಇಷ್ಟು ಸುಸಂಸ್ಕೃತ ರಾಯಭಾರಿಗಳನ್ನು ಪಡೆದ ದೊರೆಗೆ ಜಯವು ಕಾದಿರುತ್ತದೆ.'[೨೮] ಮೂಡುವ ನೇಸರ ಮುಂದೆ ತಾವರೆ ದಳ ಬಿಚ್ಚುವಂತೆ ವಿವಿಧ ಮುಖಗಳ ಧರ್ಮವನ್ನು ಪ್ರತಿನಿಧಿಸಿದ ಶ್ರೀರಾಮನ ಚರಣಾರವಿಂದದತ್ತ ಹನುಮಂತನ ಹೃದಯ ಅಪ್ರತಿರುದ್ಧವಾಗಿ ಹರಿಯಿತು. ಶ್ರೀರಾಮನು ಅಗ ಅವನ ಸ್ವಯಂವೃತ ಆಧ್ಯಾತ್ಮಿಕ ಧ್ಯೇಯಸ್ವರೂಪನೆನ್ನಿಸಿದನು ಮತ್ತು ಶ್ರೀರಾಮನ ಯೋಗಕ್ಷೇಮದ ಸಂವರ್ಧನೆಗಾಗಿ ತನ್ನ ಬಾಳನ್ನು ಮುಡಿಪಾಗಿಡಲು ಅವನು ಕೂಡಲೇ ನಿರ್ಧರಿಸಿದನು. ರಾಮನ ಅಥವಾ ಸೀತೆಯ ಹೆಸರು ಅವನ ಅಂಗಾಂಗಳಲ್ಲಿ ತೀರಲಾರದಷ್ಟು ಚೈತನ್ಯವನ್ನು ತುಂಬುತ್ತಿತ್ತು. ಅದೇ ಅವನು ಸಾಧಿಸಿದ ವಿಸ್ಮಯಕಾರಕವಾದ ಸಿದ್ಧಿಗಳ ಹಿಂದಿರುವ

ರಹಸ್ಯ. ಅವರ ಕೋಟೆಯೊಳಗಣ ನಗರದಲ್ಲಿಯೇ ಯಾರ ನೆರವೂ ಇಲ್ಲದೆ ರಾಮನ ಸೇವಕನಾದ ತಾನೊಬ್ಬನೇ ಒಂದು ದಾಳಿಯನ್ನು ಮಾಡಿ ಆ ಮೂಲಕ ರಾಕ್ಷಸರಿಗೆ ರಾಮನ ಸಾಮರ್ಥ್ಯವನ್ನು ಸಾಂಕೇತಿಕವಾಗಿ ತೋರಿಸಿ,ಅವರ ಮನಸ್ಸಿನ ಮೇಲೆ ಪರಿಣಾಮ ಬೀರಬೇಕು ಎಂಬುದು ಅವನ ತರ್ಕವಾಗಿತ್ತು. ಆದುದರಿಂದ ಅವನು ರಾವಣನ ಉದ್ಯಾನವನ್ನು ನಾಶಮಾಡಿ, ಲಂಕೆಯ ದೇವತೆಗಳಿಗೆ ಮೀಸಲಾಗಿದ್ದ ಸುಂದರ ಸೌಧವನ್ನು ಒಡೆದನು: 'ನಾನು ಧೀರೋದಾತ್ತ ಕರ್ಮಗಳಿಗೆ ಹೆಸರಾದ ಕೋಸಲ ಚಕ್ರವರ್ತಿ ಶ್ರೀರಾಮನ ಸೇವಕನು. ಹೋರಾಟದಲ್ಲಿ ಸಾವಿರ ರಾವಣರು ನನ್ನನ್ನು ಎದುರಿಸಲಾರರು. ಎಲ್ಲ ರಾಕ್ಷಸರ ಕಣ್ಣೆದುರಿಗೇ ಈ ನಗರವನ್ನು ಹಾಳುಮಾಡಿ, ಸೀತೆಗೆ ನಮಿಸಿ ನನ್ನ ಕಾರ್ಯವನ್ನು ಸಾಧಿಸಿಕೊಂಡು ಹಿಂದಿರುಗುತ್ತೇನೆ.'[೨೯] ಎಂದು ರಾಕ್ಷಸರನ್ನು ಹಿಂದಕ್ಕೆ ಹೊಡೆದೋಡಿಸುತ್ತ–ಧೀರ ರಣಾಹ್ವಾನವನ್ನು ಅವರಿಗೆ ಕೊಟ್ಟನು.

ಸೀತೆಯನ್ನು(ಲಂಕೆಯಲ್ಲಿ) ಹುಡುಕುವಾಗ ಅವನು ಎಷ್ಟೋ ಜನ ಮಲಗಿದ ಹೆಂಗಸರ ಮೇಲೆ ಕಣ್ಣು ಹಾಯಿಸಬೇಕಾಯಿತು. ಶುದ್ಧ ಬ್ರಹ್ಮಚಾರಿಯಾಗಿದ್ದ ಆತನಿಗೆ ಇದರಿಂದ ಕಳವಳ ಉಂಟಾಯಿತು. ಆಗ ಆತನು ಉಗ್ರವಾಗಿ ಆತ್ಮಶೋಧ ಮಾಡಿಕೊಂಡನು; ಅಂಥ ಬಿಗಿಯಾದ ವಿಚಾರ ವಿಮರ್ಶೆಗಳಿಂದ–ತನ್ನ ಮನಸ್ಸು ನಿಷ್ಕಲ್ಮಷವಾಗಿದೆ. ತನ್ನಿಂದ ಧರ್ಮಭಂಗ ಸ್ವಲ್ಪವೂ ಆಗಲಿಲ್ಲ–ಎಂಬುದನ್ನು ಖಾತ್ರಿ ಮಾಡಿಕೊಂಡನು.[೩೦]

ದೇವರ ನಾಮಸ್ಮರಣೆಯೊಡನೆ ಸ್ಥೂಲ–ಸೂಕ್ಷ್ಮ ಶರೀರಗಳನ್ನು ಕಲಸಿ ಒಗೆಯುವ ಅರ್ಥದ ಮುಕ್ತಿಯು ಜೀವನದ ಗುರಿಯೆಂಬುದು ಅವನಿಗೆ ಸೇರಲಿಲ್ಲ.ಅಯೋಧ್ಯೆಯಲ್ಲಿ ಶ್ರೀರಾಮನ ಪಟ್ಟಾಭಿಷೇಕ ನಡೆದ ಮೇಲೆ ಅವನು ರಾಮನನ್ನು ಕುರಿತು, 'ನಿನ್ನಲ್ಲಿರುವ ನನ್ನ ಭಕ್ತಿ ಅವಿಚಲಿತವಾಗಲಿ; ಇನ್ನಾವ ಪದಾರ್ಥದ ಸಂಗವನ್ನೂ ನನ್ನ ಮನಸ್ಸು ಕಲ್ಪಿಸಿಕೊಳ್ಳದಿರಲಿ; ಬುವಿಯಲ್ಲಿ ನಿನ್ನ ಕತೆ ಪ್ರಚಲಿತವಾಗಿ ಇರುವವರೆಗೆ ನಾನು ಬದುಕಿ ಇರುವಂತೆಯೂ ಅನುಗ್ರಹಿಸಿ!' ಎಂದು ಪ್ರಾರ್ಥಿಸಿದನು. ಧರ್ಮವನ್ನೂ, ಅದರ ಸೂಕ್ಷ್ಮ ಅಭಿವ್ಯಕ್ತಿಗಳನ್ನೂ ಬಲ್ಲ ಶ್ರೀರಾಮಚಂದ್ರನು ಸರಯೂ ನದಿಯ ನೀರಿನಲ್ಲಿ ಕೊನೆಯ ಸ್ನಾನವನ್ನು ಮಾಡಲೆಂದು ಇತರರೊಡನೆ ಹೊರಡುವ ಮೊದಲು ತನ್ನ ಭಕ್ತನಾದ ಹನುಮಂತನಿಗೆ ಅವನ ಈ ಬೇಡಿಕೆಯನ್ನು ಸಂತೋಷದಿಂದ ಸಲ್ಲಿಸಿದನು.

## ವಾಲಿ ಮತ್ತು ಸುಗ್ರೀವ

ವಾಲಿ–ಸುಗ್ರೀವರ ಪಾತ್ರಗಳದ್ದು ಇನ್ನೊಂದು ಜೋಡಿ. ಈ ರಾಜಸೋದರರಿಗೂ ಶ್ರೀರಾಮನಿಗೂ ಉಂಟಾದ ಮತ್ತು ಇವರೊಳಗೆ ಪರಸ್ಪರ ಇದ್ದ ಸಂಬಂಧಗಳು ಧರ್ಮದ ಇತರ ಮುಖಗಳು ಕಾರ್ಯರೂಪಕ್ಕೆ ಬಂದದ್ದನ್ನು ಹೊರಗೆಡಹುತ್ತದೆ. ಬಹುಕಾಲ ಪ್ರೇಮದಿಂದ ಒಂದಾಗಿ ಬಾಳುತ್ತಿದ್ದರೂ ಈ ಸೋದರರು ಒಂದು ಚಿಕ್ಕ ತಪ್ಪು ತಿಳಿವಳಿಕೆಯ ದೆಸೆಯಿಂದ ಮರಣಾಂತಿಕವಾಗಿ ಹಗೆಗಳಾದರು. ಮಾಯಾವಿ

ಎಂಬ ಅಸುರನಿಂದ ವಾಲಿಯು ಗವಿಯಲ್ಲಿ ಕೊಲ್ಲಲ್ಪಟ್ಟನೆಂದು(ಕಿಷ್ಕಿಂದೆಯಲ್ಲಿ) ಎಲ್ಲರೂ ಪ್ರಾಮಾಣಿಕವಾಗಿ ನಂಬಿದ್ದರು. ಆದ್ದರಿಂದ ಮಂತ್ರಿಗಳೂ ನಾಗರಿಕರೂ ಏಕಮತರಾಗಿ ಬಯಸಿದ್ದರಿಂದ ಸುಗ್ರೀವನು ರಾಜ್ಯಭಾರವನ್ನು ವಹಿಸಿಕೊಳ್ಳಲು ಒಪ್ಪಿದ ಮತ್ತು ಅವರು ಇವನನ್ನು ಒತ್ತಾಯದಿಂದಗದ್ದುಗೆಗೆ ಏರಿಸಿದರು. ಗವಿಯಲ್ಲಿ ವಾಲಿಯು ಮಾಯಾವಿಯನ್ನು ವಧಿಸಿ ಅಲ್ಲಿಂದ ತಪ್ಪಿಸಿಕೊಂಡು ಹೊರಬಿದ್ದ. ಆದರೆ ಆತನಿಗೆ ಎಲ್ಲ ವಿಷಯಗಳನ್ನೂ ಹೊರಪಡಿಸಿ ನೋಡುವ ತಾಳ್ಮೆಯಾಗಲಿ, ತನ್ನ ಮರೆವೊಕ್ಕ ತಮ್ಮನಿತ್ತ ವಿವರಣೆಯನ್ನು ನಂಬುವ ಔದಾರ್ಯವಾಗಲಿ ಉಂಟಾಗಲಿಲ್ಲ. ಅಂಥ ಪರಿಸ್ಥಿತಿಯಲ್ಲಿ ಯಾರಿಗಾದರೂ ಕೂಡಲೇ ಸಿಟ್ಟು ಬರುವುದು ಸಹಜ; ಆದರೆ ಸೋದರಸ್ನೇಹವು ಉಚಿತಾವಧಿಯೊಳಗೆ ಅದನ್ನು ಶಮನಗೊಳಿಸಲು ಅವಕಾಶ ಕೊಟ್ಟರೆ ಮಾತ್ರ ಅದು ನ್ಯಾಯವೆನ್ನಿಸೀತು. ತದ್ವಿರುದ್ಧವಾಗಿ ವಾಲಿಯು ಸುಗ್ರೀವನನ್ನು ಬೆನ್ನಟ್ಟಿಕೊಂಡು ಹೋಗಿ ಅವನ ಮೇಲೆ ಪರಮಾಧಿಕವಾಗಿ ಸೇಡು ತೀರಿಸಿಕೊಳ್ಳಬೇಕೆಂದು ತನ್ನ ಮಹೋನ್ನತ ಸಾಮರ್ಥ್ಯವೆಲ್ಲವನ್ನೂ ಬಳಸಿದನು. ಒಬ್ಬ ಮುನಿಯ ಶಾಪದ ದೆಸೆಯಿಂದ ಅರಣ್ಯಸ್ಥಳವೊಂದರಲ್ಲಿ ವಾಲಿಯು ಹೋಗಲಾರದಂತಾಗಿದ್ದ ಮಾತ್ರದಿಂದ ಸುಗ್ರೀವನೂ ಹನುಮಂತನನ್ನೊಳಗೊಂಡ ಅವನ ಇತರ ಗೆಳೆಯರೂ ಆ ಸ್ಥಳದಲ್ಲಿ ಜೀವದಿಂದ ಉಳಿಯಲು ಸಾಧ್ಯವಾಯಿತು. ಪರಾಕ್ರಮ ತನ್ನಲ್ಲಿದ್ದರೂ ರಾವಣನು ರಾಮನ ಹೆಂಡತಿಯನ್ನು ಕದ್ದೊಯ್ಯಲು ಕೆಳಮಟ್ಟಕ್ಕಿಳಿದನು. ವಾಲಿಯಾದರೋ ರಾವಣನಿಗಿಂತ ಹೆಚ್ಚಾಗಿದ್ದ ತನ್ನ ಬಲವನ್ನು ಸುಗ್ರೀವನಿಂದ ತಾರೆಯನ್ನು* ಸೆರೆಹಿಡಿದೊಯ್ಯಲು ಬಳಸಿದನು. ಧರ್ಮದಿಂದಲೋ ಅಧರ್ಮದಿಂದಲೋ, ಹೇಗಾದರೂ ಸೀತೆಯನ್ನು ಕರೆತಂದರೆ ಸರಿ–ಎಂಬ ವಿಚಾರವಷ್ಟೇ ಇದ್ದಿದ್ದರೆ, ನಿಸ್ಸಂದೇಹವಾಗಿ ರಾಮನಿಗೆ ವಾಲಿಯೇ ಹೆಚ್ಚಿನ ನೆರವಿಗನಾಗುತ್ತಿದ್ದ; ಏಕೆಂದರೆ ವಾಲಿ ಈ ಮೊದಲೇ ಒಮ್ಮೆ ರಾವಣನನ್ನು ಸೋಲಿಸಿ ದೈನ್ಯಾವಸ್ಥೆಗೆ ಇಳಿಸಿಬಿಟ್ಟಿದ್ದ. ಆದರೆ ರಾಮನ ವ್ಯಕ್ತಿಗತವಾದ ಉದ್ದೇಶ ಸಾಧನೆಯು ಧರ್ಮದ ವಿಶಾಲ ಮುಖಗಳನ್ನು ಉಳಿಸಿಕೊಂಡು ಹೋಗಬೇಕೆಂಬ ಯೋಜನೆಗೆ ಹೊಂದಿಕೆಯಾಗಬೇಕಾದರೆ–ಹಾಗೆ ಹೊಂದಿಕೊಂಡು ಹೋಗಲೇಬೇಕಾಗಿದ್ದುದರಿಂದ–ಸುಗ್ರೀವನ ಗೆಳೆತನವನ್ನು ಮಾಡಿಕೊಳ್ಳುವುದೇ ಅವನಿಗೆ ಯುಕ್ತವಾದ ಪ್ರತಿವರ್ತನವಾಗಿತ್ತು. ಆಗ ನಿಷ್ಠೆಯಿಂದ ರಾಮನ ಪರವಾಗಿ ಅಪಾಯವನ್ನೆದುರಿಸುವುದರ ಮೂಲಕ ಸುಗ್ರೀವನ ಆತ್ಮವಿಕಾಸವಾಗುವುದು ಮತ್ತು ವಾಲಿಯ ಆತ್ಮವಿಕಾಸವು ಅವನ ಜಂಭವನ್ನು ಇಳಿಸುವುದರ ಮೂಲಕ ಮತ್ತು ಅವನ ಅನುಗ್ರಹಮೂಲವಾಗಿದ್ದರೂ ಖಾತ್ರಿಯಾಗಿದ್ದ ಸಂರಕ್ಷಣೆಯನ್ನು ಸ್ವೀಕರಿಸಲು ಒಪ್ಪದಿರುವುದರ ಮೂಲಕ ಪೂರ್ಣಗೊಳಿಸಲ್ಪಡುವುದು. ಸಾಕ್ಷಾತ್ತಾಗಿ(ರಾಮ–ರಾವಣ) ಸಂಗ್ರಾಮ ಪ್ರಾರಂಭವಾಗುವ ಮೊದಲು ಒಮ್ಮೆ ನಡೆದ ತುಮುಲದಲ್ಲಿಯೇ ರಾಮನ ಹಿತಸಂರಕ್ಷಣೆಗಾಗಿ ಆತ ಸ್ವಾರ್ಥಭಾವಗಳೆಲ್ಲವನ್ನೂ ಮರೆತುಬಿಡಬಲ್ಲನೆಂಬುದು

* 'ರುಮೆಯನ್ನು' ಎಂದಿರಬೇಕು–ಭಾಷಾಂತರಕಾರ

ಸ್ಪಷ್ಟವಾಯಿತು. ಒಂದೇ ಹೊಡೆತದಿಂದ ರಾವಣದ ಕಿರೀಟವನ್ನು ಹಾರಿಸಿದ ಸುಗ್ರೀವನು, 'ನಾನು ಶ್ರೀರಾಮನ ಸ್ನೇಹಿತನೂ ಹೌದು, ಬಂಟನೂ ಹೌದು; ಜಗದೀಶ್ವರನ ಶಕ್ತಿಯ ಬೆಂಬಲವನ್ನು ಪಡೆದಿರುವ ನನ್ನಿಂದ ನೀನಿಂದು ತಪ್ಪಿಸಿಕೊಂಡು ಹೋಗಲಾರೆ.'[೩೧] ಎಂದು ಗದರಿದನು. ಅಂಥ ಅಪಾಯಕ್ಕೆ ತನ್ನನ್ನು ಈಡುಮಾಡಿಕೊಂಡದ್ದಕ್ಕಾಗಿ ರಾಮಚಂದ್ರನು ಸುಗ್ರೀವನನ್ನು ತರಾಟೆಗೆ ತೆಗೆದುಕೊಳ್ಳದೆ ಬಿಡಲಿಲ್ಲ. ಆದರೆ ನಿಷ್ಠನಾದ ಸುಗ್ರೀವನ ಉತ್ತರ ಕಾದೇ ಇತ್ತು; 'ನನ್ನ ಬಲ ನನಗೆ ಗೊತ್ತಿರುವಾಗ ನಿನ್ನ ರಾಣಿಯನ್ನು ಹೊತ್ತುಕೊಂಡ ಹೋದ ದುರಾತ್ಮನನ್ನು ಕಂಡು ನಾನು ಹೇಗೆ ಸಂಯಮವನ್ನು ವಹಿಸಿಕೊಳ್ಳಲಿ?'[೩೨]ವಾಲಿಯು ಕೊನೆಗೆ ಸುಗ್ರೀವನೊಡನೆ ರಾಜಿಮಾಡಿಕೊಂಡಿದ್ದು, ತಾರೆ ಅಂಗದರ ಭವಿಷ್ಯದ ಬಗ್ಗೆ ಅವನು ಚಿಂತೆ ಹಚ್ಚಿಕೊಂಡದ್ದು ಮತ್ತು ಅನೇಕ ಬಾರಿ ಯುದ್ಧದಲ್ಲಿ ತನ್ನನ್ನು ಜೀವಸಹಿತ ಉಳಿಸಿದ ಔದಾರ್ಯವನ್ನು ಗಣಿಸದೆ ತಾನು ಅಣ್ಣನ ಮರಣವನ್ನು ಬಯಸಿದ ಬಗ್ಗೆ ಸುಗ್ರೀವ ಪಟ್ಟ ಪಶ್ಚಾತ್ತಾಪ–ಇವು ಬಹಳ ಹೃದಯಸ್ಪರ್ಶಿಯಾಗಿವೆ. ಈ ವೀರ ಸಹೋದರರು ಏರಿದ ಧರ್ಮದ ಎತ್ತರವನ್ನೂ ತೋರಿಸುತ್ತವೆ.

## ಪಾವಿತ್ರ್ಯ ಮತ್ತು ವೈವಾಹಿಕ ಜೀವನದ ಸಾಧ್ಯತೆಗಳು

ಸೀತೆಯು ಆದರ್ಶ ಪತ್ನಿ. ಹಿಂದಿನ ಕಾಲದಲ್ಲಿ ಪುಣ್ಯ ಗಳಿಸಲು ಅಥವಾ ಆತ್ಮವಿಕಾಸ ಮಾಡಿಕೊಳ್ಳಲು ಗಂಡ ಮಾಡುತ್ತಿದ್ದ ಎಲ್ಲದರಲ್ಲೂ ಹೆಂಡತಿಗೆ ಸಮನಾದ ಪಾಲು ಇತ್ತು. ಅವಳು ಅಂಥ ಕರ್ಮಾನುಷ್ಠಾನಗಳಲ್ಲಿ ಸಾಮಾನ್ಯವಾಗಿ ಅವನೊಡನೆ (ದೀಕ್ಷಾಬದ್ಧಳಾಗಿ) ಕುಳಿತುಕೊಳ್ಳಬೇಕಾಗುತ್ತಿತ್ತು. ಈ ಅರ್ಥದಲ್ಲಿ ಹೆಣ್ಣು ಅಂದು ಗಂಡಿಗೆ ಸಮಾನಸ್ಕಂಧಳಾಗಿದ್ದಳು. ತನ್ನ ದೈನಂದಿನ ಕರ್ಮ–ಧ್ಯಾನಗಳನ್ನು ಮಾಡುವಾಗ ಗಂಡನು ಪರಮಾತ್ಮನಲ್ಲಿ ನಿಷ್ಠನಾಗುತ್ತಿದ್ದಾಗ ಮತ್ತು ಹೆಂಡತಿಯು ಅವನನ್ನು ದೇಹ ಧರಿಸಿ ನಿಂದ ದೇವರೇ ಎಂದು ಭಾವಿಸುತ್ತಿದ್ದಾಗ, ಅವರ ವಿವಾಹಜೀವನವನ್ನು ಸಫಲಗೊಳಿಸಲು ಧರ್ಮಾವೇಶಭರಿತರಾದ, ಧೀರೋದಾತ್ತರಾದ ಮಕ್ಕಳು ಅವರಿಗೆ ಹುಟ್ಟದೆ ಇರಲು ಯಾವ ಕಾರಣವೂ ಇದ್ದಿಲ್ಲ. ಮದುವೆಯೊಂದು ಪವಿತ್ರ ವಿಶ್ವಸ್ತ ನಿಧಿ; ಅದು ಕುಟುಂಬ, ದೇಶಗಳಷ್ಟೇ ಅಲ್ಲದೆ ಜಗತ್ತಿನ ಅಪರಿಹಾರ್ಯ ಸಮಸ್ಯೆಗಳನ್ನು ಪರಿಹರಿಸಬಲ್ಲದು. ಹೊಸ ಸಮಸ್ಯೆಗಳನ್ನು ಅದು ತಂದು ಸೇರಿಸದು ಎಂದು ಭಾವಿಸಲು ಗೃಹಸ್ಥಾಶ್ರಮವನ್ನು ಸೇರಬಯಸುವ ಎಲ್ಲರಿಗೂ ಕಲಿಸಲಾಗುತ್ತಿತ್ತು. ಎಲ್ಲರೂ ಅಂಥ ಭಾವನೆಯನ್ನು ಮನ್ನಿಸುತ್ತಿದ್ದರು. ರಾಮನು ಬಾಳುವೆಯನ್ನು ಆಕ್ರಮಣಾವಕಾಶವನ್ನಾಗಿಯೂ, ಕೇವಲ ಭೋಗ ಸಂಧಿಯನ್ನಾಗಿಯೂ ಮಾಡಿಕೊಂಡವರು ಜಗತ್ತಿಗೆ ತಂದೊಡ್ಡಿದ ದುಃಖವನ್ನು ಪರಿಹರಿಸಲು ಬಂದ ದೇವರ ಅವತಾರ ಎಂದು ವಾಲ್ಮೀಕಿಯು ಅಲ್ಲಿ ಇಲ್ಲಿ ನೇರವಾಗಿ ಅಥವಾ ಇತರ ಪಾತ್ರಗಳ ಮೂಲಕ[೩೩] ಹೇಳಿದ್ದಾನೆ. ದಶರಥನೂ, ಅವನ ಪತ್ನಿಯರೂ ಮಾನವ ಕುಲದ ಹಿತದ ದೃಷ್ಟಿಯಿಂದ ತಮ್ಮನ್ನು ದೇವರು ಧರೆಗೆ ಅವತರಿಸಲು ತಕ್ಕ ಪಾತ್ರಗಳನ್ನಾಗಿ ರೂಪಿಸಿಕೊಳ್ಳ ಹೊರಟದ್ದು. ಧರ್ಮಾನುಷ್ಠಾನದಲ್ಲಿ ಆಸಕ್ತರಾದವರನ್ನು

ನ್ಯಾಯವಾಗಿ ನಡೆಸಿದ ವಿವಾಹಜೀವನವು ಹೇಗೆ ಮೇಲೆತ್ತಬಲ್ಲದು ಎಂಬುದನ್ನು ತೋರಿಸುತ್ತದೆ. ರಾವಣನ ತಾಯಿ ನಿಕಷೆಯಲ್ಲಿ[೩೪] ತಲೆದೋರಿದಂತೆ ತಂದೆ–ತಾಯಿಗಳಲ್ಲಿ ಯಾರಾದರೂ ಒಬ್ಬರಲ್ಲಿ ತಾತ್ಕಾಲಿಕ ಮನೋವಿಕಾರ ತಲೆದೋರಿದರೂ ಅದು ಎಂಥ ಅಧ್ಯಯನವಾದರೂ, ತಪಸ್ಸಾದರೂ ಸಂಪೂರ್ಣವಾಗಿ ನಿರ್ಮೂಲ ಮಾಡಲಾರದಂಥ ಆಜನ್ಮ ನ್ಯೂನತೆಯ ದೃಷ್ಟಿಕೋನವನ್ನು ಮಗುವಿನಲ್ಲಿ ಮೂಡಿಸುತ್ತದೆ. ಹಾಗಲ್ಲದೆ ಗರ್ಭಿಣಿಯಾದವಳು ಸದಾಲೋಚನೆಗಳನ್ನು ಉಳ್ಳವಳೂ, ವಿಶಿಷ್ಟ ವ್ರತಾದಿಗಳಲ್ಲಿ ನಿರತಳೂ ಆದರೆ, ಕುಶ–ಲವರಲ್ಲಿ ಕಂಡುಬಂದಂತೆ ಮಕ್ಕಳ ತರಬೇತು ಯಥೇಷ್ಟವಾಗಿ ಪ್ರಗತಿಹೊಂದಿ ಉಪಾಧ್ಯಾಯನ ಕನಿಷ್ಠಾವಧಿಕ ಪ್ರಯತ್ನದಿಂದಲೇ ಅವುಗಳ ವ್ಯಕ್ತಿತ್ವದ ಪರಿಪೂರ್ಣ ಬೆಳವಣಿಗೆಯಾಗುವಂತೆ ಅವುಗಳ ಮನೋಧರ್ಮವನ್ನು[೩೫] ರೂಪಿಸುವುದು ಸಾಧ್ಯವಾಗಿತ್ತು.

## ಸೀತೆ

ಎಷ್ಟೇ ಸತ್ವಪರೀಕ್ಷಾ ಪ್ರಸಂಗಗಳು ಬಂದರೂ ವಿವಾಹಜೀವನದ ತತ್ತ್ವಗಳನ್ನು ಹಿಡಿದ ಸೀತೆಯು ತನ್ನ ಪತಿಗೆ ನಿಷ್ಠಳಾಗಿಯೇ ಉಳಿದಳು. ರಾಮನು ಒಬ್ಬನೇ ಹಾದಿ ಕಾಣದ ಅಡವಿಗೆ ಹೋಗಬೇಕಾಗಿ ಬಂದಾಗ ತಾನು ಹಿಂದೆಬಿದ್ದು ಅರಮನೆಯಲ್ಲಿ ಉಳಿಯುವುದು ತಪ್ಪೆಂದು ಅವಳಿಗನ್ನಿಸಿತು. 'ಎಲ್ಲ ಅವಸ್ಥೆಗಳಲ್ಲೂ ಗಂಡನನ್ನು ಅನುಸರಿಸಲು ನನ್ನ ತಂದೆತಾಯಿಗಳು ನನಗೆ ಕಲಿಸಿದ್ದಾರೆ; ನಾನು ಆ ಪಾಠವನ್ನು ಇಂದು ಆಚರಣೆಗೆ ತರುತ್ತೇನೆ. ಇನ್ನಾವ ಸಲಹೆಯನ್ನೂ ನಾನು ಪಾಲಿಸುವುದಿಲ್ಲ' ಎಂದು ಅವಳು ದೃಢವಾಗಿ ನಿಶ್ಚಯಿಸಿದಳು.[೩೬] ವಿವಾಹವೇದಿಕೆಗೆ ತನ್ನ ತಂದೆ ತನ್ನನ್ನು ಒಯ್ದಂದಿನಿಂದ ಸೀತೆಯು ರಾಮನ ಸುಖವನ್ನು ಮತ್ತು ಕೀರ್ತಿಯನ್ನು ಸಾಧಿಸುವುದೇ ತನ್ನ ಮಾರ್ಗದರ್ಶಕ ತತ್ತ್ವವೆಂದು ತಿಳಿದಿದ್ದಳು. 'ನನ್ನ ಮಗಳಾದ ಈ ಸೀತೆಯನ್ನು ಸರ್ವಧರ್ಮಾಚರಣೆಯಲ್ಲಿಯೂ ನಿನ್ನ ಸಹಭಾಗಿನಿ ಎಂದು ಸ್ವೀಕರಿಸು. ಇವಳು ಉನ್ನತ ಧರ್ಮಶೀಲೆಯೂ, ಪತಿಯಾದ ನಿನ್ನಲ್ಲಿ ನಿಷ್ಠೆಯನ್ನುಳ್ಳವಳೂ, ನಿನ್ನನ್ನು ನೆರಳಿನಂತೆ[೩೭] ಹಿಂಬಾಲಿಸುವವಳೂ ಆಗಲಿ' ಎಂದು ಜನಕನು ರಾಮನನ್ನು ಸಂಬೋಧಿಸಿ ಹೇಳಿದನು. ಈ ಹಾರ್ದಿಕ ಪತಿನಿಷ್ಠೆಯು ಸೀತೆಯ ಸ್ವತಂತ್ರ ವಿಚಾರಶಕ್ತಿಯನ್ನು ನಿರ್ಮೂಲ ಮಾಡಿ ಅವಳನ್ನು ದುರ್ಬಲಗೊಳಿಸುವುದರ ಬದಲು ಅವಳಲ್ಲಿ ತನ್ನ ಅಂತಃಶಕ್ತಿಯ ಬಗ್ಗೆ ಇದ್ದ ಪ್ರಜ್ಞೆಯನ್ನು ಇನ್ನೂ ಹೆಚ್ಚಾಗಿ ಎಚ್ಚರಿಸಿತು. ತನ್ನ ಪಾತಿವ್ರತ್ಯವು ರಾವಣನನ್ನು ಸುಟ್ಟು ಬೂದಿಮಾಡಬಲ್ಲದು ಎಂಬುದು ಗೊತ್ತಿದ್ದರೂ, ಅವಳು ಬೇಕೆಂದೇಅಂಥ ಶಕ್ತಿಯನ್ನು ಬಳಸದೆ ಇದ್ದಳು. ಏಕೆಂದರೆ ವರಗಳೊಡನೆಯೇ ಏರಿದ್ದ ರಾವಣನ ಸೊಕ್ಕನ್ನು ಮುರಿದು ಅವನನ್ನು ಹದಕ್ಕೆ ತರುವ ರಾಮಬಾಣಗಳ ನ್ಯಾಯವಾದ ಹಕ್ಕನ್ನು ಕಸಿದುಕೊಳ್ಳಲು ಅವಳು ಇಷ್ಟಪಡಲಿಲ್ಲ. ಶ್ರೀರಾಮನನ್ನು ನೋಡಬೇಕೆಂಬ ತವಕ ಎಷ್ಟೇ ಇದ್ದರೂ, ಅದರಿಂದಲೇ, ತಾನು ವಾಯುಮಾರ್ಗದಲ್ಲಿ ಹಿಂದಿರುಗುವಾಗ ತನ್ನ ಬೆನ್ನಿನ ಮೇಲೆ ಕುಳ್ಳಿರಿಸಿಕೊಂಡು ಅವಳನ್ನು ರಾವಣನ ಹಿಡಿತದಿಂದ

ಪಾರುಮಾಡುತ್ತೇನೆಂಬ ಹನುಮಂತನ ಸೂಚನೆಗೆ ಅವಳು ಒಪ್ಪಲಿಲ್ಲ. ಭೌತಿಕ ದೃಷ್ಟಿಯಿಂದ ಎಲ್ಲ ಬಗೆಯಲ್ಲೂ ಅಧಿಕ ಸ್ಥಾನದಲ್ಲಿದ್ದ ರಾವಣ ಎದುರಾದಾಗ ಸಂದರ್ಭಕ್ಕೆ ಸಮನಾಗಿ ಎದ್ದು ನಿಂತು ಅವಳು ತನ್ನ ಅರಸುಮನೆತನದ ತೂಕವನ್ನು ಗಂಭೀರವಾಗಿ ಬಿಂಬಿಸಿ ಸ್ತಿಮಿತ ಸ್ವರದಿಂದ ಹೇಳಿದಳು; ‘ರಾವಣಾ, ನಿನಗೆ ಒಳಿತಾಗಲಿ; ದುಃಖಿನಿಯಾದ ನನ್ನನ್ನು ರಾಮನಿದ್ದಲ್ಲಿಗೆ ಕರೆದುಕೊಂಡು ಹೋಗು. ಆ ಮಾನವೋತ್ತಮನ ಗೆಳೆತನವನ್ನು ಮಾಡು–ಆಗ ನಿನ್ನ ಜೀವವೂ ಸಾಮ್ರಾಜ್ಯವೂ ಉಳಿದಾವು. ಅವನು ಧರ್ಮಿಷ್ಠನೆಂಬುದು ಸುಪ್ರಸಿದ್ಧ. ಅವನು ಶರಣಾಗತರಿಗೆ ದಯೆದೋರುತ್ತಾನೆ’[೩೮] ರಾವಣದಲ್ಲಿದ್ದ ಗೌರವಬುದ್ಧಿಯನ್ನೂ ಆಕೆ ಪ್ರೇರಿಸಿ ನೋಡಿದಳು. ‘ಕುಬೇರನ ಸೋದರನಾಗಿ ಹುಟ್ಟಿದ ನೀನು ವೀರನೂ ಬಲಶಾಲಿಯೂ ಆಗಿದ್ದೀಯೇ. ಹೀಗಿರುವಾಗ ನನ್ನ ರಕ್ಷಕನನ್ನು ಆಶ್ರಮದಿಂದ ಹೊರಗೆ ಪ್ರಲೋಭಿಸಿ ಒಯ್ದು ಹೇಗೆ ತಾನೇ ನೀನು ನನ್ನನ್ನು ಕರೆದೊಯ್ಯುವಷ್ಟು ಕೆಳಮಟ್ಟಕ್ಕೆ ಇಳಿದೆ?[೩೯] ಮತ್ತು ರಾವಣನು ಬಂದಾಗಲೆಲ್ಲ ಅವಳು ‘ಇಂದ್ರನ ವಜ್ರಾಯುಧವೊಮ್ಮೆ ನಿನ್ನನ್ನು ಗಾಯಗೊಳಿಸಲಾರದೆ ಹೋದರೂ, ಸ್ವತಃ ಮೃತ್ಯುವೇ ಒಮ್ಮೆ ನಿನ್ನನ್ನು ಉಳಿಯಗೊಟ್ಟರೂ, ಜನತಾಪ್ರಭುವಾದ ರಾಮನನ್ನು ಕೆರಳಿಸಿದರೆ ಅವನಿಂದ ನಿನಗೆ ಎಂದೂ ಸುರಕ್ಷಿತತೆ ಉಳಿಯಲಾರದು’ ಎಂದು ಅವನಿಗೆ ಎಚ್ಚರಿಕೆಯನ್ನು ಕೊಟ್ಟಿದ್ದಳು.[೪೦]

ಪತಿನಿಷ್ಠೆಯು ಸೀತೆಯ ಹೃದಯವನ್ನು ಸಂಕುಚಿತಗೊಳಿಸುವುದನ್ನು ಬಿಟ್ಟು ವಿಶಾಲಗೊಳಿಸಿತು. ಅವಳ ವಧಭ್ರಾಂತಿಯಿಂದ ಶ್ರೀರಾಮನು ಅತ್ಯಂತ ದುಃಖಿತನಾದರೆ, ಅವಳಿಗಾದರೂ ರಾಮ–ಲಕ್ಷ್ಮಣರು ರಣಭೂಮಿಯ ಮೇಲೆ ಗತಪ್ರಾಣರಂತೆ ಉದ್ದವಾಗಿ ಮಲಗಿದ್ದನ್ನು ಕಂಡು ಎದೆಯೊಡೆದುಹೋಯಿತು. ಅದು ತನಗೆ ತುಂಬಲಾರದ ನಷ್ಟ ಎಂದು ಅವಳಿಗನ್ನಿಸಿತು. ಅವಳ ಆಲೋಚನೆ ಕೂಡಲೆ ಅಯೋಧ್ಯೆಯಲ್ಲಿದ್ದ ಮುದಿರಾಣಿಯತ್ತ ಹರಿಯಿತು. ‘ರಾಮನ ಬಗೆಗಾಗಲಿ, ಮಹಾರಥನಾದ ಲಕ್ಷ್ಮಣನ ಬಗೆಗಾಗಲಿ ನನಗೆ ಅಷ್ಟು ದುಃಖವಾಗುವುದಿಲ್ಲ; ಆದರೆ ನಾವೆಲ್ಲರೂ ವಚನದಂತೆ ತಿರುಗಿ ಅಯೋಧ್ಯೆಗೆ ಹೋಗುವುದನ್ನೇ ಸದಾ ಚಿಂತಿಸುತ್ತಿರುವ ನನ್ನ ದೀನ ಅತ್ತೆಯನ್ನು ನೆನೆದು ಬಹಳ ದುಃಖಪಡುತ್ತಿದ್ದೇನೆ – ಎಂದಳು ಸೀತೆ.[೪೧] ಇದೇ ಮನೋವೈಶಾಲ್ಯವು ರಾವಣನ ಅಪ್ಪಣೆಯ ಪ್ರಕಾರ ತನ್ನನ್ನು ಕೆಟ್ಟ ರೀತಿಯಿಂದ ನಡೆಸಿಕೊಂಡ ರಾಕ್ಷಸಿಯರನ್ನು ಅವಳು ಕ್ಷಮಿಸುವಂತೆ ಮಾಡಿತು. ಆ ಕ್ರೂರ ಹೆಂಗಸರನ್ನು ಕೊಂದುಹಾಕಿಬಿಡುತ್ತೇನೆ – ಎಂದ ಹನುಮಂತನಿಗೆ ವಿಚಾರಮಗ್ನಳಾಗಿ, ‘ವಧಾರ್ಹ ಅಪರಾಧಿಗಳಿಗೆ ದಯೆದೋರುವುದು ಸಾಧುಸ್ವಭಾವದವರಿಗೆ ತಕ್ಕದ್ದು. ನನ್ನ ಕಷ್ಟವನ್ನೆಲ್ಲಾ ನನ್ನ ದುರ್ದೈವ ಕೊಟ್ಟದ್ದು’[೪೨] ಎಂದಳು.

ರಾಮನು ರಾವಣನನ್ನು ಕೊಂದು ತನ್ನ ಕುಲದ ಗೌರವವನ್ನು ಪ್ರತಿಷ್ಠಾಪಿಸಿದ ಅನಂತರವೇ ಸೀತೆಯ ದುಃಸಹ ಸತ್ವಪರೀಕ್ಷೆಗಳು ಆರಂಭವಾದದ್ದು. ಆತನ ಅಪ್ಪಣೆಯಂತೆ ಆಕೆ ಸ್ನಾನ ಮಾಡಿ ಪ್ರೇಮಾತಿರೇಕ, ಹೃದಯಾರ್ದ್ರತೆಗಳಿಂದ ತನ್ನನ್ನು

ಬರಮಾಡಿಕೊಳ್ಳುವನೆಂಬ ನಿರೀಕ್ಷೆಯಿಂದ ರಾಮನನ್ನು ಸಮೀಪಿಸಿದಳು. ಆದರೆ ಆ ಸಂದರ್ಭದಲ್ಲಿ ಅನಿರೀಕ್ಷಿತ ವಜ್ರಾಘಾತ ಅವಳಿಗಾಗಿ ಕಾದಿತ್ತು. ಹೇಗೆಂದರೆ, ನೆರೆದ ಸರ್ವಜನರ ಎದುರು ರಾಮನು, 'ಎಲೈ ಸೀತೆಯೇ, ನನಗೂ ನಿನಗೂ ಈಗ ಯಾವ ಸಂಬಂಧವೂ ಇಲ್ಲ. ರಾವಣನು ನಿನ್ನನ್ನು ತೊಡೆಯ ಮೇಲಿಟ್ಟು ಹೊತ್ತುಕೊಂಡು ಹೋದ ಮತ್ತು ಪಾಪದೃಷ್ಟಿಯಿಂದ ನಿನ್ನನ್ನು ನೋಡಿದ. ಆದುದರಿಂದ ನಾನು ನಿನ್ನನ್ನು ಈಗ ಹಿಂದಕ್ಕೆ ತೆಗೆದುಕೊಂಡು ನನ್ನ ಮಹಾಕುಲಕ್ಕೆ ಅಪಮಾನವನ್ನು ತಂದುಕೊಳ್ಳಲಾರೆ. ರಾಕ್ಷಸನಿಗೆ ಶಿಕ್ಷೆ ವಿಧಿಸುವ ನನ್ನ ಗುರಿ ಪೂರ್ಣವಾಗಿದೆ. ನೀನು ನಿನಗೆ ಬೇಕಾದವರೊಡನೆ ಹೋಗಿ ಇರು' ಎಂದು ಸಾರಿದನು.[೪೩] ಹೀಗೆ ಮಹಾಸಭೆಯೆದುರಿನಲ್ಲಿ ಅವಮಾನಿತೆಯಾದರೂ, ಸೀತೆಯು ತನ್ನನ್ನು ತನ್ನ ಪತಿಯು ಇನ್ನೂ ಸರಿಯಾಗಿ ತಿಳಿದುಕೊಳ್ಳಲಿಲ್ಲವೆಂಬುದು ದುಃಖಕರವೆಂದು ನಿರ್ಭಯವಾಗಿಯೂ, ಗಂಭೀರವಾಗಿಯೂ ಉತ್ತರ ಕೊಟ್ಟಳು: 'ಎಲೈ ಅಗ್ನಿಯೇ, ಜನಚಾರಿತ್ರ್ಯ ಸಾಕ್ಷಿಯೇ, ನನ್ನ ಪ್ರಭುವಾದ ರಾಘವನನ್ನುಳಿದು ನನ್ನ ಹೃದಯವೆಂದೂ ಅಡ್ಡಹಾದಿ ಹಿಡಿಯದಿರುವುದರಿಂದ ನನ್ನನ್ನು ರಕ್ಷಿಸು' ಎಂದು ಸರಳವಾದ ಪ್ರಾರ್ಥನೆಯನ್ನು ಮಾಡಿ, ರಾಮನಿಗೆ ಪ್ರದಕ್ಷಿಣೆ ಹಾಕಿ, – ಅವಳ ನಿಷ್ಕಳಂಕ ಪಾವಿತ್ರ್ಯವನ್ನು ಸಾರಲು ಮತ್ತು ಅವಳನ್ನು ಪುನಃ ಸ್ವೀಕರಿಸೆಂದು ರಾಮನಿಗೆ ಸಲಹೆ ಕೊಡಲು ದೇವತೆಗಳು ಓಡಿಬರುವಂತೆ – ಅವಳು ಧೈರ್ಯದಿಂದ ಏಳುತ್ತಿರುವ ಅಗ್ನಿಯಲ್ಲಿ ಹಾರಿದಳು.[೪೪]

ತನ್ನ ಇಂಥ ಪತಿವ್ರತಾಧರ್ಮದ ಅನುಷ್ಠಾನದಿಂದ ಹುಟ್ಟಿದ ಸಾಮರ್ಥ್ಯವನ್ನು ನೆನೆದೇ ಸೀತೆಯು ಈ ಬಗೆಯ ಪ್ರಾರ್ಥನೆಯನ್ನು ಮಾಡಿ ತನ್ನ ಎರಡನೆಯ ಸತ್ವಪರೀಕ್ಷೆಯಾದ ನಿರ್ವಾಸವನ್ನು ಎದುರಿಸಿದ್ದು. ಜನತೆಯ ಎದುರಿನಲ್ಲಿ ಎರಡನೆಯ ಸಲ ತನ್ನ ನಿಷ್ಪಾಪಶೀಲಕ್ಕೆ ಪ್ರಮಾಣಗಳನ್ನು ಕೊಡಬೇಕಾಗಿ ಬಂದಾಗ ಮತ್ತು ರಾಮನ ಮುಂದಿನ ವಾರಸುದಾರರನ್ನು ತನ್ನ ಗರ್ಭದಲ್ಲಿ ಧರಿಸಿದ್ದಾಗ ಕಾಡಿನಲ್ಲಿ ಪರಿತ್ಯಕ್ತೆಯಾದ ಸೀತೆಯು ನಿಃಸಂದೇಹವಾಗಿ ತೀಕ್ಷ್ಣ ದುಃಖವನ್ನು ಅನುಭವಿಸಿದಳು; ಆದರೆ ತನ್ನ ಧರ್ಮಪರಾಯಣನಾದ ಪತಿಯು ತನ್ನನ್ನು ಉಗ್ರರೀತಿಯಿಂದ ನಡೆಸಿಕೊಂಡದ್ದು ಆದರ್ಶ ರಾಜನ ಧರ್ಮವನ್ನು ಎತ್ತಿಹಿಡಿಯುವುದಕ್ಕಾಗಿಯೇ ಎಂದು ಮನವರಿಕೆ ಮಾಡಿಕೊಂಡು, ತಾನು ಭೂದೇವಿಯ ಮಗಳೆಂದುಕೊಂಡ ಸೀತೆಯು ಭೂಮಿಯಂತೆಯೇ ತಾಳ್ಮೆಯನ್ನು ತಾಳಿದಳು. ಆದರ್ಶ ಸತಿಯಾಗಿದ್ದ ಆಕೆ ಸತತವಾಗಿ ರಾಮನ ಮತ್ತು ಅವನ ಪ್ರಜೆಗಳ ಯೋಗಕ್ಷೇಮವನ್ನು ಕರ್ತವ್ಯವೆಂದು ಪ್ರಾರ್ಥಿಸುತ್ತಿದ್ದಳಲ್ಲದೆ ಅವನು ತನ್ನ ಬಗೆಗೆ ತಾಳಿದ ಮನಃಪ್ರಣಾಳಿಯನ್ನು ಎಣಿಸಿ ಎಂದೂ ಅವನನ್ನು ದೂರಲಿಲ್ಲ. ಅವನ ಬಗೆಗೆ ಚಕಾರ ಶಬ್ದವನ್ನೆತ್ತಲಿಲ್ಲ. 'ಮನೋವಾಕ್ಕಾಯಗಳಿಂದ ನಾನು ಯಾವಾಗಲೂ ರಾಮನ ಒಳಿತಿಗಾಗಿಯೇ ಪ್ರಾರ್ಥಿಸುತ್ತಾ ಬಂದಿದ್ದೇನೆ. ಭೂದೇವಿ ನನಗೀಗ ತನ್ನೊಳಗೆ ತಳ ಕೊಡಲಿ' ಎಂದು ಸೀತೆ ಭೂಮಿತಾಯಿಯ ಮರೆವೊಕ್ಕಳು. ಹೃತ್ಪೂರ್ವಕವಾದ ಈ ಮಾತುಗಳನ್ನಾಡಿಯೇ ಅವಳು ತನ್ನ ಎರಡನೆಯ ಸತ್ವಪರೀಕ್ಷೆಯನ್ನು ಎದುರಿಸಿ

ಮರ್ತ್ಯಜಾತಿಗೆ ಮತ್ತೆಂದೂ ಕಾಣಿಸಿಕೊಳ್ಳದಂತೆ ಅದೃಶ್ಯಳಾದಳು. ರಾಮನು ತನ್ನಲ್ಲಿಟ್ಟಿದ್ದ ಅವಿಭಕ್ತ ಪ್ರೇಮದಲ್ಲಿ ಅವಳ ನಂಬಿಕೆ ಎಂದೂ ಚಲಿತವಾಗಲಿಲ್ಲ. ಆದರೆ ಆಮೇಲಿನ ಕಾಲಾವಧಿಯಲ್ಲಿ ಸರ್ವಕರ್ಮಾಚರಣೆಯ ಕಾಲದಲ್ಲಿ ತನ್ನ ಚಿನ್ನದ ಪ್ರತಿಮೆಯನ್ನೂ ಜೊತೆಗೆ ಇಟ್ಟುಕೊಳ್ಳುವುದರ ಮೂಲಕ ಅದು ಪ್ರಕಟವಾದದ್ದನ್ನು ಕಾಣಲು ಅವಳ ಚರ್ಮಚಕ್ಷುಗಳು ಉಳಿಯುವ ಭಾಗ್ಯವನ್ನು ಪಡೆದಿರಲಿಲ್ಲ. ಮದುವೆಯು ಮುರಿಯಲಾರದ ಬಂಧನ, ಅದರಿಂದ ಪರಸ್ಪರ ವಿಶ್ವಾಸ–ಗೌರವಗಳು ಉಂಟಾಗುತ್ತವೆ ಮತ್ತು ಬಲಾತ್ಕಾರದ ನಿರ್ವಾಸನ, ಅಮಾನುಷವೆಂದು ತೋರುವ ರೀತಿಯ ವರ್ತನೆ, ಮುಂತಾದ ಹೊರಜಗತ್ತು ಕೊಡುವ ಅನಿರೀಕ್ಷಿತ ಪೀಡೆಗಳ ನಡುವೆಯೂ ಧೀರೋದಾತ್ತ ಪುತ್ರರನ್ನು ಬೆಳೆಸಿ ದೊಡ್ಡವರನ್ನಾಗಿ ಮಾಡಬಹುದು–ಎಂಬುದನ್ನು ರಾಮ–ಸೀತೆಯರು ತೋರಿಸಿದರು. ತನ್ನ ಅತಿ ಸಮೀಪದ ಮತ್ತು ಪ್ರಿಯತಮರಾದ ಬಂಧುಗಳನ್ನು ಬುದ್ಧಿಪೂರ್ವಕವಾಗಿ ತ್ಯಜಿಸುವ ಮತ್ತು ತನ್ನ ಪತ್ನಿಯಲ್ಲಷ್ಟೇ ಅಲ್ಲದೆ ಇತರ ಎಲ್ಲ ಪದಾರ್ಥಗಳಲ್ಲೂ ದೇವರನ್ನು ನೇರವಾಗಿ ಸಾಕ್ಷಾತ್ಕರಿಸಿಕೊಳ್ಳುವ ದೇಶದಲ್ಲಿ ಇದೇನೂಅಪೂರ್ವವೆನ್ನಿಸಲಾರದು. ಎಷ್ಟು ಭಯಂಕರವೋ ಅಷ್ಟೇ ಸುಂದರವೂ ಆದ ಇಂಥ ಕೃತ್ಯಗಳು ನಿಜವಾದ ಸರ್ವ ಅಧ್ಯಾತ್ಮಿಕ ಜೀವನಕ್ಕೂ ಅಪರಿಹಾರ್ಯವಾದ ಸಾಧನಗಳೆಂದು ಗಣಿಸಲಾಗಿದೆ.

## ರಾಮ

ಪ್ರತಿಯೊಂದು ಸಂದರ್ಭದಲ್ಲೂ ರಾಮನನ್ನು ಒಬ್ಬ ಅದರ್ಶ ಮಾನವನೆಂದೇ ತೋರಿಸಲಾಗಿದೆ. ಮಹರ್ಷಿಗಳೂ ದೇವತೆಗಳೂ ಅವನಿಗೆ ಕೈಮುಗಿದು 'ನೀನು ಪರಮಾತ್ಮನೆಂಬುದನ್ನು ನೆನೆದುಕೋ' ಎಂದು ಒತ್ತಾಯಿಸಿದ ಸಂದರ್ಭಗಳಿದ್ದವು. ಆದರೆ ಆತನೆಂದೂ ತಾನು ದಾಶರಥಿ ರಾಮನೆಂಬ ಮಾನವ–ಎನ್ನುವ ಸ್ಥಾನದಿಂದ ಚಲಿಸಲಿಲ್ಲ.[೪೫] ಒಬ್ಬನಿಗೆ ಹುಟ್ಟುತ್ತಲೇ ಇರಹುದಾದ ಅಥವಾ ಅನಂತರ ಗಳಿಸಬಹುದಾದ ಎಲ್ಲ ಸುಗುಣಗಳೂ ರಾಮನಲ್ಲಿದ್ದವು ಎಂದು ಬಣ್ಣಿಸಲಾಗಿದ್ದರೂ, ಅವನು ದೇವರಾಗಿದ್ದುದರಿಂದಲೇ ಅವನಲ್ಲಿ ಅವೆಲ್ಲಾ ಇದ್ದವು, ಸಾಮಾನ್ಯ ಮನುಷ್ಯರಿಗಾಗಿ ಏರ್ಪಡಿಸಲಾದ ಅವಶ್ಯಕವೆನ್ನಿಸುವ ಶಿಸ್ತನ್ನು ಪಾಲಿಸಿದ್ದರಿಂದ ಅವು ಬಂದಂಥವುಗಳಲ್ಲ–ಎಂಬುದನ್ನು(ಇಡಿ ರಾಮಾಯಣದಲ್ಲಿ) ಎಲ್ಲೂ ಸೂಚ್ಯವಾಗಿ ಕೂಡ ಹೇಳಿಲ್ಲ. ಅವನು ಸೂಕ್ಷ್ಮಬುದ್ಧಿಯನ್ನು ಬೆಳೆಸಿಕೊಂಡಿದ್ದರೆ, ತತ್ತ್ವಜ್ಞಾನಿಯ ವಿವೇಕವನ್ನು ಅಭಿವೃದ್ಧಿ ಮಾಡಿಕೊಂಡಿದ್ದರೆ, ಸೈನಿಕ ಸಾಹಸಗಳಲ್ಲಿ ಮೇಲುಗೈಯಾಗಬಲ್ಲವನಾಗಿದ್ದರೆ, ಪ್ರತಿವಾದಿಗೆ ಬಾಯಿ ಮುಚ್ಚಿಸುವಂಥ ಉತ್ತರವನ್ನು ಕೊಡಬಲ್ಲವನಾಗಿದ್ದರೆ ಅಥವಾ ಹಾಡುವುದರಲ್ಲಿ ಇತರರಿಗಿಂತ ಮಿಗಿಲಾದವನೆನ್ನಿಸಿದ್ದರೆ, ಅವೆಲ್ಲವೂ ಗುರುಹಿರಿಯರನ್ನು ಶುಶ್ರೂಷೆ ಮಾಡಿ ಆಯಾ ವಿಷಯಗಳನ್ನು ಕಲಿಯುವುದರಲ್ಲಿ ಜಾಣತನದಿಂದ ಮಗ್ನನಾಗಿರುತ್ತಿದ್ದುದರಿಂದಲೇ ಬಂದಂಥವು.[೪೬] ಇಂದ್ರಜಿತ್ತು ಮಾಯಾಯುದ್ಧವನ್ನು ಮಾಡತೊಡಗಿದಾಗ ರಾಮ–ಲಕ್ಷ್ಮಣರು ಧರ್ಮಯುದ್ಧದ ಮತ್ತುಧೀರೋದಾತ್ತರ

ನೀತಿಯನ್ನೇ ಅನುಸರಿಸಿದರು. ಅದರ ಫಲವಾಗಿ ಅವರಿಬ್ಬರೂ ತತ್‌ಕ್ಷಣದಲ್ಲೇ ಸೋತು ನಿಶ್ಚೇಷ್ಟರಾಗಿ ಬಿದ್ದರು ಮತ್ತು ಅಂಬುಗಳ ಬಲೆಯಲ್ಲಿ ಸಿಕ್ಕಿ ಬಂಧಿತರಾಧರು. ಆ ಸ್ಥಿತಿಯಲ್ಲಿದ್ದ ಅವರನ್ನು ಸೀತೆ ಪುಷ್ಪಕ ಹತ್ತಿ ನೋಡುವಂತೆ ಮಾಡಿ ಮತ್ತು ವಿಭೀಷಣನು ಗೋಳೋ ಎಂದು ಅಳುವಂತೆ ಮಾಡಿ, ವಾಲ್ಮೀಕಿ ಇಲ್ಲಿ ಕರುಣರಸದ ಚರಮಸೀಮೆಯನ್ನು ಮುಟ್ಟಿಸುತ್ತಾನೆ. ಆದರೆ ಕೊನೆಗೆ ಗರುಡ ಬಂದು ರಾಮಲಕ್ಷ್ಮಣರನ್ನು ಎತ್ತಿ ಮುಕ್ತಗೊಳಿಸುತ್ತಾನೆ. ಗರುಡನು ಹೋಗುವಾಗ ಆಡಿದ ಮಾತಿನಲ್ಲಿ ನಾಟಕೀಯ ಮುನ್ಸೂಚನೆಯ ಒಂದು ಕರುಣಧ್ವನಿ ಇದೆ. ರಾಮನನ್ನು ಕುರಿತು ಆತ, 'ಸ್ವಭಾವತಃ ರಾಕ್ಷಸರು ಯುದ್ಧದಲ್ಲಿ ಕುಯುಕ್ತಿಯಿಂದ ಹೊಸ ಹೊಸ ವರಸೆಗಳನ್ನು ಹಿಡಿಯುತ್ತಾರೆ; ಧೀರೋದಾತ್ತನೂ ಶುದ್ಧಾತ್ಮನೂ ಆದ ನೀನಾದರೋ ಸರಳತೆಯನ್ನೇ ಬಲವೆಂದು ತಿಳಿದು ಆಧರಿಸುತ್ತೀಯೆ. ಇನ್ನೆಂದೂ ಯುದ್ಧದಲ್ಲಿ ರಾಕ್ಷಸರನ್ನು ನಂಬಬಾರದು. ಏಕೆಂದರೆ ಅವರು ಮೋಸಗಾರರು. ರಾಘವಾ, ನನಗೆ ಹೋಗಲು ಅನುಮತಿ ಕೊಡು. ನಮ್ಮ ಸ್ನೇಹದ ಬಗ್ಗೆ ಯಾವ ಕುತೂಹಲವನ್ನೂ ಇಟ್ಟುಕೊಳ್ಳಬೇಡ' ಎಂದನು.[೪೬] ಇದರ ಸೂಚಿತಾರ್ಥವೇನೆಂದರೆ, ತಾನು ವಿಷ್ಣುವಲ್ಲ. ಕೇವಲ ಮಾನವ ಎಂಬ ಗ್ರಹಿಕೆ ರಾಮನಿಗಿದ್ದುದರಿಂದ ಗರುಡನೇಕೆ ವಿಷ್ಣುವನ್ನು ಬಿಟ್ಟು ಭೂಮಿಗಿಳಿದು ತನ್ನನ್ನು ಬೆಂಬಲಿಸಲು ಬಂದ?–ಎಂಬ ಕುತೂಹಲ ಆತನಲ್ಲಿರುವುದು ತರ್ಕಬದ್ಧವಾದುದು–ಎಂಬುದು.

ರಾವಣ–ವಿಭೀಷಣ, ವಾಲಿ–ಸುಗ್ರೀವರ ಪರಸ್ಪರ ಸಂಬಂಧಕ್ಕೂ ರಾಮ ಮತ್ತು ಅವನ ಸಹೋದರರ ಪರಸ್ಪರ ಸಂಬಂಧಕ್ಕೂ ಅಜಗಜಾಂತರವಿದೆ. ಕೈಕೆ ತನಗೆ ಕೊಡಬೇಕಾಗಿದ್ದ ವರಗಳನ್ನು ಕೊಡಲೇಬೇಕೆಂದು ಹಟಹಿಡಿದಾಗ ಮತ್ತು ರಾಮನು ಕಾಡಿಗೆ ಹೋಗಲು ಒಪ್ಪಿದಾಗ ಪರಿಸ್ಥಿತಿಯು ಲಕ್ಷ್ಮಣನನ್ನೂ ಭರತನನ್ನೂ ಬಹಳ ಭಿನ್ನವಾದ ಸ್ಥಾನಗಳಲಿ ಒಯ್ದು ಇಟ್ಟಿತು. ಆದರೆ ಅವರಿಬ್ಬರೂ ಒಂದೇ ಬಗೆಯ ಭಕ್ತಿಯನ್ನೂ ವಿಧೇಯತೆಯನ್ನೂ ರಾಮನ ಬಗ್ಗೆ ತಾಳಿ ಆ ಪ್ರಕಾರ ನಡೆದುಕೊಂಡರು. ತನ್ನ ಆಧ್ಯಾತ್ಮಿಕ ಮುನ್ನಡೆಗೆ ಅದೇ ಅತ್ಯುತ್ತಮ ಮಾರ್ಗವೆಂದು ತಿಳಿದು ಲಕ್ಷ್ಮಣನು, ರಾಮನ(ವನವಾಸ ಕಾಲದಲ್ಲಿ) ಪ್ರಾಮಾಣಿಕ ಅಂಗರಕ್ಷಕನೂ ಸೇವಕನೂ ಅಗಿ ಇರುಳಲ್ಲಿ ನಿತ್ಯವೂ(೧೪ ವರ್ಷಗಳು) ಜಾಗರಣೆ ಮಾಡುತ್ತಿದ್ದನು. ತನ್ನ ತಾಯಿಯನ್ನು ಜರೆಯುವುದರಲ್ಲಿ, ತಪಸ್ವಿಜೀವನವನ್ನು ನಡೆಸುವುದರಲ್ಲಿ ಮತ್ತು ರಾಮನನ್ನು ಅಯೋಧ್ಯಾನಗರದಲ್ಲಿ ಪ್ರತಿನಿಧಿಸುವ ಅವನ ಪಾದುಕೆಗಳಿಗೆ ಪಟ್ಟಾಭಿಷೇಕ ಮಾಡಿ ಅವನ ಹೆಸರಿನಲ್ಲಿ ರಾಜ್ಯಭಾರ ಮಾಡುವುದರಲ್ಲಿ ಭರತನಾದರೂ ಹಾಗೆಯೇ ಭಕ್ತಿ–ವಿಧೇಯತೆಗಳನ್ನು ತೋರಿಸಿದನು. ಶತ್ರುಘ್ನನೂ ರಾಮನನ್ನು ಬಹಳ ಹಚ್ಚಿಕೊಂಡಿದ್ದನು. ಶ್ರೀರಾಮನ ಆಜ್ಞೆಯ ಪ್ರಕಾರ ಲವಣಾಸುರನನ್ನು ಕೊಂದು ೧೨ ವರ್ಷಗಳ ಸತತ ಪರಿಶ್ರಮದಿಂದ(ಕೊಂದ ಸ್ಥಳದಲ್ಲಿ) ಒಂದು ಸುಂದರವಾದ ನಗರವನ್ನು ಆತ ಕಟ್ಟಿಸಿದನು. ರಾಮನ ವಿರಹವನ್ನು ತಾಳಲಾರದೆ ಅವನು ಅಯೋಧ್ಯೆಗೆ ಹೋಗಿ ರಾಮನೊಡನೆ

ಸರ್ವದಾ ಇರಲುಅಪ್ಪಣೆಯನ್ನು ಬೇಡಿದನು. ಆಗ ಆದರ್ಶ ಸಹೋದರನೂ ರಾಜನೂ ಆಗಿದ್ದ ಶ್ರೀರಾಮಚಂದ್ರನು ಸ್ನೇಹ ಮತ್ತು ರಾಜ್ಯಭಾರಗಳೆರಡರ ಅಗತ್ಯಗಳನ್ನೂ ಚೆನ್ನಾಗಿ ಅಳೆದು ನೋಡಿ, 'ಎಲೈ ವೀರನೇ, ಬೇಸರಪಡಬೇಡ. ಪ್ರಜೆಗಳನ್ನು ಪಾಲಿಸುವುದು ಕ್ಷತ್ರಿಯನ ಧರ್ಮ. ಅದಕ್ಕಾಗಿ ವಿದೇಶಗಳಲ್ಲಿ ಇರಬೇಕಾಗಿ ಬಂದರೂ ಅವನು ವ್ಯಥೆಯಿಂದ ಕುಗ್ಗಬಾರದು. ನೀನು ಆಗಾಗ ನನ್ನನ್ನು ನೋಡಿಕೊಂಡು ಹೋಗುತ್ತ ಇರು. ನೀನು ನನಗೆ ನನ್ನ ಪ್ರಾಣಕ್ಕಿಂತ ಪ್ರಿಯ ಎಂದು ನಾನು ದೃಢವಾಗಿ ನಂಬಿದ್ದೇನೆ' ಎಂದು ಹೇಳಿದನು. ರಾಮಾಯಣದಲ್ಲಿ ಕಂಡುಬರುವ ಕೆಲವು ಕರುಣ ಸನ್ನಿವೇಶಗಳು ಲಕ್ಷ್ಮಣನಿಗೆ ಸಂಬಂಧಿಸಿವೆ. ಇವು ಉದಾಹರಣೆಗಳು: ಇಂದ್ರಜಿತ್ತಿನ ಬಾಣಗಳಿಂದ ರಾಮಲಕ್ಷ್ಮಣರು ಮೂರ್ಛಿತರಾದಾಗ ಮೊದಲು ಎಚ್ಚತ್ತ ರಾಮನು ಲಕ್ಷ್ಮಣನು ಹತನಾದನೆಂದು ತಿಳಿದುಕೊಂಡು ಅವನ ಸೋಲಿನ ಬಗ್ಗೆ ದುಃಖಿಸಿದ್ದು.[೪೮] ರಾಮನು ಮುಂದೆ ಸೀತೆಯನ್ನು ತ್ಯಜಿಸಲಿರುವನೆಂಬುದನ್ನು ಸುಮಂತ್ರನಿಂದ ಮೊದಲೇ ತಿಳಿದುಕೊಂಡಿದ್ದ ಲಕ್ಷ್ಮಣನು ಯಮನೊಡನೆ ಅವನು ಮಾಡಿದ್ದ ಏಕಾಂತದ ಸಂಭಾಷಣೆಯನ್ನು ಬಯಲಿಗೆಳೆದು ತಪ್ಪಿಗಾಗಿ ತನ್ನನ್ನು ಕೊಲ್ಲೆಂದು ಶಾಂತಚಿತ್ತದಿಂದ ರಾಮನನ್ನು ಕೇಳಿಕೊಳ್ಳುವುದು ಇನ್ನೊಂದು ಕರುಣಾಜನಕ ದೃಶ್ಯ. ಇಡೀ ಕುಲದ ಉಳಿವಿಗಾಗಿ ತನ್ನ ಜೀವವನ್ನು ಬಿಡಲು ಅವನು ಹೇಗೆ ತಡಮಾಡಿಯಾನು? ಹೀಗೆ ತರ್ಕಿಸಿ ಲಕ್ಷ್ಮಣನು ಸಂದರ್ಶನವನ್ನು ಕೂಡಲೇ ಏರ್ಪಡಿಸಿ, ದೂರ್ವಾಸನಿಗೆ ಬೇಕಾದದ್ದು ಅವನು ಹಸಿವನ್ನು ತಣಿಸುವ ಸ್ವಲ್ಪ ಆಹಾರ ಎಂದು ತಿಳಿದ ಮೇಲೆ ಅದರಿಂದ ಎಳ್ಳಷ್ಟೂ ವ್ಯಥೆಪಡಲಿಲ್ಲ!

ಶ್ರೀರಾಮನ ಬಾಳು ಕ್ಲೇಶಕಂಟಕಿತವಾದುದು. ಅವನಿಗೆದುರಾಗುತ್ತಿದ್ದ ಸನ್ನಿವೇಶಗಳು ಯಾವಾಗಲೂ ಕಡಿಮೆ ಧೈರ್ಯವನ್ನುಳ್ಳ ಅಥವಾ ಸ್ವಾರ್ಥತ್ಯಾಗ ಮಾಡುವ ಶಕ್ತಿಯನ್ನುಳ್ಳ ಯಾರನ್ನಾದರೂ ದಿಕ್ಕುಗೆಡಿಸುವಂಥ ಸ್ವರೂಪದವುಗಳಾಗಿರುತ್ತಿದ್ದವು. ಅಲ್ಪಚೇತಸರು ಅಂಥ ಪರಿಸ್ಥಿತಿಗಳನ್ನು ಕಂಡು ಪಲಾಯನ ಮಾಡಿಬಿಡುತ್ತಿದ್ದರು. ಅಥವಾ ಅವು ಮತ್ತಷ್ಟು ಜಟಿಲವಾಗುವಂತೆ ಎಸಗಿಬಿಡುತ್ತಿದ್ದರು. ಆದರೆ ರಾಮನು ಅವುಗಳೆಲ್ಲವುಗಳನ್ನೂ ಎದುರಿಸಿ ತನ್ನ ನಿಯಂತ್ರಣದಲ್ಲಿ ತಂದುಕೊಳ್ಳಲು ಶಕ್ತಿಮೀರಿ ಯತ್ನಿಸಿದನು. ಅವನ ಸೈನಿಕಯುಕ್ತಿ ಮತ್ತು ಪರಾಕ್ರಮಗಳಿಂದ ಅನೇಕ ಕಷ್ಟಗಳು ಪರಿಹಾರವಾದವು; ಉಳಿದ ಕೆಲವನ್ನು ಅವನು ತನ್ನ ಪರಿಪೂರ್ಣ ಅನಾಸಕ್ತಿಯೋಗದಿಂದ ಜಯಿಸಿದನು. ಅನಾಸಕ್ತಿಯೋಗ ಹಿಡಿದವರ ವಿವಿಧ ಮಾದರಿಗಳನ್ನು ವಾಲ್ಮೀಕಿ ತೋರಿಸಿದ್ದಾನೆ. ಅಂಥ ಒಬ್ಬನೆಂದರೆ ಒಬ್ಬ ಋಷಿ; ಆತನು ಒಂದೇ ಏಟಿಗೆ ತನ್ನ ಬಂಧು–ಬಾಂಧವರನ್ನೂ ಜೀವನದ ಸುಖ–ಸಂತೋಷಗಳನ್ನೂ ಬಿಟ್ಟುಬಿಟ್ಟ: ಅದರಿಂದಾದ ಪ್ರಾರಂಭಿಕ ಮನೋವ್ಯಥೆಗಳಿಂದ ಮುಕ್ತನಾದ ಮೇಲೆ ಅವನು ಕ್ರಮೇಣ ಶಾಂತಿ–ಆನಂದಗಳನ್ನು ಸಮೀಪಿಸಲು ಹೋರಾಡಿದನು. ಈ ವರ್ಗಕ್ಕೆ ಸೇರಿದ ವಿಶ್ವಾಮಿತ್ರನಂಥ ಅನೇಕರು ತಮ್ಮ ಅಪಾಯಕರವಾದ ಊರ್ಧ್ವ ಗಮನ ಪ್ರಯತ್ನದಲ್ಲಿ ಅವರು ಸಂಪಾದಿಸಿದ ಆತ್ಮಸಂಯಮ ಶಕ್ತಿಯನ್ನು ಬಹಿಃಶಕ್ತಿಗಳು ಮೀರಿಸಿದಾಗ ವಿರಳವಾಗಿ ಎಡವಿ ಮುಗ್ಗರಿಸಿ

ಕೆಳಗುರುಳಿದ್ದುಂಟು. ಅಗಸ್ತ್ಯ ಅಥವಾ ಭರದ್ವಾಜನಂಥವರು ಮಾನಸಿಕ ಸಮತ್ವವನ್ನೂ ಆಧ್ಯಾತ್ಮಿಕ ಸ್ವಾತಂತ್ರ್ಯವನ್ನೂ ಪಡೆದುಕೊಂಡು ಅಗತ್ಯಬಿದ್ದಾಗ ಮಾನವನ ವ್ಯವಹಾರಗಳಲ್ಲಿ ನೆರವೀಯಲು ಸಿದ್ಧರಾಗಿರುತ್ತಿದ್ದರು. ರಾವಣನೊಡನೆ ನಡೆದ ಕೊನೆಯ ಕದನದಲ್ಲಿ ಅವನನ್ನು ಗೆಲ್ಲಲು ಬೇಕಾದ ಹೆಚ್ಚಿನ ಅನುಕೂಲಗಳನ್ನು ಅಗಸ್ತ್ಯ ಕೊಟ್ಟ ಆಯುಧ ಮತ್ತು ಉಪದೇಶಿಸಿದ ಮಂತ್ರಗಳೇ ಒದಗಿಸಿದವು.[೪೯] ರಾಮನ ಅನಾಸಕ್ತಿ ಯೋಗವು ಇನ್ನೊಂದು ಬಗೆಯದಾಗಿತ್ತು. ಅವನು ಇಡೀ ಜೀವನದ ಉದ್ದಕ್ಕೂ ತನ್ನ ಬಂಧು–ಬಾಂಧವರನ್ನೂ ಸುಖಸಂತೋಷಗಳನ್ನೂ ಬಿಟ್ಟವನು; ಆದರೆ ಒಂದೇ ಏಟಿಗೆ ಬಿಟ್ಟವನಲ್ಲ. ಆತನ ಹೋರಾಟವು ಅವನ ಇಡೀ ಬಾಳಿನ ತುಂಬಾ ಹರಡಿತ್ತು; ಒಂದು ಹೋರಾಟವು ಮುಗಿದು ಅದರಿಂದುಂಟಾದ ದೃಷ್ಟಿಕೋನ ಮತ್ತು ನಡತೆಗಳಲ್ಲಿಯ ಅದ್ಭುತವಾದ ಬದಲಾವಣೆಗಳೊಂದಿಗೆ ಹೊಂದಿಕೊಳ್ಳಲು ಅವನ ಮನಸ್ಸು ಕಲಿತುಕೊಳ್ಳುವಷ್ಟರಲ್ಲಿ ಮತ್ತೊಂದು ಹೋರಾಟವು ಅವನಿಗೆ ಎದುರಾಗುತ್ತಿತ್ತು. ಅದೆಂತೆಂದರೆ ತಂದೆ ಮತ್ತು ರಾಜ್ಯಗಳನ್ನು ಆತ ಕಳೆದುಕೊಂಡು ಆ ಪರಿಸ್ಥಿತಿಗೆ ಹೊಂದಿಕೊಳ್ಳುವಷ್ಟರಲ್ಲಿ ಹೆಂಡತಿಯನ್ನು ಕಳೆದುಕೊಳ್ಳುವ ಹೊತ್ತು ಬಂತು. ಅನೇಕ ಕಷ್ಟಗಳನ್ನು ಎದುರಿಸಿದ ಬಳಿಕ ರಾಮನು ತನ್ನ ಹೆಂಡತಿಯನ್ನುಪುನಃ ಪಡೆದನು. ರಾಜ್ಯದಲ್ಲಿ ಅಭಿಷಿಕ್ತನಾದನು. ಅಷ್ಟರಲ್ಲಿ ಒಂದು ನಿಂದೆಯ ಪಿಸುಮಾತು ಎದ್ದು, ತನ್ನ ಮುಂದಿನ ವಾರಸುದಾರರಾದ ಅವಳಿ ಮಕ್ಕಳನ್ನು ಗರ್ಭದಲ್ಲಿ ಧರಿಸಿದ್ದ ಹೆಂಡತಿಯನ್ನು ಆತನು ದೇಶದಿಂದ ಹೊರಹಾಕಬೇಕಾಯಿತು. ಅನಂತರ ಬಹಳ ಕಾಲ ಕಳೆದ ಮೇಲೆ ಅವನ ಮೌನದುಃಖವು ಕಡಿಮೆಯಾಗುತ್ತಿದ್ದಾಗ ತನ್ನ ಮಕ್ಕಳನ್ನು ಗುರುತಿಸಿ ಅವರನ್ನು ತನ್ನ ಅರಮನೆಗೆ ಕರೆದೊಯ್ದನು. ಆದರೆ ಆತನು ಎರಡನೆಯದಾಗಿ, ಹೇರಿದ ಸತ್ವಪರೀಕ್ಷೆಯು ಸೀತೆ ಭೂಮಿಯಿಂದ ಮಾಯವಾಗುವ ಹಾಗೆ ಮಾಡಿತು. ಕೊನೆಯಲ್ಲಿಆಯುಷ್ಯದ ಅತ್ಯಲ್ಪ ಭಾಗ ಉಳಿದಿರುವಾಗ ಲಕ್ಷ್ಮಣನನ್ನು ಕೊಲ್ಲುವ ಇಲ್ಲವೆ ನಿರ್ವಾಸಿತನನ್ನಾಗಿ ಮಾಡುವ ಅಗತ್ಯವು ಒದಗಿಬಂದುದು ಅವನ ಮಾನವಸಹಜ ದುಃಖಕ್ಕೆ ಕಳಸವಿಟ್ಟಂತಾಯಿತು. ಈ ಎಲ್ಲ ಪ್ರಕರಣಗಳಲ್ಲೂ ಮಹತ್‌ಹಿತದ ಸಂರಕ್ಷಣೆಗಾಗಿ ಅಲ್ಪಹಿತವನ್ನು ಬಿಟ್ಟು, ಹಾಗೆ ಮಾಡಿದುದರ ಫಲವಾಗಿ ಒದಗಿದ ದುಃಖವನ್ನು ಶಾಂತವಾಗಿ ಸಹಿಸಿಕೊಂಡಿರುವ ತತ್ವವನ್ನು ಆತ ಹಿಡಿದಿದ್ದನು.[೫೦] ಗೃಹಕೃತ್ಯದ ಹಿತಾರ್ಥಗಳಲ್ಲಿ ಘರ್ಷಣೆಯುಂಟಾದಾಗ ಅವನು ಕೈಕೆಯನ್ನು ತೃಪ್ತಿಪಡಿಸಿ ತನ್ನ ಹಕ್ಕನ್ನು ಬಿಟ್ಟುಕೊಟ್ಟನು. ಅದೇ ಮೇರೆಗೆ ತಾನು ಸುಶೀಲ ಪಾವಿತ್ರ್ಯಗಳ ಪ್ರತೀಕವೆಂದು ತಿಳಿಯುವುದನ್ನು ಬಿಟ್ಟು ನಾಗರಿಕರು ಅಪವಿತ್ರ ಚರಿತ್ರನೆಂದು ತನ್ನನ್ನು ತಿಳಿದುಕೊಳ್ಳುವ ಅಪಾಯ ಅವನನ್ನು ಅಂಜಿಸಿದಾಗ, ಸಾರ್ವಭೌಮಧರ್ಮವನ್ನು ಪಾಲಿಸುವುದರಲ್ಲಿ ತನಗೆ ಜಯವಾಗಲಿ ಎಂದು ಸೀತೆ ಪ್ರಾರ್ಥಿಸುವಳೆಂಬುದಾಗಿ ಹೃದಯಾಂತರಾಳದಲ್ಲಿದ್ದ ನಂಬಿಕೆಯಿಂದ, ಆತನು ಸೀತೆಯನ್ನು ಬಿಡಲು ಮನಸ್ಸು ಮಾಡಿದನು. ಅಲ್ಲದೆ ಸತ್ಯಸಂಧನಾದ ಆತನು ತನ್ನ ಮಾತು ಸಟೆಯಾದೀತೆಂದು ಅಂಜಿ ನಿಷ್ಠಾವಂತನಾದ ಲಕ್ಷ್ಮಣನ ನಿರ್ವಾಸನವನ್ನು ಆಜ್ಞಾಪಿಸಿದನು. ಅವನು ಪರಾರ್ಥಕ್ಕಾಗಿ ಸ್ವಾರ್ಥತ್ಯಾಗ

ಮಾಡಲು ನಿಂತ ಸಿದ್ಧತೆಯ, ಸತ್ಯನ್ಯಾಯಗಳ ಬಗೆಗೆ ಇದ್ದ ಗೌರವದ ಮತ್ತು ತನ್ನ ಪ್ರಭಾವ ಪ್ರಯೋಗದ–ಬೆಂಬಲದಿಂದಾಗಿಹಿಮ್ಮೆಟ್ಟಿದಂತಹ, ಪರಿಹರಿಸಲು ಪ್ರಯತ್ನಿಸದೆ ಹೋದಂತಹ, ಕೊನೆಯ ಪಕ್ಷ ತಗ್ಗಿಸಲಾರದೆ ಬಿಟ್ಟಂತಹ, ಪ್ರಕರಣ ಯಾವುದೂ ಇಲ್ಲ. ರಾಮನು ವಿಷ್ಣುವಿನ ಅವತಾರವೆಂಬುದನ್ನು ವಾಲ್ಮೀಕಿಯು ಕತೆ ಹೇಳುವಾಗ ಹೆಜ್ಜೆ ಹೆಜ್ಜೆಗೂ ಒತ್ತಿ ಹೇಳದಿದ್ದರೂ ಅವನು ವಿವಿಧ ಮುಖಗಳನ್ನುಳ್ಳ ಧರ್ಮದ ಮೂರ್ತಿವತ್ ಸ್ವರೂಪ ಎಂಬುದನ್ನು ಖಂಡಿತವಾಗಿಯೂ ವಿಶದಪಡಿಸಿದ್ದಾನೆ.

## ಉಪಸಂಹಾರ

ನಮಗೆ ಸಿಗುವುದು ವಾಲ್ಮೀಕಿ ರಾಮಾಯಣವೊಂದೇ ಅಲ್ಲ. ತನಗೊದಗಿದ ದುಃಖಗಳನ್ನು ತಾಳ್ಮೆಯಿಂದ ಅನುಭವಿಸುತ್ತ ಸಾಮಾನ್ಯ ಮನುಷ್ಯನಂತೆ ನಡೆದುಕೊಳ್ಳುತ್ತಿದ್ದರೂ ರಾಮನಿಗೆ ಯಾವಾಗಲೂ ತಾನು ದೇವಾಂಶಸಂಭೂತನೆಂಬ ಅರಿವಿತ್ತು ಎಂಬುದನ್ನು ಸಂಸ್ಕೃತ ಭಾಷೆಯಲ್ಲೇ ಇರುವ 'ಅಧ್ಯಾತ್ಮ ರಾಮಾಯಣ'ವು ಓದುಗನಿಗೆ ಹೆಜ್ಜೆ ಹೆಜ್ಜೆಗೂ ನೆನಪು ಮಾಡಿಕೊಡುತ್ತದೆ. ಆಮೇಲೆ ಬಂದ ಅನೇಕ ಕವಿಗಳು[೫೧]ರಾಮನ ವಿಭವನಿರ್ಭರ ಚರಿತ್ರೆಯಿಂದ ಸ್ಫೂರ್ತಿಯನ್ನು ಪಡೆದರು ಮತ್ತು ಪ್ರಾದೇಶಿಕ ಭಾಷೆಗಳಿಗೆ ಈ ಎರಡು ರಾಮಾಯಣಗಳನ್ನು ಭಾಷಾಂತರಿಸಿದರು ಇಲ್ಲವೇ ಪ್ರತ್ಯೇಕ ಉಪಾಖ್ಯಾನಗಳನ್ನು ವಿಸ್ತರಿಸಿ ಹೊಸ ಕೃತಿಗಳನ್ನೇ ರಚಿಸಿದರು. ಈ ಪವಿತ್ರ ಕಥಾವಸ್ತುವಿನಿಂದ ಚಿತ್ರಕಾರರೂ ಪ್ರತಿಮಾಶಿಲ್ಪಿಗಳೂ ತಮ್ಮ ಅತ್ಯುತ್ತಮ ವಿಷಯಗಳನ್ನು ಆಯ್ದುಕೊಳ್ಳುತ್ತ ಬಂದಿದ್ದಾರೆ. ಮತ್ತು(ಭಾರತ) ದೇಶದ ನಾನಾ ಭಾಗಗಳಲ್ಲಿ ಧೀರಭಂಗಿಯಲ್ಲಿನಿಂತ ರಾಮನ ವಿಗ್ರಹಗಳನ್ನೊಳಗೊಂಡ ಅಥವಾ ಗೋಡೆಯ ತುಂಬ ಅವನ ಕತೆಯನ್ನು ಬಣ್ಣಗಳಿಂದ ಚಿತ್ರಿಸಿರುವ ದೊಡ್ಡ ದೊಡ್ಡ ದೇವಾಲಯಗಳನ್ನು ನೋಡಬಹುದು. ಕೆಲಸ ಮುಗಿದು ಬಿಡುವು ದೊರೆತ ಮಧ್ಯಾಹ್ನದ ಮೇಲೆ ಅಥವಾ ರಾತ್ರಿಯಲ್ಲಿ ಹೆಂಗಸರು ಮಕ್ಕಳನ್ನೊಳಗೊಂಡ ಭಕ್ತರು ರಾಮಾಯಣದ ವಿವರಣೆಯನ್ನು ಕುತೂಹಲದಿಂದ ಕೇಳಿ ಹಳಬರ ವಿಚಾರಾನುಗುಣವಾದ ಧರ್ಮವನ್ನು ಅರಿತುಕೊಳ್ಳುವುದನ್ನು ಅಲ್ಲಿ ಇಲ್ಲಿ ಕಾಣಬಹುದು. ವಾಲ್ಮೀಕಿಯ ಶಿಷ್ಯರಾದ ಕುಶ–ಲವರೆನ್ನುತ್ತಿದ್ದುದಕ್ಕೂ ಆಧುನಿಕರ ಪಠನಕ್ಕೂ ಸಾಧಾರಣಾಂಶ ಹೆಚ್ಚು ಇಲ್ಲದಾಗಿರಬಹುದಾದರೂ ಈ ಕಥನಕಾರರು ಕಥನಕಲೆಯಲ್ಲಿ ವಿಶೇಷ ಶಿಕ್ಷಣವನ್ನು ಪಡೆದಿರುತ್ತಾರೆ. ಈ ಎಲ್ಲ ಮತ್ತು ಇತರ ಮಾರ್ಗಗಳಿಂದ ಮುನಿ ಮುಂದಿಟ್ಟ ಆದರ್ಶಗಳು ದೇಶದ ಪ್ರತಿಯೊಂದು ಮೂಲೆಗೂ ಹಬ್ಬಿವೆ. ನಿಜವಾಗಿ ಧರ್ಮಸಾಧನೆಗೆಳಸಿರುವ ಅನೇಕರನ್ನು ರೂಪಿಸುವುದರಲ್ಲಿ ಧರ್ಮಾಚಾರಪರಾಯಣನೂ ಕಥಾನಾಯಕನೂ ಆದ ರಾಮನ ಪಾತ್ರವೂ ಆದರ್ಶಕಥಾನಾಯಿಕೆಯಾದ ಸೀತೆಯ ಪಾತ್ರವೂ ಸಾಧನಗಳಾಗಿರುವುವೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ವಾಲ್ಮೀಕಿಯು ಬಹಳ ಬುದ್ಧಿವಂತಿಕೆಯಿಂದವೃತ್ತಿ ಮತ್ತು ಸಾಮಾಜಿಕ ಸ್ಥಾನಮಾನಗಳಿಂದ ನಿರಪೇಕ್ಷಿತವಾಗಿ,

ಪರಹಿತಕ್ಕಾಗಿ ತಮ್ಮ ಸುಗುಣಗಳನ್ನು ಮುಡಿಪಿಡುತ್ತಲೇ ಧರ್ಮಭಕ್ತರು ಆಂತರಿಕ ಪೂರ್ಣತೆಯನ್ನೂ ಮುಕ್ತತೆಯನ್ನೂ ಭೋಗಿಸುವಂತೆ ಜಾಣ್ಮೆಯಿಂದ ವ್ಯಾಪಕವಾದ ಧರ್ಮದ ಆದರ್ಶವನ್ನು ಎತ್ತಿ ಹಿಡಿದಿದ್ದಾನೆ. ತನ್ನ ಅಸಂಖ್ಯಾತ ಪಾತ್ರಗಳ ಉದ್ದೇಶ–ಆಚಾರಗಳಲ್ಲಿ ಮುನಿಯು ನಿದರ್ಶಿಸಿದ ಧರ್ಮದ ಈ ಆದರ್ಶವನ್ನು ಅರಿತು ಆಚರಣೆಗೆ ತಂದರೆ, ಎಲ್ಲ ಪಂಥಗಳೂ ಸದ್ಯದ ಬಿಕ್ಕಟ್ಟನ್ನು ದಾಟಿ ಉಳಿದು, ನಿರ್ವೈರದಿಂದ ಸಹಕರಿಸಿ ದುಡಿದು, ಜನರನ್ನು ಕುಟುಂಬ, ದೇಶ ಅಥವಾ ಇಡಿ ಜಗತ್ತಿನ ಸಮಸ್ಯೆಗಳನ್ನು ಪರಿಹರಿಸಲು ಸಾಕಾಗುವಷ್ಟು ಸ್ವಾರ್ಥತ್ಯಾಗಿಗಳನ್ನಾಗಿ ಮಾಡಬಹುದು.

## ಅಡಿಟಿಪ್ಪಣಿಗಳು

೧. ಈ ಅಧ್ಯಾಯಕ್ಕೆ ವಾಲ್ಮೀಕಿ ರಾಮಾಯಣದ ಇಂದಿನ ಸ್ವರೂಪವೇ ಆಧಾರ.
೨. ರಾಮಾಯಣ I. ೬.೭
೩. ಅದೇ, I. ೬.೮, ೧೪–೧೫
೪. ಅದೇ, II. ೧೦೦, ೪೩–೪೮
೫. ಅದೇ, I. ೬.೨೧; ೫. ೨೦–೨೨, II.೫
೬. ಅದೇ, II. ೧೦೦, ೩೨–೩೩
೭. ಅದೇ, II. ೮೦
೮. ಅದೇ, VI. ೨೨, ೫೦–೭೬
೯. ಅದೇ, II.೮೨, ೨೦
೧೦. ಅದೇ, VI, ೨೨, ೫೮, ೬೦, ೬೮, ೭೫–೭೬
೧೧. ಅದೇ,II. ೨, ೧೫–೧೬
೧೨. ಅದೇ, II.೨, ೨೩–೨೫
೧೩. ಮಹಾಭಾರತ XV. ೮. ೧೭–೨೨; ೯. ೭–೧೭; ೧೦. ೩–೫
೧೪. ರಾಮಾಯಣ VI. ೧೨. ೨೯, ೩೪
೧೫. ಅದೇ, VI. ೩೫. ೧೫–೧೭
೧೬. ಅದೇ, II. ೨. ೩೮–೪೦
೧೭. ಅದೇ, II. ೩೨. ೧೩–೨೨
೧೮. ಅದೇ, ೩೨. ೨೯–೪೩
೧೯. ಭಾಗವತ, X, ೮೧. ೨೦–೨೪

೨೦. ಹೋಲಿಸಿ: ರಾಮಾಯಣ, I. ೧೪–೪೨
೨೧. ರಘುವಂಶ, V. ೨೪, ೩೧
೨೨. ರಾಮಾಯಣ I. ೧೩. ೧೪–೧೭
೨೩. ಅದೇ, I. ೧೪. ೧೧–೧೮
೨೪. ಅದೇ, I. ೧೪–೧೯
೨೫. ಅದೇ, II. ೨, ೩೫
೨೬. ಅದೇ, VI. ೭೪
೨೭. ಅದೇ, VI. ೮೪. ೧೩–೨೨
೨೮. ಅದೇ, IV. ೩. ೨೮–೩೪
೨೯. ಅದೇ, V. ೪೨. ೩೪–೩೬
೩೦. ಅದೇ, V. II. ೩೦–೪೫
೩೧. ಅದೇ, VI. ೪೦. ೧೦–೧೧
೩೨. ಅದೇ, VI. ೪೧–೪೯
೩೩. ಅದೇ, VI. III. ೧೧–೧೪, ೧೧೮. ೬–೧೦, ೧೩–೩೧, ೧೨೮. ೧೧೭
೩೪. ಅದೇ, VII ೯, ೨೨–೨೩
೩೫. ಬ್ಬ.ಉ. VI. ೪. ೧೪
೩೬. ರಾಮಾಯಣ, II. ೨೭.೧೦
೩೭. ಅದೇ, I. ೭೩, ೨೬–೨೭
೩೮. ಅದೇ, V. ೨೧. ೧೮–೨೦
೩೯. ಅದೇ, V. ೨೨, ೨೨
೪೦. ಅದೇ, V. ೨೧, ೨೩
೪೧. ಅದೇ, VI. ೪೮, ೨೦–೨೧
೪೨. ಅದೇ, VI. ೧೧೩. ೩೭–೩೮, ೪೩–೪೪
೪೩. ಅದೇ, VI. ೧೧೫. ೨೦–೨೩
೪೪. ಅದೇ, VI. ೧೧೬. ೨೩–೨೭; ೧೧೭–೧೧೮
೪೫. ಅದೇ, VI. ೧೧೭. ೬–೧೧

೪೬. ಅದೇ, I. ೧೮. ೨೮, ೩೬–೩೭, ೨೨. ೨೩

೪೭. ಅದೇ, VI. ೫೦, ೫೩–೫೭

೪೮. ಅದೇ, VI. ೪೯, ೪–೩೦

೪೯. ಅದೇ, VI. ೧೦೫. ೨–೨೯; ೧೦೮, ೩–೪

೫೦. ಉದಾ: ಭರತನಿಗೆ ವಸಿಷ್ಠ ಮಾಡಿದ ಉಪದೇಶ ಮತ್ತು ಕೈಕೆ–ರಾಮರ ನಡುವಿನ ಮಾತುಕತೆ(II.೯)

೫೧. ಭವಭೂತಿ(ಸಂಸ್ಕೃತ), ತುಲಸೀದಾಸ(ಹಿಂದಿ), ಎಜುಟ್ಟಚ್ಚನ್(ಮಲೆಯಾಳಂ) ಇತ್ಯಾದಿ.



**['ಯುಗಯಾತ್ರೀ ಭಾರತೀಯ ಸಂಸ್ಕೃತಿ']**

# ೩. ಕಾಳಿದಾಸ ಕಂಡ ಭಾರತ

ಭಾರತದಲ್ಲಿ ವೇದಗಳದ್ದು ಆಧ್ಯಾತ್ಮಿಕ ಯುಗ. ಎರಡನೆಯದು ರಾಮಾಯಣ ಮಹಾಭಾರತಗಳ ಯುಗ. ಅದರಲ್ಲಿ ರಾಮಾಯಣಧ ಪಾತ್ರಗಳು ಹೆಚ್ಚಾಗಿ ನೈತಿಕಾನೈತಿಕ ಪ್ರೇರಣೆಗಳಿಗೆ ಪ್ರತಿಕ್ರಿಯೆ ಎಸಗುವುದನ್ನು ಮುಖ್ಯ ಪ್ರವೃತ್ತಿಯನ್ನಾಗಿ ಉಳ್ಳವುಗಳು ಎನಿಸಿವೆ. ಮಹಾಭಾರತದ ಪಾತ್ರಗಳಾದರೋ ನೈತಿಕ ಕಲ್ಪನೆಗಳನ್ನೂ ಆಧ್ಯಾತ್ಮಿಕ ಆದರ್ಶಗಳನ್ನೂ ಯುಕ್ತಿಯುಕ್ತವಾದ ಚರ್ಚೆಗೊಳಪಡಿಸಿ, ಅದರಿಂದ ಬಂದ ನಿರ್ಧಾರವನ್ನಾಧರಿಸಿ ನಡೆದುಕೊಳ್ಳುವುದೇ ಹೆಚ್ಚು. ಎಂದರೆ ಇದು ಭಾರತೀಯ ನಾಗರಿಕತೆಯ ನೈತಿಕ-ಬೌದ್ಧಿಕ ಯುಗವೆಂದು ಹೇಳಬಹುದು.

ಮೂರನೆಯದು ಕಾಳಿದಾಸ ಯುಗ. ಇದು ಹಿಂದಿನ ಎರಡು ಯುಗಗಳಿಗಿಂತ ಹೆಚ್ಚಾಗಿ, ಆರೋಗ್ಯಕರವಾದ ವೈಷಯಿಕ ಪ್ರವೃತ್ತಿಯನ್ನು ಪ್ರಧಾನವಾಗಿ ಇಟ್ಟುಕೊಂಡ ಯುಗ. ಇದರ ಭಾಷಾಶೈಲಿಯಿಂದಲೂ ಕಾರ್ಯವೈವಿಧ್ಯದ ಉಲ್ಲೇಖದಿಂದಲೂ ಅಂದಿನ ಜನಜೀವನದ ಭಾವನಾಜೀವನದ ಆಳ-ಅಗಲಗಳು ರೋಮಾಂಚನಕಾರಿಯಾಗಿ ತಿಳಿದುಬರುತ್ತವೆ. ಕಾಳಿದಾಸನ ಸಾಹಿತ್ಯವು ಕಣ್ಣೆದುರಿಡುವ ನಾಗರಿಕತೆಯಲ್ಲಿ ಪ್ರೌಢಕಲ್ಪನಾ ಶಕ್ತಿಯು ಅವರ ವಿವಿಧ ವಿಚಾರ-ಭಾವನೆಗಳ ಮೂಲಕ ಹರಿಯುವ ಸುಖ-ಸಂತೋಷಗಳ ಪ್ರವಾಹದ ಶಯ್ಯೆಯಾಗಿ ಚಲಿಸುವ ಅಂಶ ಎದ್ದು ಕಾಣುತ್ತದೆ. ಅಂದಿನ ಸಮೃದ್ಧ ಜೀವನದಲ್ಲಿ ಉದ್ಬುದ್ಧವಾದ ಭಾವ-ರಸಗಳಲ್ಲಿ ಪಡುವ ಆನಂದ ಸಮೃದ್ಧಿಯ ಅಭಿವ್ಯಕ್ತಿಯು ಯಾರನ್ನಾದರೂ ದಂಗುಬಡಿಸದಿರದು. ಅಲ್ಲಿ ತೋರುವ ಹರ್ಷ-ವಿಷಾದಗಳ ಪರಮಪರಿಮಾಣವು ಅನ್ಯಾದೃಶವಾಗಿದೆ. ಅಲ್ಲಿಯ ಗಾಂಧರ್ವ ಸ್ವಾತಂತ್ರ್ಯದ ಪ್ರಣಯ, ಪರಿಣಯ, ವಿಯೋಗ, ಸಂಯೋಗಗಳು ಹುಟ್ಟಿಸುವ ಶೋಕ-ಉಲ್ಲಾಸಗಳ ಉನ್ಮಾದಕ ಪರಿಣಾಮಗಳು ಅಂದಿನ ಜನಜೀವನದ ಸೌಂದರ್ಯಾನ್ವೇಷಣ, ಸಹಜ ಜೀವನೋತ್ಸಾಹ ಮತ್ತು ತೃಪ್ತಿಯ ಪರಾಕಾಷ್ಠೆಗಳ ಸಂಕೇತಗಳಾಗಿವೆ.

ಆತ್ಮದ ಮತ್ತು ಕಲ್ಪನಾಬಲವುಳ್ಳ ವಿಚಾರಶಕ್ತಿಯ ಮೂಲಕ ಸಾಧಿಸಬೇಕಾಗಿದ್ದ ಸಿದ್ಧಿಗಳು ಕಾಳಿದಾಸನು ಭಾರತದಲ್ಲಿ ಅವತರಿಸುವ ಹೊತ್ತಿಗೆ ಮುಗಿದುಹೋಗಿದ್ದವು- ಎಂದಿದ್ದಾರೆ ಶ್ರೀ ಅರವಿಂದಘೋಷರು. ಆದುದರಿಂದಲೇ ಕಾಳಿದಾಸನ ಭಾರತವು ಪಂಚೇದ್ರಿಯಗಳ ಅನುಭವಶಕ್ತಿಯನ್ನು ಒರೆಗೆ ಹಚ್ಚುವಷ್ಟು ತೀಕ್ಷ್ಣವಾಗಿ ಪ್ರಪಂಚದ ವಸ್ತುಗಳ ತಿರುಳನ್ನು ಕೆರೆದು ಕೊರೆದು ಅರೆದು ನೋಡುವ ಮಹೋತ್ಸಾಹವನ್ನು ಪ್ರದರ್ಶಿಸುತ್ತದೆ. ಆ ಉತ್ಸಾಹದ ಪರಮಾವಧಿ ಎಂದರೆ ದೇವರನ್ನು ಕೂಡ ನಿಸರ್ಗದಲ್ಲಿ ಏಕೆ ಕಾಣಲು ಸಾಧ್ಯವಿಲ್ಲ? ಎಂಬ ಛಲದಂಕಮಲ್ಲತನದ ಶೋಧಕ ಸಹಜ ಕುತೂಹಲ.

ಕಾಳಿದಾಸನ ಜೀವಿತಕಾಲದಲ್ಲಿ ಭಕ್ತಿಪಂಥದ ನವವಿಧ ಭಕ್ತಿಗಳಲ್ಲಿ ಗಣ್ಯವಾದ ಮಧುರ ಅಥವಾ ಪತಿ–ಪತ್ನೀಭಾವವು ಪುರಾಣ ಸಾಹಿತ್ಯದಲ್ಲಿ ರೂಪಗೊಳ್ಳುತ್ತಿತ್ತು. ಅದರ ಪ್ರಕಾರ ದೇವ–ಜೀವರು ಪತಿ–ಪತ್ನಿಯರು; ಅಂಥ ಮಧುರ ಪ್ರೇಮ ಅವರಲ್ಲಿರಬಲ್ಲುದು. ಈ ದೇವ–ಜೀವನ ಜೋಡಿಗೆ ಸರಿಸಮವಾದ ಈಶ್ವರ–ಶಕ್ತಿ ಪುರುಷ–ಪ್ರಕೃತಿಗಳ ಜೋಡಿಗಳೂ ಸಂಕೇತಬದ್ಧವಾದ ಪೌರಾಣಿಕ ಕತೆಗಳಲ್ಲಿ ಆಗ ರೂಪಗೊಳ್ಳುತ್ತಿದ್ದವು. ಅದರಿಂದಲೇ ಆಂಗ್ಲಮಹಾಕವಿ ಮಿಲ್ಟನ್ ಮಹಾಶಯನ "Paradise Lost - ಕಳೆದು ಕೊಂಡ ಸ್ವರ್ಗ" ಎಂಬ ಮಹಾಕಾವ್ಯಕ್ಕೆ ಸರಿ ದೊರೆಯೆನಿಸಿದ "ಕುಮಾರಸಂಭವ" ಎಂಬ ಮಹಾಕಾವ್ಯವನ್ನು ಕಾಳಿದಾಸ ಸರಸ್ವತಿಯು ಅಭಿವ್ಯಂಜಿಸಿದಳು. ಅದು ಉಕ್ತಯುಗದ ಮಹೋನ್ನತ ಕೃತಿ. ಶಿವ–ಪಾರ್ವತಿಯರ ಪರಿಣಯವು ಪುರುಷ–ಪ್ರಕೃತಿಗಳ ಸಂಗಮವನ್ನು ಸೂಚಿಸುತ್ತದೆ. ಪುರುಷನು ಪರಮಾತ್ಮ; ಪ್ರಕೃತಿ ಇಲ್ಲಿ ಕ್ರಿಯಾಶೀಲ ನಿಸರ್ಗ, ಜಗನ್ಮಾತೆ. ಇದರಲ್ಲಿರುವ ಪಾರ್ವತಿಯ ಶಿವಾನ್ವೇಷಣವು ನಿಸರ್ಗದ ಆತ್ಮವಾಗಿರುವ ಪರಮಾತ್ಮನ ಶೋಧವನ್ನು ಪ್ರತಿನಿಧಿಸುತ್ತದೆ.

"ರಘುವಂಶವು" ಕಾಲಿದಾಸನು ಬರೆದ ಮತ್ತೊಂದು ಮಹಾಕಾವ್ಯ. ಅದರಲ್ಲಿ ದಿಲೀಪ–ರಘು–ಅಜ–ರಾಮ ಮುಂತಾದ ಸೂರ್ಯವಂಶದ ಆದರ್ಶರಾಜರ ಕತೆಗಳಿವೆ. ಅಲ್ಲಿಯ ರಾಜ–ರಾಣಿ–ಪುರೋಹಿತ–ಮಂತ್ರಿ ಮುಂತಾದ ಪಾತ್ರಗಳ ಆಚಾರ–ವಿಚಾರಗಳು ಕಾಳಿದಾಸ ಕನಸು ಕಂಡ ಆದರ್ಶ ಹಿಂದು ನಾಗರಿಕತೆಯ ಮೂಲಸ್ತಂಭಗಳಾಗಿವೆ. ಆಧ್ಯಾತ್ಮಿಕ, ನೈತಿಕ, ಬೌದ್ಧಿಕ, ಭಾವನಾತ್ಮಕ ಮತ್ತು ವ್ಯಾವಹಾರಿಕ ಜೀವನ ನಿಯಮಗಳನ್ನು ಅಲ್ಲಿ "ಸೂತ್ರೇಮಣಿಗಣಾ ಇವ" ಎಂಬಂತೆ ಕಾಣಬಹುದಾದ ವರ್ತನಾ ಚಿತ್ರಗಳು ಹೃದ್ಬುದ್ಧಿಗಳೆರಡನ್ನೂ ತಣಿಸುವಂತಿವೆ. "ಸರ್ವೋಪನಿಷದೋಗಾವೋ ದೋಗ್ಧಾಗೋಪಾಲ ನಂದನಃ" ಎಂಬ ಕೀರ್ತಿ ಕೃಷ್ಣನದಾದರೆ, "ಭಾರತೀಯ ಸಂಸ್ಕೃತಿಯ ಧ್ಯೇಯ ಚತುಷ್ಟಯವೆನಿಸಿದ ಧರ್ಮ, ಅರ್ಥ, ಕಾಮ, ಮೋಕ್ಷಗಳ ಸಮನ್ವಿತ ಸಾರವನ್ನು ಕಾಂತಾಸಂಮಿತಿಯಿಂದ ಧ್ವನಿಸಿದವನು" ಎಂಬ ಕೀರ್ತಿಯನ್ನು ಕಾಳಿದಾಸನಿಗೆ 'ಶಾಕುಂತಲ–ಕುಮಾರಸಂಭವ'ಗಳ ಜೊತೆಗೆ ರಘುವಂಶ ಮಹಾಕಾವ್ಯ ಹೆಚ್ಚಾಗಿ ತಂದುಕೊಟ್ಟಿದೆ ಎನ್ನಬಹುದು. ಇದರಂತೆಯೇ ಅವನು ಬರೆದ ಋತು ಸಂಹಾರ, ಮೇಘದೂತ, ಶಾಕುಂತಲ, ವಿಕ್ರಮೋರ್ವಶೀಯ, ಮಾಳವಿಕಾಗ್ನಿಮಿತ್ರಗಳೂ ಆ ಕಾಲದ ನಾಗರಿಕತೆಯ ಅತ್ಯುತ್ತಮ ಪ್ರಾತಿನಿಧಿಕ ಪ್ರತೀಕಗಳಾಗಿವೆ; ಅಂದಿನ 'ಶೃಂಗಾರ' ರಸಿಕತೆಯ ಸಾರಭೂತವಾದ ಪಡಿಯಚ್ಚುಗಳಾಗಿವೆ.

ಲೌಕಿಕ ಜೀವನದ ಪರಮಾದರ್ಶಗಳನ್ನು ರಘುವಂಶದಲ್ಲಿ ಕಾಣುವಂತೆ ದಾಂಪತ್ಯಜೀವನದ ಪರಮಪದವನ್ನು ನಾವು ಶಾಕುಂತಲದಲ್ಲಿ ಕಾಣಬಹುದು. "ಧರ್ಮಾವಿರುದ್ಧೋ ಭೂತೇಷು ಕಾಮೋಮೇಽಸ್ಮಿ ಭರತರ್ಷಭ" ಎಂಬ ಮಾತಿಗದು ನಿರಂತರ ಸಾಕ್ಷಿಯಾಗಿದೆ. "ಹೇಮ್ನಃ ಸಂಲಕ್ಷ್ಯತೇಹ್ಯಗ್ನೌವಿಶುದ್ಧಿಃ ಶ್ಯಾಮಿಕಾಽಪಿವಾ" ಎಂದು ಕಾಳಿದಾಸನೇ ಹೇಳಿದಂತೆ ವಿರಹಾಗ್ನಿಯಲ್ಲಿ ದುಷ್ಯಂತ ಶಕುಂತಲೆಯರ ಪ್ರೇಮವೆಂಬ

ಚೆನ್ನವು ಸುಟ್ಟು ಶುದ್ಧವಾಗಿದೆ. "ಪಾವಿತ್ರ್ಯವೇ ಸೌಂದರ್ಯ" ಎಂಬ ಸೌಂದರ್ಯ ಲಕ್ಷಣವನ್ನು ಗಾಂಧಿಯವರು ಹೇಳಿದ್ದು ಈ ಸಂದರ್ಭಕ್ಕೆ ಚೆನ್ನಾಗಿ ಅನ್ವಯಿಸುತ್ತದೆ. "ಭರ್ತೃ ಸ್ನೇಹಾತ್ ಸಾಹಿದಗ್ಧಾಽಪ್ಯದಗ್ಧಾ" ಎಂದು ವಾಸವದತ್ತೆಯನ್ನು ವರ್ಣಿಸಿದಂತೆ ಶಾಕುಂತಲದ ಕೊನೆಯ ಅಂಕದಲ್ಲಿ ಬರುವ ಶಕುಂತಲೆಯನ್ನು ಬಣ್ಣಿಸಬಹುದಲ್ಲವೆ?

ಈ ಪ್ರಕಾರ ಕಾಳಿದಾಸನು ತನ್ನ ಕೃತಿಗಳಲ್ಲಿ ಪಡಿಮೂಡಿಸಿರುವ ಲೌಕಿಕ ಸಂಸ್ಕೃತಿಯು ಸಮೃದ್ಧಭಾರತದ ಪರಿಶುದ್ಧ ಜೀವನದ ಅತ್ಯುತ್ತಮ ಮಾದರಿಯಾಗಿದೆ, ಸತ್ವ–ಸ್ವರೂಪಗಳೆರಡರಲ್ಲೂ ಅತ್ಯಂತ ನಯವಾದ ಕಲೆಗಾರಿಕೆಯನ್ನು ನಾವು ಕಾಳಿದಾಸನ ಕೃತಿಗಳಲ್ಲಿ ನೋಡಬಹುದಾಗಿದೆ. ಅವನ ಮಾತಿನಲ್ಲಿಯೇ ಹೇಳುವುದಾದರೆ ಅವೆರಡೂ ಪರಮೇಶ್ವರ–ಪಾರ್ವತಿಯರಂತೆ ಏಕದೇಹಸ್ಥ ಏಕಜೀವದ ಸಮರಸ ಸ್ಥಿತಿಯಲ್ಲಿವೆ. ಋಷಿಕೃತಿಯಲ್ಲಿ ವಾಕ್ಕು ಅರ್ಥವನ್ನು ಅನುಸರಿಸಿ ಧಾವಿಸಿದರೆ, ಈ ಕವಿ ಕೃತಿಯಲ್ಲಿ ಏಕಕಾಲದಲ್ಲಿ ವಾಗರ್ಥಗಳು ಪರಸ್ಪರ ಉನ್ಮುಖವಾಗಿ ಧಾವಿಸುತ್ತವೆ. ಬ್ರಹ್ಮನು ಅದ್ವಿತೀಯನಾಗಿರುವಂತೆ, ಉಪಮಾತೀತನಾಗಿರುವಂತೆ, ಇಂಥ ಕಾವ್ಯಗುಣವುಳ್ಳ ಕೃತಿಕಾರ ಇವನೊಬ್ಬನೇ ಎಂದರೆ ಅತಿಶಯೋಕ್ತಿಯಾಗಲಾರದು.

**ಜಯತು ಕಾಲಿದಾಸ ಸರಸ್ವತೀ!**



**[ಆಕರ: 'ಕನ್ನಡ ನುಡಿ' – ಏಪ್ರಿಲ್ ೧೯೬೨**
**ಫೆಬ್ರವರಿ ೨೮ರ ಸಂಜೆ ಕುಮಟೆಯಲ್ಲಿ ನಡೆದ ಕಾಳಿದಾಸ ಜಯಂತಿಯಲ್ಲಿ**
**ಮಾಡಿದ ಪ್ರಾಸ್ತಾನಿಕ ಭಾಷಣ]**

# ೪. ಹೈವನಾಡಿನ ಚರಿತ್ರೆ

## ಪೀಠಿಕೆ

ಕರ್ನಾಟಕದ ಪ್ರಾಚೀನ ಇತಿಹಾಸದಲ್ಲಿ ಪುರ-ಜನಪದಗಳ ಭೌಗೋಲಿಕ ಮೇರೆಗಳೂ ಸಾಮಾಜಿಕ ಗುಂಪುಗಳೂ ಕೃಷಿ ಗೋರಕ್ಷೆ ವಾಣಿಜ್ಯ ವ್ಯವಹಾರಗಳ ಉತ್ಪಾದನ-ವಿತರಣ ಸಾಧನಗಳೂ ಸಂಪರ್ಕ ಮಾರ್ಗಗಳೂ ಇಂದಿಗಿಂತ ಬಹಳ ವಿಭಿನ್ನವಾಗಿದ್ದವು; ಆದುದರಿಂದ ಊರುಗಳ ಪ್ರಾಮುಖ್ಯವೂ ಪರಿಸರದ ಲಕ್ಷಣಗಳೂ ಭಿನ್ನವಾಗಿದ್ದವು; ಜೀವನ ಪ್ರವಾಹದಲ್ಲಿ ಜನತೆಯನ್ನು ನಡೆಸಿಕೊಂಡು ಹೋಗುತ್ತಿದ್ದ ಮಹಾವಿಚಾರಗಳ ದಿಕ್ಕುಗಳೂ ಬೇರೆಯಾಗಿದ್ದವು. ಸಾಂಸ್ಕೃತಿಕ ಮೌಲ್ಯಗಳಿಗಿಂತ ಹೆಚ್ಚಾಗಿ ನಾಗರಿಕತೆಯ ದೃಶ್ಯ ಆವರಣ ತೀರ ಪ್ರತ್ಯೇಕವಾಗಿತ್ತು. ಪೌರಾಣಿಕ ಯುಗದ ಬಳಿಕ ಉದಯವಾದ ಐತಿಹಾಸಿಕ ಕಾಲದಲ್ಲಿ 'ಅಮರಾರ್ಣವ'ವೆಂದು ಕರೆಯಲ್ಪಡುತ್ತಿದ್ದ ಪಶ್ಚಿಮ ಸಮುದ್ರತೀರ ಪ್ರದೇಶದ ವೆಂಗುರ್ಲೆಯಿಂದ ನೀಲೇಶ್ವರದವರೆಗಿನ ಕನ್ನಡ(Kanara)ವಿಭಾಗವು ಕುಂತಳ ದೇಶದ ಅವಿಭಾಜ್ಯ ಅಂಗವಾಗಿತ್ತು. ಇದನ್ನು ಕ್ರಿ.ಪೂ.೪೦೦ರಿಂದ ಮೌರ್ಯರೂ ಶಾಲಿವಾಹನರೂ ಚುಟುಗಳೂ ಅನುಕ್ರಮವಾಗಿ ಆಳುತ್ತ ಹೋದರು. ಪಲ್ಲವರ( ದಾಯಾದರಾಗಿದ್ದ?) ಚುಟುಗಳ ಆಳಿಕೆ ಕ್ರಿ.ಶ.೨೮೦ರಲ್ಲಿ ಮುಗಿದು ಕುಂತಳದ ಸ್ಥಳೀಯ ಅರಸರಾಗಿಕದಂಬರು ಆಳತೊಡಗಿದರು. ಕುಮಟಾ ಮಂಡಲದ ಅಂದಿನ ಆಗುಹೋಗುಗಳು ಅವಿಶಿಷ್ಟ ಮತ್ತು ಅಪ್ರಥಿತ. ಆ ಸಾಮ್ರಾಜ್ಯಗಳ ಸಾಮಾನ್ಯ ಜೀವನೋದಧಿಯಲ್ಲಿ ಸೇರಿದ್ದ ಒಂದು ನದಿಯಾಗಿತ್ತು ಅದರ ಜೀವನ ವ್ಯಾಪಾರ. ಕದಂಬ ಯುಗದಲ್ಲಿ ಇಂದಿಗಿಂತ ವಿಸ್ತಾರವಾಗಿದ್ದ ಅದರ ಮಂಡಲಪರಿಧಿಯು ರೂಪಿಸಲ್ಪಡತೊಡಗಿತು; ಅದರ ಕೊನೆಯಲ್ಲಿ ಸ್ಪಷ್ಟವಾದ ರೇಖಾವಿನ್ಯಾಸ ಕಾಣಿಸಿತು. ಅದೇ ತುಳುವ-ಕೊಂಕಣಗಳ ನಡುವಿನ ಹೈವನಾಡು!

ತುಳುವ-ಹೈವನಾಡುಗಳನ್ನು ತೊಲೆಮಿ 'ಅಹಿದೇಶ'ವೆಂದು ಕರೆದ. ಅವು ಕದಂಬಯುಗದ ಆದಿಯಲ್ಲಿ ಕುಂತಳ ಅಥವಾ ಕದಂಬ ಮಂಡಲ(ಕದಂಬವಾಡಿ) ಎಂಬ ರಾಜ್ಯದ ಅಂಗಗಳಾಗಿದ್ದವು. ನೀಲೇಶ್ವರದಿಂದ ಬ್ರಹ್ಮಾವರದವರೆಗೆ ಮೂಲ ತುಳು; ಆಮೇಲಿನ ತುಳು ಕುಂದಾಪುರದ ಅಥವಾ ಗಂಗೊಳ್ಳಿಯವರೆಗಿನ ಕನ್ನಡಭಾಗವನ್ನು ಗರ್ಭೀಕರಿಸಿಕೊಂಡಿತು. ಆಗ ಹೈವವು ಗಂಗೊಳ್ಳಿಯಿಂದ(ಅಂಕೋಲೆ-ಕಾರವಾರ ತಾಲೂಕುಗಳ ನಡುವಿನ) ಗಂಗಾವಳಿಯ ವರೆಗಿನದಾಗಿ ಬಹುಕಾಲ ಉಳಿಯಿತು. ಅದೇ ಕ್ರಿ.ಶ.೭ನೆಯ ಶತಮಾನದಲ್ಲಿಯೇ ಕುಲಬಾ ಥಾನಾ ಜಿಲ್ಲೆಗಳಿಗಷ್ಟೇ ಪರಿಸೀಮಿತವಾಗಿದ್ದ ಕೊಂಕಣವು ಉತ್ತರ-ದಕ್ಷಿಣವಾಗಿ ರತ್ನಗಿರಿ, ಗೋವೆ,

ಕಾರವಾರಗಳನ್ನು ದಾಟಿ ಗಂಗಾವಳಿಯ ಉತ್ತರದ ದಂಡೆಯವರೆಗಿನ ಪ್ರದೇಶವನ್ನು ತನ್ನ ಹೆಸರಿನ ವ್ಯಾಪ್ತಿಯಲ್ಲಿ ತಂದುಕೊಂಡಿತು.

ಅಹಿದೇಶವು ನಾಗಾರಾಧಕರ ನಾಡು. ನಾಗನು ಸುಬ್ರಹ್ಮಣ್ಯನ ಪ್ರತಿನಿಧಿ. ಸುಬ್ರಹ್ಮಣ್ಯನು ದೇವತೆಗಳ ಸೇನಾಪತಿ, ಯುದ್ಧದೇವ. ಮಯೂರ ಅವನ ವಾಹನ. ಅವನ ಸ್ಫೂರ್ತಿಯಿಂದಲೇ ಬನವಾಸಿ ಕೇಂದ್ರದಿಂದ ಮಯೂರಶರ್ಮನು(ವರ್ಮನಾಗಿ) ಕ್ರಿ.ಶ.೨೮೦ರಲ್ಲಿ ಕದಂಬ ಸಾಮ್ರಾಜ್ಯವನ್ನು (ನೀಲೇಶ್ವರದಿಂದ ಬ್ರೋಚಿನ ಅಥವಾ ಭಡೋಚಿನವರೆಗೆ) ಕಟ್ಟಿದನು. ವಿಜಯನಗರದ ಕಾಲದವರೆಗೂ ಕನ್ನಡದ ಅನೇಕ ಅರಸು ಮನೆತನಗಳ ಹೆಮ್ಮೆಯ ಯುದ್ಧ ದೇವತೆ ಕುಮಾರ! ವಿಧೇಯ ನೀತಿಗಳ ಆಕರ ರಾಮಾಯಣ!

ಐತಿಹಾಸಿಕವಾಗಿ ಕ್ರಿ.ಶ.೯೧೨ರ (E.C.VIII Sb 479, P.81)ಶಾಸನವು ಬಹುಶಃ ಮೊದಲ ಬಾರಿಗೆ ಹೈವವನ್ನು (ಗೋಕರ್ಣ ಮಂಡಲವನ್ನು) ಹೆಸರಿಸುತ್ತದೆ. ಕ್ರಿ.ಶ.೧೦೪೭ರ ಶಾಸನವು ಮಹಾಮಂಡಲೇಶ್ವರ ಚಾಮುಂಡರಾಯರಸನು ಹೈವದ(ಅಥವಾ ಹೈವೆಯ) ರಾಜ್ಯಪಾಲರಾಗಿದ್ದನೆನ್ನುತ್ತದೆ. ಕಳಚುರ್ಯ ಸೇನಾಪತಿ ಕೇಶಿರಾಜನು ೧೧೫೯ರಲ್ಲಿ ಅದನ್ನು ಗೆದ್ದುಕೊಂಡ. ಗುಂದದಬ್ಬೆಯು (ಗುಂದದ+ಅಬ್ಬೆ) ಹೈವನಾಡಿನ ದೇವತೆ ಎಂಬುದು ಪ್ರಥಮೋಕ್ತ ಶಾಸನದಿಂದ ಗೊತ್ತಾಗುತ್ತದೆ. ಕುಂತಳದ ಹಿಂದಿನ ಹೆಸರು ಗೋರಾಷ್ಟ್ರ ದೇಶ; ಗೋಕರ್ಣ ಮಂಡಲ ಆಗ ಅದರ ಅಂಗವೆಂದು ಪ್ರಸಿದ್ಧವಾಗಿತ್ತು! ಶ್ರೀ ಶೈಲದ ಮಲ್ಲಿಕಾರ್ಜುನ, ನಾಶಿಕದ ತ್ರ್ಯಂಬಕೇಶ್ವರ, ನಂಜನಗೂಡಿನ ನಂಜುಂಡೇಶ್ವರ, ಧರ್ಮಸ್ಥಳದ ಮಂಜುನಾಥೇಶ್ವರ ಮುಂತಾದವರು ವಿಶಾಲ ಕುಂತಳದ ಗಡಿ ಪ್ರದೇಶದ ದೇವತೆಗಳಾಗಿದ್ದರು.

ರಾಷ್ಟ್ರಕೂಟ ದಂತಿದುರ್ಗ ಸಾರ್ವಭೌಮನ ಪ್ರಶಾಸನಾರಂಭ ಕ್ರಿ.ಶ.೭೫೩ರಲ್ಲಿ, 'ಹಯ್ವೆ೫೦೦' (೫೦೦ ಕಂದಾಯನಿರೂಪಿತ ಹಳ್ಳಿಗಳ ಒಂದು ನಾಡು) ಅವನ ಸಾಮ್ರಾಜ್ಯದ ಒಂದು ನಾಡು. ಈ ಬಗೆಯ ನಾಡುಗಳ ವಿಂಗಡಣ ಆ ಕಾಲದಿಂದ ಶುರುವಾಯಿತೆನ್ನಲಾಗಿದೆ. ಹಯ್ವೆ ಅಥವಾ ಹೈವವು ಗಂಗೊಳ್ಳಿ ಹೊಳೆಯಿಂದ ಗಂಗಾವಳಿ ಹೊಳೆಯವರೆಗೆ ಗಟ್ಟದ ತಪ್ಪಲಿನ ಊರುಗಳನ್ನೊಳಗೊಂಡು ಒಂದು ನಾಡಾಯಿತು.

ಹೈವದ ದಕ್ಷಿಣಕ್ಕೆ ಆಳ್ವಖೇಡವೆಂಬ ಹೆಸರು ಪಡೆದಿದ್ದ ತುಳುನಾಡಿತ್ತು. ಆಳ್ವಖೇಡದ ಗ್ರಾಮ ಸಂಖ್ಯೆ ೬೦೦೦. ತೊಲೆಮಿ ಅದನ್ನು 'ಒಲ್ಯೆಖೋರ' ಎಂದು ಕರೆದ. ಚಂದ್ರಭಾಗಾ ನದಿಯಿಂದ ದಿವಂಗತ ಡಾಕ್ಟರ್ ಎ.ವಿ.ಬಾಳಿಗರ ಹುಟ್ಟೂರಹತ್ತಿರದ ಕಲ್ಯಾಣಪುರದ ಹೊಳೆಯವರೆಗಿನ ಬಹುಸಂಖ್ಯ ಜನರು ಅಂದಿನಿಂದ ಇಂದಿನವರೆಗೂ ತುಳು ಮಾತೃಭಾಷೆಯ ಕನ್ನಡಿಗರು. ಹೈವದ ಉತ್ತರಕ್ಕೆ ಅದಕ್ಕೇ ಸೇರಿದ್ದು ಆಮೇಲೆ ಕೊಂಕಣವೆನ್ನಿಸಿಕೊಂಡ ದಕ್ಷಿಣ ಕೊಂಕಣ–೯೦೦. ಅದರ ಉತ್ತರಕ್ಕೆ ಕೊಲಾಬಾ ಥಾಣಾ ಜಿಲ್ಲೆಗಳನ್ನೊಳಗೊಂಡ(ಮೂಲ) ಉತ್ತರ ಕೊಂಕಣ–೧೪೦೦. ಇಂದಿನ ಮಹಾರಾಷ್ಟ್ರದ ತೀರ ಪ್ರದೇಶವು ಅಂದು ಉತ್ತರಕೊಂಕಣದಲ್ಲಿ ಗರ್ಭಿತವಾಗಿತ್ತು. 'ಮಹಾರಾಷ್ಟ್ರಿ' ಎಂಬ

ಪ್ರಾಕೃತ ಅಂದು(ಸುಮಾರು ೬–೭ನೆಯ ಶತಮಾನಗಳಲ್ಲಿ) ರೂಪಗೊಂಡಿತ್ತು. ಮರಾಠಿ ಭಾಷೆಯ ಉದಯ ಸುಮಾರು ೧೦ನೆಯ ಶತಮಾನದಲ್ಲಿ. ಕನ್ನಡಿಗರಾಗಿದ್ದ ಸೇವುಣ ಯಾದವರು ದೇವಗಿರಿಯನ್ನು ರಾಜಧಾನಿಯನ್ನಾಗಿಮಾಡಿಕೊಂಡು ಉತ್ತರಕೊಂಕಣದಲ್ಲಿ ೭೫೪ರಲ್ಲಿ ಚಿಕ್ಕ ರಾಜ್ಯವೊಂದನ್ನು ಕಟ್ಟಿಕೊಂಡು ಆಳತೊಡಗಿದ್ದರು. ಅವರಿಗಿಂತ ಹಿಂದೆ ಅದನ್ನು ಬಾದಾಮಿಯ (ವೆಂಗಿಯ) ಚಾಲುಕ್ಯರೂ (ಅವರಿಗಿಂತ ಹಿಂದೆ) ಕದಂಬ ಚಕ್ರವರ್ತಿಗಳೂ ಅದನ್ನು ತಮ್ಮ ಸಾರ್ವಭೌಮತ್ವಕ್ಕೊಳಪಡಿಸಿಕೊಂಡಿದ್ದರು. ಯಾದವಸೇವುಣರು ಚೆನ್ನಾಗಿಬೆಳಕಿಗೆ ಬಂದದ್ದು ಭಿಲ್ಲಮನ ಕಾಲದಲ್ಲಿ (೧೧೮೭–೧೧೯೧). ಅವನ ರಾಜ್ಯವು ನಾಸಿಕದಿಂದ ದೇವಗಿರಿಯವರೆಗಿತ್ತು. ಭೋಜ ಶಿಲಾಹಾರನ ವಶದಲ್ಲಿದ್ದ ಕೊಲ್ಲಾಪುರದ ಕೊಂಕಣ ರಾಜ್ಯವನ್ನು ಯಾದವರ ಜೈತುಗಿ(೧೧೯೧–೧೨೧೦) ತನ್ನ ರಾಜ್ಯಕ್ಕೆ ಅಧೀನಗೊಳಿಸಿಕೊಂಡ. ಉತ್ತರ ಕೊಂಕಣದ ಕೆಲಭಾಗವನ್ನೂ ದಕ್ಷಿಣ ಕೊಂಕಣವನ್ನೂ ಆಗ ಕದಂಬರು ಕಲ್ಯಾಣಿಯ ಚಾಲುಕ್ಯರ ಸಾರ್ವಭೌಮತ್ವದಲ್ಲಿ(೯೬೬ರಿಂದ) ಆಳಿಕೊಂಡು ಬರುತ್ತಿದ್ದರು. ೧೩೪೦ರ ಅನಂತರ ದಕ್ಷಿಣ ಕೊಂಕಣ ಮತ್ತು ಹೈವ–ತುಳುಗಳು ವಿಜಯನಗರದ ಸಾರ್ವಭೌಮತ್ವಕ್ಕೆ ಒಳಪಟ್ಟವು. ಔರಂಗಜೇಬನು ಶಿವಾಜಿಗೆ ರಾಜಮನ್ನಣೆ ಕೊಟ್ಟದ್ದು ೧೬೬೮ರಲ್ಲಿ, ಅಲ್ಲಿಯ ತನಕ ಮರಾಠಿ ಆಡುವ ಜನರ ಪ್ರತ್ಯೇಕ ರಾಜಪ್ರಭುತ್ವ ಇರಲಿಲ್ಲ. ೧೭೬೦ರಿಂದ ೧೭೮೬ರವರೆಗೆ ಮರಾಠರು ಕೆನರಕ್ಕೆ ಬಹಳ ನಷ್ಟ ಕೊಟ್ಟರು.(Bombay Gazetteer, P.145 foot Note.)

ಇಂದಿನ ಮೈಸೂರು ರಾಜ್ಯದ ಮುಕ್ಕಾಲು ಪಾಲು ಮತ್ತು ಮಹಾರಾಷ್ಟ್ರದ ಪಶ್ಚಿಮಾರ್ಧಗಳನ್ನು ಒಳಗೊಂಡಿದ್ದ ಕುಂತಳದಲ್ಲಿ ಕ್ರಿ.ಶ.೨೮೦ರಿಂದ ೬೫೫ರವರೆಗೆ ಮೊದಲ ಸಾರ್ವಭೌಮ ಕದಂಬರ ಆಳಿಕೆ. ಅಂದು ಮಂಗಳೂರು 'ಮಂಗ ಕದಂಬ'ವೆನ್ನಿಸಿತ್ತು. ಆಳ್ವಖೇಡದ ಆಳುಪರು ಕದಂಬರ ನೆಂಟರೂ ಸಾಮಂತರೂ ಆಗಿದ್ದರು. ಆಗೀಗ ಸ್ವತಂತ್ರವಾಗಿಯೂ ಪರತಂತ್ರವಾಗಿಯೂ ಆಳುಪರು ತುಳುನಾಡನ್ನಾಳಿದ್ದು ಕ್ರಿ.ಶ.೪೫೦ರಿಂದ೧೪೪೪ರವರೆಗೆ.ಕದಂಬರ ಬನವಾಸಿ ರಾಜ್ಯಕ್ಕೆ ಸೇರಿದ್ದ ಹೈವವನ್ನು ಅವರು ಕ್ರಿ.ಶ.೬೨೫ ರಿಂದ ೭೯೧ರವರೆಗೆ ಚಾಲುಕ್ಯಾಧೀನರಾಗಿ ಆಳುತ್ತಿದ್ದರೆಂದು ಕೆಲವರ ಮತ. ಆಮೇಲೆ ೧೦ ರಿಂದ ೧೩ನೆಯ ಶತಮಾನಗಳ ನಡುವೆ ಆಗೀಗ ಹೈವವನ್ನು ಅವರು ಚಾಲುಕ್ಯರ ಸಾಮಂತರಾಗಿದ್ದ ಕದಂಬರಿಂದ ಕಿತ್ತುಕೊಂಡು ಅಲ್ಪಕಾಲ ಆಳಿದ್ದುಂಟು. ಆ ಕದಂಬರೆಂದರೆ ಗೋವೆ–ಬನವಾಸಿ ರಾಜ್ಯಗಳನ್ನು ಗೋವೆ–ಹಾನಗಲ್ಲು ರಾಜಧಾನಿಗಳಿಂದ ಪರಸ್ಪರ ಎಂದೂ ಕಲಹಕ್ಕಿಳಿದು ಶತ್ರುಗಳಾಗದೆ ಉಳಿದು ಪ್ರತ್ಯೇಕವಾಗಿ ಆಳುತ್ತಿದ್ದ ಕುಂತಳೇಶ್ವರರು. ಆದರೆ ಈವರೆಗೆ ಕುಮಟಾ ತಾಲೂಕನ್ನು ಒಳಗೊಂಡಿದ್ದ ಹೈವನಾಡಿನ ವೈಶಿಷ್ಟ್ಯ ಎದ್ದು ಕಾಣುವಂತಾಗಿದ್ದಿಲ್ಲ.

ಕ್ರಿ.ಶ.೬೫೫(ಅಥವಾ ೬೨೫ರಿಂದಲೇ) ಹೈವದ ಸಾರ್ವಭೌಮತ್ವ ಬಾದಾಮಿಯ ಚಾಲುಕ್ಯರದ್ದು; ೭೫೩ರಿಂದ ೯೭೩ರವರೆಗೆ ರಾಷ್ಟ್ರಕೂಟರ ಸಾರ್ವಭೌಮತ್ವ; ಆಮೇಲೆ ಕಲ್ಯಾಣಿಯ ಚಾಲುಕ್ಯರ ಚಕ್ರವರ್ತಿತ್ವ ೧೧೫೬ರವರೆಗೆ. ಕಳಚುರ್ಯರ ಮೇಲ್ದೊರೆತನ

೧೧೫೬ರಿಂದ ೧೧೮೧ರವರೆಗೆ. ಆ ಬಳಿಕ ೧೨೪೪ರವರೆಗೆ ದೇವಗಿರಿಯ ಯಾದವ ಸೇವುಣರ ಮೇಲಾಳಿಕೆ. ಅಲ್ಲಿಂದ ೧೩೪೬ರವರೆಗೆ ಹೊಯ್ಸಳರೂ ಆಮೇಲೆ ೧೫೬೫ರವರೆಗೆ ವಿಜಯನಗರದ ಚಕ್ರವರ್ತಿಗಳೂ ಅಲ್ಲಿಂದ ಮುಂದೆ ೧೬೦೬ರವರೆಗೆ ಬಿಜಾಪುರದ ಸುಲ್ತಾನರೂ ಸ್ಥಳಿಯ ಸಾಮಂತರಿಂದ ಕಪ್ಪ ಕಾಣಿಕೆಗಳನ್ನು ಆಗಾಗ ಪಡೆಯುತ್ತಿದ್ದ ಒಡೆಯರಾಗಿದ್ದರು. ಅನಂತರ ೧೭೬೩ರವರೆಗೆ ಸ್ಥಳೀಯರಾಗಿಯೇ ಹೋದ ಬಿದನೂರಿನ 'ಕೆನರ ಪ್ರಭು'ಗಳ ಸ್ವತಂತ್ರ ಆಡಳಿತಕ್ಕೆಹೈವ ಸೇರಿಹೋಗಿ ತನ್ನ ವಿಶಿಷ್ಟ ರಾಜಕೀಯ ಪರಿಧಿಯನ್ನು ಕಳೆದುಕೊಂಡಿತು. ಕುಮಟೆಯ (ಗೋಕರ್ಣದ) ಮಂಡಲತ್ವ ಅಥವಾ ನಾಡುತನ ಇತಿಹಾಸದಿಂದ ಮರೆಯಾಯ್ತು.

ಕೆನರದ (ದಕ್ಷಿಣೋತ್ತರ ಕನ್ನಡ ಜಿಲ್ಲೆಗಳ) ಪ್ರಭುತ್ವ ೧೭೬೩ರಿಂಧ ೧೭೯೯ರವರೆಗೆ ಹೈದರ ಟೀಪುಗಳೆಂಬ ಮೈಸೂರು ಸುಲ್ತಾನರಿಗೂ ಅಲ್ಲಿಂದ ಮುಂದೆ ೧೯೪೭ರವರೆಗೆ ಬ್ರಿಟಿಷರಿಗೂ ಸೇರಿತು.

## ಹೈವರಾಜ್ಯದ ಹಿನ್ನಲೆ

ಕ್ರಿ.ಶ.೧೨೪೪ರ ಬಳಿಕ ಹೊಯ್ಸಳರ ಸಾರ್ವಭೌಮತ್ವ ಪ್ರಾಪ್ತವಾದುದನ್ನು ಆಗಲೇ ಉಲ್ಲೇಖಿಸಲಾಯಿತು. ೧೨೧೫ರ ಹೊತ್ತಿಗೆ ದ್ವಾರಸಮುದ್ರದಲ್ಲಿ ಹೊಯ್ಸಳರ ೨ನೆಯ ಬಲ್ಲಾಳ(ಅಥವಾ ೧ನೆಯ ವೀರಬಲ್ಲಾಳ)ನೂ ಹಾನುಗಲ್ಲಿನಲ್ಲಿ ಕದಂಬ ಕಾಮದೇವನೂ ಗೋವೆಯಲ್ಲಿ ೩ನೆಯ ಕದಂಬ ಜಯಕೇಶಿಯೂ ಆಳ್ವಖೇಡವನ್ನು ಬಾರಕೂರಿನಿಂದ ಪಾಂಡ್ಯಚಕ್ರವರ್ತಿ ೧ನೆಯ ವೀರಕುಲಶೇಖರ ಆಳುಪೇಂದ್ರನೂ ಆಳುತ್ತಿದ್ದರು. ಆಳುಪರು ಕೊನೆಗೆ ಹೊಯ್ಸಳರಿಗೆ ಅಧೀನರಾಗಿದ್ದರು; ಕದಂಬರು ಅಧೀನರಾಗಿದ್ದಿಲ್ಲ. ನಾಗರಖಂಡದ(ಶಿರಾಳಕೊಪ್ಪದ ಸನಿಹದ ಬಂದಳಿಕೆಯ) ಕದಂಬ ಪಾಳೆಯಗಾರರಲ್ಲಿ ಗಣ್ಯರೂ ಹಾನುಗಲ್ಲಿಂದ ಆಳುತ್ತಿದ್ದ ಬನವಾಸಿ ಕದಂಬರೊಳಗೇ ಹೈವದ ಮೇಲು ಆಡಳಿತವನ್ನು ಕೆಲಕಾಲ ನಡೆಸಿದರು. ಗೋವೆಯ ಕದಂಬರ ೨ನೆಯ ಜಯಕೇಶೀಯೂ ಅಲ್ಲಿದಾಳಿ ಮಾಡಿ ಗೆದ್ದ ಉಲ್ಲೇಖವಿದೆ. ಅದರ ಪಾರಂಪರಿಕ ರಾಜನೆಂದರೆ ಸ್ವತಂತ್ರನಾಗಿದ್ದ (ಬನವಾಸಿಯ) ಕದಂಬ ಚಕ್ರವರ್ತಿ ಕಾಮದೇವನೇ. ಕಾಮದೇವನ ಆಳಿಕೆ ೧೧೮೦ರಿಂದ೧೨೧೭ರವರೆಗೆ. ಆಮೇಲೆ ಮಲ್ಲಿದೇವ ಚಕ್ರವರ್ತಿ (೧೨೧೭–೧೨೫೨), ರಾಮದೇವ(೧೨೫೨–೧೨೬೦) ಮತ್ತು ಕಾಮದೇವ (೧೨೬೦–೧೩೧೫) ಹಾಗೂಪುರಂದರರಾಯ(೧೩೧೫–೧೩೪೭)ರೆಂಬ ಕದಂಬ ಮಹಾಮಂಡಲೇಶ್ವರರು ಸೇವುಣಾಧೀನರಾಗಿ ರಾಜ್ಯಭಾರ ಮಾಡಿದರು.

## ಚಂದಾವರದ ಕತೆ

ನಾಗರ ಖಂಡದ ೧ನೆಯ ಸೋವಿದೇವ(ಸೋಮದೇವ) (೧೧೩೮–೧೧೭೧) ಹೈವ, ತುಳು, ಕೊಂಕಣ, ಗಂಗವಾಡಿಗಳ ಅರಸರಿಂದ ಕಪ್ಪಕಾಣಿಕೆಗಳನ್ನು ವಸೂಲು

ಮಾಡಿದನೆಂದು ಶಾಸನೋಕ್ತಿ ಇದೆ. (E.C.VIII Sb 384, P.68) ೧೧೮೯ರಲ್ಲಿ ಬನವಾಸಿಯ ಕಾಮದೇವ ಕದಂಬನೂ ಹೈವದೊಡೆಯನಾಗಿ ತುಳುರಾಜ್ಯದಿಂದ ಕಪ್ಪವನ್ನು ಕೊಂಡನು.(Fleet, Dynkan.Dts.P.86, op.cit) ಕದಂಬ ಚಕ್ರವರ್ತಿ ಮಲ್ಲಿದೇವನ ಕಾಲದಲ್ಲಿ ಒಂದು ಶಾಸನದ ಪ್ರಕಾರ ಬಿರುಸದ ಮೈದಾನದಲ್ಲಿ ಆತನ ಕಡೆಯವನಾದ ಸಾರೆಯ ಭೈರವ ನಾಯಕನು ೧೨೨೦ರಲ್ಲಿ ನೂರ್ಮಡಿ ಚಕ್ರವರ್ತಿ ಆಳುಪನ ಕಡೆಯವನಾದ ಸಂಕೆಯ ನಾಯಕನನ್ನು ಸೋಲಿಸಿದ ಉಲ್ಲೇಖವಿದೆ. (E.C.VIII Sb 188, P.30) ಸಾರೆಯ ಭೈರವನಾಯಕನ ಸ್ಥಾನಿಕ ಪ್ರಭು ಭೈರವದೇವ. ಭೈರವದೇವನು ಮಲ್ಲಿದೇವನ ಅಧೀನವಾಗಿ ಚಂದಾವೂರಿನಿಂದ (ಚಂದಾವರದಿಂದ) ಕುಮಟಾ ಹೊನ್ನಾವರ ಪ್ರದೇಶವನ್ನು ಆಳುತ್ತಿದ್ದ ದಂಡನಾಯಕ. ಅವನೊಬ್ಬ ಪ್ರತಾಪಶಾಲಿಯಾದ ಸ್ಥಳೀಯ ಆಡಳಿತಗಾರನಾಗಿದ್ದದ್ದು ಕುಮಟೆಗೆ ಅಭಿಮಾನಾಸ್ಪದವಾದುದು. ಇದಕ್ಕೂ ಹಿಂದೆಯೇ ಅಂದರೆ ೧೨೧೬ರಲ್ಲಿಯೇ ಕದಂಬ ಕಾವ(ಮ)ದೇವ ಚಕ್ರವರ್ತಿಯು ಪರಿಗೆಯ ಯುದ್ಧದಲ್ಲಿ ತುಳು ಸೈನ್ಯವನ್ನು ಹಿಮ್ಮೆಟ್ಟಿಸಿ ಆಳುಪರ ಆಕ್ರಮಣಶೀಲಕ್ಕೆ ತಡೆಯೊಡ್ಡಿದ್ದನು. ಈ ಕಾಮದೇವನಿಂದ ಭಿನ್ನನಾದ ಇನ್ನೊಬ್ಬ ಸ್ವತಂತ್ರ 'ಚಕ್ರವರ್ತಿ' ಕಾಮದೇವನು ಚಂದಾವೂರಿನಲ್ಲಿ (೧೨೧೯ರಿಂದ ೧೨೩೧?) ಆಳುತ್ತಿದ್ದನೆಂಬುದಕ್ಕೆ ಕೆಲವರ ಹೇಳಿಕೆಯಲ್ಲದೆ ಆಧಾರವೇನೂ ಇಲ್ಲ. ಚಂದಾವರವು ಅಂದು ಅವನ ಉಪರಾಜಧಾನಿಯಾಗಿದ್ದಿರಬಹುದೆಂದಿಷ್ಟೇ ನಾವೀಗ ಹೇಳಬಲ್ಲೆವು. ಏಕೆಂದರೆ ಗೋವೆ, ಬನವಾಸಿ ಮಂಡಲಗಳಷ್ಟು ದೊಡ್ಡ ಮಂಡಲಗಳಲ್ಲಿ ಕದಂಬ ಚಕ್ರವರ್ತಿಗಳಾಳುತ್ತಿದ್ದಾಗ ಚಿಕ್ಕದಾದ ಹೈವ ೫೦೦ರ ಒಂದು ಚಿಕ್ಕ ಭಾಗದಲ್ಲಿ ಸ್ವತಂತ್ರನಾದ ಒಬ್ಬ ಪ್ರತ್ಯೇಕ ಕದಂಬ ಕಾಮದೇವ 'ಚಕ್ರವರ್ತಿ' ಆಳುತ್ತಿದ್ದನೆಂಬುದು ಅತ್ಯಂತ ದುರೂಹ್ಯ. ಈ ಕಾಲದಲ್ಲಿ ಗೋಕರ್ಣವನ್ನು ನೆಲೆವೀಡನ್ನಾಗಿ(ರಾಜಧಾನಿಯನ್ನಾಗಿ) ಮಾಡಿಕೊಂಡು ಪ್ರತ್ಯೇಕ ಕದಂಬ ಪುರಾಧೀಶ್ವರರು ಆಳುತ್ತಿದ್ದರೆಂಬುದೂ ಅಪರೀಕ್ಷ್ಯಕಾರಿತ್ವದ ಊಹೆ. ಇಂಥ ಸ್ಥಳಗಳಿಗೆ ಉಪರಾಜಧಾನಿತ್ವವನ್ನು ಹೇಳಬಹುದು; ಇಲ್ಲಿ ಕದಂಬರ ದಾಯಾದರಾಗಿದ್ದ ಪಾಳೆಯಗಾರರು ಅವರ ಅಧೀನವಾಗಿ ಗೌರವಾರ್ಥದ ಬಿರುದುಗಳಿಂದ ಆಡಳಿತ ನಡೆಸುತ್ತಿದ್ದರೆಂಬಷ್ಟು ವಿಕಲ್ಪಕ್ಕೆ ಒಮ್ಮೆ ಅವಕಾಶ ಕೊಡಬಹುದು ಅಷ್ಟೆ.

ಹೊಯ್ಸಳರ ೩ನೆಯ ವೀರಬಲ್ಲಾಳನ (೧೨೯೨–೧೩೪೨) ಕಾಲದಲ್ಲಿ ಆಳುಪರ ನಾಗದೇವರಸ(೧೨೯೨–೧೨೯೯), ೨ನೆಯ ಬಂಕಿದೇವ ಆಳುಪೇಂದ್ರದೇವ(೧೩೦೨–೧೩೧೫), ಸೋಯಿದೇವ ಆಳುಪೇಂದ್ರದೇವ (೧೩೧೫–೧೩೩೫), ೨ನೆಯ ವೀರ ಕುಲಶೇಖರ(೧೩೩೫–೧೩೪೫) ಎಂಬ ಅರಸರು ತುಳುನಾಡನ್ನು ಅವನ ಅಧೀನರಾಗಿ ಆಳುತ್ತಿದ್ದರು; ಅವನ ಬೆಂಬಲದಿಂದ ಹೈವದ ವಿವಿಧ ಭಾಗಗಳನ್ನು ಆಕ್ರಮಿಸಿ ಆಳಲು ಯತ್ನಿಸಿ ಆಗ ಈಗ ಜಯವನ್ನು ಹೊಂದುತ್ತಿದ್ದರು. ನಾಗದೇವರಸನು ಪೂರ್ಣ ಅಧೀನನಾಗದಿದ್ದರೂ ೨ನೆಯ ಬಂಕಿದೇವ ಆಳುಪೇಂದ್ರದೇವನು ಹೊಯ್ಸಳರ ಅಧೀನನಾಗಬೇಕಾಯಿತು. ವೀರಬಲ್ಲಾಳನು ಶಾಂತರರ ರಾಜಧಾನಿಯಾಗಿದ್ದ ಸಾಗರ

ತಾಲೂಕಿನ ಹೊಸಗುಂದದಲ್ಲಿ ನಗಿರೆಯನ್ನೊಳಗೊಂಡ ರಾಜ್ಯವನ್ನು ಕೋಟಿ ನಾಯಕನು ಆಳುತ್ತಿದ್ದಾಗ ೧೩೦೦ರಲ್ಲಿ ಅಲ್ಲಿ ದಾಳಿ ಮಾಡಿ ಅವನನ್ನು ಸೋಲಿಸಿ ಹಿಡಿದು ತುಳು ಅರಸರಿಗೆ ಚಳಿ ಹಿಡಿಯುವಂತೆ ಮಾಡಿದನು. ಆ ಕಾಲದಲ್ಲಿ ಕದಂಬ ಚಕ್ರವರ್ತಿ ಕಾಮದೇವ(೧೨೬೦-೧೩೧೫) ತನ್ನ ಮಹಾಸೇನಾನಿ ಜಗದ್ಧಳ ಗಾಂಗೇಯ ಸಾಹಣಿಯನ್ನು ನಾಯಕನ ನೆರವಿಗೆಂದು ಕಳಿಸಿದ; ಯುದ್ಧದಲ್ಲಿ ಮಡಿದರೂ ಸಾಹಣೀಯ ಪರಾಕ್ರಮದಿಂದ ಕೋಟಿನಾಯಕ ಪುನಃ ತನ್ನ ರಾಜ್ಯಾಧಿಕಾರವನ್ನು ಪಡೆದನು. ೧೩೦೩ರಲ್ಲಿ ಮತ್ತೊಮ್ಮೆ ಬಲ್ಲಾಳನ ದಾಳಿಯಾಯ್ತು. ಬನವಾಸಿಯಲ್ಲಿ ಅವನ ದಂಡು ಶಿಬಿರ ಹೂಡಿತು. ಈಗ ಕಾವದೇವನ ೨ನೆಯ ಸುಪ್ರಸಿದ್ಧ ಗಾಂಗೇಯ ಸಾಹಣಿಯ ದಳವನ್ನು ಅವನು ಎದುರಿಸಬೇಕಾಯಿತು. ಶಿರಸಿಯಲ್ಲಿ ನಡೆದ ಈ ಯುದ್ಧದಲ್ಲಿ ಬಲ್ಲಾಳ ಗೆದ್ದ. ಅಂದಿನಿಂದ ತುಳುನಾಡ ಮೇಲ್ದೊರೆತನ ಹೊಯ್ಸಳರಿಗೆ ಸ್ಥಿರವಾಯಿತು. ಅದು ೧೩೧೯ರ ಶಿರಸಿ ಯುದ್ಧದಲ್ಲಿ ಮತ್ತೂ ಗಟ್ಟಿಯಾಯಿತು. ಈ ಸಮಯದಲ್ಲಿ ಚಂದಾವರದಲ್ಲಿ ಬಸವದೇವನೆಂಬ ಪುರಂದರ ಕದಂಬಾಧೀನನಾದ ದಂಡನಾಯಕ ಆಳುತ್ತಿದ್ದ. ಅವನು ಹೊಯ್ಸಳರ ವಿರುದ್ಧವಾಗಿ ದಂಗೆಯೆದ್ದ. ಆಗ ಸಂಕೆಯ ಸಾಹಣಿಯನ್ನು ಹೊಯ್ಸಳ ಚಕ್ರವರ್ತಿ ಅಲ್ಲಿಗೆ ಕಳಿಸಿದ. ಅವನು ಚಂದಾವರವನ್ನು ನಾಶಮಾಡಿದನು. ಹಿಂದಿನ ಭೈರವದೇವನೂ ಈ ಬಸವದೇವನೂ ಕದಂಬಾಧೀನರಾಗಿ ಚಂದಾವರದಲ್ಲಿ ಆಳುತ್ತಿದ್ದ (ತುಳುವ?) ಸೇನಾನಿಗಳೆಂಬುದು ಸ್ಪಷ್ಟ. ಈ ಪ್ರಕಾರ ಹೊಸಗುಂದ ಚಂದಾವರಗಳಲ್ಲಿ ಬಲ್ಲಾಳ ಪ್ರಭಾವಿಯಾದರೂ ಅವನಾದ ಮೇಲೆ ಪಟ್ಟಕ್ಕೆ ಬಂದ ಅವನ ಮಗ ೪ನೆಯ ವೀರಬಲ್ಲಾಳ(೧೩೪೨-೧೩೪೬) ದುರ್ಬಲನಾಗಿದ್ದುದರಿಂದ ೧೩೩೦ರ ಹೊತ್ತಿಗೆ ನಗಿರೆ ರಾಜ್ಯವು ಗೇರುಸೊಪ್ಪೆಯಲ್ಲಿ ಮೆಲ್ಲಗೆ ತಲೆಯೆತ್ತಲು ಅನುಕೂಲವಾಯಿತು. ಹೈವ-ತುಳು-ಕೊಂಕಣಗಳ ಅನೇಕ ಭಾಗಗಳನ್ನು ೧೩೪೭ರಿಂದ ಗೆಲ್ಲುತ್ತ ಹೋದುದರಿಂದ ಬಾರಕೂರಿನಲ್ಲಿ ೨ನೆಯ ಹರಿಹರರಾಯನ(೧೩೭೭-೧೪೦೪) ಶಾಸನವು ಅವನ ರಾಜ್ಯಪಾಲ ಮಹಾಪ್ರಧಾನ ಮಲ್ಲಪ್ಪ ಒಡೆಯನು ಹೈವ, ತುಳು, ಕೊಂಕಣಗಳನ್ನು ಮೇಲ್ದೊರೆತನದಿಂದ ಆಳುತ್ತಾನೆ ಎಂದು ಹೇಳಲು ಶಕ್ತವಾಯಿತು. ಆ ಶಾಸನದ ಕಾಲ ೧೩೮೭.

ಅಂದು ಶಿರಾಲಿ, ಇಡಗುಂಜಿ, ಚಂದಾವರ, ಗೇರುಸೊಪ್ಪೆಗಳಲ್ಲಿ ತುಳು ನಾಯಕರ ಆಡಳಿತವಿತ್ತು. ಕುಮಟಾ ತಾಲೂಕಿನ ಕೋನಳ್ಳಿ ಶಾಸನದ ಬಲದಿಂದ ಕೋಟಿಯರಸನೆಂಬವನು೧೩೧೩ರ ಹೊತ್ತಿಗೆ ನಗಿರೆಯ ಪಾಳೆಯಗಾರನಾಗಿದ್ದ ಎಂದು ಹೇಳಬಹುದು. ನಗಿರೆಯ ರಾಜಧಾನಿ ಗೇರುಸೊಪ್ಪೆ(ಹೊನ್ನಾವರ ತಾಲೂಕು); ಹೈವ ದೊರೆಗಳ ಮೂಲ ಪುರುಷನಾದ ಮಹಾಮಂಡಲೇಶ್ವರ ಕೇಶವದೇವ ಒಡೆಯನ ೧೩೭೮ರ ಶಾಸನ ಅದಕ್ಕೆ ಸಂಬಂಧಿಸಿ ಉಪಲಬ್ಧವಾಗಿದೆ. ಕೋಟಿಯರಸನು ತುಳುನಾಡವನಾಗಿರಬಹುದು-ರಾಜಕೀಯವಾಗಿ, ಶಾಂತರರ ಕೇಂದ್ರದವನಾಗಿದ್ದ ಅವನು ಕನ್ನಡ ಮಾತಿನ ಜೈನ ಒಲವಿನ ದೊರೆ. ಹಾಗೇ ಕೇಶವದೇವನೂ ಕನ್ನಡ ಜೈನ

ಸಾಹಿತಿಗಳಿಗೂ ಇತರ ಸಾಹಿತಿಗಳಿಗೂ ಅಪಾರ ಪ್ರೋತ್ಸಾಹವನ್ನಿತ್ತ ಹೈವ ಮನೆತನದ ಸ್ಥಳವಂತಿಕೆಗೆ ನಾಂದಿಯನ್ನು ಮಾಡಿದ ಉದಾರದೊರೆ. ವಂಶದಲ್ಲಿ ಆತ ಸಾಳುವ; ವಾರಸುದಾರಿಕೆಯಲ್ಲಿ ಅಳಿಯ ಸಂತಾನದವ. ಈತನೂ ಈತನ ವಾರಸುದಾರರೂ ೧೩೭೮ರಿಂದ ೧೪೫೪ರವರೆಗೆ ನಗಿರೆಯೆಂಬ ಪುಟ್ಟ ರಾಜ್ಯವನ್ನು ಸ್ವತಂತ್ರವಾಗಿ ಕಟ್ಟಿ ನಿಲ್ಲಿಸಿದರೂ ಕ್ರಮೇಣ ವಿಜಯನಗರದ ಅರಸರಿಗೆ ತಲೆಬಾಗಲೇ ಬೇಕಾಗಿ ಬಂದಿತು. ಮೊದಲು ಅವರ ರಾಜ್ಯಪಾಲರನ್ನು ಶಕ್ತಿಮೀರಿ ಎದುರಿಸಿದರು; ತಮ್ಮ ಶಕ್ತಿಯ ಮಿತಿಯ ಅರಿವಾದ ಮೇಲೆ ನ್ಯಾಯವಾಗಿ ಈ ಅರಸರು ವಿಜಯನಗರದ ಸಾರ್ವಭೌಮತ್ವವನ್ನು ಒಪ್ಪಿಕೊಂಡು ಅವರ ಪ್ರೀತಿ ಗೌರವಗಳ ಫಲವಾಗಿ ೧೪೫೪ರಲ್ಲಿ ಹೈವ–ತುಳು, ಕೊಂಕಣಗಳ ರಾಜ್ಯಪಾಲರಾದರು. ಈ ಗೌರವ ಮೊದಲ ಬಾರಿಗೆ ಸಿಕ್ಕಿದ್ದು ಮಹಾಮಂಡಲೇಶ್ವರ ಭೈರವದೇವ ಒಡೆಯನಿಗೆ. ಲೆಕ್ಕಾಚಾರದಂತೆ ಈತನೇ ಮೊದಲನೆಯ 'ಹೈವರಸ'ನಾಗಬೇಕಾದರೂ ಇವನ ಪೂರ್ವಜನಾದ(ಕೇಶವದೇವನ ವಾರಸುದಾರನಾದ) ದೊರೆ ಆಗಲೇ 'ಹೈವರಸ'ನೆಂದು ಹೆಸರಾಗಿದ್ದನು. ಧಾರೇಶ್ವರದ ೧೦೮೩ರ ಒಂದು ಶಾಸನದಲ್ಲಿ 'ಹೈವಣರಸ'ನ ಉಲ್ಲೇಖವಿದೆ. ಅವನು ಬನವಾಸಿ ರಾಜಧಾನಿಯಲ್ಲಿ ಆಳುತ್ತಿದ್ದ ಕೀರ್ತಿವರ್ಮ ಕದಂಬ ಮಹಾಮಂಡಲೇಶ್ವರನ(೧೦೭೫–೧೧೧೬) ಒಬ್ಬ ಒಳದೊರೆಯಾಗಿರುವುದು ಸಹಜ. ಆದರೆ ಅವನ ಮನೆತನ ಹೈವರಸರ ಮನೆತನ ಎನ್ನಿಸಿಕೊಳ್ಳುವ ಭಾಗ್ಯವನ್ನು ಹೊಂದಲಿಲ್ಲ. ಹೊಸಗುಂದದ ಶಾಂತರಸರು, ಕಾರ್ಕಳದ ಬೈರರಸರು ಮತ್ತು ನಗಿರೆಯ ಸಾಳುವರಸರು ಒಂದೇ ಬಳಗದವರು ಎಂದು ಗೊತ್ತಾಗಿದೆ. ಅದರೆ ಅವರ ಪರಸ್ಪರ ಸಂಬಂಧದ ನಿಶ್ಚಿತ ವಿವರಗಳು ಗೊತ್ತಾಗಿಲ್ಲ. ಗೇರುಸೊಪ್ಪೆ, ಹಾಡುವಳ್ಳಿ, ಭಟಕಳಗಳ ಸಾಳುವರು ಒಂದೇ ಅರಸುಮನೆತನದವರು. ಕುಮಟೆಯಲ್ಲೂ ೧೮೦೦ರಲ್ಲಿ ಒಬ್ಬ ಜೈನ ಪಾಳೆಯಗಾರನಿದ್ದ.

## ನಗಿರೆಯ ಸಾಳುವ ಹೈವರಸರು :

೧) ಮಹಾಮಂಡಲೇಶ್ವರ ಕೇಶವದೇವ ಒಡೆಯ ...... ೧೩೭೮–೧೩೯೮
೨) ಮಹಾಮಂಡಲೇಶ್ವರ ಹೈವರಸ ಒಡೆಯ ...... ೧೩೯೮–೧೪೧೫
೩) ಮಹಾಮಂಡಲೇಶ್ವರ ಸಂಗಿರಾಯ ಒಡೆಯ ...... ೧೪೧೫–೧೪೧೯
೪) ಮಹಾಮಂಡಲೇಶ್ವರ ಕೇಶವದೇವರಸ ಒಡೆಯ ...... ೧೪೧೯–೧೪೨೦
೫) ಮಹಾಮಂಡಲೇಶ್ವರ ಕೃಷ್ಣದೇವರಸ ಒಡೆಯ ...... ೧೪೨೦–೧೪೩೧
೬) ಮಹಾಮಂಡಲೇಶ್ವರ ಸಂಗಿರಾಯ ಒಡೆಯ ...... ೧೪೩೧–೧೪೩೮
೭) ಮಹಾಮಂಡಲೇಶ್ವರ ಭೈರವದೇವ ಒಡೆಯ ...... ೧೪೩೮–೧೪೬೨
೮) ಮಹಾಮಂಡಲೇಶ್ವರ ಇಮ್ಮಡಿ ಭೈರವೇಶ್ವರ ಒಡೆಯ ......೧೪೬೨–೧೪೯೪
೯) ಮಹಾಮಂಡಲೇಶ್ವರ ದೇವರಸ ಒಡೆಯ ...... ೧೪೯೪–೧೫೨೦

೧೦) ಮಹಾಮಂಡಲೇಶ್ವರ ಇಮ್ಮಡಿ ದೇವರಸ ಒಡೆಯ ...... ೧೫೨೦–೧೫೩೦
೧೧) ಮಹಾಮಂಡಲೇಶ್ವರ ಇಮ್ಮಡಿ ಕೃಷ್ಣದೇವರಸ ಒಡೆಯ ......೧೫೩೦–೧೫೪೯
೧೨) ಮಹಾಮಂಡಲೇಶ್ವರ ಚೆನ್ನಭೈರಾದೇವಿ* ಒಡೆಯ ...... ೧೫೪೯–೧೬೦೬

## ಹಾಡುವಳ್ಳಿಯ ಸಾಳುವ ಹೈವರಸರು :

೧) ಮಹಾಮಂಡಲೇಶ್ವರ ಮಲ್ಲಿರಾಜ ಒಡೆಯ ...... ೧೪೦೦(?)–೧೪೧೦
೨) ಮಹಾಮಂಡಲೇಶ್ವರ ಸಂಗಿರಾಜ ಒಡೆಯ ...... ೧೪೧೦–೧೪೩೧
೩) ಮಹಾಮಂಡಲೇಶ್ವರ ೧ನೆಯ ಇಂದ್ರ ಒಡೆಯ ..... ೧೪೩೧–೧೪೭೨
೪) ಮಹಾಮಂಡಲೇಶ್ವರ ೨ನೆಯ ಇಂದ್ರ ಒಡೆಯ ...... ೧೪೭೨–೧೪೮೫
೫) ಮಹಾಮಂಡಲೇಶ್ವರ ಚೆನ್ನರಾಜ ಒಡೆಯ ...... ೧೪೮೫–೧೪೯೦
೬) ಮಹಾಮಂಡಲೇಶ್ವರ ಗುರುರಾಯ ಒಡೆಯ ...... ೧೪೯೦–೧೫೩೦
೭) ಮಹಾಮಂಡಲೇಶ್ವರ ದೇವರಾಜ ಒಡೆಯ ...... ೧೫೩೦–೧೫೪೩
೮) ಮಹಾಮಂಡಲೇಶ್ವರ ಚೆನ್ನಾದೇವಿ ಒಡೆಯ ...... ೧೫೪೩–೧೫೪೬
೯) ಮಹಾಮಂಡಲೇಶ್ವರ ಚೆನ್ನಭೈರಾದೇವಿ* ಒಡೆಯ ...... ೧೫೪೬–೧೬೦೬

ಈ ಪಟ್ಟಿಗಳಲ್ಲಿ ಸಂಗಿರಾಯರಿಬ್ಬರನ್ನುಳಿದು, ಒಂದೇ ಹೆಸರಿನ ರಾಜ ಅಥವಾ ರಾಣಿ ಒಂದೇ ಅವಧಿಯಲ್ಲಿ ಕಂಡುಬಂದರೆ ಅಂಥವರು ಹೈವದ ೨ ವಿಭಾಗಗಳನ್ನೂ ಏಕಚ್ಛತ್ರದಡಿಯಲ್ಲಿ ಆಳಿದರೆಂದುತಿಳಿಯಬಹುದು. ೧೩೯೮ರಲ್ಲಿದ್ದ ಹೈವರಸ ಒಡೆಯನು ಎರಡು ಗದ್ದುಗೆಯವರಿಗೂ ಸಾಧಾರಣನಾದ ಮೂಲ ಪುರುಷನೆಂದು ತೋರುತ್ತದೆ. ಈತನ ವಾರಸುದಾರರಲ್ಲಿ ಒಬ್ಬನಾದ ಸಂಗಿರಾಯನು ಗೇರುಸೊಪ್ಪೆಯಲ್ಲಿ ಆಳತೊಡಗಿದಾಗ ಅದಕ್ಕೂ ಹಿಂದೆ ಇನ್ನೊಬ್ಬ ವಾರಸುದಾರ ಮಲ್ಲಿರಾಜನು ಆಳತೊಡಗಿದ್ದು ಕಂಡುಬರುತ್ತದೆ. ಗೇರುಸೊಪ್ಪೆಯ ರಾಜ್ಯ, ನಗಿರೆಯ ರಾಜ್ಯ, ಹೊನ್ನಾವರ ರಾಜ್ಯಗಳೆಂದರೆ ಒಂದೇ; ಹಾಗೇ ಸಂಗೀತಪುರದ ರಾಜ್ಯ, ಹಾಡುವಳ್ಳಿಯ ರಾಜ್ಯ, ಭಟಕಳದ ರಾಜ್ಯ ಎಂದರೂ ಒಂದೇ. ಈ ಎರಡು ಹೈವದ ಎರಡು ವಿಭಾಗಗಳು. ಈ ಮನೆತನದ ಅಳಿಯಸಂತಾನವನ್ನು ಶಕ್ಯವಿದ್ದಲ್ಲೆಲ್ಲಾ ಅನುಸರಿಸಿದೆ ಎನ್ನಬಹುದು. ಅಳಿಯನ ಅಭಾವದಲ್ಲಿ ಮಗನೂ, ಮಗನ ಅಭಾವದಲ್ಲಿ ಮಗಳೂ ಪಟ್ಟಕ್ಕೆ ಬಂದದ್ದುಂಟು. ಗೇರುಸೊಪ್ಪೆಯ ಭೈರವದೇವ ಒಡೆಯನಾದ ಮೇಲೆ ಅವನಂತೆಯೇ ಅವನ ಗೇರುಸೊಪ್ಪೆಯ ಅಥವಾ ಹಾಡುವಳ್ಳಿಯ ವಾರಸುದಾರರು ಹೈವ, ತುಳು, ಕೊಂಕಣಗಳ ರಾಜ್ಯಪಾಲರಾದುದು ಸುವಿದಿತ; ಅಂದರೆ ಲೆಕ್ಕಾಚಾರದ ಪ್ರಕಾರ ನಗಿರೆಯನ್ನು ಅಥವಾ ಹಾಡುವಳ್ಳಿಯನ್ನು ಒಳಗೊಂಡ ಹೈವದ ಅರಸೊತ್ತಿಗೆಯ ಜೊತೆಗೆ ತುಳು, ಕೊಂಕಣಗಳ ಪಾಳೆಯಗಾರರ ಮೇಲರಸರಾಗಿ ಆಳಿದರು.

## ಹೈವರಸರ ಕಾಲದ ಸಾಹಿತ್ಯ

ಹೈವರಸರು ವಿಜಯನಗರ ಸಾಂಸ್ಕೃತಿಕ ಗುರುತ್ವಕ್ಕೆ ತಲೆಬಾಗಿದಂತೆ ವಿಜಯನಗರದ ಚಕ್ರವರ್ತಿಗಳಾದರೂ ಇವರ ನಿಷ್ಠೆಗೂ ಸಾಂಸ್ಕೃತಿಕ ಉನ್ನತಿಗೂ ಮನ್ನಣೆಯನ್ನು ಕೊಟ್ಟಿದ್ದರೆಂಬುದಕ್ಕೆ ಇವರಿಗೆ ದೊರೆತ ರಾಜ್ಯಪಾಲ ಮಟ್ಟವಲ್ಲದೆ, ಇವರ ಆಸ್ಥಾನದ ಕವಿಗಳು ಅವರ ಆಸ್ಥಾನದ ಕವಿಗಳಾಗಿಯೂ ಮನ್ನಣೆ ಪಡೆದದ್ದು ಸಾಕ್ಷಿ.

ಕುಮಾರವ್ಯಾಸನ ಸಮಕಾಲೀನನೆಂದು ಕವಿ ಚರಿತಕಾರರು ಉಲ್ಲೇಖಿಸಿರುವ ಬತ್ತಲೇಶ್ವರನೆಂಬ ಸ್ಮಾರ್ತ ಕವಿಯು ಅಷ್ಟೇ ಸಮರ್ಥವಾದ ಕವಿತಾಶಕ್ತಿಯನ್ನುಳ್ಳ ರಾಮಾಯಣಕಾರ. ಈತನು ಯಾಣದ ಭೈರವೇಶ್ವರನ ಭಕ್ತ. ಹೈವವು ೧೪೩೦ರಲ್ಲಿ ತನ್ನ ಆದಿಯ ಶ್ರೇಷ್ಠ ಕವಿಯನ್ನು ಬೆಳಕಿಗೆ ತಂದಿತು. ೧೫೫೫ಕ್ಕೆ ಹಿಂದೆ ಶಿರಸಿಯ ಪ್ರದೇಶವೂ ಹೈವರಸರ ಆಳಿಕೆಗೆ ಸೇರಿದ್ದರಿಂದ ಇಡೀ ಉತ್ತರಕನ್ನಡ ಜಿಲ್ಲೆಗೇ(ಕರ್ನಾಟಕಕ್ಕೆ ಪಂಪನಿದ್ದ ಹಾಗೆ) ಸ್ಫೂರ್ತಿದಾಯಕನಾಗಿದ್ದ ಕವಿ ಎಂದು ಪರಿಗಣಿಸಬಹದು. ಅಕಳಂಕನು(೭೫೦) ಆದ್ಯ ವಿದ್ವಾಂಸನಾದರೆ ಈತನು ಆದ್ಯ ಕವಿ ಎಂದು ಜಿಲ್ಲಾ ದೃಷ್ಟಿಯಿಂದ ಹೇಳಬಹುದು. ಈತನ 'ಕೌಶಿಕ ರಾಮಾಯಣ'ದ ಶೈಲಿಯ ಸಹಜತೆ, ಸರಳತೆ, ಶಕ್ತಿಮತ್ತೆಗಳು ಕೆನರದಲ್ಲಿ ಮುಂದೆ ಬಂದ ಯಕ್ಷಗಾನ–ಯಕ್ಷಗಾನೇತರ ಕವಿಗಳಿಗೆ ಅನುಕರಣೀಯವಾದವು. ಇವನ ಭಾಮಿನೀ ಷಟ್ಪದಿಯ ಅನುಕರವನ್ನಿಲ್ಲಿಯ ಅನೇಕ ಮುದ್ರಿತಾಮುದ್ರಿತ ಕಾವ್ಯಗಳಲ್ಲಿ ಕಾಣಬಹುದು. ಈತ ಕಂಡ ಕಡಲು–

**ತರಳ ಭಂಗತರಂಗ ತುಂತುರು**
**ನೊರೆಯವೊಟ್ಟಿಲು ತೆರೆಯ ಭೀಕರ**
**ವುರುಳಿ ಘುಳು ಘುಳು ಜಠರಕಣಕುಲ ಕಮಠ ಪಾಠೀನ ।**

**ಕರಿಮಕರ ನಕ್ರಾಳಿ ಸೇವಿತ**
**ನೆರವಿ ಬುದ್ಬುದ ತಿಮಿ ತಿಮಿಂಗಲ**
**ವರ ಜಳೂಕ ಧ್ವಾನ ಕಲ್ಲೋಲದಲಿ ಕಡಲೆಸೆಯೆ ॥**

**ಹತ್ತ ಹಾರುವೆನೆನಲು ತೆಗೆಯಿ**
**ಪ್ಪತ್ತ ಹಾರುವೆನೆನಲು ನಾಮೂ**
**ವತ್ತ ಹಾರುವೆನೆಂದನೊಬ್ಬನು ಒಬ್ಬ ನಾಲ್ವತ್ತ ।**

**ಹತ್ತು ಹತ್ತನು ಹಾರಲಾರದೆ**
**ಯಿತ್ತರಾ ಹನುಮಂಗೆ ಶಕ್ತಿಯ**
**ಕೆತ್ತಕದವಾಯ್ತುಬುಧಿ ಲಂಕೆಗೆ ಲೆಂಕನಂತಾಯ್ತು ॥**

**ಕಟ್ಟೆಯೋ ಹರಿಸೇನೆ ನಡೆವಾ**
**ಬಟ್ಟೆಯೋ ರಾಘವನ ವೀರದ**
**ಪಟ್ಟೆಯೋ ಎನಲೊಪ್ಪುತಿದ್ದುದು ಜನದ ಕಣುಮನಕೆ ।**

**ಬಿಟ್ಟಿಯೋ ಸಾಗರನು ನಡೆಸುವ**
**ನಿಟ್ಟೆಯೋ ಕುಲಗಿರಿಯ ವಂಶದ**
**ಕಟ್ಟೆದೆಯ ಪಕ್ಷವನು ಹೋಲಿತು ಸೇತು ಖಳಕೇತು ॥**

ಕೋಟೇಶ್ವರ ಕವಿ ೧೫೦೦ರಲ್ಲಿದ್ದ. ಈತನು ಸಂಗೀತಪುರದ ದೊರೆ ಸಂಗಮನ(ಸಂಗಿರಾಯನ) ಆಸ್ಥಾನ ಕವಿ. ಬೈಂದೂರಿನಲ್ಲಿ ಸೇನಾನಿಯಾಗಿದ್ದ ತಮ್ಮಣ್ಣ ಸೆಟ್ಟಿ ಇವನ ತಂದೆ. ಈ ಕವಿ ಬರೆದದ್ದು 'ಜೀವಂಧರ' ಷಟ್ಪದಿಯನ್ನು. ೧೫೫೩ರಲ್ಲಿದ್ದ ಅಭಿನವವಾದಿ ವಿದ್ಯಾನಂದನು 'ಕಾವ್ಯಸಾರ'ವನ್ನು ಬರೆದ. ೧೧೪೩ ಸೊಲ್ಲುಗಳಿರುವ ಇದರಲ್ಲಿ ಕಾವ್ಯಗಳಲ್ಲಿ ವರ್ಣಿಸುವ ಎಲ್ಲ ವಿಷಯಗಳಿಗೂ ಉದಾಹರಣವಾಗಿ ಪೂರ್ವ ಕವಿಗಳ ಗ್ರಂಥಗಳಿಂದ ಪದ್ಯಗಳನ್ನು ಉದ್ಧರಿಸಿ ಒಂದೊಂದು ವಿಷಯವನ್ನು ಒಂದೊಂದು ಅಧ್ಯಾಯದಲ್ಲಿ ನಿರೂಪಿಸಲಾಗಿದೆ. ಒಟ್ಟು ೪೫ ಅಧ್ಯಾಯಗಳಿವೆ. ಈತನ ಸಮುದ್ರ–

**ಪವಳದ ಕೆಯ್ ಮುಗಿಲ್ಗಳರವಟ್ಟಿಗೆ ನೀರ್ಗಳ ಸುತ್ತಿ ಮುತ್ತು ಪು–**
**ಟ್ಟುವ ಕಣಿ ಬೆಟ್ಟವಕ್ಕಿಗಳ ಗೂಡೆಳನೇಸರ ತೊಟ್ಟಿಲುಗ್ರದಾ ।**
**ನವರೆರವಟ್ಟು ಲಕ್ಷ್ಮಿಯ ತವರ್ಮನೆ ತಿಂಗಳ ಪೆತ್ತ ತಂದೆ ಬಾ**
**ಡವ ಶಿಖಿಗಂ ನಿವಾಸಮಸುರಾರಿಯ ಸೆಜ್ಜೆ ವಲಂ ಮಹಾರ್ಣವಂ ॥**

ಈ ಕವಿಯಂತೆಯೇ ಸಾಳ್ವಕವಿಯೂ ಗೇರುಸೊಪ್ಪೆ ಆಸ್ಥಾನದಲ್ಲಿದ್ದ. ಆಗ 'ತೌಳವ ಹೈವ ಕೊಂಕಣ ದೇಶದಧಿನಾಥನೂ ಲಕ್ಷ್ಮಿಯ ಪುತ್ರನೂ ಆದ ಮಹಾಮಂಡಲೇಶ್ವರ ಭೈರವರಾಯನು ನಗಿರ ನಗರದಲ್ಲಿ ಆಳುತ್ತಿದ್ದನು......ಸಾಳ್ವಮಲ್ಲ, ಸಾಳ್ವದೇವ ಇವರಿಬ್ಬರ ಇಷ್ಟಾನುಸಾರ ಕವಿ ಭಾರತವನ್ನು ಭಾಮಿನೀ ಷಟ್ಪದಿಯಲ್ಲಿ ಬರೆದನು' ೧೫೫೦ರಲ್ಲಿ ಈತ ಇದ್ದಿರಬಹುದೆನ್ನುತ್ತಾರೆ ಕವಿಚರಿತಕಾರರು. ನಗಿರೆಯ ಕೊನೆಯ ಮಲ್ಲಿರಾಜ ಅಥವಾ ಸಾಳ್ವಮಲ್ಲನ ಕಾಲ ೧೪೮೨ರೊಳಗೆ ಮುಗಿಯುತ್ತದೆ. ಆದುದರಿಂದ 'ರಸರತ್ನಾಕರ' ಮತ್ತು 'ವೈದ್ಯಸಾಂಗತ್ಯ' ಎಂಬ ಇನ್ನೆರಡು ಗ್ರಂಥಗಳನ್ನು ಬರೆದ. ಈತನಿದ್ದದ್ದು ೧೪೮೨ರೊಳಗೇ ಎಂಬುದು ಸರಿ. ಈತನು ರಸರತ್ನಾಕರದಲ್ಲಿ ರಸ, ನಾಯಕ, ನಾಯಕಿ, ಭಾವ ಮುಂತಾದ ಕಾವ್ಯಶಾಸ್ತ್ರದ ವಿಷಯಗಳನ್ನು ಪ್ರತಿಪಾದಿಸಿದ್ದಾನೆ. 'ವೈದ್ಯ ಸಾಂಗತ್ಯದಲ್ಲಿ' ವೈದ್ಯಕೀಯ ವಿಷಯ, ಔಷಧಿಗಳ ಮತ್ತು ರೋಗಗಳ ವಿವರಣ ಬಂದಿದೆ. ಇಷ್ಟೂ ಅಲ್ಲದೆ, ೪ನೆಯದಾದ 'ಶಾರದಾವಿಲಾಸ' ಎಂಬ ಧ್ವನಿವಿಷಯಕವಾದ ಗ್ರಂಥವೂ ಈತನದೇ ಆಗಿದೆ; ಆದರಿದು ಅಪೂರ್ಣರೂಪದಲ್ಲಿ ಸಿಕ್ಕಿದೆ.

ವರ್ಧಮಾನ ಕವಿಯು ಅಭಿನವವಾದಿ ವಿದ್ಯಾನಂದನ ಶಿಷ್ಯ. ಈತ ಇದ್ದುದ್ದು ೧೬೦೦ರಲ್ಲಿ. ನಗರದ ೪೬ನೆಯ ಶಾಸನದ ಕನ್ನಡ, ಸಂಸ್ಕೃತ ಪದ್ಯಗಳನ್ನು ರಚಿಸಿದ್ದು ಈತನೇ. ಕವಿಸಾಳ್ವನ ಶಿಷ್ಯನಾಗಿರಬಹುದಾದ ತಿಮ್ಮನೆಂಬ ಬ್ರಾಹ್ಮಣ ಕವಿಯು ಅದೇ ಕಾಲದಲ್ಲಿ 'ನವರಸಾಲಂಕಾರ'ವನ್ನು ಬರೆದ. ಈತನಿಗೆ ಕವಿ ಕುಲಚಕ್ರವರ್ತಿ ಮುಂತಾದ ದೊಡ್ಡ ಬಿರುದುಗಳಿದ್ದವು. ಅದಿಯಪ್ಪನೆಂಬ ಕವಿಯು ಗೇರುಸೊಪ್ಪೆಯ ದೊರೆ ಭೈರವರಾಯನ (೧೪೬೨–೧೪೯೪) ಗುರುವಾದ ವೀರಸೇನನ ಆಜ್ಞಾನುಸಾರವಾಗಿ 'ಧನ್ಯಕುಮಾರಚರಿತೆ'ಯನ್ನು ಬರೆದನು. ಅದರಲ್ಲಿ ೪೧೦ ಸೊಲ್ಲುಗಳಿವೆ; ಛಂದಸ್ಸು ಸಾಂಗತ್ಯ. ಸಂಗೀತಪುರದ ರಸಸಂಗಮರಾಯ ಪುತ್ರ ಸಾಳುವೇಂದ್ರ ಭೂಪನ(೧೪೭೨–೧೪೮೫) ರಾಜ್ಯದಲ್ಲಿ ಒಪ್ಪುವ ಭಾರಂಗಿಯ ಪಾಯಣ್ಣನು 'ಅಹಿಂಸಾ ಚರಿತೆ' ಎಂಬ ಸಾಂಗತ್ಯ ಕೃತಿಯನ್ನು ನಿರ್ಮಿಸಿದ. 'ಭೇಕನರ್ಥಾಖ್ಯಾನ' ಎಂಬ ೧೬ ಸಂಧಿಗಳ ಸಾಂಗತ್ಯ ಗ್ರಂಥವೂ ಇವನದಾಗಿರಬಹುದು.

## ಶಿಲ್ಪ: ಬಸದಿಗಳು ಮತ್ತು ದೇವಾಲಯಗಳು

ಕುಮಟೆಯ ಬಸದಿಯಲ್ಲಿರುವ ಪಾರ್ಶ್ವನಾಥ ವಿಗ್ರಹವನ್ನು ಮೂಲ ಸಂಘದ ಸೂರಸ್ತಗಣದ ಚಿತ್ರಕೂಟ ಗಚ್ಛದ ಮುಕುಂದ ದೇವನು ಪ್ರತಿಷ್ಠಿಸಿದನು. ಕದಂಬ ವೀರ ಕಾವದೇವರಸನ ಕಾಲದಲ್ಲಿ (೧೨೬೦–೧೩೧೫) ವರ್ಧಮಾನ ಸೆಟ್ಟಿಯ ಮಗನೂ ಚಂದ್ರಕೀರ್ತಿ ಭಟ್ಟಾಕರನ ಶಿಷ್ಯನೂ ಆದ ಸಾತಿಪೆದ್ದನು ಅಲ್ಲಿ ನಿರ್ವಾಣ ಹೊಂದಿದನು. ಸುಮಾರು ೧೩೪೪ರಲ್ಲಿ ಮೂಲಸಂಘದ ದೇಶೀಯ ಗಣದ, ಪುಸ್ತಕ ಗಚ್ಛದ, ಕೊಂಡಕುಂದಾನ್ವಯದ ನಾಗಚಂದ್ರದೇವನು ಆರಾಧನಾ ವಿಧಿಯಿಂದ ಅರ್ಹತ್ ಸಮಾಧಿಯನ್ನು ಹೊಂದಿದನು. ವಿಶಾಲಕೀರ್ತಿ ರಾವುಳನು ಅವನ ಗುರುವಾಗಿದ್ದನು. ತ್ರಿಭುವನ ಬೀರನೆನ್ನಿಸಿದ್ದ ಬನವಾಸಿಯ ಕದಂಬ ಮಲ್ಲಿಕಾರ್ಜುನನ(೧೧೩೨–೧೧೪೬) ರಾಣಿಯಾಗಿದ್ದಿರಬಹುದಾದ ಕಂಚಲದೇವಿ ಅಲ್ಲಿ ಸಲ್ಲೇಖನ ವ್ರತದಿಂದ ಸಮಾಧಿ ಹೊಂದಿದ್ದಲ್ಲದೆ, ಸಾಂತವ್ವೆ ಎಂಬೊಬ್ಬ ಹೆಂಗಸೂ ಸೆಟ್ಟಿಯೆಂಬೊಬ್ಬ ಗಂಡಸೂ ಹಾಗೇ ಅಲ್ಲಿ ಸಮಾಧಿ ಹೊಂದಿದ ಉಲ್ಲೇಖವಿರುವುದರಿಂದ ಬಸದಿಯು ಹೈವರಸರ ಪೂರ್ವಕಾಲದಲ್ಲೇ ಇತ್ತೆಂದು ಸಿದ್ಧವಾಗುತ್ತದೆ. ಕುಂಭೇಶ್ವರ, ಶಾಂತೇರಿ ಕಾಮಾಕ್ಷಿ, ಜಟ್ಟಿಗರಾಯ ಮುಂತಾದವು ದೇವಾಲಯಗಳಲ್ಲಿ ಗಣ್ಯವಾದಂಥವು.

ಮುರ್ಡೇಶ್ವರದ ಸಮೀಪದಲ್ಲಿರುವ ಕಾಯಕಿಣಿಯಲ್ಲಿ ಕುಮಟೆಯಲ್ಲಿರುವಂತೆಯೇ ಒಂದು ಪಾರ್ಶ್ವನಾಥ ಬಸದಿ ಇದೆ. ಬೈಲೂರಿನಲ್ಲಿ ಮಾಸ್ತಿ ಮನೆ ಇದೆ. ಜೊತೆಗೆ ವೀರಮನೆಯೂ ಒಂದಿದೆ. ಭಟ್ಕಳದಲ್ಲಿ ಬಂಡಬಸ್ತಿ(ಜೆಟ್ಟಪ್ಪ ನಾಯಕನ ಬಸದಿ), ಪಾರ್ಶ್ವನಾಥ ಬಸದಿಗಳಿವೆ. ಮುರ್ಡೇಶ್ವರದಲ್ಲಿ ಲಿಂಗ ದೇವಸ್ಥಾನವಿರುವಂತೆಯೇ ಇಲ್ಲಿಯೂ ಚೋಳೇಶ್ವರ ದೇವಾಲಯ, ಮಾರುತಿ ದೇವಾಲಯ ಮತ್ತು ತಿರುಮಲೆ ದೇವಾಲಯುಗಳಿವೆ. ಹೊಯ್ಸಳ–ವಿಜಯನಗರಗಳ ಕಾಲದ ಬಸದಿಗಳೂ

ದೇವಾಲಯಗಳೂ ಇವುಗಳಲ್ಲಿ ಅಧಿಕವಾಗಿವೆ.

ಮೂಡುಭಟಕಳದ ಖೇತಪ್ಯೈ ನಾರಾಯಣ ದೇವಾಲಯವು ಬಹಳ ಕಲಾಮಯವಾಗಿದೆ. ಹಾಡುವಳ್ಳಿಯ ದರ್ಶನ ಬಸದಿಯೂ ಹಾಗೇ ಬಹಳ ಆಕರ್ಷಕವಾಗಿವೆ. ನಗಿರೆಯ ಚತುರ್ಮುಖ ಬಸದಿಯೂ ಪಾರ್ಶ್ವನಾಥ ವಿಗ್ರಹವೂ ನಯನಮನೋಹರವಾಗಿವೆ. ಮುರ್ಡೇಶ್ವರನ ಸಾಲಿಗೆ ಗುಣವಂತೇಶ್ವರ, ಧಾರೇಶ್ವರ ಮತ್ತು ಸರ್ಜೇಶ್ವರ ದೇವಾಲಯಗಳೂ ಗೋಕರ್ಣ ಮಹಾಬಲೇಶ್ವರ ದೇವಾಲಯವೂ ಪೌರಾಣಿಕವಾಗಿ ಸೇರುತ್ತದೆ. ಗುಣವಂತೆಯಲ್ಲಿ ಗುಣವಂತೇಶ್ವರ, ಧಾರೇಶ್ವರದಲ್ಲಿ ಧಾರೇಶ್ವರ; ಆದರೆ ಕಾರವಾರದಲ್ಲಿ (ಕೊಂಕಣಸ್ಥ) ಸರ್ಜೇಶ್ವರ.

ಹೈವದ ದೇವಾಲಯಗಳಲ್ಲೆಲ್ಲಾ ಅಗ್ರಗಣ್ಯವಾಗಿರುವುದು ಗೋಕರ್ಣದ ಮಹಾಬಲೇಶ್ವರ ದೇವಸ್ಥಾನ. ದೇವಾಲಯಗಳೂ ಬಸದಿಗಳೂ ಧಾರ್ಮಿಕ ನೆಲೆವೀಡುಗಳಾದುದರಿಂದ ಅವು ಈ ನಾಡಿನ ಮತಧಾರ್ಮಿಕ ಜೀವನದ ಮೇಲೆ ಸ್ಪಷ್ಟವಾಗಿ ಬೆಳಕನ್ನು ಬೀರುತ್ತವೆ. ಬಸದಿಗಳು ಶಿಲ್ಪ ಸೌಂದರ್ಯಕ್ಕಷ್ಟೇ ಈಗ ಪ್ರಸಿದ್ಧವಾಗಿದ್ದರೆ, ದೇವಾಲಯಗಳಲ್ಲಿ ಅದಕ್ಕಿಂತ ಹೆಚ್ಚಾಗಿ ಪೂಜ್ಯತೆ ಜನರನ್ನು ಆಕರ್ಷಿಸುತ್ತದೆ. ಗೋಕರ್ಣದ ಪೂಜ್ಯತೆ ಮಹಾಭಾರತ ಕಾಲದಿಂದ ಪ್ರಸಿದ್ಧವೆನ್ನಲಾಗುತ್ತದೆ; ಅಥವಾ ರಾವಣೇಶ್ವರನಿದ್ದ ತ್ರೇತಾಯುಗದಿಂದ ಎನ್ನುತ್ತದೆ ಪುರಾಣ ವಾಙ್ಮಯ. ಅದೀಗ ಅಖಿಲ ಭಾರತ ಯಾತ್ರಾಸ್ಥಳ. ಗೋಕರ್ಣವು ಸ್ಮಾರ್ತ ಕೇಂದ್ರ; ಸ್ಮಾರ್ತತೆಯು ವಿಶಾಲ ವೈದಿಕತೆ ಅಥವಾ ಹಿಂದುತ್ವ.

ಗೋಕರ್ಣ ಪುರವರಾಧೀಶ್ವರ, ಗೋಕರ್ಣ ಮಹಾಬಲೇಶ್ವರ ದೇವರ ದಿವ್ಯ ಶ್ರೀಪಾದ ಪದುಮಾರಾಧಕ ಮುಂತಾದ ಬಿರುದುಗಳನ್ನುಳ್ಳ ಪಾಳೆಯಗಾರರ ಶಾಸನಗಳು ಸಿಕ್ಕಿದ್ದರಿಂದ(ಗೋಕರ್ಣೇತರ ಸ್ಥಳದಲ್ಲಿ ಕೂಡ) ಗೋಕರ್ಣ ಒಮ್ಮೆ ಅಂಥ ಯಾವನಾದರೂ ಒಬ್ಬ ತುಂಡರಸನ ರಾಜಧಾನಿಯಾಗಿತ್ತೇ ಎಂದೂ ಯಾರಿಗಾದರೂ ಸಂಶಯ ಉಂಟಾಗುತ್ತದೆ. ನಾಗವರ್ಮ(೧೦೮೦–೧೧೧೦) ನಂತಹ ಹಿಂದು ಮುಂದಿಲ್ಲದ ಅಥವಾ ಚಂದಾವರದ ಪಾಳೆಯಗಾರರಂತಹ(೧೦೭೮–೧೨೨೪–೧೩೭೯) ಸ್ವಲ್ಪ ಹಿಂದುಮುಂದಿರುವ ಅರಸರು ಗೋಕರ್ಣದ ಉಪಪ್ರದೇಶವನ್ನು ೨–೩ ಮೇಲ್ದೊರೆಗಳ ಕೆಳಗೆ ಆಳುತ್ತಿದ್ದಿರಬಹುದು. ಆದರೆ ಅವರಾರಿಗೂ ಗೋಕರ್ಣವು ರಾಜಧಾನಿಯಾಗಿತ್ತೆಂಬುದಕ್ಕೆ ಆಧಾರವಿರುವುದು ಅರಿಯದು.

ಲಿಂಗಪೂಜೆಯು(ಮೂರ್ತಿಪೂಜೆ ಗೊತ್ತಿಲ್ಲದಿದ್ದ ಕಾಲದಲ್ಲಿ) ಭಾರತದ ವನವಾಸಿಗಳಾದ ಕೋಲರೇ ಮುಂತಾದವರ ಕಾಲದ ಆಸ್ಟ್ರೋ–ಏಶಿಯಾಟಿಕ್ ಉಪಭಾಷೆಗಳಲ್ಲಿ ಹುಟ್ಟಿದ 'ಲಿಂಗಪದ'ದಿಂದ ಎಲ್ಲ ದೇವತೆಗಳ ಪರವಾಗಿಯೂ ನಡೆಯುತ್ತಿತ್ತು ಎಂಬುದೊಂದು ಮತ; ಅಂದರೆ ಸುಮಾರು ೬–೭ಸಾವಿರ ವರ್ಷಗಳ ಹಿಂದೆ. ಲಿಂಗವು ನಿಜವಾಗಿ ಆಗ ಸರ್ವ ದೇವತೆಗಳ 'ಚಿಹ್ನೆ'ವಾಗಿತ್ತು; ಕೇವಲ ಶಿವಚಿಹ್ನವಾಗಿದ್ದಿಲ್ಲ. ಕೋಲ–ಮುಂಡ–ದ್ರಾವಿಡ(ಕಂದಮಿಳ)ರ ನಾಗರಿಕತೆಗಳ

ವಿಕಾಸವಾಗುತ್ತ ಹೋಗಿ ಆರ್ಯ ಸಮನ್ವಯ ಭರದಿಂದ ಸಾಗಲು ಕ್ರಿ.ಪೂ.೨೦೦೦ ವರ್ಷದಲ್ಲಿ ಶುರುವಾದಾಗ ಕೋಳಿಮೊಟ್ಟೆಯ ಆಕೃತಿಯ ಕರಿಗಲ್ಲು ಶಿವನ ಚಿಹ್ನವೆಂದೂ ಗೋಲಿಯಾಕೃತಿಯ ಕಲ್ಲು ವಿಷ್ಣು ಚಿಹ್ನವೆಂದೂ ಕ್ರಮೇಣ ರೂಢಿಗೆ ಬರತೊಡಗಿದವು. 'ಲಿಂಗ' ಈಗಲೂ ಅಮ್ಮನವರ ಚಿಹ್ನವಾಗಿ ಕೆಲವೆಡೆ ಉಳಿದಿದೆ. ಸೂರ್ಯನ ಸುತ್ತ ತಿರುಗುವ ಗ್ರಹಗಳ ಪಥ ಅಂಡಾಕಾರವಾಗಿರುವುದರಿಂದ ಭಾರತದ ಕಲೆಗಳೂ ಮತಧರ್ಮಗಳೂ ಜಗತ್ತನ್ನು 'ಬ್ರಹ್ಮಾಂಡ'ವೆಂದು ಕಲ್ಪಿಸಿಕೊಳ್ಳಾರಂಭಿಸಿದಂದಿನಿಂದ ಲಿಂಗಾಕಾರವು ಜಗತ್ ಪಿತನ ಪ್ರಧಾನ ಸಂಕೇತವಾಯಿತು. ಆ ಪ್ರತೀಕವು ಹರಚಿಹ್ನವಾಗಿಯೇ ಹೆಚ್ಚು ಪ್ರಸಿದ್ಧಿಗೆ ಬರಲು ಸಾಲಿಗ್ರಾಮಗಳು ಹರಿಚಿಹ್ನವಾಗಿ ವೈಶಿಷ್ಟ್ಯವನ್ನು ಬೆಳೆಯಿಸಿಕೊಂಡು ಹೋದದ್ದೇ ಕಾರಣ; ಹರಭಕ್ತ–ಹರಿಭಕ್ತರು ತಂತಮ್ಮ ದೇವರಿಗೆ ಜಗತ್ ಪಿತೃತ್ವವನ್ನೂ ಜಗತ್ಪಾಲಕತ್ವವನ್ನೂ(ಬ್ರಹ್ಮನನ್ನು ಮೂಲೆಗೊತ್ತಿ) ಅನ್ವಯಿಸಲಾರಂಭಿಸಿದ್ದೂ ಕಾರಣ. ಋಗ್ವೇದದ ಕಾಲದಲ್ಲಿ ಗುಪ್ತಿಗೆ ಹೋದ ಹರಿಹರಬ್ರಹ್ಮರು ಮಹಾಭಾರತದ ಕಾಲದಲ್ಲಿ (ಕ್ರಿ.ಪೂ.೪೦೦೦ರಿಂದ) ವೈದಿಕ ದೇವತೆಗಳಾದ ಇಂದ್ರಾದಿಗಳನ್ನು ಅಷ್ಟದಿಕ್ಪಾಲಕತ್ವಕ್ಕಿಳಿಸಿ ಪುನಃ ಜನಪ್ರಿಯತೆಯನ್ನು ಗಳಿಸಿದರು. ಅವರಲ್ಲೂ ಹರಿಹರರ ಮೇಲಾಟವನ್ನು ಏರ್ಪಡಿಸಿದ್ದು ಸುಪ್ರಸಿದ್ಧ(ಪುರಂದರರ ಪಾರ್ವತೀ ಲಕ್ಷ್ಮೀ ಸಂವಾದವನ್ನು ಓದಬಹುದು.)

ಗೋಕರ್ಣದ ಮಹಾಬಲೇಶ್ವರ ದೇವಾಲಯದಲ್ಲಿ ಗರ್ಭಗುಡಿ ಬಹಳ ಪ್ರಾಚೀನ. ಅದರ ಆವರಣಗಳು ಅನೇಕ ಸಲ ಪುನಾರಚಿತವಾದಂಥವು. ಕರ್ನಾಟಕದ ಅನೇಕ ಪ್ರಾಚೀನ ದೇವಾಲಯಗಳ ಕತೆ ಇಂಥದೇ. ಇಡಿ ಭಾರತದ ವರ್ತಮಾನ ಸಂಸ್ಕೃತಿಗಿದು ವ್ಯಾಖ್ಯೆ. ಯಜ್ಞ ಸಂಸ್ಥೆಗಳು ದೇವಾಲಯಗಳಾಗಿ ರೂಪಾಂತರ ಹೊಂದಿದ್ದಕ್ಕೆ ಶಿಲ್ಪ ಶಾಸ್ತ್ರಗಳು ಪ್ರಮಾಣಗಳನ್ನು ನೀಡುತ್ತವೆ. ಮಹಾಬಲೇಶ್ವರ ದೇವಾಲಯದ ರಂಗಮಂಟಪವನ್ನು ಮಾಡಿಸಿದಾತ ಕುಂದಾಪುರ ತಾಲೂಕಿನ ಹಲಸುನಾಡಿನ ವಿಶ್ವೇಶ್ವರಯ್ಯ ಎನ್ನುತ್ತದೆ ಶಾಸನ.

ಹೊನ್ನಾವರದಲ್ಲಿದ್ದ ಬಂಕರಸ ಒಡೆಯನು ೧೪೧೭ರಲ್ಲಿ ೩ ಜಾತಿಗಳ ತಪಸ್ವಿಗಳ ಅಶನಕ್ಕಾಗಿಗೋಕರ್ಣದಲ್ಲಿ ಭೂದಾನ ಮಾಡಿದನು. ಆತನು ವಿಜಯನಗರದ ೧ನೆಯ ದೇವರಾಯ ಚಕ್ರವರ್ತಿಯ ಮಹಾಪ್ರಧಾನನಾಗಿದ್ದ ಮತ್ತು ಹೈವ ತುಳು ಕೊಂಕಣ ನಾಡುಗಳ ರಾಜ್ಯಪಾಲನಾಗಿದ್ದ. ವಿಜಯನಗರದ ಬುಕ್ಕರಾಯನ(೧೩೫೫–೧೩೭೬) ಅಪ್ಪಣೆಯ ಮೇರೆಗೆ ಬಸವಯ್ಯ ದಂಡನಾಯಕನು ವೇದೇಶ್ವರ ದೇವಾಲಯದಲ್ಲಿದ್ದ ಪರಮಹಂಸ ಪರಿವ್ರಾಜಕಾಚಾರ್ಯ ಶ್ರೀ ವೇದಸಾಗರ ಶ್ರೀಪಾದ ಸ್ವಾಮಿಗೆ ಸರ್ವಮಾನ್ಯ (ಕಂದಾಯ ವಜಾ ಮಾಡಿ) ಭೂದಾನವನ್ನು ಮಾಡಿದನು. ಚಂದ್ರಗುತ್ತಿಯಲ್ಲಿದ್ದ ವಿಜಯನಗರದ ಮಾರಪ್ಪ ಯುವರಾಜನ ಮಂತ್ರಿಯಾಗಿದ್ದ ಮಾದರಸನು(೧೩೬೯–೧೩೭೭) ನಾಲ್ಕು ಹಳ್ಳಿಗಳನ್ನು ಕೊಂಡು ಮಹಾಬಲೇಶ್ವರ–ಅಮೃತೇಶ್ವರ ದೇವರುಗಳಿಗೆ ದಾನಮಾಡಿದನು. ವಿಜಯನಗರದ ವೀರಬುಕ್ಕರಾಯನ(೧೪೦೪–೧೪೦೬) ರಾಣಿ

ವಿಠ್ಠಲದೇವಿಯೂ ದೇವರ ಸೇವೆಗೆ ದಾನ ಕೊಟ್ಟಿದ್ದಳು. ಬುಕ್ಕರಾಯನ(೧೩೫೫–೧೩೭೬) ರಾಣಿ ಹೊನ್ನಾದೇವಿ ಅದಕ್ಕೂ ಮೊದಲು (ಮಲ್ಲಪ್ಪ ಒಡೆಯನು ಹೈವದ ರಾಜ್ಯಪಾಲನಾಗಿದ್ದಾಗ) ಭೂದಾನ ಮಾಡಿದ್ದಳು. ಇನ್ನೂ ಹಿಂದೆ ಹೋದರೆ ಗೋವೆಯ ೨ನೆಯ ಕಾವ(ಕಾಮ)ದೇವ ಕದಂಬ(೧೩೨೮–೧೩೪೦). ನಾಗರಖಂಡದ ೨ನೆಯ ಸೋವಿ(ಸೋಮ)ದೇವ ಕದಂಬರೂ ಅಂಥ ದಾನಗಳನ್ನು ಅಲ್ಲಿ ಮಾಡಿದ್ದರು. ವಿಜಯನಗರದ ಕೊನೆಯ ಶಬ್ದಮಾತ್ರ ಮಹಾಸಾರ್ವಭೌಮ ಸದಾಶಿವರಾಯನೂ (೧೫೪೨–೧೫೭೦) ಕೊನೆಗೆ ಗೋಕರ್ಣೇಶ್ವರನ ಹೆಸರಲ್ಲಿ ದಾನಧರ್ಮಗಳನ್ನು ಮಾಡಿಸಿದ.

ಕಡಲುಗನ್ನಡ ಜಿಲ್ಲೆಯ(ಮಹಾಕೆನರದ) ಶಿಲ್ಪ ವಿಕಾಸವಿಂತು: ಶಾಲಿವಾಹನ, ಕದಂಬ, ಚಾಲುಕ್ಯ, ಹೊಯ್ಸಳ ಅವಧಿಗಳ ಶೈಲಿ ವಿಕಾಸದ ಘಟ್ಟಗಳಲ್ಲಿ ಹೊಕ್ಕು ಹೊರಟು ಅರೆಕಲ್ಲಿನ ಇಳಿಮಾಡುಗಳಿಂದ ತಮ್ಮ ವೈಶಿಷ್ಟ್ಯವನ್ನು ಕಾದುಕೊಂಡಿರುವ ದೇವಾಲಯಗಳಲ್ಲಿ ಹೆಚ್ಚು. ಮಂಗಳೂರು ಹೆಂಚುಗಳಿಂದ, ಅವುಗಳಲ್ಲಿ ಹಲವು ಈಗ ರಕ್ಷಿತವಾಗಿರುವುದು ಅವುಗಳ ಅತಿ ಪ್ರಾಚೀನತೆಗೆ ಪ್ರಮಾಣ. ಇಷ್ಟು ಸಲ ಅವು ಜೀರ್ಣೋದ್ಧಾರ ಹೊಂದುತ್ತ ಬಂದಿವೆ ಎಂಬುದನ್ನು ವಾಸ್ತು ಮೂರ್ತಿಶಿಲ್ಪಗಳ ಅವಧಿಕ ವಿಕಾಸ ಪ್ರಕಾರಗಳಿಂದ ಊಹಿಸಬಹುದು. 'ಗ್ರಾನೈಟ್' ಕಲ್ಲಿಗೆ 'ಕಾರ್ಬನ್ ಡೇಟಿಂಗ್' ಇಲ್ಲವಾದರೂ ಲಿಂಗ ಅಥವಾ ಮೂರ್ತಿ ಇರುವ ಸ್ಥಳಗಳ ನಿಕಟಾವರಣಖನನ ನಡೆದರೆ ಆ ಮೂಲಕ ಭೂಗರ್ಭ ಶಾಸ್ತ್ರಜ್ಞರು ಅವುಗಳ ಶತಮಾನವನ್ನು ಖಚಿತವಾಗಿ ಹೇಳಲು ಶಕ್ತರಾದಾರು. ಜೈನ ಶಿಲ್ಪದ ಪ್ರಸಾರ ಕ್ರಿ.ಶ.೬–೭ನೆಯ ಶತಮಾನಗಳಲ್ಲಿ ಪ್ರಾರಂಭವಾದದ್ದು. ಬೌದ್ಧಶಿಲ್ಪ ಅಶೋಕವನ ಕಾಲದಲ್ಲಿ ಆರಂಭವಾಗಿ ಜೈನ ಪ್ರತಾಪದಲ್ಲಿ ಅಡಗಿಹೋಯಿತು. ಬೌದ್ಧಾವಶೇಷಗಳಲ್ಲಿ ಅತ್ಯಲ್ಪ. ಅತ್ಯಂತ ವಿರಳ. ಜೈನರೂ, ನಾಥಪಂಥೀಯರೂ, ಕೆಲಕಾಲ ಲಿಂಗ ದೇವಸ್ಥಾನಗಳಲ್ಲಿ ಕೆಲವನ್ನು ಆಕ್ರಮಿಸಿ ಲಿಂಗಗಳಲ್ಲಿ ತಮ್ಮ ದೇವರುಗಳನ್ನು ಆವಾಹಿಸಿದ್ದರು. ಅವರ ಪ್ರಭಾವ ಅಳಿದ ಕೂಡಲೇ ಅವುಗಳ ಪ್ರಾಚೀನ ಶಿವತ್ವ ಪುನರುದಯವಾಯಿತು. ಲಿಂಗದ ಐತಿಹಾಸಿಕ ಉದ್ಭವ ಕಾಲ(ಕ್ರಿ.ಪೂ.೪–೫ ಸಾವಿರ ವರ್ಷ)ದಲ್ಲಿ ಮಾತ್ರ ಪ್ರಧಾನ ಸಂಸ್ಕೃತಿಯ 'ಟೋಟೆಮಿಸ್ಟ್'ರಿಲ್ಲಿ ಆರ್ಯೇತರ ಮೂಲನಿವಾಸಿಗಳಾಗಿದ್ದರೆಂದು ಕೆಲ ಐತಿಹಾಸಿಕರು ಸಾರಿ ಹೇಳುತ್ತಾರೆ. ಅವರ ವಂಶಜರಾದ ಇಂದಿನ ಜನಾಂಗಗಳಲ್ಲಿ ಅಂಥ ವಿಶಿಷ್ಟತೆಯ ಅಸ್ಪಷ್ಟ ಬೇರುಗಳನ್ನು ಅತ್ಯಂತ ಸಂದಿಗ್ಧವಾಗಿ ಊಹಿಸಬಹುದಷ್ಟೇ? ಮಾತೃಪ್ರಾಧಾನ್ಯದ ಮತ್ತು 'ಟೋಟೆಮು'ಗಳ(ಬಳಿಗಳ) ಕಲ್ಪನೆ ಮೂಲತಃ ತರ್ಕಶುದ್ಧವಾಗಿಲ್ಲದುದರಿಂದ ಅವುಗಳ ಸುದ್ದಿಗೆ ನಾವು ಹೋಗಬಯಸೆವು. ಲಿಂಗ–ಸರ್ಪಾರಾಧನೆಗಳು ಪ್ರಜೋತ್ಪತ್ತಿಗಾಗಿ ಮಾಡುತ್ತಿದ್ದ ಕಾಮಾಂಗ ಸಂಕೇತಗಳೆಂಬಂಥ ಭೃಂಗದ ಬೆನ್ನೇರಿ ಬಂದ ಕಲ್ಪನಾವಿಲಾಸಗಳಿಗೆ ಐತಿಹಾಸಿಕತೆ ಅಸಿದ್ಧ. ಆರ್ಯ–ದ್ರಾವಿಡ ಸಮನ್ವಯದ ಊಹಾ ಚಿತ್ರಗಳೂ ಅತ್ಯಂತ ವಿವಿಧ ಮತ್ತು ಅಸಮರ್ಪಕವಾಗಿವೆ. ಸರ್ವತಃ ಪ್ರಾಧಾನ್ಯ–ಸರ್ವೋಚ್ಚ ಆರಾಧ್ಯತೆಗಳಿಗೆ ಲಕ್ಷ್ಯವಾದ ಆಕೃತಿ, ವ್ಯಕ್ತಿ, ಜಾತಿಗಳು ಇತಿಹಾಸಪೂರ್ವಕಾಲದಲ್ಲಿ ಸರ್ವತ್ರ ಹೀಗೆ ಇದ್ದವೆನ್ನಲು ಆಧಾರ ಸಾಲದು.

ಗೋಕರ್ಣದಲ್ಲಿ ಮಹಾಬಲೇಶ್ವರ ದೇವಾಲಯವಲ್ಲದೆ, ಇತರ ೩೦ ಲಿಂಗಗಳೂ, ೩೦ ತೀರ್ಥಗಳೂ ಇವೆ. ನರಸಿಂಹ ದೇವಾಲಯ, ಶಂಕರನಾರಾಯಣ ದೇವಾಲಯ, ಭದ್ರಕಾಳಿ ದೇವಾಲಯ ಮುಂತಾದ ದೇವಾಲಯಗಳೂ ಕೋಟಿತೀರ್ಥ, ಗಂಗಾತೀರ್ಥ, ಗೋಗರ್ಭತೀರ್ಥ, ಬ್ರಹ್ಮಕಮಂಡಲು ತೀರ್ಥ ಮುಂತಾದ ತೀರ್ಥಗಳೂ ಗಣ್ಯವಾಗಿವೆ. ಅಲ್ಲಿ ಬ್ರಾಹ್ಮಣರು ಅನೇಕ ಪೂಜೆ, ಪುನಸ್ಕಾರ, ವಿನಿಯೋಗಗಳನ್ನು ಅನೂಚಾನವಾಗಿ ನಡೆಸಿಕೊಂಡು ಬರುತ್ತಿದ್ದ ಬಗ್ಗೆ ಹೈವರಸರಾದ ಮೇಲೆ ಕೆನರ ಪ್ರಭುಗಳಾಗಿ ಬಂದ ಬಿದನೂರು ಮನೆತನದ ಚೆನ್ನಮ್ಮಾಜಿ ರಾಣಿಯ ಮತ್ತು ಸೋಮಶೇಖರ ರಾಜನ ಸನದಿದೆ. ಗೋಕರ್ಣದ ಶಿವರಾತ್ರಿಯನ್ನೂ, ರಥೋತ್ಸವವನ್ನೂ ಮೆಚ್ಚದ ಭಕ್ತರು ಕಡಿಮೆ. ಕುಮಟಾ ತಾಲೂಕಿನಲ್ಲಿ ಗೋಕರ್ಣ ಇಂತು ಹೆಮ್ಮೆಯ ಸ್ಥಾನವನ್ನು ಗಳಿಸಿದೆ.

## ನಿಸರ್ಗರಮಣೀಯ ಸ್ಥಳಗಳು

ಹೈವದಲ್ಲಿ (ಅಂಕೋಲೆಯಿಂದ ಕುಂದಾಪುರದವರೆಗಿನ ಸಮುದ್ರ ತೀರದಲ್ಲಿ) ಹೆಜ್ಜೆ ಹೆಜ್ಜೆಗೆ ನಿಸರ್ಗ ರಮಣೀಯ ಸ್ಥಳಗಳು ಸಿಗುತ್ತವೆ. ಕುಮಟಾ ತಾಲೂಕಿನ ಅಂಚನ್ನೇ ಹಿಡಿದರೆ ಗೋಕರ್ಣ, ಸಾಣೀಕಟ್ಟೆ, ಮಾದನಗೇರಿಗಳೂ, ಹಿರೇಗುತ್ತಿ, ಬರಗಿ, ಮಿರ್ಜಾನ್, ಕೋಡಕಣೀ, ದೀವಗಿಗಳೂ, ಬಾಡ, ಹೊಲನಗದ್ದೆ, ಕುಮಟಾ, ಧಾರೇಶ್ವರಗಳೂ ಕಡಲು–ಹೊಳೆಗಳ, ತೆಂಗು–ಕಂಗು–ಬಾಳೆತೋಟಗಳ, ಪಚ್ಚೆ ಪಯಿರುಗಳ ನಂದನವನಗಳಾಗಿ ತೋರುತ್ತದೆ.

ಸಾಣೆಕಟ್ಟೆಯ ಉಪ್ಪು ಪ್ರಸಿದ್ಧ; ಅದರ ಉಪ್ಪಿನಾಗರ ಕೂಡ ಹಾಗೇ. ಹಿರೇಗುತ್ತಿಯ ಬೆಲ್ಲ ವಿಖ್ಯಾತ. ಅಲ್ಲಿಯ ನಾಡವರು ತುಳು ನಾಡಿನಿಂದ ವಲಸೆ ಬಂದವರೆಂದು ಹೇಳಲಾಗುತ್ತದೆ. ಅದೊಂದು ಹಳೆಯ ಜೈನ ಕೇಂದ್ರ. ಬಿದನೂರರಸರ(ಕೆನರ ಪ್ರಭುಗಳ) ಆಡಳಿತಗಾರರು ಅದನ್ನು ತಮ್ಮ ನೆಲವೀಡನ್ನಾಗಿ(Head Quarters) ಮಾಡಿಕೊಂಡಿದ್ದರು. ಅಲ್ಲಿಯ ಬಂಡಿಹಬ್ಬ ಪ್ರಸಿದ್ಧ.

'ಮಿಡಜಯ್' ಎಂದಿತ್ತಂತೆ ಮಿರ್ಜಾನಿನ ಮೊದಲಿನ ಹೆಸರು. ಯಾವುದೋ ತಂತ್ರೀವಾದ್ಯವನ್ನು ಚೆನ್ನಾಗಿ ಮಿಡಿದ ಕಲಾವಿದನಿಗೆ 'ಮಿಡಿದೆ(ನೀನು ಚೆನ್ನಾಗಿ)' ಎಂಬ ಶಹಭಾಸಗಿರಿ ದೊರೆತಾಗ ಅವನ ಆ ಊರನ್ನೇ ಜನ ಹಾಗೆ ಕರೆದಿರಬಹುದು! ನಾಡವರು ಸಮುದ್ರ ಮಾರ್ಗವಾಗಿ ಉತ್ತರಕನ್ನಡಜಿಲ್ಲೆಯನ್ನು ೧೫–೧೬ನೆಯ ಶತಮಾನಗಳಲ್ಲಿ ಮಿರ್ಜಾನಿನ ಮೂಲಕ ಹೊಕ್ಕರೆಂದು ಐತಿಹ್ಯ. ಜನರಲ್ ಮೆಥ್ಯೂಸನ ಟೀಪು ವಿರುದ್ಧ ದಂಡು ೧೭೮೪ರಲ್ಲಿ ಅಲ್ಲಿ ತಂಗಿತ್ತಂತೆ. ೧೬೦೮ರ ಬಿಜಾಪುರದ ಆದಿಲಶಹರ ಕೋಟೆ ಅಲ್ಲಿ ಇನ್ನೂ ಉಳಿದಿದೆ.

ಗೋಕರ್ಣದ ಬೇಲೆಯಂತೆಯೇ ಬರಗಿ–ಬಾಡಗಳ ಬೇಲೆಗಳೂ ಚೆನ್ನಾಗಿವೆ. ಬಾಡವು ಮತ್ತಷ್ಟು ಮನೋಹರ ಆವರಣ. ಅದರ ರಥೋತ್ಸವವು ಪ್ರಸಿದ್ಧ. ಕುಮಟೆಯೊಂದು ಬಂದರ. ಅದರ ಹತ್ತಿರದ ಅಳಿವೆ ಕೋಡಿ ಸುಂದರ.ಕುಮಟೆಯ

ಚಂದನ ಶಿಲ್ಪಿಗಳು ವಿಶ್ವವಿಖ್ಯಾತರು. ಅವರು ದಂತ ಶಿಲ್ಪದಲ್ಲೂ ಚತುರರು; ಗಣಪತಿ ಶಿಲ್ಪಕ್ಕೆ ಅವರದು ಎತ್ತಿದ ಕೈ; ಅವರು ಬೆಂಡಿನ ಹಾರಗಳಿಗೂ ಹೆಸರಾದವರು.

ರಾಜಮಾರ್ಗದಿಂದ ಪೂರ್ವಕ್ಕೂ ಅನೇಕ ಸುಂದರ ಗ್ರಾಮಗಳಿವೆ. ಚಿಕ್ಕ ಪುಟ್ಟ ಹಳ್ಳಿ ತಿಟ್ಟುಗಳಿಂದಲೂ, ತೋಟಗಳಿಂದಲೂ, ನಿಸರ್ಗನಿರ್ಮಿತ ನಂದನಗಳಿಂದಲೂ ಅವು ಬಹಳ ಆಕರ್ಷಕವಾಗಿವೆ. ಮಾನೀರು, ಮೂರೂರು, ಕಲ್ಲಬ್ಬೆ, ಉಪ್ಪಿನಪಟ್ಟಣ ಮುಂತಾದ ಅಘನಾಶಿನಿ ತೀರದ ಹಳ್ಳಿಗಳ ಸೌಂದರ್ಯ ಹೃದಯಾಹ್ಲಾದಕರವಾಗಿದೆ. ಹೊನ್ನಾವರ, ಅಂಕೋಲಾ, ಭಟಕಳ ತಾಲೂಕುಗಳಲ್ಲೂ ಇಂಥ ಅನೇಕ ದರ್ಶನೀಯ ಸ್ಥಳಗಳಿವೆ; ಐತಿಹಾಸಿಕ ಸ್ಥಳಗಳೂ ಶಿಲ್ಪ ಸೌಂದರ್ಯ ಸ್ಥಳಗಳೂ ಅನೇಕವಾಗಿವೆ.

ಕುಮಟೆಯ ಸುತ್ತುಮುತ್ತಲಿನ ಹಳ್ಳಿಗರು ಜಾನಪದ ಕಲೆಗಳಲ್ಲಿ ಪಳಗಿದವರು. ಧಾರೇಶ್ವರದ ಸುಬ್ಬನ ಸಿಂಹನೃತ್ಯವು ದಿಲ್ಲಿಗೆ ಹೋಗಿಬಂದಿದೆ. ಸುಗ್ಗಿಯ ಕುಣಿತ-ಗುಮಟೆಯ ಪಾಗುಗಳೂ ಹಾಗೇ. ಈ ಜಾನಪದ ಕಲೆಗಳು ಪರಂಪರಾಗತವಾದಂಥವು. ಮುಕರಿಗಳೂ, ಹಾಲಕ್ಕಿ ಒಕ್ಕಲುಗಳೂ ಇಲ್ಲಿಯ ಮೂಲ ನಿವಾಸಿಗಳಂತೆ ತೋರುತ್ತಾರೆ. ವಿಜಯನಗರದ ಕಾಲದಲ್ಲಿ(ಹೈವರಸರ ಕಾಲದಲ್ಲಿ) ನಾಮಧಾರಿಗಳೂ ನಾಡವರೂ ಯೋಧರಾಗಿ ಕೀರ್ತಿ ಪಡೆಯುತ್ತಿದ್ದರು. ಮಾಸ್ತಿ ಕಲ್ಲುಗಳೂ ವೀರಗಲ್ಲುಗಳೂ ಯಥೇಷ್ಟವಾಗಿರುವುದು ಅಂಥ ಹೇಳಿಕೆಗೆ ಸಾಕ್ಷಿಗಳು. ಅದೊಂದು ವೀರಶೃಂಗಾರದ ಸಸ್ಮಿತವಿಸ್ಮಿತಗಳ ಯುಗ!

## ಕೆನರ ಪ್ರಭುಗಳ ಆಳಿಕೆಯಲ್ಲಿ

ಕೆನರ ಪ್ರಭುಗಳ ಮೂಲ ಸಾಗರ ತಾಲೂಕಿನ ಕೆಳದಿ. ೧೪೯೯ರಲ್ಲಿ ಕೆಳದಿ ಚೌಡಸಪ್ಪ ನಾಯಕನು ವಿಜಯನಗರದ ಸ್ವಾಮಿಭಕ್ತ ಪಾಳೆಯಗಾರನಾಗಿ ಉದಯಿಸಿದನು. ಅವನ ಮಗ ಇಮ್ಮಡಿ ಸದಾಶಿವ ನಾಯಕನು ತನ್ನ ಕೆಳದಿ ರಾಜ್ಯಕ್ಕೆ ಒಡೆಯನೂ ಹೈವ ತುಳು ಕೊಂಕಣಗಳ ರಾಜ್ಯಪಾಲ ಬಿರುದು ಭಾಜನೂ ಆದನು. ಅವನ ಕಾಲ ೧೫೧೩ರಿಂದ ೧೫೬೫ರವರೆಗೂ ಹೋಗುತ್ತದೆ. ಅವನಾದ ಮೇಲೆ ಅವನು ಸಂಸ್ಥಾಪಿಸಿದ ಇಕ್ಕೇರಿ ರಾಜಧಾನಿಯಿಂದ ೩-೪ ವಾರಸುದಾರರು ತಮ್ಮ ಪುಟ್ಟ ರಾಜ್ಯವನ್ನು ಆಳಿಕೊಂಡಿದ್ದರು. ಅನಂತರ ಒಂದು ಶುಭಕಾಲ ಆ ಮನೆತನಕ್ಕೆ ಬಂತು. ಅದು ದೊಡ್ಡ ಸಂಕಣ್ಣ ನಾಯಕನ ಕಾಲ(೧೫೮೬-೧೬೨೯). ಅವನ ಮಗ ವೆಂಕಟಪ್ಪ ನಾಯಕ ಮಹಾಶೂರ. ಅವನು ೧೬೦೬ರಲ್ಲಿ ನಗಿರೆ-ಹಾಡುವಳ್ಳಿಗಳನ್ನಾಳುತ್ತಿದ್ದ (ನಗಿರೆಯ ೧೨ನೆಯ, ಕೊನೆಯ ರಾಣಿಯಾದ) 'ಮೆಣಸಿನ ಕಾಳಿನ ರಾಣಿ' ಎನ್ನಿಸಿ ಮೆರೆದ ಚೆನ್ನಭೈರಾದೇವಿಯನ್ನು ಕೊನೆಯದಾಗಿ ಸೋಲಿಸಿ ಹೈವವನ್ನು ಇಕ್ಕೇರಿ ರಾಜ್ಯಕ್ಕೆ ಸೇರಿಸಿಕೊಂಡನು. ಆಮೇಲೆ ಅದಕ್ಕೂ ಮುಂದೆ ಮಂಗಳೂರವರೆಗೆ ಹೋಗಿ ಅಲ್ಲಿಯ ಎಲ್ಲ ಪಾಳೆಯ ಪಟ್ಟುಗಳನ್ನೂ ತನ್ನ ರಾಜ್ಯಕ್ಕೆ ಸೇರಿಸಿಕೊಂಡು ಮೊದಲನೆಯ ಕೆನರ ಮಹಾ ಪ್ರಭುವೆನ್ನಿಸಿದನು. ೧೫೬೫ರಲ್ಲೇ ವಿಜಯನಗರ ಸಾಮ್ರಾಜ್ಯದ ಹಿಡಿತ ಸಡಿಲವಾಗಿ

ಹೋದುದರಿಂದ ಈ ನಾಯಕ ಮನೆತನ ವ್ಯವಹಾರಿಕವಾಗಿ ಸ್ವತಂತ್ರ ಪ್ರಭುತ್ವವನ್ನೇ ನಡೆಸಿತು. ವಿಜಯನಗರದ ೧ನೆಯ ವೆಂಕಟ ಮಹಾರಾಜನು (೧೫೮೫–೧೬೧೪) ಮಡಿದ ಮೇಲಂತೂ ನಾಯಕರ ನಾಯಕತ್ವ ಸಂಪೂರ್ಣವಾಯಿತು. ದೊಡ್ಡ ಸಂಕಣ್ಣ ನಾಯಕನು ಗೋವೆಯನ್ನೂ ವಶಪಡಿಸಿಕೊಂಡನು!

೧ನೆಯ ವೆಂಕಟಪ್ಪನು ಹೈವ–ತುಳು ನಾಡುಗಳಲ್ಲಿ ಅನೇಕ ದೇವಾಲಯಗಳನ್ನೂ, ಕೋಟೆಗಳನ್ನೂ ಕಟ್ಟಿದ್ದಲ್ಲದೆ ಮೂಡಬಿದಿರೆ ಮುಂತಾದೆಡೆಗಳ ಚೈತ್ಯಾಲಯಗಳ ಜೀರ್ಣೋದ್ಧಾರಕ್ಕಾಗಿ ದತ್ತಿಗಳನ್ನು ಕೊಟ್ಟನು. ತಂದೆಯ ಜೊತೆಗೇ ರಾಜ್ಯಭಾರ ಮಾಡಿದ ಅವನ ಅನಂತರ ಅವನ ಮೊಮ್ಮಗ ವೀರಭದ್ರ ನಾಯಕನು ಕೆನರ ಪ್ರಭುವಾದನು. ಅವನ ಅಜ್ಜ ಮಂಗಳೂರನ್ನು ಪೋರ್ಚುಗೀಸ್‌ರಿಂದ ಕಿತ್ತುಕೊಂಡು ಸೋದೆಯನ್ನು ತನ್ನಂಕೆಯೊಳಗೆ ಇಟ್ಟುಕೊಂಡಿದ್ದರೆ, ಮುಂದೆ ಪಡೆದರೂ ಮೊದಲು ಅವನು(೧೬೩೭) ತನ್ನ ರಾಜಧಾನಿಯಾದ ಇಕ್ಕೇರಿಯನ್ನೇ ಬಿಜಾಪುರದ ಸುಲ್ತಾನರಿಗೆ ಬಿಟ್ಟುಕೊಡಬೇಕಾಯಿತು. ಆಗ ೧೬೩೯ರಲ್ಲಿ ಬಿದನೂರನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಕುಮಟಾಗರ್ಭಿತವಾದ(ಕೆನರ) ಕಡಲುಗನ್ನಡ ರಾಜ್ಯವನ್ನು ಆಳತೊಡಗಿದನು. ಅವನಾದ ಮೇಲೆ ಬಂದ ಶಿವಪ್ಪನಾಯಕನು ಶೂರನೂ, ದಕ್ಷನೂ, ಸ್ವಾಭಿಮಾನಿಯೂ ಆದ ಅಭಿಮಾನಾಸ್ಪದ ದೊರೆ. ವಿಜಯನಗರದ ರಾಜವಂಶದ ಕುಡಿಯಾಗಿದ್ದ ೩ನೆಯ ಶ್ರೀರಂಗರಾಯನಿಗೆ ಅವನು ರಾಜಕೀಯ ರಕ್ಷಣೆಯನ್ನು ಕೊಟ್ಟನು. ಅವನ ಆಡಳಿತಗಾರಿಕೆ 'ಶಿವಪ್ಪ ನಾಯಕನ ಶಿಸ್ತೆಂದು' ಸರ್ವಪ್ರಶಸ್ತವಾಯಿತು. ೧ನೆಯ ವೆಂಕಟಪ್ಪನಂತೆಯೇ ಅವನೂ ವಿದೇಶೀಯರಿಗೆ ಕಡಲಬಂದರಗಳನ್ನು ಆಕ್ರಮಿಸಲು ಬಿಡದೆ ಇದ್ದ ರಾಷ್ಟ್ರಪ್ರೇಮಿ. ಮರಾಠಿಗರಿಗೆ ಶಿವಾಜಿ ಹೇಗೋ ಹಾಗೇ ಕಡಲುಗನ್ನಡಿಗರಿಗೆ ಶಿವಪ್ಪ ನಾಯಕ!

ಶಿವಪ್ಪ ನಾಯಕನಾದ ಮೇಲೆ ೨ನೆಯ ವೆಂಕಟಪ್ಪ ಮತ್ತು ಭದ್ರಪ್ಪನಾಯಕರು ಆಳಿದರು. ಆಮೇಲೆ ಬಂದ ೧ನೆಯ ಸೋಮಶೇಖರನಾಯಕನು 'ಕೆನರ ಪ್ರಭು'ವೆಂಬ ಪ್ರಶಸ್ತಿಯನ್ನು ವಿದೇಶೀಯರಿಂದ ಪಡೆದ. ಅವನ ರಾಣಿ ಚೆನ್ನಮ್ಮಾಜಿ ಕಿತ್ತೂರ ಚೆನ್ನಮ್ಮನಿಗಿಂತ ಎಷ್ಟೋ ಪಾಲು ಹೆಚ್ಚು ಶೂರಳೂ, ದಕ್ಷಳೂ ಆಗಿ ೨೫ ವರ್ಷಗಳ ಕಾಲ ಯಶಸ್ವಿಯಾಗಿ ರಾಜ್ಯಭಾರ ಮಾಡಿದಳು. ಅವಳಾದ ಮೇಲೆ ಪಟ್ಟಕ್ಕೆ ಬಂದ ಬಸವಪ್ಪ ನಾಯಕನೂ 'ಕೆನರದೊರೆ' ಎನ್ನಿಸಿ ಖ್ಯಾತನಾದ. ಅವನ ಮಗ ೨ನೆಯ ಸೋಮಶೇಖರ ನಾಯಕನ ಕಾಲಾನಂತರ ಕೆನರ ಪ್ರಭುಗಳ ಪ್ರಭುತ್ವವು ಸಡಿಲಾಗತೊಡಗಿತು. ಅದು ೨ನೆಯ ಬಸಪ್ಪನಾಯಕನ ಕಾಲದಿಂದ(೧೭೩೯). ಚೆನ್ನಬಸವ ನಾಯಕನು ದುರ್ಬಲ ಅರಸ. ಆಮೇಲೆ ಬಂದ ಕೊನೆಯ ರಾಣಿ ವೀರಮ್ಮಾಜಿಯು ೧೭೬೩ರಲ್ಲಿ ಹೈದರನಿಗೆ ಸೆರೆಸಿಕ್ಕಿ ತನ್ನ ಮನೆತನದ ದೊಡ್ಡ ಇತಿಹಾಸಕ್ಕೆ ಇತಿಶ್ರೀ ಬರೆದಳು.

## ಕೆನರ ಪ್ರಭುಗಳ ಕಾಲದ ಹೈವನಾಡಿನ ಸಾಹಿತ್ಯ

ಕುಮಟೆಗೊಂದು ನಾಡೆಂದರೆ ಹೈವನಾಡು. ಅದೂ ಈಗ ಅಖಿಲ ಕೆನರಾಂತರ್ಗತವಾಯಿತು. ಆದರೂ ಅದರ ಹೈವ ಪರಂಪರೆಗೆ ಯಾವ ಭಂಗವೂ ಉಂಟಾಗಲಿಲ್ಲ. ಕೃಷಿ, ಗೋರಕ್ಷೆ, ವ್ಯಾಪಾರ ಯಥಾವತ್ತಾಗಿ ನಡೆಯಿತು. ಸಂತರೂ, ಸಾಹಿತಿಗಳೂ, ಸಾಂಸ್ಕೃತಿಕ ಚಟುವಟಿಕೆಗಳನ್ನು ಅನೂಚಾನವಾಗಿ ನಡೆಯಿಸಿದರು. ಭಟಕಳದ ಅಪ್ಪಯ್ಯ ಸಾಧುವಿನ ಗುರು ವಿಮಲಾನಂದ. ವಿಮಲಾನಂದನ ಗುರು ಚಿದಾನಂದನು ಸುಮಾರು ೧೬೭೫ರಲ್ಲಿ ಬೈಲೂರಿನಲ್ಲಿದ್ದನು. 'ಕರ್ಣಾರ್ಜುನರ ಕಾಳಗ' ಮತ್ತು 'ಕೃಷ್ಣಾರ್ಜುನ ಕಾಳಗ'ವೆಂಬ ಯಕ್ಷಗಾನ ಪ್ರಸಂಗಗಳನ್ನು ವಿಮಲಾನಂದನು ೧೬೮೪–೧೬೮೫ರಲ್ಲಿ ಬರೆದ. ಈತನು ಇನ್ನೂ ಇತರ ಗ್ರಂಥಗಳನ್ನು ಬರೆದಿದ್ದಾನೆ. ಅವಿನ್ನೂ ತಾಳೆಯೋಲೆ ಪುಸ್ತಕಗಳಲ್ಲೇ ಉಳಿದಿವೆ. ಈತನ ಶಿಷ್ಯ ಅಪ್ಪಯ್ಯ ಅನೇಕ ದಾಸರ ಪದಗಳನ್ನು ಬರೆದು ಜನಪ್ರಿಯನಾಗಿ ಬಾಳಿದ. ಅವನ ಕಾಲ ಸುಮಾರು ೧೭೦೫; ಕುಲದೇವತೆ ಕೊಲ್ಲೂರು ಮೂಕಾಂಬಿಕೆ.

ಸುಮಾರು ೧೭೫೦ರಲ್ಲಿದ್ದ 'ಮೂಕಾಂಬಾಪಾಂಗಪ್ರಸಾದ ಸಾಧಿತ ಸರಸ ಸಾಹಿತ್ಯ ಸಾಮ್ರಾಜ್ಯ ಪ್ರತಿಷ್ಠಿತ ವಿದ್ವಜ್ಜನೋಪಲಾಲನೀಯ ಭೂವಿಬುಧ' ಸುಬ್ರಹ್ಮಣ್ಯ ಕವಿಯು ಆ(ಹಾ?)ಡುವಳ್ಳಿಯವನು. ಈತನ ಕಡಲು–ಹನುಮಾಯಣ ೧೫ ಆಶ್ವಾಸಗಳು–

**ಒಳಕೊಳ್ವ ಪೆರ್ದೊರೆಗಳಿಂ**

> **ವಳಿಯಿಂದಂ ಸುಳಿಗಳಿಂದೆ ಬೆಳ್ನೊರೆಯಿಂ ಪ ।**
> **ಜ್ವಳಿಸುವ ಮಣಿಗಣದಿಂದ ಮಂ**
> **ಜುಳತರ ನಿರ್ಘೋಷದಿಂದೆ ವಾರ್ಧಿಯದೆಸೆಗುಂ ॥**
> **ಸ್ವಲ್ಪ ಮುಂದಿನ ಕಾಲ**

ಹೈವದ(ಬೈಂದೂರು ವಿಭಾಗದ) ಹನ್ನರ ಮಾಗಣೆಯಲ್ಲಿದ್ದ ಪರಮದೇವ ಕವಿಯು ೧೭೭೭ರಲ್ಲಿ(ಟೀಪು ಸುಲ್ತಾನನ ಕೊನೆಯ ಕಾಲ) 'ತುರಂಗಭಾರತ', 'ತತ್ವಚೌಪದ' ಮತ್ತು 'ನಾರಾಯಣಾಕ್ಷರ ಮಾಲಿಕಾ ಸ್ತೋತ್ರ'ಗಳನ್ನು ಬರೆದನು. ತುರಂಗ ಭಾರತದ ಸಂಧಿಗಳು ೯೬, ವಾರ್ಧಕಗಳ ಸಂಖ್ಯೆ ४೭೨೦.

ಕ್ರಿ.ಶ.೧೭೫೧ರಲ್ಲಿ 'ವರದ ವಿಠ್ಠಲ ರಾಮಾಯಣ' ಎಂಬ ಹೆಸರಿನಲ್ಲಿ ಬತ್ತಲೇಶ್ವರನ ಕೌಶಿಕ ರಾಮಾಯಣವನ್ನೊಳಗೊಂಡ–ಅದಕ್ಕೆ ಕೌಸಲ್ಯಾ ವಿವಾಹ ಕಥೆ, ರುಂಡಭೈರವ ಕಾಳಗ, ಮೂಲಿಕಾಸುರ ಕಾಳಗಗಳನ್ನು ಸೇರಿಸಿದ–ಗ್ರಂಥವನ್ನು ವಾಲಗಳ್ಳಿಯ ವರದವಿಠ್ಠಲ ಕವಿ ವಿಸ್ತರಿಸಿ ಬರೆದು ಪ್ರಸಿದ್ಧನಾದ.

ಸುಮಾರು ಕ್ರಿ.ಶ.೧೮೦೦ರಲ್ಲಿದ್ದ ಬರಗಿಯ ನಾರಸಿಂಹನು ವೆಂಕಾಮಾತ್ಯನ ರಾಮಾಯಣವನ್ನು ಪ್ರತಿಮಾಡಿ ಸ್ವಂತ ೬ ಪದ್ಯಗಳನ್ನು ಬರೆದು ಸೇರಿಸಿದ್ದಾನೆ. ಸುಮಾರು ೧೭೦೦ಕ್ಕಿಂತ ಹಿಂದಿನದೆನ್ನಿಸದ ಅಭಿನಂದ ಕವಿಯ ಕನ್ನಡ 'ಯೋಗವಾಸಿಷ್ಠ', 'ಕನ್ನಡ ಪದ್ಯಾತ್ಮಕ ಭಗವದ್ಗೀತೆ' ಮತ್ತು 'ಉತ್ತರರಾಮ ಚರಿತ್ರೆ–ವಿಶ್ವಾಮಿತ್ರ ಪ್ರತಾಪ'ಗಳಿಗೆ ಸಂಬಂಧಿಸಿದ ಕೀರ್ತನೆಗಳು ಪ್ರಿ.ಎಲ್.ಟಿ.ಶರ್ಮರ ವಶದಲ್ಲಿವೆ. ಮೊದಲಿನೆರಡು ಬೊಂಬಾಯಿಯ ಭಾರತೀ ಛಾಪಖಾನೆಯಲ್ಲಿ ಮುದ್ರಿತವಾದಂಥವು; ಮೂರನೆಯದು ಕಾಗದಲ್ಲಿ ಬರೆದ ಹಸ್ತಪ್ರತಿ. ಯೋಗವಾಸಿಷ್ಠವು ಬಾಮಿನೀ ಷಟ್ಪದಿಯಲ್ಲಿ ಬರೆದ ೨೧೪ಪುಟಗಳ ಒಂದು ಉನ್ನತ ಮಟ್ಟದ ಗ್ರಂಥ. ಅದು ಅಚ್ಚಾದದ್ದು ೧೮೯೦ರಲ್ಲಾದರೆ, ಭಗವದ್ಗೀತೆ ಅಚ್ಚಾದದ್ದು ೧೮೮೯ರಲ್ಲಿ. ಕೀರ್ತನಕಾರರು ಕಲ್ಲಬ್ಬೆಯ ಗಣೇಶ ನಾರಾಯಣ ಮೆಣಸಿಕೇರಿ ಇವರ ಕಾಲ ೧೯೧೬.

೧೮೩೦ರಲ್ಲಿ ಹೈಗುಂದದ ಶೇಷರಾಮಯ್ಯನೆಂಬ ಕವಿಯು 'ನೀಲಧ್ವಜನ ಕಾಳಗ' ಎಂಬ ಯಕ್ಷಗಾನ ಪ್ರಸಂಗವನ್ನು ಬರೆದು ಹೆಸರಾದನು. ಅದರ ಉತ್ತರ ಕಾಲದಲ್ಲಿದ್ದ ಕರ್ಕಿಯ ವೆಂಕಟರಮಣ ಶಾಸ್ತ್ರಿಗಳು 'ಇಗ್ಗಪ್ಪಹೆಗ್ಗಡೆಯ ವಿವಾಹ ಪ್ರಹಸನ'ವನ್ನು ಬರೆದು ಪ್ರಕಟಿಸಿದರು. ಅದೇ ಕಾಲದಲ್ಲಿ ಮಂಗಳೂರು ಜಿಲ್ಲೆಯ ಹೊನ್ನಾವರದಲ್ಲಿ ಪ್ರಿನ್ಸಿಪಲ್ ಸದರ್ ಆಮೀನನಾಗಿದ್ದ ಗೇರುಸೊಪ್ಪೆ ಶಾಂತಯ್ಯನು (೧) ಏಕಾದಶೀ ಪ್ರಸಂಗ, (೨) ಕರ್ಣಪರ್ವ (೩) ಜರಾಸಂಧನ ಕಾಳಗ, (೪) ದ್ರೋಣಪರ್ವ (೫) ಭೀಷ್ಮಪರ್ವ (೬) ರಾವಣ ದಿಗ್ವಿಜಯ (೭) ಲವಣ ಸಂಹಾರ, (೮) ಸೀತಾಕಲ್ಯಾಣ (೯) ಸುಭದ್ರಾಕಲ್ಯಾಣ (೧೦) ಸುರಥ ಸುಧ್ವನರ ಕಾಳಗ ಎಂಬ ಯಕ್ಷಗಾನ ಪ್ರಸಂಗಗಳನ್ನು ಬರೆದು ಪ್ರಸಿದ್ಧನಾದನು. ಈತನ ಮಗ ವೆಂಕಟರಮಣಯ್ಯನು ದಾಸರ ಪದಗಳನ್ನೂ, ಜ್ಯೋತಿಷಾದಿ ಗ್ರಂಥಗಳನ್ನೂ ರಚಿಸಿದನು.

ನಾಡಕರ್ಣಿ ಅಣ್ಣಪ್ಪಯ್ಯನೆಂಬ ಕವಿಯು 'ಶೀಘ್ರ ಕವಿ' ಎನಿಸಿಕೊಂಡಿದ್ದನೆಂದು ತಿಳಿದು ಬರುತ್ತದೆ. ಆದರೆ ಅವನು ಬರೆದ ಗ್ರಂಥಗಳಾವುವೂ ಸಿಕ್ಕಿಲ್ಲ. ೧೯ನೆಯ ಶತಮಾನದಲ್ಲಿದ್ದ ಎಣ್ಣೆಮಡಿ ವೆಂಕಟರಮಣಯ್ಯನೆಂಬ ಕವಿ ಸಾಕ್ಷಾತ್ ಕುಮಟೆಯವನು. ಈತನು 'ರುಕ್ಮಿಣಿ ಸ್ವಯಂವರ', 'ದೇವಿ ಮಹಾತ್ಮ್ಯ' ಮುಂತಾದ ಯಕ್ಷಗಾನ ಗ್ರಂಥಗಳನ್ನು ಬರೆದ. ಶಿರಾಲಿಯಲ್ಲಿ ಇವನು ಉಪಾಧ್ಯಾಯನಾಗಿದ್ದ ಬ್ರಾಹ್ಮಣ. ಈ ಶತಮಾನದ ಹಾಗೂ ಮುಂದಿನ ಇತರ ಹೈವ ಕವಿಗಳ ಪ್ರಸ್ತಾವಕ್ಕಿಲ್ಲಿ ಎಡೆಮಾಡಿಕೊಂಡಿಲ್ಲ.

## ಹಿಂದಿನ ಆಡಳಿತ

ಪ್ರಾಚೀನ ಕದಂಬ ಚಕ್ರವರ್ತಿಗಳ ಕಾಲದಲ್ಲಿ ರಾಜಗುರುವಿಗೆ ಅಗ್ರಸ್ಥಾನವಿತ್ತು. ನರ್ಮದಾಂತವಾದ ಅವರ ಚಕ್ರಾಧಿಪತ್ಯದಲ್ಲಿ ಆಡಳಿತಕ್ಕೆ ಅನುಕೂಲವಾದ ವಿಭಾಗಗಳನ್ನು ಮಾಡಿಕೊಳ್ಳಲಾಗಿತ್ತು. ಅವರು ಮಾಡುತ್ತಿದ್ದ ಪ್ರಾಂತವಿಭಜನೆಯು ಇಂದಿಗೂ ಉಳಿದುಕೊಂಡು ಬಂದಿದೆ. ಸ್ವತಃ ವೈದಿಕ ಸ್ಮಾರ್ತರಾಗಿದ್ದರೂ ಅವರು ಜಾತ್ಯತೀತ

ಆಡಳಿತಗಾರರಾಗಿದ್ದರು. ಅರಸರಿಗೆ ಸಲಹೆ ಕೊಡಲು ಮಂತ್ರಿಗಳಿರುತ್ತಿದ್ದರು. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಹಾಗೂ ಮನುಸ್ಮೃತಿಯಲ್ಲಿ ಹೇಳಿದ ರಾಜ್ಯ–ಅರ್ಥ–ನೀತಿಶಾಸ್ತ್ರಗಳ ಮೂಲ ಸೂತ್ರಗಳನ್ನು ದೇಶ ಕಾಲಾನುಗುಣವಾದ ಬದಲಾವಣೆಗಳೊಡನೆ ಆಚರಣೆಗೆ ತಂದು ಕದಂಬ ಸಾರ್ವಭೌಮರು ಪ್ರಸಿದ್ಧರಾದರು. ಅವರು 'ಧರ್ಮವಿಜಯಿ'ಗಳಾಗಿದ್ದುದರಿಂದ ಅವರ ಸಾಮಂತರು ಇಂದಿನ ಪ್ರಾಂತರಾಜ್ಯಗಳಿಗಿಂತಲೂ ಹೆಚ್ಚಿನ ಸ್ವಾತಂತ್ರ್ಯದಿಂದ ತಮ್ಮ ಕುಲಕ್ರಮಾಗತವಾದ ರಾಜ್ಯಗಳನ್ನು ಧರ್ಮದಂತೆ ಪಾಲಿಸಿಕೊಂಡಿರುವ ಅನುಕೂಲವಿತ್ತು. (೧) ವರ್ಣಾಶ್ರಮ ಧರ್ಮಗಳ ವಿಧಾನ, (೨) ದುಷ್ಟ ಶಿಕ್ಷಣ, (೩) ಶಿಷ್ಟಪರಿಪಾಲನೆ, (೪) ನಿಷ್ಪಕ್ಷವಾದ ನ್ಯಾಯದಾನ, (೫) ಗೃಹರಕ್ಷಕ ಆಡಳಿತ, (೬) ಇಷ್ಟಾಪೂರ್ತ (ಮುಜರಾಯಿ ಮತ್ತು ಲೋಕೋಪಯೋಗಿ ಕಾರ್ಯ), (೭) ವಿದೇಶೀಯ ದಾಳಿಗಳಿಂದ ರಕ್ಷಿಸುವುದು, (೮) ಸಾಮಾನ್ಯ ಪ್ರಜೆಗಳ ವಿತ್ತಜೀವಿತ ಸಂರಕ್ಷಣ, (೯) ವಿದ್ಯಾಭ್ಯಾಸ ಪ್ರೋತ್ಸಾಹ, (೧೦) ಶಿಲ್ಪಕಾವ್ಯಾದಿ ಕಲೆಗಳಿಗೆ ಸಹಾಯ, (೧೧) ಕಂದಾಯ ವಸೂಲು, (೧೨) ನೀರಾವರಿ ಯೋಜನೆ, (೧೩) ದೇವಾಲಯ, ಅನ್ನಛತ್ರ, ಅರವಟ್ಟಿಗೆ ಮುಂತಾದವುಗಳನ್ನು ಸ್ವತಃ ಕಟ್ಟಿಸಿಕೊಡುವುದು, (೧೪) ಬಾವಿ, ಸಾಲುಮರ ಮುಂತಾದವುಗಳನ್ನು ತೋಡಿಸುವುದು ಮತ್ತು ನೆಡಿಸುವುದು ಮುಂತಾದ ಹಲವಾರು ಕರ್ತವ್ಯಗಳನ್ನು ರಾಜಸೇವಕರ ಮೂಲಕ ನಿರ್ವಹಿಸಲಾಗುತ್ತಿತ್ತು. ಮಂತ್ರಿಗಳೂ ಯುವರಾಜರೂ ರಾಜಪ್ರತಿನಿಧಿಗಳೂ ಸೇನಾಪತಿಗಳೂ ನಗರ ಚಿಂತಕರೂ(Deputy Commissioners)ನ್ಯಾಯಾಧೀಶರೂ ಅಂದಿನ ಹಿರಿಯ ಅಧಿಕಾರಿಗಳು. ಅಂದಿನ 'ವಿಷಯ'ಗಳು ಮುಂದೆ ನಾಡುಗಳೆನ್ನಿಸಿದವು. ಅವು ಚಕ್ರಾಧಿಪತ್ಯದ ಪ್ರಾಂತದ ಒಳಭಾಗಗಳು. ಜಿಲ್ಲೆಗೆ ಸಮಾನವಾದಂಥವು. ಪ್ರಾಂತಗಳಂದು 'ರಾಷ್ಟ್ರ'ಗಳೆನ್ನಿಸಿದ್ದವು. ರಾಷ್ಟ್ರಗಳು ದೇಶದ(ಚಕ್ರಾಧಿಪತ್ಯದ) ಅಂಗಗಳು. ಅಂಥ ದೇಶಗಳಿಂದ ಕೂಡಿತ್ತು ಭರತಖಂಡ.

ಗ್ರಾಮವು ಆಡಳಿತದ ಅತ್ಯಂತ ಚಿಕ್ಕ ಘಟಕ. ಗ್ರಾಮಗಳ ಗುಂಪೊಂದು ಮಹಾಗ್ರಾಮವೆನ್ನಿಸುತ್ತಿತ್ತು. ಮಹಾಗ್ರಾಮಗಳ ಗುಂಪು ವಿಷಯ ಅಥವಾ ಮಂಡಲ. ಅದನ್ನು ಕೆಲವೊಮ್ಮೆ ದೇಶವೆನ್ನುತ್ತಿದ್ದದ್ದುಂಟು. ಅಧಿಕಾರಗಳಲ್ಲಿ ಮೇಲೆ ಹೇಳಿದವರಲ್ಲದೆ, ಸಿಂಹಸೇನಾಪತಿ, ರಹಸ್ಯಾಧಿಕೃತ, ರಾಜವೈದ್ಯ, ದೇಶಮಾತ್ಯ, ಆಯುಕ್ತಕ, ಭೋಜಕ, ಪ್ರತೀಹಾರ, ನರವರ ಸೇನಾಪತಿ ಮುಂತಾದ ಇತರರೂ ಕದಂಬ ಕಾಲದಲ್ಲಿ ಪ್ರಸಿದ್ಧರು. ೧೦ನೆಯ ಶತಮಾನದ ಅನಂತರದ ಕದಂಬ ಮಹಾಮಂಡಲೇಶ್ವರರ ಸಾಮಂತಿಕೆಯಲ್ಲಿ 'ನಗರಸ್ವಾಮಿ'(Muncipal President) ಕೂಡ ಇದ್ದದ್ದು ಅಂದಿನ ನಾಗರಿಕತೆಯ ಮೇಲ್ಮೆಯನ್ನು ಸಾರುತ್ತದೆ. ಪೋಲೀಸು ಮಿಲಿಟರಿಗಳ ವ್ಯತ್ಯಾಸ ಹಿಂದಿನ ಕಾಲದಲ್ಲಿ ಸ್ಪಷ್ಟವಾಗಿದ್ದಿಲ್ಲ. ಆಡಳಿತಗಾರಿಕೆ ಸೈನಿಕ ತರಬೇತು ಅನಿವಾರ್ಯವಾಗಿತ್ತು. ಹೆಚ್ಚಿನ ವಿವರಗಳಿಗೆ 'ಬನವಾಸಿಯ ಕದಂಬರು' ಎಂಬ ಪುಸ್ತಕದ 'ಕದಂಬರ ಪ್ರಶಾಸನ' ಎಂದ ಅಧ್ಯಾಯವನ್ನು ನೋಡಬಹುದು.

ನಗಿರೆಯ ಮಹಾಮಂಡಲೇಶ್ವರರೂ ಬಿದನೂರಿನ ಕೆನರ ಪ್ರಭುಗಳೂ ವಿಜಯನಗರದ ಆಡಳಿತ ಪದ್ಧತಿಯನ್ನೇ ಅನುಸರಿಸುತ್ತಿದ್ದರು. ಹೈವ, ತುಳು, ಕೊಂಕಣಗಳಂತಹ ವಿಭಾಗಗಳು ರಾಜ್ಯಗಳು, ಚಕ್ರಾಧಿಪತ್ಯದ ಅಂಗಗಳು. ಆನುವಂಶಿಕ ಅರಸರು ಸಾಮಂತರಾಗಿರಲು ಒಪ್ಪಿ ಕಪ್ಪಕಾಣಿಕೆಗಳನ್ನು ಕೊಟ್ಟಲ್ಲಿ ಅವರೇ ಅವುಗಳ ರಾಜರು, ಹಾಗಿಲ್ಲವಾದಲ್ಲಿ ರಾಜ್ಯಪಾಲರ ನೇರವಾದ ಆಡಳಿತ; ಅಂಥ ಅರಸರಿದ್ದಲ್ಲಿ ಅವರೂ ರಾಜ್ಯಪಾಲರಾಗಿ(Governors) ನಿಯುಕ್ತರಾದದ್ದುಂಟು; ಹಾಗೆ ನಿಯುಕ್ತರಾಗದಿದ್ದವರ ಮೇಲಿನ ಮೇಲಾಳಿಕೆ ರಾಜ್ಯಪಾಲರದು. ಒಬ್ಬೊಬ್ಬ ರಾಜ್ಯಪಾಲನ ಕೈಕೆಳಗೆ ೩–೪ ರಾಜ್ಯಗಳು, ನಾಡುಗಳು ಅಥವಾ ಮಂಡಲಗಳು ಇರುತ್ತಿದ್ದವು. ರಾಜ್ಯಪಾಲರ ಮೇಲೆ ರಾಜಪ್ರತಿನಿಧಿ(Vice-Roy)ಗಳು ನಾಲ್ಕು ದಿಕ್ಕುಗಳ ನಾಲ್ಕು ಪ್ರಾಂತ(ಪಥ)ಗಳಿಗೆ ನಿಯುಕ್ತರಾದದ್ದು ಉಂಟು. ರಾಜ್ಯಪ್ರತಿನಿಧಿಗಳು ಚಕ್ರವರ್ತಿಯ ಸೋದರರು ಅಥವಾ ಮಕ್ಕಳು. ರಾಜ್ಯಪಾಲರು ಸ್ವರಾಜ್ಯವನ್ನಿಟ್ಟುಕೊಂಡ ಅಥವಾ ಬಿಟ್ಟುಕೊಟ್ಟ ರಾಜವಂಶೀಯರು ಅಥವಾ ಸೈನಿಕ ಸಾಹಸಗಳಲ್ಲಿ ಹೆಸರಾಂತ ವಿಶ್ವಸ್ತರು. ರಾಜಪ್ರತಿನಿಧಿ–ರಾಜ್ಯಪಾಲರ ಸ್ಥಾನಗಳು ಉಪರಾಜಧಾನಿಗಳು. ಗೋವೆ, ಹೊನ್ನಾವರ, ಅನಂತರ ಗೇರುಸೊಪ್ಪೆ, ಭಟಕಳ, ಹಾಡುವಳ್ಳಿಗಳೂ ಅಂಥ ಉಪರಾಜಧಾನಿಗಳಾಗಿದ್ದವು. ಮಂಡಲೇಶ್ವರರ ಕೈಕೆಳಗೆ ಆನುವಂಶಿಕ ಅಥವಾ ಸೈನಿಕ ಸಾಹಸದಿಂದ ರಾಜಕೃಪೆಯನ್ನು ಪಡೆದ ಪಾಳೆಯಗಾರರು ಇರುತ್ತಿದ್ದರು. ಪಾಳೆಯ ಪಟ್ಟಿಗಿಂತ ಚಿಕ್ಕ ರಾಜ್ಯವಿದ್ದಿದ್ದಿಲ್ಲ. ರಾಜ್ಯಪಾಲರಲ್ಲಿ ಕೆಲವರು ಮಹಾಪ್ರಧಾನರು. ಕೆಲವರು ಮಹಾಸಾಮಂತಾಧಿಪತಿಗಳು, ಕೆಲವರು ಮಹಾಮಂಡಲೇಶ್ವರರು, ಇನ್ನು ಕೆಲವರು ಕೇವಲ(ಮಹಾದಂಡ)ನಾಯಕರು. ಕೆಲವರಿಗೆ ನಾಣ್ಯಗಳ ಸಂಬಳ, ಕೆಲವರಿಗೆ ದತ್ತಿಬಿಟ್ಟ ಭೂಮಿಯಿಂದಬಂದ ಉತ್ಪನ್ನ, ಕೆಲವರಿಗೆ ವಸೂಲು ಮಾಡಲಾಗುತ್ತಿದ್ದ ಕರಕಂದಾಯಗಳಲ್ಲಿ ಒಂದು ನಿರ್ದಿಷ್ಟ ಆವರ್ತಪಾಲು, ಕೆಲವರಿಗೆ ನಿರ್ದಿಷ್ಟ ಭೂಮಿಯಿಂದ ಸಿಗುತ್ತಿದ್ದ ಕಂದಾಯ–ಹೀಗೆ ವಿವಿಧ ವೇತನ ಪದ್ಧತಿಗಳಿದ್ದವು. ನಾಣ್ಯಗಳನ್ನು ಸ್ವರ್ಣಾದಿ ವಿವಿಧ ಲೋಹಗಳಿಂದ ಮುದ್ರಿಸುತ್ತಿದ್ದ ಪದ್ಧತಿ ಅನುಚಾನವಾಗಿ ಇತಿಹಾಸದ ಆದಿಯಿಂದ ಅಂತ್ಯದವರೆಗೂ ನಡೆದುಬಂದಿದೆ. ಕಂದಾಯ, ಸುಂಕ ಮುಂತಾದವುಗಳ ವಸೂಲಿಗೆ ವಿವಿಧ ಮಟ್ಟದ ಅಧಿಕಾರಿಗಳಿರುತ್ತಿದ್ದರು. ಶಾನುಭೋಗ, ಪಟೇಲರ ಹುದ್ದೆಗಳು ಅನಾಧಿಕಾಲದಿಂದ ನಡೆದುಬಂದವೆಂಬಷ್ಟು ಹಳೆಯವು. ಅವರ ಹುದ್ದೆಗಳ ಹೆಸರುಗಳು ಬೇರೆ ಬೇರೆ ಆಗಿದ್ದರೂ ಆ ಕರ್ತವ್ಯಗಳ ನಿರ್ವಹಣಕ್ಕೆ ತಕ್ಕ ಅಧಿಕಾರಿಗಳು ಇದ್ದೇ ಇರುತ್ತಿದ್ದರು. ಅವರಂತೆಯೇ ಗ್ರಾಮದ ತಳವಾರನ(ಉಗ್ರಾಣಿಯ) ಹುದ್ದೆಯೂ ಪರಂಪರಾಪ್ರವಾಹಗತಿಯದು. ರಾಜಾದಾಯವು ಹೆಚ್ಚು ಕಡಿಮೆ ೬ನೆಯ ಒಂದು ಪಾಲಿನಷ್ಟಿದ್ದದ್ದು ಆಗೀಗ ಏರಿಳಿತವಾದರೂ ಏರುತ್ತ ಬಂದದ್ದೇ ಸ್ಥಿರಚಿನ್ಹವಾಗಿದೆ.

ಪ್ರಾಚೀನ ಕದಂಬ ಪರಂಪರೆಯಂತೆಯೇ(೨೮೦–೧೩೪೫) ಹೈವರಸರೂ, ಕೆನರ ಪ್ರಭುಗಳೂ ಪರಮತಸಹಿಷ್ಣುಗಳೂ, ಪರಮತಾನುಗ್ರಹಿಗಳೂ ಎನ್ನಿಸಿದ ಜೈನ

ಮತ್ತು ವೀರಶೈವ ಮನೆಮತದವರಾಗಿದ್ದರು. ಪ್ರಾಚೀನ ಕದಂಬರ(೨೮೦–೬೨೫) ಕಾಲದಲ್ಲಿ ಬೌದ್ಧ ಜೈನ ಧರ್ಮಗಳು ವೈದಿಕ ಧರ್ಮದೊಟ್ಟಿಗೇ ಬೆಳೆದರೆ, ಅರ್ವಾಚೀನ ಕದಂಬರ(೮೫೫–೧೩೪೫) ಕಾಲದಲ್ಲಿ ಜೈನ–ವೈದಿಕ ಧರ್ಮಗಳೆರಡೇ ಪ್ರಸಿದ್ಧ ಪ್ರಾಚುರ್ಯವನ್ನು ಪಡೆದವು. ಅನಂತರ ವೀರಶೈವ ಮತ ಪ್ರಾಬಲ್ಯಕ್ಕೆ ಬಂದರೂ ಅದರ ಪ್ರಸಾರ ಹೈವದಲ್ಲಿ ಹೆಚ್ಚಾಗಿ ಆದದ್ದಿಲ್ಲ. ಅದೇ ಕಾಲದಲ್ಲಿ ಕಾಳಾಮುಖರೂ ಕಪಾಲಿಕರೂ (ನಾಥಪಂಥೀಯರು, ಗೋಸಾಮಿಗಳು, ಭೈರವೋಪಾಸಕರು) ಅಲ್ಲಲ್ಲಿ ಪಸರಿಸಿದರು. ಯಾಣದ ಭೈರವೇಶ್ವರನು ಕಾಪಾಲಿಕರ ನೆನಪು ಮಾಡಿಕೊಡುತ್ತಾನೆ.ಕಾಳಾಮುಖರು ವೀರಶೈವದ ಹಿನ್ನಲೆಯಾಗಿದ್ದ ಶುದ್ಧ ಶೈವರು; ಶಿವದಾರಕ್ಕೆ ಜನಿವಾರವನ್ನು ಬದಲಾಯಿಸಿಕೊಳ್ಳದೆ ಇದ್ದ ವೈದಿಕರ ಒಂದು ಆಗಮಪ್ರಧಾನ ಪಂಥ ಅವರದಾಗಿತ್ತು. ಅವರಲ್ಲಿ ಜೈನರಲ್ಲಿ ಹೇಗೋ ಹಾಗೇ ಅನೇಕರು ರಾಜಗುರುಗಳಾಗಿದ್ದದ್ದುಂಟು. ರಾಜರು ಇವರಲ್ಲಿ ಯಾರೇ ಆಗಲಿ, ವಿದ್ವಾಂಸರೂ ಜನಾನುಗ್ರಹಿಗಳೂ ಆಗಿದ್ದರೆ ಅವರಿಗೆ ಪುರಸ್ಕಾರ ಪ್ರೋತ್ಸಾಹಗಳನ್ನು ನೀಡುತ್ತಿದ್ದರು. ಹಿಂದಿನ ಅಗ್ರಹಾರ, ಮಠ, ಪಾಠಶಾಲಾ ಪದ್ಧತಿಗಳೂ ಮುಂದುವರಿದು ನಡೆಯುತ್ತಿದ್ದವು. ರಾಜಸಹಾಯ, ಶ್ರೀಮಂತರ ಸಹಾಯಗಳೆರಡೂ ಅವುಗಳಿಗೆ ಎಂದಿನಂತೆ ಹೇರಳವಾಗಿ ದೊರಕುತ್ತಿತ್ತೆಂಬುದಕ್ಕೆ ಮಠ, ಪಾಠಶಾಲೆಗಳ ಹೊಣೆ ಹೊತ್ತಿದ್ದ ದೇವಾಲಯಗಳಿಗೂ ಬಸದಿಗಳಿಗೂ ಅಗ್ರಹಾರಗಳಿಗೂ ಧನದಾನ, ಭೂದಾನಗಳನ್ನು ಕೊಟ್ಟ ಶಾಸನಗಳ ಸಂಖ್ಯೆ ಹೈವದಲ್ಲಿಯೂ ಕರ್ನಾಟಕದ ಇತರ ಕಡೆಗಳಲ್ಲಿರುವಂತೆಯೇ ಅಥವಾ ಅದಕ್ಕೂ ಅತ್ಯಂತ ಹೆಚ್ಚು. ಗೋಕರ್ಣ ಮೊದಲಿನಿಂದಲೂ ಪ್ರಾಚೀನ ಪರಂಪರೆಯ ಅತ್ಯುಚ್ಚ ವಿದ್ಯಾಕೇಂದ್ರವಾಗಿತ್ತು. ಅದರ ಜೊತೆಗೇ ಹೈಗುಂದವೂ ಯಜ್ಞಸಂಸ್ಕೃತಿಯ ವೈದಿಕತೆಯ ಗಣ್ಯಸ್ಥಳವಾಗಿತ್ತು. ಈ ಎರಡರ ನಡುವಿನ 'ಕುಂಬ(=ಯಜ್ಞಸ್ಥಳದ ಪರಿಸರ)ವಾಟವು' 'ಕುಂಬಾಟ' ಅಥವಾ 'ಕುಂಬಟ'. ಎಲ್ಲ ದೊರೆಗಳೂ ಜನಜೀವನದ ಶಾಂತವಾದ ಪ್ರವಾಹಗತಿಗೆ ಭಂಗ ಬರದಂತೆ ವರ್ಣಾಶ್ರಮ ಧರ್ಮಗಳ ವಿಧಾನದ ಜೊತೆಗೇ ದೇಶಧರ್ಮ–ಕಾಲಧರ್ಮಗಳನ್ನೂ ಅಲ್ಲಲ್ಲಿ ಹೇಗೆ ಹೇಗೆ ಇತ್ತೋ ಹಾಗೇ ಹಾಗೇ ಗೌರವಿಸಿ ವಿಧಿಸುತ್ತಿದ್ದರು. ಮುಸಲ್ಮಾನ ಪ್ರಭುತ್ವ ಬಂದಾಗ ಮಾತ್ರ ಪರಂಪರೆಗಳಿಗೆ ರಾಜಪ್ರೋತ್ಸಾಹ ಸಿಗುವುದು ನಿಂತುಹೋಯಿತು. ಅಲ್ಲಿಯವರೆಗೆ ಅಪರಾಧಿಗಳಿಗೆ ನಿಷ್ಪಕ್ಷಪಾತವಾದ ಯೋಗ್ಯ ದಂಡನೆಯನ್ನು ವಿಧಿಸುವುದರಲ್ಲಿ ಸರಕಾರಗಳು ಹಿಂದೆ ಬಿದ್ದದ್ದೇ ಇಲ್ಲವೆಂಬಷ್ಟು ಮಟ್ಟಿನ ಬಿಗಿ ಇತ್ತು, ಇದಕ್ಕೆ ಅಪವಾದವಾದ ಅವಧಿಗಳು ಅಲ್ಪ.

೧೫೧೦ರಲ್ಲಿ ಗೋವೆಯಲ್ಲಿ ಪೋರ್ಚುಗೀಸರ ಪ್ರಭುತ್ವ ಸ್ಥಿರವಾಗಲಾರಂಭಿಸಿದಾಗ ಮೊದಲ ಬಾರಿಗೆ ಮತಧಾರ್ಮಿಕ ಬಲಾತ್ಕಾರ(Inquisition) ನಡೆದು, ಒತ್ತಾಯದಿದ ಬ್ರಾಹ್ಮಣಾದಿ ಹಿಂದುಗಳನ್ನು ಕ್ರೈಸ್ತ ಧರ್ಮಕ್ಕೆ ಸೇರಿಸಿಕೊಳ್ಳಲು ಶುರುವಾಯಿತು. ವೈದಿಕ ಸ್ಮಾರ್ತವಾಗಿದ್ದ ಅಲ್ಲಿಯ ಸಾರಸ್ವತ–ಗೌಡಸಾರಸ್ವತ ಕುಟುಂಬಗಳಲ್ಲಿ ಹಲವಾರು ಕಾರವಾರದಿಂದ ಮಂಗಳೂರವರೆಗಿನ ಪಟ್ಟಣಗಳಲ್ಲಿ ಆಗ ಆಶ್ರಯ ಪಡೆದವು. ಮತ್ತು

ಉದ್ಯೋಗ ವ್ಯಾಪಾರ ವೃತ್ತಿಗಳನ್ನು ಹಿಡಿದು ಮುಂದೆ ಬರಲು ಕೆನರ ಪ್ರಭುತ್ವವೂ ಹೈವ ಪ್ರಭುತ್ವದಂತೆಯೇ ಅವುಗಳಿಗೆ ಅವಕಾಶ ಕೊಟ್ಟಿತು. ಅನಂತರ ಗೌಡಸಾರಸ್ವತರಲ್ಲಿ ಹೆಚ್ಚಿನ ಕುಟುಂಬಗಳು ಮಾಧ್ವ ಸಂಪ್ರದಾಯವನ್ನು ಅನುಸರಿಸುತ್ತ ಬಂದವು. ಇಂದಿನ ಕಡಲುಗನ್ನಡದ ವ್ಯಾಪಾರ ಪಂಡಿತರೆಂದರೆ ಆ ಕುಟುಂಬದವರೇ ಎನ್ನಲು ಯಾವ ಅಭ್ಯಂತರವೂ ಇಲ್ಲ.

## ವ್ಯಾಪಾರ ವ್ಯವಹಾರಗಳು

ಪ್ರಾಚೀನ ಕಾಲದಿಂದಲೂ ಅಡಿಕೆ, ಮೆಣಸು, ಏಲಕ್ಕಿಗಳ ವ್ಯಾಪಾರವನ್ನು ವಿದೇಶಗಳೊಡನೆ ಕಡಲುಗನ್ನಡದ ಬಂದರಗಳು ನಡೆಸುತ್ತಿದ್ದವು. ಅವು ಮುಖ್ಯವೃತ್ತಿಯಾಗಿದ್ದ ಕೃಷಿಯ ಫಲಗಳು. ಅವುಗಳ ನಿರ್ಯಾತಕ್ಕೆ ಮತ್ತು ಇತರ ಸಾಮಗ್ರಿಗಳ ಆಯಾತಕ್ಕೆ ವ್ಯಾಪಾರಿ ಸಂಘಗಳು(Chambers of Commerce) ಇರುತ್ತಿದ್ದವು. ಸರಕುಗಳ ರಕ್ಷಣೆಗಾಗಿ ಈ ಸಂಘಗಳಿಗೆ ರಕ್ಷಕದಳವನ್ನು ಇಟ್ಟುಕೊಳ್ಳುವ ಅಧಿಕಾರವಿತ್ತು. ವ್ಯಾಪಾರದ ಆಡಳಿತದಲ್ಲಿ ಅವುಗಳಿಗೆ ಸ್ವಾಯತ್ತ ಅಧಿಕಾರವಿರುತ್ತಿತ್ತು. ಸಂಘದ ನಿಯಮಗಳನ್ನು ಗೊತ್ತು ಮಾಡಿ ಸರಕುಗಳ ಬೆಲೆಯನ್ನು ದೇಶಕಾಲ ಪರಿಸ್ಥಿತಿಗಳಿಗನುಗುಣವಾಗಿ ನಿರ್ಬಂಧಿಸಿ ಭಿನ್ನ ಭಿನ್ನ ಸ್ಥಳಗಳಿಗೆ ವಿಶಿಷ್ಟ ಸರಕುಗಳ ವ್ಯಾಪಾರ ಮಾಡಲು ಸಂಘಗಳು ಅಪ್ಪಣೆ ಕೊಡುತ್ತಿದ್ದವು. ತಮ್ಮದೇ ಆದ ಟಂಕಸಾಲೆಗಳಲ್ಲಿ ನಾಣ್ಯಗಳನ್ನು ತಯಾರಿಸುವ ವಿಶೇಷ ಅಧಿಕಾರಕೂಡ ಅವುಗಳಿಗಿತ್ತು.

ಕಾರ್ಷಾಪಣ, ದ್ರಮ್ಮ, ಪಣ, ಗದ್ಯಾಣ, ದೀನಾರಗಳು ಹಿಂದಿನ ಕಾಲದ ನಾಣ್ಯಗಳು. ವಿಜಯನಗರ ಹಾಗೂ ಕೆನರ ಪ್ರಭುಗಳ ಕಾಲದಲ್ಲಿ ವರಹಗಳೂ ಪಗೋಡಗಳೂ(ಹೊನ್ನುಗಳೂ) ಬಳಕೆಗೆ ಬಂದವು. ವರಹಗಳಲ್ಲಿ ‘ಸುಲ್ತಾನಿ’ ಮತ್ತು ‘ಬಹದೂರಿ’ ಎಂಬವು ಆಮೇಲೆ ಬಂದವು. ‘ಆನೆದುಡ್ಡು’ ಟೀಪುವಿನ ಕಾಲದ್ದು. ‘ಇಕ್ಕೇರಿ’ ವರಹ ಸುಪ್ರಸಿದ್ಧವಾಗಿತ್ತು. ೨ನೆಯದಾಗಿ, ಕ್ರಿ.ಶ.೧೮೫೫ರಲ್ಲಿ ಕುಮಟೆಯ ಜನಸಂಖ್ಯೆ ೬೮೮೫; ೧೮೭೨ರಲ್ಲಿದ್ದ ಒಟ್ಟು ಜನಸಂಖ್ಯೆ ೧೦,೯೩೨ರಲ್ಲಿ ೯೫೧೪ ಜನ ಹಿಂದುಗಳೂ, ೬೯೮ ಜನ ಮುಸಲ್ಮಾನರೂ, ೭೨೦ ಜನ ಕ್ರೈಸ್ತರೂ ವಾಸವಾಗಿದ್ದರು. ೧೮೮೧ರಲ್ಲಿ ೧೦,೬೭೯ ಜನರಿದ್ದರು. ಪಟ್ಟಣದ ವಿಸ್ತಾರ ೪೭೦೫ ಎಕರೆಗಳಷ್ಟಿತ್ತು.

೧೭೬೩ರಲ್ಲಿ ಕೆನರ ಪ್ರಭುಗಳ ಆಳಿಕೆ ಮುಗಿದು ಹೈದರಾಲಿಯ ರಾಜ್ಯಭಾರ ಪ್ರಾರಂಭವಾಯಿತು. ಟೀಪುವಿನ ಆಳಿಕೆ ಇಲ್ಲಿ ಅತ್ಯುಗ್ರವಾಗಿದ್ದುದರಿಂದ ಕಡಲುಗನ್ನಡ ಬಹಳ ಶೋಷಣೆಗೆ ಗುರಿಯಾಯಿತು. ಅವನ ಆಳಿಕೆ ಮುಗಿದಾಗ(೧೭೯೯) ಇಡಿ ಉತ್ತರಕನ್ನಡ ಜಿಲ್ಲೆ ಹಾಳು ಸುರಿಯುತ್ತಿತ್ತು; ರಾಜಮಾರ್ಗಗಳೊಂದೂ ಇಲ್ಲಿ ಇದ್ದಿಲ್ಲ; ಹೈದರ ದಾರಿಗಳೆಂಬ ಕೆಲ ಕಾಲುದಾರಿಗಳಷ್ಟೇ ಉಳಿದಿದ್ದವು. ಅಲ್ಲಿಂದ ಮುಂದೆ ೧೮೬೨ರವರೆಗೆ ಕುಮಟಾ ಪ್ರದೇಶವು ಸೇರಿದ್ದ ‘ಮಹಾಕೆನರವು’ ಮದ್ರಾಸ್ ಪ್ರಾಂತದ ಅಂಗವಾಗಿ ಹೊನ್ನಾವರವನ್ನು ಮುಖ್ಯ ಪಟ್ಟಣವನ್ನಾಗಿ ಉಳ್ಳ ಬ್ರಿಟಿಷ್ ಜಿಲ್ಲೆಯಾಯಿತು.

ಆಮೇಲೆ ಬಂದದ್ದು ಇಂದಿನ ಉತ್ತರಕನ್ನಡದ ನಕ್ಷೆ. ಇದನ್ನಾಗ ಬೊಂಬಾಯಿ ಪ್ರಾಂತಕ್ಕೆ ಸೇರಿಸಲಾಯಿತು. ಮತ್ತು ಕಾರವಾರವನ್ನು ಜಿಲ್ಲಾ ರಾಜಧಾನಿಯನ್ನಾಗಿ ಮಾಡಲಾಯಿತು. ೧೯೪೭ರಲ್ಲಿ ಭಾರತದೊಡನೆ ಕುಮಟಾ ತಾಲೂಕೂ ಸ್ವತಂತ್ರವಾಯಿತು ಮತ್ತು ೧೯೫೬ರಲ್ಲಿ ಮೈಸೂರಿನೊಡನೆ ಸೇರಿ ಕರ್ನಾಟಕವಾಯಿತು.

ಹೈವರಸರ(ವಿಜಯನಗರದ) ಕಾಲದಲ್ಲಿ ನಮ್ಮ ನಾಡಿನ ಬ್ರಾಹ್ಮಣರ ಪ್ರಾಮಾಣಿಕತೆಯನ್ನು ನ್ಯೂನಿಜ್ ಪ್ರಶಂಸಿಸಿದ್ದಾನೆ. ಅವರಲ್ಲಿ ಹಲವರು ಶ್ರೇಷ್ಠ, ಸದ್ಗುಣಸಂಪನ್ನ, ದಾನಶೂರ ವ್ಯಾಪಾರಿಗಳಾಗಿದ್ದರು. ಕಷ್ಟಕೃಷಿಗಳಲ್ಲಿಯೂ ಸೈನಿಕ ವೃತ್ತಿಯಲ್ಲಿಯೂ ಅವರ ಶಿಷ್ಯರಾದ ಬ್ರಾಹ್ಮಣೇತರರೇ ಹೆಸರುವಾಸಿಯಾಗಿದ್ದರು. ಜನರು ವೈಭವಪ್ರಿಯರಾಗಿದ್ದರು. ಆಭರಣಪ್ರಿಯತೆ, ಮದ್ಯಮಾಂಸಾದಿ ಸೇವನೆ, ಮತ್ತು ಸೂಳೆಗಾರಿಕೆಗಳು ಶ್ರೀಮಂತರಲ್ಲಿ ಹೆಚ್ಚು ರೂಢವಾಗಿದ್ದವು. ಗಣ್ಯರ ಪತ್ನಿಯರು ಅಲ್ಲಲ್ಲಿ ಸಹಗಮನ ವಿಧಿಯನ್ನು ಪಾಲಿಸುತ್ತಿದ್ದರು. ವಿಧವಾವಿವಾಹ ರೂಢಿಯಲ್ಲಿರಲಿಲ್ಲ. ಬೇಟೆಗಾರಿಕೆ, ಜೂಜು, ದೊಡ್ಡ ಚೆಂಡಾಟ, ಆಟ–ನಾಟಕಗಳ ಪ್ರೇಕ್ಷಣ, ಕೋಳಿಪಡೆ(ಅಂಕ), ಕಂಬಳ, ಜಟ್ಟಿಕಾಳಗ ಮುಂತಾದವು ಮನೋರಂಜನೆಗಳಾಗಿದ್ದವು. ಗ್ರಾಮಗಳಲ್ಲಿ ಜಟ್ಟಿಗಾದಿ ದೈವಗಳ ಆರಾಧನೆ ಸಾಂಪ್ರದಾಯಿಕವಾಗಿತ್ತು, ಕಳವು–ಕೊಲೆ ಮುಂತಾದ ಹೀನಾಪರಾಧಗಳಿಗೆ ಉಗ್ರ ಶಿಕ್ಷೆ ಇತ್ತು, ದೊಡ್ಡ ಕಳ್ಳಾಟಿಕೆಗಾಗಿ ಮರಣದಂಡನೆಯನ್ನು ವಿಧಿಸಲಾಗುತ್ತಿತ್ತು. ಕೊಲೆ, ಸ್ತ್ರೀಮಾನಭಂಗ ಮುಂತಾದ ಅಪರಾಧಗಳಿಗೂ ಘಾಶಿ ಶಿಕ್ಷೆಯನ್ನು ಕೊಡಲಾಗುತ್ತಿತ್ತು. ಭತ್ತ, ರಾಗಿ, ಕಬ್ಬುಗಳ ಕೃಷಿ, ಫಲವ್ಯವಸಾಯ, ಉಪ್ಪಿನ ಉದ್ಯಮ, ಚಿಲ್ಲರೆ ಸಾಮಾನುಗಳ ತಯಾರಿಕೆ, ಲೋಹಶಿಲ್ಪ, ಸುವರ್ಣಶಿಲ್ಪ, ರತ್ನಶಿಲ್ಪಗಳ ಸಾಮಗ್ರಿಗಳ ನಿರ್ಮಾಣ, ರತ್ನಖನನೋದ್ಯೋಗ ಮುಂತಾದವು ಗಣ್ಯ ವೃತ್ತಿಗಳಾಗಿದ್ದವು. ವಾಣಿಜ್ಯ ಸಂಘಗಳಂತೆಯೇ ಕುಂಬಾರ, ಕಮ್ಮಾರ ಮುಂತಾದ ಕಸಬುದಾರರ ಸಂಘಗಳೂ ಸಹಕರಿಸಿ ದುಡಿಯುತ್ತಿದ್ದವು. ಕಡಲುಗಳ್ಳತನವನ್ನು ಆ ಈ ಅರಸರು ಮಾಡಿಸುತ್ತಿದ್ದದ್ದುಂಟು.

## ೧೦ನೆಯ ಶತಮಾನದ ಹಿಂದುಮುಂದು :

ಸುಮಾರು೧೮೦೦ರಲ್ಲಿ ಹೈವದ ಅಡಿಕೆ ತೋಟಗಳು ಬಹಳ ಫಲವತ್ತಾಗಿದ್ದವು. ಕಾಗದಾಳಿ ಮಣ್ಣಿನಲ್ಲಿ ಅಡಿಕೆ ಮರಗಳು ಪುಷ್ಟವಾಗಿ ಬೆಳೆಯುತ್ತಿದ್ದವು. ಗಜನಿಯು ಮಧ್ಯಮ ಫಲವತ್ತೆ ಮಣ್ಣು ಮತ್ತು ಬೆಟ್ಟದ ಮಣ್ಣು ಕನಿಷ್ಠ ಫಲವತ್ತೆಯನ್ನುಳ್ಳದ್ದು ಎನ್ನಿಸಿದ್ದವು. ಕೃಷಿಗೆ ಏತದಿಂದ ನೀರನ್ನು ಎತ್ತಿ ಹೊಯ್ಯುವ ರೂಢಿ ಇತ್ತು. ತೋಟಗಳಿಗೆ ಗೊಬ್ಬರವನ್ನು ಸಕಾಲದಲ್ಲಿ ಹಾಕಲಾಗುತ್ತಿತ್ತು. ಮಳೆಗಾಲದಲ್ಲಿ ಹೆಚ್ಚಾದ ನೀರು ಹರಿದುಹೋಗಲು ತೋಡುಗಳನ್ನು ರಚಿಸಲಾಗುತ್ತಿತ್ತು. ಇಂದಿನಂತೆಯೇ ಅಂದೂ ತೋಟಿಗರು ಅಡಿಕೆ ಮರಗಳ ಜೊತೆಗೆ ಬಾಳೆಗಿಡಗಳನ್ನು ಬೆಳೆಯಿಸುತ್ತಿದ್ದರು. ವೀಳೆಯದೆಲೆಗಳ ಬಳ್ಳಿಗಳನ್ನು ಅಡಿಕೆ ಮರಗಳಿಗೆ ಹಬ್ಬಿಸಲಾಗುತ್ತಿತ್ತು. ಅವುಗಳಿಗೆ ನೆಲ್ಲಿಯ ಸೊಪ್ಪಿನ ಗೊಬ್ಬರವನ್ನು ಹಾಕುವ ರೂಢಿ ಅಂದಿತ್ತು. ೧೦೦ ಅಡಿಕೆ ಮರಗಳಲ್ಲಿ

ಬೆಳೆದ ಅಡಿಕೆಗೆ ೧೫ ರೂಪಾಯಿ ಬೆಲೆ ಬರುತ್ತಿತ್ತು. ಅದೇ ಗಜನೀಭೂಮಿಯ ಅಡಿಕೆ ಮರಗಳಲ್ಲಾದರೋ ೧೨ ರೂಪಾಯಿ ಬೆಲೆಯ ಅಡಿಕೆಯಷ್ಟೇ ಬೆಳೆಯುತ್ತಿತ್ತು. ಬೆಟ್ಟದ ನೆಲದಲ್ಲೂ ಅಷ್ಟೇ ಉತ್ಪನ್ನ. ೪೦ ಸೇರಿನ ೧ ಮಣ ಮೆಣಸಿನಕಾಳಿಗೆ ಅಂದು ೧ ಪಗೋಡ ಬೆಲೆ ಇತ್ತು.

ಕೆಳದರ್ಜೆಯ ಅಕ್ಕಿ ಕೋರ್ಜೆ ಒಂದರ ದರ ೧೩ ಪಗೋಡಗಳು ಅಥವಾ ೫೨ ರೂಪಾಯಿಗಳು.(ಹಳೆಯ–ಹೊಸ ರೂಪಾಯಿಗಳಲ್ಲ); ಮಧ್ಯಮ ದರ್ಜೆಯ ಅಕ್ಕಿ ಕೋರ್ಜೆಗೆ ೧೫ ಪಗೋಡಗಳು; ಹಾಗೇ ಉತ್ತಮ ದರ್ಜೆಯದಕ್ಕೆ ೨೨॥ ಪಗೋಡಗಳು.

ಬೆಟ್ಟೆ ಅಡಿಕೆ ಖಂಡಿಗೆ ೧೫ ಮತ್ತು ಗೋಟಿಗೆ ೧೧ ಪಗೋಡಗಳು. ಕೊಬ್ಬರಿ ಗಿಟಕುಗಳ ಖಂಡಿಗೆ ೧೦ ಪಗೋಡಗಳು ಮತ್ತು ಇಡಿ ಗಿಟಕುಗಳ ಸಾವಿರಕ್ಕೆ ೬ ಪಗೋಡಗಳು. ಕರಿಮೆಣಸಿನಕಾಳಿನ ಖಂಡಿಗೆ ೩೦ ಪಗೋಡಗಳಾದರೆ, ಬೆಲ್ಲದ ೨॥ ಮಣಗಳಿಗೆ ೧ ಪಗೋಡ(ರೂಪಾಯಿ ನಾಲ್ಕು).

ಒಂದು ಖಂಡಿ=೫೬೦ ಪೌಂಡುಗಳ ತೂಕ

ಒಂದು ಮಣಕ್ಕೆ=೪೦ಸೇರುಗಳು.

ಒಂದು ಮಣಕ್ಕೆ=೨೪–೧೧/೨೦ ಪೌಂಡು ತೂಕ.

ಭಟಕಳ ಮಿರ್ಜಾನುಗಳ ನಡುವೆ ಬೆಳೆಯುತ್ತಿದ್ದ ಅಡಿಕೆ ವರ್ಷಕ್ಕೆ ೧೦೦೦ ಖಂಡಿಗಳಷ್ಟು; ಅದಕ್ಕೆ ದೊರಕುತ್ತಿದ್ದ ಬೆಲೆ ೧೦,೦೦೦ ಪಗೋಡಗಳು. ಒಟ್ಟು ಹೊರಗೆ ಕಳಿಸಲಾಗುತ್ತಿದ್ದ ಕೊಬ್ಬರಿಯಿಂದ (ಗಿಟುಕುಗಳಿಂದ) ಬರುತ್ತಿದ್ದ ಬೆಲೆ ವರ್ಷಕ್ಕೆ ೧೨೦೦೦ರೂಪಾಯಿಗಳು. ಒಮ್ಮೆ ಅಕ್ಕಿಯನ್ನು ಆಯಾತಮಾಡಿ ಕೊಳ್ಳಲಾಗುತ್ತಿತ್ತು; ಆದರೆ ಆಮೇಲೆ ಅಕ್ಕಿಯ ಬೆಳೆ ಸಮೃದ್ಧವಾದ್ದರಿಂದ ಅದೊಂದು ಗಣ್ಯ ನಿರ್ಯಾತ ಧಾನ್ಯವಾಯಿತು. ಆದರೆ ಟೀಪು ಸುಲ್ತಾನನ ದಬ್ಬಾಳಿಕೆಯಲ್ಲಿ ವ್ಯಾಪಾರವೆಲ್ಲಾ ಹಾಳಾಗಿ ಹೋಯಿತು. ಎಷ್ಟೋ ಜನ ವ್ಯಾಪಾರಿಗಳು ಊರು ಬಿಟ್ಟು ಓಡಿಹೋಗಿದ್ದರು; ಅವನ ಆಳಿಕೆ ಅಂತ್ಯವಾದ ಮೇಲೆ ತಿರುಗಿ ತಮ್ಮ ಸ್ಥಳಗಳಿಗೆ ಹಿಂದಿರುಗಿದರು. ಬೊಂಬಾಯಿ, ರಾಜಪುರ, ಗೋವೆಗಳ ವರ್ತಕರು ಇಲ್ಲಿಯ ಅಡಿಕೆ, ತೆಂಗಿನಕಾಯಿ ಮತ್ತು ಮೆಣಸಿನಕಾಳುಗಳಿಗೆ ಗಿರಾಕಿಗಳಾಗಿದ್ದರು.(ದಲಾಲರಾಗಿದ್ದರು). ನಿರ್ಯಾತಕ್ಕಾಗಿ ದೋಣಿಗಳನ್ನು ರಚಿಸುವ ಉದ್ಯಮಕ್ಕೆ ಮರಾಠಿ ಕಡಲುಗಳ್ಳರು ಬಹಳ ವಿಘ್ನಗಳನ್ನು ಉಂಟು ಮಾಡುತ್ತಿದ್ದರು. ಅವರ ಹಾವಳಿಯನ್ನು ಹಿಮ್ಮೆಟ್ಟಿಸುವುದು ಆಗ ಕಷ್ಟವಾಯಿತು.

ಗಂಡ ಹೆಂಡಿರ ಒಂದು ಕುಟುಂಬವು ೫೦೦ ಅಡಿಕೆ ಮರಗಳ ಒಂದು ತೋಟವನ್ನು ಕೃಷಿಮಾಡಲು ಶಕ್ತವಾಗಿತ್ತು. ಮೊದಲನೆಯ ಸಲ ಅಷ್ಟು ಅಡಿಕೆ ಸಸಿಗಳನ್ನು ನೆಡಲು ೧೦೦ರೂಪಾಯಿ ಬೇಕಾಗುತ್ತಿತ್ತು. ಸಮತಟ್ಟಾದ ಸ್ಥಳಗಳಲ್ಲಿ ಅದಕ್ಕೂ ಕಡಿಮೆ ಖರ್ಚು ಬಿದ್ದರೆ ಇಳಿಜಾರಾದಲ್ಲಿ ಅದಕ್ಕೂ ಹೆಚ್ಚು ಖರ್ಚು ಬೀಳುತ್ತಿತ್ತು. ಕೂಲಿಗಿಟ್ಟ ಅಂಥ ಕುಟುಂಬಕ್ಕೆ ದಿನಕ್ಕೆ ೨॥ ಹಾನಿಗಳಷ್ಟು ಒರಟು ಅಕ್ಕಿಯನ್ನೂ ಬಟ್ಟೆಗಾಗಿ ವರ್ಷಕ್ಕೆ

೪ ರೂಪಾಯಿಗಳನ್ನೂ ಕೊಟ್ಟರೆ ಸಾಕಾಗುತ್ತಿತ್ತು. ಒಂದು ವರ್ಷದಲ್ಲಿ ಅದಕ್ಕೆ ಸಲ್ಲುತ್ತಿದ್ದ ಅಕ್ಕಿಯ ಬೆಲೆ ಸುಮಾರು ೩೩ ರೂಪಾಯಿಗಳಷ್ಟಾಗುತ್ತಿತ್ತು.

೮೭॥ ಘನ ಅಂಗುಲಗಳಷ್ಟು ಒಳ ಆಯವನ್ನುಳ್ಳ ಪಾತ್ರೆಗೆ 'ಹಾನಿ' ಎಂದು ಹೆಸರು. ೨ ಹಾನಿಗಳಿಗೆ ೧ ಕೊಳಗ; ೨೦ ಕೊಳಗಗಳಿಗೆ ೧ ಮುಡಿ, ಮಾರಾಟದ ಮುಡಿಗೆ ೨೨॥ ಕೊಳಗಗಳು ಮತ್ತು ಬೀಜದ ಮುಡಿಗೆ ೧೫ ಕೊಳಗಗಳು. ಒಂದು ಸಿದ್ದೆಯ ಒಳ ಆಯವು ೩೨॥ ಘನ ಅಂಗುಲಗಳಷ್ಟು. ಪೇಟೆಯ ವರ್ತಕರ ಚಿನಬಳಕೆಯಲ್ಲಿ ೬ಸಿದ್ದೆಗಳಿಗೆ ೧ ಕೊಳಗ; ೨೦ ಕೊಳಗಗಳಿಗೆ ೧ ಮುಡಿ; ೩೦ ಮುಡಿಗಳಿಗೆ ಒಂದು ಕೋರ್ಜೆ.

ಹೊಸ ತೋಟದಲ್ಲಿ ಫಲಬಂದ ಬಾಳೆಗಳಿಂದ ೨ನೆಯ ವರ್ಷವೇ ತೋಟಕ್ಕೆ ಮಾಡಿಸಲಿಟ್ಟ ಕೂಲಿಕಾರರಿಗೆ ಕೊಡಬೇಕಾದ ೩೭ ರೂಪಾಯಿಗಳ ಪ್ರತಿಫಲ ದೊರಕುತ್ತಿತ್ತು. ಕೂಲಿ ಕೊಟ್ಟಮೇಲೆ ಮಾಲಕ ರೈತನಿಗೆ ವರ್ಷಕ್ಕೆ ಶುದ್ಧಲಾಭ ೫೦ ರೂಪಾಯಿಗಳಾದರೆ ಅವನು ಅದರಿಂದಲೇ ಸರಕಾರಕ್ಕೆ ಕಂದಾಯವನ್ನೂ ಕೊಡಬೇಕಾಗಿತ್ತು. ಆದರೆ ವೀಳೆಯದೆಲೆಗಳ ಮಾರಾಟದಿಂದ ಆತ ಹೆಚ್ಚಿನ ಲಾಭ ಪಡೆಯಬಹುದಾಗಿತ್ತು.

೪ರಿಂದ ೧೦ ವರ್ಷಗಳವರೆಗೆ ಗದ್ದೆಗಳನ್ನು ಕರಾರಿನ ಪ್ರಕಾರ ಒಕ್ಕಲಿಗೆ ಗೇಣಿಗೆ ಕೊಡಲಾಗುತ್ತಿತ್ತು. ಗೇಣಿದಾರ ೧ ಮುಡಿ ಬಿತ್ತಿದರೆ ೨ ಮುಡಿಯನ್ನು ಒಡೆಯನಿಗೆ ಕೊಡಬೇಕಾಗಿತ್ತು; ಮಧ್ಯಮ ತರಗತಿಯ ಫಲವತ್ತತೆಯುಳ್ಳ ಗದ್ದೆಯಲ್ಲಾದರೆ ೧॥ ಮುಡಿಯಷ್ಟನ್ನು ಜಮೀನುದಾರನಿಗೆ ಕೊಟ್ಟರೆ ಸಾಕು; ಅತಿ ಕನಿಷ್ಠ ಮಣ್ಣಿನ ಗದ್ದೆಯಲ್ಲಿ ಬಿತ್ತಿದರೆ ಒಂದಕ್ಕೆ ಒಂದು ಕೊಟ್ಟರೆ ಸಾಕು. ಹೀಗೆ ವಸೂಲಾದ ಅಕ್ಕಿಯ ಉತ್ಪನ್ನದಿಂದ ಒಡೆಯ ತೀರ್ವೆಯನ್ನು ಕೊಡುತ್ತಿದ್ದ. ಸರಿಯಾಗಿ ಬೆಳೆ ಬಾರದಿದ್ದ ವರ್ಷದಲ್ಲಿ ಗೇಣಿಯ ಪ್ರಮಾಣವನ್ನು ಇಳಿಸಲಾಗುತ್ತಿತ್ತು.

ವ್ಯಾಪಾರದಲ್ಲಿ ನಿರ್ಯಾತ ಸುಂಕ ಅಂದು ಇರಲಿಲ್ಲ! ವಿದೇಶೀಯ ಕಂಪನಿಗಳಷ್ಟೇ ಮೆಣಸಿನಕಾಳಿನ ನಿರ್ಯಾತವನ್ನು ನಿರ್ವಹಿಸುತ್ತಿದ್ದವು. ದೊಡ್ಡ ಪ್ರಮಾಣದಲ್ಲಿ ಸಾಮಾನುಗಳನ್ನು ನಿರ್ಮಿಸಿ ಮಾರುವುದು ಎಲ್ಲೂ ಇದ್ದಿಲ್ಲ. ಅಕ್ಕಿಯ ನಿರ್ಯಾತ ಅಲ್ಪ ಸ್ವಲ್ಪ ಆಗ ಈಗ ನಡೆಯುತ್ತಿತ್ತು.

ಬೊಂಬಾಯಿ ಕರ್ನಾಟಕ ಮತ್ತು ಬಳ್ಳಾರಿಗಳಿಂದ ಬಂದ ಹತ್ತಿಯು ಕುಮಟಾ ಬಂದರದ ಮೂಲಕವೇ ರಫ್ತಾಗುತ್ತಿತ್ತು. ೧೮೭೭ರಲ್ಲಿ ಕುಮಟೆಯ ಮೂಲಕ ಹೊರಗೆ ಕಳಿಸಲ್ಪಟ್ಟ ಸಾಮಗ್ರಿಗಳ ಬೆಲೆ ೩,೦೮,,೫೨೬ಪೌಂಡುಗಳು; ೧೮೮೨ರಲ್ಲಿ ಹೊರಗೆ ಹೋದವುಗಳ ಬೆಲೆ ೬,೩೬,೨೯ಪೌಂಡುಗಳು. ಅನುಕ್ರಮವಾಗಿ ಆಯಾತವಾದ ಸಾಮಾನುಗಳ ಬೆಲೆ ೧,೭೧,೯೧೫ ಮತ್ತು ೩,೩೯,೦೨೮ ಪೌಂಡುಗಳು. ನಿರ್ಯಾತದ ವಸ್ತುಗಳಲ್ಲಿ ಕಾಳುಕಡಿ, ಸಂಬಾರದ ಜೀನಸುಗಳು ಮುಖ್ಯವಾಗಿದ್ದವು. ೨,೬೦೦ ಟನ್ ಭಾರ ಹೊರುವ ಉಗಿಹಡಗುಗಳು ಕುಮಟೆಗೆ ಹತ್ತಿಯನ್ನು ಹೊತ್ತು ಒಯ್ಯಲು

ಬರುತ್ತಿದ್ದವು. ಅಕ್ಟೋಬರ್ ಮತ್ತು ಮೇ ತಿಂಗಳುಗಳ ನಡುವೆ ಸಾಗಾಟ.

೧೮೫೫ರಲ್ಲಿ ಕುಮಟೆಯ ದೀಪಸ್ತಂಭವು ಸ್ಥಾಪಿಸಲ್ಪಟ್ಟಿತು. ಸಮುದ್ರಮಟ್ಟದಿಂದ ಅದಿದ್ದ ಸ್ಥಳದ ಎತ್ತರ ೧೮೦ ಅಡಿಗಳು. ಅದು ೫೪ ಚದುರ ಮೈಲುಗಳವರೆಗೆ ಬೆಳಕು ಬೀರುತ್ತಿತ್ತು. ಕುಮಟೆಯ ಪೋಲೀಸು ಠಾಣೆ, ಉಪನ್ಯಾಯಾಲಯ, ಟಪ್ಪಾಲುಕಟ್ಟೆ, ತಂತಿಕಚೇರಿ, ಕಡಲುಸುಂಕದ ಕಚೇರಿ, ಪುರಸಭೆ, ಆಸ್ಪತ್ರೆ, ಪ್ರಾಂತೀಯ ಮಟ್ಟದ ಬಂಗಲೆ ಮತ್ತು ೪ ವಿಶ್ರಾಂತಿ ಗೃಹಗಳು ಅನಂತರ ಕ್ರಮೇಣ ರಚಿತವಾದವು. ಪುರಸಭೆಯು ಉದಯವಾದದ್ದು ೧೮೬೭ರಲ್ಲಿ.

ಕುಮಟೆಯ ಹೆಸರು ಮೊಟ್ಟಮೊದಲು ವ್ಯಾಪಾರ ಕ್ಷೇತ್ರದಲ್ಲಿ ಕೇಳಿಬರುವುದು ೧೫೩೦ರಲ್ಲಿ–ನಗಿರೆಯ ಸಾಳುವ ಮಹಾಮಂಡಲೇಶ್ವರ ಇಮ್ಮಡಿ ಕೃಷ್ಣದೇವರಸನ ಕಾಲದಲ್ಲಿ. ಯಾವುದೋ ಒಂದು ಕರಾರಿಗೆ ಒಳಪಟ್ಟು ಕುಮಟೆಯ ಮೂಲಕ ಆಗ ಪೋರ್ಚುಗೀಸರಿಗೆ ೨೦೦ ಚೀಲ ಅಕ್ಕಿಯನ್ನು ಕಳಿಸಲಾಗುತ್ತಿತ್ತಂತೆ. ಅದೊಂದು ರಾಜಕೀಯ ಲಂಚವಾಗಿತ್ತು–ಸಾಮಾದಿ ಚತುರುಪಾಯಗಳಲ್ಲಿ ೨ನೆಯದು. ಹೀಗೆ ಅವರಿಗೆ ಅಕ್ಕಿ ಸಿಗುತ್ತಿದ್ದದ್ದು ಪ್ರಭುತ್ವ ಬದಲಾದಾಗ(೧೬೦೬) ನಿಂತುಹೋಯಿತು. ಅದರಿಂದ ಸಿಟ್ಟಿಗೆದ್ದ ಪೋರ್ಚುಗೀಸರು ೧೭೧೩ರಲ್ಲಿ ಕುಮಟಾ ಬಂದರವನ್ನು ಹೊಕ್ಕು ಕೆನರ ಪ್ರಭುಗಳ ೧೧ ಹಡಗುಗಳನ್ನು ಹಿಡಿದು ಸುಟ್ಟರು. ಅಂದಿನ ಕೆನರ ಪ್ರಭು ೨ನೆಯ ಸೋಮಶೇಖರ ನಾಯಕ(೧೭೧೪–೧೭೫೫) ಪಟ್ಟಕ್ಕೆ ಬಂದಕೂಡಲೇ ಪೋರ್ಚುಗೀಸರು ತನ್ನ ಅಪ್ಪನಿಗೆ ಮಾಡಿದ ಅನ್ಯಾಯವನ್ನು ತಕ್ಕ ಪ್ರತೀಕಾರ ಕ್ರಮವನ್ನು ಕೈಕೊಂಡು ಪರಿಹರಿಸಿದನು. ಡಚ್, ಇಂಗ್ಲೀಷ್ ಮುಂತಾದ ಪ್ರತಿಸ್ಪರ್ಧಿಗಳ ಬಲ ಹೆಚ್ಚುತ್ತಿದ್ದ ಆ ಅವಧಿಯಲ್ಲಿ ಪೋರ್ಚುಗೀಸರು ಈ ಕಡೆಗೆ ಬರುವುದನ್ನು ಬಿಟ್ಟು ಹಿಮ್ಮೆಟ್ಟಿದರು.

ಪಶ್ಚಿಮ ಸಮುದ್ರ ತೀರದ ಪ್ರವಾಸಕ್ಕೆಂದು ಬಂದಿದ್ದ ಫ್ರೆಂಚ್ ಪಂಡಿತ 'ಅಂಕ್ವಟಲ್ ಡು ಪೆರನ್' ಮಹಾಶಯನು ೧೭೫೪ರಲ್ಲಿ ಕುಮಟೆಯನ್ನು ಸಂದರ್ಶಿಸಿದರೆ, ಡಾಕ್ಟರ್ ಫ್ರಾನ್ಸಿಸ್ ಬುಕಾನನ್ ಪಂಡಿತನು ೧೮೦೧ನೆಯ ಇಸವಿಯ ಫೆಬ್ರವರಿ ೨೪ರಂದು ಸಂದರ್ಶಿಸಿದನು.

ಬ್ರಿಟಿಷ್ ಆಧಿಪತ್ಯ ಆರಂಭವಾಗುವ ಮೊದಲು ಈ ಪ್ರದೇಶಕ್ಕೆ ವ್ಯಾಪಾರಕ್ಕಾಗಿ ಬಂದ ವಿದೇಶೀಯರಲ್ಲಿ ಪೋರ್ಚುಗೀಸರು ಅಗ್ರಗಣ್ಯರು. ವಿದೇಶಗಳಲ್ಲಿ ಈ ಗುಣದ ಮೆಣಸಿನಕಾಳು ದುರ್ಲಭವಾಗಿದ್ದುದರಿಂದ ಅಲ್ಲಿಯ ವಾಣಿಜ್ಯ ಸಾಹಸಿಕರು ೧೪೧೮ರಿಂದ ಈ ಪರಶುರಾಮ ಸೃಷ್ಟಿಗೆ ಬರಲಾಂಭಿಸಿದರು. ಪೋರ್ಚುಗೀಸ ನಾಯಕ ವಾಸ್ಕೋಡಗಾಮ ಕಲ್ಲಿಕೋಟೆಯಲ್ಲಿ ಬಂದಿಳಿದದ್ದು ೧೪೯೮ರಲ್ಲಿ. ಅಂದು ಸಾಳುವ ದೇವರಸ ಒಡೆಯನು(೧೪೯೪–೧೫೨೦) ಗೇರುಸೊಪ್ಪೆಯಲ್ಲಿಯೂ, ಸಾಳುವ ಗುರುರಾಯನು ಹಾಡುವಳ್ಳಿಯಲ್ಲಿಯೂ, ವಿಜಯನಗರದ ಕೃಷ್ಣದೇವರಾಯನ

ತಂದೆಯಾದ ನರಸನಾಯಕನ ಪ್ರಭುತ್ವಕ್ಕೆ(೧೪೯೩–೧೫೦೫) ತಲೆಬಾಗಿ ರಾಜ್ಯಭಾರ ಮಾಡುತ್ತಿದ್ದರು. ಪೋರ್ಚುಗೀಸರು ೧೫೧೦ರಲ್ಲಿ ಗೋವೆಯಲ್ಲಿ ತಳವೂರಿದ ಮೇಲೆ ೧೭೧೩ರವರೆಗೆ ಹೈವರಸ ಮತ್ತು ಕೆನರ ಪ್ರಭುಗಳೊಡನೆ ಕುಮಟಾದ ಬಂದರಗಳ ಮೂಲಕ ಪ್ರತಿವರ್ಷವೂ ಒಂದಲ್ಲ ಒಂದು ಕರಾರಿನ ಪ್ರಕಾರ ಮೆಣಸಿನಕಾಳಿನ ವ್ಯಾಪಾರವನ್ನು ಮಾಡುತ್ತಲೇ ಇದ್ದರು. ಭಟಕಳದ(ಗೇರುಸೊಪ್ಪೆಯ) ಚೆನ್ನಭೈರಾದೇವಿ 'ಮರೀಚರಾಜ್ಞಿ' (Pepper Queen) ಎನ್ನಿಸಿದ್ದು ಆ ಕಾರಣದಿಂದಲೇ. ಅಂದು ಮುಸಲ್ಮಾನರಾಗಿದ್ದ ಅರಬರೊಡನೆ ವ್ಯಾಪಾರ ಮಾಡಲು ಹೋದಾಗ ಅವರ ಗುತ್ತಿಗೆದಾರಿಕೆಯನ್ನು ಹಿಂದುಗಳು ಸಹಿಸದೆ ಹೋದುದು ಪೋರ್ಚುಗೀಸ್, ಕ್ರೈಸ್ತರಿಗೆ ಅನುಕೂಲವಾಗಿ ಪರಿಣಮಿಸಿತು. ಪೋರ್ಚುಗೀಸರು ಘಾಂಯುದೆ ಮಾಡಿಕೊಳ್ಳತೊಡಗಿದ್ದನ್ನು ಕಂಡ ಡಚ್, ಫ್ರೆಂಚ್ ಮತ್ತು ಇಂಗ್ಲೀಷ್ ವ್ಯಾಪಾರಿ ಪ್ರಮುಖರು ಇತ್ತ ಬರಲು ಪ್ರಯತ್ನಿಸಿದರು.

ಟೀಪುಸುಲ್ತಾನನ ಕಾಲದಲ್ಲಿ(೧೭೮೨–೧೭೯೯) ಅವನ ಶಿಪಾಯಿಗಳು ಕುಮಟೆಯನ್ನು ಹೊಕ್ಕು ೨ ಸಲ ಲೂಟಿ ಮಾಡಿದರು. ಅವನ ಕಾಟ ಮುಗಿದದ್ದು ೧೭೯೯ರಲ್ಲಿ. ಅವನು ೪ನೆಯ ಮೈಸೂರು ಯುದ್ಧದಲ್ಲಿ ಸತ್ತ ಮೇಲೆ. ಆಮೇಲೆಯೇ ಬ್ರಿಟಿಷ್ ಯುಗದ ಆರಂಭದಲ್ಲಿ ಕುಮಟೆ ಪುನರ್ಜನ್ಮ ಪಡೆದು ತನ್ನ ನಾಗರಿಕತೆಯ ಶೈಶವಾವಸ್ಥೆಯನ್ನು ಆರಂಭಿಸಿದ್ದು.

ಹೈವದ ಬಂದರದ ಇತಿಹಾಸದಲ್ಲಿ ೧೫ ಶತಮಾನದ ಸಾಮುದ್ರಿಕ ವ್ಯಾಪಾರದ ಅಭಿಲೇಖವಿತ್ತು. ಆದರೆ ೧೬ನೆಯ ಶತಮಾನ ಕಾಲಿಟ್ಟಮೇಲೆ ಅರಬ್ ಮುಖಂಡ ಮಜೀದನ ಅಚಾತುರ್ಯದಿಂದ ಅರಬರಿಗೂ ತಡಿಗನ್ನಡದ ಕಡಲಹರದರಿಗೂ ತುಂಬಿಬಾರದ ಹಾನಿ ಸಂಭವಿಸಿತು. ತನಗೆ ವಿರುದ್ಧವಾದ ನಿಲುವನ್ನು ತಾಳಿದ ಅರಬ ವ್ಯಾಪಾರ ತಂಡದ ಸೊಕ್ಕನ್ನು ಮುರಿಯುವೆನೆಂದು ಆತನು ಪೋರ್ಚುಗೀಸರ ನಾಯಕನಾಗಿದ್ದ ವಾಸ್ಕೋಡಗಾಮನನ್ನು ಮಾಲಿದಿಯಿಂದ ಕಲ್ಲಿಕೋಟೆಗೆ ಕರೆತಂದು ಅರಬ ನೌಕೆಗಳನ್ನು ಅವನ ಹಡಗುಪಡೆಯ ನೆರವಿನಿಂದ ನಾಶಮಾಡಿದನು. ಅರಬರು ಕಡೆಯದಾಗಿ ಸೋತುಹೋದರು. ಮಜೀದನು ತನ್ನ ಕುಲಕ್ಕೆ ಕೊಡಲಿಯ ಕಾವಾದನು. ಆದುದರಿಂದ ೧೪೯೮ರಲ್ಲೇ ವ್ಯಾಪಾರ ಪ್ರಭುತ್ವವನ್ನು ಪಶ್ಚಿಮತೀರದಲ್ಲಿ ಸಂಪಾದಿಸಲು ಸಂಕಲ್ಪಿಸಿದ್ದ ಪೋರ್ಚುಗೀಸರಿಗೆ ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತಾಯಿತು. ಆದರೆ ಅವರ ಮೇಲುಗೈ ಬ್ರಿಟಿಷರ ಪ್ರಾಬಲ್ಯದಿಂದ ಕ್ರಮಶಃ ಬಿದ್ದುಹೋಗಲು ಬಹಳ ವರ್ಷಗಳು ಬೇಕಾಗಲಿಲ್ಲ. ಮೇಲುಗೈ ಕೆಳಗೈಗಳಿಂದ ಅಂತೂ ಅವರು ಸುಮಾರು ೨ ಶತಮಾನಗಳಷ್ಟು ಕಾಲ ಅರಬ್ಬೀ ಸಮುದ್ರವನ್ನು ಹೆಚ್ಚು ಕಡಿಮೆ ಪೋರ್ಚುಗೀಸ್ ಸಮುದ್ರವನ್ನಾಗಿ ಮಾಡಿಕೊಂಡದ್ದನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಅರಬರೂ ಪೋರ್ಚುಗೀಸರೂ ಕಾರವಾರದಿಂದ ಮಂಗಳೂರು ಬಂದರಗಳವರೆಗಿನ ಬಂದರಗಳನ್ನು ಜೀವಂತ ವ್ಯಾಪಾರ ಕೇಂದ್ರಗಳನ್ನಾಗಿ ಉಳಿಸಿದ್ದರು. ಸಮುದ್ರ ಪ್ರಭುಗಳು ಅವರೇ ಆದರೂ ಇಲ್ಲಿಯ

ವಿವಿಧ ರೇವು ಪಟ್ಟಣಗಳ ಹಿನ್ನಲೆಯ ಸ್ಥಳಗಳ ಉತ್ಪಾದನೆ ಮತ್ತು ಬಂದರಗಳ ನಿರ್ಯಾತ ವ್ಯಾಪಾರ ಪ್ರಯತ್ನಗಳು ಅವಿರತವಾಗಿ ಸಾಗುತ್ತಿದ್ದವು. ಹಡಗು, ದೊಡ್ಡ ದೋಣಿಗಳ ನಿರ್ಮಾಣ ವಿವಿಧ ಕಾರಣಗಳಿಂದ ಇಲ್ಲಿ ಹಿಂದೆ ಬಿದ್ದರೂ ಪೂರ್ಣ ನಿಂತುಹೋಗಲಿಲ್ಲ. ಮತ್ತು ಅವುಗಳ ಮೂಲಕ ಸರಕುಗಳನ್ನು ಹೇರುವ ವ್ಯವಹಾರವಾದರೂ ಸಂಪೂರ್ಣ ಗೌಣವಾಗಲಿಲ್ಲ. ಆದರೆ ಬ್ರಿಟಿಷ್ ಪ್ರಭುತ್ವ ಸ್ಥಿರವಾಗಿ ಪ್ರತಿಷ್ಠಾಪಿತವಾದ ಕೂಡಲೇ ಬ್ರಿಟಿಷರು ಬೊಂಬಾಯಿಗೆ ರೈಲು ಬಂಡಿಗಳ ಮೂಲಕ ಸಾಮಾನುಗಳನ್ನು ಸಾಗಿಸುವ ಏರ್ಪಾಡನ್ನು ಮಾಡಿದ್ದು ಇಂದಿಗೂ ಕನ್ನಡ ಬಂದರಗಳಿಗೆ ಶಾಪವಾಗಿಯೇ ಉಳಿದಿದೆ. ಕುಮಟೆಯು ಸುತ್ತಲಿನ ಇತರ ಕನ್ನಡ ಬಂದರುಗಳೊಡನೆ ವ್ಯಾಪಾರ ಕ್ಷೇತ್ರದಲ್ಲಿ ಮೊದಲಿಗಿಂತ ಬಹಳ ಕ್ಷೀಣವಾಯಿತು.

## ಕಂದಾಯ, ಸಂಬಳ ಮುಂತಾದವು

ಸುಮಾರು ೧೨೫೨ರವರೆಗೆ ಹಿಂದೆ ಹೇಳಿದಂತೆ ಜಮೀನುದಾರ ತಾನು ಬೆಳೆದ ಒಟ್ಟು ಫಸಲಿನಲ್ಲಿ ಆರನೆಯ ಒಂದಂಶದಷ್ಟನ್ನು ರಾಜಾದಾಯವೆಂದು ಕೊಡಬೇಕಾಗಿತ್ತು. ಅಂದಿನಿಂದ ಮುಂದೆ ಮಧುರೆಯ ಪಾಂಡ್ಯರಾಜನೊಬ್ಬ ಈ ಭಾಗ ಗೆದ್ದು ಹೊಸ ದರಗಳನ್ನು ರೂಢಿಗೆ ತಂದನೆನ್ನಲಾಗಿದೆ. ಇದು ಮಧುರೆಯ ಪಾಂಡ್ಯರಾಜನ ಕೆಲಸವಲ್ಲ; ಅಸಂಭಾವ್ಯವಾದುದರಿಂದ ಆಳುಪ ದೊರೆ ವೀರಪಾಂಡ್ಯದೇವ ಆಳುಪೇಂದ್ರ ದೇವನು ಹೈವವನ್ನು ಆಗ ಆಕ್ರಮಿಸಿರಬೇಕು; ಅವನ ರಾಜಧಾನಿ ಸನಿಹದ ಬಾರಕೂರಾದುದರಿಂದ, ರಾಮದೇವ ಕದಂಬನು ಹಾನುಗಲ್ಲಿನಲ್ಲಿ ಅಂದು ಆಳುತ್ತಿದ್ದನು. ಅವನೊಬ್ಬ ದುರ್ಬಲ ಅರಸ. ಆದುದರಿಂದ ಈ ಪಾಂಡ್ಯದೇವನು ಹೈವವನ್ನಾಗ ವಶಪಡಿಸಿಕೊಂಡು ತನ್ನ ಹೊಸ ಕಂದಾಯ ಪದ್ಧತಿಯನ್ನು ಜಾರಿಗೆ ತರಲು ಯತ್ನಿಸಿರಬೇಕು. ಆ ಹೊಸ ಪದ್ಧತಿಯೆಂದರೆ ಭತ್ತವನ್ನು ೬ನೆಯ ಒಂದರಷ್ಟರ ಬದಲು ಅಕ್ಕಿಯನ್ನು ಕಂದಾಯಕ್ಕಾಗಿ ಕೊಡಬೇಕೆಂಬುದೇ. ಈ ಕ್ರಮದಿಂದ ನೂರಕ್ಕೆ ೧೦ರಷ್ಟು ಕಂದಾಯ ಏರಿದಂತಾಯಿತು. ೧೩೩೬ರವರೆಗೆ ಈ ಕ್ರಮ ನಡೆಯಿತು. ಆಮೇಲೆ ವಿಜಯನಗರದ ೧ನೆಯ ಹರಿಹರರಾಯನು ಸಾರ್ವಭೌಮನಾದಾಗ ರೈತನು ವ್ಯವಸಾಯದ ವೆಚ್ಚಕ್ಕೆಂದು ಬೆಳೆದುದರಲ್ಲಿ ಅರ್ಧಭಾಗವನ್ನು, ಉಳಿದ ಅರ್ಧದಲ್ಲಿ ಸರಕಾರಕ್ಕೆ ಕಾಲುಭಾಗವನ್ನು(=ರಾಜಕೋಶಕ್ಕೆ ೧೬–೨/೩%+ಬ್ರಾಹ್ಮಣರಿಗೆ ೫%+ದೇವರಿಗೆ ಅಥವಾ ಸಾರ್ವಜನಿಕ ದೇವಾಲಯಗಳ ವೆಚ್ಚಕ್ಕೆ೩–೧/೩%) ಕೊಟ್ಟು ಮಿಕ್ಕ ಕಾಲು ಭಾಗವನ್ನು ತಾನಿಟ್ಟುಕೊಳ್ಳಬೇಕೆಂದಾಯಿತು. ಸಾರ್ವಭೌಮನ ಅಧಿಕಾರಿಗಳು ದೇವಪೂಜಕರಿಗೂ ದೇವಪೂಜಾ ಸಾಮಗ್ರಿಗಳಿಗೂ ಮೀಸಲಾದ ಭಾಗವನ್ನು ಸಲ್ಲಿಸುತ್ತಿದ್ದರು. ಸ್ವಂತ ಜಮೀನಿದ್ದ ಬ್ರಾಹ್ಮಣರಿಗೆ ಕೊಡುವ ಭಾಗವನ್ನು ಸ್ವಲ್ಪ ಕಡಿಮೆ ಮಾಡಲಾಗುತ್ತಿತ್ತು. ಹಿಂದೆ ಧಾನ್ಯ ಅಥವಾ ಹಣ ತೀರ್ವೆಯ ರೂಪದಲ್ಲಿ ಸರಕಾರಕ್ಕೆ ಸಲ್ಲುತ್ತಿದ್ದರೆ ಈಗ ಹಣವೊಂದೇ ಸಲ್ಲಲು ತಕ್ಕದ್ದೆಂದು ವಿಧಿಸಲಾಯಿತು. ಆ ಅವಧಿಯಲ್ಲಿ ೨೦೦ರಿಂದ ೨೦,೦೦೦

ರೂಪಾಯಿಗಳವರೆಗೆ ಕಂದಾಯ ಸಲ್ಲಿಸುವ ಜಮೀನುದಾರರಿರುತ್ತಿದ್ದರು. ಈ ಪದ್ಧತಿ೧೬೧೮ರವರೆಗೆ ಉಳಿಯಿತು. ಕೆನರ ಪ್ರಭುಗಳ ಕಾಲದಲ್ಲಿ ಒಬ್ಬ ಪ್ರಭು ಕಂದಾಯವನ್ನು ೧ರಿಂದ ೧॥ ಪಟ್ಟಿಗೆ ಏರಿಸಿದನು. ಅಂದಿದ್ದದ್ದು ದೊಡ್ಡ ಸಂಕಣ್ಣ ನಾಯಕ ಮತ್ತು ಅವನ ಮಗ ೧ನೆಯ ವೆಂಕಟಪ್ಪ ನಾಯಕನ ಸಂಯುಕ್ತ ಆಡಳಿತ. ಅವರೇ ಮೊದಲನೆಯ ಕೆನರ ಪ್ರಭುಗಳು. ೧೬೬೦ರಲ್ಲಿ ಭೂಕಂದಾಯ ಮಾತ್ರ ಕೊಡಬೇಕಾಗಿದ್ದ ತೆಂಗಿನ ಮತ್ತು ಇತರ ಹಣ್ಣಿನ ತೋಟಗಳನ್ನುಳ್ಳವರಿಗೆ ಫಸಲಿನ ಬಗ್ಗೂ ವಿಶಿಷ್ಟ ದರದ ಕಂದಾಯಾಂಶವನ್ನು ವಿಧಿಸಲಾಯಿತು. ಇಂಥ ಕಂದಾಯ ಪದ್ಧತಿಯನ್ನು ಅಂದು 'ಶಿಸ್ತು' ಎಂದು ಕರೆಯಲಾಗುತ್ತಿತ್ತು. ಈ ಶಿಸ್ತಿನ ಪ್ರಕಾರ ಸರಕಾರಕ್ಕೆ ಜಮೀನುದಾರ ೧/೩ ಅಂಶವನ್ನು ತನ್ನ ಒಟ್ಟು ಕೃಷಿಫಲದಿಂದ ಕೊಡಬೇಕಾದರೂ ಆ ಅಂಶವನ್ನು ನಿರ್ಧರಿಸುವಾಗ ಬಿತ್ತಿದ ಬೀಜದ ಪ್ರಮಾಣವಷ್ಟನ್ನೇ ಲೆಕ್ಕಕ್ಕೆ ತೆಗೆದುಕೊಳ್ಳಲಾಗುತ್ತಿದ್ದುದರಿಂದ ಅದು ಭೂಧಾರಿಗಳಿಗೆ ಭಾರವೆನ್ನಿಸಲಿಲ್ಲ. ಈ ಖಾಯಂ ಕಂದಾಯ ಪದ್ಧತಿಯಲ್ಲಿ ಜಮೀನು ಸಾಗುವಳಿದಾರರು ಸುಖವಾಗಿದ್ದರು. ಪ್ರಭುಗಳ ಕೈ ಕೆಳಗಿನ ಆ ಈ ಪಾಳೆಯಗಾರು ಎಲ್ಲಾದರೂ ಆ ಈ ಸಾಗುವಳಿದಾರನಿಂದ ದಂಡ ವಸೂಲು ಮಾಡಿದಾಗ ಮಾತ್ರ ಆತ ಸರಕಾರಕ್ಕೆ ಒಟ್ಟಿನಲ್ಲಿ ಸಲ್ಲಿಸಬೇಕಾದ ಹಣದ ಮೊತ್ತ ಹೆಚ್ಚಾಗುತ್ತಿತ್ತು. ಈ ಪ್ರಕಾರ ಹೈವನಾಡು ೧೭೬೩ರವರೆಗೆ ಕೃಷಿ ಕ್ಷೇತ್ರದಲ್ಲಿ ಉತ್ಕರ್ಷವನ್ನು ಹೊಂದುತ್ತಿತ್ತೆನ್ನಬಹುದು.

ಆದರೆ ೧೭೬೩ರಲ್ಲಿ ಪ್ರಭುಗಳ ಮನೆತನ ಅಧಿಕಾರಚ್ಯುತಿಯನ್ನು ಹೊಂದಿ, ಹೈದರ ನಗರದ ದರಬಾರು ಪ್ರಾರಂಭವಾದ ಮೇಲೆ ಪರಿಸ್ಥಿತಿ ತೀರ ವಿಪರೀತವಾಯಿತು. ಕೃಷಿ ವೃತ್ತಿಯವರಿಂದ ಹೆಚ್ಚು ಹೆಚ್ಚನ್ನು ಕಿತ್ತುಕೊಳ್ಳಲು ಮಾಡಬೇಕಾದ ಕಾಯಿದೆ–ಕಾನೂನುಗಳ ಜಟಿಲತೆಯನ್ನು ಮಾಡಲಾಯಿತು. ಕಂದಾಯದ ಉಪವರ್ಗಗಳ ಸಂಖ್ಯೆ ಬೆಳೆಯಿತು. ವಸೂಲಿನ ಅಧಿಕಾರಿಗಳು ಲಂಚ–ವಂಚನೆಗಳಿಗೆ ಇಳಿಯುವುದೂ ಶುರುವಾಯಿತು. ಇದರ ಫಲವಾಗಿ ಹೈವದ ಜನಸಂಖ್ಯೆ ೧/೩ ಅಂಶಕ್ಕಿಳಿಯಿತು. ಹಳೆಯ ಜಮೀನುದಾರರ ಮನೆತನಗಳು ಅಳಿದು ಹೋದವು. ಓಡಿಹೋದವರ ಜಮೀನುಗಳನ್ನು ಸಾಗುಮಾಡಲು ಉಳಿದವರನ್ನು ಒತ್ತಾಯಪಡಿಸಲಾಯಿತು.. ಕಂದಾಯದ ಅತಿಭಾರದ ದೆಸೆಯಿಂದ ಎಷ್ಟೋ ಸಾಗುವಳಿದಾರರಿಂದ ಪೂರ್ಣ ಮೊತ್ತವನ್ನು ವಸೂಲು ಮಾಡಲು ಸರಕಾರಕ್ಕೆ ಸಾಧ್ಯವಾಗಲಿಲ್ಲ. ಬಡ ಭೂಮಾಲಿಕರು ದೊಡ್ಡವರ ಹೆಸರಿಗೆ ಪಟ್ಟೆಯನ್ನು ಬರೆಯಿಸಿ ಕಂದಾಯವನ್ನು ಸರಕಾರಕ್ಕೆ ಕೊಡದೆ ಉಳಿಯಲು ವ್ಯವಸ್ಥೆ ಮಾಡಿಕೊಳ್ಳುತ್ತಿದ್ದದ್ದೂ ಉಂಟು. ಬಹಳ ಜಮೀನುಗಳು ಹಾಳುಬಿದ್ದವು. ಸಮುದ್ರಕ್ಕೆ ಅತಿ ಹತ್ತಿರವಾಗಿದ್ದ ಜಮೀನುಗಳನ್ನು ಮಾತ್ರ ಮಾರಬಹುದಾಗಿತ್ತು. ಮಿಕ್ಕವುಗಳನ್ನು ಮಾರಲು ಹಕ್ಕಿದ್ದಿಲ್ಲ. ವಿಜಯನಗರದ ಕಂದಾಯಮಿತಿಗೆ ಪ್ರಭುಗಳೂ ಸುಲ್ತಾನರೂ ಹೊಸದಾಗಿ ಸೇರಿಸಿದ ಅಂಶವನ್ನು 'ಶಾಮೀಲು' ಎಂದು ಕರೆಯುವುದು ರೂಢಿಗೆ ಬಂದಿತು. ಅದನ್ನು 'ದಂಡ'ವೆಂದು

ಭಾವಿಸಲಾಗುತ್ತಿತ್ತು. ೧೬೬೦ರಲ್ಲಿ ಜಾರಿಗೆ ಬಂದಿದ್ದ 'ಶಿಸ್ತ'ನ್ನು ಮಾತ್ರ ಭೂಕಂದಾಯವೆಂದು ತಿಳಿಯಲಾಗುತ್ತಿತ್ತು. ೧೮೦೦ನೆಯ ಮೇ ३೧ರಲ್ಲಿ ಬ್ರಿಟಿಷ್ ಆಡಳಿತ ಪ್ರಾರಂಭವಾದಾಗ ಈ 'ದಂಡ'ವನ್ನು ಜನರ ದರಿದ್ರೀಕರಣದ ಕಾರಣವೆಂದು ತಿಳಿದರೂ ಮುನ್ರೋ ಕಲೆಕ್ಟರನು ಅದನ್ನು ತೆಗೆದುಹಾಕುವ ವಿವೇಕವನ್ನು 'ರೆವಿನ್ಯೂ ಬೋರ್ಡಿಗೆ' ಬಿಟ್ಟುಕೊಟ್ಟು ಸುಮ್ಮನಾದನು. ಕುಮಟಾ ತಾಲೂಕು ಸರ್.ಟಿ.ಮುನ್ರೋವಿನ ಪ್ರಕಾರ ಪ್ರಭು ಸರಕಾರದ ಕಂದಾಯ ದರದ ಜೊತೆಗೆ ಹೈದರ ಹಾಕಿದ ವಿಶೇಷಾಂಶದ ೨೫ ಅಥವಾ ३೦ ಶತಾಂಶದಷ್ಟನ್ನು ಕೊಡಬೇಕಾಯಿತು. ಅಂದರೆ, ಜಮೀನುದಾರರು ಕೊಡಬೇಕಾದ ಕಂದಾಯವು ಅವನ ಒಟ್ಟು ಉತ್ಪನ್ನದಲ್ಲಿ ೧೫ರಿಂದ ೮೦ ಶತಾಂಶಗಳವರೆಗೆ ವಿವಿಧವಾಗಿದ್ದರೂ ಸಾಮಾನ್ಯವಾಗಿ ಹೆಚ್ಚು ಜನರು ಅರ್ಧಕ್ಕಿಂತ ಹೆಚ್ಚು ಪಾಲನ್ನು ಸರಕಾರಕ್ಕೆ ಕಂದಾಯದ ಬಗ್ಗೆ ತೆರಬೇಕಾಯಿತು. ಹೈವದಲ್ಲಿ ಮೊದಲಿನಿಂದಲೂ ದೊಡ್ಡ ಜಮೀನುದಾರರು ಇದ್ದದ್ದು ಕಡಿಮೆ.

ಕುಂದಾಪುರ ವಿಭಾಗವನ್ನೊಳಗೊಂಡ ಇಂದಿನ ಉತ್ತರಕನ್ನಡ ಜಿಲ್ಲೆಗೆ ೧೮೦೧ರಿಂದ ೧೮೧೬ರವರೆಗೆ ರೀಡ್ ಕಲೆಕ್ಟರ್ ಅಥವಾ ಸಮಾಹರ್ತ. ೧೮೧೬ರಿಂದ ೧೮३३ರವರೆಗೆ ಹ್ಯಾರಿಸ್. ಹ್ಯಾರಿಸ್‌ನ ಕಾಲದಲ್ಲೇ 'ಸರ್ವೇ' ಪ್ರಾರಂಭವಾಯಿತು. ೧೮३೦ರ ಹೊತ್ತಿಗೆ ತೀರ್ವೆಯನ್ನು ಹೊಸದಾಗಿ ನಿರ್ಧರಿಸಲಾಗುವುದೆಂಬುದನ್ನು ತಿಳಿದು ಆ ಬಗ್ಗೆ ಶಂಕೆ ತಾಳಿದ ಸಾಗುವಳಿದಾರರು 'ರೈತಕೂಟ'ಗಳನ್ನು ಸೇರಿಸಿ ಪ್ರತಿಭಟನೆ ಮಾಡಿದರು. ಅಂದಿನ ಕಲೆಕ್ಟರನ ಸಂಬಳ ತಿಂಗಳಿಗೆ ೧೮೦೦ರೂಪಾಯಿಗಳಿಂದ ೨३೨೫ರೂಪಾಯಿಗಳವರೆಗೆ ಇತ್ತು; ಮಾಮಲತ್‌ದಾರನ ಸಂಬಳ ೧೫೦ರಿಂದ ೨೦೦ರವರೆಗೆ ಇತ್ತು. ಸಾಮಾನ್ಯ ಹಳ್ಳಿಯೊಂದರಿಂದ ಆಗ ವಸೂಲಾಗುತ್ತಿದ್ದ ವಾರ್ಷಿಕ ಕಂದಾಯ ೭೨೦ ರೂಪಾಯಿಗಳು. ಪಟೇಲನ ಸಂಬಳ ಅವನ ಹಳ್ಳಿಯ ಒಟ್ಟು ಕಂದಾಯದ ಪ್ರಮಾಣವನ್ನು ಅವಲಂಬಿಸಿತ್ತು. ಆದುದರಿಂದ ಒಬ್ಬ ಪಟೇಲನಿಗೆ ವರ್ಷಕ್ಕೆ ೫ ರೂಪಾಯಿಗಳು ದೊರಕುತ್ತಿದ್ದರೆ ಇನ್ನೊಬ್ಬನಿಗೆ ೧೧೨ ರೂಪಾಯಿಗಳು ಸಿಗುತ್ತಿದ್ದವು. ಶಾನುಭೋಗರಿಗೆ ೧೨೦ರಿಂದ ೧೫೦ ರೂಪಾಯಿಗಳ ತನಕ; ಉಗ್ರಾಣಿಗೆ ೧೬ ರೂಪಾಯಿಗಳು (ವರ್ಷಕ್ಕೆ).

೧೮೭೬–೭೭ ಕ್ಷಾಮದ ವರ್ಷ. ಆಗ ರಾಜಾದಾಯ ಕಡಿಮೆ ವಸೂಲು ಮಾಡಲಾಯಿತು. ಫಸಲು ಕಡಿಮೆಯಾದುದರಿಂದ ಅಕ್ಕಿಯ ದರ ಏರಿತು. ಕಾಹಿಲೆ, ಕಸಾಲೆ, ಸಾವು–ನೋವುಗಳೂ ಹೆಚ್ಚಿದವು. ೧೮३೮–३೯ರಲ್ಲಿ ಸರಾಸರಿ ೧३೨–೮೯ಇಂಚು ಮಳೆ ಸುರಿಯಿತು. ೧೮೮೦–೮೧ರಲ್ಲಿ ಮಳೆ, ಬೆಳೆ ಎಲ್ಲ ಸರಿಯಾದುದರಿಂದ ಅಕ್ಕಿಯ ದರ ಇಳಿಯಿತು.

ಸರ್ವೇ ಮುಗಿಯುವವರೆಗೆ ಭೂಕಂದಾಯದ ಪ್ರಮಾಣ ಒಟ್ಟು ಉತ್ಪನ್ನದ ಸರಾಸರಿ ೧/३ರಷ್ಟು ಎಂದು ನಿರ್ಧರಿಸಲ್ಪಟ್ಟಿತು. ೧೮೬೨ರಲ್ಲಿ ಕುಂದಾಪುರ ವಿಭಾಗವನ್ನು ಬಿಟ್ಟು ಇಂದಿನ ಉತ್ತರಕನ್ನಡ ಜಿಲ್ಲೆ ಬೊಂಬಾಯಿ ಪ್ರಾಂತದಲ್ಲಿ ಸೇರಿಸಲ್ಪಟ್ಟಾಗ Bombay

Survey Settlement ಬೊಂಬಾಯಿ ಪರಿಶೀಲನ ನಿರ್ಣಯ ಅಮಲಿನಲ್ಲಿ ಬಂದಿತು. ೧೮೮೨ರ ಹೊತ್ತಿಗೆ ಕುಮಟಾ ತಾಲೂಕಿನ ೨೧೮ ಗ್ರಾಮಗಳ ಪರಿಶೀಲನೆ ಮುಗಿದು ಕೊನೆಯದಾಗಿ ಕಂದಾಯ ಪ್ರಮಾಣ ನಿರ್ಧರಿಸಲ್ಪಟ್ಟಿತು.

೧೮೯೭ರಲ್ಲಿ ೧ ಎಕರೆ ಮನೆ ಕಟ್ಟುವ ಸ್ಥಳಕ್ಕೆ ಬೆಲೆ ೧೦೦ರಿಂದ ೨೦೦ ರೂಪಾಯಿಗಳವರೆಗಿದ್ದರೆ, ೧೮೨೨ರಲ್ಲಿ ೨೦೦ರಿಂದ ೪೦೦ರವರೆಗೆ ಏರಿತು. ಹವೀಕ, ಶೇಣವಿ, ಹಬ್ಬು, ಜೋಶಿ, ನಾಡವ, ಶಾಸಷ್ಟಕಾರ, ಹಾಲಕ್ಕಿ ಒಕ್ಕಲು ಮತ್ತು ಕೊಂಕಣಿಗರು ಬಡ್ಡಿಗೆ ಸಾಲವನ್ನು ಕೊಡುತ್ತಿದ್ದರು ಮತ್ತು ಧಾನ್ಯ ವ್ಯಾಪಾರ ಮಾಡುತ್ತಿದ್ದರು. ಅಂದಿನ ಗುಮಾಸ್ತನ ಸಂಬಳ ವರ್ಷಕ್ಕೆ೭೫ರಿಂದ ೧೦೦ ರೂಪಾಯಿಗಳವರೆಗಿತ್ತು; ಅವನಿಗೆ ತನ್ನ ಒಡೆಯನ ಪ್ರತಿನಿಧಿಯಾಗಿ ಕೆಲಸ ಮಾಡುವ ಅಧಿಕಾರ ದೊರೆತಾಗ೩೦೦ರಿಂದ ೪೦೦ರೂಪಾಯಿಗಳವರೆಗೆ ವೇತನ ಲಭ್ಯವಾಗುತ್ತಿತ್ತು. ಗುಜರಾತ್ ಮತ್ತು ಕಛ್ ಪ್ರದೇಶಗಳ ದೊಡ್ಡ ವ್ಯಾಪಾರಿಗಳು ಕುಮಟೆ ಮತ್ತು ಕಾರವಾರಗಳಲ್ಲಿ ಅಂಥ ಏಜಂಟರನ್ನು ಇಟ್ಟುಕೊಳ್ಳುತ್ತಿದ್ದರು. ವರ್ಷದ ಬಡ್ಡಿಯ ದರ ಅಂದು ನೂರಕ್ಕೆ ೬ರಿಂದ ೧೨ ಅಂಶಗಳಷ್ಟಿತ್ತು. ಹೊಣೆ(Security) ಕೊಡಲಾರದವನು ನೂರಕ್ಕೆ ೨೪ರಷ್ಟು ಬಡ್ಡಿಯನ್ನು ಕೊಡಬೇಕಾಗಿತ್ತು.

ಅಂದು ಮುಸಲ್ಮಾನರು, ಕ್ರೈಸ್ತರು, ಮರಾಠರು, ಭಂಡಾರಿಗಳು ಮತ್ತು ಕುಮಾರಪಯಿಕರಲ್ಲದೆ ಇತರರು ಸೈನಿಕ ವೃತ್ತಿಗೆ ಸೇರುತ್ತಿದ್ದಿಲ್ಲ. ಕಾರವಾರ, ಕುಮಟೆಗಳಲ್ಲಿ 'ಕಾಟನ್ ಪ್ರೆಸ್ಸು'ಗಳು ಅನೇಕರಿಗೆ ಕೆಲಸವನ್ನು ಕೊಡುತ್ತಿದ್ದವು. ಸಾಲಗಾರರಾಗಿದ್ದ ಬಡವರು ಕೂಡ ಬಿಡುವಿನ ಋತುಮಾನಗಳಲ್ಲಿ ಇತರ ಉದ್ಯೋಗಗಳನ್ನು ಮಾಡಿ ಕುಟುಂಬ ನಿರ್ವಹಣವನ್ನು (ಸಾಮಾನ್ಯವಾಗಿ ಬಹಳ ಕಷ್ಟಪಡದೆ) ಮಾಡುತ್ತಿದ್ದರು. ಕ್ರಮೇಣ ಒಳನಾಡಿನ ರಸ್ತೆಗಳ ನಿರ್ಮಾಣವಾಗತೊಡಗಿ ವ್ಯಾಪಾರ ವ್ಯವಹಾರಗಳ ಸಂಪರ್ಕ ಸಾಧನಗಳು ಸಂಖ್ಯೆಯಲ್ಲೂ, ಮಟ್ಟದಲ್ಲೂ ಸುಧಾರಿಸಲ್ಪಟ್ಟವು.

ಹಬ್ಬು, ಹಳೆಯಪಯಿಕ, ಕುಮಾರಪಯಿಕ, ಭಂಡಾರಿ, ಪಂಚಮಸಾಲಿ, ಕೊಂಕಣಕುಣಬಿ, ನಾಡವ ಕೊಂಕಣಮರಾಠ, ಅರೇ, ಮುಸಲ್ಮಾನ ಮತ್ತು ಕ್ರೈಸ್ತ ಜಾತಿಯವರು ಸ್ವಂತ ಗದ್ದೆ ಹೂಡಿ ವ್ಯವಸಾಯ ಮಾಡುವವರಾಗಿದ್ದರು. ಕುಮಾರಪಯಿಕರು ಹೆಚ್ಚಾಗಿ ಇದ್ದಿದ್ದು ಕಾರವಾರ, ಅಂಕೋಲೆ, ಕುಮಟೆಗಳಲ್ಲಿ. ಕುಮಟೆಯಲ್ಲಿ ಅವರೇ ಹೆಚ್ಚಾಗಿ ಹತ್ತಿ ಹೊರೆ ಸಾಗಿಸುವವರಾಗಿದ್ದರು. ಅಡಿಕೆ ತೋಟಗಳ ಕೃಷಿಯಲ್ಲಿ ಹವೀಕರು ಹೆಸರು ಪಡೆದಿದ್ದರು; ಅದಕ್ಕಾಗಿ ಅವರು ಆಳುಗಳನ್ನು ನಿಯೋಜಿಸುತ್ತಿದ್ದರು.

## ಕೋರ್ಟ್ ಕಚೇರಿ ವ್ಯವಹಾರ ಸೌಕರ್ಯ

೧೮೦೨ರಲ್ಲಿ(Circuit Judges) 'ಪರಿವ್ರಾಜಕ ನ್ಯಾಯಾಧೀಶ'ರು ಇದ್ದದ್ದು ಈಗ ಮೋಜಿನ ಸಂಗತಿ. ತಲಚೇರಿಯಿಂದ ಅವರು ಆರು ತಿಂಗಳವರೆಗೆ (ಮದ್ರಾಸಿನ) ಪ್ರತಿಯೊಂದು ಜಿಲ್ಲೆಯನ್ನೂ ಸಂದರ್ಶಿಸುತ್ತ ಅಲ್ಲಿಯ ನ್ಯಾಯಾಲಯಗಳಲ್ಲಿ ದಾಖಲು

ಮಾಡಲಾಗಿದ್ದ ಪ್ರಕರಣಗಳನ್ನು ಖುಲಾಸು ಮಾಡುತ್ತಿದ್ದರು. ೧೮೦೭ರಲ್ಲಿ ಆಸ್ತಿ ಮನೆ–ದಾವೆಗಳನ್ನ, ಅವು ೮೦ ರೂಪಾಯಿಗಳಿಗಿಂತ ಹೆಚ್ಚಿನ ಬೆಲೆಯವುಗಳಾಗಿರದಾಗ, ದೇಶೀಯ 'ಕಮಿಶನರರು' ಕೆನರದಲ್ಲಿ(ಉ.ದ.ಕ.ಜಿಲ್ಲೆಗಳಲ್ಲಿ) ವಿಚಾರಿಸಿ ನ್ಯಾಯದಾನ ಮಾಡಲು ನಿಯಮಿಸಲ್ಪಟ್ಟರು. ೧೮೯೯ರಲ್ಲಿ ಅವರು ವಿಚಾರಣೆಗೆ ತೆಗೆದುಕೊಳ್ಳಬಹುದಾದ ದಾವೆಗಳ ಬೆಲೆ ೧೦೦ ರೂಪಾಯಿಗಳಿಗೆ ಏರಿಸಲ್ಪಟ್ಟಿತು. ೧೮೧೬ರಲ್ಲಿ ಜಿಲ್ಲಾ ಮುನಸೀಫರ ಉದಯವಾಯಿತು. ೧೦ರೂಪಾಯಿ ಬೆಲೆಯೊಳಗಿನ ಪ್ರಕರಣಗಳನ್ನು ವಿಚಾರಿಸಲು ಗ್ರಾಮ ಮುನಿಸೀಫರೂ ನಿಯುಕ್ತರಾದರು. ಗ್ರಾಮದ ಪಟೇಲರೇ ಮುನಸೀಫರಾದರು. ಪಂಚಾಯತವು ಅವರಿಂದ ಬಂದ ಹೆಚ್ಚು ಬೆಲೆಯ ಪ್ರಕರಣಗಳನ್ನು ತೀರ್ಮಾನಿಸುತ್ತಿತ್ತು. ಆಗಲೇ ಪಂಚಾಯತ ಪದ್ಧತಿ ಮತ್ತು ಜಿಲ್ಲಾ ಮಂಡಲಗಳು ಹುಟ್ಟಿದ್ದು. ಭಟಕಳ, ಗೋಕರ್ಣ, ಶಿರಸಿಗಳಲ್ಲಿ ಮುನಸೀಫರು ೧೮೧೭ರಲ್ಲಿ ೨೦೦ ರೂಪಾಯಿ ಬೆಲೆಯವರೆಗಿನ ಪ್ರಕರಣಗಳನ್ನು ಪರಿಹರಿಸಬಹುದಾಯಿತು. ೧೮೩೭ರಲ್ಲಿ ಹೊನ್ನಾವರ, ಕುಮಟಾ, ಅಂಕೋಲಾ, ಶಿರಸಿ, ಸಿದ್ದಾಪುರ, ಯಲ್ಲಾಪುರ ಕ್ಷೇತ್ರಗಳಿಗೆ ಒಟ್ಟು ಹೊನ್ನಾವರದಲ್ಲಿ ಒಬ್ಬ 'ಅಸಿಸ್ಟಂಟ್ ಜಡ್ಜ್' ನನ್ನು ನಿಯಮಿಸಲಾಯಿತು. 'ಕ್ರಿಮಿನಲ್', 'ಸಿವಿಲ್' ಅಧಿಕಾರಗಳೆರಡೂ ಅವನಿಗಿದ್ದವು. ೫೦೦೦ ರೂಪಾಯಿ ಬೆಲೆಯವರೆಗಿನ ಸಿವಿಲ್ ದಾವೆಗಳನ್ನೂ ಜಿಲ್ಲಾ ಮುನಸೀಫರಿಂದ(ಅವರ ತೀರ್ಮಾನಗಳ ವಿರುದ್ಧವಾಗಿ) ಬಂದ ಅಪೀಲುಗಳನ್ನೂ ಆತ ನಿಖಾಲಿ ಮಾಡುತ್ತಿದ್ದನು. ಆತನ ನ್ಯಾಯಾಲಯಕ್ಕಿಂತ ಮೇಲಿನದಾದ ಜಿಲ್ಲಾ ಜಡ್ಜ್‌ಕೋರ್ಟ್ ಮಂಗಳೂರಲ್ಲಿತ್ತು.

೧೮೪೩ರಲ್ಲಿ ತಲಚೇರಿಯ ಪರಿವ್ರಾಜಕ ನ್ಯಾಯಾಲಯ, ಮಂಗಳೂರಿನ ಜಿಲ್ಲಾ ನ್ಯಾಯಾಲಯ ಮತ್ತು ಅಷ್ಟರೊಳಗೆ ಸ್ಥಾಪಿತವಾಗಿದ್ದ ಶಿರಸಿ–ಹೊನ್ನಾವರಗಳ ಸದರ ಅಮೀನ ಕೋರ್ಟುಗಳು ವಜಾ ಆದವು. ಅಂದಿನಿಂದ ನ್ಯಾಯವ್ಯವಹಾರದಲ್ಲಿ ಉ.ದ.ಕ. ಜಿಲ್ಲೆಗಳು ಬೇರೆಯಾದವು. ೨ನೆಯ ದರ್ಜೆಯ ಸಿವಿಲ್ ಹಾಗೂ ಸೆಶನ್ಸ್ ಜಡ್ಜ್‌ನನ್ನೂ ಮುಖ್ಯ ಸದರ್ ಅಮೀನನನ್ನೂ(ಹೊನ್ನಾವರದಲ್ಲೂ) ಸದರ್ ಅಮೀನನನ್ನೂ(ಶಿರಸಿಯಲ್ಲೂ) ನಿಯಮಿಸಲಾಯಿತು. ಕಲೆಕ್ಟರ ಮತ್ತು ಅವನ ಸಹಾಯಕನು ಮ್ಯಾಜಿಸ್ಟ್ರೇಟರ ಕೆಲಸವನ್ನು ಮಾಡುತ್ತಿದ್ದರು. ೧೮೫೨ರಲ್ಲಿ ಜಡ್ಜ್‌ನ ಕೈಕೆಳಗೆ ಸದರ್ ಅಮೀನನೊಬ್ಬ ನಿಯುಕ್ತನಾದ ಮತ್ತು ಕುಮಟೆಗೆ ಮನಸಿಫ್ ಕೋರ್ಟ್ ಮಂಜೂರಾಯಿತು. ೧೮೬೦ರಲ್ಲಿ ಹೊನ್ನಾವರದಲ್ಲಿ ನಿಯುಕ್ತನಾದ ಡಿಸ್ಟ್ರಿಕ್ಟ್ ಜಡ್ಜ್‌ನು೧೮೬೬ರವರೆಗೆ ಕುಂದಾಪುರ ವಿಭಾಗವನ್ನೊಳಗೊಂಡ ಉ.ಕ.ಜಿಲ್ಲೆಯ ನ್ಯಾಯಪ್ರಕರಣಗಳನ್ನು ಪರಿಹರಿಸುವ ಅಧಿಕಾರವನ್ನು ಪಡೆದನು. ೧೮೬೨ರಲ್ಲಿ ಈ ಕ್ಷೇತ್ರದಿಂದ ಕುಂದಾಪುರ ವಿಭಾಗವು ಮುಕ್ತವಾಯಿತು.

ಅಂದು ಕುಮಟೆಯ ೨ನೆಯ ದರ್ಜೆಯ ಸಬ್‌ಜಡ್ಜ್‌ನು ಕುಮಟೆ ಮತ್ತು ಅಂಕೋಲೆಯ ಕುಲೆನಾಡು ಮಾಗಣೆಗಳ ಮೇಲೆ ಅಧಿಕಾರ ಉಳ್ಳವನಾಗಿದ್ದನು. ೧೮೮೦ರಲ್ಲಿ ಹೊನ್ನಾವರ ಕುಮಟೆಗಳ ಸಬ್‌ಜಡ್ಜ್‌ರಿಗೆ 'ಸ್ಮಾಲ್ ಕಾಸ್ ಕೋರ್ಟ್

ಜಡ್ಜ್‌ರ್' ಅಧಿಕಾರವನ್ನು ಕೊಡಲಾಯಿತು. ೧೮೮೧ರಲ್ಲಿ ಅವು ೫೨೬(ಸ್ಮಾಲ್ ಕಾಸ್) ಅಲ್ಪ ಕಾರಣ ದಾವೆಗಳನ್ನು ನಿಖಾಲಿ ಮಾಡಿದರು.

೧೮೮೨ರಲ್ಲಿ ಸಬ್‌ರಿಜಿಸ್ಟ್ರಾರರನ್ನು ನಿಯಮಿಸಲಾಯಿತು. ಪಟೇಲನೇ ಪೋಲೀಸು ಮುಖ್ಯಸ್ಥ ಆಗಿದ್ದನು.

## ನಗರಸಭೆ

೧೮೮೧-೮೨ರಲ್ಲಿ ಕುಮಟೆಯ ಪುರಸಭೆಯ 'ಮ್ಯುನಿಸಿಪಲ್ ಕಮಿಶನರರು' ಒಳ್ಳೆಯ ಆಡಳಿತಗಾರರಾದರು; ಕಲೆಕ್ಟರನು ಅಧ್ಯಕ್ಷ ಮತ್ತು ಅಸಿಸ್ಟೆಂಟ್ ಅಥವಾ ಡೆಪ್ಯುಟಿ ಕಲೆಕ್ಟರನು ಉಪಾಧ್ಯಕ್ಷ.

## ಅಂದಿನ ವಾರ್ಷಿಕ ಆದಾಯ ಇತ್ಯಾದಿ:

| | | |
|---|---|---|
| ಜನಸಂಖ್ಯೆ | | ೧೦,೬೨೯ |
| ಅಕ್‌ಟ್ರಾಯಿ | ೬,೩೬೦ ರೂ. | |
| ಮನೆಗಂದಾಯ | ೨,೦೯೦ ರೂ. | |
| ಸುಂಕ ಮತ್ತು ವಾಹನ ಕರ | ೩೭೦ ರೂ. | |
| ನಿಗದಿ ಮಾಡಿದ ತೆರಿಗೆಗಳು | ೮೦ ರೂ. | |
| ಸಂಕೀರ್ಣ ಕರಗಳು | ೧,೧೭೦ ರೂ. | |
| ಒಟ್ಟು | ೧೦,೦೭೦ ರೂ. | |

## ಅಂದಿನ ವ್ಯಯ:

| | |
|---|---|
| ಶಿಬ್ಬಂದಿಯ ಸಂಬಳ | ೧,೧೦೦ ರೂ. |
| ಸುರಕ್ಷಿತತಾ ವ್ಯವಸ್ಥೆ | ೧,೦೫೦ ರೂ. |
| ಆರೋಗ್ಯ ಸೌಕರ್ಯ | ೩,೬೭೦ ರೂ. |
| ಶಿಕ್ಷಣ ಸೌಕರ್ಯ | ೧,೨೦೦ ರೂ. |
| ಹೊಸರಚನಾ ಕಾರ್ಯ | ೩೯೦ ರೂ. |
| ದುರಸ್ತು | ೫೫೦ ರೂ. |
| ಸಂಕೀರ್ಣ ವೆಚ್ಚ | ೧,೧೦೦ ರೂ. |
| ಒಟ್ಟು | ೯,೦೬೦ ರೂ. |

ಕುಮಟೆಯ ಮ್ಯುನಿಸಿಪಲ್ ಆಸ್ಪತ್ರೆ, ಸ್ಥಾಪಿತವಾದದ್ದು ೧೮೬೭ರಲ್ಲಿ. ಮಲೇರಿಯಾ ಜ್ವರ, ಹೊಟ್ಟೆಹುಳುವಿನ ಕಾಟ, ಚರ್ಮವ್ಯಾಧಿ, ಶ್ವಾಸೋಚ್ಛ್ವಾಸಕ್ಕೆ ಸಂಬಂಧಿಸಿದ ಕಾಹಿಲೆ, ಸಂಧಿವಾತ, ಸಿಫಿಲಿಸ್ ಎಂಬ ಆರೋಗ್ಯವಾರಕಗಳಿಂದ ನರಳುತ್ತಿದ್ದವರು ಅಧಿಕವಾಗಿದ್ದರು. ೧೮೮೨ನೆಯ ಮೇ, ಜೂನ್ ತಿಂಗಳುಗಳಲ್ಲಿ ಮೈಲಿ ಬೇನೆ ಬಂದು ೧೫ ಜನರು ನರಳಿದರು; ಅವರಲ್ಲಿ ಇಬ್ಬರು ಸತ್ತರು. ೩೨ ಮುಖ್ಯ ಶಸ್ತ್ರಚಿಕಿತ್ಸೆಗಳೂ, ೨೯೮ ಸಫಲ ದಾಕುಧಾರಣಗಳೂ ನಡೆದವು. ಅಂದಿದ್ದ ಹೊರಮನೆ ರೋಗಿಗಳು ೬,೦೧೦ ಮತ್ತು ಒಳಮನೆ ರೋಗಿಗಳು ೧೩೬. ಅವರ ಚಿಕಿತ್ಸೆಗೆ ತಗುಲಿದ ವಾರ್ಷಿಕ ವೆಚ್ಚ ೪,೦೪೦ ರೂಪಾಯಿಗಳು.

೧೮೬೫ರಲ್ಲಿ ಮೊಟ್ಟ ಮೊದಲು ಹಳಿಯಾಳ, ಶಿರಸಿ, ಕುಮಟೆಗಳಲ್ಲಿ ಇಂಗ್ಲಿಷ್–ಪ್ರಾದೇಶಿಕ ಭಾಷೆಗಳ ಪ್ರಾಥಮಿಕ ಶಾಲೆಗಳನ್ನು ಸರಕಾರ ಸ್ಥಾಪಿಸಿತು. ೧೮೬೬–೬೭ರಲ್ಲಿ ಕುಮಟೆ ಮತ್ತು ಶಿರಸಿಗಳಲ್ಲಿ ಒಂದೊಂದು ಹೆಣ್ಣು ಮಕ್ಕಳ ಪ್ರಾಥಮಿಕ ಶಾಲೆಗಳ್ನು ಸರಕಾರ ಸ್ಥಾಪಿಸಿತು. ೧೮೮೧–೮೨ರ ಹೊತ್ತಿಗೆ ಕುಮಟೆಯಲ್ಲಿ ಒಟ್ಟು ೪ ಸರಾಸರಿ ಪ್ರಾಥಮಿಕ ಶಾಲೆಗಳಾದವು ಅವುಗಳಲ್ಲಿ ಕಲಿಯುತ್ತಿದ್ದ ವಿದ್ಯಾರ್ಥಿಗಳ ಸಂಖ್ಯೆ ೪೪೯; ಅವರಲ್ಲಿ ೩೧೫ ಜನರು ಸರಾಸರಿ ಹಾಜರಾಗಿರುತ್ತಿದ್ದರು. ಆ ನಾಲ್ಕು ಶಾಲೆಗಳಲ್ಲಿ ೩ ಗಂಡುಮಕ್ಕಳವು; ಒಂದು ಹೆಣ್ಣು ಮಕ್ಕಳದ್ದು.

೧೮೮೦–೮೧ರಲ್ಲಿ ಕುಮಟಾ ತಾಲೂಕಿನ ೧೧೯ ಹಳ್ಳಿಗಳಲ್ಲಿ ೫೯,೯೮೦ ಜನರು ವಾಸವಾಗಿದ್ದರು. ಅವರ ಮಕ್ಕಳಿಗಾಗಿ ೧೪ ಪ್ರಾಥಮಿಕ ಶಾಲೆಗಳಿದ್ದವು. ಕುಮಟಾ ಪಟ್ಟಣದಲ್ಲಿ ಸರಕಾರದ ೪ ಶಾಲೆಗಳಲ್ಲದೆ ಒಂದು ಪುಸ್ತಕ ಭಂಡಾರವನ್ನೂ ಸ್ಥಾಪಿಸಲಾಗಿತ್ತು. ಪುಸ್ತಕ ಭಂಡಾರದ ಸ್ಥಾಪನೆಯಾದದ್ದು ೧೮೭೫ರಲ್ಲಿ. ಅದಾಗ (General Library) 'ಸಾಮಾನ್ಯ ಗ್ರಂಥಾಲಯ' ಎನ್ನಿಸಿತ್ತು. ೧೮೮೦–೮೧ರಲ್ಲಿ ಅದರಲ್ಲಿದ್ದ ಪುಸ್ತಕಗಳ ಸಂಖ್ಯೆ ೧೫೦; ಅದಕ್ಕೆ ೨೫ ಜನ ಸದಸ್ಯರಿದ್ದರು. ಅವರು ಕೊಡುತ್ತಿದ್ದ ಚಂದಾ ಹಣ ಎಂಟಾಣೆಯಿಂದ ೨ ರೂಪಾಯಿಗಳವರೆಗೆ ಹೋಗುತ್ತಿತ್ತು. ಅಂದು ಇಡೀ ಜಿಲ್ಲೆಯಲ್ಲಿ ಯಾವ ಪತ್ರಿಕೆಯೂ ಹೊರಡುತ್ತಿದ್ದಿಲ್ಲ.

ಅಂದು ಕುಮಟಾ ತಾಲೂಕಿನ ಚದುರಳತೆ ೨೩೦ ಮೈಲುಗಳು; ಹಳ್ಳಿಗಳು ೧೨೦; ಜನಸಂಖ್ಯೆ ೫೮,೫೭೮. ಅಂದರೆ ಚದುರ ಮೈಲು ಒಂದಕ್ಕೆ ೨೫೫.೪೬. ಅದರ ವಾರ್ಷಿಕ ಆದಾಯ ೧,೨೧,೨೨೦ ರೂಪಾಯಿಗಳು. ತಾಲೂಕಿನ ಅತಿ ಎತ್ತರದ ಗುಡ್ಡ ಸಮುದ್ರ ಮಟ್ಟದಿಂದ ೭೦೦ ಅಡಿಗಳ ಮೇಲಿದೆ. ಪ್ರಸ್ಥಭೂಮಿಯ ಎತ್ತರ ೧೦೦೦ ಅಡಿಗಳು.

೧೭೬೯ರಿಂದ ೭೯ ರವರೆಗೆ ಸರಾಸರಿ ೧೩೨.೪೫ ಇಂಚು ಮಳೆ ಬೀಳುತ್ತಿತ್ತು. ೧೮೮೧ರಲ್ಲಿ ತಾಲೂಕಿನಲ್ಲಿದ್ದ ಒಟ್ಟು ನೇಗಿಲುಗಳು ೪೯೦೦. ಗಾಡಿಗಳು ೧೪೬, ಎತ್ತುಗಳು ೧೨,೦೧೦, ದನಗಳು ೧೧,೨೧೪, ಎಮ್ಮೆಗಳು ೨,೯೧೦, ಕೋಣಗಳು ೨,೧೮೩, ಕುದುರೆಗಳು ೧೦, ಹೋತ–ಮೇಕೆಗಳು ೨೫೩.

೧೮೮೧ರಲ್ಲಿ ಹೈವದಲ್ಲಿ ಹಿಂದುಗಳು, ಮುಸಲ್ಮಾನರು, ಕ್ರೈಸ್ತರು, ಪಾರಸೀಕರು, ಬೌದ್ಧರು ನೆಲೆಸಿದ್ದರು. ಹಿಂದುಗಳಲ್ಲಿ ಬ್ರಾಹ್ಮಣರು, ವಾಣಿಗಳು, ಭಾಟಿಯರು, ವೈಶ್ಯವಾಣಿಗಳು, ಲಿಂಗಾಯತರು, ಗುಜರಾತು ವಾಣಿಗಳು, (ದಲಾಲರು ಮತ್ತು ವ್ಯಾಪಾರಿಗಳು) ಕೂಡಿದ್ದರು; ಅಷ್ಟೇ ಅಲ್ಲ; ಮರಾಠರು, ನಾಯರರು, ರಜಪೂತರು ಮುಂತಾದ ಯುದ್ಧಪ್ರಿಯ ಜಾತಿಗಳವರೂ ಇದ್ದರು. ಅಲ್ಲದೆ, ಹಾಲಕ್ಕಿ ಒಕ್ಕಲು, ಗಾಮೊಕ್ಕಲು, ನಾಡವರು, ಸುದಿರರು, ಕರಿಯೊಕ್ಕಲು. ಘಾದಿಗಳು(ಭವಿಷ್ಯ ಹೇಳುವವರು), ಕುಣಬಿಗಳು, ಜೈನರು, ಪಡ್ತಿಗಳು. ಪಂಚಮ ಸಾಲಿಗಳು, ಅರೆ ಮರಾಠರು, ಛೇತ್ರಿಗಳು(ದುಡಿತಗಾರರು), ಸೊನಗಾರರು, ಸುತಾರರು(ಬಡಿಗರು), ಕುಂಬಾರರು, ಶಿಂಪಿಗಳು, ಲೋಹಾರರು(ಕಮ್ಮಾರರು), ಕಾಸಾರರು(ತಾಮ್ರದ ಕೆಲಸ ಮಾಡುವವರು), ಗೌಂಡಿಗಳು (ಕಲ್ಲು ಕಡಿಯುವವರು), ತೇಲಿಗರು(ಗಾಣಿಗರು), ಹಳೆಯ ಪೈಯಿಕರು, ಭಂಡಾರಿಗಳು, ಕುಮಾರಪಯಿಕರು(ಕಳ್ಳು ತೆಗೆಯುವವರು), ಗೌಳಿಗಳು(ದನಗಾಹಿಗಳು), ಗೊಲ್ಲರು(ದನ ಸಾಕುವವರು), ಧನಗರರು(ಕುರಿವಾಹಿಗಳು), ಹರ್ಕಂತರು, ಅಂಬಿಗರು, ಮೊಗೇರರು, ಗಾಬಿತರು, ಖಾರವಿಗಳು(ಕಾರವೀರರು), ಭೋಯಿಗಳು, ಕೋಳಿಗಳು(ಮೀನುಗಾರರು), ಹಾಲ್ಲೇರ ವಾಜಂತ್ರಿಗಳು, ದೇವಡಿಗರು, ಭಂಡಾರಿ ವಾಜಂತ್ರಿಗಳು(ಸಂಗೀತಗಾರರು),ಕಲಾವಂತರು(ಗಾಯಕ-ನರ್ತಕರು), ಬಾಂದಿಗಳು(ಸೇವಕರು), ಪರಿತರು(ಅಗಸರು), ಹಜಾಮರು, ಪಡಿಯಾರರು(ಸೇವಕರು), ದೇವಳಿಗಳು (ದೇವಸ್ಥಾನದ ಚಾಕರರು), ಕೊರಚರು(ದನಕರು ಹಾಕಿಸುವವರು), ಲಂಬಾಣಿಗಳು(ಹೊರೆ ಹೊರುವವರು), ಗೋಸಾವಿಗಳು, ಜೋಗಿಗಳು(ಭಿಕ್ಷುಕರು), ಚಮಗಾರರು, ಮಾದಿಗರು(ಚರ್ಮ ಹದಮಾಡುವವರು), ಮುಕರಿಗಳು. ಅಗೇರರು, ಚೆಲುವಾದಿಗಳು. ಹಸಲರು, ಮಹಾರರು(ಹಿಂದುಳಿದವರು). ಅಂದಿದ್ದ ಒಟ್ಟು ಹಿಂದು ಜಾತಿ ಸಂಖ್ಯೆ ೬೨. ಚತುಃಷಷ್ಟಿಯಾಗಲು ಇನ್ನೆರಡು ಮಾತ್ರ ಕಡಿಮೆ!



[ಆಕರ: ಉ.ಕ. ದರ್ಶನ, ಕ.ಸಾ.ಪ. ಬೆಂಗಳೂರು-೧೯೮೬]

# ೫. ಸಿದ್ದಾಪುರದ ಚಾರಿತ್ರಿಕ ಹಿನ್ನಲೆ

ಶಿರಸಿಗೆ ಸುಧಾಪುರ ಹೇಗೋ ಸಿದ್ದಾಪುರಕ್ಕೆ ಬಿಳಗಿ ಹಾಗೆ. ಬಿಳಿಗಿಯು ಶ್ವೇತಪುರ. ಅದರ ನಾಯಕತ್ವವು ಕ್ರಿ.ಶ.೧೪೦೦ರಿಂದ ಆಂಡಣ್ಣನೆಂಬವನ ಮೂಲಕ ಪ್ರಾರಂಭವಾಯ್ತು. ಅವನದು ಜೈನ ಸಂಪ್ರದಾಯ. ಅವನು ವಿಜಯನಗರದ ಸಾಮಂತನಾದವನು. ಅವನ ತಲೆಮಾರಿನವರು ೧೭೬೩ರವರೆಗೆ ಸಿದ್ದಾಪುರ ಪ್ರದೇಶವನ್ನು ಆಳಿದರು. ೧೭೬೩ರಲ್ಲಿ ಹೈದರನು ಸಿದ್ದಾಪುರ ರಾಜ್ಯದ ಅಧಿಪತ್ಯವನ್ನು ಕಸಿದುಕೊಂಡು ಅಲ್ಲಿಯ ರಾಜವಂಶಕ್ಕೂ, ರಾಜಧಾನಿಗೂ ಇತಿಶ್ರೀ ಬರೆದನು. ಅನಂತರ ಹೈದರ, ಟೀಪು, ಬ್ರಿಟಿಷರ ಹಾಗೂ ಸ್ವದೇಶೀಯರ ಆಳಿಕೆಗಳು.

ಕ್ರಿ.ಶ.೧೪೦೦ಕ್ಕಿಂತ ಹಿಂದೆ ಮೇಲೆ ಹೇಳಿದ ಪ್ರದೇಶಕ್ಕೆ ಪ್ರತ್ಯೇಕ ರಾಜಕೀಯ ಅಸ್ತಿತ್ವವಿದ್ದಂತಿಲ್ಲ. ಹಿಂದೆ ಹಿಂದಕ್ಕೆ ಹೋದ ಹಾಗೆ ಅನುಕ್ರಮವಾಗಿ ಅಶೋಕ, ಶಾತವಾಹನ, ಕದಂಬ ಮಯೂರಶರ್ಮ, ಚಾಲುಕ್ಯ, ರಾಷ್ಟ್ರಕೂಟ, ಚಾಲುಕ್ಯ, ಸೇವುಣ ಹಾಗೂ ವಿಜಯನಗರದರಸರು ಇವರ ವಂಶಜರ ಚಕ್ರಾಧಿಪತ್ಯದಲ್ಲಿ ಶ್ವೇತಪುರಭಾಗವು ಸೇರಿಹೋಗಿತ್ತು. ಇನ್ನೊಂದು ಕ್ರಮದಿಂದ ಸಾಮಂತಿಕೆಯಲ್ಲಿ ಗೇರುಸೊಪ್ಪೆಯ ಹೈವರಸರು ೧೩೭೮ರಿಂದ ಸಿದ್ದಾಪುರ ಕ್ಷೇತ್ರವನ್ನು ತಮ್ಮ ರಾಜ್ಯದ ಅಂಗವನ್ನಾಗಿ ಮಾಡಿಕೊಂಡರೆಂದು ತೋರುತ್ತದೆ. ಅವರ ಆಳಿಕೆ ಮುಗಿದದ್ದು ೧೬೦೬ರಲ್ಲಿ. ಆದರೆ ಈ ನಡುವೆ ೧೫೫೫ರಿಂದ ಸುಧಾಪುರದ ಅರಸಪ್ಪ ನಾಯಕನ ಆಳಿಕೆ ಶಿರಸಿ ಮಂಡಲದಲ್ಲಿ ಆರಂಭವಾಗಿ ಅವರ ವಂಶಜರ ಆಳಿಕೆಯು ೧೭೬೩ರಲ್ಲಿ ಕೊನೆಗೊಂಡಿತು. ಎರಡನೆಯ ಘಂಟಣ್ಣನೆಂಬ ಶ್ವೇತಪುರದರಸನು ಅರಸಪ್ಪ ನಾಯಕನ ಮಗಳ ಗಂಡನಾದನು. ಅರಸಪ್ಪ ನಾಯಕನು ವಿಜಯನಗರದ ಪ್ರಧಾನಿಯ ತಂಗಿಯ ಮಗನೆಂದು ಪ್ರತೀತಿಯಿದೆ. ಆದರೆ ಶ್ವೇತಪುರದ ಪ್ರಥಮ ರಾಜನಾದ ಆಂಡಣ್ಣನ ಪೂರ್ವಜರ ಚರಿತ್ರೆ ಅನುಪಲಬ್ಧ. ಅವನ ಮುಂದಿನ ಗಣ್ಯರು–

ಆಂಡಣ್ಣ (೧೪೦೦/೧೪೭೫?)

|

ಪಾರ್ಶ್ವಭೂಪ

|

ಮುಂಡಣ್ಣ (೧೪೯೦)

|

ಕಲ್ಲಪ್ಪ

|

ಒಂದನೆಯ ನರಸಿಂಹ
|
ಒಂದನೆಯ ಘಂಟಣ್ಣ
|
ಎರಡನೆಯ ನರಸಿಂಹ
|
ವೀರಪ್ಪ
|
ರಂಗರಾಜ (೧೫೭೦)
|
ಎರಡನೆಯ ಘಂಟಣ್ಣ (೧೫೫೬/೧೫೮೦–೧೬೦೪)
|
ಮೂರನೆಯ ಘಂಟಣ್ಣ

ಬಿಳಿಗಿಯ ಒಂದನೆಯ ನರಸಿಂರಾಜನು ವಿಜಯನಗರದ ಶ್ರೀ ಕೃಷ್ಣದೇವರಾಯನ ಸಾಮಂತ(೧೫೦೯–೧೫೨೯) ಎರಡನೆಯ ನರಸಿಂಹರಾಜನು ತಿಮ್ಮರಸನ ತಮ್ಮನೆಂದು ಹೇಳಲಾಯಿತು. ರಂಗರಾಜನು ಎರಡನೆಯ ಭಟ್ಟಾಕಲಂಕ ಗುರುವಿನ ಶಿಷ್ಯ. ಎರಡನೆಯ ಘಂಟೇಂದ್ರ(ಘಂಟಣ್ಣ) ವಿಜಯನಗರದ ವೆಂಕಟಪತಿರಾಯನ ಸಮಕಾಲೀನ(೧೫೮೬–೧೬೧೪), ತಿಮ್ಮರಸನು ಒಂದನೆಯ ಭಟ್ಟಾಕಲಂಕ ಗುರುವಿನ ಶಿಷ್ಯ. ಭಟ್ಟಾಕಲಂಕ ಗುರುಪರಂಪರೆ ಆರಂಭವಾದದ್ದು ಕ್ರಿ.ಶ.೭೫೦ರಲ್ಲಿ ಎಂದು ಡಾ॥ ಶ್ರೀಕಂಠ ಶಾಸ್ತ್ರಿಗಳು ಹೇಳಿರುವುದು ನಿಜವಾದರೆ ಇಲ್ಲಿ ಎರಡನೆಯ ಭಟ್ಟಾಕಲಂಕನೆಂದು ಹೇಳಲ್ಪಟ್ಟವನು ಆರನೆಯ ಭಟ್ಟಾಕಲಂಕನಾಗಬೇಕಾಗುತ್ತದೆ. ಅವನ ಕಾಲ ೧೬೦೦. ಅವನು ತರ್ಕ ವ್ಯಾಕರಣಗಳಲ್ಲಿ ಅದ್ವಿತೀಯ ಪಂಡಿತ. ಅವನ ಮೂಲಸ್ಥಳವು ಹಾಡುವಳ್ಳಿ. ಒಂದನೆಯ ಭಟ್ಟಾಕಲಂಕನ ಚರಿತ್ರೆಯ ಆದಿಯು ಸುಧಾಪುರದಲ್ಲಿ (೮ನೆಯ ಶತಮಾನದಲ್ಲಿ) ಅಭ್ಯಸನೀಯ.

ಕರ್ನಾಟಕದ ಅನೇಕ ಅರಸರ ಮತಧರ್ಮವು ಎಂದೂ ಖಾತ್ರಿಯಾದದ್ದಲ್ಲ. ಅವರು ಹಿಂದುಗಳು. ಪ್ರಸಿದ್ಧಿಗೆ ಬಂದ ಎಲ್ಲ ಗುರುಗಳಿಗೂ ಅವರು ಶಿಷ್ಯರೆಂದು ಹೇಳಿಕೊಳ್ಳುತ್ತಿದ್ದರು. ಆದುದರಿಂದ ಶ್ವೇತಪುರದ ಅರಸನ ವಂಶದಲ್ಲಿ ಜೈನೇತರರಾದ ನರಸಿಂಹನೂ ರಂಗರಾಜನೂ ನಡುವೆ ಸೇರಿಕೊಂಡರು. ಅಂದರೆ ಇಂದಿನ

---

* ಬಿದನೂರಿನ ವೆಂಕಟಪ್ಪ ನಾಯಕನು ೧೬೦೬ರ ಅನಂತರ ಸುಧಾಪುರದ ಮೇಲಧಿಕಾರವನ್ನು ಗೇರುಸೊಪ್ಪೆಯ(ನಗರಬಸ್ತಿ ಕೇರಿಯ) ಆಳಿಕೆಯನ್ನೂ ಪಡೆದನು. ಆ ಕೆಳದಿ ಅರಸರ ಮೇಲಾಳಿಕೆಯು ೧೭೬೩ರಲ್ಲಿ ಮುಕ್ತಾಯವಾಯಿತು. ಹೈದರನು ದಕ್ಷಿಣಾಪಥದ ಚಕ್ರವರ್ತಿಯಾದದ್ದು ಅಂದಿನಿಂದಲೇ ಎಂದು ಹೇಳಬಹುದು.

ರಾಷ್ಟ್ರನಾಯಕರಿಗಿಂತ ಅಂದಿನವರು ಹೆಚ್ಚು 'ಸೆಕ್ಯೂಲರ್' ಸರ್ವಧರ್ಮ ಗೌರವದಾನಿಗಳಾಗಿದ್ದರು ಎನ್ನಬಹುದು.

ಪ್ರಾಚೀನ ಹಾಗೂ ಮಧ್ಯ ಯುಗಗಳಲ್ಲಿ ಪ್ರಜೆ ಪ್ರಭುಗಳ ಎಲ್ಲ ವ್ಯವಹಾರಗಳೂ ಧರ್ಮದ ಮಾಧ್ಯಮದ ಮೂಲಕವಾಗಿಯೇ ನಡೆಯುತ್ತಿತ್ತು. ಬಿಳಿಗಿಯ ರತ್ನತ್ರಯ ಬಸದಿಯ ಮೂರು ರತ್ನಗಳೆಂದರೆ ಶ್ರದ್ಧೆ, ಕರ್ಮ ಮತ್ತು ಜ್ಞಾನ. ದಕ್ಷಿಣಭಾರತದ ಆಡಳಿತ ವರ್ಗದಲ್ಲಿ ಬರುವವರು ೧) ಮಹಾಮಾತ್ರರು, ಅಮಾತ್ಯರು ಅಥವಾ ವ್ಯಾಪೃತರು. ಅವರು ಅಂದಿನ ಡೆಪ್ಯುಟಿ ಕಮಿಶನರರು. ರಾಜಾಮಾತ್ಯರು ಅವರಿಗಿಂತ ಮೇಲಿನವರು. ೨) ಸೇನಾಗೋಪನೆಂದರೆ ಸೇನಾಪತಿ, ಅಶ್ವವಾರಕನು ಅಶ್ವಸೇನಾಪತಿ. ೩) ಮಹಸೇನಾಪತಿಯು ಸೇನಾಗೋಪರಿಗಿಂತ ಮೇಲಿನವನು. ಅಂದು ರಾಷ್ಟ್ರವೆಂದರೆ 'ಆಹಾರ' ಅಥವಾ ಜಿಲ್ಲೆ. ಮಹಾತಲವರನು(Lord Chief Justice) ಸುಪ್ರೀಮ್‌ಕೋರ್ಟಿನ ಮುಖ್ಯ ನ್ಯಾಯಾಧೀಶನು. ಮಹಾರಥಿಗಳೂ, ಮಹಾಭೋಜರೂ, ಸಾಮಂತರು ಅಥವಾ ಮಂಡಲೇಶ್ವರರು, ನಗರಸ್ವಾಮಿಯು ನಗರಾಧ್ಯಕ್ಷನು.

ಅಂದಿನ ರಾಜಸಭೆಯಲ್ಲಿ ನಾಲ್ಕು ಜನ ಮಂಡಲೇಶ್ವರರೂ, ಹನ್ನೆರಡು ಜನ ಮಾಂಡಲಿಕರೂ, ಹದಿನಾರು ಜನ ಮಹಾಸಾಮಂತರೂ, ಮೂವತ್ತೆರಡು ಜನ ಸಾಮಂತರೂ, ೧೬೦ ಜನ ಲಘುಸಾಮಂತರೂ, ೪೦೦ ಜನ ಚಾತುರ್ ಮಾಸಿಕರೂ, ಹಲವಾರು ರಾಜಪುತ್ರರೂ ಇರುತ್ತಿದ್ದರು. ಇದು ಚಕ್ರವರ್ತಿಯ ಒಡ್ಡೋಲಗ; ದಕ್ಷಿಣಭಾರತದಲ್ಲಿ ಅದು ಹೀಗಿತ್ತು. The Government which rules least rules best ವಿದೇಶ ವ್ಯವಹಾರ, ಸೈನ್ಯಾಧಿಕಾರ ಆಂತರಿಕ Law and order ಕಾಯದೆ ಸುವ್ಯವಸ್ಥೆಗಳಷ್ಟನ್ನೇ ನೋಡಿಕೊಳ್ಳುತ್ತಿದ್ದ ಚಕ್ರವರ್ತಿಗಳ ದಯೆಯಿಂದ ಸಾಮಂತರು ನೂರಕ್ಕೆ ತೊಂಬತ್ತೇಳರಷ್ಟು ವಿಷಯಗಳಲ್ಲಿ ತಮ್ಮ ಸತ್ ಪರಂಪರೆಯನ್ನು ಅನುಸರಿಸಿ ರಾಜ್ಯಭಾರ ಮಾಡಲು ಸಮರ್ಥರಾಗಿದ್ದರು. ಆದ್ದರಿಂದ ಶ್ವೇತಪುರದರಸರು ಇಷ್ಟಾಪೂರ್ತಗಳನ್ನು Public worksಯಥೇಷ್ಟವಾಗಿ ಮಾಡಿದರು. ಅದರಿಂದ ಸಿದ್ದಾಪುರ ಮಂಡಲವು ಸಂಪತ್‌ಸಮೃದ್ಧವಾಯಿತು. ವರ್ಣಜಾತಿಗಳು ಸಮಾಜದಲ್ಲಿ ಪ್ರಮುಖತ್ವವನ್ನು ಪಡೆದು ತೃಪ್ತವಾಗಿದ್ದವು. ಅದರೆ ಹೈದರನಿಗಿಂತಲೂ ಮೊದಲು ಕರ್ನಾಟಕದ ರಾಜಧಾನಿಗಳೆಲ್ಲವನ್ನೂ (ಹೊಯ್ಸಳರ ವಂಶದ ಅಳಿಕೆ ಕರ್ನಾಟಕದಲ್ಲಿ ಮುಗಿದ ಕೂಡಲೇ) ಮಲ್ಲಿಕ್ ಕಾಫರನು ನಾಶಗೊಳಿಸಿದ್ದು, ಅವನ ಬಿರುಗಾಳಿ ದಾಳಿಯಿಂದ ಎಂಬುದು ಪ್ರಸಿದ್ಧ. ನಮ್ಮ ಇತಿಹಾಸಾವಶೇಷಗಳನ್ನು ಬಹಳ ಕಡಿಮೆಮಾಡಿದ್ದು, ಕೆಲ ಮುಸಲ್ಮಾನ ಅರಸರ ದಾಳಿಗಳು ಎಂಬುದು ಸುಪ್ರಥಿತ.

ಬಿಳಗಿಯ ಅರಸರು ಮೊದಲು ಜೈನರಾದರೂ ಕೊನೆಗೆ ಸೋದೆಯ ಅರಸರಲ್ಲಿಯ ಕೊನೆಯವರಂತೆ ಕೆಳದಿಯ, ಇಕ್ಕೇರಿಯ, ಬಿದನೂರಿನ ಅರಸರ ಸ್ಮಾರ್ತೋನ್ಮುಖವಾದ ವೀರಶೈವ ಮತವನ್ನು ಸೇರಲು ಅವರ ವೈವಾಹಿಕ ಸಂಬಂಧಗಳೇ ಕಾರಣಗಳಾದವು ಎನ್ನಬಹುದು. ಆದರೆ ಮೊದಲೇ ಹೇಳಿದಂತೆ ಅವರು ಮತಾಂಧರಾಗದೆ ಸರ್ವಮತಸ್ಥ ಪ್ರಜೆಗಳನ್ನು ಸಮಾನದೃಷ್ಟಿಯಿಂದ (ಎಲ್ಲ ವ್ಯವಹಾರಗಳಲ್ಲೂ) ನಡೆಸಿಕೊಳ್ಳುತ್ತಿದ್ದರು.

ಹಿಂದೆ ಕೊಟ್ಟದ್ದು ಬಿಳಿಗಿಯ ಆಳರಸರಲ್ಲಿ ಗಣ್ಯರಾದವರ ಪಟ್ಟಿ. ಆಂಡಣ್ಣ, ಪಾರ್ಶ್ವಭೂಪರ ಅನಂತರ ಅವರ ವಂಶಜರ ಪೂರ್ಣಪಟ್ಟಿ ಇಂತಿದೆ–



ಶ್ವೇತಪುರಾಧೀಶ್ವರರ ಬಿರುದು ಮಲೆಯ ಹುಲಿ ಉಗ್ರ ಮರ್ಕ ಕೋಲ ಎಂಬುದಾಗಿತ್ತಂತೆ.

ಸಿದ್ದಾಪುರದ ಶಿಲಾ ಶಾಸನಗಳತ್ತ ನೋಡಿದರೆ ತಮಡಿ ಕಲ್ಲಾಳದ ೧೦೭೧ರ ಶಿಲಾಶಾಸನವು ಬನವಾಸಿಯ ಸಾಮಂತ ಕದಂಬ ಕೀರ್ತಿವರ್ಮನ ಪರವಾಗಿಯೂ ಉದಯಾದಿತ್ಯನ ವಿರುದ್ಧವಾಗಿಯೂ ಯುದ್ಧ ಮಾಡಿ ಮಡಿದ ವೀರನ ಸ್ಮಾರಕವನ್ನು ಉಲ್ಲೇಖಿಸುತ್ತದೆ. ಅಲ್ಲಿಯ ಇನ್ನೊಂದು ಶಾಸನವು ಶಿರಸಿಯಲ್ಲಿ ಸಿರಿವೂರ ಬೀರಣ್ಣನು ಕದಂಬ ತೈಲಪನ ವಿರುದ್ಧವಾಗಿಯೂ ಕದಂಬ ಚಟ್ಟಯ್ಯ ದೇವನ ಪರವಾಗಿಯೂ ಯುದ್ಧ ಮಾಡಿ ಮಡಿದ ಸಂಗತಿಯನ್ನು ಹೇಳುತ್ತದೆ. ಅದರ ಕಾಲ ೧೦೭೨(ಕ್ರಿ.ಶ.)

ಕ್ರಿ.ಶ.೧೧೪೮ರ ಕೊಂಡ್ಲಿ ಶಾಸನದಲ್ಲಿ ವೀರಮರಣ ಹೊಂದಿದ ಮಾಚಗೌಡನ ಹೆಸರಿದೆ. ೧೧೯೮ರ ಬೇಡಕಣಿಯ ಶಾಸನವು ಬಲ್ಲಾಳರಾಯನ ದಾಳಿಯಲ್ಲಿ ಬೊಮ್ಮಯ್ಯ ನಾಯಕನು ಯುದ್ಧಮಾಡಿ ಮಡಿದನೆಂದಿದೆ. ಹೊಸೂರಿನ ಶಾಸನವು ಗಂಗಯ್ಯ ಶಾಹಣಿಯ ಮರಣವನ್ನು ಉಲ್ಲೇಖಿಸುತ್ತದೆ. ೧೨೭೯ರ ಬೇಡಕಣಿ ಶಾಸನವು ಶಿರಸಿಯನ್ನು ವೀರಸಂಗಣ್ಣನು ವಶಪಡಿಸಿಕೊಳ್ಳಬಂದಾಗ ಸಿಂದದ ಬೊಮ್ಮಯ ನಾಯಕನು ಅವನನ್ನು ಎದುರಿಸಿ ವೀರ ಸ್ವರ್ಗಕ್ಕೆ ಹೋದ ಉಲ್ಲೇಖವಿದೆ.

ರಾಜಮಾತೆ ಜಟ್ಟಮ್ಮನು ವಿಘ್ನೇಶ್ವರ ದೇವರಿಗೆ ದತ್ತಿ ಬಿಟ್ಟಿದ್ದನ್ನು ಉಕ್ತ ದೇವಸ್ಥಾನದ ೧೬೫೧ರ ಶಾಸನವು ತಿಳಿಸುತ್ತದೆ. ೧೪೩೭ರ ಬೇಡಕಣಿಯ ಶಾಸನವು ರಾಮಗೌಡನ ಮರಣಾನಂತರ ಅವನ ಪತ್ನಿಮಸಣಿ ಗೌಡಿಯು ಸಹಗಮನಮಾಡಿದಳೆಂದು ಹೇಳುತ್ತದೆ. ಮತ್ತೊಂದು ಶಾಸನವು ಕೇಶವ ದೇವನ ಆಜ್ಞೆಯು ಪ್ರಕಾರ ರೇವಣ ದೇವನು ಗೋವಿಂದಾಶ್ರಮಕ್ಕೆ ಮನೆಯೊಂದನ್ನು ದಾನಮಾಡಿದನೆನ್ನಲಾಗಿದೆ. ಇನ್ನೊಂದು ಘಂಟಪ್ಪನಾಯಕರ ತಿಮ್ಮಯ್ಯನು ದೇವರಿಗೆ ನಮಸ್ಕಾರ ಮಾಡಿದ್ದನ್ನು ತಿಳಿಸುತ್ತದೆ. ಓದಲು ಬಾರದಂತೆ ಹಾಳಾಗಿರುವ ಶಾಸನಗಳು ಸಿದ್ದಾಪುರ ತಾಲೂಕಿನಲ್ಲಿ ಹಲವಾರು ಇವೆ. ಸಾಮಾನ್ಯವಾಗಿ ಗುರುತಿಸಲಾದ ಶಾಸನಗಳು ಹನ್ನೊಂದನೆಯ ಶತಮಾನದಿಂದ ಹದಿನೇಳನೆಯ ಶತಮಾನದವರೆಗಿನ ಕೆಲಸಂಗತಿಗಳನ್ನು ತಿಳಿಸುತ್ತವೆ. ಅವುಗಳಲ್ಲಿ ಒಂದಕ್ಕೊಂದು ಸಂಬಂಧ ತೋರದು. ಅವು ಸಾಮಾನ್ಯವಾಗಿ ಅರಸರ ಪರವಾಗಿ ಹೋರಾಡಿಮಡಿದವರ ಸ್ವಾಮಿಭಕ್ತಿಯನ್ನು ವ್ಯಕ್ತಪಡಿಸುತ್ತವೆ; ದೈವ ಭಕ್ತಿಯೇನೂ ಕಡಿಮೆಯಾಗಿರಲಿಲ್ಲ!

ಶ್ವೇತಪುರದ ಅರಸರ ಆಳಿಕೆ ಸುಮಾರು ಮೂರುನೂರಾ ಅರವತ್ತೂರು ವರ್ಷಗಳು. ಸುಮಾರು ಹದಿನಾಲ್ಕು ಜನ ದೊರೆಗಳು ಆಳಿದರು. ಒಬ್ಬೊಬ್ಬರ ಸರಾಸರಿ ಆಳಿಕೆ ಸುಮಾರು ೨೬ ವರ್ಷಗಳಷ್ಟು. ಮೂರೂವರೆ ಶತಮಾನಗಳ ಆಳಿಕೆ ಒಂದು ರಾಜವಂಶದವರಿಗೆ ಕೀರ್ತಿಕರ ಎನ್ನಬೆಕು. ಕೊನೆಯ ಅರಸರು ಇತರ ಅರಸರ ಅಡಿಯಾಳುಗಳಾಗುತ್ತ ಹೋದದ್ದು ವಂಶದ ಪ್ರಶಾಸನದ ಅಂತ್ಯಕಾಲಕ್ಕೆ ನಾಂದಿ. ಬಿಳಿಗಿಯ

ಅರಸರ ವಂಶದಲ್ಲಿ ಹುಟ್ಟಿದ ಸಿದ್ದಮ್ಮಾಜಿ ಎಂಬ ರಾಣಿಯ ದೆಸೆಯಿಂದ ಸಿದ್ದಾಪುರಕ್ಕೆ ಆ ಹೆಸರು ಬಂದಿತಂತೆ.

ಸಿದ್ದಾಪುರ ತಾಲೂಕಿನ ವಿಸ್ತೀರ್ಣ ೩೩೩ ಚದುರ ಮೈಲುಗಳು. ೧೯೬೭ರಲ್ಲಿ ಅದರ ಜನಸಂಖ್ಯೆ ೬೧೫೬೦. ಈಗ ಅದು ೮೦ ಸಾವಿರಕ್ಕೆ ಮುಟ್ಟಿದೆ ಎನ್ನುವವರುಂಟು. ಸಮುದ್ರ ಮಟ್ಟದಿಂದ ಅದು ೧೮೦೦ ಅಡಿ ಎತ್ತರದಲ್ಲಿದೆ. ಅದರ ಹಳ್ಳಿಗಳ ಸಂಖ್ಯೆ ೨೦೨.

ಸಿದ್ದಾಪುರವು ಮಲೆನಾಡ ಅಂಗ ಆದುದರಿಂದ ೧೬೦೬ರಿಂದ ಅದು ಬಿದನೂರಿನ(ಕೆಳದಿಯ) ಅರಸರ ಆಳಿಕೆಗೆ ಒಳಪಟ್ಟಿತೆಂದು ಹೇಳಲಾಯಿತು. ಬಿಳಗಿಯ ಅರಸರು ಮತ್ತು ಸೋದೆಯ ಅರಸರು ಅವರ ಅಧೀನರಾದರು. ಬಿದನೂರಿನಿಂದ ಉತ್ತರ ದಕ್ಷಿಣಕನ್ನಡ ಜಿಲ್ಲೆಗಳನ್ನು ೧೬೨೯ರಿಂದ ೧೭೬೩ರವರೆಗೆ ಆಳಿದ ಅರಸರು ಇಂತಿದ್ದಾರೆ.

| | | |
|---|---|---|
| ದೊಡ್ಡ ಸಂಕಣ್ಣ ನಾಯಕ | : | ೧೫೮೬–೧೬೨೯ |
| ವೀರಭದ್ರ ನಾಯಕ | : | ೧೬೨೯–೧೬೪೫ |
| ಶಿವಪ್ಪ ನಾಯಕ | : | ೧೬೪೫–೧೬೬೦ |
| ಎರಡನೆಯ ವೆಂಕಟಪ್ಪ | : | ೧೬೬೦–೧೬೬೧ |
| ಭದ್ರಪ್ಪ ನಾಯಕ | : | ೧೬೬೨–೧೬೬೪ |
| ಸೋಮಶೇಖರ ನಾಯಕ | : | ೧೬೬೪–೧೬೭೧ |
| ಚೆನ್ನಮ್ಮಾಜಿ | : | ೧೬೭೧–೧೬೯೬ |
| ಬಸವಪ್ಪ ನಾಯಕ | : | ೧೬೯೬–೧೭೧೪ |
| ಎರಡನೆಯ ಸೋಮಶೇಖರ | : | ೧೭೧೪–೧೭೩೯ |
| ಬಸವಪ್ಪ ಮತ್ತು ಚೆನ್ನಬಸವಪ್ಪ | : | ೧೭೩೯–೧೭೫೭ |
| ವೀರಮ್ಮಾಜಿ | : | ೧೭೫೭–೧೭೬೩ |

ಈ ೧೨ ಅರಸರಲ್ಲಿ ಶಿವಪ್ಪನಾಯಕನು ಅತ್ಯಂತ ಪ್ರಸಿದ್ಧ. ಪೋರ್ಚುಗೀಸರೇ ಮೊದಲಾದ ವಿದೇಶೀಯರು ಇಲ್ಲಿ ಆಸ್ತಿಮಾಡಿಕೊಳ್ಳಲು ಬಿಡಲಾರದೆಂದು ಹೋರಾಡಿದ ದಾಕ್ಷಿಣಾತ್ಯರಲ್ಲಿಯ ಪ್ರಥಮ ರಾಷ್ಟ್ರಭಕ್ತ ಎಂದರೆ ಶಿವಪ್ಪನಾಯಕ. ಮಂಗಳೂರು ಮತ್ತು ಹೊನ್ನಾವರಗಳಲ್ಲಿ ಆ ಬಗ್ಗೆ ಅವನು ಕ್ರಮ ಕೈಗೊಂಡಿದ್ದನು. ಭೂಕಂದಾಯವನ್ನು 'ಶಿಸ್ತು' ಎನ್ನುತ್ತಿದ್ದ ಆ ಕಾಲದಲ್ಲಿ ಬಹುಕಾಲ ನಿಲ್ಲುವಂತೆ ಅದನ್ನು ನಿರ್ಧರಿಸಿ ಜಾರಿಗೆ ತಂದವನು ಶಿವಪ್ಪ ನಾಯಕ. ಅವನ ವಂಶದ ಮೂಲ ಪುರುಷನಾದ ಚೌಡನಾಯಕನು ೧೫೦೬ರಲ್ಲಿ ದೊರೆತನವನ್ನು ಆರಂಭಿಸಿ, ವಿಜಯನಗರದ ಸಾಮಂತನಾಗಿರುವುದನ್ನು

ಗೌರವಿಸಿ ಒಪ್ಪಿಕೊಂಡಿದ್ದೂ ವಿಜಯನಗರದ ಅರಸೊತ್ತಿಗೆ ದುರ್ಬಲವಾಗಿ ಹೋದಾಗ ಕೆಳದಿ, ಇಕ್ಕೇರಿ ಬಿದನೂರುಗಳಿಂದ ಆಳಿದ ಆತನ ವಂಶೀಯರು ವ್ಯಾವಹಾರಿಕವಾಗಿ ಸ್ವತಂತ್ರರೇ ಆಗಿದ್ದರು. ಶೃಂಗೇರಿ ಮಠದ ಗುರುಗಳು ವಿಜಯನಗರದರಸರಿಗೆ ಹೇಗೋ ಹಾಗೇ ಕೆಳದಿಯ ಅರಸರಿಗೂ ರಾಜಗುರುಗಳೂ ಸಲಹೆಗಾರರೂ ಆಗಿದ್ದರು. ಆದುದರಿಂದ ಟೀಪುಸುಲ್ತಾನ ಬರುವವರೆಗೂ (ಉತ್ತರ ದಕ್ಷಿಣ) ಕನ್ನಡ ಎಂಬ ಜಿಲ್ಲೆಯು ಸಾಂಪ್ರದಾಯಿಕವಾಗಿ ತನ್ನ ಕ್ಷೇಮಾಭಿವೃದ್ಧಿಯನ್ನು ಸಾಧಿಸುತ್ತಿತ್ತು. ಅವರಿಗೆ 'Kanara Kings ಕನ್ನಡದರಸರು' ಎಂಬ ಬಿರುದಿತ್ತು. ಸಿದ್ದಾಪುರವೂ ಅಂತಹ ಪ್ರಗತಿಶೀಲ ಮೇಲರಸರ ಯೋಜನೆಗಳಂತೆ ನಡೆದು ಆ ಕಾಲಕ್ಕೆ ತಕ್ಕ ಅಭಿವೃದ್ಧಿಯನ್ನು ಹೊಂದಿತು.

ಕಿತ್ತೂರ ಚೆನ್ನಮ್ಮನಿಗಿಂತಲೂ ಮೊದಲೇ ರಾಣಿ ಚೆನ್ನಮ್ಮಾಜಿಯು ಮಹಾರಾಷ್ಟ್ರದ ದೊರೆ ರಾಜಾರಾಮನಿಗೆ ರಕ್ಷಣೆಯಿತ್ತು ದಿಲ್ಲಿಯ ಬಾದಶಹ ಔರಂಗಜೇಬನು ಕುಪಿತನಾದರೂ ಏನೂ ಮಾಡದಂತೆ ಮಾಡಿದ್ದಳು ಎಂಬುದು ಅವಿಸ್ಮರಣೀಯ. ಅವಳ ರಾಜತಂತ್ರ ಕೌಶಲ ಅದ್ವಿತೀಯವಾಗಿತ್ತು. ಆದುದರಿಂದ ಶಿವಪ್ಪನನ್ನೂ, ಚೆನ್ನಮ್ಮಾಜಿಯನ್ನೂ ಕನ್ನಡ ಜಿಲ್ಲೆಯಲ್ಲಿ ಮರೆಯಕೂಡದು. ಅವರಿಗೆ ತಕ್ಕ ಸ್ಮಾರಕಗಳನ್ನು ಸಾಗರ, ಸಿದ್ದಾಪುರ ಮತ್ತು ಶಿರಸಿ ತಾಲೂಕಿನವರು ಇನ್ನು ಮುಂದಾದರೂ ರಚಿಸಿಯಾರು ಎಂದು ನಂಬುತ್ತೇನೆ.

ಕ್ರಿ.ಶ.೧೭೬೩ರಿಂದ ೧೮೦೦ರವರೆಗೆ ಹೈದರಾಲಿ ಮತ್ತು ಅವನ ಮಗ ಟೀಪುಸುಲ್ತಾನರು ಆಳಿದರೆಂದು ಹಿಂದೆ ಸೂಚಿಲಾಯಿತು. ಹೈದರನ ಕಾಲಕ್ಕಿಂತಲೂ ಟೀಪುವಿನ ಕಾಲದಲ್ಲಿ ಕನ್ನಡ ಜಿಲ್ಲೆಯ ಹಲವಾರು ಸಾಮುದ್ರಿಕ ಪಟ್ಟಣವಾಸಿಗಳು ಉಗ್ರಪ್ರಶಾಸನಕ್ಕೆ ಗುರಿಯಾದದ್ದು ಗಮನಾರ್ಹ. ಏಕೆಂದರೆ ಅಂಥ ಕೆಲ ಪಟ್ಟಣವಾಸಿಗಳು ಪೋರ್ಚುಗೀಸರೇ ಮೊದಲಾದ ವಿದೇಶಿಯರೊಡನೆ ಒಳಸಂಚು ಮಾಡುತ್ತಿದ್ದ ಸಂದರ್ಭಗಳು ಟೀಪುವಿನ ಕಿವಿಯನ್ನು ತಲುಪಿತಂತೆ.

ಕೆಳದಿಯ ಶಿವಪ್ಪನಾಯಕನು ಮಲೆನಾಡ ಹುಲಿಯಾಗಿದ್ದರೆ, ಟೀಪುವು ಮಹಾರಾಷ್ಟ್ರೇತರ ಕರ್ನಾಟಕದ ಹುಲಿಯಾಗಿದ್ದನು. ಬ್ರಿಟಿಷರನ್ನು ಭಾರತದಿಂದ ಹೊರಗಟ್ಟಲು ನಾಲ್ಕು ಬಾರಿ ವೀರಾವೇಶದಿಂದ ಹೋರಾಡಿದ ಶೃಂಗೇರೀಪ್ರಿಯನಾದ ಟೀಪುವಿನ ಸ್ವದೇಶಾಭಿಮಾನ ಸಿದ್ದಾಪುರದವರಿಗಷ್ಟೇ ಅಲ್ಲ, ದಾಕ್ಷಿಣಾತ್ಯರೆಲ್ಲರಿಗೂ ಅಭಿನಮಾನಾಸ್ಪದ. ಆದರೆ ಸ್ವಜನರು ಮಾಡಿದ ದ್ರೋಹದಿಂದ ಅವನು ಬ್ರಿಟಿಷರ ಕೈಯಲ್ಲಿ ಸಿಕ್ಕದಿದ್ದರೂ ವೀರಸ್ವರ್ಗವನ್ನು ಸೇರಿದ್ದು ಒಂದು ಪಾಠ. ಸ್ವಜನದ್ರೋಹ ಕರ್ನಾಟಕಕ್ಕೆ ಒಂದು ಶಾಪ. ಸಿದ್ದಾಪುರ ಅದಕ್ಕೆ ಅಪವಾದವಾಗಿಲ್ಲ. ಈ ಸಾಂಸ್ಕೃತಿಕ ಕಳಂಕವನ್ನು ತೊಳೆದುಕೊಳ್ಳುವ ವಿದ್ಯಾಭ್ಯಾಸ ನಮಗೆ ಬೇಕು. ಸಿದ್ದಾಪುರದ ಶಿಕ್ಷಣ ನೇತಾರರು ಅಂತಹ ಕ್ರಮಗಳನ್ನು ನೈತಿಕವಾಗಿ ತೆಗೆದುಕೊಂಡು ಇತರರಿಗೆ ಮಾರ್ಗದರ್ಶನ ಮಾಡಲೆಂದು ಹಾರೈಸುತ್ತೇನೆ.

ಟೀಪುವಿನ ಅನಂತರ ಬಂದದ್ದು ಬ್ರಿಟಿಷರ ಆಳಿಕೆ. ಅವರನ್ನು ಹೊಡೆದಟ್ಟುವ ಸತ್ಯಾಗ್ರಹ ಸಂಗ್ರಾಮದಲ್ಲಿ ಸಿದ್ದಾಪುರ, ಅಂಕೋಲೆಗಳು ಗಣ್ಯವೆನಿಸಿದವು. ಉತ್ತರಕನ್ನಡ ಜಿಲ್ಲೆಯ ಪ್ರಥಮ ಕಾಂಗ್ರೇಸ್ ಅಧ್ಯಕ್ಷರಾದ ಹೊನ್ನಾವರದ ದಿವಂಗತ ಎಸ್.ಎಸ್.ಶಾಸ್ತ್ರಿಗಳು ಸಿದ್ದಾಪುರ ಮೂಲದವರು. ಅವರ ನಾಯಕತ್ವವು ಅದ್ವಿತೀಯವಾಯಿತು. ಅವರು ಪ್ರಧಾನಿ ಮೊರಾರ್ಜಿಯವರ ಸಹಕಾರ್ಯಕರ್ತರಾಗಿದ್ದರೆಂದು ತಿಳಿದು ಬಂದಿದೆ. ಆ ಅಹಿಂಸಾತ್ಮಕ ಪ್ರತೀಕಾರದಲ್ಲಿ ಸಿದ್ದಾಪುರದ ಸ್ವಾತಂತ್ರ್ಯಸಂಗ್ರಾಮವೀರರೆಷ್ಟೋ ಜನ ಮನೆಮಾರುಗಳನ್ನು ಕಳೆದುಕೊಂಡರು.

ಕ್ರಿ.ಶ.೧೮೦೧ರಲ್ಲಿ ಸಿದ್ದಾಪುರ(ಬಿಳಿಗಿ) ಪ್ರದೇಶದಲ್ಲಿ ೧೪೦೭ ಭೂಮಾಲಿಕರಿದ್ದರೆಂದು ಬುಕಾನಿನ್ ಬರೆದಿಟ್ಟಿದ್ದಾನೆ. ಮನೆಗಳು ೨೫೯೩. ಅಲ್ಲಿಯ ಉತ್ಪನ್ನಗಳು ಇಂತಿದ್ದವು. ಉಪ್ಪು, ಹರಳೆಣ್ಣೆ, ಎಳ್ಳೆಣ್ಣೆ, ಹೊನ್ನೆಯೆಣ್ಣೆ, ತೆಂಗಿನೆಣ್ಣೆ, ಗಂಧದ ಎಣ್ಣೆ, ಮೆಣಸಿನಕಾಯಿ, ಹುಣಸೆಹಣ್ಣು, ಬೆಳ್ಳುಳ್ಳಿ, ನೀರುಳ್ಳಿ, ಸಾಸಿವೆ, ಕೊತ್ತುಂಬರಿ, ಅರಿಸಿನ, ತುಪ್ಪ, ಜೇನುತುಪ್ಪ, ಜೇನುಮೇಣ, ಹತ್ತಿ, ಗೋವೆಬೀಜ. ದಾಲಚಿನ್ನಿ, ಮಸಾಲೆಯ ದಿನಸುಗಳು, ಹೆಂಡ ಕಬ್ಬಿಣದ ಸರಳುಗಳು. ಕಬ್ಬಿಣದ ಪಾತ್ರೆಗಳು, ನೇಗಿಲಿನ ಅತ್ತಿಗಳು, ಕತ್ತ, ಬಿಳಿಯದಾರ, ರೇಶಿಮೆ, ಧೋತ್ರ, ಇತರ ಬಟ್ಟೆಗಳು, ಜಮಖಾನೆ, ಉಪ್ಪಿಗೆ ಹಾಕಿದ ಮೀನು, ಕೆಂಪುಬಣ್ಣ, ಬೆಲ್ಲ, ಸುಣ್ಣ, ಕುರಿಗಳು, ಗೋಣಿಚೀಲಗಳು, ಚಾಪೆಗಳು, ಬುಟ್ಟಿಗಳು, ಕೊಡೆಗಳು, ಭತ್ತ, ನವಧಾನ್ಯಗಳು, ದಪ್ಪಕಾಗದಗಳು, ಕಬ್ಬು, ಅಡಿಕೆ, ಕಲ್ಲಿನ ತಟ್ಟೆಗಳು, ಬಾಳೆಹಣ್ಣುಗಳು, ದನಕರುಗಳು, ಮಾವಿನಹಣ್ಣುಗಳು, ಹಲಸಿನಹಣ್ಣುಗಳು, ಗೋವೆಹಣ್ಣುಗಳು, ಮೆಣಸಿನಕಾಳು, ಏಲಕ್ಕಿ, ಜಾಯಿಕಾಯಿ, ಗಂಧದ ತುಂಡುಗಳು ಗಣ್ಯವಾದ ಉತ್ಪಾದನೆಗಳಾಗಿದ್ದವು. ಪ್ರಾದೇಶಿಕ ಬಳಕೆಯನ್ನು ಪೂರೈಸಿ ಅವುಗಳನ್ನು ಬೇರೆ ಕಡೆಗಳಿಗೆ ಮಾರಲಾಗುತ್ತಿತ್ತು.

ನಮ್ಮ ಹೊಸ ಸರಕಾರವು ನೀರಾವರಿ ಯೋಜನೆಗಳನ್ನು ದಯಪಾಲಿಸಿದರೆ ಉಕ್ತ ಸಾಮಗ್ರಿಗಳಲ್ಲಿ ಅನೇಕ ವಸ್ತುಗಳ ಉತ್ಪಾದನೆ ಹೆಚ್ಚಿ ಬಡತನವು ಅಳಿದೀತು. ಸಹಕಾರಿ ರಂಗದಲ್ಲಿ ಉಲ್ಲೇಖನೀಯ ಪ್ರಗತಿಯನ್ನು ಸಾಧಿಸಿದ ಸಿದ್ದಾಪುರವು ಅದನ್ನು ಇತರ ಉತ್ಪಾದಕ ಕ್ಷೇತ್ರಗಳಿಗೂ ಅನ್ವಯಿಸಿ ಜಿಲ್ಲೆಯ ಆರ್ಥಿಕ ಪ್ರಗತಿಗೆ ಮಾದರಿಯನ್ನು ಹಾಕಿಕೊಟ್ಟೀತು. ಸಹಕಾರಿ ಬ್ಯಾಂಕುಗಳು ಅಮೇರಿಕದ ಸಂಯುಕ್ತ ಸಂಸ್ಥಾನದಲ್ಲಿಯಂತೆ ಜನರಿಗೆ ಸರ್ವತೋಮುಖವಾದ ನೆರವನ್ನು ನೀಡುವ ಪ್ರಗತಿಶೀಲ ಯೋಜನೆಗಳನ್ನು ತಯಾರಿಸಿ ಜಾರಿಗೆ ತಂದರೆ ಸಿದ್ದಾಪುರದ ಇತಿಹಾಸವೇ ಬದಲಾದೀತು. ಅಲ್ಲಿಯ ಮಹಾತ್ಮಾಗಾಂಧಿ ಶತಮಾನ ಕಾಲೇಜಿನಲ್ಲಿ ವೃತ್ತಿ ಶಿಕ್ಷಣವನ್ನು ಪ್ರಾರಂಭಿಸಿರುವುದು ಸ್ತುತ್ಯ. ಎರಡರಿಂದ ಮುಂದೆ ಹತ್ತಾರು ಗಣ್ಯ ವೃತ್ತಿಗಳನ್ನು ಕಲಿಸುವ ವ್ಯವಸ್ಥೆ ಮಾಡಿದರೆ ತಾಲೂಕಿನ ನಿರುದ್ಯೋಗವು ನಾಪತ್ತೆಯಾದೀತು.

ಪ್ರಾರಬ್ಧಂ ಯನ್ ಮಯೂರೇಣ
ಕಾದಂಬೇನ ಪುರಾ ಧ್ರುವಂ ।
ಪ್ರಜೋತ್ಥಾನಂ ತದಸ್ಮಿಂಶ್ಚ
ಕಾಲೇ ಗಚ್ಛತು ಪೂರ್ಣತಾಂ ॥
ಆಂಡಣ್ಣ ನೀತಿಮಾರಭ್ಯ
ಶಿಕ್ಷಣೇ ಪರಿವರ್ತನಂ
ಸಾಧಯಂತೋ ಪ್ರಣೇತಾರಃ
ಪಾಲಯೇಯುಃ ಪ್ರಜಾಃ ಸದಾ ॥



[ಆಕರ: ಅರ್ಬನ್ ಬ್ಯಾಂಕ್, ಸಿದ್ದಾಪುರ ೧೯೭೯]

# ೬. ಹೊನ್ನಾವರದ ಚರಿತ್ರೆಯ ಸ್ಥೂಲಾವಲೋಕನ

ಕ್ರಿ.ಶ.೯೭೮ರ ಕೆಕ್ಕಾರು ಶಾಸನದಲ್ಲಿ ಹೊನ್ನಾವರದ ಹೆಸರು 'ಹೊನ್ನವೂರು' ಎಂದಿದೆ. ಅಲ್ಲಿ ಪೊನ್ನಮರಸನು ಶತ್ರುಸೈನ್ಯವನ್ನು ಹಿಂದಕ್ಕಟ್ಟಿದ ಉಲ್ಲೇಖವಿದೆ. ಅದಕ್ಕೂ ಹಿಂದಿನ ಕೆಕ್ಕಾರು ಶಾಸನದಲ್ಲಿ ಕೈಕಯ ವಂಶೋದ್ಭವನಾದ ಅಣ್ಣೆಯರಸನು ಪೈವಗುಂದ(ಹೈವಗುಂದ)ದ ದೊರೆಯಾಗಿದ್ದನೆಂದೂ ಅವನೂ ದಂತಿಗ, ಚುಟ್ಟ, ರಾಜ, ಬಂದಿಗಕೋಟಿಗ ಎಂಬ ಪಾಳೆಯಗಾರರೂ ಕಡತೋಕೆಯನ್ನು ಅಡವಾಗಿ ಹಿಡಿದುಕೊಂಡಿದ್ದುದರ ಉಲ್ಲೇಖವಿದೆ.

ಹೈಗುಂದವು ೮ನೆಯ ಶತಮಾನದಲ್ಲಿದ್ದ ಅಣ್ಣೆಯರಸನ ರಾಜಧಾನಿಯಾಗಿದ್ದರೆ, ೧೦ನೇ ಶತಮಾನದಲ್ಲಿ ಹೊನ್ನಾವರವು ಹೊನ್ನಮ್ಮನ ರಾಜಧಾನಿಯಾಗಿತ್ತು. ೧೦೮೬ರಲ್ಲಿ ಹೆಬ್ಬಾರನ ಕೆರೆಯ ಶಾಸನವು ಕಾಣಮಹಾಮಂಡಲೇಶ್ವರ ಮತ್ತು ಅವನ ರಾಣಿ ಬಮ್ಮಲದೇವಿಯರನ್ನು ಹೆಸರಿಸುತ್ತದೆ. ೧೦೭೯ರ ಹಳದೀಪುರದ ಶಾಸನವು ಕದಂಬಕಾವದೇವನು ಹೊನ್ನಾವರದ ದೊರೆಯಾಗಿದ್ದನೆಂದು ಹೇಳುತ್ತದೆ. ೧೦೮೩ರ ಧಾರೇಶ್ವರದ ಶಾಸನವು ಹೈವಣ್ಣರಸನನ್ನೂ ಚಟ್ಟಬ್ಬರಸಿಯನ್ನೂ ಹೆಸರಿಸುತ್ತದೆ. ಗುಂಡಬಳೆಯ ಶಾಸನವು ೧೦೬೪ರಲ್ಲಿ ಕದಂಬಮಲ್ಲಿದೇವನನ್ನೂ ಅವನ ಸಹೋದರ ತೈಲಹದೇವನನ್ನೂ ಉಲ್ಲೇಖಿಸುತ್ತದೆ.

ಹಾನುಗಲ್ಲಿನಲ್ಲಿ ಕದಂಬರ ಆಳಿಕೆ ಆರಂಭವಾದದ್ದು ಕ್ರಿ.ಶ.೯೬೭ರಲ್ಲಿ. ಈ ಅರಸರು ಹಾನಗಲ್ಲ ೫೦೦ ಬನವಾಸಿ ೧೨೦೦೦ ಮತ್ತು ಹೈವ ೫೦೦ ಎಂಬ ಮಂಡಲತ್ರಯದ ದೊರೆಗಳಾಗಿದ್ದರು. ಇವರ ವಂಶದಲ್ಲಿ ಮಲ್ಲಿದೇವ(೧೦೬೪), ತೈಲ(೧೦೪೮–೧೦೭೫), ಮಲ್ಲಿಕಾರ್ಜುನದೇವ(೧೧೩೨–೧೧೪೬), ತೈಲಮ(೧೧೪೬–೧೧೫೧), ಕಾವದೇವ(೧೧೮೦–೧೨೧೭), ಮಲ್ಲಿದೇವ(೧೨೧೭–೧೨೫೨) ಮತ್ತು ಕಾವದೇವ(೧೨೬೦–೧೩೧೫) ಎಂಬ ದೊರೆಗಳು ಖ್ಯಾತರಾಗಿದ್ದರು.

ಗೋವೆಯ ಕದಂಬ ಕಾವದೇವನು ಆಳಿದ್ದು ೧೨೬೦–೧೩೧೦ರ ನಡುವೆ.

ಕೋನಳ್ಳಿಯ ಶಾಸನವೊಂದರಲ್ಲಿ ಕದಂಬ 'ಚಕ್ರವರ್ತಿ' ವೀರ ಕಾವದೇವರಸನ ೫೪ನೆಯ ಆಡಳಿತ ವರ್ಷವನ್ನು ಉಲ್ಲೇಖಿಸಲಾಗಿದೆ. ನಗಿರೆಯ ಕೋಟಿಯರಸನು ಅವನನ್ನು ಸೋಲಿಸಿದನೆಂದೂ(ಮಲ್ಲಾಪುರ ಶಾಸನವು) ಅವನ ೫೬ನೆಯ ಆಡಳಿತ ವರ್ಷದಲ್ಲಿ ಶ್ರಮಣ ರಾಜನಾದ ನಾರಣದೇವರಸನು ಕಾವದೇವನನ್ನು ಕೊಂದನೆಂದು ಹೇಳಿದೆ. ಕ್ರಿ.ಶ.೧೨೩೬ರಲ್ಲಿ ಕಾವ(ಕಾಮದೇವ)ದೇವನು ಚಂದಾವರದಲ್ಲಿದ್ದುದು ಶಾಸನೋಕ್ತ. ಅವನು ೧೨೧೭ರಲ್ಲಿ ಹಾನುಗಲ್ಲನ್ನು ತ್ಯಜಿಸಿ ಚಂದಾವರಕ್ಕೆ ಬಂದು

ನೆಲೆಸಿರಬೇಕು. ೧೦೬೪ರಿಂದ(ಹಾನುಗಲ್ಲು ಮಲ್ಲಿದೇವ ಅರಸರ ಕಾಲದಿಂದ) ಇಡಿ ಹೈವವು ಕದಂಬರ ಆಡಳಿತಕ್ಕೆ ಸೇರಿರಬೇಕು. ಆದರೆ ಅದಕ್ಕೆ ಮೊದಲು ಅಣ್ಣೆಯರಸ, ಹೊನ್ನಮರಸರು ಹೊನ್ನಾವರ ತಾಲೂಕನ್ನೂ ಅದರ ದಕ್ಷಿಣದಲ್ಲಿರುವ ಕೆಲ ಊರುಗಳನ್ನೂ ಆಳುತ್ತಿದ್ದಿರಬೇಕು.

ಕೈಕಯ ಅಣ್ಣೆಯರಸನ ಆಳಿಕೆಗಿಂತ ಪೊನ್ನಮರಸನ ಆಳಿಕೆ ಹೆಚ್ಚು ಪ್ರಭಾವಿಯಾಗಿದ್ದುದರಿಂದ ಹೊನ್ನಾವರಕ್ಕೆ ಅವನ ಹೆಸರು ಜನಕವಾಯ್ತು. ಪೊನ್ನಮನು ಕದಂಬನಾಗಿರಲಿಕ್ಕಿಲ್ಲ. ಕ್ರಿ.ಶ.೯೭೮ರಿಂದ ೧೦೬೪ರವರೆಗೆ(ಅಂದರೆ ೮೬ ವರ್ಷಗಳ ಕಾಲ) ಹೊನ್ನಮನೂ ಅವನ ಅನಾಮಾಂಕತ್ವ ಮಗನೂ ಹೊನ್ನಾವರ ರಾಜ್ಯವನ್ನು ಆಳಿರಬಹುದಾಗಿದೆ. ಹಾನುಗಲ್ಲಿನ ಮಲ್ಲಿದೇವರಸನು ೧೦೬೪ರಿಂದ ಕದಂಬಾಧಿಕಾರವನ್ನು ಅಲ್ಲಿ ಸಂಸ್ಥಾಪಿಸಿರಬೇಕು. ಮಲ್ಲಿದೇವನು ಹೈವಾಧಿಕಾರಿ(ಹೈವ ಮಹಾ ಮಂಡಲೇಶ್ವರ)ಯಾಗಿ ಹಾನುಗಲ್ಲಿನ ರಾಜಧಾನಿಯನ್ನು ಬಿಟ್ಟು ಹೊನ್ನಾವರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಲು ಕ್ರಮಿಸಿರಬೇಕು. ಈ ಹೈವಕದಂಬನ ಸಂತತಿಯುವರು ದುರ್ಬಲರಾದಾಗ ಹಾನುಗಲ್ಲನ್ನು ೧೨೧೭ರಲ್ಲಿ ತ್ಯಜಿಸಿ ಕಾವ(ಕಾಮ)ದೇವನು ಹೈವವನ್ನು ತನ್ನ ಕೈಗೆ ತೆಗೆದುಕೊಂಡು ಆಳಲಾರಂಭಿಸಿರಬೇಕು. ಅವನ ಆಳಿಕೆಯ ೫೬ ವರ್ಷಗಳಲ್ಲಿ ಯಾರಿಗೂ ಕಪ್ಪಕಾಣಿಕೆಗಳನ್ನು ಕೊಡುವ ಅಗತ್ಯಬೀಳದುದರಿಂದ ಅವನು ತನ್ನನ್ನು 'ಚಕ್ರವರ್ತಿ' ಎಂದು ಕರೆದುಕೊಂಡಿರಬೇಕು!

ಗುಂಡಬಳೆಯ ಶಾಸನವೊಂದರಲ್ಲಿ ಕ್ರಿ.ಶ.೧೧೪೩ರಲ್ಲಿ ತ್ರಿಭುವನ ಮಲ್ಲ ಮಲ್ಲಿದೇವನು ತನ್ನ ರಾಜಧಾನಿಯಾದ ಸಿರಿಯೂರಿನಿಂದ ಹೈವ ೫೦೦ ಕೊಂಕಣ ೯೦೦ ಬನವಾಸಿ ೧೨೦೦೦ ಮತ್ತು ಸಾಂತಳಿಗೆ ೧೦೦೦ಗಳನ್ನು ಆಳುತ್ತಿದ್ದ ಉಲ್ಲೇಖವಿರುವುದರಿಂದಲೂ ಅವನು ಕದಂಬನೆಂದು ಹೇಳಿರುವುದರಿಂದಲೂ ಅವನು ಹೈವೀಕೃತ ಮಲ್ಲಿದೇವನ ಮೊಮ್ಮಗನಾಗಿರೇಕು. ಅವನು ೨ನೆಯ ಮಲ್ಲಿದೇವನೆಂದಿದೆ ಉಕ್ತಶಾಸನ. ತನ್ನ ವಂಶದ ಹಿರಿಯನನ್ನು ಚಂದ್ರನೆಂದು ಕರೆದುಕೊಂಡಿರುವುದು ನಿಜೇತಿಹಾಸವನ್ನು ಮರೆತು ತಾನು ಚಂದ್ರವಂಶದವನೆಂದು ಹೇಳಿಕೊಳ್ಳುವ ವಿಚಾರ ತಲೆಯಲ್ಲಿ ಮೂಡಿದುದರಿಂದ! ಚಂದ್ರನು ಶಿಶುಕಲಿ ಎಂಬ ಕೊಂಕಣ ನಗರದಲ್ಲಿ ಆಳುತ್ತಿದ್ದವನಂತೆ. ಸಿರಿಯೂರು ಶಿಶುಕಲಿಗಳೂ ಇಂದಿನ ಉತ್ತರಕನ್ನಡ ಜಿಲ್ಲೆಯಲ್ಲಿ ಗುರುತಿಸಲು ಸಾಧ್ಯವಾಗಿಲ್ಲ. ಬಹುಶಃ ಅವು ಚಂದ್ರಲೋಕದವುಗಳಾಗಿರಬಹುದು!

ಅಂತೂ ೧೩೦೦ರವರೆಗೆ ಹೊನ್ನಾವರವು ಕದಂಬರ ಆಳಿಕೆಗೆ ಒಳಪಟ್ಟಿತ್ತೆಂದು ಸ್ಥೂಲವಾಗಿ ಹೇಳಬಹುದು. ಆದರೆ ಊರ ಹೆಸರಿಗೆ ಕಾರಣನಾದವನು ಪೊನ್ನಮ(ಹೊನ್ನಮ). ಅವನೂ ಅವನ ಮಗನೂ ಆಳಿದ್ದು ಕೆಲವೇ ವರ್ಷಗಳಾದರೂ ಅವರ ಜನಪ್ರಿಯತೆ ಜನೋಪಕಾರಿತ್ವವನ್ನೂ ಆಧರಿಸಿತ್ತೆಂಬುದು ನಿಃಸಂಶಯ. ಪ್ರಾಚೀನ ಕದಂಬರ ಆಳಿಕೆ ಮುಗಿದದ್ದು ಕ್ರಿ.ಶ.೬೫೫ರಲ್ಲಿ. ಅನಂತರ ಚಾಲುಕ್ಯರ ದಾಳಿ ಪಡೆದ ಅವಧಿಯಲ್ಲಿ ಅಣ್ಣಿಯರಸನ ಹಿರಿಯರ ಕೈಗೆ ಹೊನ್ನಾವರ ಸೀಮೆವಶವಾಗಿರಬೇಕು.

ಆಮೇಲೆ ಪೊನ್ನಮನ ರಾಜ್ಯಭಾರದ ಬಳಿಕ ಹಾನುಗಲ್ ಕದಂಬರ ವಂಶದವರು; ಅನಂತರ ಗೇರುಸೊಪ್ಪೆಯ ಕೋಟೆನಾಯಕ. ಆಮೇಲೆ ಗೇರುಸೊಪ್ಪೆಯ ಜೈನರಾದ ಹೊನ್ನರಸ, ಹೈವರಸ, ಮಂಗರಸ,ಕೇಶವದೇವರಸ ಮುಂತಾದವರು ಹೊನ್ನಾವರ ರಾಜ್ಯವನ್ನು ೧೬೦೬ರವರೆಗೆ ಆಳಿದರು. ಆಮೇಲೆ ಬಂದದ್ದು ಕೆಳದಿ(ಬಿದನೂರು) ನಾಯಕರ ರಾಜ್ಯಭಾರ. ಅನಂತರ ೧೭೬೩ರಿಂದ ೧೭೯೯ರವರೆಗೆ ಹೈದರ–ಟೀಪುಗಳ ರಾಜ್ಯಪ್ರಶಾಸನ. ಮುಂದೆ ಆಂಗ್ಲಾಧಿಪತ್ಯ ಅಂದಿನಿಂದ ೧೮೬೨ರವರೆಗೆ. ಮಂಗಳೂರಿನಿಂದ ಕಾರವಾರದವರೆಗಿನ ಕನ್ನಡಜಿಲ್ಲೆಗೆ ಹೊನ್ನಾವರವು ಜಿಲ್ಲಾಧಾನಿಯಾಗಿತ್ತು.

೧೬ನೆಯ ಶತಮಾನದಲ್ಲಿ ಪೋರ್ಚುಗೀಸರು ಮತ್ತು ಇಂಗ್ಲೀಷರ ವ್ಯಾಪಾರ ಕೇಂದ್ರಗಳು ಹೊನ್ನಾವರದಲ್ಲಿದ್ದವು. ೧೫೯೯ರಲ್ಲಿ ಕ್ರೈಸ್ತರ ಚರ್ಚು ಇಲ್ಲಿ ಸ್ಥಾಪಿತವಾಯ್ತು. ೧೭೮೪ರಲ್ಲಿ ಟೀಪುಸುಲ್ತಾನನು ಹೊನ್ನಾವರವನ್ನು ನಾಶಮಾಡಿದ್ದನು. ಇಂದಿನ ಹೊನ್ನಾವರ ಆಮೇಲೆ ಪುನಾರಚಿತವಾದದ್ದು. ಶರಾವತಿಯಿಂದ ಗಯೆಯವರೆಗಿನ ಭಾರತವು ಪ್ರಾಚೀನ ಕಾಲದಲ್ಲಿ ದಕ್ಷಿಣಭಾರತವೆನ್ನಿಸಿತ್ತಂತೆ!

ಹೊನ್ನಾವರವು ಪ್ರಕೃತಿರಮ್ಯ ಪ್ರದೇಶ. ಶರಾವತಿಯು ಹೊನ್ನಾವರದ ಗಂಗೆ. ತೆಂಗಿನ, ಕಂಗಿನ, ಬಾಳೆಯ ತೋಟಗಳು ಈ ಪ್ರದೇಶಕ್ಕೆ ಅಲಂಕಾರಪ್ರಾಯವಾಗಿದೆ. ಇಲ್ಲಿ ಶಾಲೆ ಕಾಲೇಜುಗಳೀಗ ಸ್ಥಾಪಿತವಾಗಿದೆ. ಇಲ್ಲಿಯ ಅನೇಕ ಚಟುವಟಿಕೆಗಳಲ್ಲಿ ಹೊನ್ನಾವರ ತಾಲೂಕು ಸಹಕಾರಿ ಪ್ರಾಥಮಿಕ ಭೂಮ್ಯಭಿವೃದ್ಧಿ ಬ್ಯಾಂಕೊಂದು. ಅದು ಅನೇಕ ಕೃಷಿಕರಿಗೆ ನೆರವಿತ್ತಿದೆ.

ಹೊನ್ನಾವರದ ಗತವೈಭವ ದೊಡ್ಡದು. ಈ ದೊಡ್ಡಸ್ತಿಕೆ ಹೊನ್ನಾವರಕ್ಕಿನ್ನೂ ಬಂದಿಲ್ಲ. ಗೇರುಸೊಪ್ಪೆಯ ಒಡೆಯರಲ್ಲನೇಕರು ವಿಜಯನಗರದ ಅರಸರ ರಾಜ್ಯಪಾಲರಾಗಿ, ಹೈವ, ತುಳು, ಕೊಂಕಣಗಳ ಮೇಲ್ವಿಚಾರಕರಾಗಿ ಹೆಸರುಗಳಿಸಿದ್ದು ಅವಿಸ್ಮರಣೀಯ.

ಸುಮಾರು ೧೩೦೦ರಿಂದ ೧೬೦೬ರವರೆಗಿನ ಗೇರುಸೊಪ್ಪೆ–ಭಟ್ಕಳಗಳ ಜೈನದೊರೆಗಳ ಆಡಳಿತದಲ್ಲಿ ಮಲೆನಾಡಿನ ಮಸಾಲೆ ಜೀನಸುಗಳ ಮಾರಾಟ ಬಂದರವಾಗಿ ಹೊನ್ನಾವರ ಐಶ್ವರ್ಯ ಸಂಪನ್ನವಾಗಿತ್ತು. ಅದರಿಂದಲೇ ೧೨ನೆಯ(ಕೊನೆಯ) ರಾಣಿಯಾದ ಚೆನ್ನಭೈರಾದೇವಿಯನ್ನು ಪೋರ್ಚುಗೀಸರು 'ಮೆಣಸಿನಕಾಳಿನರಾಣಿ' ಎಂದು ಕರೆಯುತ್ತಿದ್ದರು. ಬಿದನೂರರಸರ ೧೧ ಹಡಗುಗಳು ಹೊನ್ನಾವರ ಬಂದರದಲ್ಲಿರುತ್ತಿದ್ದವು. ಅವರ ಆಡಳಿತಕಾಲದಲ್ಲೂ ಹೊನ್ನಾವರವು ಸಾಗರೋತ್ತರ ವ್ಯಾಪಾರಕ್ಕೆ ಹೆಸರುವಾಸಿಯಾಗಿತ್ತು. ಬ್ರಿಟಿಷರ ಕಾಲದಲ್ಲಿ ಹೊನ್ನಾವರದ ಹೊನ್ನು ಬರಿದಾಯ್ತು; ನಗರಲಕ್ಷ್ಮಿ ಸಪ್ಪೆ ಮೋರೆಯನ್ನು ತಾಳಿದಳು. ಆದರೂ ಸತ್ಯಾಗ್ರಹ ಯುಗದಲ್ಲಿ ಹೊನ್ನಾವರ ವಕೀಲರಾಗಿದ್ದ ದಿವಂಗತ ಎಸ್.ಎಲ್.ಶಾಸ್ತ್ರಿಗಳು ಉತ್ತರಕನ್ನಡದ ಪ್ರಥಮ ಕಾಂಗ್ರೆಸ್ ಅಧ್ಯಕ್ಷರಾಗಿ, ಜಾತ್ಯತೀತತೆಯ ದೆಸೆಯಿಂದ ಉತ್ತರಕನ್ನಡ ಜಿಲ್ಲೆಯ ಗಾಂಧಿಯೆನ್ನಿಸಿ, ಪ್ರಖ್ಯಾತ ಸ್ವಾತಂತ್ರ್ಯ ಸೇನಾಪತಿಗಳೆನ್ನಿಸಿದರು. ಅವರ ಬಳಿಕ ಅಷ್ಟು ದೊಡ್ಡ ಸ್ವಾತಂತ್ರ್ಯ

ಸಂಗ್ರಾಮ ನಾಯಕರಿಲ್ಲಿ ಉದಯಿಸಲಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಹೊನ್ನಾವರವು ಶಾಸ್ತ್ರಿನಗರ; ಅವರ ಧೀರೋದಾತ್ತ ಪಾತ್ರ ಅಷ್ಟುದೊಡ್ಡದು. ಅಂಥವರ ತ್ಯಾಗಶೌರ್ಯಧೈರ್ಯಗಳು ಇಂದಿನ ತಲೆಮಾರಿಗೆ ಮಾರ್ಗದರ್ಶಕಗಳು. ಹೊನ್ನಮನಿಂದ ಹೊನ್ನಾವರ ಹಿಂದೆ ಹೆಸರು ಪಡೆದರೆ, ಶಾಸ್ತ್ರಿಗಳಿಂದ(ಶಿವರಾಮ ಶಾಸ್ತ್ರಿಗಳಿಂದ) ಇಂದಿನ ಹೊನ್ನಾವರ ಸ್ಮರಣೀಯವಾಗಿದೆ. ಗುರುತಿಸಲಾಗದಿರುವ 'ಸಿರಿಯೂರು' ಅಂದು ಹೊನ್ನಾವರವೇ ಆಗಿದ್ದರೂ ಆಗಿರಬಹುದು. ಅಂಥ ಸಿರಿಯ ಉದಯವು ಮತ್ತೆ ಆಗುವಂತೆ ಮಾಡುವುದರಲ್ಲಿ ಪೂರ್ವೋಕ್ತ ಬ್ಯಾಂಕು ಶ್ರಮಿಸಲಿ!



**[ಆಕರ: ಹೊನ್ನಾವರ ಭೂಅಭಿವೃದ್ಧಿ ಬ್ಯಾಂಕ್, ೧೯೭೭]**

# ೭. ಶಿರಸಿಯ ಚಾರಿತ್ರಿಕ ಹಿನ್ನಲೆ

'ಶಿರಸಿ' ಅಥವಾ 'ಶಿರಿಸೆ'ಯು ಶಿರೀಷಪುರ. ಕಾಳೀದಾಸನಿಗೆ ನಮ್ಮ ಶಿರಸ್ಸನ್ನೇರುವ ಶಿರೀಷ ಪುಷ್ಪವು ತುಂಬ ಪ್ರಿಯವಾಗಿತ್ತು. ಕದಂಬ ರಾಜಧಾನಿಯಾಗಿದ್ದ ಬನವಾಸಿಗೆ ಸುಮಾರು ೧೫ ಮೈಲುದೂರದಲ್ಲಿರುವ ಈ ಪುರವನ್ನು ವೈದಿಕ ಸಂಸ್ಕೃತಿಯು ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕ್ರಿ.ಶ.೨೦೦, ೨೮೦ರ ಕಾಲದಲ್ಲಿ ಶಿರೀಷಪುರವೆಂದು ಕರೆದಿದ್ದರೆ ಯಾವ ಆಶ್ಚರ್ಯವೂ ಇಲ್ಲ. ಇದು ಶಿರಿಸೆ ಹೂವಿನ ನಾಡು. ಈ ಹೂವಿಗೆ ಈಗ ಬೊಕಳೆ, ಬಕ್ಯಳ, ಎರಿಜಲು, ನಂಜಲು, ರಂಜಲು, ಬಾಗಳ ಮುಂತಾದ ಹೆಸರುಗಳಿವೆ. ಸಂಸ್ಕೃತವು ವಿದ್ವಾಂಸರ ಅಖಿಲಭಾರತ ಭಾಷೆಯಾಗಿದ್ದ ಅಂದಿನ ಕಾಲದಲ್ಲಿ ಅರಮನೆ-ಗುರುಮನೆಗಳು ಸಂಸ್ಕೃತವಾಗಿದ್ದ ಆ ಅವಧಿಯಲ್ಲಿ 'ಶಿರೀಷವು' ಸಾಮಾನ್ಯರ ಬಾಯಿಯಲ್ಲಿ 'ಶಿರಿಸೆ'ಯಾಯಿತು. 'ಶಿರಿಸೆ' ಅಥವಾ 'ಶಿರ್ಶೆ' ಎಂಬ ರೂಪವನ್ನೇ ಹಳ್ಳಿಗರು ಈಗಲೂ ಬಳಸುತ್ತಾರೆ. ಕನ್ನಡ, ಸಂಸ್ಕೃತ ಭಾಷೆಗಳ ಜ್ಞಾನ ಹೆಚ್ಚಾಗಿ ಇಲ್ಲದ, ಅರ್ಥವಿಮುಖರಾದ ಆ ಈ ಆಡಳಿತಗಾರರ ಅಸಡ್ಡೆಯ ಲೇಖನವೊಂದರಿಂದ ಉಂಟಾದ 'ಶಿರಸಿ' ಎಂಬ ರೂಪವು ಹೆಚ್ಚು ಕಡಿಮೆ ೩೦೦ ವರ್ಷಗಳಿಂದ ಈಚೆಗೆ ಸ್ಥಳಿಯೇತರರೆನ್ನಿಸಿದ್ದ ಮತ್ತು ಹೊಸದಾಗಿ ಗಣ್ಯಸ್ಥಾನಗಳನ್ನು ಆಗೀಗ ಪಡೆದ ಅಧಿಕಾರ ವೃತ್ತಗಳ ಮೂಲಕ ಪ್ರಚುರವಾಯಿತು ಎಂದು ತೋರುತ್ತದೆ. ಹಳೆಯ ಶಾಸನಗಳಲ್ಲಿ 'ಶಿರಿಸೆ' ಎಂದೇ ಇದೆ.

## ಇತಿಹಾಸದ ದಾರಿ

ಶಿರೀಷಪುರದ ಕೋಟೆಕೆರೆ, ಮುಸುಕಿನ ಬಾವಿ, ಆನೆಹೊಂಡ, ಚೆನ್ನಪಟ್ಟಣ ಬಜಾರ ಮುಂತಾದ ಅವಶೇಷಗಳು ಇದು ಕ್ರಿ.ಶ.೧೫೫೫-೫೬ರಲ್ಲಿ ಪ್ರಸಿದ್ಧಿಗೆ ಬಂದ ಸುಧಾಪುರ(ಸೋಂದೆ, ಸೋದೆ) ರಾಜ್ಯದ ಹೊರವಲಯವಾಗಿತ್ತು ಎಂಬ ಗತಿಯನ್ನು ನೆನಪಿಗೆ ತಂದುಕೊಡುತ್ತದೆ. ಇಲ್ಲಿಗೆ ಮೈಲು ದೂರದಲ್ಲಿರುವ ಸುಧೆಯೇ ಮೊದಲು ಈ ತಾಲೂಕಿನ ಗಣ್ಯಪಟ್ಟಣವಾಗಿತ್ತು. ಆದುದರಿಂದ ಬನವಾಸಿಯಿಂದ ಹೊರಟು, ಸುಧಾಪುರಕ್ಕೆ ಬಂದು, ಆಮೇಲೆ ಶಿರಿಸೆಯನ್ನು ತಲುಪುವುದು ಇತಿಹಾಸಕಾರನ ದಾರಿ ಎನ್ನಿಸುತ್ತದೆ. ನರ್ಮದೆಯಿಂದ ಕಾವೇರಿಯವರೆಗಿನ ನಾಡು ಹಿಂದೊಮ್ಮೆ ಕುಂತಳದೇಶವೆಂದು ಸ್ಥೂಲವಾಗಿ ಕರೆಯಲ್ಪಡುತ್ತಿತ್ತು. ಅದರ ಗಡಿಯು ಕ್ರಮೇಣ ಸಂಕುಚಿತವಾಗುತ್ತ ಹೋದಾಗ ಗೋವೆ, ಶ್ರೀಶೈಲ. ಹಾಸನ, ಚಿತ್ರದುರ್ಗ, ಬೆಳಗಾವಿ, ಚಿಕ್ಕಮಂಗಳೂರುಗಳನ್ನೊಳಗೊಂಡ ಆದಿರೂಪಕ್ಕೆ ಇಳಿಯಿತು. ಮೊದಲು ಕ್ರಿ.ಶ.೨೮೦ರಲ್ಲಿ ಮಯೂರವರ್ಮ ಕದಂಬ ಚಕ್ರವರ್ತಿಯು ಇಲ್ಲಿಗೆ ಸಮೀಪದಲ್ಲಿರುವ ಬನವಾಸಿಯನ್ನು ಕುಂತಳ ದೇಶದ ಮುಖ್ಯ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ. ಚಂದ್ರಗುತ್ತಿ,

ಹಾನುಗಲ್ಲುಗಳು ಉಪರಾಜಧಾನಿಗಳಾದದ್ದು ಆಮೇಲೆ ಗೊತ್ತಾಗುತ್ತದೆ. ಸುಧಾಪುರದ ಉಪಪಟ್ಟಣ ರೂಪದ ದೆಸೆಯಿಂದ ಅದನ್ನು ಅಂದಿನ ಇತಿಹಾಸ ಉಲ್ಲೇಖಿಸಲಿಲ್ಲ. ಆದರೆ ಕದಂಬರಿಗೆ ಸಾರ್ವಭೌಮತ್ವವಿಲ್ಲದಂತಾದ ಮೇಲೆ, ಪಾಳೆಯಗಾರಿಕೆಯ ದುರ್ದಶೆ ಬಂದೊದಗಿದಾಗ, ಸುಧಾಪುರದಲ್ಲಿ ಅವರ ವಂಶಜರಲ್ಲಿ ಕೆಲವರು ತಮ್ಮ ಪುಟ್ಟ ರಾಜಧಾನಿಯನ್ನು ನಿರ್ಮಿಸಿಕೊಂಡು, ತಮ್ಮ ಮೇಲಿನ ಅಧಿಕಾರಿಗಳಾದ ರಾಜ್ಯಪಾಲರ ಮತ್ತು ಚಕ್ರವರ್ತಿಗಳ ಕೃಪಾಛತ್ರದಡಿಯಲ್ಲಿ ದುಃಖದಿಂದ ಕಾಲಯಾಪನೆ ಮಾಡುತ್ತಲೂ ಅಹೋರಾತ್ರ ತಮ್ಮ ಬಲವನ್ನು ಹೆಚ್ಚಿಸಿಕೊಳ್ಳುವ ಪ್ರಯತ್ನವನ್ನು ನಡೆಸುತ್ತಲೂ ಇದ್ದದ್ದು ಸುಲಭೋಹ್ಯವಾಗಿದೆ.

ಕ್ರಿ.ಶ.೬೫೫ರ ಹೊತ್ತಿಗೆ ಕದಂಬರ ಚಕ್ರವರ್ತಿತ್ವವು ನಾಮಶೇಷವಾಯಿತು. ೬೧೦ರಲ್ಲೇ ಮುಗಿಯಿತೆಂದರೂ ಸರಿ. ಅಲ್ಲಿಂದ ಮುಂದೆ ೮೫೫ರವರೆಗೆ, ಆಮೇಲೆ ೯೧೧ರಿಂದ ೯೬೭ರವರೆಗೆ ಕದಂಬ ಮಾಂಡಲಿಕನ ಹೆಸರು ಸ್ಪಷ್ಟವಾಗಿ ಬನವಾಸಿ ಮಹಾಮಂಡಲದಲ್ಲಿ ಕೇಳಬರದಂತಾಯಿತು. ಕ್ರಿ.ಶ.೮೦೦ರಲ್ಲಿ ರಾಷ್ಟ್ರಕೂಟರ ३ನೆಯ ಗೋವಿಂದನು ಬನವಾಸಿ ಮಹಾಮಂಡಲದ (ಅಂದರೆ ಕೇವಲ ಶಿವಮೊಗ್ಗ, ಧಾರವಾಡ, ಉತ್ತರಕನ್ನಡ ಮತ್ತು ದಕ್ಷಿಣಕನ್ನಡ ಜಿಲ್ಲೆಗಳ ಬಹುಭಾಗಗಳ) ಚಕ್ರವರ್ತಿ ಮತ್ತು ಮದ(ಒಂದ)ನಾಗನು ಅವನ ರಾಜ್ಯಪಾಲ. ಆಗ ಸುಧಾಪುರದಲ್ಲಿದ್ದವನು ಇಮ್ಮಡಿ ಸದಾಶಿವರಾಯ, ಅವನ ಅಜ್ಜನಾಗಿದ್ದ ೧ನೆಯ ಸದಾಶಿವರಾಯನು. ಸುಮಾರು ಕ್ರಿ.ಶ.೭೦೦ರಲ್ಲಿ ಇದ್ದ ಪಾಳೆಯಗಾರನಾಗಿರಬೇಕು. ಇದೇ ಸುಧಾಪುರದ ಇತಿಹಾಸದ ಆದಿಯುಗ. ಚಕ್ರವರ್ತಿತ್ವ ಹೋದರೂ ರಾಯತನ ಉಳಿದುಕೊಂಡದ್ದು ಕದಂಬರ ಮನೆತನದ ಪ್ರಾಚೀನ ವೈಭವ ಪ್ರಸಿದ್ಧಿಗಳ ದೆಸೆಯಿಂದ. ಇಮ್ಮಡಿ ಸದಾಶಿವರಾಯನ(೮೦೦ರ) ಶಿಲಾಶಾಸನವೇ ಸುಧಾಪುರದಲ್ಲಿ ದೊರಕಿದ ಅತ್ಯಂತ ಪ್ರಾಚೀನ ಶಾಸನ.

ಕ್ರಿ.ಶ.೮೦೫ರಲ್ಲಿ ಬರೆಯಿಸಲಾದ ಸುಧಾಶಾಸನ ೨ನೆಯದು. ಅದು ಚಾಮುಂಡರಾಯನ ಶಾಸನ. ಅದರಲ್ಲಿ ಸದಾಶಿವರಾಯನನ್ನೂ ಬಲ್ಲಾಳರಾಯನನ್ನೂ ಹಿಂದೆ ಆಳಿದ ಒಡೆಯರೆಂದು ಉಲ್ಲೇಖಿಸಲಾಗಿದೆ. ಬಲ್ಲಾಳರಾಯನು ಬಹುಶಃ ಸದಾಶಿವರಾಯನ ಜೊತೆಗೇ ಸುಧೆಯ ಪಾಳೆಯ ಪಟ್ಟನು ನೋಡಿಕೊಳ್ಳುತ್ತಿದ್ದಿರಬೇಕು. ಉದಯಾವರದ(ತುಳುನಾಡಿನ) ಆಳುಪರಿಗೂ ಬನವಾಸಿಯ ಕದಂಬರಿಗೂ ನೆಂಟಸ್ತಿಕೆ ಇತ್ತೆಂಬುದು ಕ್ರಿ.ಶ.೪३೦ರ ಹಲ್ಮಿಡಿಯ ಶಾಸನವನ್ನೂ ತಳಗುಂದದ ಪ್ರಣವೇಶ್ವರ ದೇವಾಲಯದ ದ್ವಾರಸ್ಥ ಶಿಲಾಲೇಖನವನ್ನೂ ನೋಡಿದ ವಿದ್ವಾಂಸರ ಅಭಿಪ್ರಾಯ. ಕ್ರಿ.ಶ.೬೨೫ರಿಂದ ೭೯೧ರವರೆಗಿನ ಆಳುಪರು ಬನವಾಸಿ ಮಹಾಮಂಡಲದ ರಾಜ್ಯಪಾಲರಾಗಿದ್ದದ್ದು ಸುಸ್ಪಷ್ಟ. ಬಲ್ಲಾಳರು ತುಳುಬ್ರಾಹ್ಮಣರೆಂಬುದು ಸುಪ್ರಸಿದ್ಧ. ಆದುದರಿಂದ ಆಳುಪರ ಉಪಾಧಿಕಾರಿಯಾಗಿ ಬಂದ ಬಲ್ಲಾಳರಾಯನು ಆಳುಪರ ಸಂಬಂಧಿಕನಾಗಿರಬಹುದಾಗಿದೆ.

೨ನೆಯ ಸದಾಶಿವರಾಯನ ಉತ್ತರಾಧಿಕಾರಿಯಾದ ಚಾಮುಂಡರಾಯನು ಕರ್ನಾಟಕದ ಇತಿಹಾಸದಲ್ಲಿ ಬರುವ ಮೊಟ್ಟಮೊದಲನೆಯ ಚಾಮುಂಡರಾಯ. ಸುಮಾರು ಕ್ರಿ.ಶ.೭೫೦ರ ಹೊತ್ತಿಗೆ ಸುಧಾಪುರದಲ್ಲಿ ಜೈನಗುರುಗಳ ಮಠ ಸ್ಥಾಪಿತವಾಗಿದ್ದುದರಿಂದ ಚಾಮುಂಡರಾಯನ ಹಿರಿಯರ ಕಾಲದಿಂದಲೇ ಸುಧಾಪುರವು ಜೈನರಿಗೆ ಆಶ್ರಯ ಕೊಡಲು ಆರಂಭಿಸಿತ್ತು ಎನ್ನಬಹುದಾಗಿದೆ. ಈ ೩–೪ ತಲೆಮಾರುಗಳ ಸುಧಾರಾಯರು ಕೇವಲ ಪಿತ್ರಾರ್ಜಿತ ಬಿರುದುಗಳನ್ನು ಧರಿಸಿದ್ದರಲ್ಲದೆ, ವಾಸ್ತವಿಕವಾಗಿ ಚಿಕ್ಕ ಪಾಳೆಯಗಾರರು ಅಥವಾ ದೊಡ್ಡ ಜಮೀನುದಾರರು ಎಂದೆನ್ನಿಸಿ ಮೂಲೆಗುಂಪಾಗಿ ಬದುಕಿದ್ದಿರಬೇಕು. ಇವರು ಕದಂಬ ಕುಲದವರಾಗಿರಬಹುದು ಎಂಬುದು ಸಾಂದರ್ಭಿಕ ಊಹೆ.

## ವೀರಗಲ್ಲುಗಳು

೨ ವೀರಗಲ್ಲುಗಳು ಒಂದು ಕಥೆ ಹೇಳುತ್ತವೆ. ಅವು ದೊರೆತದ್ದು ತಮಡಿಕಲ್ಲಾಳದಲ್ಲಿ. ಚಾಲುಕ್ಯರ ೨ನೆಯ ಸೋಮೇಶ್ವರನೂ ಅವನ ತಮ್ಮನಾದ ೬ನೆಯ ವಿಕ್ರಮಾದಿತ್ಯನೂ ಕಲಹಗ್ರಸ್ತರಾಗಿದ್ದ ಕಾಲ. ಬನವಾಸಿ ಮಂಡಲವನ್ನು ಕದಂಬರಾಯರಾದ ಚಟ್ಟಯ್ಯದೇವ ಮತ್ತು ಕೀರ್ತಿವರ್ಮರು ಆಳುತ್ತಿದ್ದರು. ಆಗ ಮಹಾಮಂಡಲೇಶ್ವರ ಕೀರ್ತಿವರ್ಮನು ವಿಕ್ರಮಾದಿತ್ಯನ ಪಕ್ಷಪಾತಿಯೆಂಬುದನ್ನರಿತು ಬನವಾಸಿಯನ್ನು ವಶಪಡಿಸಿಕೊಳ್ಳಲು ೧೨ ಜನ ಸಾಮಂತರ ಅಧಿಪತಿಯಾದ ದಂಡನಾಯಕನೊಬ್ಬನನ್ನು ದೊಡ್ಡ ಸೈನ್ಯದೊಡನೆ ಸೋಮೇಶ್ವರ ಕಳಿಸಿದನು. ಆಗ ಹಾನುಗಲ್ಲಿನ ರಾಜಧಾನಿಯಿಂದ ಬನವಾಸಿ ಮಂಡಲದ ಒಂದು ಭಾಗವನ್ನು ಆಳುತ್ತಿದ್ದ ತೈಲಪದೇವ ಕದಂಬನು ಸೋಮೇಶ್ವರನ ಪಕ್ಷಪಾತಿಯಾಗಿ ಅಣ್ಣನಾದ ಚಟ್ಟಯ್ಯದೇವನ ವಿರುದ್ಧವಾಗಿ ದಂಡೆತ್ತಿ ಹೋದನು. 'ಶಿರಿಸೆ' ಅಂದು ರಣರಂಗವಾಯ್ತು. ಚಟ್ಟಯ್ಯದೇವನ ಸರದಾರನಾಗಿದ್ದ ಸಿರಿವೂರ ಬೀರಣ್ಣನು ಯುದ್ಧದಲ್ಲಿ ಮಡಿದನು. ಈ ಯುದ್ಧ ನಡೆದದ್ದು ಕ್ರಿ.ಶ.೧೦೭೨ರಲ್ಲಿ.

ಕೀರ್ತಿವರ್ಮನು ಯುದ್ಧದಲ್ಲಿ ಸೋತರೂ ೬ ತಿಂಗಳ ಬಳಿಕ ಸೋಮೇಶ್ವರನು ಅವನನ್ನೇ ಬನವಾಸಿ ಮಂಡಲದ, ಬನವಾಸಿ ಭಾಗದ ಮಹಾಮಂಡಲೇಶ್ವರನನ್ನಾಗಿ ಮಾಡಿದನು. ತೈಲಪ–ಚಟ್ಟಯ್ಯರೂ ಬನವಾಸಿ ಮಂಡಲದ ಇತರ ಭಾಗಗಳ ಮಹಾಮಂಡಲೇಶ್ವರರೆಂದು ಮನ್ನಿಸಲ್ಪಟ್ಟರು. ಚಟ್ಟಯ್ಯನು ತೈಲಪನ(೧೦೪೮–೧೦೭೫) ಅಣ್ಣ ಮತ್ತು ಕೀರ್ತಿವರ್ಮನ(೧೦೭೫–೧೧೧೭) ತಮ್ಮ.

ಈ ಪ್ರಕಾರ ಶಿರಸೆಯೊಮ್ಮೆ ರಣಾಂಗಣವಾದರೂ ಅದರ ದೆಸೆಯಿಂದ ಚಕ್ರವರ್ತಿಗಾಗಲೀ, ಕದಂಬ ಮಹಾಮಂಡಲೇಶ್ವರರಿಗಾಗಲಿ, ಯಾವುದೇ ದೊಡ್ಡ ಹಾನಿಯೂ ಅಗಲಿಲ್ಲ. ಮೇಲೆ ಹೇಳಿದ ಮಹಾಮಂಡಲೇಶ್ವರ ಕಾಲದಲ್ಲಿ ಚಾಮುಂಡರಾಯರಸನು(೧೦೪೬–೧೦೬೬) ಬಳ್ಳಿಗಾವೆಯ (ಬಲಿಪುರದ) ರಾಜಧಾನಿಯಿಂದ ರಾಜ್ಯಪಾಲನಾಗಿ ಮೇಲ್ವಿಚಾರಣೆ ನಡೆಸುತ್ತಿದ್ದನು. ೧ನೆಯ

ಸೋಮೇಶ್ವರನ ರಾಣಿ ಮೈಲಾಳದೇವಿಯೂ ಚಾಲುಕ್ಯರ ೬ನೆಯ ವಿಕ್ರಮಾದಿತ್ಯನೂ (ಬಂಕಾಪುರ ರಾಜಧಾನಿಯಿಂದ) ಅರಿಕೇಸರಿ (ಹರಿಕೇಸರಿ) ಕದಂಬರಾಯನೂ ಅನುಕ್ರಮವಾಗಿ ರಾಜಪ್ರತಿನಿಧಿಗಳಾಗಿ ಕೆಲಸಮಾಡಿದರು.

ಬನವಾಸಿ ಭಾಗದ ಅಂಗವಾಗಿದ್ದ ಶಿರಿಸೆ ಅಂದು ಬನವಾಸಿ ರಾಜಧಾನಿಯ ಎಲ್ಲ ವೈಭವಕ್ಕೂ ಪಾಲುಗಾರನಾಗಿತ್ತು. ಕೀರ್ತಿವರ್ಮ ಕದಂಬರಾಯನ ಸಮರ್ಥ ಆಡಳಿತದಲ್ಲಿ ಶಿರಿಸೆಯ ಪ್ರಜೆಗಳು ನೆಮ್ಮದಿಯಿಂದ ಬಾಳುತ್ತಿದ್ದರು. ಸುಧಾಪುರ ಅಂದು ಶಿರಸೆಯ ಮೂರ್ಧಸ್ಥಾನವಾಗಿತ್ತು. ಇಂದು ಶಿರಿಸೆಯು ಸುಧಾಪುರದ ಮೂರ್ಧಸ್ಥಾನವಾಗಿದೆ.

## ಸದಾಶಿವರಾಯ

ಸುಧಾಪುರದ ಜೈನಪಠದ ಇನ್ನೊಂದು ಶಾಸನವು ಕ್ರಿ.ಶ.೧೧೯೮–೯೯ರದ್ದು. ಇದರಲ್ಲಿ ಸದಾಶಿವರಾಯನೆಂಬ ಅರಸನ ಉಲ್ಲೇಖವಿದೆ. ಇದು ಚಾಲುಕ್ಯರ ೪ನೆಯ ಸೋಮೇಶ್ವರ ಚಕ್ರವರ್ತಿಯ ಕಾಲ; ಕದಂಬ ಕಾಮದೇವನು ಬನವಾಸಿ ಪುರವಾಧೀಶ್ವರನಾಗಿ ಹಾನುಗಲ್ಲಿನಲ್ಲಿ ರಾಜ್ಯಭಾರ ಮಾಡುತ್ತಿದ್ದ ಮಾಂಡಲಿಕನಾಗಿದ್ದನು. ಬ್ಯಾಳಿಕೆ(ಬಯಲಿಕೆ, ಜೋಳಿಕೆ) ಕೇಶಿಮಯ್ಯನು(೧೧೭೪–೧೧೮೧) ಕಳಚುರ್ಯರ ಅಹವಮಲ್ಲನ ರಾಜ್ಯಪಾಲನಾಗಿ ಈ ಮೊದಲು ಇಲ್ಲಿ ಮೇಲ್ವಿಚಾರಣೆ ನಡೆಸುತ್ತಿದ್ದನು. ಕ್ರಿ.ಶ.೧೧೮೧ರಿಂದ ೧೨೩೯ರವರೆಗೆ ಯಾವರಾಜ್ಯಪಾಲನಾದರೂ ಇಲ್ಲಿ ಇದ್ದನೆಂಬುದಕ್ಕೆ ಪ್ರಮಾಣ ದೊರಕಿಲ್ಲ.

ಕಳಚುರ್ಯರು ಕಸಿದುಕೊಂಡಿದ್ದ ಚಕ್ರವರ್ತಿತ್ವವನ್ನು ಚಾಲುಕ್ಯರ ೪ನೆಯ ಸೋಮೇಶ್ವರನು ಪಡೆದುಕೊಂಡದ್ದು ಕದಂಬ ಮಹಾಮಂಡಲೇಶ್ವರರ ನೆರವಿನಿಂದ. ಆದರೆ ದೇವಗಿರಿಯ ಸೇವುಣ ಯಾದವರಲ್ಲಿ ಹೆಸರಾದ ೨ನೆಯ ಸಿಂಘಣಭೂಪಾಲನು (೧೨೧೦–೧೨೪೭) ಆಗ ಕರ್ನಾಟಕದ ನಾನಾ ಕಡೆಗಳಲ್ಲಿ ದಾಳಿ ಮಾಡಿ ಅಲ್ಲಲ್ಲಿ ತನ್ನ ಪ್ರಭುತ್ವವನ್ನು ಸ್ಥಾಪಿಸುತ್ತಲೇ ಇದ್ದನು. ಹೊಯ್ಸಳರ ದಾಳಿಯೂ ಆಗ ಪ್ರಾರಂಭವಾಗಿತ್ತು. ಚಾಲುಕ್ಯರ ೪ನೆಯ ಸೋಮೇಶ್ವರನು ಹೆಸರಿಗೆ ಮಾತ್ರ ಸಾರ್ವಭೌಮನಾಗಿದ್ದನಲ್ಲದೆ ಆತನ ಚಕ್ರಾಧಿಪತ್ಯದ ವಿವಿಧ ಭಾಗಗಳು ಕಳಚಿಹೋಗಿ ಮಂಡಲಿಕರು ವಾಸ್ತವಿಕವಾಗಿ ಸ್ವತಂತ್ರ ಪ್ರಭುಗಳೇ ಆಗಿದ್ದರು. ಬನವಾಸಿ ಮಂಡಲದತ್ತ ಸೇವುಣ ಯಾದವರೂ ಹೊಯ್ಸಳರೂ ಪಡೆಗಳನ್ನು ಕಳಿಸಿ ತಮ್ಮ ತಮ್ಮ ಸ್ವಾಮ್ಯವನ್ನು ಸ್ಥಾಪಿಸಲು ಹೋರಾಡುತ್ತಿದ್ದರು. ಇಂಥ ಅತ್ಯಂತ ಗೊಂದಲಕಾಲದಲ್ಲಿ ಸುಧಾಪುರದಲ್ಲಿ ಸದಾಶಿವರಾಯನೆಂಬೊಬ್ಬ ಅರಸನು ಆಳುತ್ತಿದ್ದನೆಂದು ಶಾಸನ ಹೇಳುತ್ತದೆ. ಈ ಸದಾಶಿವರಾಯನು ಕಾಮದೇವ ಕದಂಬನ ಅಂಕಿತದಲ್ಲಿ ಸುಧೆಯನ್ನಾಳುತ್ತಿದ್ದ ದೊರೆಯಾಗಿರಬೇಕು. ಯುದ್ಧದ ಪ್ರಕರಣಗಳಲ್ಲಿ ಈ ದೊರೆಯು ಯಾವ ಪಾತ್ರವನ್ನು ವಹಿಸಿದನೆಂಬುದು ಗೊತ್ತಾಗುವುದಿಲ್ಲ. 'ಬಾಗಿದವ ಬಾಳುವನು' ಎಂಬ ವೈತಸೀ

ವೃತ್ತಿಯನ್ನು ಹಿಡಿದು ಈತನು ಸುಧಾರಾಜ್ಯವನ್ನು ಉಪರಾಜನಾಗಿ ಸಂರಕ್ಷಿಸಿಕೊಂಡು ಬಾಳುತ್ತಿದ್ದಿರಬಹುದು. ಇವನು ಕದಂಬ ವಂಶದವನಾಗಿರಲೂ ಬಹುದಾಗಿದೆ. ಆದರೆ ಇವನ ಪೂರ್ವಾಪರಗಳ ವಿವರ ಖಚಿತವಾಗಿ ತಿಳಿಯದು.

## ಪಂಪ ಪ್ರಶಂಸೆ

ಕನ್ನಡದ ಮಹಾಕವಿ ಪಂಪ ಹುಟ್ಟಿದ್ದು ಕ್ರಿ.ಶ.೯೦೨ರಲ್ಲಿ. ಅವನು 'ಆದಿಪುರಾಣ'ವನ್ನೂ, 'ವಿಕ್ರಮಾರ್ಜುನವಿಜಯ'ವನ್ನೂ ಬರೆದದ್ದು ಕ್ರಿ.ಶ.೯೪೧–೯೪೨ರಲ್ಲಿ. ಆತನು ಸುಧಾಪ್ರದೇಶವನ್ನು ಒಳಗೊಂಡ ಬನವಾಸಿ ಮಂಡಲವನ್ನು–

'ಸೊಗಯಿಸಿ ಬಂದ ಮಾಮರನೆ ತಳ್ತೆಲೆವಳ್ಳಿಯೆ ಪೂತಜಾತಿ ಸಂಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತಂಬಿಯೆ ನಲ್ಲರೊಳ್ಮೊಗಂ ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರ ನೋೞ್ಪಡಾವ ಬೆಟ್ಟುಗಳೊಳವಾವ ನಂದನವನಂಗಳೊಳಂ ವನವಾಸಿ ದೇಶದೊಳ್.'–IV 24

'ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿ ನಿಂಪುಗಳ್ಗಾಗರ ಮಾದ ಮಾನಿಸರೆ ಮಾನಿಸರಂತವರಾಗಿ ಪುಟ್ಟಲೇನಾಗಿಯು ಮೇನೋ ತೀರ್ದಪುದೊ ತೀರದೊಡಂ ಮರಿದುಂಬಿಯಾಗಿ ಮೇಣ್‌ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿ ದೇಶದೊಳ್.'

'ತೆಂಕಣಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಮಿಂಪನಾಳ್ದಗೇಯಂ ಕಿವಿವೊಕ್ಕೊಡಂ ಬಿರಿದ ಮಲ್ಲಿಗೆಗಂಡೊಡಮಾದ ಕಂದಲಂಪಂ ಕೆಡೆಗೊಂಡೊಡಂ ಮಧುಮಹೋತ್ಸವ ಮಾದೊಡಮೇನ ನೆಂಬೆನಾರಂಕುಸುಮಿಟ್ಟೊಡಂ ನೆನೆವುದೆನ್ನ ಮನಂ ವನವಾಸಿ ದೇಶಮಂ'.

'ಅಮರ್ದಂ ಮುಕ್ಕುಳಿ ಪಂತುಟಪ್ಪ ಸುಸಿಲೊಂದಿಂಪುಂ ತಗುಳ್ದೊಂದು ಗೇಯಮುಮಾದಕ್ಕರಗೊಟ್ಟಿಯುಂ ಚದುರರೊಳ್ವಾತುಂ ಕುಳಿರ್‌ಕೋಳ್ಪಜೊಂಪಮುಮೇಳ್ಪುದನುಳ್ಳ ಮೈಸುಕಮುಮಿಂತೆನ್ನಂ ಕರಂ ನೋಡಿನಾಡೆ ಮನಂಗೊಡಿರೆ ತೆಂಕನಾಡ ಮರೆಯಲ್ಕಿನ್ನೇಂ ಮನಂ ಬರ್ಕುಮೇ..?'

ಎಂದು ಬಗೆದುಂಬಿ ತನ್ನ 'ವಿಕ್ರಮಾರ್ಜುನವಿಜಯ'ದಲ್ಲಿ ಬಣ್ಣಿಸಿದ್ದು ಸುಪ್ರಸಿದ್ಧ. ಪಂಪನ ಜನನ ಕ್ರಿ.ಶ.೯೦೨ರಲ್ಲಿ. ರಾಷ್ಟ್ರಕೂಟರ ೨ನೆಯ ಕೃಷ್ಣ ಅಕಾಲವರ್ಷ, ೩ನೆಯ ಇಂದ್ರ ನಿತ್ಯವರ್ಷ, ಬದ್ದೆಗ ೨ನೆಯ ಅಮೋಘವರ್ಷ, ೪ನೆಯ ಗೋವಿಂದ ಸುವರ್ಣವರ್ಷ(ಪ್ರಭೂತವರ್ಷ) ೩ನೆಯ ಅಮೋಘವರ್ಷ ಮತ್ತು ೩ನೆಯ ಕೃಷ್ಣ ಅಕಾಲವರ್ಷರು ಅಂದು(೮೮೦ರಿಂದ ೯೬೨ರವರೆಗೆ) ಬನವಾಸಿ ಮಹಾಮಂಡಲದ ಮೇಲ್ದೊರೆತನ ವಹಿಸಿದ ಸಾರ್ವಭೌಮರಾಗಿದ್ದರು. ಶಂಕರಗಂಡ, ಲೋಕಾದಿತ್ಯ(೧ನೆಯ) ಸೇನಾವರಸ, ಕಲಿವಿಟ್ಟರಸ, ಸಾಂತರಸ ಮತ್ತು (೨ನೆಯ ಬೂತುಗ?) ಕೊಂಗುಣಿವರ್ಮ

ಗಂಗರು ಬನವಾಸಿ ದೇಶದ ರಾಜ್ಯಪಾಲರಾಗಿದ್ದರು. ಬನವಾಸಿ ರಾಜಧಾನಿಯಲ್ಲಿ ಕ್ರಿ.ಶ.೮೫೫ರಿಂದ ೯೧೧ರವರೆಗೆ ಇಂದ್ರವರ್ಮ, ಅಜವರ್ಮ ಎಂಬ ಕದಂಬ ಮಹಾಮಂಡಲೇಶ್ವರರೂ ಕ್ರಿ.ಶ.೯೫೯ರಲ್ಲಿ ರವಿವರ್ಮ ಕದಂಬರಾಯನೂ ಆಳುತ್ತಿದ್ದ ಶಾಸನಗಳು ದೊರೆತಿವೆ. ಕ್ರಿ.ಶ.೯೧೧ರಿಂದ ೯೬೦ರವರೆಗೆ ಅಲ್ಲಿ ಅಜವರ್ಮ ಕದಂಬ ಆಳುತ್ತಿದ್ದನೆಂಬುದಕ್ಕೆ ಶಾಸನಾಧಾರ ಸಿಕ್ಕಿದೆ. ಆಮೇಲೆ ಕ್ರಿ.ಶ.೯೫೯ರಲ್ಲಿ ರವಿವರ್ಮ ಕದಂಬನೂ,೯೬೩ರಲ್ಲಿಬೊಪ್ಪವ್ವೆ ಎಂಬ ಕದಂಬರಾಣಿಯೂ ಬನವಾಸಿ ಸಿಂಹಾಸನವನ್ನೇರಿದ್ದ ಉಲ್ಲೇಖವಿದೆ. ಕ್ರಿ.ಶ.೯೬೭ರ ಅನಂತರ ಇರಿವಬೆಡಂಗದೇವಕದಂಬನಿಂದ ಆರಂಭವಾದ ಹೊಸ ಕದಂಬ ಮಹಾಮಂಡಲೇಶ್ವರರ ತಲೆಮಾರುಗಳು ಹಾನುಗಲ್ಲಿನ ರಾಜಧಾನಿಯಿಂದ ಬನವಾಸಿ ಮಂಡಲವನ್ನು ಆಳಿದವು. ಈ ನಡುವೆ ಕೀರ್ತಿವರ್ಮ ಕದಂಬ ದೊರೆ ಮಾತ್ರ ೧೦೭೫ರಿಂದ ೧೧೧೭ರವರೆಗೆ ಬನವಾಸಿ ಸಿಂಹಾಸನದಲ್ಲಿ ಸ್ವತಂತ್ರವಾಗಿ ಆಳಿದನು. ಹಾನುಗಲ್ಲಿನ ರಾಜಧಾನಿಯಿಂದ ಆಳಿದ ಕೊನೆಯ ಕದಂಬರಾಯನ (೧೩೧೫–೧೩೪೭) ಹೆಸರು ಪುರಂದರರಾಯ ಎಂಬುದು ಈವರೆಗೆ ಗೊತ್ತಾದ ಸಂಗತಿ.

ಹಿಂದಿನ ದಕ್ಷಿಣಭಾರತದ ಅಥವಾ ಕರ್ನಾಟಕದ (ಕುಂತಳದ) ಚಕ್ರವರ್ತಿಗಳು ಧರ್ಮವಿಜಯಿಗಳಾಗಿದ್ದದ್ದೇ ಹೆಚ್ಚು. ಧರ್ಮವಿಜಯದ ಪದ್ಧತಿಯ ಪ್ರಕಾರ ಸಾಮಂತರಾದ ಮಾಂಡಲಿಕರು(ಮಂಡಲೇಶ್ವರ–ಮಹಾಮಂಡಲೇಶ್ವರರು) ತಮ್ಮ ಅನುವಂಶಿಕ ರಾಜ್ಯಗಳ ಒಳ(ಎಷ್ಟೋ ಸಲ ಹೊರ) ಆಡಳಿತದಲ್ಲಿ ತಮ್ಮ–ತಮ್ಮ ಪರಂಪರೆಗಳಂತೆಯೇ ನಡೆದುಕೊಳ್ಳಲು ಸಂಪೂರ್ಣ ಸ್ವತಂತ್ರರಾಗಿರುತ್ತಿದ್ದರು. ಆದುದರಿಂದ ಬನವಾಸಿ ಪುರವರಾಧೀಶ್ವರರಾಗಿದ್ದ ಕದಂಬ ಸಾಮಂತರು ತಮ್ಮ ಹಿರಿಯರ ಉದಾತ್ತ ಪರಂಪರೆಯಂತೆ ಮಧ್ಯಯುಗದಲ್ಲಿಯೂ ರಾಜ್ಯದ ಉನ್ನತಿಯ ಮಟ್ಟವನ್ನು ಕಾಯ್ದುಕೊಂಡು ಹೋಗುತ್ತಿದ್ದರು ಎಂಬುದಕ್ಕೆ ಪಂಪ ಮಹಾಕವಿಯ ಪ್ರಶಂಸೆಯು ಅಭೇದ್ಯವಾದ ಪ್ರಮಾಣ. ಪಂಪನ ಪ್ರಶಂಸೆಯಲ್ಲಿ ಕೇವಲ ಪ್ರಕೃತಿಸೌಂದರ್ಯವಷ್ಟೇ ಬಂದಿಲ್ಲ. ನಾಗರಿಕತೆ–ಸಂಸ್ಕೃತಿಗಳ ಅಭಿನಂದನೀಯ ಅಂಶಗಳ ಉಲ್ಲೇಖವೂ ಬಂದಿದೆ. ಅವುಗಳನ್ನು ನೆನೆದರೆ ಅಂದು ಈ ಭಾಗವು ಕನ್ನಾಡಿನ ಹೊಂದೇರೆನ್ನಿಸಿದ್ದು ಇಂದಿನ ಕಬ್ಬೊಂದೇರಿನ ಕಾಲಕ್ಕೆ ವಿಪರೀತವಾಗಿಯೇ ಎಂಬುದು ಸ್ಪಷ್ಟವಾಗುತ್ತದೆ. ಅಂಥ ಯುಗದಲ್ಲೇ ಸುಧಾಪುರ(ಅಮೃತಪುರ) ನಿರ್ಮಿತವಾಗಿತ್ತೆಂಬುದನ್ನು ಹೆಸರೇ ಹೇಳುತ್ತದೆ; ಕದಂಬ ಚಕ್ರವರ್ತಿಗಳ ಕಾಲದಲ್ಲಿ ಇದು ಬನವಾಸಿ ನಗರದ ವಿಸ್ತಾರಕ್ಕೆ ಹೊರವಲಯದಲ್ಲಿದ್ದ ಆರಾಮ ಧಾಮವಾಗಿರಬೇಕೆಂಬುದು ಹೆಸರಿನಿಂದ ವ್ಯಕ್ತವಾಗುತ್ತದೆ. ಸುಮಾರು ೮ನೆಯ ಶತಮಾನದಿಂದ ಏಳಿಗೆ ಹೊಂದುತ್ತ ಬಂದ ಈ ಪ್ರದೇಶವು ೧೬ನೆಯ ಶತಮಾನದ ಅಂತ್ಯದಲ್ಲಿ ತನ್ನ ಉಚ್ಛ್ರಾಯದಶೆಯನ್ನು ಮುಟ್ಟಿರಬಹುದು–ಎಂಬುದು ಇಂದು ಸ್ಪಷ್ಟವಾಗುತ್ತದೆ. ಇದರ ಕ್ಷಯ ೧೭೬೩ರಲ್ಲಿ. ಪುನರ್ಜನ್ಮ ೧೯೪೭ರಂದು ಶಿರಸೆಯಲ್ಲಿ! 'ಸುಧೆ' ಸೋದೆ'ಯಾಗುವುದು ತದ್ಭವ ನಿಯಮಗಳ ಪ್ರಕಾರ, ಅನಿಯಮಬದ್ಧ

ಉಚ್ಚಾರದಲ್ಲಿದು 'ಸೋಂದಾ', 'ಸೋದಾ' ಅಥವಾ 'ಸ್ವಾದಿ'! ಪಂಪನ ಅನುಭವದ ಮೂಲಕ ನಾವೀಗ ಈ ಭಾಗದ ಹಿಂದಿನ ಸ್ವಾದ್ಯರೂಪವನ್ನು ತಿಳಿದುಕೊಳ್ಳಬೇಕಾಗಿದೆ.!

## ನಾಯಕರ ಮನೆತನ

ಕ್ರಿ.ಶ.೬೫೫ರಿಂದ ಕದಂಬರಿಗೆ ಪಾಳೆಯ ಬಂದಿರಬೇಕು. ಕುಂದವರ್ಮರಸ ಆಳುಪನನ್ನು ಹಿಡಿದು ೧೦ ಜನ ಆಳುಪರು ಕ್ರಮಶಃ ಚಾಲುಕ್ಯರ ಹಾಗೂ ರಾಷ್ಟ್ರಕೂಟರ ರಾಜ್ಯಪಾಲರಾದರು. ಆಮೇಲೆ ಮದನಾಗ, ಎರೆಯಮ್ಮರಸ, ಬಂಕೆಯರಸ ಎಂಬ ರಾಜ್ಯಪಾಲರು ಕ್ರಿ.ಶ.೮೫೫ರವರೆಗೆ ರಾಷ್ಟ್ರಕೂಟರ ಕೈಕೆಳಗೆ ಬನವಾಸಿ ಮಂಡಲವನ್ನು ಆಳುತ್ತಿದ್ದದ್ದೂ ಅಂದು ಕದಂಬರಲ್ಲಿ ನಿರಂತರವಾಗಿ ಯಾರಿಗೂ ಮಹಾಮಂಡಲೇಶ್ವರತ್ವವಿಲ್ಲದ್ದೂ ಸ್ಪಷ್ಟವಾಗಿ ತಿಳಿದು ಬಂದಿದೆ. ಬಳಿಕ ಕ್ರಿ.ಶ.೮೫೫ರಲ್ಲಿ ಇಂದ್ರವರ್ಮ ಕದಂಬನು ಮಹಾಮಂಡಲೇಶ್ವರನಾಗಿಯೂ ರಾಜ್ಯಪಾಲನಾಗಿಯೂ ರಾಷ್ಟ್ರಕೂಟರ (ವಾರಾದಿತ್ಯ) ಅಮೋಘವರ್ಷ ನೃಪತುಂಗನ ಕೈಕೆಳಗೆ ಬನವಾಸಿಮಂಡಲವನ್ನು ಆಳತೊಡಗಿನು. ಈತನು ಚಾಮುಂಡರಾಯನಿಂದ ಒಂದೆರಡು ತಲೆಮಾರಿನ ಮುಂದಿನವನಾಗಿರಬೇಕು. ಇವನ ಸಂತತಿಯವರು ಅನಂತರ ೧೩೪೭ರವರೆಗೆ ಆಳಿದ್ದು ಸುವಿದಿತ. ಇದು ಬನವಾಸಿ ಮಂಡಲದಲ್ಲಿ ಕದಂಬಕುಲದ ಆಳಿಕೆಯ ಕೊನೆಯ ವರುಷ. ಆಮೇಲೆ ಪ್ರಾರಂಭವಾದದ್ದು ವಿಜಯನಗರದ ಚಕ್ರವರ್ತಿಗಳ ರಾಜ್ಯಭಾರ. ಅವರ ರಾಜ್ಯಭಾರದಲ್ಲಿ ಅವರ ಅಧೀನರಾಗಿ ವಿವಿಧ ಕೇಂದ್ರಗಳಿಂದ ಆಡಳಿತ ನಡೆಸುತ್ತಿದ್ದವರನ್ನು ಒಡೆಯರೆಂದೂ ನಾಯಕರೆಂದೂ ಕರೆಯಲಾಗುತ್ತಿತ್ತು.ಸುಧಾಪುರಸ್ಥರಾಗಿದ್ದ ಅಂಥ ರಾಜ್ಯಪಾಲರಲ್ಲಿ ಮೊಟ್ಟ ಮೊದಲು ನಮಗೆ ತಿಳಿದುಬರುವುದು ಇಮ್ಮಡಿ ಅರಸಪ್ಪನಾಯಕನ ಹೆಸರು.

## ವಿಜಯನಗರದ ಕಾಲ

ಇಮ್ಮಡಿ ಅರಸಪ್ಪನಾಯಕನು ಸುಧೆಯಲ್ಲಿ ಆಳಲಾರಂಭಿಸಿದ್ದು ಕ್ರಿ.ಶ.೧೫೫೫ರಲ್ಲಿ. ಆದುದರಿಂದ ಸುಮಾರು ೧೪೫೦ರ ಹೊತ್ತಿಗೆ ಈತನ ಅಜ್ಜನಾದ(೧ನೆಯ ವಿಜಯನಗರದ ಆರಗ ವಿಭಾಗದ ರಾಜ್ಯಪಾಲ (೧೪೩೧-೧೪೪೦?) ಅರಸಪ್ಪ ನಾಯಕನು ವಿಜಯನಗರ ಸಾಮ್ರಾಜ್ಯದ ಒಂದು ಭಾಗದಲ್ಲಿ ಆಳುತ್ತಿದ್ದಿರಬಹುದಾಗಿದೆ. ಅಂದರೆ೧೫ನೆಯ ಶತಮಾನದಿಂದ ಸುಧಾಪುರದ ಇತಿಹಾಸವು ಪುನಃ ಆರಂಭವಾಗಿ ಮೊದಲಿಗಿಂತ ಹೆಚ್ಚಿನ ಪ್ರಸಿದ್ಧಿಯನ್ನು ಪಡೆಯತೊಡಗಿತು ಎನ್ನಬಹುದಾಗಿದೆ.೧೩೪೭ರಿಂದ ೧೪೪೭ರವರೆಗೆ ಎಂದು ಅಂದಾಜು ಮಾಡಿ ಹೇಳಬಹುದಾದ ನೂರು ವರ್ಷಗಳ ಇತಿಹಾಸವು ವಿಜಯನಗರ ಇತರ ರಾಜ್ಯಪಾಲರ ಆಡಳಿತಕ್ಕೊಳಪಟ್ಟಿತ್ತು. ಆಮೇಲೆ ವಿಜಯನಗರದ ಮಂತ್ರಿ ವೆಂಕಟಾದ್ರಿಯ ಸೋದರಳಿಯನಾದ ಇಮ್ಮಡಿ ಅರಸಪ್ಪ ನಾಯಕನು ಹೆಸರಿಗಷ್ಟೇ ಮಾಂಡಲಿಕನಾಗಿದ್ದನಲ್ಲದೆ, ವಾಸ್ತವಿಕವಾಗಿ ವಿಜಯನಗರದ

ದೊರೆಗಳಿಗೆ ಅಧೀನನಾಗಿದ್ದಿಲ್ಲ. ಆದುದರಿಂದಲೇ ಆಗ ಸುಧಾಪುರದ ಪುನಾರಚನೆಯಾಗಿ ಅದು ದಿನೇ ದಿನೇ ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿ ಹೊಂದಲಾರಂಭಿಸಿತು.

ವಿಜಯನಗರದ ಸಾಮ್ರಾಜ್ಯವು ಆದಿಯಲ್ಲಿ ಆಡಳಿತ ಸೌಕರ್ಯದ ದೃಷ್ಟಿಯಿಂದ ಸುಮಾರು ೧೨ ಪ್ರಾಂತಗಳಾಗಿ ವಿಭಕ್ತವಾಗಿತ್ತು. ಅವುಗಳಲ್ಲಿ ಒಂದಾದ ಆರಗ ಉಪರಾಜಧಾನಿಯಾಗಿದ್ದದ್ದು ಸೊರಬ ತಾಲೂಕಿನ ಚಂದ್ರಗುತ್ತಿ. ಈ ವಿಭಾಗವನ್ನು 'ಗುತ್ತಿನಾಡು' ಎಂದು ಕರೆಯಲಾಗುತ್ತಿತ್ತು. ಗುತ್ತಿನಾಡಿನ ಜಿಲ್ಲಾರೂಪದ ವಿಭಾಗಗಳು ೧೮; ಈ ಹದಿನೆಂಟು ಕಂಪಣಗಳಲ್ಲಿ (ಅಹಿಕ್ಷೇತ್ರ)ನಾಗರಖಂಡ ಎಂಬುದು ಅತ್ಯಂತ ಮುಖ್ಯವಾದುದಾಗಿತ್ತೆನ್ನುತ್ತಾರೆ. ಭಾರಂಗಿ, ಕುಪಟೂರು, ಗೇರುಸೊಪ್ಪೆ, ಸುಧಾಪುರಗಳು ನಾಗರಖಂಡ ಪ್ರದೇಶದ ಕೆಲ ಗಣ್ಯ ಪಟ್ಟಣಗಳು ಎನ್ನಿಸಿದ್ದವು. ಕುಪಟೂರು ಪ್ರಾಚೀನ ಕುಂತಳದ ಮೂಲ ನಗರ.

ವಿಜಯನಗರ ಸಾಮ್ರಾಜ್ಯದ ಆರಂಭಕಾಲದಲ್ಲಿ ಚಂದ್ರಗುತ್ತಿ ಉಪರಾಜಧಾನಿಯಲ್ಲಿ ಹರಿಹರರಾಯನ ೩ನೆಯ ತಮ್ಮನಾದ ಮಾರಪನು ರಾಜಪ್ರತಿನಿಧಿಯಾಗಿ ಆಳುತ್ತಿದ್ದನು. ೧೩೪೭ರಲ್ಲಿ ಆತನು ಹಾನುಗಲ್ಲಿನಿಂದ ಬನವಾಸಿ ಮಂಡಲವನ್ನು ಆಳುತ್ತಿದ್ದ ಪುರಂದರರಾಯ ಕದಂಬನನ್ನು ಪದಚ್ಯುತಿಗೊಳಿಸಿ ಅವನ ರಾಜ್ಯವನ್ನು ತನ್ನ ಅಣ್ಣನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡದ್ದು ಸ್ಪಷ್ಟ. ಮಾರಪನಾದ ಮೇಲೆ ವಿಜಯನಗರದ ಮಂತ್ರಿಗಳು ರಾಜಪ್ರತಿನಿಧಿಗಳಾಗಿ ರಾಜ್ಯಪಾಲರ ಮೂಲಕ ಈ ಭಾಗವನ್ನು ಆಳಿದರು. ಅವರ ಅಂಕಿತದಲ್ಲಿ ಸುಧಾಪುರದ ವಿಷಯದಲ್ಲಿ ಆನುವಂಶಿಕ ಪಾಳೆಯಗಾರರು ಆಡಳಿತ ನಡೆಸುತ್ತಿದ್ದಿರಬೇಕು. ಚಂದ್ರಗುತ್ತಿಗಿದ್ದ ಉಪರಾಜಧಾನಿ ಸ್ಥಾನವು ಸುಧಾಪುರಕ್ಕೆ ಬಂದದ್ದು ರಾಜಬಂಧು ವರ್ಗದವನೂ ರಾಜಪ್ರತಿನಿಧಿಯೂ ಆಗಿ ೧ನೆಯ ಅರಸಪ್ಪನಾಯಕನು ಆಳ ಬಂದಾಗ ಎಂದು ತೋರುತ್ತದೆ. ೨ನೆಯ ಅರಸಪ್ಪನ ಕಾಲ ಬರುವವರೆಗೆ ಸುಧಾಪುರ ಇದ್ದ ಹಾಗೇ ಇತ್ತು. ಅಮೇಲೆ ಈತನು ಅದನ್ನು ಹೊಸದಾಗಿ ಕಟ್ಟಿಸಿದನೆಂಬ ಅಂಶವು ಡಾ.ಫ್ರಾನ್ಸಿಸ್ ಬುಕಾನನ್ ಮಹಾಶಯನ ಪ್ರವಾಸದ ವರದಿಯಿಂದ ತಿಳಿದುಬರುತ್ತದೆ. ೧೫೯೩ರಲ್ಲಿ ಇಮ್ಮಡಿ ಅರಸಪ್ಪನಾಯಕ ಸುಧೆಯಲ್ಲಿ ಕೊರೆಯಿಸಿದ ಶಿಲಾಶಾಸನಗಳನ್ನು ತಾನು ಭೆಟ್ಟಿಯಾದ ಸಮಕಾಲೀನ ವಿದ್ವಜ್ಜನರ ಹೇಳಿಕೆಗಳನ್ನು ಪರಿಶೀಲಿಸಿ ಆ ಪೋರ್ಚುಗೀಸ್ ಪ್ರವಾಸಿಯು ಅರಸಪ್ಪ ನಾಯಕನ ಮನೆತನವನ್ನು ಜೈನೇತರ ಎಂಬುದನ್ನು ಸಿದ್ಧ ಮಾಡಿದ್ದಾನೆ. ಆದರೆ ವಿಜಯನಗರದ ಸಂಪ್ರದಾಯಕ್ಕೆ ಅನುಗುಣವಾಗಿ ವರ್ತಿಸಿದ ಈ ನಾಯಕರು ಜೈನದ್ವೇಷಿಗಳಾಗಿ ಇರಲಿಲ್ಲ. ಆ ಪ್ರವಾಸಿಯು ಕೇಳಿದ ಕಥನದಲ್ಲಿ ೨ನೆಯ ಅರಸಪ್ಪನು ವೆಂಕಟಪತಿರಾಯನ ಅಥವಾ ಸದಾಶಿವರಾಯನ ಸೋದರಳಿಯ ಎಂದು ಹೇಳಿರುವುದು ಅಸಮರ್ಥನೀಯ. ರಾಜವಂಶಾವಳಿಯಲ್ಲಿ ಸದಾಶಿವರಾಯನ (೧೫೪೨–೧೫೭೦) ಚಿಕ್ಕಪ್ಪನ ಮಗ ವೆಂಕಟ(ಪತಿರಾಯ)ನ ಉಲ್ಲೇಖವಿದೆ. ಈತನು ವಿಜಯನಗರದ ಚಕ್ರವರ್ತಿಗಳ ೪ ವಂಶಗಳಲ್ಲಿ ೩ನೆಯದಾದ ತುಳುವಂಶಕ್ಕೆ ಸೇರಿದವನು. ಆದರೆ ಅಪ್ರಾಯಸ್ಥನಾಗಿದ್ದ ಈತನು ತನ್ನ (ಚಿಕ್ಕಪ್ಪನಿಂದಲೋ,

ಸೋದರಮಾವನಿಂದಲೋ) ಕೊಲ್ಲಲ್ಪಟ್ಟಿದ್ದರಿಂದ ರಾಜ್ಯವನ್ನು ಬಹಳಕಾಲ ಆಳಲಿಲ್ಲ. ಈತನಂತೆಯೇ ಅಪ್ರಾಯಸ್ಥನಾಗಿದ್ದ ಈತನ ಚಿಕ್ಕಪ್ಪನ (ಅಥವಾ ದೊಡ್ಡಪ್ಪನ) ಮಗನಾದ ಸದಾಶಿವರಾಯನನ್ನು(ಮತ್ತೊಬ್ಬ ದೊಡ್ಡಪ್ಪನಾದ ಕೃಷ್ಣದೇವರಾಯನ ಅಳಿಯನಾದ ಅರವೀಡು ಕುಟುಂಬದ) ರಾಮರಾಯನು ಪಟ್ಟಕ್ಕೇರಿಸಿ, ತಾನೇ(೧೫೪೨-೧೫೬೭) ರಾಜ್ಯವನ್ನು ಆಳಿದನು. ಆತನಾದ ಮೇಲೆ ಅವನ ತಮ್ಮ ತಿರುಮಲರಾಯ ನಡೆಸಿದ್ದು ಅಂಥದೇ ರಾಜ್ಯಭಾರ. ಆಮೇಲೆ ಅವನ ಮಗ ೧ನೆಯ ಶ್ರೀರಂಗನೂ (೧೫೭೨-೧೫೮೫) ಕೊನೆಯ ಮಗ ವೆಂಕಟಪತಿಯೂ (೧೫೮೫-೧೬೧೪) ವಿಜಯನಗರದ ಸಿಂಹಾಸನವನ್ನು ಏರಿ ನೇರವಾಗಿ ಆಡಳಿತ ನಡೆಸಿದರು.

ಇಮ್ಮಡಿ( South Indian Inscription Vol.XX, No.241) ಅರಸಪ್ಪನಾಯಕನ ದೊರೆತನ ಸುಧೆಯಲ್ಲಿ ಆರಂಭವಾದದ್ದು ಕ್ರಿ.ಶ.೧೫೫೫-೫೬ರಲ್ಲಿ. ಬ್ರಾಹ್ಮಣನಾಗಿದ್ದ ಇವನು ವಿಧರ್ಮೀಯರಾಗಿದ್ದ ಜೈನಪಾಳೆಯಗಾರರಲ್ಲಿ ಪ್ರತಿಭಟಿಸಿದವರನ್ನು(ಬುಕಾನನ್ ಬರೆದಂತೆ) ಬಲಪ್ರಯೋಗದಿಂದ ಬಗ್ಗಿಸಿರಬೇಕು. ಮಯೂರಶರ್ಮ ಕದಂಬ ಚಕ್ರವರ್ತಿಯು ಜೈನನಾಗಿದ್ದಿಲ್ಲ ಎಂಬುದು ಸುಪ್ರಸಿದ್ಧ. ಹಾನುಗಲ್ ರಾಜಧಾನಿಯಿಂದ ಬನವಾಸಿ ಮಂಡಲವನ್ನು ಮಾಂಡಲಿಕನಾಗಿ ಆಳುತ್ತಿದ್ದ ೨ನೆಯ ಅಥವಾ ೩ನೆಯ ಮಯೂರವರ್ಮನೂ ಜೈನನಾಗಿದ್ದಿಲ್ಲ; ಹಾನುಗಲ್ಲಿನಲ್ಲಿದ್ದ ಬನವಾಸಿಯ ಕದಂಬ ಮಹಾ ಮಂಡಲೇಶ್ವರರು ರಾಮಾನುಜೀಯ ವೈಷ್ಣವಪಂಥಕ್ಕೆ ಒಲಿದಿದ್ದರೆಂದು ಕೆಲವರ ಮತ. ಸುಧಾಪುರದ-ಆದುದರಿಂದ ಅದರ ಸುತ್ತು ಮುತ್ತಲಿನ ಪ್ರದೇಶದಲ್ಲಿ ಕೆಲ ಕದಂಬ ವಂಶೀಯರು ಜೈನಮತಾವಲಂಬಿಗಳಾಗಿ ಪಾಳೆಯಗಾರಿಕೆಯನ್ನು ನಡೆಸಿಕೊಂಡಿದ್ದರೆಂಬ ಮಾತನ್ನು ಒಮ್ಮೆ ಒಪ್ಪಿದರೂ ಕದಂಬರ ಖ್ಯಾತಿ ಸಂಪೂರ್ಣವಾಗಿ ಅಳಿದುಹೋಗಿದ್ದ ಈ ಅವಧಿಯಲ್ಲಿ ವಿಜಯನಗರದ ಅರಸರು ರಾಜ್ಯಪಾಲಿಕೆಯ ನಾಯಕಪಟ್ಟವನ್ನು ಅವರ ವಂಶದ ಅಪ್ರತಿಷ್ಠಿತ ಜಮೀನುದಾರರಿಗೆ ವಹಿಸಿಕೊಟ್ಟರೆಂಬುದು ನಂಬಲರ್ಹವಾಗದು; ತಮ್ಮ ರಕ್ತಸಂಬಂಧಿಯಾದ ಅರಸಪ್ಪ ನಾಯಕ ಮನೆತನಕ್ಕೆ ಅದನ್ನು ಕೊಟ್ಟದ್ದೇ ಪ್ರಾಚೀನ ಭಾರತೀಯ ರಾಜಕೀಯ ಸಂಪ್ರದಾಯದ ಪ್ರಕಾರ ಹೆಚ್ಚು ಸಂಭವ. ಒಂದನೆಯ ಅರಸಪ್ಪ ಮತ್ತು ಅವನ ಮಗನ ಕಾಲದಲ್ಲಿ ನಾಯಕತ್ವದಲ್ಲಿದ್ದ ಆ ಮನೆತನವು ೨ನೆಯ ಅರಸಪ್ಪನ ಕಾಲದಲ್ಲಿ ಹೆಸರಿಗೆ ಮಾತ್ರ 'ನಾಯಕ' ಎಂಬ ಬಿರುದನ್ನು ಇಟ್ಟುಕೊಂಡು ೧೫೪೨ರಲ್ಲಿ ಪಟ್ಟಕ್ಕೆ ಬಂದ ಅಪ್ರಾಯಸ್ಥ ಸದಾಶಿವರಾಯನೆಂಬ ಚಕ್ರವರ್ತಿಯನ್ನು ತಣ್ಣಗಿರಿಸಿ ಕೃಷ್ಣದೇವರಾಯನ ಅಳಿಯ ರಾಮರಾಯನು ರಾಜ್ಯಭಾರ ಮಾಡುತ್ತಿರುವುದನ್ನು ಗಮನಿಸಿ, ಇಮ್ಮಡಿ ಅರಸಪ್ಪ ನಾಯಕನು ಸ್ವತಂತ್ರನಾಗಿ ರಾಜ್ಯಭಾರವನ್ನು (೧೫೫೫ರಲ್ಲಿ) ಸುಧಾಮಂಡಲದಲ್ಲಿ ನಡೆಸಲಾರಂಭಿಸಿದ್ದು ಸಹಜವೆಂದು ತೋರುತ್ತದೆ. ಈತನು ಸುಧೆಯ ವಾದಿರಾಜ ಮಠವನ್ನೂ, ಸ್ವರ್ಣವಲ್ಲೀ ಮಠವನ್ನೂ ಕಟ್ಟಿಸಿಕೊಟ್ಟು ಅಲ್ಲಿಯ ಗುರುಗಳನ್ನು ಗೌರವಾದರಗಳಿಂದ ನೋಡುತ್ತಿದ್ದನಲ್ಲದೆ, ಅವುಗಳಿಗೆ ದತ್ತಿ-ದಾನಗಳನ್ನೂ ಕೊಟ್ಟಿದ್ದನು.

ಇಮ್ಮಡಿ ಅರಸಪ್ಪನ ಕಾಲಾನಂತರ ಈತನ ಮಗ ರಾಮಚಂದ್ರನಾಯಕನೂ (೧೫೯೮–೧೬೧೮) ಮೊಮ್ಮಗ ರಘುನಾಥನಾಯಕನೂ(೧೬೧೮–೧೬೩೮) ಸುಧಾರಾಜ್ಯವನ್ನು ಚೆನ್ನಾಗಿ ಆಳಿದರು. ರಘುನಾಥನ ಕಾಲದಲ್ಲಿ ಸುಧಾಪುರದ ಸುತ್ತಲೂ ೭ ಸುತ್ತಿನ ಕೋಟೆಯಿಂದ ಹೊರವಲಯವಾಗಿದ್ದ ಶಿರೀಷಪುರವೂ ಆಗಲೇ ಕೋಟೆಯಿಂದ ಭದ್ರಗೊಳಿಸಲ್ಪಟ್ಟಿರಬೇಕು. ಸುಧಾಪುರದ ಅವಶೇಷಗಳಲ್ಲಿ ಈಗ ಅರಮನೆಯ ನ್ಯಾಯಪೀಠದ ಅತಿ ದೊಡ್ಡ ಕಲ್ಲುಮಂಚವೊಂದು ಉಳಿದಿದೆ. ಅತ್ಯಲ್ಪ ಮಟ್ಟಕ್ಕಿಳಿದಿರುವ ಕೋಟೆಯ ಗೋಡೆಗಳನ್ನು ಕಂಡರೆ ಅವು ಮಣ್ಣಿನಿಂದ ರಚಿತವಾಗಿದ್ದಂತೆ ತೋರುತ್ತವೆ. ಸುಪೆ, ಪಲ್ಲಿಯಾಳ, ಎಲ್ಲಾಪುರ, ಶಿರಸೆ, ಕದ್ರೆ, ಶಿವೇಶ್ವರ, ಬಾಡ, ಕಡವಾಡ, ಆಂಕೋಲೆ, ಪೋಂಡೆ, ಸಾಂಘೆ, ಕಾಣಕೋಣ, ಹೇಮದಬಾರಸಿ, ಜಂಭಾವ್ಲಿ, ಕಾಕದೇನು, ಬಲಿ, ಪಯನಘಾಟು, ಬೋಲಘಾಟು ಮತ್ತು ಕಾಪರಾಮೋಸಗಳು ಸುಧಾರಾಜ್ಯದ ಭಾಗಗಳಾಗಿದ್ದವು.

ಬನವಾಸಿಯ ಮಧುಕೇಶ್ವರ ದೇವಾಲಯದಲ್ಲಿ ಇರುವ ಸಾಮಾನ್ಯ ಅಳತೆಯ ಕಲ್ಲುಮಂಚವನ್ನು ದೇವರಿಗಾಗಿ ಮಾಡಿಸಿಕೊಟ್ಟದ್ದು ರಘುನಾಥನೇ. ಈ ಮಂಚದಲ್ಲಿ ಕಂಡುಬರುವ ನಯವೂ ಸೂಕ್ಷ್ಮವೂ ಆದ ಕುಸುರುಗೆಲಸವು ಶಿಲ್ಪಿಯ ಉನ್ನತಮಟ್ಟದ ಕಲೆಗಾರಿಕೆಯನ್ನು ವ್ಯಕ್ತಗೊಳಿಸುತ್ತದೆ.ಸುಧಾಪುರದ ಕಾಡಿನ ನಡುವೆ ಅವಶಿಷ್ಟವಾಗಿರುವ ಹಲವಾರು ದೇವಾಲಯಗಳು ನಾಯಕರ ಶಿಲ್ಪ ಕಲಾಭಿಮಾನವನ್ನೂ ದೈವಭಕ್ತಿಯನ್ನೂ ಬಿಂಬಿಸುತ್ತವೆ. ಪುಷ್ಕರಿಣಿಗಳ ಕಟ್ಟೆಗಳೂ ಮಂಟಪಗಳೂ ಮೂರ್ತಿಗಳೂ ಈ ಅರಸರ ಸ್ಫೂರ್ತಿದಾಯಕ ಸ್ಮಾರಕಗಳಾಗಿ ಈಗಲೂ ಉಳಿದಿವೆ.

ರಘುನಾಥ ನಾಯಕನ ಕಾಲವಾದ ಮೇಲೆ ಅವನ ಮಗ ಮಧುಲಿಂಗನಾಯಕನ ಪಟ್ಟಕ್ಕೆ ಬಂದನು. ಈತನು ೧೬೩೮ರಿಂದ೧೬೭೪ರವರೆಗೆ ರಾಜ್ಯಭಾರ ಮಾಡಿದನು. ಈತನ ಕಾಲದಲ್ಲಿ ಈ ಪ್ರದೇಶಕ್ಕೆ ವೀರಶೈವ ಮತದ ಪ್ರಚಾರಕರು ಮೇಲಿಂದ ಮೇಲೆ ಬರತೊಡಗಿದರು. ಅದರ ಫಲವಾಗಿ ಇವನು ವೀರಶೈವ ಮತದತ್ತ ಒಲೆದನೆಂದು ಪ್ರತೀತಿ. ವೀರಶೈವ ಮಠಮಾನ್ಯಗಳು ಈ ಪ್ರದೇಶದಲ್ಲಿ ಸ್ಥಾಪಿತವಾದದ್ದು ಇವನ ಕಾಲದಲ್ಲಿಯೇ. ಇವನಾದ ಬಳಿಕ ಇವನ ಮಗ ೧ನೆಯ ಸದಾಶಿವನು ಪಟ್ಟಕ್ಕೆ ಬಂದು೧೬೭೪ರಿಂದ ೧೭೯೭ರವರೆಗೆ ಅರಸೊತ್ತಿಗೆಯನ್ನು ನಡೆಯಿಸಿದನು. ಈತನ ಶೈವೋತ್ಸಾಹವು ಈತನಿಂದ ಸುಧಾಪುರದ ಕೋಟೆಯ ಸುತ್ತ ಹರಿವ ನದಿಯ ಪಾತಳಿಯಲ್ಲಿ(ಪಾತ್ರದಲ್ಲಿ) ಇದ್ದ ಬಂಡೆಗಳಲ್ಲಿ ಲಿಂಗಗಳನ್ನೂ ಬಸವವಿಗ್ರಹಗಳನ್ನೂ ಮಾಡಿಸಿತು. ಆ ಸ್ಥಳವಿಂದು 'ಸಹಸ್ರಲಿಂಗ' ಎಂಬ ಪ್ರಸಿದ್ಧ ಯಾತ್ರಾಸ್ಥಳವಾಗಿದೆ. ಬನವಾಸಿಯ ಮಧುಕೇಶ್ವರ ದೇವಾಲಯದಲ್ಲಿರುವ ಪಾರ್ವತಿಯ ಗುಡಿಯ ಕಲ್ಲಿನ ಮಂಟಪವನ್ನು ಈತನ ಮೊಮ್ಮಗ ೨ನೆಯ ಸದಾಶಿವ ಕಟ್ಟಿಸಿಕೊಟ್ಟದ್ದು. ಈತನ ಕಾಲದಿಂದ 'ನಾಯಕ' ಎಂಬ ಚಿಕ್ಕ ಬಿರುದನ್ನು ಬಿಟ್ಟು 'ರಾಯ' ಎಂಬ ದೊಡ್ಡ ಬಿರುದನ್ನು ಈ ಮನೆತನವು ಧರಿಸಲಾರಂಭಿಸಿತು. ಇವನಾದ ಮೇಲೆ ಇವನ ಮಗ

ಬಸವಲಿಂಗರಾಯನೂ(೧೬೭೭-೧೭೪೫) ಮೊಮ್ಮಗ ಇಮ್ಮಡಿ ಸದಾಶಿವರಾಯನೂ (೧೭೪೭-೧೭೬೩) ವಿಜಯನಗರ ಜ್ಯೋತಿಯ ಕೊನೆಯ ಕಳಿಕೆಗಳಾಗಿ ಸುಧಾಪುರವನ್ನು ಪರಂಪರೆಯಂತೆ ಜನಪ್ರಿಯವಾಗಿ ಆಳಿದರು.

ನಾಯಕರ ಆಳಿಕೆಯಲ್ಲಿ ನೀರಾವರಿಯತ್ತ ಹೆಚ್ಚು ಲಕ್ಷ್ಯವನ್ನು ಹಾಕಲಾಯಿತು; ಎಕರೆವಾರು ಕಂದಾಯಗಳನ್ನು ನಿರ್ಧರಿಸಿ ವಸೂಲುಮಾಡಲಾಗುತ್ತಿತ್ತು. ಆ ನಿರ್ಧಾರಗಳು(Permanent) ಚಿರಕಾಲ ಉಳಿಯುವಂಥವುಗಳಾಗಿದ್ದವು. ವಿಜಯನಗರ ಚಕ್ರವರ್ತಿಯೊಬ್ಬನ ಕಾಲದಲ್ಲಿ ಹೇರಿದ್ದ ವಿವಾಹಕರ ಮುಂತಾದ ಅಸ್ವಾಭಾವಿಕ ಕರಗಳನ್ನು ತೆಗೆದುಹಾಕಲಾಯಿತು. ಸೈನಿಕ ಸಿದ್ಧತೆಯಲ್ಲಿ ಕೋಟೆಯು ಪ್ರಾಮುಖ್ಯವನ್ನು ಪಡೆಯಿತು. ಅಶ್ವಬಲ, ಪದಾತಿಬಲಗಳು ಚೆನ್ನಾಗಿದ್ದವು. ಆದರೆ ಆಗ್ನೇಯ ಯಂತ್ರಾಸ್ತ್ರ ಬಲ ಮಾತ್ರ ಬಹಳ ಕೆಳಮಟ್ಟದ್ದಾಗಿತ್ತು. ಮುಸಲ್ಮಾನ ರಾಜರಲ್ಲಿ ಯಂತ್ರಾಸ್ತ್ರಬಲ ಹೆಚ್ಚಿನಮಟ್ಟದ್ದಾಗಿರುತ್ತಿತ್ತು. ಹಿಂದು ರಾಜರ ಅಂತಃಕಲಹಗಳೂ ಹೆಚ್ಚುತ್ತ ಹೋದವು. ಹಾಗೆಯೇ ಅವರು ತಾಳೀಕೋಟೆಯ ಬಳಿಕ ಅನೇಕ ಬಾರಿ ಹಿಂದು ಅರಸರ ರಾಜಧಾನಿಗಳನ್ನು ಹೊಕ್ಕು ಕಟ್ಟಡಗಳನ್ನು ನಾಶಮಾಡಿ, ಐಶ್ವರ್ಯವನ್ನು ದೋಚಿಕೊಂಡು ಹೋಗಲು ಮತ್ತು ಕೆಲವೆಡೆ ಸ್ಥಿರಪಟ್ಟದ ರಾಜ್ಯಾಧಿಕಾರವನ್ನು ಪಡೆಯಲು ಶಕ್ತರಾದರು.

## ಹಿಂದಿನ ಆಡಳಿತ ಕ್ರಮ

ಕದಂಬ ಯುಗದಲ್ಲಿ ಪ್ರತಿಯೊಂದು ಹಳ್ಳಿಯೂ ಒಂದು ಸ್ವಯಂಪೂರ್ಣ ಘಟಕವಾಗಿತ್ತು. ಪೂಜಾರಿ, ದೇವಾಲಯ, ಬಡಿಗ, ಕಮ್ಮಾರ, ಕ್ಷೌರಿಕರಿಲ್ಲದ ಗ್ರಾಮವಿರಲಿಲ್ಲ. ದೇವಾಲಯಗಳು ಶಿಕ್ಷಣಾಲಯಗಳಾಗಿದ್ದವು. ಕಾರ್ಯಪಾಲನ ಹಾಗೂ ನ್ಯಾಯಪಾಲನಗಳ ಅಧಿಕಾರಗಳಿದ್ದ ಪಂಚಾಯತ ಮತ್ತು ಅದರ ಗೌಡ ಗ್ರಾಮಪ್ರಶಾಸನ ನಡೆಸುತ್ತಿದ್ದರು. ವಿಶೇಷ ಸಂದರ್ಭದಲ್ಲಿ ಹೆಚ್ಚಿನ ಪ್ರಶ್ನೆಗಳನ್ನು ಬಗೆಹರಿಸಲು ಗ್ರಾಮ ಮಹಾಸಭೆಯನ್ನು ಸೇರಿಸಲಾಗುತ್ತಿತ್ತು. ಇಡಿ ಗ್ರಾಮಕ್ಕೆ ಉಪಕಾರವಾಗುವಂಥ ಕೆಲಸವನ್ನು ಮಾಡಿದವನಿಗೆ ಭೂಮಿಯನ್ನು ಮಹಾಸಭೆಯು ದಾನ ಕೊಟ್ಟದ್ದುಂಟು. ಕೆಳಮಟ್ಟದ ಸೇವಕನೊಬ್ಬನು ಊರಿಗೆ ಉಪಕಾರವಾಗುವ ಕಾರ್ಯವನ್ನು ಮಾಡಿದಾಗಲೂ ಅವನಿಗೆ ಸ್ಮಾರಕವನ್ನು ರಚಿಸಿ, ಅವನ ಕುಟುಂಬಕ್ಕೆ ವಿಶೇಷ ಸಹಾಯವನ್ನು ಸಲ್ಲಿಸಲಾಗುತ್ತಿತ್ತು ಎಂಬುದು ಶಾಸನಸಿದ್ಧ.

ಸುಧಾಪುರ(ಸೋದೆ) ಅಂದು ಒಂದು ಉಪಪಟ್ಟಣವಾಗಿತ್ತು. ಪಟ್ಟಣದ ಪಂಚಾಯತದ ಅಧ್ಯಕ್ಷನನ್ನು 'ಪಟ್ಟಣಸ್ವಾಮಿ' ಎಂದು ಕರೆಯಲಾಗುತ್ತಿತ್ತು. ರೋಗ-ನೈರ್ಮಲ್ಯಗಳ ವ್ಯವಸ್ಥೆ, ಪ್ರವಾಸಿಕರ ಅನುಕೂಲಕ್ಕಾಗಿ ಧರ್ಮಛತ್ರಗಳನ್ನು ಇಟ್ಟು ನಡೆಸುವುದು, ರಸ್ತೆ-ಸೇತು ಮುಂತಾದವುಗಳನ್ನು ಕಟ್ಟಿಸುವುದು ಹಾಗೂ ದುರಸ್ತು ಮಾಡಿಸುವುದು ಎಂಬೀ ಕೆಲಸಗಳಲ್ಲದೆ, ಇಡಿ ಪಟ್ಟಣದ ಹಿತಕ್ಕೆ ಸಂಬಂಧಿಸಿದ ಇತರ

ವಿವಿಧ ಅಭಿವೃದ್ಧಿ ಕಾರ್ಯಗಳನ್ನೂ ಅಂದಿನ 'ಮ್ಯುನಿಸಿಪಾಲಿಟಿ' ನಡೆಯಿಸುತ್ತಿತ್ತೆಂದರೆ ಯಾರೂ ಅಭಿಮಾನಪಡದೆ ಉಳಿಯಲಾರರು.

ಎಷ್ಟೋ ವೇಳೆ ಪಟ್ಟಣಗಳಿಗೆ ವಿಶಿಷ್ಟವಾದ ವ್ಯಾಜ್ಯಘಟನೆಯನ್ನು(ಸಂವಿಧಾನವನ್ನು) ರಾಜರು ವಿಚಾರಿಸಿ ಕಳಿಸುತ್ತಿದ್ದರು. ವೈಶಾಖ ಮಾಸದಲ್ಲಿ ಪಟ್ಟಣವಾಸಿಗಳು ವಾರ್ಷಿಕ ಮನೆಗಂದಾಯವನ್ನು ಕೊಡುವುದು ಅಂದಿನ ರೂಢಿ. ಸಾರ್ವಜನಿಕ ಉತ್ಸವ ಜಾತ್ರೆಗಳನ್ನು ನಡೆಸಲು ಶ್ರೀಮಂತರ ಕುಟುಂಬವು ೧೦ ಪಣಗಳನ್ನೂ ಮಧ್ಯಮ ಕುಟುಂಬವು ೭ಪಣಗಳನ್ನೂ, ಕೆಳಮಟ್ಟದ ಕುಟುಂಬವು ೫ ಪಣಗಳನ್ನೂ ಕೊಡಬೇಕಾಗಿತ್ತು. ಅದಕ್ಕೂ ಕೆಳಗಿನ ಕುಟುಂಬವಿದ್ದರೆ ಅದು ೩ ಪಣಗಳನ್ನು ತೆರಬೇಕಾಗಿತ್ತು, ಕಳ್ಳಕಾಕರಿಗೆ ಮತ್ತು ಪುಂಡಾಟಿಕೆ ನಡೆಸಿದವರಿಗೆ ದಂಡವನ್ನು ಹೇರಲಾಗುತ್ತಿತ್ತು. ಮದ್ಯಪಾನ–ಜೂಜಾಟಗಳು ಅಪರಾಧಗಳ ವರ್ಗಕ್ಕೆ ಸೇರಿದ್ದವು. ವಾರಸುದಾರರಿಲ್ಲದ ಕುಟುಂಬದ ಆಸ್ತಿಯು ಪಟ್ಟಣ ಪಂಚಾಯತಕ್ಕೆ ಸೇರುತ್ತಿತ್ತು. ಕಾರ್ತಿಕಮಾಸದಲ್ಲಿ ಅಂಥ ಆಸ್ತಿಯನ್ನು ಅಧಿಕೃತವಾಗಿ ವಶಪಡಿಸಿಕೊಳ್ಳಲಾಗುತ್ತಿತ್ತು. ಅಂಗಡಿಕಾರರು 'ಸರ್ವಾಯ'ವೆಂಬ ತೆರಿಗೆಯನ್ನು ಕೊಡಬೇಕಾಗಿತ್ತು. ೧೬ ಚಿನ್ನದ ಗದ್ಯಾಣಗಳನ್ನು ಧರ್ಮಕಾರ್ಯ ಫಂಡಿಗೆಂದು ಅವರು ಪ್ರತಿವರ್ಷವೂ ಪಂಚಾಯತಕ್ಕೆ ಸಲ್ಲಿಸಬೇಕಾಗಿತ್ತು. ಪಂಚಾಯತದ ಕೌನ್ಸಿಲ್ಲಿನಲ್ಲಿ ೮ ಜನ ಸೆಟ್ಟರು ಇರುತ್ತಿದ್ದರು.

ಪಟ್ಟಣಗಳ ಕಾವಲುಗಾರರನ್ನು 'ಅರತಳಾರ'ರೆಂದು ಕರೆಯುತ್ತಿದ್ದರು. ಪಟ್ಟಣದಲ್ಲಿ ಕಳವಾದ ಮಾಲುಗಳನ್ನು ಹುಡುಕಿ ತಂದುಕೊಡುವುದು ಅಥವಾ ನಷ್ಟಭರ್ತಿ ಮಾಡಿಕೊಡುವುದು ಅವರ ಕರ್ತವ್ಯವಾಗಿತ್ತು. ಹೊಡೆದಾಟ ಮಾಡಿದ ಅಪರಾಧಿಗೆ ದಂಡವನ್ನುವಿಧಿಸಲಾಗುತ್ತಿತ್ತು. ಪ್ರತಿಯೊಬ್ಬನ ತಪ್ಪಿಗೂ ಅವನವನೇ ಹೊಣೆ. ಇತರ ಯಾರೂ ಅವನ ತಪ್ಪಿಗಾಗಿ ಶಿಕ್ಷೆಗೆ ಪಾತ್ರರಾಗುತ್ತಿದ್ದಿಲ್ಲ. ಹೊಡೆದಾತನು ೩ ಗದ್ಯಾಣಗಳಷ್ಟು ದಂಡವನ್ನು ತೆರೆಬೇಕಾಗಿತ್ತು.

## ಸಾಮಾಜಿಕ ಜೀವನ

ಗಂಡಸರು ಅಂದು ಧೋತ್ರವನ್ನು ಉಡುತ್ತಿದ್ದರು. ಅವರ ಮೈಯ ಮೇಲ್ಭಾಗ ಹಾಗೇ ಇರುತ್ತಿತ್ತು. ತಲೆಗೆ ಅವರು ಮುಂಡಾಸವನ್ನು ಸುತ್ತುತ್ತಿದ್ದರು. ತಲೆಯಲ್ಲಿ ಹಿಂಜುಟ್ಟವಿರುತ್ತಿತ್ತು. ಯೋಧರ ಕಿವಿಯಲ್ಲಿ ದೊಡ್ಡವಾದ ಉಂಗುರದ ಒಂಟಿಗಳಿರುತ್ತಿದ್ದವು. ಹೆಂಗಸರು ಸೀರೆಯನ್ನು ಉಡುತ್ತಿದ್ದರು; ರವಕೆಗಳನ್ನು ತೊಡುತ್ತಿದ್ದರು. ರಾಣಿಯರು ಕಿರೀಟವನ್ನು ಧರಿಸುತ್ತಿದ್ದರು. ಕೈಗೆ ಬಳೆ, ತೋಳುಗಳಿಗೆ ತೋಳುಬಂಧಿ(ವಂಕಿ) ಮತ್ತು ಕಾಲುಗಳಿಗೆ ಗೆಜ್ಜೆಪಾಡಗ ಅಂದಿನ ಸ್ತ್ರೀಯರ ಆಭರಣಗಳಲ್ಲಿ ಮುಖ್ಯವಾದಂಥವು. ಸೂಳೆಯರು ಕುಪ್ಪಸಗಳನ್ನು ತೊಡುತ್ತಿದ್ದಿಲ್ಲ. ಪಾಯಿಜಾಮಗಳನ್ನು ಧರಿಸುತ್ತಿದ್ದರು. ಆಮೇಲೆ ಸೀರೆ, ಬೆಂಡೋಲೆ, ಸರ, ವಂಕಿ, ನಾಗಮುರಿಗೆ ಮುಂತಾದ ಆಭರಣಗಳ ಧಾರಣ.

ಮಠಗಳಲ್ಲೂ ಅಗ್ರಹಾರ(ವಿದ್ಯಾಲಯ)ಗಳಲ್ಲೂ ಆಟ–ನಾಟಕಗಳು ನಡೆಯುತ್ತಿದ್ದವು. ಓಲಗ, ನೃತ್ಯ, ಸಂಗೀತಗಳ ಕಾರ್ಯಕ್ರಮಗಳನ್ನೂ ನಡೆಯಿಸಲಾಗುತ್ತಿತ್ತು. ೬ ತಂತಿಗಳನ್ನುಳ್ಳ ಸಮತಟ್ಟಾದ ಚಿನ್ನದ ವೀಣೆ, ಕೊಳಲು, ಕಟುಮುಖವಾದಿತ್ರ, ಸಮುದ್ರಘೋಷ, ತಿಯುಳಿ, ಪೆರ್ಮತ್ತಿ, ತೂರ್ಕ(ಕಹಳೆ), ಭೇರಿ–ನಗಾರಿಗಳು ಅಂದಿನ ವಾದ್ಯಗಳು. ನೃತ್ಯವು ಸಾಮಾಜಿಕ ಕಲೆಯಾಗಿತ್ತು; ಸ್ತ್ರೀಪುರುಷರಿಬ್ಬರೂ ಅದರಲ್ಲಿಭಾಗವಹಿಸುತ್ತಿದ್ದರು!

ಬಾಲ್ಯವಿವಾಹ ಅಂದು ಇರಲಿಲ್ಲ; ಪ್ರೇಮವಿವಾಹ ಕೆಲವೆಡೆ ಹೆಚ್ಚಾಗಿತ್ತು. ಸ್ವಯಂವರಗಳಲ್ಲಿ ರಾಜಕುಮಾರಿಯರು ತಮ ತಮಗೆ ಬೇಕಾದ ವರರನ್ನು ಆಯ್ದುಕೊಂಡದ್ದೂ ಉಂಟು. ಸಹಗಮನ ಪದ್ಧತಿ ರೂಢಿಯಲ್ಲಿತ್ತು. ರಾಜ–ರಾಣಿಯರಲ್ಲಿ ಭಕ್ತಿ ಇದ್ದವರು ಅವರು ಸತ್ತಾಗ ಕೆಲವೆಡೆ ಚಿತೆಯಲ್ಲಿ ಹಾರಿ ತಾವೂ ಸಾಯುತ್ತಿದ್ದರು. ಅಥವಾ ತಲೆ ಕಡಿದುಕೊಂಡು ಜೀವನಕ್ಕೆ ಇತಿಶ್ರೀ ಬರೆದುಕೊಳ್ಳುತ್ತಿದ್ದರು. ಸ್ವಾಮಿನಿಷ್ಠ ವೀರರ ಕುಟುಂಬಗಳಿಗೆ ರಾಜರು ಉಂಬಳಿ–ಉತ್ತಾರಗಳನ್ನು ಕೊಡುತ್ತಿದ್ದರು. ಶಾಂತಿವರ್ಮ ಕದಂಬನಿಗೆ ಪುತ್ರೋತ್ಸವವಾದರೆ ತಲೆ ಕೊಡುವೆನೆಂದು ಒಬ್ಬ ಪ್ರಜೆ ಹೈವೆಯ ದೇವಿಗೆ ಹರಕೆಹೊತ್ತ; ರಾಜಪುತ್ರ ಜನಿಸಿದ ಕೂಡಲೇ ಅವನು ತಲೆಕೊಟ್ಟನೆಂದು ಶಾಸನ ಹೇಳುತ್ತದೆ. ಅವನಿಗೆ ಹೆಚ್ಚಿನ ರಾಜಮರ್ಯಾದೆ ಸಂದದ್ದು ಉತ್ತರಕ್ರಿಯೆಯಲ್ಲಿ ಮತ್ತು ಅವನ ಕುಟುಂಬಕ್ಕೆ ದೊರೆತ ಉಂಬಳಿ–ಉತ್ತಾರಗಳಲ್ಲಿ.

## ವ್ಯಾಪಾರ–ವ್ಯವಹಾರ

ಚಿನ್ನ, ಬೆಳ್ಳಿ, ಹತ್ತಿಯ ಬಟ್ಟೆ, ಆಹಾರಪದಾರ್ಥ, ಭತ್ತ, ಮೆಣಸಿನಕಾಳು, ಹಣ್ಣು, ಎಣ್ಣೆ, ಸಂಬಾರದ ಜೀನಸು, ಕರ್ಪೂರ, ಪರಿಮಳ ದ್ರವ್ಯ, ವೀಳೆಯದೆಲೆ ಮುಂತಾದವು ಅಂದು ಈ ಪ್ರದೇಶದ ವ್ಯಾಪಾರಿಗಳು ಮಾರಾಟ ಮಾಡುತ್ತಿದ್ದ ವಸ್ತುಗಳಲ್ಲಿ ಮುಖ್ಯವಾದಂಥವು.

ನೂಲುವುದು, ನೇಯುವುದು, ಕಲ್ಲುಕೆತ್ತುವುದು, ಹಿತ್ತಾಳೆಯ ಪಾತ್ರೆಗಳನ್ನು ತಯಾರಿಸುವುದು, ಮರಗೆಲಸ, ಆಭರಣ ನಿರ್ಮಾಣ, ಕಬ್ಬಿಣದ ಸಾಮಾನುಗಳ ತಯಾರಿಕೆ, ಎಣ್ಣೆ ಹಿಂಡುವುದು, ಬುಟ್ಟಿ–ಚಾಪೆ ಮುಂತಾದವನ್ನು ಹೆಣೆಯುವುದು ಮುಂತಾದವು ಈ ಕುಂತಳ ಕೇಂದ್ರದ ಸಾಮಾನ್ಯ ವಾಣಿಜ್ಯ ಕಲೆಗಳಾಗಿದ್ದವು. ವ್ಯಾಪಾರಿಗಳಲ್ಲಿ ಸ್ಥಾಯಿ(ಸ್ಥಳೀಯ), ಸಂಚಾರಿ(Itinerant) ಮತ್ತು ವಿದೇಶೀಯ ಎಂಬ ವರ್ಗಗಳಿದ್ದವು. ಸಂರಕ್ಷಿತ ವ್ಯಾಪಾರಿಗಳೆಂಬ ನಾಲ್ಕನೆಯ ವರ್ಗವೊಂದು ಇತ್ತೆಂಬುದೂ ಒಂದು ಶಾಸನದಿಂದ ತಿಳಿದುಬರುತ್ತದೆ. ಇದು ರಾಜಾಶ್ರಯ ಪಡೆದ ವಿದೇಶೀಯ ವ್ಯಾಪಾರಿಗಳ ಒಂದು ಗುಂಪು. ಎಲ್ಲ ವ್ಯಾಪಾರವೃತ್ತಿಗೂ ಸಾಧಾರಣವಾಗಿ ಬಣಜಿಗತನವೆಂದು ಜನ ಹೇಳುತ್ತಿದ್ದು ಪಟ್ಟಣಗಳಲ್ಲಿ ವಿವಿಧ ವಾಣಿಜ್ಯಸಂಘಗಳು(Guilds) ಇದ್ದವು. ಅವುಗಳಂತೆಯೇ ಕಸುಬುದಾರರ ಸಂಘಗಳೂ ಇರುತ್ತಿದ್ದವು. ಹಣ್ಣು ಮಾರುವವರ ಸಂಘ, ಬಟ್ಟೆ ಮಾರಾಟಗಾರರ ಸಂಘ ಮುಂತಾದವು ಉದಾಹರಣೆಗಳು. ಕಲ್ಲುಕುಟ್ಟಿಗರ

ಸಂಘ, ಬಡಿಗರ ಸಂಘ, ಕಮ್ಮಾರರ ಸಂಘ, ಸೊನಗಾರರ ಸಂಘ, ನೇಕಾರರ ಸಂಘ, ಕುಂಬಾರರ ಸಂಘ, ಗಾಣಿಗರ ಸಂಘ, ಪಾತ್ರ ಮಾಡುವವರ ಸಂಘ ಮುಂತಾದವು ಕಸಬುದಾರರ ಸಂಘಗಳಿಗೆ ನಿದರ್ಶನಗಳು. ಈ ಸಂಘಗಳು ಸ್ಥಳೀಯ(Banks) ಬ್ಯಾಂಕುಗಳು ಹಾಗೂ (Treasury) ಕೋಶಾಗಾರಗಳ ಕರ್ತವ್ಯಗಳನ್ನೂ ನಿರ್ವಹಿಸುತ್ತಿದ್ದವೆಂದು ಅಭಿಲೇಖಗಳಿಂದ ಗೊತ್ತಾಗುತ್ತದೆ. ನಿರ್ದಿಷ್ಟ ಉದ್ದೇಶಗಳಿಗಾಗಿ ಕೆಲ ಸಂಘಗಳಿಗೆ ಕರಗಳನ್ನು ಹೇರುವ ಅಧಿಕಾರವನ್ನು ಕೊಡಲಾಗುತ್ತಿತ್ತು. ಅವು ಹಬ್ಬ–ಜಾತ್ರೆಗಳನ್ನೂ ಆಟ–ನಾಟಕಗಳನ್ನೂ ಧಾರ್ಮಿಕ ಕಾರ್ಯಕ್ರಮಗಳನ್ನೂ ನಡೆಯಿಸುತ್ತಿದ್ದವು. ಅವುಗಳಿಗೆ ಪಂಚಾಯತದಲ್ಲಿ ಪ್ರಾತಿನಿಧ್ಯವಿತ್ತು. ಸರಕಾರ ಕೊಟ್ಟ ಗ್ರ್ಯಾಂಟುಗಳ ಬಡ್ಡಿಗಳನ್ನು ಪಂಚಾಯತದ ಮೂಲಕ ಸರಿಯಾಗಿ ವಿನಿಯೋಗಿಸುವ ಹೊಣೆ ಅವುಗಳಿಗಿತ್ತು. ಈ ಸಂಘಗಳಿಗೆ ಪ್ರತ್ಯೇಕವಾದ ಸಂವಿಧಾನವನ್ನು ಸರಕಾರವು ಮಾಡಿಕೊಟ್ಟಿತ್ತು. ಕದಂಬರ ೨ನೆಯ ತೈಲಪನ ಆಳಿಕೆಯಲ್ಲಿ ೫೦೫ ವರ್ತಕರ ಸಂಘವೊಂದು ವಸ್ತುರೂಪದ ಗ್ರ್ಯಾಂಟನ್ನು ಧಾರ್ಮಿಕ ಕಾರ್ಯಗಳಿಗಾಗಿ ಕೊಟ್ಟಿದ್ದು ಒಂದು ಉದಾಹರಣೆ.

## ಸುವರ್ಣ ನಾಣ್ಯಗಳು

ನಾಣ್ಯಗಳನ್ನು ಮಾಡಿಸಲು ಕೂಡ ಲೋಹವಿಲ್ಲದಾಗಿ ಕಾಗದದ ನೋಟುಗಳನ್ನು ಬಳಸುವ ಇಂದಿನ ಕಾಲದವರು ಕುಂತಳ–ಸುಧಾಪುರಗಳ ಕಾಲದಲ್ಲಿ ಬಂಗಾರದ ನಾಣ್ಯಗಳನ್ನು ತಮ್ಮ ಪೂರ್ವಜರು ಬಳಸುತ್ತಿದ್ದರು ಎಂಬುದನ್ನು ಶಾಸನಗಳಲ್ಲಿ ಓದಿ ತಿಳಿಯಬಹುದಾಗಿದೆ.

ಬನವಾಸಿ ರಾಜಧಾನಿಯಲ್ಲಿ ಮಯೂರವರ್ಮ ಕದಂಬ ಚಕ್ರವರ್ತಿಯು ಕುಂತಳೇಶನಾಗಿ ರಾಜ್ಯಭಾರ ಮಾಡುತ್ತಿದ್ದ ಕ್ರಿ.ಶ.೨೮೦ರ ಕಾಲದಲ್ಲಿ ಬಂಗಾರದ ನಾಣ್ಯಗಳೂ ಬಳಕೆಯಲ್ಲಿದ್ದವು. ಶಿರೀಷಪುರದ ನಿವಾಸಿಗಳಿಗದು ಅಂದು ಚಿರಪರಿಚಿತವಾಗಿತ್ತು. ಬೊಂಬಾಯಿಯ ಸೇಂಟ್ ಸೇವಿಯರ್ ಕಾಲೇಜಿನ ಭಾರತೀಯ ಇತಿಹಾಸ ಸಂಶೋಧನ ಸಂಸ್ಥೆಯ ನಾಣಕಸಂಪುಟದಲ್ಲಿ ಮಯೂರವರ್ಮನ ಮೊಮ್ಮಗ ಭಗೀರಥವರ್ಮನ(೩೭೦–೪೦೦) ಮತ್ತು ಅವನ ಮಗ ರಘುವರ್ಮನ(೪೦೦–೪೨೫) ಕಾಲದ ಬಂಗಾರದ ನಾಣ್ಯಗಳು ದೊರಕಿವೆ.

ಕದಂಬರ ತ್ರಿಪರ್ವತೀಯ (ಬೇಲೂರಿನ) ನೀತಿಮಹಾರಾಜನೆಂಬ ಬಿರುದಿನ ಕದಂಬಶಾಸನದಲ್ಲಿ 'ಪಣ' ಎಂಬ ನಾಣ್ಯದ ಉಲ್ಲೇಖವಿದೆ. ತಾಮ್ರ, ಬೆಳ್ಳಿ, ಚಿನ್ನಗಳಿಂದ ಅಂದು ನಾಣ್ಯಗಳನ್ನು ತಯಾರಿಸುತ್ತಿದ್ದರು. 'ಪಣವನ್ನು 'ಕರ್ಷ'ವೆಂದೂ ಕರೆಯಲಾಗುತ್ತಿತ್ತು. ಅದರ ತೂಕ೧೬ ಉದ್ದಿನ ಕಾಳುಗಳಷ್ಟು. ಕ್ರಿ.ಶ.೯೧ರ ದಾಖಲೆಯು 'ಹೆರದ್ರಮ್ಮ'(ಹರಿಯದ್ರಮ್ಮ) ಎಂಬ ಸಿಂಹ ಲಾಂಛನದ ಬೆಳ್ಳಿಯ ನಾಣ್ಯವನ್ನು ಹೆಸರಿಸುತ್ತದೆ. ಈ ಕದಂಬ ನಾಣ್ಯ ೧೬ಪಣಗಳ ತೂಕವುಳ್ಳದ್ದು. 'ಗದ್ಯಾಣ'ವು ಚಿನ್ನದ ನಾಣ್ಯ. ಅದರ

ತೂಕ ೧೨೮೦ ಉದ್ದಿನಕಾಳುಗಳ ತೂಕಕ್ಕೆ ಸಮ ಅಥವಾ ೩೨ ಗುರುಗುಂಜಿಗಳ ತೂಕವುಳ್ಳದ್ದಾಗಿತ್ತು. ಕೀರ್ತಿವರ್ಮ ಕದಂಬನ ಕಾಲದ ದಾಖಲೆಯು 'ಹೊನ್ನು' ಎಂಬ ನಾಣ್ಯವನ್ನು ಉಲ್ಲೇಖಿಸಿದೆ. ೧೨ನೆಯ ಶತಮಾನದಲ್ಲಿ 'ನಿಷ್ಕ' ಎಂಬ ೧೬ ದ್ರಮ್ಮ ತೂಕದ ಬೆಳ್ಳಿಯ ನಾಣ್ಯ ಬಳಕೆಯಲ್ಲಿತ್ತು. ೬೪ ಉದ್ದಿನಕಾಳುಗಳ ತೂಕದ ಚಿನ್ನದ 'ನಿಷ್ಕ'ವನ್ನು 'ಹೊನ್ನು' ಎಂದು ಕರೆಯುತ್ತಿದ್ದಿರಬೇಕು. 'ನಿಷ್ಕ'ಕ್ಕೆ 'ಪಲ'ಎಂಬುದು ಇನ್ನೊಂದು ಹೆಸರು. 'ಹಾಗ' ಅಥವಾ ಹಾಗವೀಸ ಪಾವಲಿಯೂ ಅಂದು ರೂಢಿಯಲ್ಲಿತ್ತು. ಕೊಡೆಯ ಚಿತ್ರವಿದ್ದ 'ಕೊಡವಣ' ಎಂಬ ನಾಣ್ಯವು ಆಗ ಚಲಾವಣೆಯಲ್ಲಿತ್ತು.

ಗೋವೆಯ ಕದಂಬರ ಚಿನ್ನದ ನಾಣ್ಯಗಳ ನಡುವೆ ಕಮಲದ ಚಿತ್ರವಿರುತ್ತಿತ್ತು. 'ತರಿ' ಎಂಬ ಅವರ ನಾಣ್ಯದಲ್ಲಿ ನೌಕೆಯ ಲಾಂಛನವಿದೆ. ಅವರ ಚಿನ್ನದ ನಾಣ್ಯವು ಅರ್ಧ ಪಣ ತೂಕದ್ದಾಗಿತ್ತು.

ವಿದೇಶವಿನಿಮಯಕ್ಕಾಗಿ ಒದ್ದಾಡುವ ಇಂದಿನ ದಿನಮಾನದಲ್ಲಿ ಮೇಲೆ ಹೇಳಿದ ಸುವರ್ಣ ನಾಣ್ಯಗಳ ಜೊತೆಗೆ ವಿಜಯನಗರ ಚಕ್ರಾಧಿಪತ್ಯದ ಕಾಲದ(೧೩೩೬–೧೫೬೫) ವರಹಗಳನ್ನೂ ನೆನೆದುಕೊಳ್ಳಬೇಕು; ಸನಿಹದಲ್ಲಿದ್ದ ಇಕ್ಕೇರಿಯ ಪಗೋಡಗಳನ್ನೂ ಸ್ಮರಿಸಿಕೊಳ್ಳಬೇಕು!

## ವಿದ್ಯಾಭ್ಯಾಸ

ಅದು ಐಗಳ(ಅಯ್ಯಗಳ ಮಠದ ಶಾಲೆಗಳ) ಕಾಲ. ಪಾಠಶಾಲೆ, ಅಗ್ರಹಾರ, ಬ್ರಹ್ಮಪುರಿ, ಮಠ, ದೇವಾಲಯ, ಘಟಿಕೆಗಳು ಅಂದಿನ ವಿದ್ಯಾಸಂಸ್ಥೆಗಳು. ಅಯ್ಯಗಳು ಅಥವಾ ಐಗಳು ಪ್ರಾಥಮಿಕ ಶಾಲೆಗಳ ಶಿಕ್ಷಕರು. ಅವರದ್ದು ಪಾಠ ಶಾಲಾಸಂಸ್ಥೆ. ಓದು, ಬರಹ ಮತ್ತು ಲೆಕ್ಕಗಳನ್ನು ಬಾಲಕರು ಪ್ರಾಥಮಿಕ ಶಾಲೆಗಳಲ್ಲಿ ಕಲಿಯುತ್ತಿದ್ದರು.

ಅಗ್ರಹಾರ, ಬ್ರಹ್ಮಪುರಿ, ಮಠಗಳು ಉಚ್ಚ ವಿದ್ಯಾಭ್ಯಾಸದ ಕೇಂದ್ರಗಳು. ಅಲ್ಲಲ್ಲಿ 'ಘಟಿಕೆ'ಗಳೆಂಬ ವಿದ್ವತ್ಸಂಸ್ಥೆಗಳಿರುತ್ತಿದ್ದವು. ಅವುಗಳಲ್ಲೂ ಪಾಂಡಿತ್ಯದ ತರಬೇತು ಯುವಕ–ಯುವತಿಯರಿಗೆ ದೊರಕುತ್ತಿತ್ತು. ಅಗ್ರಹಾರದಲ್ಲಿ ಪರಮಪಂಡಿತರಾದ ಬ್ರಾಹ್ಮಣರು ಸಕಲ ವಿದ್ಯೆಗಳನ್ನೂ 'ಯೂನಿವರ್ಸಿಟಿ'ಯಂತೆ ದೇಶ–ವಿದೇಶಗಳ ವಿದ್ಯಾರ್ಥಿಗಳಿಗೆ ಕಲಿಸುತ್ತಿದ್ದರು. ಅಂಥ ವಿದ್ಯಾರ್ಥಿಗಳಲ್ಲಿ ವಿವಿಧ ಮತದಧರ್ಮೀಯರೂ ಕುಲಗಳವರೂ ಇರುತ್ತಿದ್ದರು. ಅಗ್ರಹಾರಗಳು ನಗರ–ಪಟ್ಟಣಗಳಿಂದ ದೂರ ಇರುತ್ತಿದ್ದವು. ಅವು ಪ್ರತ್ಯೇಕ, ಸ್ವತಂತ್ರ ಘಟಕಗಳಾಗಿ ಕೆಲಸ ಮಾಡುತ್ತಿದ್ದವು. ಅವು ಯಾವಾಗಲೂ ಗ್ರಾಮಸ್ಥವಾಗಿರುತ್ತಿದ್ದವು. ಆದರೆ ವಿದ್ಯಾರ್ಥಿಗಳ ಸಂಖ್ಯೆ ಅಧಿಕವಾಗುತ್ತ ಹೋದಹಾಗೆ ಅಗ್ರಹಾರ ಗ್ರಾಮಗಳು ನಗರಗಳಾಗಿ ಪರಿವರ್ತನೆ ಹೊಂದಿದ್ದೂ ಉಂಟು. ಶಿರಾಳಕೊಪ್ಪದ ಸನಿಹದ ಬೆಳಗಾವಿ ಅಥವಾ ಬಳ್ಳಿಗಾಮಿ ಮತ್ತು ತಾಳಗುಂದಗಳು ಮಧ್ಯಯುಗದಲ್ಲಿ ಶಿರಿಸೆಯವರೆಗೆ ಸಮೀಪದಲ್ಲಿದ್ದ ಅಗ್ರಹಾರಗಳಾಗಿದ್ದವು. ಕುಪಟೂರು ಕುಂತಳದ ಅಂಥ ಇನ್ನೊಂದು

ಅಗ್ರಹಾರ. ಅಗ್ರಹಾರಗಳನ್ನು ಹೆಚ್ಚಾಗಿ ಸರಕಾರಗಳೇ ಸ್ಥಾಪಿಸುತ್ತಿದ್ದವು. ಸೋಮದೇವ ಕದಂಬ–ಮಹಾಂಡಲೇಶ್ವರನು ಆನಂದೂರಿನಲ್ಲಿ ಅಗ್ರಹಾರವನ್ನು ಸ್ಥಾಪಿಸಲು ತನ್ನ ಮಂತ್ರಿಗೆ ಆಜ್ಞೆ ಕೊಟ್ಟದ್ದು ಇದಕ್ಕೆ ದೃಷ್ಟಾಂತ. ಗೋರವರಸ ಕದಂಬ ದೊರೆಯು ಸೊರಬ ತಾಲೂಕಿನ ಎಲಸೆಯ ಅಗ್ರಹಾರವನ್ನು ಕರಮುಕ್ತಗೊಳಿಸಿದ್ದು ಅಂದು ವಿದ್ಯಾಪ್ರಸಾರಕ್ಕೆ ದೊರಕುತ್ತಿದ್ದ ಸರಕಾರಿ ನೆರವಿಗೆ ನಿದರ್ಶನ. ಕದಂಬ ಮಹಾಂಡಲೇಶ್ವರ ತೈಲಪನು ಚಾಲುಕ್ಯ ಸೋಮೇಶ್ವರ ಚಕ್ರವರ್ತಿಯಾದ ಬೆಳಗಾಮಿ ಅಗ್ರಹಾರಕ್ಕೆಗ್ರ್ಯಾಂಟು ಕೊಡಿಸಿದ್ದು ಮತ್ತೊಂದು ಉದಾಹರಣೆ. ಕೆಲವು ಅಗ್ರಹಾರಗಳು ತಾವೇ ಬೆಳೆದುಕೊಂಡು ಆಮೇಲೆ ರಾಜರ ಹಾಗೂ ಶ್ರೀಮಂತರ ಸಹಾಯಗಳನ್ನು ಪಡೆದುಕೊಳ್ಳುವ ಮಟ್ಟಕ್ಕೇರಿ ಖ್ಯಾತಿವೆತ್ತದ್ದೂ ಉಂಟು. ಬಳ್ಳಿಗಾಮಿ ಕುಪಟೂರು ಅಗ್ರಹಾರಗಳ ಮೂಲ ಅಂಥವಾಗಿತ್ತು. ಅಂದಿನ ಆಡಳಿತಗಾರರಾದ ಪ್ರಾಧ್ಯಾಪಕರು (ಮಹಾಜನರು) ಯಮ, ನಿಯಮ, ಧ್ಯಾನ, ಧಾರಣ, ಜಪ, ಮೌನ, ಸ್ವಾಧ್ಯಾಯ ಮತ್ತು ಸಮಾಧಿಗಳ ಉಗ್ರಶಿಸ್ತಿನಲ್ಲಿ ತರಬೇತು ಹೊಂದಿದರಾಗಿರುತ್ತಿದ್ದರು. ವೇದ, ವೇದಾಂಗ, ಪುರಾಣ, ಸ್ಮೃತಿ, ಸಂಗೀತ, ತರ್ಕ, ರಾಜನೀತಿ, ಅರ್ಥನೀತಿ, ಕಾಮಸೂತ್ರ, ಭಾಷೆ, ನಾಟಕಕಲೆ, ವಾಗ್ಮಿತ್ವಗಳಲ್ಲಿ ಅವರು ಪಾರಂಗತರಾಗಿದ್ದರು. ಅವರು ಔಷಧ, ಆಹಾರ, ಆಶ್ರಯ ಶಾಸ್ತ್ರಜ್ಞಾನಗಳನ್ನು ಸತ್‌ಪಾತ್ರರಿಗೆ ಕೊಡುವುದರಲ್ಲಿ ನಿತ್ಯಾಸಕ್ತಿಯುಳ್ಳವರಾಗಿದ್ದರು. ಅವರು ತತ್ವನಿಷ್ಠರೂ ವಜ್ರಕಠೋರ ನ್ಯಾಯನಿಷ್ಠರರೂ ಅತಿಥಿ ಸತ್ಕಾರ ಪರಾಯಣರೂ ಪಾಪವಿಮುಖರೂ ಆಗಿರುತ್ತಿದ್ದರೆಂದು ಶಾಸನವಾಙ್ಮಯ ಹೇಳುತ್ತದೆ. ದೇಶಕ್ಕೆ ವಿಪತ್ತು ಬಂದಾಗ 'ಶಸ್ತ್ರಂ ದ್ವಿಜಾತಿಭಿರ್ಗ್ರಾಹ್ಯಂ' ಎಂಬ ಮನುಮತದಂತೆ ಯುದ್ಧದಲ್ಲೂ ನೇತೃತ್ವ ವಹಿಸಿ ಪರಾಕ್ರಮ ತೋರಿಸುತ್ತಿದ್ದರು ಎಂಬುದಕ್ಕೆ ವೀರಗಲ್ಲಿನ ಸಾಕ್ಷಿಯಿದೆ. ಅವರು ನಿಜವಾದ 'ಮಹಾಜನರು'; 'Masses–ಕುರಿಕೋಟಿ' ಎಂಬ ಅರ್ಥವಷ್ಟೇ ಅಲ್ಲ. ಕೇಸಿಗ, ದೋಸಮರು ಅಂಥ ಆಚಾರ್ಯರಿದ್ದರು. ಉಪ–ಪ್ರಾಧ್ಯಾಪಕರಿಗೆ ಆರ್ಥಿಕ ಚಿಂತೆ ಇರದಂತೆ ಮಹಾಜನರು ನೋಡಿಕೊಳ್ಳುತಿದ್ದುದರಿಂದ ಅವರು ಏಕೋಭಾವ ತಾಳಿ ವಿದ್ಯಾರ್ಥಿಗಳ ತರಬೇತಿಯನ್ನು ಆದರ್ಶ ರೀತಿಯಿಂದ ಮಾಡುತ್ತಿದ್ದರು. ವಿವಿಧ ವಿಷಯಗಳ ತಾತ್ವಿಕ ಚರ್ಚೆಗಳು ಅಂದು ಜನಪ್ರಿಯವಾಗಿದ್ದವು ಎಂಬುದು ಶಾಸನೋಕ್ತ.

ದೇವಸ್ಥಾನಗಳನ್ನಾಧರಿಸಿ ಮಠಗಳಿರುತ್ತಿದ್ದವು. ಎಲ್ಲ ಸಂನ್ಯಾಸಿಗಳು ಪ್ರಾಚಾರ್ಯರು. ಅವು Residential Colleges ಗುರುಕುಲಗಳಾಗಿದ್ದವು. ಕೆಲವು ಮಠಗಳಲ್ಲಿ ಮತಧಾರ್ಮಿಕ ಶಿಕ್ಷಣವೂ ಇತರ ಮಠಗಳಲ್ಲಿ ತದಿತರ ಶಿಕ್ಷಣವೂ ಗಣ್ಯವಾಗಿದ್ದವು. ಬಂಕಾಪುರ ಯೇವೂರು ಮಠಗಳು ಇದಕ್ಕೆ ಅನುಕ್ರಮವಾಗಿ ನಿದರ್ಶನಗಳು. ಮಠಗಳಲ್ಲಿ ವಿದ್ಯಾರ್ಥಿಗಳಿಗೆ ಉಚಿತವಾಗಿ ಊಟ, ವಸತಿ, ಬಟ್ಟೆಗಳನ್ನು ಒದಗಿಸುವ ವ್ಯವಸ್ಥೆ ಇರುತ್ತಿತ್ತು. ರೋಗಿಗಳೂ ಬಡವರೂ ಅಶಕ್ತರೂ ಮಠಗಳಲ್ಲಿ ಆಶ್ರಯ ಪಡೆಯುತ್ತಿದರು. ರಾಜರೂ ಶ್ರೀಮಂತರೂ ಮುಖಂಡರೂ ಯಥೇಷ್ಟವಾಗಿಮಠ–ದೇವಾಲಯಗಳಿಗೆ ದತ್ತಿ–ದಾನಗಳನ್ನು ಕೊಡುತ್ತಿದ್ದರು. ಕದಂಬರ ೨ನೆಯ ಹಾಗೂ ೩ನೆಯ ತೈಲಪರು ಒಂದು ಇಡಿ ಪಟ್ಟಣದ ರಾಜಾದಾಯವನ್ನು ಮಠಕ್ಕೆ ಕೊಡಿಸಿದ ದಾಖಲೆ ಇದೆ!

ವಿಜಯನಗರದ ಪೂರ್ವಕಾಲದ ಕುಂತಳ ಕರ್ನಾಟಕದ ಮೇಲೆ ಹೇಳಿದ ಆವರಣದಲ್ಲಿ ಶಿರಿಸೆಯೂ ಭಾಗಿಯಾಗಿತ್ತು. ಅದೊಂದು ಸುವರ್ಣಯುಗ. ವಿಜಯನಗರದ ಚಕ್ರವರ್ತಿಗಳ ಕಾಲದಲ್ಲೂ ಉಕ್ತ ಸತ್ಪರಂಪರೆ ಮುಂದುವರಿಯಿತು. ಅರಸಪ್ಪನಾಯಕನ ವಂಶದ ಕೊನೆಯ ಅರಸನ ಕಾಲದ ಅನಂತರ ಇತಿಹಾಸವು ಸಂಪೂರ್ಣವಾಗಿ ಬದಲಾಯ್ತು. ಆ ಬದಲಾದ ಇತಿಹಾಸದ ಹಿಡಿತದಿಂದ ಈಗಲೂ ನಮ್ಮ ಶಿರಿಸೆ, ಕರ್ನಾಟಕ(ಭಾರತ ಕೂಡ) ಇನ್ನೂ ಮುಕ್ತವಾಗಿಲ್ಲ!

## ಮತಧರ್ಮ

ಶಿರೀಷಪುರದ ಪ್ರಾಚೀನ ಪ್ರಜೆಗಳು ಆದಿಯಲ್ಲಿ ಭೂತಾರಾಧಕರೂ ಉಳಿದವರಂತೆಯೇ ಬರ್ಬರರೂ ಆಗಿದ್ದರೆಂಬುದು ಆಧುನಿಕ ಇತಿಹಾಸ ದೃಷ್ಟಿಯ ವಿಕಾಸಮಾನದಿಂದ ಹೇಳುವ ಮಾತು. ನಾಗಾರಾಧನೆಯೂ ಅಂಥ ಇನ್ನೊಂದು ಪ್ರಸಿದ್ಧ ಬರ್ಬರ ರೂಢಿ. ಅದರ ದೆಸೆಯಿಂದ ಸ್ಥೂಲವಾಗಿ ಈ ಪ್ರದೇಶವು ಕೆಲ ಕಾಲ 'ನಾಗರಖಂಡ' ಎಂದೂ ಪ್ರಸಿದ್ಧವಾಗಿತ್ತು. ಚುಟುಗಳೂ ಸೇಂದ್ರಕರೂ ಸಿಂದರೂ ಕೆಲವೊಮ್ಮೆ ಕದಂಬರೂ ನಾಗಕುಲದವರೆಂಬ ರೂಢಿಯೂ ಇತ್ತು. ಆಳುಪರೂ ನಾಗರೆಂಬ ಪ್ರತೀತಿ ಇದೆ. ಆದರೆ ಜಗತ್ತಿನ ಮಾನವ ಕುಲಗಳ ವರ್ಗೀಕರಣದಲ್ಲಿ ಮಂಗೋಲಿಯನ್, ಸೆಮಿಟಿಕ್, ನಾರ್ಡಿಕ್ ಮುಂತಾದ ನ್ಯಾಯವಾದ ಕುಲಪ್ರಕಾರಗಳ ಪಟ್ಟಿಯಲ್ಲಿ 'ನಾಗಕುಲ' ಸೇರದು. 'ನಾಗಕುಲ'ವು ಜೈನ–ಬೌದ್ಧ 'ಕುಲ'ಗಳಂತೆಯೇ ಮತಾಚಾರವನ್ನು ಆಧರಿಸಿದ್ದು.

ಭೂತಾರಾಧನೆಗೆ ಸಮಕಾಲೀನ ಅಥವಾ ಅದಕ್ಕೂ ಹಿಂದಿನ(ಬಹುಶಃ ನವಾಶ್ಮಯುಗದ) ಲಿಂಗಪೂಜೆಯು ಕದಂಬ ಚಕ್ರವರ್ತಿಗಳ ಯುಗ(೨೮೦)ಕ್ಕಿಂತ ಹಿಂದೆಯೇ ಶಿವಾರಾಧನೆಯ ರೂಪದಲ್ಲಿ ಪ್ರಚಲಿತವಾಗಿತ್ತು. ಶೈವವು ವೈದಿಕ ಸಂಪ್ರದಾಯದ ಮತ.

ಅವೈದಿಕರಾದ ಜೈನರ ಭದ್ರಬಾಹು ಗುರುವಿನೊಡನೆ ಚಂದ್ರಗುಪ್ತ ಮೌರ್ಯನು ಶ್ರವಣಬೆಳ್ಗೊಳದಲ್ಲಿ ತನ್ನ ಕೊನೆಯ ದಿನಗಳನ್ನು ಕಳೆದ ಪ್ರಸಿದ್ಧಿಯ ದೆಸೆಯಿಂದ ಜೈನಮತವು ಕ್ರಿ.ಪೂ.೨೯೨ರಲ್ಲೇ ಕನ್ನಡ ನಾಡನ್ನು (ಕುಂತಳವನ್ನು) ಪ್ರವೇಶಿಸಿತು ಎನ್ನಬಹುದಾದರೂ ಅದೇ ಸ್ವಲ್ಪ ಕಾಲದ ಅನಂತರ ಅಶೋಕ ಚಕ್ರವರ್ತಿ ಅಟ್ಟಿದ ಬೌದ್ಧಸಂನ್ಯಾಸಿಗಳ ಪ್ರಚಾರಬಲದಿಂದ ಕದಂಬಯುಗದ ಆದಿಭಾಗದಲ್ಲಿ ಬೌದ್ಧರಾದವರ ಸಂಖ್ಯೆ ಜೈನರಿಗಿಂತ ಹೆಚ್ಚಾಗಿತ್ತು ಎನ್ನಬಹುದು. ಆದರೆ ಆಮೇಲೆ ಮಾತ್ರ ಜೈನರ ಪ್ರಾಬಲ್ಯವೇ ಹೆಚ್ಚಾಗಿ ಕಂಡುಬರುತ್ತದೆ. ಪ್ರೊ.ಕೆ.ಜಿ.ಕುಂದಣಗಾರರ ಪ್ರಕಾರ ಜೈನಮತ ಕರ್ನಾಟಕದಲ್ಲಿ ಉದಿತೋದಿತವಾಗಿ ಪಸರಿಸತೊಡಗಿದ್ದು ಕ್ರಿ.ಶ.೪ನೆಯ ಶತಮಾನದಲ್ಲಿ. ವೈದಿಕ ಮತೀಯರ ಬಹುಸಂಖ್ಯ ದೇವಸ್ಥಾನಗಳನ್ನು ಬಿಟ್ಟರೆ ಕುಂತಳ ಕರ್ನಾಟಕದಲ್ಲಿ ('ಕೆನರಾ' ಮಹಾಜಿಲ್ಲೆಯಲ್ಲಿ) ಇತರ ಪ್ರಾಚೀನ ಮತೀಯ ಅವಶೇಷಗಳಿಗಿಂತ ಜೈನಬಸದಿಗಳೇ ಅತ್ಯಂತ ಹೆಚ್ಚಾಗಿ ಕಂಡುಬರುವುದು ಜೈನ ಪ್ರಚಾರಕ್ಕೆ ಅಖಂಡ

ಪ್ರಮಾಣವಾಗಿದೆ. ಈ ನಡುವೆ ಶಾಕ್ತ, ಕಾಪಾಲಿಕ, ಕಾಲಾಮುಖ ಮತಗಳ ಪ್ರಚಾರ ತರಂಗಗಳೂ ಬಂದುಹೋದವು. ಇಲ್ಲಿ ಕಾಪಾಲಿಕರಿಂದ ಸ್ಥಾಪಿಸಲ್ಪಟ್ಟ ಭೈರವ ಪೂಜಾಕೇಂದ್ರಗಳು ಇನ್ನೂ ಉಪಲಬ್ಧವಾಗಿವೆ.

ಸುಧಾಪುರದಲ್ಲಿ ಈಗಲೂ ಜೈನಮಠವಿದೆ; ಅಲ್ಲಿ ಜೈನಗುರುಗಳಿದ್ದಾರೆ. ಅದರ ಹೆಸರು 'ಅಕಳಂಕ ಮಠ' ಎಂದು. ಮೊದಲು ಶ್ವೇತಾಂಬರರಾಗಿ ಉತ್ತರ ಭಾರತದಲ್ಲಿದ್ದು ಇಲ್ಲಿ ಬಂದ ಮೇಲೆ ದಿಗಂಬರಪಂಥದ ಪದ್ಧತಿಯನ್ನು ಹೇಗೆ ಜೈನರು ಹಿಡಿದರೆಂಬುದು ವಾದಾತೀತವಾಗಿಲ್ಲ. ಆ ಗುರುಪರಂಪರೆಯಲ್ಲಿ; ಅಕಳಂಕದೇವನು ಅಥವಾ ೧ನೆಯ ಭಟ್ಟಾಕಳಂಕನು ೩೬ನೆಯ ಗುರು.

ಮೂಲ ಸಂಘ ದೇಶೀಯಗಣ ಪುಸ್ತಕಗಚ್ಛ ಕುಂಡಕುಂದಾನ್ವಯದ ಅಕಳಂಕನು ಪೂಜ್ಯಪಾದನ ಶಿಷ್ಯ. ಅವನ ಕಾಲ ಕ್ರಿ..ಶ.೭೦೦ ಎಂದು ಡಾ.ಪಿ.ಬಿ.ದೇಸಾಯಿಯವರೂ ೭೫೦ ಎಂದು ಕನ್ನಡ ಕವಿಚರಿತಕಾರರೂ ಹೇಳಿದ್ದಾರೆ. ವಿದ್ಯಾನಂದನು ಅಕಳಂಕನ ಒಬ್ಬ ಪ್ರಸಿದ್ಧ ಶಿಷ್ಯ. ಈ ಗುರುಪರಂಪರೆಯ ಇತರರು ಮಾಡಿದರೋ ಬಿಟ್ಟರೋ ಗೊತ್ತಿಲ್ಲ. ಆದರೆ ಅಕಳಂಕ ಮಾತ್ರ ತನ್ನ ಹೆಸರನ್ನು ಅಜರಾಮರ ಮಾಡಿದ. ಅವನ ಮಠದ ಪ್ರತಿಯೊಬ್ಬ ಗುರುವೂ, ಅಂದಿನಿಂದ ಅಕಳಂಕನಾದ. ಭಟ್ಕಳವು ಭಟ್ಟಾಕಳಂಕನ ಸ್ಮಾರಕ ಪಟ್ಟಣ. ಅದರ ಪ್ರಾಚೀನ ರಾಜಧಾನಿಯಾಗಿದ್ದ ಸಂಗೀತಪುರದಲ್ಲೂ (ಹಾಡುವಳ್ಳಿಯಲ್ಲೂ) ಸುಧೆಯಲ್ಲಿದ್ದಂಥ ಅಕಳಂಕ ಮಠವಿತ್ತೆಂದು ಪ್ರಸಿದ್ಧಿ ಇದೆ. ಹಾಡುವಳ್ಳಿಯ ಬಸದಿಯ ಮಾದರಿ ಇಂದಿಗೂ ಪ್ರೇಕ್ಷಣೀಯವಾಗಿ ಉಳಿದಿದೆ.

ಈ ಆದಿ ಅಕಳಂಕದೇವನು ತರ್ಕಶಾಸ್ತ್ರ ಪಾರಂಗತನಾಗಿದ್ದನು. ಉಮಾಸ್ವಾತಿಯ ತತ್ರಾರ್ಥ ಸೂತ್ರದ ಮೇಲೆ 'ತತ್ವಾರ್ಥ ರಾಜವಾರ್ತಿಕ' ಅಥವಾ 'ತತ್ವಾರ್ಥ ವಾರ್ತಿಕ ವ್ಯಾಖ್ಯಾಲಂಕಾರ' ಎಂಬ ಟೀಕೆಯನ್ನೂ 'ಅಷ್ಟಶತಿ'ಎಂಬ ಇನ್ನೊಂದು ಧರ್ಮಗ್ರಂಥವನ್ನೂ ಅಕಳಂಕ ರಚಿಸಿದನೆಂದು ತಿಳಿದುಬರುತ್ತದೆ. ಅತನು ಪೂರ್ವಾಶ್ರಮದಲ್ಲಿ ಮಾನ್ಯಖೇಟದಲ್ಲಿ ಆಳುತ್ತಿದ್ದ ರಾಷ್ಟ್ರಕೂಟರ ೧ನೆಯ ಕೃಷ್ಣಶುಭತುಂಗ ಚಕ್ರವರ್ತಿಯ ಮಗನಾಗಿದ್ದನೆಂದು ಕೆಲವರ ಮತ. ೧ನೆಯ ಕೃಷ್ಣನ ಆಳಿಕೆ ಕ್ರಿ.ಶ.೭೫೬ರಿಂದ ೭೭೫ರವರೆಗೆ ಎಂದು ಪ್ರೊ.ಸತ್ಯನಾಥ ಅಯ್ಯರರು ನಿರ್ಧರಿಸಿದ್ದಾರೆ. ಹಾಗಾದರೆ ಅಕಳಂಕನ ಕಾಲ ೭೫೦ ಎಂಬುದೇ ಸರಿ. ಆದರೆ ಡಾ.ಶ್ರೀಕಂಠಶಾಸ್ತ್ರಿಗಳ ಪ್ರಕಾರ ಅವನು ಕ್ರಿ.ಶ.೬೪೨ರಲ್ಲಿ ಕಂಚಿಯಲ್ಲಿ ಬೌದ್ಧರನ್ನು ವಾದದಲ್ಲಿ ಸೋಲಿಸಿದ! ವಿಲ್ಸನ್ನರು ಅಕಳಂಕನ ಗುರುತ್ವವು ಶ್ರವಣಬೆಳ್ಗೊಳದಲ್ಲೂ ಇದ್ದಿತ್ತೆನ್ನುತ್ತಾರೆ. ಇದನ್ನೆಲ್ಲಾ ನೋಡಿದರೆ ಅಕಳಂಕನು ಸುಧಾಪುರದ ಒಬ್ಬ ಶ್ರೇಷ್ಠ ಜೈನ ವಿದ್ವಾಂಸನಾಗಿದ್ದನೆನ್ನಲು ಯಾವ ಅಡ್ಡಿಯೂ ಇಲ್ಲ.

ಕ್ರಿ.ಶ. ೧೫೬೭ರಲ್ಲಿದ್ದ ಶ್ರುತಕೀರ್ತಿ ಬರೆದ 'ವಿಜಯಕುಮಾರಿಯ ಚರಿತೆ'ಯಲ್ಲಿ ಮತ್ತು ಇಂದ್ರನಂದಿ ಬರೆದ 'ಸಮಯಭೂಷಣ' ಎಂಬ ಗ್ರಂಥದಲ್ಲಿ ಕೊಟ್ಟ ಗುರುಪರಂಪರೆಯಲ್ಲಿ ಭದ್ರಬಾಹುವಿನಿಂದ ಅಕಳಂಕನು ೧೮ನೆಯ ಗುರುವಾಗುತ್ತಾನೆ. ಅವನ ಗುರು ಚಾರುಕೀರ್ತಿಪಂಡಿತ ಮತ್ತು ಪ್ರಸಿದ್ಧ ಶಿಷ್ಯ ಪ್ರಭಾಚಂದ್ರ ಅಥವಾ

ಚಂದ್ರಪ್ರಭ. ಭದ್ರಬಾಹುವು ಶ್ವೇತಾಂಬರ ಪರಂಪರೆಯಲ್ಲಿ ೮ನೆಯ ಗುರುವಾಗುವುದರಿಂದ ಅಕಳಂಕನು ಹಿಂದೆ ಹೇಳಿದಂತೆ ಮೊದಲಿನಿಂದ ಹಿಡಿದು ೩೬ನೆಯ ಗುರುವಾಗುತ್ತಾನೆ. ದಿಗಂಬರ ಪರಂಪರೆಯಲ್ಲಾದರೋ ಅವನು ೩೭ನೆಯ ಗುರುವಾಗುತ್ತಾನೆ. Sources of Karnatak Historyಯ ೧೯೫ನೆಯ ಪುಟದಲ್ಲಿರುವ ೧೧೭೮ರ ಮಲ್ಲಿಷೇಣನ ಶ್ರವಣಬೆಳ್ಗೊಳದ ಶಾಸನದಲ್ಲಿ ಅಕಳಂಕನು ಸಾಹಸತುಂಗದಂತಿದುರ್ಗ ಖಡ್ಗಾವಲೋಕ ರಾಷ್ಟ್ರಕೂಟನ ಸಮಕಾಲೀನನೆಂದಿದೆ. ಅಲ್ಲಿ ಕೊಟ್ಟ ಗುರುಪರಂಪರೆಯಲ್ಲಿ ಕುಂಡಕುಂಡನಿಂದ ಅಕಳಂಕನು ೧೨ನೆಯವನು. ಅದೇ ಗ್ರಂಥದ ೨೧೪ನೆಯ ಪುಟದಲ್ಲಿರುವ ಗುರುಪರಂಪರೆಯಲ್ಲಿ ಆ ಹೆಸರಿನ ಭಿನ್ನ ಗಣ–ಸಂಘಗಳಿಗೆ ಸೇರಿದ ೩೭ನೆಯ ಒಬ್ಬ ಸಿಗುತ್ತಾನೆ. ಪುಟ ೫೪ರಲ್ಲಿ 'ಅಕಳಂಕ ಚರಿತ'ದ ಪ್ರಕಾರ ಮೂಲ ಅಕಳಂಕನ ಕಾಲ ಕ್ರಿ.ಶ.೬೪೨ ಎಂದು ಹೇಳಿದೆ. ಅವನ ಶಿಷ್ಯನಾದ ಪ್ರಭಾಚಂದ್ರನು ಕ್ರಿ.ಶ.೮೦೦ರೊಳಗೆ 'ನ್ಯಾಯಕುಮುದ ಚಂದ್ರೋದಯ'ವನ್ನು ಬರೆದನೆಂದು ಉಕ್ತ ಗ್ರಂಥದ ೬೬ನೆಯ ಪುಟದಲ್ಲಿ ಹೇಳಲಾಗಿದೆ.

೧ನೆಯ ಭಟ್ಟಾಕಳಂಕನ

**ಕಿಂವಾದ್ಯೋ ಭಗವಾನಮೇಯಮಹಿಮಾದೇವೋऽಕಲಂಕಃ ಕಲೌ**

**ಕಾಲೇಯೋ ಜನತಾಸು ಧರ್ಮನಿಹಿತೋ ದೇವೋऽಕಲಂಕೋ ಜಿನಃ ।**

**ಯಸ್ಯ ಸ್ಫಾರ ವಿವೇಕ ಮುದ್ರಲಹರೀ ಜಾಲ ಪ್ರಮೇಯಾಕುಲಾ**

**ನಿರ್ಮಗ್ನಾ ತನುತೇತರಾಂ ಭಗವತೀ ತಾರಾ ಶಿರಃ ಕಂಪನಂ ॥**

**–ಅಕಲಂಕಾಷ್ಟಕ, ಶ್ಲೋ–೧೫**

**ಅಕಳಂ ವಚೋಂಭೋಧೇರುದ್ದಧ್ರೇಯೇನ ಧೀಮತಾ**

**ನ್ಯಾಯವಿದ್ಯಾಮೃತಂ ತಸ್ಮೈ ನಮೋ ಮಾಣಿಕ್ಯನಂದಿನೇ ॥**

**ಅಕಳಂಕ ಶಶಾಂಕೈರ್ಯತ್ ಪ್ರಕಟೀಕೃತ ಮಖಿಳಮಾನನಿಭನಿಕರಂ ।**

**ತತ್ ಸಂಕ್ಷಿಪ್ತಂ ಸೂರಿಭಿರುರು ಮತಿಭಿರ್ ವ್ಯಕ್ತಮೇತೇನ ॥**

**–ಅನಂತವೀರ್ಯನ ಪರಿಕ್ಷಾಮುಖಸೂತ್ರ ಲಘುವೃತ್ತಿ**

ತುರುವಾದ ಪೂಜ್ಯಪಾದನು ವ್ಯಾಕರಣ ವಿದ್ವಾಂಸನಾಗಿದ್ದನು. ೧೫೯೨ನೆಯ ಇಸವಿಯ ಬಿಳಗಿಯ ಶಿಲಾಶಾಸನದ ಪ್ರಕಾರ ಕ್ರಿ.ಶ. ೧೬೦೪ರಲ್ಲಿ 'ಕರ್ನಾಟಕ ಶಬ್ದಾನುಶಾಸನ'ವೆಂಬ ಕನ್ನಡ ವ್ಯಾಕರಣ ಗ್ರಂಥವನ್ನು ಸಂಸ್ಕೃತದಲ್ಲಿ ಬರೆದವನು ಶ್ರವಣಬೆಳ್ಗೊಳದ ಚಾರುಕೀರ್ತಿ ಪಂಡಿತಾಚಾರ್ಯನ ಪರಂಪರೆಯಲ್ಲಿ ಬರುವ ಐವರು ಭಟ್ಟಾಳಂಕರಲ್ಲಿ ೫ನೆಯವನೂ ಒಟ್ಟಿನಲ್ಲಿ ಆ ಗುರುಪರಂಪರೆಯ ೧೧ನೆಯವನೂ ಆಗುತ್ತಾನೆ. ಈ ವೈಯಾಕರಿಣಿ ಭಟ್ಟಾಕಳಂಕನು ತಾನು ಸಂಗೀತಪುರದವನು ಎಂದು ಹೇಳಿಕೊಂಡಿದ್ದಾನೆ. ಸುಧೆಯ ಜೈನಮತವು ಅದರ ಅವಳಿ ಜವಳಿ. ಸುಧಾಪುರದಲ್ಲಾಗ

ಇಮ್ಮಡಿ ಅರಸಪ್ಪ ನಾಯಕನು ವಿಜಯನಗರದ ಸಾರ್ವಭೌಮತ್ವವನ್ನು ಗೌರವಿಸಿ ಆಳುತ್ತಿದ್ದನು. ೩ನೆಯ ಭಟ್ಟಾಕಳಂಕನು ವಿಜಯನಗರದ ಶ್ರೀರಂಗ ರಾಜನ(೧೫೭೩–೧೫೮೪) ಕಾಲದಲ್ಲಿ ಇದ್ದು 'ಸಾರತ್ರಯ'ವನ್ನು ಬರೆದನೆಂದು ತಿಳಿದು ಬರುತ್ತದೆ.ವ್ಯಾಕರಣಕರ್ತನಾದ ೫ನೆಯ ಭಟ್ಟಾಕಳಂಕನು ಪೆನಗೊಂಡೆಯ ವೆಂಕಟಪತಿರಾಯನ ಆಳಿಕೆಯಲ್ಲಿ(೧೫೮೬–೧೬೧೫) ಇದ್ದನು. ದೇವಚಂದ್ರನ ರಾಜಾವಳೀ ಕಥೆಯಲ್ಲಿ ಈ ವ್ಯಾಕರಣ ಸುಧಾರ್ಣವನನ್ನು ಷಡ್‌ಭಾಷಾಕವಿಯೆಂದೂ ಸುಧಾಪುರನಿವಾಸಿಯೆಂದೂ ಉಲ್ಲೇಖಿಸಲಾಗಿದೆ. ಇವನು ತನ್ನ ಗುರುಪರಂಪರೆಯ ಹಿರಿಯನಾದ ಪೂಜ್ಯಪಾದನ ವ್ಯಾಕರಣಾಭಿರುಚಿಯನ್ನು ಪುನಃ ಸಫಲಗೊಳಿಸಿದನು ಎನ್ನಬಹುದಾಗಿದೆ. ಈತನ ವ್ಯಾಕರಣವು ನಾಗವರ್ಮನ ಕರ್ನಾಟಕ ಭಾಷಾಭೂಷಣಕ್ಕಿಂತಲೂ ವಿಸ್ತಾರವಾಗಿಯೂ ಪ್ರೌಢವ್ಯಾಖ್ಯಾನ ಸಮೇತವಾಗಿಯೂ ಇದೆ ಎನ್ನುತ್ತಾರೆ ಕವಿಚರಿತಕಾರ ನರಸಿಂಹಾಚಾರ್ಯರು. 'ಶಬ್ದಮಣಿದರ್ಪಣ'ಕ್ಕಿಂತಲೂ ಹೆಚ್ಚು ವಿಷಯಗಳನ್ನು ಒಳಗೊಂಡಿರುವುದು ಇದರ ಇನ್ನೊಂದು ಆಕರ್ಷಕತೆ.

ವೈಯಾಕರಣಿ ಭಟ್ಟಾಕಳಂಕನು ಇಮ್ಮಡಿ ಅರಸಪ್ಪನಾಯಕನೂ ಅವನ ಮಗ ರಾಮಚಂದ್ರ ನಾಯಕನೂ ಅನುಕ್ರಮವಾಗಿ ಸುಧೆಯಲ್ಲಿ ಆಳುತ್ತಿದ್ದರೂ ಅವರ ಉಲ್ಲೇಖವನ್ನು ಮಾಡದುದರಿಂದ ಅರಸಪ್ಪನು ಜೈನನಾಗಿದ್ದಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಬಿಳಗಿಯ ಘಂಟೇಂದ್ರನಿಂದ ತಾನು ಪೂಜಿತನೆಂದು ಭಟ್ಟಾಕಳಂಕನು ಹೇಳಿರುವುದು ಅರಸಪ್ಪನಿಗಿಂತ ಚಿಕ್ಕ ನಾಯಕನಾದರೂ ಘಂಟೇಂದ್ರನು ಜೈನನಾಗಿದ್ದುದರಿಂದ. ಬಿಳಗಿಯ ಘಂಟೇಂದ್ರ ಶಾಸನವನ್ನು ಭಟ್ಟಾಕಳಂಕನೇ ಬರೆಯಿಸಿದ್ದು ಎಂಬ ಸಂಗತಿಯಿಂದ ಮತ್ತೊಮ್ಮೆ ಸ್ವಸ್ಥಳದ ಅರಸಪ್ಪನನ್ನು ಅಥವಾ ರಾಮಚಂದ್ರನನ್ನು ಎಲ್ಲೂ ಉಲ್ಲೇಖಿಸದೆ ಬಿಟ್ಟದ್ದು ಅವನು ವಿಮತೀಯ(ಬ್ರಾಹ್ಮಣ) ಎನ್ನಿಸಿದ್ದುದರಿಂದ ಎಂಬ ಅರ್ಥವು ಸ್ಫುಟವಾಗಿ ಹೊಳೆಯುತ್ತದೆ. ಹಾಗೇ ಅರಸಪ್ಪನು ಪರಮತಸಹಿಷ್ಣುವಾಗಿದ್ದನೆಂಬುದಕ್ಕೆ ಅವನನ್ನು ಭಟ್ಟಾಕಳಂಕ ನಿಂದಿಸದೆ ಇರುವುದೇ ಸಾಕ್ಷಿ. ಈ ಅಕಳಂಕನು ಅಂದು ಸುಧಾಪುರವನ್ನೊಂದು ದೊಡ್ಡ ವಿದ್ಯಾಕೇಂದ್ರವನ್ನಾಗಿ ಮಾಡಿದ್ದನೆಂಬ ಅಂಶವು ಅಭಿಮಾನಾಸ್ಪದವಾಗಿದೆ.

ಯುವಾನ್‌ಚ್ವಾಂಗ್ ಮಹಾಶಯನ ಬರಹದಲ್ಲಿ ೨ನೆಯ ಪುಲಿಕೇಶಿಯ ಕಾಲದ ಕರ್ನಾಟಕದ ವರ್ಣನೆಯಿದೆ. ಅದು ನಮ್ಮ ಸುಧಾಪುರವು ಪ್ರಕಾಶಕ್ಕೆ ಬರುತ್ತಿದ್ದ ಅವಧಿ(೭ನೆಯ ಶತಮಾನದ ಅಂತ್ಯ ಮತ್ತು ೮ನೆಯ ಶತಮಾನದ ಆದಿಕಾಲ). ಕ್ರಿ.ಶ.೬೦೮ರಿಂದ ೬೪೨ರವರೆಗೆ ಪುಲಿಕೇಶಿಯೂ ಆಮೇಲೆ ೬೪೨ರಿಂದ ೭೩೩ರವರೆಗೆ ೧ನೆಯ ವಿಕ್ರಮಾದಿತ್ಯನೂ ಮೊಮ್ಮಗ ವಿನಯಾದಿತ್ಯನೂ ಕರ್ನಾಟಕವನ್ನು ಆಳಿದರು. ೨ನೆಯ ವಿಕ್ರಮಾದಿತ್ಯನೂ ಅವನ ಮಗ ೨ನೆಯ ಕೀರ್ತಿವರ್ಮನೂ ರಾಜ್ಯಭಾರ ಮಾಡಿದ್ದು ೭೩೩ರಿಂದ ೭೫೩ರವರೆಗೆ.

ಕೊಂಕಣಪುರ(ಬನವಾಸಿ) ಅಂದು ೩೦೦೦ 'ಲೀ' ಚದುರಳತೆಯ ವಿಸ್ತಾರದ(ಸುಧಾಪ್ರದೇಶವನ್ನು ಒಳಗೊಂಡ) ಮಹಾರಾಜ್ಯದ ಮುಖ್ಯಪಟ್ಟಣವಾಗಿತ್ತು.ಕೃಷಿ ಬಹಳ ಅಭಿವೃದ್ಧಿ ಹೊಂದಿತ್ತು. ಜನರು ಬಹಳ ಚುರುಕಾಗಿಯೂ ಶ್ರದ್ಧಾವಂತರಾಗಿಯೂ ಇದ್ದರು. ನೋಡಿದರೆ ಅವರ ಹೊರನಡತೆ ಅಷ್ಟೇನೂ ಸುಸಂಸ್ಕೃತವೆಂದು ತೋರುತ್ತಿದ್ದಿಲ್ಲ. ಆದರೆ ಅವರು ತುಂಬ ಸ್ವಾಭಿಮಾನಿಗಳೂ ಶೂರರೂ ದಕ್ಷರೂ ಆಗಿದ್ದರು. ೧೦೦೦೦ಪೂಜಾರಿಗಳಿದ್ದ ೧೦೦ ಸಂಘಾರಾಮಗಳೆಂಬ ಬೌದ್ಧಮಠಗಳು ಆ ರಾಜ್ಯದಲ್ಲಿ ಇದ್ದವು. ಅವರು ಮಹಾಯಾನ–ಹೀನಯಾನಗಳೆರಡರ ಗ್ರಂಥಗಳನ್ನೂ ಅಭ್ಯಾಸ ಮಾಡುತ್ತಿದ್ದವರು. ಇತರ ಅನೇಕ ಜನರು ದೇವಾರಾಧಕರಾಗಿದ್ದುದರಿಂದ ಅಲ್ಲಿ ಹತ್ತಾರು ನೂರಾರು ದೇವಾಲಯಗಳಿದ್ದವು. ಅಂದಿನವರು ಬರೆಯಲು ತಾಳೆಯೋಲೆಗಳನ್ನು ಬಳಸುತ್ತಿದ್ದರು.

ಕದಂಬ ರಾಜಧಾನಿ(ಪುಲಿಕೇಶಿಯ ಚಕ್ರಾಧಿಪತ್ಯದ ಉಪರಾಜಧಾನಿ) ಎನಿಸಿದ್ದ ಕೊಂಕಣಪುರದ(ಬನವಾಸಿಯ) ದಕ್ಷಿಣದಲ್ಲಿ ಅರ್ಹತ್ ಶ್ರುತವಿಂಶತಿಕೋಟಿ ಎಂಬ ಸಾಧುವು ಪವಾಡಗಳನ್ನು ನಡೆಯಿಸುತ್ತಲೂ ಜನರನ್ನುಬೌದ್ಧಮತಕ್ಕೆ ಪರಿವರ್ತಿಸುತ್ತಲೂ ಇದ್ದನು. ಅವನು ಕುಳಿತಲ್ಲಿ ೧೦೦ ಅಡಿ ಎತ್ತರದ ಒಂದು ಅಶೋಕಸ್ತಂಭವಿತ್ತು. ಅರಮನೆಯ ಹತ್ತಿರ ಸಂಘಾರಾಮವೂ ವಿಹಾರವೂ ಇದ್ದವು. ಆ ಸಂಘಾರಾಮದಲ್ಲಿ ೩೦೦ಪೂಜಾರಿಗಳಿದ್ದರು; ವಿಹಾರವು ೧೦೦ ಅಡಿಗಳಿಗೂ ಹೆಚ್ಚು ಎತ್ತರವಾಗಿತ್ತು.

ಮೈತ್ರೇಯ ಬೋಧಿಸತ್ವನ ವಿಗ್ರಹವಿದ್ದ ವಿಹಾರವೊಂದು ನಗರದ ಹೊರವಲಯದ ಸಂಘಾರಾಮದಲ್ಲಿತ್ತು. ಆ ವಿಗ್ರಹವು ಗಂಧದ ಮರದಿಂದ ಮಾಡಲ್ಪಟ್ಟಿತ್ತು. ಅದರ ಎತ್ತರ ಹತ್ತಡಿ, ಅದನ್ನು ರಚಿಸಿದವನು ಶ್ರುತವಿಂಶತಿಕೋಟಿ.

ಕೊಂಕಣದ ಪುರದಿಂದ ವಾಯವ್ಯ ದಿಕ್ಕನ್ನು ಹಿಡಿದು ಹೊರಟರೆ ನಡುವೆ ೨೪೦೦–೨೫೦೦ 'ಲೀ' ಗಳುದ್ದಕ್ಕೂ ಗೊಂಡಾರಣ್ಯ ಸಿಗುತ್ತದೆ. ಅನಂತರ 'ಮಹಾರಾಷ್ಟ್ರ' ಬರುತ್ತದೆ. ಅದರ ಪ್ರಭುವೂ ಪುಲಿಕೇಶಿಯೇ. ಅದರ ರಾಜಧಾನಿ ದೊಡ್ಡ ನದಿಯೊಂದರ ಪಶ್ಚಿಮದ ದಂಡೆಯ ಮೇಲಿದೆ. ರಾಜಧಾನಿಯು ೩೦ 'ಲೀ' ಚದುರಳತೆಯುಳ್ಳದ್ದಾಗಿತ್ತು. 'ಮಹಾರಾಷ್ಟ್ರ'ದ ಚದುರಳತೆ ೫೦೦೦ 'ಲೀ'.

ಉತ್ತರ–ದಕ್ಷಿಣಕನ್ನಡ ಜಿಲ್ಲೆಗಳಲ್ಲಿ ಇಂದಿಗೂ ಅನೇಕ ಜೈನಬಸದಿಗಳು ಕಂಡುಬರುವ ಸಂಗತಿಯು ಜೈನರು ಕನ್ನಡ ಸರಕಾರಗಳಿಗೆ ಅಂದು ಪ್ರಿಯರಾಗಿದ್ದರೆಂಬುದಕ್ಕೆ ಸಾಕ್ಷಿ. ಹಿಂದುಗಳನ್ನು ಅಲ್ಪಸಂಖ್ಯರನ್ನಾಗಿ ಮಾಡುವಷ್ಟಲ್ಲದಿದ್ದರೂ ಗಣ್ಯ ಸಂಖ್ಯೆಯಲ್ಲಿ ಅವರು ತಮ್ಮ ಮತಕ್ಕೆ ಆಗ ಸೇರಿಸಿಕೊಂಡಿದ್ದರು ಎಂಬುದರಲ್ಲಿ ಸಂದೇಹಪಡಲು ಕಾರಣವಿಲ್ಲ. ಜೊತೆಗೆ ಭಾರತೀಯ ಸಂಸ್ಕೃತಿಯ ಕೊನೆಯೆಂದೆನ್ನಬಹುದಾದ ಅಹಿಂಸಾಧರ್ಮವನ್ನು ಹೆಕ್ಕಿ ತೆಗೆದು ಅತಿಯಾಗಿ ಎತ್ತಿ ಹಿಡಿದ ಫಲವಾಗಿ, ಜೈನಪ್ರಭಾವದಿಂದ ದಕ್ಷಿಣಭಾರತದ ಬ್ರಾಹ್ಮಣರ ಗಣ್ಯ ವರ್ಗಗಳು ಸಂಪೂರ್ಣ ಶಾಕಾಹಾರಿಗಳಾದರು ಎಂಬ ನಿಗಮನಕ್ಕೆ ಇತಿಹಾಸ ಸಂಶೋಧಕನಾವನೂ ಬಾರದೆ ಇರಲಾರನು. ಕನ್ನಡ ರಾಜಮನೆತನಗಳಲ್ಲಿ

ಕೆಲವು ರಾಜರು ಜೈನರಾದರೂ ಅವರ ಪರಾಕ್ರಮಕ್ಕೆ ಮೊದಲು ಚ್ಯುತಿಯುಂಟಾಗಲಿಲ್ಲ. ಆದರೆ ಸಮಾಜ ವಿಜ್ಞಾನಿಯ ದೃಷ್ಟಿಯಿಂದ ನಮ್ಮ ಸುದೀರ್ಘವಾದ ಜೈನಪ್ರಭಾವ ಯುಗವನ್ನು ಅವಲೋಕಿಸಿದರೆ ಸಮಷ್ಟಿಯಲ್ಲಿ ಜನರು ಕಾಲಕ್ರಮೇಣ ಕಾರ್ಯ–ಸಾಹಸಗಳನ್ನು ಕಳೆದುಕೊಳ್ಳುತ್ತ ಹೋದರು ಎಂದು ಹೇಳದೆ ಗತ್ಯಂತರವಿಲ್ಲ; ವೀರಗಲ್ಲು–ಮಾಸ್ತಿಗಲ್ಲುಗಳಿಗೆ ಹೆಸರಾದ ಕನ್ನಡನಾಡಿನ ಜನತೆ Martial Race ಕ್ಷಾತ್ರಕುಲದ್ದೇ ಅಲ್ಲವೆಂಬ ಅಭಿಪ್ರಾಯವನ್ನು ಬ್ರಿಟಿಷರು ತಾಳುವಂಥ ಪರಿಸ್ಥಿತಿ ಕೊನೆಗೆ ಸಂಭವಿಸಿತು.

ಬಸವಣ್ಣನವರ ಕಾಲ ಮುಗಿದು ೩–೪ ಶತಮಾನಗಳಾದ ಬಳಿಕ ವೀರಶೈವ ಮತಪ್ರಚಾರಕ್ಕೆ ಈ ಪ್ರದೇಶವು ಎಡೆಗೊಟ್ಟಿರಬೇಕು. ಇಲ್ಲಿ ಅದರ ಪೂಜ್ಯತೆಗೆ ಚೆನ್ನಾಗಿ ಮನ್ನಣೆ ದೊರತದ್ದು ಮಧುಲಿಂಗನಾಯಕನ ಆಳಿಕೆಯಲ್ಲಿ(೧೬೩೮–೧೬೭೪). ಏಕೆಂದರೆ ಹಾನುಗಲ್ಲಿನ ರಾಜಧಾನಿಯಿಂದ ರಾಜ್ಯಭಾರ ಮಾಡುತ್ತಿದ್ದ ಬನವಾಸಿಯ ಕದಂಬರು ರಾಮಾನುಜರ ಪ್ರಭಾವಕ್ಕೆ ಒಳಗಾಗಿದ್ದರು ಮತ್ತು ವಿಜಯನಗರದ ಅರಸರು ಸ್ಮಾರ್ತರೂ ಆಮೇಲೆ ಕೆಲಮಟ್ಟಿಗೆ ಶ್ರೀ ವೈಷ್ಣವ ಪ್ರಭಾವಕ್ಕೆ ಅವಕಾಶ ಕೊಟ್ಟವರೂ ಆಗಿದ್ದರು. ಅದರಿಂದಲೇ ಉತ್ತರ–ದಕ್ಷಿಣ–ಕನ್ನಡ ಜಿಲ್ಲೆಗಳಲ್ಲಿ ಇಂದಿಗೂ ಲಿಂಗಾಯತ ಮನೆತನಗಳು ಅತ್ಯಲ್ಪ ಸಂಖ್ಯವಾಗಿವೆ. ದಕ್ಷಿಣಕನ್ನಡದಲ್ಲಿ ಇಲ್ಲವೇ ಇಲ್ಲವೆಂದರೂ ಸಲ್ಲುತ್ತದೆ. ಗೋವೆಯಲ್ಲೂ ಲಿಂಗಾಯತ(ವೀರಶೈವ) ಜನಸಂಖ್ಯೆ ಇದೇ ಮಾನದ್ದಾಗಿದೆ. ಮಧುಲಿಂಗನಾಯಕನ ಕಾಲದಲ್ಲಿ ವೀರಶೈವ ಮತವು ಪ್ರವೇಶಿಸಿದ ಫಲವಾಗಿ ಪ್ರಸ್ತುತ ಪ್ರದೇಶದಲ್ಲಿ ಹಿಂದಿನಿಂದ ನಡೆದುಬಂದ ಕೆಲ ವೀರಶೈವ ಮನೆತನಗಳಿವೆ, ಮಠಗಳಿವೆ.

ಇಲ್ಲಿ ಈಗ ವೈದಿಕ ಮತಾನುಯಾಯಿಗಳಾದ ಹಿಂದುಗಳು ಬಹುಸಂಖ್ಯರು. ಅವರಲ್ಲಿ ಹವ್ಯಕರೂ ಗೌಡಸಾರಸ್ವತರೂ ಗಣ್ಯರು; ಮಿಕ್ಕ ವಿವಿಧ ಔದ್ಯೋಗಿಕ ಜಾತ್ಯುಪಜಾತಿಗಳವರೂ ಇದ್ದಾರೆ. ಅವರಲ್ಲಿ ಅಕ್ಕಸಾಲಿಗರೂ ಗುಡಿಗಾರರೂ ಚಮ್ಮಗಾರರೂ ತಮ್ಮ ಕಲೆಗಾರಿಕೆಯಿಂದ ಗಣ್ಯರಾಗಿದ್ದಾರೆ. ಸಂಖ್ಯಾಬಲದಿಂದ ಅಲ್ಲ, ಮುಸಲ್ಮಾನರ ವಸತಿಯೂ ಶಿರಸೆಯಲ್ಲೀಗ ಸಾಕಾದಷ್ಟು ಇದೆ. ಕ್ರೈಸ್ತರ ಸಂಖ್ಯೆ ಬಹಳ ಕಡಿಮೆ. ಲಿಂಗಾಯತರ ಸಂಖ್ಯಾಬಲ ತೀರ ಕಡಿಮೆಯಾಗಿಲ್ಲ. ಅವರೂ ಗೌಡಸಾರಸ್ವತರೂ ಮುಖ್ಯವಾಗಿ ವ್ಯಾಪಾರೋದ್ಯೋಗಿಗಳು.

## ಹಿಂದಿನ ವಾಙ್ಮಯ ಸಂಪತ್ತು

ಪ್ರಾಚೀನ ಕದಂಬ ಕುಂತಳದ ರಾಜಧಾನಿ ಸಮೀಪಸ್ಥ ಕೇಂದ್ರಗಳಲ್ಲಿ ಕ್ರಿ.ಶ.೪ನೆಯ ಶತಮಾನಕ್ಕಿಂತಲೂ ಹಿಂದಿನಿಂದಲೇ ಜೈನರು ಬಂದು ವಸತಿನಿಲ್ಲಲು ಆರಂಭಿಸಿರಬೇಕು. ಏಕೆಂದರೆ ನಾಗರ ಖಂಡಕ್ಕೆ ಸೇರಿದ ಸೊರಗ(ಬ)ದ ಸಮಂತಭದ್ರನು 'ಆಪ್ತಮೀಮಾಂಸೆ'ಯನ್ನು ಬರೆದು ೩೬೦ರಲ್ಲಿ ಮಡಿದನು. ಅದರಿಂದಲೇ ಕ್ರಿ.ಶ.೭೦೦–೭೫೦ರ ಹೊತ್ತಿಗೆ ಸುಧಾಪುರದಲ್ಲಿ ಅಕಳಂಕ ಮಠ ಸ್ಥಾಪನೆಯಾಯಿತು ಮತ್ತು ಉಳಿದೆಡೆಗಳಲ್ಲಿ ಜೈನಮಠಗಳೂ ಸ್ಥಾಪಿತವಾಗಲು ಸ್ಫೂರ್ತಿಯನ್ನು ಅದು ಕೊಟ್ಟಿತು.

ಆಗಲೇ ಹೇಳಿದಂತೆ 'ಅಷ್ಟಶತಿ' ಮತ್ತು 'ತತ್ವಾರ್ಥ ರಾಜವಾರ್ತಿಕ ವ್ಯಾಖ್ಯಾಲಂಕಾರ' ಎಂಬ ಶಾಸ್ತ್ರಗ್ರಂಥಗಳನ್ನು ರಚಿಸಿ ಅಕಳಂಕ ಗುರುವು ಉತ್ತರಕನ್ನಡ ಜಿಲ್ಲೆಯ ಪ್ರಥಮ ಪ್ರಸಿದ್ಧ ಲೇಖಕನೆನಿಸಿದನು. ಈ ಗ್ರಂಥಗಳನ್ನಲ್ಲದೆ ಅತನು ಲಘೀಯಸ್ತ್ರಯ, ನ್ಯಾಯವಿನಿಶ್ಚಯ, ಸ್ವರೂಪಸಂಬೋಧನ ಮುಂತಾದವನ್ನು ರಚಿಸಿ ಬಹಳ ಗಣ್ಯ ವಿದ್ವಾಂಸನೆನ್ನಿಸಿಕೊಂಡನು.

ಆಮೇಲೆ, ಹಾನುಗಲ್ಲಿನ ರಾಜಧಾನಿಯಿಂದ ೨ನೆಯ ಮಯೂರವರ್ಮ ಕದಂಬರಾಯನು ಸುಧಾಪುರವನ್ನೊಳಗೊಂಡ ಬನವಾಸಿ ಮಂಡಲವನ್ನು ಆಳುತ್ತಿದ್ದಾಗ, ಅವನ ಮೇಲ್ದೊರೆಯಾಗಿದ್ದ ಚಾಲುಕ್ಯರ ೨ನೆಯ ಜಯಸಿಂಹ ಚಕ್ರವರ್ತಿಯು ಮೇಲ್ವಿಚಾರಣೆಗಾಗಿ ಸಿಂಗಣ ದೇವರಸನನ್ನು ನಿಯಮಿಸಿದನು. ಅನಂತರ ಬಂದ ೧ನೆಯ ಸೋಮೇಶ್ವರ ಚಕ್ರವರ್ತಿಯು ಚಾಮುಂಡರಾಯರಸನೆಂಬ ಅದ್ವೈತ ವಿದ್ವಾಂಸನಾದ ಪ್ರಖ್ಯಾತ ದ್ವಿಜವರನನ್ನು ರಾಜ್ಯಪಾಲನನ್ನಾಗಿ ನಿಯಮಿಸಿದನು. ಅಂದು ಕದಂಬ ಮಹಾಮಂಡಲೇಶ್ವರರ ಕುಲದ ಮಹಾವೀರನಾದ ೧ನೆಯ ತೈಲಪನು ಬನವಾಸಿ ಮಂಡಲವನ್ನು ಆಳುತ್ತಿದ್ದನು. ಚಾಮುಂಡರಾಯರಸನು ಕ್ರಿ.ಶ.೧೦೪೬ರಿಂದ ೧೦೫೩ರವರೆಗೂ, ೧೦೬೩ರಿಂದ ೧೦೬೬ರವರೆಗೂ ಬನವಾಸಿ ಮಂಡಲದ ಮೇಲ್ವಿಚಾರಕನಾಗಿದ್ದನು. ಈತನು 'ಲೋಕೋಪಕಾರ' ಎಂಬ ಪದ್ಯಕಾವ್ಯವನ್ನು ಬರೆದು ಪ್ರಸಿದ್ಧನಾದನು. ಈ ಗ್ರಂಥವನ್ನು ಇವನು ಕ್ರಿ.ಶ.೧೦೨೫ರಲ್ಲೇ ಬರೆದು ಮುಗಿಸಿದ್ದನು.

ರಾಜ್ಯಪಾಲನಾಗಿದ್ದ ದ್ವಿಜವರ ಚಾಮುಂಡರಾಯನ ಕೈಕೆಳಗೆ 'ಸಾಂಧಿವಿಗ್ರಹಿಕ' ಎಂಬ ಪದವಿಯನ್ನು ಅಲಂಕರಿಸಿದ್ದ ನಾಗವರ್ಮಾಚಾರ್ಯನು 'ಚಂದ್ರಚೂಡಾಮಣಿ' ಎಂಬ ಗ್ರಂಥವನ್ನು ಬರೆದನು. ಆಗ ಬನವಾಸಿ ಮಂಡಲದಲ್ಲಿದ್ದ 'ಬಳ್ಳಿಗಾಂವೆಯು' ರಾಜ್ಯಪಾಲರ ಮತ್ತು ಅವರ ಕೈಕೆಳಗಿನ ನೌಕರರ ದೊಡ್ಡ ಉಪರಾಜಧಾನಿಯಾಗಿತ್ತು. ಚಾಮುಂಡರಾಯರಸನು ಕ್ರಿ.ಶ.೧೦೬೧-೬೨ರಲ್ಲಿ ಚೋಳರನ್ನು ಇದಿರಿಸಿದಾಗ ತೀರಿಹೋದನೆಂಬುದು ನೀಲಕಂಠಶಾಸ್ತ್ರಿಗಳ ಮತ; ಇನ್ನೊಂದೆಡೆ ಅವರೇ ಅವನು ತೀರಿದ್ದು ೧೦೬೮ರಲ್ಲಿ ಎಂದಿದ್ದಾರೆ!

ಆಮೇಲಿನದು ಬನವಾಸಿಯ ಮಹಾಮಂಡಲೇಶ್ವರನಾಗಿ ಬನವಾಸಿ ರಾಜಧಾನಿಯಲ್ಲಿ ಆಳುತ್ತಿದ್ದ ಕೀರ್ತಿವರ್ಮ ಕದಂಬರಾಯನ ಕಾಲ(೧೦೭೫-೧೧೧೭). ಅವನು ಅತಿ ದೊಡ್ಡ ವಿದ್ವಾಂಸನಾಗಿದ್ದುದರಿಂದ ಅವನಿಗೆ 'ಸರ್ವಜ್ಞ'ನೆಂಬ ಬಿರುದಿತ್ತು. ಅವನು ವಿದ್ವಜ್ಜನರಿಗೆ ವಟವೃಕ್ಷವಾಗಿದ್ದನು. ಅಂದು ಚಾಲುಕ್ಯ ಮೇಲ್ದೊರೆಗಳ ರಾಜ್ಯಪಾಲನಾಗಿ ಬನವಾಸಿ ಮಂಡಲದ ಮೇಲ್ವಿಚಾರಣೆಗೆ ನಿಂತಿದ್ದ ಲಕ್ಷ್ಮನೃಪನ ಕೋಶಾಧಿಕಾರಿ ಶಾಂತಿನಾಥ. ಶಾಂತಿನಾಥನು ಬನವಾಸಿಯಲ್ಲಿ ಇರುತ್ತಿದ್ದನು. ಆಗ ಅವನು 'ಸುಕುಮಾರ ಚರಿತ'ವೆಂಬ ಉದ್ಗ್ರಂಥವನ್ನು ಬರೆದನು. ಅವನ ಕಾವ್ಯಶೈಲಿ ಹೃದಯಂಗಮವಾಗಿದೆ.

ಅನಂತರ ಕೀರ್ತಿದೇವ ಕದಂಬರಾಯನು(೧೧೫೧–೧೧೮೦) ಆ ಸ್ಥಾನದಲ್ಲಿ ಹರಿವರ್ಮನು ಕಡೆಯಾಗಿದ್ದದ್ದು ತಿಳಿದುಬರುತ್ತದೆ. ಸಾಂತಳಿಗೆಯ ದ್ವಿಜವರ್ಯನಾದ ಚಂದ್ರರಾಜನು 'ಮದನತಿಲಕ'ವೆಂಬ ಆಕರ್ಷಕವಾದ ಕೃತಿಯನ್ನು ರಚಿಸಿದನು. ಈತನು ಕೀರ್ತಿವರ್ಮನ ಕಾಲದವನು. ಅದೇ ಪ್ರಕಾರ ನಾರಾಯಣದೇವನೂ ಅಂದು ಪ್ರಸಿದ್ಧ ಕವಿಯಾಗಿದ್ದನೆಂದು ಹಾವೇರಿಯ ಶಾಸನವೊಂದು ಸಾರುತ್ತದೆ.

ಕ್ರಿ.ಶ.೧೧೮೧ರಿಂದ ೧೨೧೧ರವರೆಗಿನ ಬನವಾಸಿ ಪುರವರಾಧೀಶ್ವರನಾಗಿದ್ದ ಮಹಾಮಂಡಲೇಶ್ವರನೆಂದರೆ ಕದಂಬ ಕಾಮದೇವ. ಕವಿರಾಜ ಮಾಧವಭಟ್ಟನು ಅವನ ಆಸ್ಥಾನ ಕವಿಯಾಗಿದ್ದನು. ಅವನು 'ರಾಘವ ಪಾಂಡವೀಯ' ಎಂಬ ಉಭಯಾರ್ಥಕ ಕಾವ್ಯವನ್ನು ಬರೆದನು. ಅದೊಂದು ಸಂಸ್ಕೃತ ಕಾವ್ಯ. ಒಂದೇ ಒಕ್ಕಣೆಯಲ್ಲಿ ಅದು ರಾಮಾಯಣ–ಮಹಾಭಾರತಗಳೆರಡರ ಕಥೆಗಳನ್ನೂ ಶ್ಲೇಷ–ಸಂಧಿ–ಸಮಾಸಗಳ ಬಲದಿಂದ ತಿಳಿಸುತ್ತದೆ. ಕಾಮದೇವನಿಂದ ಪೂಜಿತನಾದ ಏಕಾಂತದ ರಾಮಯ್ಯನೆಂಬ ದ್ವಿಜವರನು ವಚನಗಳನ್ನು(೧೧೬೦ರಲ್ಲಿ) ಬರೆದನು.

ಕ್ರಿ.ಶ.೧೩೪೭ರ ಅನಂತರ ಬನವಾಸಿ ಸುಧಾ–ಶಿರಸೆಗಳ ಪ್ರದೇಶವು ವಿಜಯನಗರದ ಅರಸರ ಆಳಿಕೆಗೆ ಒಳಪಟ್ಟಿತ್ತು. ಸಂಗಮ ಸಂತಾನದ ೨ನೆಯ ದೇವರಾಯನ ಸಾರ್ವಭೌಮ ದೊರೆತನ ೧೪೨೬ರಿಂದ೧೪೪೬ರವರೆಗೆ. ಅಂದು ವಿಜಯನಗರದ ಬನವಾಸಿ ರಾಜ್ಯಪಾಲರ ರಾಜಧಾನಿ ಚಂದ್ರಗುತ್ತಿಯಾಗಿತ್ತು. ಆಗ ಸುಮಾರು ೧೪೩೦ರಲ್ಲಿ ಬತ್ತಲೇಶ್ವರನೆಂಬ ವರಕವಿಯು 'ಕೌಶಿಕ ರಾಮಾಯಣ'ವೆಂಬ ಸೊಗಸಾದ ಷಟ್ಪದಿಕಾವ್ಯವನ್ನು ಬರೆದನು. ಈತನು ಯಾಣದ ಪಡುವಣ ಸೀಮೆಯ ಅದ್ವೈತ ಬ್ರಾಹ್ಮಣ.

ಸುಧಾಪುರದಲ್ಲಿ ಇಮ್ಮಡಿ ಅರಸಪ್ಪ ನಾಯಕನ ಮಗ ರಾಮಚಂದ್ರನಾಯಕ ಆಳುತ್ತಿದ್ದಾಗ ಇಲ್ಲಿಯ ಜೈನಮಠದ ಗುರುವಾಗಿದ್ದ ೫ನೆಯ ಭಟ್ಟ ಅಕಳಂಕದೇವನು ಸುಮಾರು ೧೬೦೪ರಲ್ಲಿ ೫೯೨ ಸೂತ್ರಗಳನ್ನುಳ್ಳ 'ಶಬ್ದಾನುಶಾಸನ' ಎಂಬ ಉದ್ದಾಮ ಕನ್ನಡ ವ್ಯಾಕರಣ ಗ್ರಂಥವನ್ನು ಸಂಸ್ಕೃತದಲ್ಲಿ ಬರೆದನು. ಅದರ ವೃತ್ತಿಯಾದ 'ಭಾಷಾಮಂಜರಿ'ಯನ್ನೂ ಈತನೇ ರಚಿಸಿದನು. ಈ ಷಡ್ ಭಾಷಾಕೋವಿದನ ವ್ಯಾಕರಣ ಗ್ರಂಥವು ಈಗಲೂ ಕನ್ನಡ ಭಾಷೆಯ ಉತ್ತಮ ಆಧಾರಗ್ರಂಥವೆನ್ನಿಸಿದೆ.

## ಶಿಲ್ಪಕಲೆ

ಸುಧಾಪುರ (ಅಥವಾ ಶಿರಿಸೆಯ) ವಾದಿರಾಜ ಮಠವೂ ಸ್ವರ್ಣವಲ್ಲೀ ಮಠವೂ ಜೀವಂತ ಮತಧಾರ್ಮಿಕ ಚಟುವಟಿಕೆಗಳ ಕೇಂದ್ರಗಳಾಗಿ ಉಳಿದಿವೆ. ಇವುಗಳ ಕಟ್ಟಡಗಳನ್ನು ಈಗಿರುವಂತೆ ಕಟ್ಟಿಸಿಕೊಟ್ಟಿದ್ದು ಇಮ್ಮಡಿ ಅರಸಪ್ಪನ ಕಾಲದಲ್ಲಿ; ಒಂದು ಹೊರಗಿನ ಮಾಧ್ವವೈಷ್ಣವ ಸಂಪ್ರದಾಯವನ್ನು ಬೆಳೆಸಿಕೊಂಡು ಬಂದಿದ್ದರೆ, ಇನ್ನೊಂದು ಒಳಗಿನ ಸ್ಮಾರ್ತ ಸಂಪ್ರದಾಯವನ್ನು ಬೆಳೆಸಿಕೊಂಡು ಬಂದಿದೆ. ಸಮೀಪದ ಹುಲೇಕಲ್ಲಿನಲ್ಲಿ

ವ್ಯಾಸರಾಯ ಮಠವೂ ಮಾಧ್ವ ವೈಷ್ಣವ ಸಂಪ್ರದಾಯವನ್ನು ನಡೆಸಿಕೊಂಡು ಬಂದಿದೆ. ಜೈನಮಠವು ಜೈನರ ಸಂಖ್ಯಾಬಲದಷ್ಟೇ ಕ್ಷೀಣವಾಗಿದೆ. ಆದರೆ ಅದು ಗಣ್ಯವಾದ ಐತಿಹಾಸಿಕ ಅವಶೇಷವೆನ್ನಿಸಿದೆ.

ಸುಧಾಕ್ಷೇತ್ರದ ಕೃಷ್ಣ, ಹನುಮಂತ, ಈಶ್ವರ, ತ್ರಿವಿಕ್ರಮ ದೇವಾಲಯಗಳೂ ಬಸದಿಗಳೂ ಹೆಚ್ಚಾಗಿ ಹೊಯ್ಸಳ ಶಿಲ್ಪಪ್ರಸ್ಥಾನದ ಹಿನ್ನಲೆಯೆನ್ನಿಸುವ ಕದಂಬ ಪ್ರಸ್ಥಾನದ ಕುರುಹುಗಳನ್ನು ಆ ಈ ಭಾಗಗಳಲ್ಲಿ ಸ್ಪಷ್ಟವಾಗಿ ಪ್ರದರ್ಶಿಸುತ್ತವೆ. ಆದರೆ ಎದುರಿಗೆ ಹೊಯ್ಸಳರ ನಾಜೂಕು ಎದ್ದು ಕಾಣುತ್ತದೆ. ಹೊಯ್ಸಳರು ಈ ಸುಧಾಭಾಗಗಳನ್ನು ಆಳಲೇ ಇಲ್ಲ ಎಂದು ಹೇಳಿದರೂ ಹೇಳಬಹುದು. ಹೀಗಿದ್ದರೂ ಅವರ ಶಿಲ್ಪಪ್ರಸ್ಥಾನ ಇಲ್ಲಿ ಪಸರಿಸಿದುದರ ಅರ್ಥವು ಆ ಕಲೆಯೋವಜರ ಪಿತೃಪಿತಾಮಹರ ತವರುಮನೆ ಕದಂಬ ಕುಂತಳವೇ ಆಗಿತ್ತೆಂಬುದರಲ್ಲಿ ಅಡಗಿದೆ. ಜೊತೆಗೆ, ಹೊಯ್ಸಳರ ರಾಜಧಾನಿಯು ಮೊದಲು ಕದಂಬರ ಒಂದು ಶಾಖೆಯ ರಾಜಧಾನಿಯಾಗಿತ್ತೆಂಬುದನ್ನೂ ನೆನೆದುಕೊಳ್ಳಬಹುದು. ಸಾಂಸ್ಕೃತಿಕ ಸಂಪರ್ಕಕ್ಕೆ ಅಂದಿನ ಹಿಂದು ಯುಗದಲ್ಲಿ ರಾಜರ ರಾಜಕೀಯ ಕಲಹವು ಎಂದೂ ಅಡ್ಡಬರುತ್ತಿರಲಿಲ್ಲ.

ಬನವಾಸಿಯ ಕದಂಬರಂತೆಯೇ ಸುಧಾಪುರದ ನಾಯಕರೂ ಬನವಾಸಿಯ ಮಧುಕೇಶ್ವರನಿಗೆ ನಡೆದುಕೊಳ್ಳುವವರಗಾಗಿದ್ದರು. ರಘುನಾಥ ನಾಯಕನು ಮಧುಕೇಶ್ವರನಿಗಿತ್ತ ಕಲ್ಲುಮಂಚವು ಅಂದಿನ ಶಿಲ್ಪಕಲೆಯ ಕುಸುರುಗೆಲಸಕ್ಕೆ ಒಳ್ಳೆಯ ಮಾದರಿಯಾಗಿದೆ. ಇಡಿ ದೇಶದಲ್ಲಿ ಹೇಗೋ ಹಾಗೇ ಇಲ್ಲಿಯೂ ಈಗ ಶಿಲಾಶಿಲ್ಪಕ್ಕೆ ಪ್ರೋತ್ಸಾಹ ತೀರ ಕಡಿಮೆಯಾಗಿ ಹೋಗಿದೆ–ಅಥವಾ ಇಲ್ಲವೆಂದೇ ಹೇಳಬಹುದಾಗಿದೆ.ಇದು ಶೋಚನೀಯ. ಚಂದನ ಶಿಲ್ಪಕ್ಕೂ(ಗುಡಿಗಾರಿಕೆಗೂ) ಗಂಧದ ಮರದ ಈ ನಾಡು ಬೇಕಾದಷ್ಟು ಪ್ರೋತ್ಸಾಹವನ್ನು ಕೊಡುತ್ತಿಲ್ಲ. ಈ ಕಾಡಿನ ನಾಡಿನಲ್ಲಿ ಮೇಜು–ಕುರ್ಚಿಗಳನ್ನು ಹೊರಜಿಲ್ಲೆಗಳಿಂದ ತರಿಸಿಕೊಳ್ಳುವ ಪರಿಸ್ಥಿತಿ ಬಂದಿರುವಾಗ ದಾರುಶಿಲ್ಪ( Wood Work) ಏನಾಗಿದೆ? ಎಂದು ಹೊಸದಾಗಿ ಹೇಳಬೇಕೆ? ಲೋಹಶಿಲ್ಪ(Manufacture of Iron-Copper-Brass Wares) ಪ್ರಾಚೀನ ಕಾಲದಲ್ಲೆ ಮುಗಿದುಹೋಗಿದೆ. ಸ್ವರ್ಣ ನಿಯಂತ್ರಣದ ಕಾಯಿದೆ ಇರುವಾಗ ಸ್ವರ್ಣಶಿಲ್ಪ ಏನಾಗಬೇಕು? ಮುಂದಿನ ಕಾಲವು 'ಪ್ಲಾಸ್ಟಿಕ್‌ಶಿಲ್ಪ'ವನ್ನಾದರೂ ಸ್ಥಳೀಯವೆನ್ನಿಸಿತೋ ಇಲ್ಲವೋ? ಎಂಬುದನ್ನು ಕಾದು ನೋಡಬೇಕಾಗಿದೆ. ಈಗ 'ಅಲಕಂ ಮಂದಾರಶೂನ್ಯಂ ಕದಪು ಮಕರಿಕಾ ಪತ್ರಶೂನ್ಯಂ ಲಲಾಟಂ । ತಿಲಕಾಲಂಕಾರ ಶೂನ್ಯಂ' ಆಗಿದೆ!

ಸುಧೆ–ಬನವಾಸಿಗಳ ಕೆಲ ದೇವಾಲಯಗಳಲ್ಲಿ ಮಧ್ಯಯುಗೀನ ವಾಸ್ತು ಶಿಲ್ಪಸ್ವರೂಪ ಕಂಡುಬರುವುದು. ಅವು ಕ್ರಿ.ಶ.೧೦ನೆಯ ಶತಮಾನಕ್ಕಿಂತ ಹಿಂದಿನವುಗಳಾಗಿರಲಾರವು ಎಂಬ ತೀರ್ಮಾನಕ್ಕೆ ಕಾರಣವಾದದ್ದುಂಟು. ಆದರೆ ಅದಕ್ಕೂ ಹಿಂದಿನ ಶಿಲಾಶಾಸನ ಪ್ರಮಾಣವು ಅವುಗಳಲ್ಲಿ ಕೆಲವಕ್ಕಿದೆ. ಅದು ಅಪ್ರಾಮಾಣಿಕ ಎನ್ನಹೊರಡುವುದು ಅಪ್ರಾಮಣಿಕ. ಒಂದು ದೇವಾಲಯಕ್ಕೆ ಹಲವು ಭಾಗಗಳಿವೆ. ಅವೆಲ್ಲವೂ ಅನೇಕ ಸಲ

ಪುನಾರಚನೆ–ಪರಿವೃತ್ತ ರಚನೆಗಳಿಗೆ ಒಳಪಟ್ಟಿರಬಹುದು. ಏಕೆಂದರೆ ಕುಂತಳದ ದೇವಾಲಯ ಪರಂಪರೆ ಶಾತವಾಹನರ ಕಾಲಕ್ಕಿಂತ ಹಿಂದಿನಿಂದ ಆರಂಭವಾಗುತ್ತದೆ. ಶಾಂತಿವರ್ಮ ಕದಂಬ ಚಕ್ರವರ್ತಿಯ ತಾಳಗುಂದ ಶಿಲಾಶಾಸನದಲ್ಲಿ ಅಲ್ಲಿಯ ಪ್ರಣವೇಶ್ವರನು ಶಾತಕರ್ಣಿ(ಶಾತ(ಶಾಲಿ)ವಾಹನ) ಮುಂತಾದ ಮಹಾರಾಜರಿಂದ ಅರ್ಚಿತ ಎಂದು ಹೇಳಿದ್ದು ಆ ದೇವಸ್ಥಾನದ ಪ್ರಾಚೀನತೆಗೆ ಪ್ರಮಾಣ. ಬನವಾಸಿಯ ಮಧುಕೇಶ್ವರ ದೇವಾಲಯದ ಪ್ರಾಚೀನತೆಯನ್ನು ಎಂದೂ ಅದರ ಕುಡ್ಯ ಶಿಲಾಪರೀಕ್ಷೆಯೂ ಅದರ ಗರ್ಭಗುಡಿಯ ಎದುರಿನ ಒಳಗೆ ಇಡಲ್ಪಟ್ಟಿರುವ ಆದಿಮಾಧವನ ವಿಗ್ರಹವನ್ನು ಗೂಡೊಂದರಲ್ಲಿ ತಂದಿಟ್ಟಿರುವುದರ ಅವಲೋಕನವೂ ಪ್ರಶ್ನಿಸಲಾರವು. ಕದಂಬ ಸಾರ್ವಭೌಮರೆಲ್ಲರೂ ೧೦ನೆಯ ಶತಮಾನದ ಹಿಂದಿನವರು. ಅವರಿಗೆ ಬನವಾಸಿಯ ಮಧುಕೇಶ್ವರ ಕುಲದೇವತೆಯಾದದ್ದು ಶಾಸನೋಕ್ತ ಮತ್ತು ಪರಂಪರಾಪ್ರಸಿದ್ಧ. ಈಗ ಪರಾಮರ್ಶಿಸಿದರೂ ಈ ದೇವಾಲಯದ ಎಲ್ಲ ಭಾಗಗಳ ಶಿಲ್ಪವೂ ಶುದ್ಧ ಹೊಯ್ಸಳ ಅಥವಾ ದ್ರಾವಿಡವಾಗಿಲ್ಲ ಎಂಬುದು ಶಾಸ್ತ್ರಜ್ಞರಿಗೆ ಗೊತ್ತಾಗದೆ ಉಳಿಯದು.

## ಶಿರಿಸೆಯ ಉಚ್ಛ್ರಾಯ ಕಾಲ

ಕ್ರಿ.ಶ.೧೭೬೩ರಲ್ಲಿ ಮೈಸೂರಿನ ಹೈದರ್ ಅಲಿಯು ದಾಳಿಮಾಡಿ ಸುಧಾನಗರಕ್ಕೆ ಇತಿಶ್ರೀ ಬರೆದನು. ಅಲ್ಲಿಂದ ೧೭೯೯ರವರೆಗೆ ಹೈದರ ಮತ್ತು ಅವನ ಮಗ ಟೀಪು ಈ ಪ್ರದೇಶವನ್ನು ಆಳಿದರು. ಟೀಪು ಸೋತು ಮೈಸೂರು ರಾಜ್ಯವು ಬ್ರಿಟಿಷರಿಗೆ ದೊರಕಿದಾಗ ಅವರು ಸುಧಾರಾಜ್ಯವನ್ನು ದಕ್ಷಿಣ ಕನ್ನಡದೊಡನೆ ಸೇರಿಸಿ, ಮದ್ರಾಸು ಪ್ರಾಂತದ ಆಡಳಿತಾಂಗವನ್ನಾಗಿ ಮಾಡಿದರು. ಅಂದಿನ ಕೆನರಾ ಜಿಲ್ಲೆಯ ಮುಖ್ಯ ಪಟ್ಟಣ ಹೊನ್ನಾವರ, ಕಾರವಾರವಲ್ಲ. ಕ್ರಿ.ಶ.೧೮೬೨ರಲ್ಲಿ ಇಂದಿನ ಉತ್ತರಕನ್ನಡ ಜಿಲ್ಲೆಯು ಕೆನರಾ ಜಿಲ್ಲೆಯಿಂದ ಪ್ರತ್ಯೇಕಿಸಲ್ಪಟ್ಟು ಬೊಂಬಾಯಿ ಪ್ರಾಂತದ ಆಡಳಿತಾಂಗವಾಯಿತು. ಆಗ ಕಾರವಾರ ಈ ಜಿಲ್ಲೆಯ ಮುಖ್ಯ ಪಟ್ಟಣವಾಯಿತು.

ಸುಧಾರಾಜ್ಯದ ಉಚ್ಛ್ರಾಯ ದೆಶೆಯಲ್ಲಿ ಸುಧಾಪುರದಲ್ಲಿ ೧ ಲಕ್ಷ ಮನೆಗಳೂ ಶಿರಿಸೆಯಲ್ಲಿ ೭೦೦ ಮನೆಗಳೂ ಇದ್ದವು. ಸುಧೆಯ ನಿವಾಸಿಗಳಲ್ಲಿ ರಾಜಮನೆತನದವರೂ ರಾಜಸಭಾಸದರೂ ಸೈನಿಕರೂ ಹೆಚ್ಚಾಗಿದ್ದರು. ಕಾರಖಾನೆಗಳಂದು ಇದ್ದಿಲ್ಲ. ಗದ್ದೆ ಬೇಸಾಯ ಚೆನ್ನಾಗಿ ನಡೆಯುತ್ತಿತ್ತು. ಸಾಮಾನ್ಯ ಜನರು ಸಮೃದ್ಧರಾಗಿದ್ದರು.

ಶಿರಿಸೆಯ ಪಡುವಲಲ್ಲಿ ಶಾಲ್ಮಲೆ ಎಂಬ ನದಿ ಹುಟ್ಟಿದೆ. ಇದರ ಮೂಡಲಲ್ಲಿ ಅಘನಾಶಿನಿ ಜನ್ಮ ತಳೆದಿದೆ. ಅದು ಕೆಳಗಿಳಿದ ಮೇಲೆ 'ತಾರಿಹೊಳೆ' ಎನ್ನಿಸಿದೆ. ಅಡಿಕೆ–ಮೆಣಸು–ಏಲಕ್ಕಿಗಳನ್ನು ಬೆಳೆಯುವ ತೋಟಗಳೇ ಶಿರಿಸೆಯ ಸಿರಿ. ಈ ತೋಟಗಳಲ್ಲಿ ವೀಳೆಯದೆಲೆ, ಬಾಳೆಕಾಯಿಗಳನ್ನೂ ಬೆಳೆಯಿಸುತ್ತಾರೆ. ಈ ಗುಡ್ಡ–ಕೊಳ್ಳಗಳಿಂದ ತುಂಬಿದ ಪ್ರದೇಶದಲ್ಲಿ ನೀರಿನ ಒರತೆಗಳು ಅನೇಕ. ಅವು ವರ್ಷಾವಧಿ ತೋಟಗಳಿಗೆ ನೀರನ್ನು ಒದಗಿಸುತ್ತವೆ. ಹಳ್ಳ–ಕೊಳಗಳ ಬಳಗಗಳಿಗೂ ಇಲ್ಲಿ ಕೊರತೆಯಿಲ್ಲ. ಒರತೆಗಳಿಗವು

ಪೂರಕಗಳು. ಹೊಸದಾಗಿ ಸಸಿಗಳನ್ನು ನೆಡಬಹುದಾದ ತೋಟವೊಂದನ್ನು ಕೊಳ್ಳಲು ಆಗ ೧೦ ಪಗೋಡಗಳನ್ನು(೪೦ ರೂಪಾಯಿಗಳನ್ನು) ಕೊಡಬೇಕಾಗಿತ್ತು. ಆಮೇಲೆ ೧೨ ವರ್ಷಗಳವರೆಗೆ ಮಾಲಕನು ಸರಕಾರಕ್ಕೆ ಯಾವ ಬಗೆಯ ಕಂದಾಯವನ್ನೂ ತೆರಬೇಕಾಗಿದ್ದಿಲ್ಲ. ೧೩ನೆಯ ವರ್ಷ ಅಡಿಕೆ ಫಲ ಬರುತ್ತದೆ. ಅಂದಿನಿಂದ ೧೮ ನೆಯ ವರ್ಷದವರೆಗೆ ವರ್ಷಕ್ಕೆ ೬ ಪಗೋಡಗಳನ್ನು ತೆರಬೇಕು. ಆಮೇಲೆ ಫಲವತ್ತಾದ (ಸಾವಿರ ಮರಗಳ) ತೋಟದ ಮಾಲಕನು ೨೦ ಪಗೋಡಗಳನ್ನೂ ಅಷ್ಟು ಫಲವತ್ತಾಗಿ ಇರದ ತೋಟದ ಮಾಲಕನು ೧೦ ಪಗೋಡಗಳನ್ನೂ ಸರಕಾರಕ್ಕೆ ಕಂದಾಯವೆಂದು ಕೊಡಬೇಕಾಗಿತ್ತು. ಅಕಸ್ಮಾತ್ತಾಗಿ ತೋಟಿಗನೊಬ್ಬನು ಬಡತನ ಬಂದುದರಿಂದ ತೋಟವನ್ನು ಕೃಷಿಮಾಡಲಾರದೆ ಹೋದರೆ, ಕಂದಾಯದ ಅಧಿಕಾರಿಗಳಿಗೆ ತಿಳಿಸಿದಾಗ ಅವರು ಅದನ್ನು ನ್ಯಾಯವಾದ ದರಕ್ಕೆ ಮಾರಿ ಅವರಿಗೆ ಬಂದ ಹಣವನ್ನು ಸಲ್ಲಿಸುತ್ತಿದ್ದರು. ಯಾವಾಗ ಬೇಕಾದರೂ ತೋಟಗಾರನು ತನ್ನ ತೋಟವನ್ನು ಮಾರಬಹುದಾಗಿತ್ತು; ಆದರೆ ಅದನ್ನವನು ಅಡವನ್ನಾಗಿ ಇಡಲು ಕಾಯಿದೆಯು ಅವಕಾಶವನ್ನು ಕೊಟ್ಟಿದ್ದಿಲ್ಲ. ಏಲಕ್ಕಿ–ಮೆಣಸು–ಬಾಳೆಗಳ ಬಗ್ಗೆ ತೋಟಿಗ ಸರಕಾರಕ್ಕೆ ಏನನ್ನೂ ತೆರಬೇಕಾಗಿದ್ದಿಲ್ಲ. ಭೂಕಂದಾಯ ಅಸ್ತಿತ್ವದಲ್ಲೇ ಇರಲಿಲ್ಲ–ಇದು ಸುಧಾಪುರದ ನಾಯಕರ ಸುವರ್ಣಯುಗದಲ್ಲಿ! ಆದರೆ ಟೀಪುವಿನ ಆಳ್ವಿಕೆಯಲ್ಲಿ ಹೆಚ್ಚು ಭೂಕಂದಾಯವನ್ನು ಹೇರಲಾಯಿತು. ಅದರಿಂದ ತೋಟಿಗರು ಸೋತುಹೋದರು; ಅನೇಕ ತೋಟಗಳು ಹಾಳುಗೆಟ್ಟು ಹೋದವು. ಮೇಜರ್ ಮನ್ರೋವಿನ ಕಾಲದಲ್ಲಿ (೧೭೯೯–೧೮೦೦) ಭೂಕಂದಾಯ ರೂಪದಲ್ಲಿ ಹೆಚ್ಚಿಸಲಾದ ತೆರಿಗೆಯನ್ನು ತೆಗೆದುಹಾಕಲಾಯಿತು.

ಅಂದು ಕಾಡುಮೆಣಸಿನ ಬಳ್ಳಿಗಳನ್ನೂ ಗಂಧದ ಮರಗಳನ್ನೂ ಬಿಟ್ಟು, ಕಾಡಿನ ಯಾವ ಮರವನ್ನು ಯಾರೂ ಬೇಕಾದರೂ ಕಡಿದುಕೊಂಡು ಹೋಗಬಹುದಾಗಿತ್ತು. ೧೨ ವರ್ಷಗಳಿಗೊಮ್ಮೆ ಕಡಿಯಲು ತಕ್ಕ ಗಂಧದ ಮರಗಳನ್ನು ಖಾಸಗಿ ಮನುಷ್ಯನು ಸರಕಾರದಿಂದ ಕೊಂಡು ಕಡಿದು ಮಾರುತ್ತಿದ್ದನು. ಅದರಿಂದ ಅವನಿಗೆ ಮರವೊಂದಕ್ಕೆ ೪೦ ಸೇರಿನ ೧೦೦ ಮಣ ಭತ್ತ ದೊರಕುತ್ತಿತ್ತು.

ಸುಧಾಪುರದಲ್ಲಿ ವ್ಯಾಪಾರಸ್ಥರು ಇರಲಿಲ್ಲ. ಹುಬ್ಬಳ್ಳಿ, ಧಾರವಾಡ, ಹಾವೇರಿ ಮತ್ತು ಘಟ್ಟದ ಕೆಳಗಿನ ವ್ಯಾಪಾರಿಗಳೇ ಹೆಚ್ಚಾಗಿ ಅಡಿಕೆ–ಮೆಣಸು–ಏಲಕ್ಕಿಗಳನ್ನು ಬೆಳೆಯುವ ಸ್ಥಳದಲ್ಲೇ ಖರೀದಿ ಮಾಡಿಕೊಂಡು ಹೋಗುತ್ತಿದ್ದರು. ೧೨ ಮಣ ಮೆಣಸಿನಕಾಳಿಗೆ ೧೮ ಇಕ್ಕೇರಿ ಪಗೋಡಗಳು(೬೭ ರೂಪಾಯಿಗಳು) ಒಂದು ಮಣಕ್ಕೆ ೨೭ ಸೇರು; ಒಂದು ಸೇರಿಗೆ ೨೪ ದುಡ್ಡು ತೂಕ. ಕೆಂಪಡಿಕೆ ಮಣ ೧ಕ್ಕೆ ೧ ಪಗೋಡಗಳು(೪ ರೂಪಾಯಿಗಳು). ೪೦ ಸೇರಿನ ಏಲಕ್ಕಿ ಮಣಕ್ಕೆ ೭ ಪಗೋಡಗಳು(೨೮ ರೂಪಾಯಿಗಳು).

ಇಲ್ಲಿಯ ಜನಗಳ ಬಳಕೆಗಾಗಿ ನವಧಾನ್ಯಗಳನ್ನೂ ಬಟ್ಟೆಗಳನ್ನೂ ಮರಾಠಿ ವ್ಯಾಪಾರಿಗಳು ತಂದು ಮಾರಾಟ ಮಾಡಿ ಹೋಗುತ್ತಿದ್ದರು; ವಸ್ತುಗಳ ವಿನಿಮಯದ

ಪದ್ಧತಿ ರೂಢಿಯಲ್ಲಿತ್ತು. ಸ್ಥಳೀಯ ವ್ಯಾಪಾರಿಗಳು ಅವನ್ನು ಕೊಂಡು ಚಿಲ್ಲರೆಯಾಗಿ ಗಿರಾಕಿಗಳಿಗೆ ಮಾರುತ್ತಿದ್ದರು. ಸ್ಥಳೀಯ ಬಳಕೆಯ ಕಬ್ಬಿಣದ ಸಾಮಾನುಗಳು ಹೆಚ್ಚಾಗಿ ಚಂದ್ರಗುತ್ತಿಯಲ್ಲಿ ತಯಾರಾಗಿ ಬರುತ್ತಿದ್ದವು; ಮೈಸೂರಿನ ಇತರ ಕಡೆಗಳ ತಯಾರಿಕೆಗಳೂ ಇಲ್ಲಿ ಸಿಗುತ್ತಿದ್ದವು. ಕರಾವಳಿಯಿಂದ ಉಪ್ಪು ಬರುತ್ತಿತ್ತು. ಅದು ಈ ಮಾರ್ಗದಿಂದಲೇ ಮರಾಠಿ ಪ್ರದೇಶಕ್ಕೂ ಹೋಗುತ್ತಿತ್ತು.

## ಅಪದಶೆಯ ಆರಂಭ

ಬ್ರಿಟಿಷ್ ಯುಗದಲ್ಲಿ ಮದ್ರಾಸು ಪ್ರಾಂತದ ಅಂಗವಾಗಿ ನಿಂತ ಶಿರಿಸೆಯು ಆ ಪ್ರಾಂತದಲ್ಲಿ ಪ್ರಾರಂಭಿಸಲಾದ ರೈತವಾರಿ ಪದ್ಧತಿಗೆ ಒಳಪಟ್ಟಿತು. ಅದರ ಪ್ರಕಾರ ಒಡೆಯ ರೈತನು ತನ್ನ ಭೂಮಿಯಲ್ಲಿ ಬೆಳೆದ ಫಸಲಿನ ಬೆಲೆಯ ಮೂರನೆಯ ಒಂದಂಶದಷ್ಟನ್ನು ಕಂದಾಯವನ್ನಾಗಿ ಸರಕಾರಕ್ಕೆ ತೆರಬೇಕಾಯಿತು. ಫಸಲು ಸಾಕ್ಷಾತ್ತಾಗಿ ದೊರೆತಿರಲಿ, ದೊರಕದೆ ಇರಲಿ, ಅದರ ಎಕರೆವಾರು(ಗುಂಟೆವಾರು) ಅಂದಾಜು ಬೆಳೆಯ ಸರಾಸರಿ ಮಟ್ಟದಂತೆ ಕಂದಾಯವನ್ನು(ದರದ ಏರಿಳಿತಗಳಿಗೆ ಸಂಬಂಧವಿಲ್ಲದಂತೆ) ಕೊಡಬೇಕಾಗಿ ಬಂದುದರಿಂದ ಸಾಗುವಳಿದಾರನು ಬಹಳ ಸೋತು ಸಾಲಗಾರನಾಗುತ್ತ ಹೋದನು.

'For thirty years the province of Madras became a scene of oppression and agricultural distress Unparalled even in India at that age- ಮೂವತ್ತು ವರ್ಷಗಳವರೆಗೆ ಭಾರತದ ಇತರ ಯಾವ ಪ್ರಾಂತದಲ್ಲೂ ಇಲ್ಲದಂಥ ದಮನದ ಹಾಗೂ ಕೃಷಿಕಪೀಡೆಯ ದೃಶ್ಯವು ಮದ್ರಾಸ ಪ್ರಾಂತದಲ್ಲಿ ಕಂಡುಬಂದಿತು' ಎಂಬುದು ಐತಿಹಾಸಿಕ ಸತ್ಯವಾಗಿತ್ತು. ಅಂದು ಉ.ಕ.ಜಿಲ್ಲೆ ಮದ್ರಾಸು ಪ್ರಾಂತದ ಅಂಗವಾಗಿದ್ದುದಿಲ್ಲಿ ಸ್ಮರಣೀಯ.

೧೮೬೨ರಲ್ಲಿ ಉತ್ತರಕನ್ನಡ ಜಿಲ್ಲೆಯು ಬೊಂಬಾಯಿ–ಪ್ರಾಂತಕ್ಕೆ ಸೇರಿಸಲ್ಪಟ್ಟಾಗ ಅಲ್ಲಿ ಗೋಲ್ಡ್‌ಸ್ಮಿಡ್–ವಿಂಗೇಟರ ಸುಧಾರಿಸಿದ ರೈತವಾರಿ ಪದ್ಧತಿ ಜಾರಿಯಲ್ಲಿತ್ತು. ಆದರೂ ರೈತರ ಪರಿಸ್ಥಿತಿ ಬಹಳ ಸುಧಾರಿಸಲಿಲ್ಲ. ಅವರು ತೆರಬೇಕಾಗಿದ್ದ ಕಂದಾಯದ ದರಗಳು ಆಗಾಗ ಬರುತ್ತಿದ್ದ Settelment Officers ಕಂದಾಯ ನಿರ್ಣಯಾಧಿಕಾರಿಗಳ ಮರ್ಜಿಯನ್ನು ಅವಲಂಬಿಸಿರುತ್ತಿದ್ದವು. ಇದರಿಂದ ಭಾರತದಲ್ಲಿ ಅನಾದಿ ಕಾಲದಿಂದ ರೂಢವಾಗಿದ್ದ ಗ್ರಾಮಸಮುದಾಯದ ಆಡಳಿತಾಧಿಕಾರವು ಇಲ್ಲಿ ನಿರ್ನಾಮವಾಯಿತು. ಇಡಿ ಗ್ರಾಮಸಮುದಾಯ(ಊರೊಟ್ಟಿನ) ಕಂದಾಯ ತೆರುವ ಸಾಮೂಹಿಕ ಪದ್ಧತಿ ಅಳಿದುದರಿಂದ ವೈಯಕ್ತಿಕ ರೈತನು ತನ್ನ ಅಂದಾಜಿನ ಪ್ರಕಾರ ಹೇರಿದ ಕಂದಾಯ ಪ್ರಮಾಣಕ್ಕೆ ವಿರುದ್ಧವಾಗಿ ಪ್ರತಿಭಟಿಸಲು ಕೂಡ ಅಸಮರ್ಥನಾದನು!

ಸುಮಾರು ಕ್ರಿ.ಶ.೧೯೦೨ರ ಹಿಂದು ಮುಂದಿನ ಅವಧಿಯಲ್ಲಿ ಕೃಷಿಕಾರ್ಮಿಕರ ತಿಂಗಳ ಸಂಬಳದ ದರ ೮ ರೂಪಾಯಿಗಳಷ್ಟಿತ್ತು. ಅನೇಕ ರೈತರಿಗೆ ಇಡಿ ವರ್ಷಕ್ಕೆ ಬೇಕಾದಷ್ಟು ಆಹಾರಧಾನ್ಯವನ್ನು ಬೆಳೆದುಕೊಳ್ಳಲು ಸಾಧ್ಯವಾಗುತ್ತಿದ್ದಿಲ್ಲ. ಜಮೀನುದಾರರ

ಕುಟುಂಬಗಳು ಮಾತ್ರ ಸಾಮಾನ್ಯರಿಗಿಂತ ಸ್ವಲ್ಪ ಹೆಚ್ಚಿನ ಜೀವನಮಟ್ಟಗಳನ್ನು ಇಟ್ಟುಕೊಳ್ಳಲು ಶಕ್ತವಾಗಿದ್ದವು. ಕಂದಾಯ ಅಧಿಕವಾದಾಗ ಅವು ಹೆಚ್ಚು ಕೂಲಿಕಾರರನ್ನು ನಿಯಮಿಸಿಕೊಳ್ಳಲಾರದ ಪರಿಸ್ಥಿತಿಯುಂಟಾಗಿ ನಿರುದ್ಯೋಗ ಬೆಳೆಯಿತು. ಹೊಸ ಹೊಸ ಕಾರಣಗಳಿಂದ ಇಂದಿನ ನಿರುದ್ಯೋಗ ಸಮಸ್ಯೆ ಇನ್ನಷ್ಟು ತ್ವರಿತಗತಿಯಿಂದ ಮುಗಿಲನ್ನು ಮುಟ್ಟಲು ಎದ್ದಿರುವುದು ಸರ್ವವೇದವಾಗಿದೆ.

## ಬ್ರಿಟಿಷ್ ಯುಗದ ಸುಧಾರಣೆಗಳು

ಬ್ರಿಟಿಷರ ಕಾಲದಲ್ಲಿ 'ಇಂಗ್ಲಿಷ್' ವಿದ್ಯಾಭ್ಯಾಸವು ನಮ್ಮಲ್ಲಿ ಹುಟ್ಟಿ, ಬೆಳೆದು ಪ್ರಚುರ ಹೊಂದಲು ತಕ್ಕಂತೆ ಅದಕ್ಕೆ ಅನುಕೂಲ ಪ್ರಭಾವವನ್ನು ಬೀರಿದ ವಿವಿಧ ಗುಂಪುಗಳ ಉದ್ದೇಶಗಳನ್ನು ನೆನೆದರೆ, ಅವುಗಳೆಲ್ಲವೂ ಅಂಶತಃ ಸಫಲವಾಗಿವೆ ಎಂಬುದಿಂದು ಸ್ಪಷ್ಟವಾಗುತ್ತದೆ. ಆಯಾ ಉದ್ದೇಶಗಳ ಸಫಲತೆಯ ಪರಿಮಾಣಗಳನ್ನು ನಿರ್ಣಯಿಸ ಹೊರಟಾಗ, ಪೂರ್ವಗ್ರಹಗಳಿಗೂ 'ಪಶ್ಚಿಮ'ಗ್ರಹಗಳಿಗೂ ಘರ್ಷಣ ಉಂಟಾಗುತ್ತ ಹೋಗಿದೆ. ಹೊಸ ಭಾರತ ಸಾಂಸ್ಕೃತಿಕವಾಗಿ ಎಂಥ ರೂಪವನ್ನು ಹೊಂದಬೇಕು– ಎಂಬುದರ ಸಾರ್ಥಕ ದರ್ಶನ ಜನತೆಗೆ ಇನ್ನೂ ಆಗದುದರಿಂದ ಅದರ ಕರ್ತೃತ್ವಾಧಿಕಾರವುಳ್ಳ ಮುಖಂಡರಿಗೂ ಆಗಿಲ್ಲ. ಶಿರಿಸೆಯೂ ಇಂಥ 'ತ್ರಿಶಂಕು ಪ್ರಜ್ಞಾಪ್ರಭಾತ'ದಲ್ಲಿದೆಯೆಂದರೆ ತಪ್ಪಾಗಲಾರದು.

ಕ್ರಿ.ಶ.೧೮೨೩ರಲ್ಲಿ ರಾಜಾರಾಮ ಮೋಹನರಾಯನು ಭಾರತದಲ್ಲಿದ್ದ ಪಾಠಶಾಲಾ ಪದ್ಧತಿಯ ವಿದ್ಯಾಭ್ಯಾಸದಿಂದ ಕಾಲೋಚಿತ ಸಂಸ್ಕಾರ ದೊರಕದೆಂದು ಭಾವಿಸಿ ಆಧುನಿಕ 'ಲಿಬರಲ್' ಪದ್ಧತಿಯ ವಿದ್ಯಾಭ್ಯಾಸವನ್ನು ಅಮಲಿನಲ್ಲಿ ತರಬೇಕೆಂದು ಲಾರ್ಡ್ ಅಂಹರ್ಸ್ಟರಿಗೆ ಪತ್ರ ಬರೆದನು. ಕೆಲ ಪತ್ರಿಕಾಕರ್ತರು ಹೊಸ ಶಿಕ್ಷಣಪದ್ಧತಿಯು ಭಾರತೀಯರ Darkness of Ignornace ಅಜ್ಞಾನಾಂಧಕಾರವು ಪರಿಹಾರವಾಗಿ ಅವರನ್ನು ಆಡಳಿತಕ್ಕೂ ಇತರ ಸಾರ್ವಜನಿಕ ಚಟುವಟಿಕೆಗಳಿಗೂ ಅರ್ಹರನ್ನಾಗಿ ಮಾಡುವುದು ಎಂದು ತಿಳಿದರು. ಕ್ರೈಸ್ತ ಮಿಶನರಿಗಳು ಇಂಗ್ಲೀಷ್ ವಿದ್ಯಾಭ್ಯಾಸವು ಭಾರತೀಯರನ್ನು ಕ್ರೈಸ್ತ ಮತಕ್ಕೆ ಸೇರಿಸಿಕೊಳ್ಳುವ ಒಂದು ಸಾಧನ ಎಂದು ತಿಳಿದರು. ಲಾರ್ಡ್ ಮೆಕಾಲೆಯು ಅದರಿಂದ ಭಾರತೀಯರ ವಿಗ್ರಹಾರಾಧನೆಯ ಮೌಢ್ಯ ಅಳಿಯುವುದೆಂದು ಹಾರೈಸಿದನು. ಮಾಧವಚಂದ್ರಮಲ್ಲಿಕರೂ ಧಾರ್ಮಿಕ ಅಂಧಶ್ರದ್ಧೆಯು ಅದರಿಂದ ನಿವಾರಣೆಯಾದೀತು ಎಂದು ನೆನೆದರು. ಸ್ವಾತಂತ್ರ್ಯದ ಕಲ್ಪನೆ ಮೂಡಿ ಬ್ರಿಟಿಷರ ಆಳಿಕೆಯನ್ನು ಕಿತ್ತೆಸೆಯುವ ಬುದ್ಧಿ ಭಾರತೀಯರಲ್ಲಿ ಹುಟ್ಟೀತು–ಎಂದು ಕೆಲವರು ಇಂಗ್ಲೀಷ್ ಶಾಲೆಗಳ ಆಗಮನವನ್ನು ಸ್ವಾಗತಿಸಿದರು. ಮತ್ತೆ ಕೆಲವರು ಅವುಗಳು ಬ್ರಿಟಿಷ್ ಆಡಳಿತವನ್ನು ಭಾರತೀಯರು ಸಾತ್ಮ್ಯಗೊಳಿಸಿ ಕೊಳ್ಳುವಂತೆ ರೂಢಿ ಮಾಡಿಯಾವು ಎಂದು ಊಹಿಸಿದರು. ಕೆಲ ಆಂಗ್ಲರು ಅಲ್ಪ ಸ್ವಲ್ಪ ಇಂಗ್ಲಿಷ್ ಕಲಿತ ಭಾರತೀಯರು ತಮಗೆ ತಕ್ಕ ಗುಮಾಸ್ತರಾದಾರು– ಎಂದು ಆಶಿಸಿದರು.

ಕ್ರಿ.ಶ.೧೮೫೭ರಲ್ಲಿ ಕಲ್ಕತ್ತ, ಬೊಂಬಾಯಿ, ಮದ್ರಾಸು ವಿಶ್ವವಿದ್ಯಾನಿಲಯಗಳು ಸ್ಥಾಪಿಸಲ್ಪಟ್ಟವು. ಅದು ಶಿಪಾಯಿಗಳ ದಂಗೆಯ ವರುಷ. ಇಂಗ್ಲೀಷೇ ಶಿಕ್ಷಣದ ಮಾಧ್ಯಮ. ಅಂದಿನಿಂದ ಕಾಲೇಜುಗಳ ಸಂಖ್ಯೆ ಹೆಚ್ಚುತ್ತ ಹೋಯಿತು. ವಿಶ್ವವಿದ್ಯಾನಿಲಯಗಳ ಸಂಖ್ಯೆಯೂ ಅಧಿಕವಾಗುತ್ತ ಹೋಯಿತು. ಕ್ರಿ.ಶ.೧೯೬೨ರಲ್ಲಿ 'ಆರ್ಟ್ಸ್ ಮತ್ತು ಸೈನ್ಸ್' ಕಾಲೇಜು ಶಿರಸಿಯಲ್ಲಿ ಸ್ಥಾಪಿತವಾದದ್ದೂ ಪ್ರಸಿದ್ಧ. ಇಂಗ್ಲಿಷ್ ಕಲಿತ ಕೆಲ ಮಹಾಮುಖಂಡರು ಭಾರತಕ್ಕೆ ಸ್ವಾತಂತ್ರ್ಯವನ್ನು ಗಳಿಸಿಕೊಟ್ಟರು. ಆದರೆ ಸ್ವರಾಜ್ಯಭಾರತದಲ್ಲಿ ಈಗ ಇಂಗ್ಲಿಷ್ ವಿದ್ಯಾಭ್ಯಾಸ ಎಷ್ಟು ದಕ್ಷತೆಯನ್ನು ಹೆಚ್ಚಿಸಿಕೊಟ್ಟಿದೆ ಎಂಬುದು ಅನುಭವಸಿದ್ಧವಾಗಿದೆ.

ಕ್ರಿ.ಶ.೧೯೦೨ರ ಹೊತ್ತಿಗೆ ದೇಶದಲ್ಲಿ ೧ ಲಕ್ಷ ೫ ಸಾವಿರ ಸರಕಾರಿ ವಿದ್ಯಾಲಯಗಳೂ ೪೩ ಸಾವಿರ ಖಾಸಗಿ ವಿದ್ಯಾಸಂಸ್ಥೆಗಳೂ ವಿದ್ಯಾದಾನ ಮಾಡುತ್ತಿದ್ದವು. ಅವುಗಳಲ್ಲಿ ಸುಮಾರು ೪೬ ಲಕ್ಷ ವಿದ್ಯಾರ್ಥಿಗಳು ಓದುತ್ತಿದ್ದರು. ೧೫೪ ಆರ್ಟ್ಸ್ ಕಾಲೇಜುಗಳಲ್ಲಿ ೧೭॥ ಸಾವಿರ 'ಅಂಡರ್ ಗ್ರಾಜುಯೇಟ್'ಗಳೂ, ೪೬ ತಾಂತ್ರಿಕ ಕಾಲೇಜುಗಳಲ್ಲಿ ೫೪೦೦ ತಂತ್ರಜಿಜ್ಞಾಸುಗಳೂ ತರಬೇತು ಹೊಂದುತ್ತಿದ್ದರು. ವೈಸ್‌ರಾಯರಾಗಿದ್ದ ಲಾರ್ಡ್ ಕರ್ಜನ್ನರು ವಿಶ್ವವಿದ್ಯಾನಿಲಯದ ಶಿಕ್ಷಣ ಸುಧಾರಣೆಗಾಗಿ 'ಕಮಿಶನ್ನನ್ನು' ನಿಯಮಿಸಿದರು. ೧೯೦೪ರಲ್ಲಿ ಭಾರತೀಯ ವಿಶ್ವವಿದ್ಯಾನಿಲಯಗಳ ಕಾಯಿದೆ ಪಾಸಾಯಿತು. ಅದು ಇಂದಿಗೂ ನಮ್ಮ ಉಚ್ಚ ವಿದ್ಯಾಭ್ಯಾಸ ಶಾಸ್ತ್ರದ ಮೂಲಾಧಾರವಾಗಿ ಉಳಿದಿದೆ.

ದೇಶೀಯ ಮಾಧ್ಯಮದ ಶಾಲೆಗಳು ಸಾರ್ವಜನಿಕರ ನೆರವಿನಿಂದ ಹೇಗೆ ಹೇಗೋ ನಡೆಯುತ್ತಿದ್ದವು. ಕ್ರಿ.ಶ.೧೮೫೪ ಮತ್ತು ೭೧ರ ನಡುವೆ ಸರಕಾರವು ಈ ಶಾಲೆಗಳತ್ತ ಲಕ್ಷ್ಯ ಹಾಕತೊಡಗಿತು; ಆಮೇಲೆ ೧೮೭೧ ಮತ್ತು ೧೮೮೨ರ ನಡುವೆ ಮಾಧ್ಯಮಿಕ ಶಿಕ್ಷಣದತ್ತಲೂ ದೃಷ್ಟಿಯನ್ನು ಬೀರಿತು. ಅದರ ಪರಿಣಾಮವಾಗಿ ಭಾರತದ ಇತಿಹಾಸವು ೧೯೪೭ರಲ್ಲಿ ಬದಲಾಯಿತು. 'ಲಿಬರಲ್' ಶಿಕ್ಷಣದಿಂದಾದ ಅನುಕೂಲಗಳ ಜೊತೆಗೆ 'ಇಂಗ್ಲಿಷ್' ಆಗಿ ಹೋದ ಕೆಲ ಪ್ರತಿಕೂಲಗಳೂ ಈಗ ಅನುಭವಕ್ಕೆ ಬಂದಿವೆ. 'The extent to which it was healthy and good for nantional life or was instrumental in demoralising or denationalizing is a subject of dispute–ಅದು ಎಷ್ಟರ ಮಟ್ಟಿಗೆ ರಾಷ್ಟ್ರೀಯ ಜೀವನಕ್ಕೆ ಪೋಷಕವೂ ಹಿತಕರವೂ ಆಗಿದೆ ಅಥವಾ ಎಷ್ಟರ ಮಟ್ಟಿಗೆ ಅರಾಷ್ಟ್ರೀಯತೆಗೂ ಅನೀತಿವಂತಿಕೆಗೂ ಕಾರಣವಾಗಿದೆ–ಎಂಬುದು ಅಭಿಪ್ರಾಯ ಭೇದಕ್ಕೂ ವಿವಾದಕ್ಕೂ ಒಳಪಟ್ಟ ಸಂಗತಿ' ಎಂದು ಇತಿಹಾಸಕರರಲ್ಲಿ ಕೆಲವರು ಹೇಳಿರುವುದು ಸ್ಮರಣೀಯವಾಗಿದೆ. ಅದರಲ್ಲೂ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಅದು ಉಂಟುಮಾಡಿದ ಪರಿಣಾಮಗಳನ್ನು ವಿಶೇಷವಾಗಿಯೂ ಪ್ರತ್ಯೇಕವಾಗಿಯೂ ಪರಾಮರ್ಶಿಸುವುದು ರಾಷ್ಟ್ರದ ಎಲ್ಲ ಪಟ್ಟಣಿಗರೂ ಮಾಡಬೇಕಾದ ಆದ್ಯ ಕರ್ತವ್ಯ.

ಬ್ರಿಟಿಷ್ ಯುಗದಲ್ಲಿ ನಡೆದ ಸಮಾಜಸುಧಾರಣೆಗಳು ಉಲ್ಲೇಖನೀಯವಾಗಿವೆ.

ಸ್ತ್ರೀ ಶಿಕ್ಷಣ ಪ್ರೋತ್ಸಾಹ, ಬಾಲ್ಯವಿವಾಹ–ಸಹಗಮನಗಳ ಉಚ್ಚಾಟನೆ, ಪರದಾಪದ್ಧತಿಯ ವಿರುದ್ಧವಾಗಿ ಪ್ರಚಾರ– ಅದರ ಕೆಲಮಟ್ಟಿನ ಜಯ. ಬಹುಪತ್ನೀ ವಿವಾಹದ ಹಿನ್ನಡೆ, ಅಂಧ ಪೌರಾಣಿಕತೆಯ ಪ್ರಭಾವ, ಕೆಲ ಹಿಂದುಳಿದವರಲ್ಲಿದ್ದ ಶಿಶುಹತ್ಯಾ ಪದ್ಧತಿಯ ಅಂತ್ಯಕ್ರಿಯೆ ಮುಂತಾದವು ಬಹಳ ಮುಖ್ಯವಾದ ಸುಧಾರಣೆಗಳು–ಎಂಬುದನ್ನು ಯಾರೂ ಅಲ್ಲಗಳೆಯಲಾರರು. ಬಹುಪತ್ನಿವಿವಾಹ, ಅನೈರ್ಮಲ್ಯ, ಜಾತೀಯ ಹಾಗೂ ಲಿಂಗೀಯ ಗೌರವವೈಷಮ್ಯ ಮತ್ತು ಕೆಲವೆಡೆಗಳಲ್ಲಿ ವಿವಿಧ ಮತಧಾರ್ಮಿಕ ಅಂಧಾಚಾರಗಳು ಆ ಈ ಹಳ್ಳಿ–ಪಟ್ಟಣಗಳಿಂದ ಕ್ರಮೇಣ ದೂರವಾಗುತ್ತ ಹೋಗಲಾರಂಭಿಸಿದ್ದನ್ನೂ ಕಾಣಬಹುದಾಗಿದೆ. ಆದರೆ ಈ ದಿಶೆಯ ಪ್ರಗತಿ ಇನ್ನೂ ವೇಗವಾಗಿಯೂ ವ್ಯಾಪಕವಾಗಿಯೂ ಸಾಗಬೇಕಾಗಿದೆ ಎಂಬುದಕ್ಕೆ ದೇಶದ ಎಷ್ಟೋ ವರದಕ್ಷಿಣಾತ್ರಸ್ತ ನಗರ–ಪಟ್ಟಣಗಳು ಈಗಲೂ ಸಾಕ್ಷಿಗಳಾಗಿ ನಿಂತಿವೆ.

## ಗವರ್ನರ್ ಜನರಲ್ಲರ ಕಾಲ

ಕ್ರಿ.ಶ.೧೮೩೩ರಲ್ಲಿ 'ಚಾರ್ಟರ್' ಕಾಯಿದೆ ಪಾಸಾಯಿತು. ಅದರಿಂದ ಲಾರ್ಡ್‌ವಿಲಿಯಂ ಬೆಂಟಿಂಕ್ ಭಾರತದ ಮೊದಲನೆಯ ಗವರ್ನರ್ ಜನರಲ್ಲನಾದನು. ಆತನ ಕೌನ್ಸಿಲ್ಲಿನ ಕಾಯದೆ ಮಂತ್ರಿಯಾಗಿ ಲಾರ್ಡ್‌ಮೆಕಾಲೆ ಸೇರಿದನು. ಅವನೇ 'ಇಂಡಿಯನ್ ಪೀನಲ್‌ಕೋಡ್' ಮತ್ತು 'ಕ್ರಿಮಿನಲ್ ಪ್ರೊಸೀಜರ್ ಕೋಡ್' ಎಂಬ ಕಾಯಿದೆಗಳ ಸೃಷ್ಟಿಕರ್ತ. ಕಂಪನಿ ಸರಕಾರದ ಪರಂಪರಾಗತವಾದ ಭ್ರಷ್ಟಾಚಾರವನ್ನೂ ಸವರ್ಣ–ವಿವರ್ಣ ಪಂಕ್ತಿಭೇದದಿಂದ 'ಕ್ರಿಮಿನಲ್' ಪ್ರಕರಣಗಳಲ್ಲಿ ಯೂರೋಪಿಯನ್ನರಿಗೆ ವಿಶೇಷ ಅನುಕೂಲವನ್ನು ಇಟ್ಟದ್ದನ್ನೂ ಆತನು ಬಲವಾಗಿ ವಿರೋಧಿಸಿದನು. ೧೮೩೬ರ 'ಕಪ್ಪು ಕಾಯಿದೆಯು' ಸುಪ್ರೀಂ ಕೋರ್ಟಿಗೆ 'ಸಿವಿಲ್' ಪ್ರಕರಣವನ್ನು ಒಯ್ಯುವ ವಿಶೇಷ ಹಕ್ಕು ಭಾರತದ ಬ್ರಿಟಿಷ್ ಪ್ರಜೆಗಿಟ್ಟಿರುವುದನ್ನು ತೆಗೆದುಹಾಕಿ, ಎಲ್ಲರೂ ಕಂಪನಿಯ 'ಸದರ್ ದಿವಾನಿ ಅದಾಲತ್' ಕೋರ್ಟಿಗೇ ತಮ್ಮ ಎಲ್ಲ 'ಸಿವಿಲ್' ಪ್ರಕರಣಗಳನ್ನೂ ಒಯ್ಯುವಂತೆ ಮಾಡಿತು. ಸಹಗಮನ ನಿರೋಧ, ಶಿಶುಹತ್ಯಾಪ್ರತಿಬಂಧ ಮುಂತಾದ ಸುಧಾರಣೆಗಳು ಬೆಂಟಿಂಕನ ಕಾಲದಲ್ಲೇ ಆದವು. ಆಮೇಲೆ ಕ್ರಿ.ಶ.೧೮೩೫ರಿಂದ ೧೮೩೬ರವರೆಗೆಚಾರ್ಲ್ಸ್ ಥಿಯೋಫಿಲಸ್‌ಮೆಟ್‌ಕಾಫನ ಆಳಿಕೆ. ಅನಂತರ ೧೮೪೨ರ ತನಕ ಲಾರ್ಡ್ ಆಕ್ಲೆಂಡ್‌ನ ದೊರೆತನ. ಆತನ ಕಾಲದಲ್ಲಿ ಯಾತ್ರಿಕರ ಮೇಲಿನ ತೆರಿಗೆ ವಜಾ ಆಯಿತು. ದೇವಾಲಯಗಳ ಮೇಲಿನ ಸರಕಾರಿ ನಿಯಂತ್ರಣ ಹೋಯಿತು. ಈಗ ನಿಯಂತ್ರಣ ವ್ಯಾಪಿಸಲಾರಂಭಿಸಿದೆ.

ಅನಂತರ ಲಾರ್ಡ್ ಎಲೆನ್‌ಬರೋ, ಲಾರ್ಡ್ ಹಾರ್ಡಿಂಜ್ ಮತ್ತು ಲಾರ್ಡ್ ಡಾಲ್‌ಹೌಸಿಗಳೂ ಗವರ್ನರ್ ಜನರಲ್ಲರಾಗಿ ಭಾರತವನ್ನು ಆಳಿದರು. ಡಾಲ್‌ಹೌಸಿಯು ಭಾರತದಲ್ಲಿ ಆಗ ಇದ್ದ ಅನೇಕ ಚಿಕ್ಕಪುಟ್ಟ ಸಂಸ್ಥಾನಗಳನ್ನು ಬ್ರಿಟಿಷರ ಆಳಿಕೆಗೆ ಒಳಪಡಿಸಿದನು. ಅವನ ಕಾಲದಲ್ಲಿ ರೈಲು, ತಂತಿ, ಟಪ್ಪಾಲು ಸರ್ವೀಸುಗಳನ್ನು ಅನೇಕ

ಕಡೆಗಳಲ್ಲಿ ಸ್ಥಾಪಿಸಲಾಯಿತು. ಅಂದಿನಿಂದ (೧೮೫೩) ಇಂದಿನವರೆಗೂ ಶಿರಿಸೆ ಮಾತ್ರ ರೈಲು ಕಾಣದೆ ಉಳಿದಿದೆ. ನೂರು ವರುಷಗಳು ಕಳೆದುಹೋದವು–ಮೇಲೆ ಮತ್ತೆ ಮೂರು! ರಸ್ತೆ ಮತ್ತು ಕಾಲುವೆಗಳ ನಿರ್ಮಾಣವೂ ಡಾಲ್‌ಹೌಸಿಯ ಕಾಲದಲ್ಲಿ ನಡೆಯಿತು. ಭಾರತ ಸ್ವತಂತ್ರವಾಗಿ ೨೦ವರ್ಷಗಳಾದರೂ ಶಿರಿಸೆಯಿರುವ ಈ ಉ.ಕ.ಜಿಲ್ಲೆಯ ನೀರಾವರಿ ಕೆರೆಗಳ ಕಾಯಕಲ್ಪವನ್ನು ಇನ್ನೂ ಮಾಡಿ ಮುಗಿಸಲಿಲ್ಲ. ಆಮೇಲೆ ಕ್ರಿ.ಶ.೧೮೫೬ರಲ್ಲಿ ಕ್ಯಾನಿಂಗ್ ದೊರೆ ದಿಲ್ಲಿಯಲ್ಲಿ ಬಂದಿಳಿದ. ಈತನ ಕಾಲದಲ್ಲಿ ಶಿಪಾಯಿಯಾಗಲು ಕಡಲನ್ನು ದಾಟಿ ವಿದೇಶಗಳಲ್ಲಿ ಕೂಡ ಹೋಗಿ ದುಡಿಯುತ್ತೇನೆ ಎಂದು ಬರೆದುಕೊಡಬೇಕಾಗಿದ್ದ ಕರಾರು ಹೋಯಿತು; ಮತ್ತು ವಿಧವೆಯ ಪುನರ್ವಿವಾಹವನ್ನು ಕಾಯಿದೆಯಂತೆ ಮನ್ನಿಸುವ ಸುಧಾರಣೆ ಅಮಲಿನಲ್ಲಿ ಬಂತು.

ಅದೇ ಮರುವರುಷ ದೇಶದಾದ್ಯಂತ ಶಿಪಾಯಿ ದಂಗೆ ಶುರುವಾಯಿತು. ಶಿರಿಸೆಗೆ ಅದರ ಝಳ ಅಷ್ಟಾಗಿ ತಾಗಿದಂತೆ ತೋರುವುದಿಲ್ಲ. ೧೮೫೮ರಲ್ಲಿ 'ಗವರ್ನ್‌ಮೆಂಟ್ ಆಫ್ ಇಂಡಿಯಾ' ಕಾಯಿದೆ ಪಾಸಾಯಿತು. ಕಂಪನಿ ಸರಕಾರದ ಆಡಳಿತ ಮುಗಿಯಿತು. ವಿಕ್ಟೋರಿಯಾ ರಾಣಿಯ ಆಳಿಕೆ ಆರಂಭವಾಯಿತು. ಅವಳ ಪ್ರತಿನಿಧಿಯಾಗಿ(Vice-Roy) ಕ್ಯಾನಿಂಗ್ ದೊರೆ ೧೮೬೨ರವರೆಗೆ ರಾಜ್ಯಭಾರ ಮಾಡಿದ. ಲಾರ್ಡ್‌ಲಾರೆನ್ಸ್, ಲಾರ್ಡ್ ನಾರ್ತ್‌ಲ್ಯೂಕ್, ಲಾರ್ಡ್ ಲಿಟ್ಟನ್ ಮತ್ತು ಲಾರ್ಡ್ ರಿಪನ್ ದೊರೆಗಳು ಅನಂತರದ ವೈಸ್‌ರಾಯರು. ರಿಪನ್‌ನ ಆಳಿಕೆ ಕ್ರಿ.ಶ.೧೮೮೦ರಿಂದ ೧೮೮೪ದರವರೆಗೆ. ಈತನು ಸ್ಮರಣೀಯನಾದದ್ದು ಭಾರತದಲ್ಲಿ ಮೊಟ್ಟಮೊದಲು ಸರ್ವತ್ರ Local Self-Government ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳನ್ನು ಸ್ಥಾಪಿಸಿದುದರಿಂದ. ೧೮೫೦ರವರೆಗೆ 'ಪ್ರೆಸಿಡೆನ್ಸಿ ಟೌನು'ಗಳಲ್ಲಿ ಮಾತ್ರ ಅಂಥ ಸಂಸ್ಥೆಗಳು ಇರುತ್ತಿದ್ದವು. 'ಮ್ಯುನಿಸಿಪಾಲಿಟಿ'ಗಳ ಅಧಿಕಾರವನ್ನು ಹೆಚ್ಚಿಸಲಾಯಿತು. ಪ್ರಾಥಮಿಕ ಶಿಕ್ಷಣವನ್ನು ವಿಸ್ತರಿಸಲು 'ಮ್ಯುನಿಸಿಪಾಲಿಟಿ' ಮತ್ತು 'ಲೋಕಲ್ ಬೋರ್ಡು'ಗಳಿಗೆ ಅಧಿಕಾರ ಕೊಡಲಾಯಿತು. 'ಇಲ್‌ಬರ್ಟ್ ಬಿಲ್' ಪಾಸಾಗಿ ಅದರ ಪ್ರಕಾರ ಭಾರತೀಯ ನ್ಯಾಯಾಧಿಕಾರಿಗಳಿಗೆ ಯೂರೋಪಿಯನ್ನರ ಮೇಲಿನ ಪ್ರಕರಣಗಳನ್ನೂ ಪರಾಮರ್ಶಿಸಿ ತೀರ್ಮಾನ ಕೊಡುವ ಅಧಿಕಾರವು ಪ್ರಾಪ್ತವಾಯಿತು. ಅದರಿಂದ ರಿಪನ್ ಜನಪ್ರಿಯನಾದ.

ಆಮೇಲೆ(ಲಾರ್ಡ್ ಡಫರಿನ್, ಲಾರ್ಡ್ ಲ್ಯಾನ್ಸ್‌ಡೌನ್, ಲಾರ್ಡ್ ಎಲ್ಲಿನ್) ಲಾರ್ಡ್ ಕರ್ಜನ್ ದೊರೆ ವೈಸರಾಯತನವನ್ನು ನಡೆಯಿಸಿದ. ಕರ್ಜನ್ನನ ಪ್ರಶಾಸನ ೧೮೯೯ರಿಂದ ೧೯೦೫ರವರೆಗೆ. ೧೯೦೪ರಲ್ಲಿ 'ಕೋ ಆಪರೇಟೀವ್ ಕ್ರೆಡಿಟ್ ಸೊಸೈಟೀಸ್' ಕಾಯದೆಯನ್ನು ಪಾಸು ಮಾಡಿ, ಆತನು ಕೃಷಿಕರ ಕೃತಜ್ಞತೆಗೆ ಪಾತ್ರನಾದನು. ಬಳಿಕ ಲಾರ್ಡ್ ಮಿಂಟೋ ವೈಸ್‌ರಾಯನಾಗಿ ಬಂದು, ೧೯೦೯ರಲ್ಲಿ 'ಮೋರ್ಲಿ ಮಿಂಟೋ' ಎಂಬ ರಾಜಕೀಯ ಸುಧಾರಣೆಯನ್ನು ಸಾರಿ ಜಾರಿಗೆ ತಂದನು.

ಲಾರ್ಡ್ ಹಾರ್ಡಿಂಜ್ ಮತ್ತು ಚೆಲ್ಮ್‌ಸ್‌ಫರ್ಡ್ ದೊರೆಗಳು ಅನಂತರ ಬಂದ ವೈಸ್‌ರಾಯರು (ರಾಜಪ್ರತಿನಿಧಿಗಳು). ಚೆಲ್ಮ್‌ಸ್‌ಫರ್ಡ್‌ನು ಮೊಂಟೆಗುವಿನೊಡನೆ ಕೂಡಿ

೧೯೧೮ರಲ್ಲಿ ಪ್ರಕಟಿಸಿದ ರಾಜಕೀಯ ಸುಧಾರಣೆಯ ವರದಿಯ ಫಲವಾಗಿ ೧೯೧೯ರ 'ಗವರ್ನ್‌ಮೆಂಟ್ ಆಫ್ ಇಂಡಿಯಾ' ಕಾಯದೆ ಪಾಸಾಯಿತು. ಲಾರ್ಡ್ ರೀಡಿಂಗ್ ಮತ್ತು ಲಾರ್ಡ್ ಐರ್ವಿನ್ನನ ಕಾಲದಲ್ಲಿ (೧೯೨೯) ಶಾರದಾ ಕಾಯದೆ ಪಾಸಾಗಿ, ಅದರ ಪ್ರಕಾರ ಹುಡುಗ-ಹುಡುಗಿಯರ ವಿವಾಹದ ವಯಸ್ಸು ೧೮ ಮತ್ತು ೧೪ಕ್ಕಿಂತ ಅನುಕ್ರಮವಾಗಿ ಕಡಿಮೆಯಾಗಿರಬಾರದ್ದು ಎಂಬ ಸುಧಾರಣೆ ಜಾರಿಗೆ ಬಂತು. ಆಮೇಲೆ ಲಾರ್ಡ್‌ವಿಲ್ಲಿಂಗ್‌ಡನ್ ೧೯೩೧ರಲ್ಲಿ ವೈಸ್‌ರಾಯನಾದ. ೧೯೩೫ನೆಯ ಇಸವಿಯ 'ಗವರ್ನ್ಮೆಂಟ್ ಆಫ್‌ಇಂಡಿಯಾ' ಕಾಯದೆ ಅವನ ಕಾಲಕ್ಕೇ ಪಾಸಾಯಿತು. ಅನಂತರ ಲಾರ್ಡ್ ಲಿನ್‌ಲಿತ್ ಗೋ(೧೯೩೬-೪೩), ಲಾರ್ಡ್ ವೇವೆಲ್(೧೯೪೩-೪೭) ಮತ್ತು ಲಾರ್ಡ್ ಲೂಯಿ ಮೌಂಟ್‌ಬ್ಯಾಟನ್(೧೯೪೭-೪೮) ಕೊನೆಯ ವೈಸರಾಯ್ ಮತ್ತು ಗವರ್ನರ್ ಜನರಲ್ಲರು. ಅವರ ಕಾಲಕ್ಕೆ ದೇಶದ ದಾಸ್ಯ ಕೊನೆಗೊಂಡಿತು. ಭಾರತದ ಇತರ ಪ್ರದೇಶಗಳೊಡನೆ ಶಿರಿಸೆ, ಉತ್ತರಕನ್ನಡ, ಕರ್ನಾಟಕಗಳು ಸ್ವತಂತ್ರವಾದವು! ಭಾರತದ ಸ್ವಾತಂತ್ರ ಸಮರದ ಇತಿಹಾಸ ಬಹು ವಿಸ್ತಾರವಾದುದು. ಅದಕ್ಕೆ ಉತ್ತರಕನ್ನಡ ಜಿಲ್ಲೆಯ ಗ್ರಾಮಗಳೂ ಶಿರಿಸೆ, ಸಿದ್ದಾಪುರ, ಅಂಕೋಲೆ, ಹೊನ್ನಾವರ, ಕುಮಟ ಮುಂತಾದ ನಗರಗಳೂ ಅನೇಕ ವಿಧಗಳಿಂದ ತ್ಯಾಗ-ಬಲಿದಾನಗಳ ಸಹಕಾರವನ್ನಿತ್ತವು. ಅದನ್ನು ಇತರ ಪ್ರಕರಣ ಗ್ರಂಥಗಳಿಂದ ನೋಡಿ ತಿಳಿದುಕೊಳ್ಳಬಹುದು.

ಶಿರಿಸೆಯಲ್ಲಿ ದಿವಂಗತ ಅಕ್ಕದಾಸ ಗಣಪತಿಭಟ್ಟರು ಬಾಲವಿಧವಾ ಪುನರ್ವಿವಾಹವನ್ನು ಪ್ರಚುರಪಡಿಸಲು ಜೀವಾವಧಿ ದುಡಿದದ್ದು ಸಂಸ್ಮರಣೀಯ. ಸಮಾಜ ಸುಧಾರಣೆಯ ನೇತೃತ್ವವನ್ನು ವಹಿಸಬಲ್ಲ ಧುರೀಣರನ್ನು ಶಿರಿಸೆ ನೀಡಬಲ್ಲುದು ಎಂಬುದಕ್ಕೆ ಅದೊಂದು ಒಳ್ಳೆಯ ಪ್ರಮಾಣ. ನಗರವಾಸಿಗಳು ಈಗಲೂ ಅಂಥ ಸಮಾಜ ಸುಧಾರಕ ವಿಚಾರಗಳನ್ನು ಎತ್ತಿ ಹಿಡಿಯುವ ಮುಖಂಡತ್ವವನ್ನು ಮನಸ್ಸು ಮಾಡಿದರೆ ಪೋಷಿಸಬಲ್ಲದು. ನಗರ ಜೀವನದ ಸುಧಾರಣೆಗಾಗಿ ಕಾರ್ಯಯೋಜನೆಗಳನ್ನು (ಸಾಮೂಹಿಕ ಹಿತದ ದೃಷ್ಟಿಯಿಂದ, ಬಡವ-ಬಲ್ಲಿದ ಎಂಬ ಭೇದವಿಲ್ಲದೆ) ರೂಪಿಸಿ ಕಾರ್ಯರೂಪಕ್ಕೆ ತರಲು ನಗರಸಭಾ ಸಂಸ್ಥೆಯನ್ನು ಸಚೇತನಗೊಳಿಸಿ ನಿಲ್ಲಿಸಲು ಸಂಕಲ್ಪಿಸಿದ ಪ್ರೌಢರಿಲ್ಲಿ ದೊರಕಲಾರರು.

ಈ ನಡುವೆ, ಮೇಲೆ ಕೊಟ್ಟ ದೇಶಸಾಧಾರಣವಾದ ಇತಿಹಾಸಾಂಶಗಳ ನೆನಪಿನ ಹಿನ್ನಲೆಯಲ್ಲಿ ಉತ್ತರಕನ್ನಡ ಜಿಲ್ಲೆಯು ಬ್ರಿಟಿಷರ ಕೈಗೆ ಬಂದ ಹೊಸದರಲ್ಲಿ ಯಾವ ಪರಿಸ್ಥಿತಿಯಲ್ಲಿತ್ತು-ಎಂಬುದರ ಚಿಕ್ಕ ಅಧಿಕೃತ ವಿವರಣೆಯನ್ನು ಪರಿಶೀಲಿಸಬಹುದು.

೧೯೧೮ರಿಂದ ನಡೆದು ಬಂದ ಕಾಲದ ಉತ್ತರಕನ್ನಡದ ಚಿತ್ರವನ್ನು ಶ್ರೀ ಆರ್.ಡಿ.ಚೋಕ್ಸಿಯವರು ಹೀಗೆ ಕೊಟ್ಟಿದ್ದಾರೆ.

ಉತ್ತರಕನ್ನಡದಲ್ಲಿ ಹಿಂದು ಅರಸರ ಕಾಲದ ರಸ್ತೆಗಳಾಗಲಿ ಕಣಿವೆ ಮಾರ್ಗಗಳಾಗಲಿ ಉಳಿದಿರಲಿಲ್ಲ. ಹೈದರ ದಾರಿಗಳೆಂದು ಕರೆಯಲ್ಪಡುತ್ತಿದ್ದ ಕಾಲುದಾರಿಗಳಷ್ಟೇ ಇದ್ದವು.

ಗುಡ್ಡದ ಹಾದಿಗಳು ದುರ್ಗಮವಾಗಿದ್ದವು. ಬ್ರಿಟಿಷರು ಈ ದಾರಿಗಳನ್ನು ಸುಗಮಗೊಳಿಸಿ ಕರ್ನಾಟಕದ ಇತರ ಪ್ರದೇಶಗಳೊಡನೆ ಜಿಲ್ಲೆಯ ಸಂಪರ್ಕವನ್ನು ಬೆಳೆಸಿಕೊಳ್ಳಲು ಅನುಕೂಲ ಮಾಡಿಕೊಟ್ಟರು. ನದೀ ಪ್ರಯಾಣ ಅಂದು ಮುಖ್ಯವಾಗಿತ್ತು. ಹಾಯ್ಗಡುಗಳು ಅಂದಿನಿಂದ ಇಂದಿನವರೆಗೂ ಉಳಿದುಕೊಂಡು ಬಂದಿವೆ. ೧೮೬೦ರವರೆಗೆ ಸೈನಿಕ ಮಾರ್ಗಗಳ ದುರಸ್ತಷ್ಟನ್ನು ಮಾಡಿಸಲಾಗುತ್ತಿತ್ತು. ೧೮೬೩ರಲ್ಲಿ 'ಲೋಕಲ್ ಫಂಡ್'ನ್ನು ಪ್ರಾರಂಭಿಸಲಾಯಿತು. ೧೮೮೦ರಲ್ಲಿ ೨೭೭ ಮೈಲುಗಳ ಅಳತೆಯಲ್ಲಿ ೪ ಮುಖ್ಯ ಹೆದ್ದಾರಿಗಳಾದವು. ಧಾರವಾಡ, ಕುಮಟ, ಕಾರವಾರಗಳು ಆಗ ಸಂಬದ್ಧವಾದವು. ಮತ್ತೊಂದು ರಸ್ತೆ ಬೆಳಗಾಮಿಯ ಸಂಪರ್ಕಕ್ಕೆ ಕದ್ರೆಯ ಮೂಲಕ ಅವಕಾಶ ಮಾಡಿಕೊಟ್ಟಿತು. ಅಂಕೋಲೆ–ಬೇಲ್ಕಿ ರಸ್ತೆ ೭೩ ಮೈಲುದ್ದವಾಯಿತು. ಶಾಖಾಮಾರ್ಗಗಳಲ್ಲದೆ ಹೆದ್ದಾರಿಗಳಿಗೆ ಸಂಬಂಧಿಸಿದ ಐದು ಹೊಸ ಮಾರ್ಗಗಳು ರಚಿತವಾದವು.೧೮೫೦ರ ಬಳಿಕ ತಾಲೂಕುಗಳನ್ನು ಸಂಬಂಧಿಸುವ ಮಾರ್ಗಗಳನ್ನು ರಚಿಸಬೇಕೆಂದು ನಿರ್ಧರಿಸಲಾಯಿತು. ೧೮೬೩ರಲ್ಲಿ ಕಾರವಾರದಿಂದ ಮುಂಬಯಿ ಕರ್ನಾಟಕಕ್ಕೆ ರೈಲುರಸ್ತೆ ಮಾಡಿಸಲು 'ಸರ್ವೆ' ನಡೆಸಿ ೧೮೭೯ರಲ್ಲಿ ಆ ಆಲೋಚನೆಯನ್ನು ಬ್ರಿಟಿಷ್ ಸರಕಾರವು ಬಿಟ್ಟುಕೊಟ್ಟಿತು. 'ಬಾಂಬೆ ಸ್ಟೀಂ ನ್ಯಾವಿಗೇಶನ್ನಿ'ನ ಹಡಗುಗಳು(ಬೋಟ್‌ಗಳು) ಸೆಪ್ಟಂಬರ್–ಮೇಗಳ ನಡುವೆ ವಾರಕ್ಕೆರಡು ಸಲ ಕುಮಟ–ಕಾರವರ–ತದಡಿಗಳನ್ನು ಸಂಧಿಸಿ ಹೋಗುತ್ತಿದ್ದವು. ಅವುಗಳ ಮೂಲಕ ಅಕ್ಕಿ ಇಲ್ಲಿಗೆ ಬರುತ್ತಿತ್ತು. ೧೮೮೭ರಲ್ಲಿ 'ಸ್ಟೀಮರ್ ಸರ್ವೀಸ್' ಶುರುವಾಯಿತು. ಮಂಕಿಯಲ್ಲಿ ಹಡಗುಗಳಿಂದ ಸಾಮಾನುಗಳನ್ನು ತುಂಬಿಸುವ ಮತ್ತು ಅವುಗಳಿಂದ ಇಳಿಸಿಕೊಳ್ಳುವ ವ್ಯವಸ್ಥೆಯಾಯಿತು. ಇತರ ಬಂದರುಗಳಿಂದ ಬಹುದೂರ ಸಮುದ್ರದಲ್ಲೇ ನಿಂತ ಹಡಗುಗಳೊಡನೆ ದೋಣಿಗಳ ಮೂಲಕ ಸಂಪರ್ಕವನ್ನು ಇಟ್ಟುಕೊಳ್ಳಲಾಯಿತು. ತಾಲೂಕುಗಳಲ್ಲೆಲ್ಲಾ ಕುಮಟೆಯು ಗಾಡಿರಸ್ತೆಗಳನ್ನು ಪಡೆಯುವುದರಲ್ಲಿ ಅಗ್ರಗಣ್ಯವಾಯಿತು. ೧೮೮೫ರಲ್ಲಿ ಕುಮಟ–ಶಿರಿಸೆ ರಾಜಮಾರ್ಗ ನಿರ್ಮಿತವಾಯಿತು. ಆಮೇಲೆ 'ಲೋಕಲ್ ಬೋರ್ಡಿ'ನ ರಸ್ತೆಗಳು ಯಥೇಷ್ಟ ಸಿದ್ಧವಾದವು. ಶಿರಿಸೆ–ಸಿದ್ದಾಪುರ–ಎಲ್ಲಾಪುರ ತಾಲೂಕುಗಳಲ್ಲೂ ಗಾಡಿದಾರಿಗಳು ರಚಿತವಾದವು. ಅಲ್ಲಿ ತಯಾರಾದ ಅತಿ ಮುಖ್ಯವಾದ ದೊರೆದಾರಿಯೆಂದರೆ ಹುಬ್ಬಳ್ಳಿ–ಕುಮಟ ರಸ್ತೆ.

ಅಂದು ಘಟ್ಟದ ಮೇಲಿನ ಅಡಿಕೆ ವ್ಯಾಪಾರದಲ್ಲಿ ನಾಲ್ಕನೆಯ ಮೂರರಷ್ಟು ಕುಮಟದೊಡನೆಯೂ ನಾಲ್ಕನೆಯ ಒಂದರಷ್ಟು ಹುಬ್ಬಳ್ಳಿಯೊಡನೆಯೂ ನಡೆಯುತ್ತಿತ್ತು. ಹುಬ್ಬಳ್ಳಿಯಿಂದ ಅಡಿಕೆ–ಮೆಣಸಿನಕಾಳು, ಏಲಕ್ಕಿಗಳು ಸೋಲಾಪುರ–ಬಾರ್ಸಿಗಳತ್ತ ಸಾಗುತ್ತಿದ್ದವು. ೧೯೦೨ರಲ್ಲಿ ಹದಿನಾರನೆಯ ಏಳರಷ್ಟು ಮಾತ್ರ ಕುಮಟಕ್ಕೆ ಸಾಗುವಂತಾಯಿತು; ಅರ್ಧದಷ್ಟು ಹುಬ್ಬಳ್ಳಿ ರೈಲುನಿಲ್ದಾಣಕ್ಕೂ ಹದಿನಾರನೆಯ ಒಂದರಷ್ಟು ಹಾವೇರಿ ನಿಲ್ದಾಣಕ್ಕೂ ನಡೆಯಿತು. ಏಲಕ್ಕಿಯಷ್ಟೂ ಮೊದಲು ಕುಮಟಕ್ಕೇ ಹೋಗುತ್ತಿತ್ತು; ಆದರೆ ರೈಲು ಬಂದಮೇಲೆ ಕುಮಟಕ್ಕೆ ಕೇವಲ ನಾಲ್ಕನೆಯ ಒಂದರಷ್ಟು ಮತ್ತು ಹಾವೇರಿಗೆ ನಾಲ್ಕನೆಯ ಮೂರರಷ್ಟು ಏಲಕ್ಕಿ ಹೋಗಲಾರಂಭಿಸಿತು.

೧೯೩೯–೪೦ರ ಹೊತ್ತಿಗೆ ಉತ್ತರಕನ್ನಡದಲ್ಲಿ ೫೫೩ ಮೈಲುಗಳ ಖಡಿರಸ್ತೆ ಮತ್ತು ೬೬೦ ಮೈಲುಗಳ ಖಡಿಯಿಲ್ಲದ ರಸ್ತೆ ತಯಾರಾದವು. ಆದರೆ ಅವೆಲ್ಲವೂ ಮಳೆಗಾಲದಲ್ಲಿ ಚೆನ್ನಾಗಿರುತ್ತಿದ್ದಿಲ್ಲ.

## ಟಿಪ್ಪಣಿಗಳು

೧. ದಿವಂಗತ ಸಿಲ್ವಾಮಹಾಶಯರು ಕ್ರಿ.ಶ.೨ನೆಯ ಶತಮಾನದ್ದೆಂದು ನಂಬಲಾದ ಒಂದು ಕೊಂಕಣಿ ಶಾಸನವು ಗೋವೆಯಲ್ಲಿ ದೊರಕಿದೆಯೆಂದೂ, ಅದರಲ್ಲಿ 'ಸ(ಸಾ) ಚಿ–ಪುರ(ರಾ) ಚ(ಚಾ) ಸಿ(ಶಿ)ರಸ್ಸಿ' ಎಂಬ ಉಲ್ಲೇಖವಿದೆಯೆಂದೂ ಅದರ ಪ್ರಕಾರ 'ಸಿರಸ್ಸಿ' ಅಥವಾ 'ಶಿರಸ್ಸಿ' ಎಂದು ಅಂದೇ ಈ ಊರಿಗೆ ಹೆಸರಿತ್ತೆಂದೂ ಬರೆದಿದ್ದಾರೆ. ಈ ಮಾತಿನಿಂದ ಬಲವಾದ ೧೧ ಸಂಶಯಗಳು ಹೊರಡುತ್ತವೆ: ೧) ಆ ಇಡಿ ಶಾಸನದ ಅರ್ಥಸಂದರ್ಭ ಯಾವುದು? ೨) ಗೋವೆಯಲ್ಲಿರುವ ಸಚಿ(ಶಚೀ)ಪುರ ಯಾವುದು? ೩) ಅದಕ್ಕೆ ಶಿರಃಪ್ರಾಯವಾದ ಎಂಬ ರೂಪಕೋಕ್ತಿಯಿಂದ ಒಂದು ಊರನ್ನು ಉಲ್ಲೇಖಿಸಿದ ಪದಸಂಹತಿಯು ಆ ಊರ ಅಂಕಿತನಾಮ ಹೇಗಾದೀತು? ೪) ಅದೊಮ್ಮೆ ಅಂಕಿತನಾಮವೇ ಆದರೂ ಅದು ಗೋವೆಯೊಳಗಿನದಾಗಿರಬಹುದಲ್ಲದೆ ಗೋವೆಗಿಂತ ಇಷ್ಟು ದೂರ ಇರುವ ಈ ಊರನ್ನೇ ಕುರಿತದ್ದು ಎಂದು ಹೇಳಲು ಹೇಗೆ ಸಾಧ್ಯ? ೫) ಕ್ರಿ.ಶ.೨ನೆಯ ಶತಮಾನದಲ್ಲಿ ಗೋವೆಯನ್ನು ಯಾರು ಆಳುತ್ತಿದ್ದರು? ೬) ಅದು ಯಾರು ಬರೆಸಿದ ಶಾಸನ? ೭) ಅಂದು ಯಾವ ರಾಜನು ಈ ಶಿರಿಸೆಯಿಂದ ಗೋವೆಯನ್ನಾಳುತ್ತಿದ್ದ? ೮) 'ಶಿರಸ್' ಎಂಬ ಪದದ ತದ್ಭವವು 'ಶಿರ' ಅಥವಾ 'ಶಿರಸ್ಸು' ಎಂದಲ್ಲದೆ 'ಶಿರಸ್ಸಿ' ಅಥವಾ 'ಶಿರಸಿ' ಎಂದಾದುದಕ್ಕೆ ಮತ್ತು ಹಾಗಾಗಿ ಅದು ಪ್ರಥಮಾ ವಿಭಕ್ತಿಯ ಅರ್ಥವನ್ನು ಕೊಟ್ಟದ್ದಕ್ಕೆ ನಮ್ಮ ದೇಶದಲ್ಲಿ ಎಲ್ಲಾದರೂ ಉದಾಹರಣೆ ಇದೆಯೆ? ೯) ಒಮ್ಮೆ 'ಶೀರ್ಷ'ವು ಮೂಲವೆಂದು ಕೊಂಡರೂ ಅದು ಅವಿದ್ವಜ್ಜನರ ಬಾಯಲ್ಲಿ 'ಶಿರ್ಸ' ಅಥವಾ 'ಶಿರ್ಸೆ' ಯಾದೀತಲ್ಲದೆ 'ಶಿರಸ್ಸಿ' ಅಥವಾ 'ಶಿರಸಿ'ಯಾದುದ್ದಕ್ಕೆ ಪ್ರಾಚೀನ ಶಾಸನಗಳಲ್ಲಾಗಲಿ, ಕಾವ್ಯ–ಶಾಸ್ತ್ರಗಳ ಗ್ರಂಥಗಳಲ್ಲಾಗಲಿ ಉದಾಹರಣೆ ಸಿಕ್ಕುತ್ತದೆಯೇ? ೧೦) ಅವರ್ಸೆ, ಬನವಸೆ ಮುಂತಾದ ಉದಾಹರಣೆಗಳು 'ಶಿರ್ಸೆ'ಗೆ ಅಥವಾ 'ಶಿರಿಸೆ'ಗೆ ಪೋಷಕವಾಗಿವೆಯಲ್ಲದೆ, 'ಶಿರಸಿ' ಎಂಬ ರೂಪಕ್ಕೆ ಹೇಗೆ ಪೋಷಕ ನಿದರ್ಶನಗಳಾಗುತ್ತವೆ? ೧೧) ೧೨–೧೩ನೆಯ ಶತಮಾನಗಳ ಶಾಸನ ಪ್ರಪಂಚದಲ್ಲಿ 'ಶಿರಿಸೆ'(E.C; VIII, Sb, 45) ದೊರಕುವಾಗ ಅದು ಉತ್ತರಕಾಲದ ಯಾವ ಶಾಸನದಲ್ಲಾಗಲಿ, ಅಭಿಲೇಖದಲ್ಲಾಗಲಿ, 'ಶಿರಸ್ಸಿ' ಅಥವಾ 'ಶಿರಸೀ' ಎಂಬ ರೂಪ ದೊರೆತರೂ ಅದು ಸಾಧುವೆಂದು ಗ್ರಹಿಸುವುದು ಹೇಗೆ? ಕನ್ನಡನಾಡಿನ ಜನರ ಉಚ್ಚಾರ ಪ್ರವೃತ್ತಿ ಮತ್ತು ತದ್ಭವ ಮಾರ್ಗಗಳ ಪ್ರಾಚೀನ ರೂಪಗಳಲ್ಲದೆ, ಅರ್ವಾಚೀನ ರೂಪಗಳು ಪ್ರಾಚೀನ ಕಾಲದಿಂದ ಇದ್ದ ಒಂದು ಊರಿನ ಹೆಸರಿನ ನಿರ್ಣಯಕ್ಕೆ ಹೇಗೆ ಸಹಾಯಕವಾದಾವು?

ಉತ್ತರಕನ್ನಡ ಜಿಲ್ಲೆಯ ಈಗಿನ ಗಡಿಗೂ ಆಗಿನ ಗಡಿಗೂ ಅಜಗಜಾಂತರವಿರುವಾಗ, 'ಜಿಲ್ಲೆಯಲ್ಲೇ ಈ ಊರು ಎತ್ತರದ ಸ್ಥಳವಾದ್ದರಿಂದ' ಎಂಬ ವಾದವೂ ಹುರುಳಿಲ್ಲದ್ದು. ಜೊತೆಗೆ, ಇಂದಿನ ಉತ್ತರಕನ್ನಡದಲ್ಲಾಗಲಿ, ಹಿಂದಿನ ಬನವಾಸಿ ಮಂಡಲದಲ್ಲಾಗಲಿ, ಕುಂತಳ ರಾಜ್ಯದಲ್ಲಾಗಲಿ ಸಿಮ್ಲ, ಮಹಾಬಲೇಶ್ವರಗಳಂತೆ ಇದೇನಾದರೂ ಎತ್ತರದ ಸ್ಥಳವೆಂದು ಯಾವುದಾದರೂ ಕಾರಣಕ್ಕಾಗಿ ಪ್ರಸಿದ್ಧವಾಗಿತ್ತೇ? ಸಿದ್ದಾಪುರ–ಶಿರಸಿಗಳ ಎತ್ತರಗಳ ಅಂತರ ಅತ್ಯಲ್ಪ; ಅಲ್ಲದೆ, ಜಿಲ್ಲೆಯ ಉತ್ತರಭಾಗದಲ್ಲಿರುವ 'ದರ್ಶನ ಗುಡ್ಡೆ' ಸಮುದ್ರದ ಮಟ್ಟದಿಂದ ೩೦೦೦ ಅಡಿಗಳಷ್ಟು ಎತ್ತರದ ಶಿಖರವನ್ನು ಉಳ್ಳದ್ದಾಗಿದೆ; ಎಂದಮೇಲೆ ಈ ಶಿರಸಿಯು ಶಿರಃಸ್ಥಾನೀಯತೆ ಭೌಗೋಲಿಕವಾಗಿ ಅಸಮರ್ಥನೀಯವಾಗುವುದಿಲ್ಲವೆ? ಮಾರಿಗುಡಿ ದಾಖಲೆ ಮತ್ತು ಹುಲೇಕಲ್ ಶಾಸನದ ದಾಖಲೆ 'ಶಿರಸಿ' ಎನ್ನುವಷ್ಟರಲ್ಲೇ ಅದರ ಮೂಲದ ಜ್ಞಾನ ಮರೆತುಹೋಗಿರಬೇಕು. ಪರಸ್ಥಳದಿಂದ ಬಂದ ಲಿಪಿಕಾರರು ತಮ್ಮ ಗ್ರಾಮ್ಯೋಚ್ಚಾರವನ್ನುಸ್ಥಳಿಯವೆಂದು ಗ್ರಹಿಸಿ, ಶಿರೋಮೂಲವನ್ನು ಹಿಡಿದಿರುವುದು ಅತ್ಯಂತ ಸಂಭವವಾಗಿದೆ. ಏಕೆಂದರೆ, ಯೂರೋಪಿಯನ್ನರೂ ಹಾಗೇ ಮಾಡಿದರು; ಅವು ಇದನ್ನು ಸೆರ್ಸಿ(SERSI), ಸಿರ್ಸಿ(SIRCY), ಸಿರಸಿ(SIRASI) ಮತ್ತು ಸಿರ್ಸಿ(SIRSI) ಎಂದು ನಾನಾ ರೂಪದ ಹೆಸರುಗಳನ್ನಿಟ್ಟು ಕರೆದರು. ಇಂದಿಗೂ ಕನ್ನಡ ಮಾತೃಭಾಷೆಯ ಹಳ್ಳಿಗರು 'ಸಿರ್ಸೆ' ಅಥವಾ 'ಶಿರ್ಸೆ' ಎಂದೇ ಉಚ್ಚರಿಸುತ್ತಿರುವುದು ಅದರ 'ಶಿರೀಷ' ಮೂಲವನ್ನೇ ಸಮರ್ಥಿಸುತ್ತದೆ. ಶಿರೋಮೂಲದ ಭ್ರಮೆ ಸ್ಥಿರಪಟ್ಟಾಗ 'ಪಂಡಿತ' ಬುದ್ಧಿಯ ಒಬ್ಬಿಬ್ಬರು ಶಿರದ ಪರ್ಯಾಯವಾದ ಮೂರ್ಧವನ್ನು ಶಿರದ ಜಾಗದಲ್ಲಿಟ್ಟು 'ಮೂರ್ಧಪುರ' 'ಮುರ್ದಾಪುರ' ಎಂದು ಮುಂತಾಗಿ ಕರೆದಿದ್ದರೆ ಏನೂ ಅಚ್ಚರಿಯಲ್ಲ. ಶಿರದ ಸಮರ್ಥನೆ ಆದಮೇಲೆ ಮೂರ್ಧದ ಸಮರ್ಥನೆಯಾದೀತು; ಮೂರ್ಧಪದದಿಂದ ಶಿರೋಮೂಲತೆಯು ಸಮರ್ಥನೆ ಪಡೆಯಲಾರದು.

ಆದಿಯಲ್ಲಿ ಶಿರಿಸೆ ಪ್ರದೇಶಕ್ಕೆ ಬನವಾಸಿಯು ಶಿರಃಪ್ರಾಯವಾಗಿತ್ತು. ಆಮೇಲೆ ಸೋದೆಯು ಶಿರಃಸ್ಥಾನೀಯವಾಗಿತ್ತು; ಇದಕ್ಕೆ ಸ್ವತಂತ್ರ ಪ್ರತಿಷ್ಠೆ ಬಂದದ್ದು ಇತ್ತೀಚೆಗೆ, ಇದು ತಾಲೂಕಿನ ಮುಖ್ಯ ಸ್ಥಳವಾದ ಮೇಲೆ. ಇದರ ಜನಸಂಖ್ಯೆ ಕೂಡ ಕ್ರಿ.ಶ.೨೦೦ ರಿಂದ ೧೮೦೦ರವರೆಗೆ ಅತ್ಯಲ್ಪವಾಗಿತ್ತು; ಎಂದ ಮೇಲೆ ಅನಾದಿಕಾಲದಿಂದ ಇದು ಸ್ವಂತದ ಸ್ವತಂತ್ರ ಪ್ರತಿಷ್ಠೆಯ ಫಲವಾಗಿ ಶಿರಸ್ಸೆಂಬ ಅನ್ವರ್ಥನಾಮವನ್ನು ಹೊಂದಿತ್ತೆಂಬುದು ನಂಬಲರ್ಹವಾದೀತೆ? ಇಲ್ಲಿ ಯಾವ ಪ್ರಾಚೀನ ಶಿಲಾಶಾಸನವಾದರೂ ಇದೆಯೇ ಅಂಥ ಪ್ರತಿಷ್ಠೆಗೆ ಆಧಾರವಾಗಿ? ಆದುದರಿಂದ ಶಿರಸೆಯು ಬನವಾಸಿಯ ಮೂಲಕ ಮತ್ತು ಸೋದೆಯ ಮೂಲಕ ಪ್ರತಿಷ್ಠಾಭಾಗಿಯಾಗಿ, ಇತ್ತೀಚೆಗೆ ಸ್ವತಂತ್ರವೂ ಪ್ರತ್ಯೇಕವೂ ಆದ ಗಣ್ಯತೆಯನ್ನು ಪಡೆಯುವುದರಲ್ಲಿ ಕ್ರಮೇಣ ಯಶಸ್ವಿಯಾಗುತ್ತ ಸಾಗಿದೆ ಎಂಬುದು ವಿವಾದಾತೀತವಾಗಿದೆ.

೨. ನಗರಸಭೆಯ ಅಧಿಕಾರಕ್ಕೊಳಪಟ್ಟ ಶಿರಿಸೆ ಪಟ್ಟಣದ ಕೋಟೆಯ ಅವಶೇಷಗಳ ಬಗ್ಗೆ ಶಿಲ್ಪಶಾಸನ ದೊರಕಿಲ್ಲ. ಸೋದೆಯ ರಾಮಚಂದ್ರ ನಾಯಕನು ಕದಂಬರ ಕಾಲದಲ್ಲಿದ್ದ ಕೋಟೆಗಳನ್ನು ಪುನರಾಚಿಸಿರಬಹುದು ಅಥವಾ ಅವುಗಳನ್ನು ಕೆಡಹಿ ಹೊಸ ಕೋಟೆಗಳನ್ನು ಕಟ್ಟಿಸಿರಲೂಬಹುದು. ಆದರೆ ಇಲ್ಲಿ ಕೋಟೆ ಇದ್ದದ್ದು ಖಂಡಿತ. ಶಿರಿಸೆಯು ಬನವಾಸಿ ಕೇಂದ್ರದ ಚಕ್ರವರ್ತಿ ಕದಂಬರ, ಹಾನುಗಲ್ಲು ಕೇಂದ್ರದ ಬನವಾಸಿ ಕದಂಬ ಮಹಾಮಂಡಲೇಶ್ವರರ ಮತ್ತು ಸೋದೆಯ ನಾಯಕರ ಆಳಿಕೆಯ ಅವಧಿಗಳಲ್ಲಿ ಮುಖ್ಯ ರಾಜಧಾನಿಯಾಗಿದ್ದಿಲ್ಲ ಮತ್ತು ಆ ಆಧಿಪತ್ಯಗಳ ಹೊರಗೆ ಪ್ರತ್ಯೇಕ ಸ್ವತಂತ್ರ ಪ್ರದೇಶವಾಗಿಯೂ ಉಳಿದಿರಲಿಲ್ಲ. ಇಂದಿನ ತಾಲೂಕು ಮುಖ್ಯ ಕೇಂದ್ರವೆನ್ನಿಸುವವರೆಗೆ ಶಿರಿಸೆಯು ಸೋದಾಂತರ್ಗತ ಪ್ರಖ್ಯಾತಿಯನ್ನು ಉಳ್ಳದ್ದಾಗಿತ್ತು; ಅಲ್ಲಿಯವರೆಗೂ ಇದು ಸುಧಾಪುರ ಉಪ ರಾಜಧಾನಿಯ ಅವಿಭಾಜ್ಯ ಅಂಗವಾಗಿತ್ತು. ಈಗಲೂ ಜಿಲ್ಲೆಯ ರಾಜ್ಯಾಧಿಕಾರ ಕೇಂದ್ರ ಕಾರವಾರ; ಇದು ಉಪಾಧಿಕಾರ ಕೇಂದ್ರ.

ಸುಮಾರು ಕ್ರಿ.ಶ.೬೧೦ರ ಬಳಿಕ ಶಿರಿಸೆಗೆ ಶಿರಸ್ಸಾಗಿದ್ದ ಸೋದೆಯೊಂದು ಉಪರಾಜಧಾನಿ ಅಥವಾ ಮರಿರಾಜರ ಠಾಣ್ಯವಾಗಿ ರೂಪಗೊಂಡದ್ದು ಖಚಿತ. ಆಮೇಲೆ ೧೫೫೫ರಲ್ಲಿ ವಾಸ್ತವಿಕ ಸ್ವತಂತ್ರ ಪ್ರಭುತ್ವದ ಮುಖ್ಯ ರಾಜಧಾನಿ ಅದಾಯಿತು. ಈ ನಾಯಕ ಪ್ರಭುತ್ವ ಮುಗಿಯುವ(೧೭೬೩)ವರೆಗೂ ಶಿರಿಸೆಯು ಸುಧಾಪುರದ ಅಂಗ ಭಾಗ, ಹೊರವಲಯ ಎನ್ನಿಸಿಯೇ ಇತ್ತು. ಆಗ ಇದರ ವಿಸ್ತಾರ ಜನಸಂಖ್ಯೆಗಳು ಅಲ್ಪ; Floating Population ಸೈನಿಕ, ವಾಣಿಜ್ಯಕ ಮತ್ತು ಕೂಲಿಕಾರರ ಬಗೆಯವರು ಬಂದು ಉಳಿದು ಹೋಗುತ್ತಿದ್ದ ಜನವಸತಿ ಇದಾಗಿತ್ತು. ಅದರಿಂದಲೇ ಇದಕ್ಕೆ ಪ್ರತ್ಯೇಕವೂ ಸ್ವತಂತ್ರವೂ ಆದ ಶಾಸನಾದಿ ಆಧಾರಸಂಪನ್ನ ಪ್ರಾಚೀನ ಇತಿಹಾಸ ಸಾಮಗ್ರಿ ಇಲ್ಲ.

ಈ ಊರ ತಾಂತ್ರಿಕ ಪ್ರಾಮುಖ್ಯವು ಇದರ ಭೌಗೋಲಿಕ ಆಯಕಟ್ಟನ್ನು ಆಧರಿಸಿದೆ. ಹಿಂದೆ ವ್ಯಾಪಾರ ಮಾರ್ಗಗಳ ಸಂಧಿಸ್ಥಾನವಾಗಿಯೂ ಸೈನಿಕ ಚಲನ–ವಲನಗಳ ಉಪಕೇಂದ್ರವೆನ್ನಿಸಿಯೂ ಇದು ಪ್ರಾಧಾನ್ಯವನ್ನು ಪಡೆದಿತ್ತು. ಸೋದಾ ನಗರದ ಒಂದು ಉಪನಗರ(ಬಡಾವಣೆ)ವಾಗಿದ್ದ ಶಿರಿಸೆ ಇಂದು ಸೋದೆಯನ್ನು ಹಿಂದಕ್ಕೆ ತಳ್ಳಿ ತಾನು ಮುಂಚಾಚಿ ನಿಂತಿದೆ. ಹಿಂದಿನ ಅಶ್ವಾಲಯ, ಗಜಾಲಯ, ಕೋಟೆ ಕೊತ್ತಲಗಳು ನಾಮಾವಶೇಷವಾದರೂ ವ್ಯಾಪಾರಮಾರ್ಗಗಳ ಚತ್ವರತ್ವವು ಇನ್ನಷ್ಟು ಬಲಿಷ್ಠವಾಗಿ ಬೆಳೆದಿದೆ. ನಾಯಕರ ಕಾಲದ ಚೆನ್ನಪಟ್ಟಣದ ಪುಣ್ಯವೇ ಪುನಾರಚಿತವಾಗಿ ಈ ಊರಲ್ಲೀಗ ಗಣ್ಯತೆಯನ್ನು ಪಡೆದಿದೆ.

ಪ್ರಭುತ್ವಗಳಲ್ಲಿ ಈ ಊರು ಹಸ್ತಾಂತರ ಹೊಂದುತ್ತಿದ್ದ ಅವಧಿಗಳಲ್ಲೆಲ್ಲಾ ಇಲ್ಲಿ ಕಳ್ಳ–ಕಾಕರ ಹಾವಳಿ ಹೆಚ್ಚುತ್ತಿತ್ತು. ಆಗ ದರೋಡೆಗಾರರ ಮೂಲಕ ಸಂಪಾದನೆ ಮಾಡುತ್ತಿದ್ದ ಜನರೂ ಇಲ್ಲಿದ್ದರೆಂಬ ಪ್ರತೀತಿಯು ಅತ್ಯಂತ ಸಂಭವ. ಅಂಥ ಹಸ್ತಾಂತರದ ಉತ್ತರಕಾಲದಲ್ಲಿ ಕಾಯದೆ–ಸುವ್ಯವಸ್ಥೆ ನೆಲೆ ನಿಂತ ಮೇಲೆ ಜೀವನವಿಲ್ಲಿ ಮಾಮೂಲು ಸುರಕ್ಷಿತತೆಯನ್ನು ಪಡೆಯುತ್ತಿತ್ತು. ಇದು ಬೆಳೆದು ಬಂದ Cosmopolitan Cultural

Atmosphere ಅವಿಶಿಷ್ಟ ಸಾಂಸ್ಕೃತಿಕ ಆವರಣವು ದೋಷವಾಗಿ ಪರಿಣಮಿಸದಂತೆಯೂ ಗುಣವೇ ಆಗಿ ಫಲಿಸುವಂತೆಯೂ ಜನಜೀವನವನ್ನು ರೂಪಿಸಿಕೊಂಡು ಹೋಗುವುದು ಸದ್ಯದ ವ್ಯಾಪಾರ ಶ್ರೇಷ್ಠಿಗಳ ಕೈಯಲ್ಲಿದೆ. ವಿದ್ಯಾಕೇಂದ್ರಗಳ ವಿಸ್ತರಣ, ಉನ್ನತೀಕರಣ ಮತ್ತು ಫಲಾನುಭವದ ಅವಕಾಶ, ಕಲ್ಪನೆಗಳತ್ತ ನಮ್ಮ ವಣಿಗ್‌ವರರು ಹೆಚ್ಚಿನ ಗಮನವನ್ನು ಹಾಕಿದರೆ, ತಮ್ಮ ಹಿಂದಿನ ಹಿರಿಯರ ವಿದ್ಯಾವೈಭವದ ಮತ್ತು ಉದ್ಯಮ ಸಂಪತ್ತಿನ ಪುನರುದಯವನ್ನು ಸಾಧಿಸಿದರೆ, ಉಳಿದ ಊರುಗಳಿಗೊಂದು ಅನುಕರಣೀಯ ಉದಾಹರಣೆಯೆನ್ನಿಸಿ ಸರ್ವಪ್ರಶಂಸಾರ್ಹವಾಗುವಂತೆ ಮಾಡಬಲ್ಲರು.

## ಪ್ರಮಾಣ ಗ್ರಂಥಗಳು


1. Summaries of Inscriptions(1933-34 to 1949-50) published by the Kannada Research Institute, Karnatak University, Dharwar.
2. History of India (Vol.1 and 2) by R. Sathianathaier.
3. Vijayanagara Sexcentenary Commemoration Volume.
4. A History of South India by K.A.Nilaknata Sastri.
5. The Kadamba Kula by George M. Morses.
6. Sources of Karnatak History (Vol.1) by Dr.Srikantha Sastri.
7. Journey through the Northern parts of Kanara by Dr.Francis Buchanan.
8. Ancient Karnatak (Vol.1) by Dr.B.A.Saletore.
9. ಕನ್ನಡ ನಾಡಿನ ಚರಿತ್ರೆ by Dr.B.A.Saletore.
10. ಕನ್ನಡ ಕವಿ ಚರಿತೆ by Rao Bahadur R. Narasimhachar.
11. ಶಿವಮೊಗ್ಗ ಜಿಲ್ಲೆಯ ಶಾಸನಗಳು.




[ಆಕರ: ಶಿರಸಿ ನಗರಸಭಾ ಸಂಚಿಕೆ, ೧೯೬೬]

# ೮. ಸಿದ್ದಾಪುರದಲ್ಲಿ ಉಚ್ಚ ಶಿಕ್ಷಣ

ಸುಮಾರು ಕ್ರಿ.ಶ.೧೪೦೦ರಿಂದ ಆರಂಭವಾದ ಸಿದ್ದಾಪುರದ ಪ್ರತ್ಯೇಕ ಚರಿತ್ರೆ ಏಳು-ಬೀಳುಗಳನ್ನು ದಾಖಲೆ ಮಾಡಿಕೊಳ್ಳುತ್ತ ಕ್ರಿ.ಶ.೧೯೫೨ರ ಸುಮಾರಿಗೆ ಸಹಕಾರಿ ಶಿಕ್ಷಣ ಪ್ರಸಾರಕ ಸಮಿತಿಯ ಉದಯವನ್ನು ಕಂಡಿತು. ಶ್ರೀ ದೊಡ್ಮನೆ ನಾರಾಯಣ ಹೆಗಡೆಯವರು ತಮ್ಮ ಕಾಲದಲ್ಲಿ ತಮ್ಮ ಮನೆಯ ಮಕ್ಕಳನ್ನು ಹೆಚ್ಚಿನ ಶಿಕ್ಷಣಕ್ಕಾಗಿ ಹಳ್ಳ-ಕೊಳ್ಳ-ಗುಡ್ಡ ಬೆಟ್ಟಗಳನ್ನು ದಾಟಿಕೊಂಡು ಊರಿನಿಂದ ದೂರದಲ್ಲಿರುವ ಪರಸ್ಥಳಗಳಿಗೆ ಒಯ್ಯಬೇಕಾಗಿತ್ತೆಂದು ಹೇಳಿದ್ದರು. ಕ್ರಿ.ಶ.೧೮೦೦ರಿಂಧ ೧೯೫೨ರವರೆಗಿನ ವಿದ್ಯಾಭ್ಯಾಸ ಸೌಕರ್ಯವು ಆ ಪರಿಸ್ಥಿತಿಯಲ್ಲಿತ್ತು.

ಭಾರತದ ಸ್ವಾತಂತ್ರ್ಯೋದಯವಾದ ಮೇಲೆ ಕೆಲವೇ ವರ್ಷಗಳಲ್ಲಿ ಸತ್ಯಾಗ್ರಹದಲ್ಲಿ ವಿಶಿಷ್ಟ ಪಾತ್ರವನ್ನು ವಹಿಸಿದ್ದ ಶ್ವೇತಪುರದ(ಬಿಳಿಗಿಯ) ಉತ್ತರಾಧಿಕಾರಿಯಾದ ಸಿದ್ದಾಪುರದ ಪ್ರಗತಿಶೀಲ ಮುಂದಾಳುಗಳು ಸಹಕಾರಿ ಶಿಕ್ಷಣ ಪ್ರಸಾರಕ ಸಮಿತಿಯ ಆಶ್ರಯದಲ್ಲಿ ಹೈಸ್ಕೂಲುಗಳನ್ನು ತಾಲೂಕಿನ ವಿವಿಧ ಕೇಂದ್ರಗಳಲ್ಲಿ ತೆರೆಯುತ್ತ ಹೋದರು. ತಾಲೂಕಿನ ಜನರು 'ವಿದ್ಯಾನಾಮ ನರಸ್ಯ ರೂಪಮಧಿಕಂ' ಎಂಬುದನ್ನು ಮನದಂದು ತಮ್ಮ ಬಾಲಕರನ್ನು ಶಾಲೆಗಳಿಗೆ ಕಳಿಸಿಕೊಡಲಾರಂಭಿಸಿದರು. ಶಾಲೆಗಳ ಕಟ್ಟಡ ಮುಂತಾದ ಸಾಧನಗಳಿಗಾಗಿ ಉದಾರ ದೇಣಿಗೆಗಳನ್ನು ನೀಡುತ್ತ ಹೋದರು. ಮಾಧ್ಯಮಿಕ ಶಾಲೆಗಳು ರಭಸದಿಂದ ತಲೆಯೆತ್ತಿದವು. 'Education is the light that dispels the darkness of ignorance from our mind-ವಿದ್ಯೆಯು ಜ್ಯೋತಿ; ಅದು ನಮ್ಮ ಮನದ ಅಂಧಕಾರವನ್ನು ಓಡಿಸುತ್ತದೆ' ಎಂಬ ಪ್ರಜ್ಞೆಯು ಬೆಳೆಯಿತು. ಸಿದ್ದಾಪುರ, ಬಿಳಿಗಿ, ದೊಡ್ಮನೆ, ಹೆಗ್ಗರಣಿ, ಸರಕುಳಿ, ತ್ಯಾಗಲಿ, ಇಟಗಿ ಮುಂತಾದ ಸ್ಥಳಗಳಲ್ಲಿ, ಸರಸ್ವತಿಯು ಬಹುಮುಖಿಯಾದಳು, ಬೇಡಕಣಿಯನ್ನು ತಲುಪಿದಳು. ಮೆಟ್ರಿಕ್ಯುಲೇಶನ್ ಶಿಕ್ಷಣವು ಬಡವ-ಬಲ್ಲಿದರೆಲ್ಲರಿಗೂ ಲಭ್ಯವಾಗುವಂತಾಯಿತು.

ಅನಂತರ ೧೯೬೯ರಲ್ಲಿ ಉಕ್ತ ಸಮಿತಿಯ ಅಧ್ಯಕ್ಷರಾಗಿದ್ದ ಶ್ರೀ ದೊಡ್ಮನೆ ಗಣೇಶ ಹೆಗಡೆಯವರು ತಾಲೂಕಿನ ಸನ್ಮಿತ್ರರ ಬೆಂಬಲದಿಂದ 'ಆರ್ಟ್ಸ್ ಡಿಗ್ರಿ' ಕಾಲೇಜನ್ನು ಸ್ಥಾಪಿಸಿದರು. ಅದೇ ಇಂದು 'ಮಹಾತ್ಮಗಾಂಧಿ ಶತಾಬ್ದಿ ಆರ್ಟ್ಸ್ ಕಾಲೇಜು' ಎಂದು ಹೆಸರಾಗಿದೆ. ೧-೬-೬೯ರಂದು ಪ್ರಸ್ತುತ ಲೇಖಕನು ಅದರ ಪ್ರಾಚಾರ್ಯತ್ವ ವಹಿಸಿಕೊಂಡು ೧೦-೬-೭೬ರ ತನಕ ಅಲ್ಲಿದ್ದನು; ಅಧ್ಯಕ್ಷರ ಹಾಗೂ ಇತರ ಪ್ರಾಧ್ಯಾಪಕ ಕಾರ್ಯಕರ್ತರ ಜೊತೆಗೆ ತಾಲೂಕಿನಲ್ಲೆಲ್ಲ ದೇಣಿಗೆಗಾಗಿ ತಿರುಗಿಯೂ ಇದ್ದನು.

ಭಾರತದ ಸ್ವಾತಂತ್ರ್ಯೋತ್ತರ ಅವಧಿಯ ಚರಿತ್ರೆ ಇನ್ನೂ ಬಾಲ್ಯಾವಸ್ಥೆಯಲ್ಲೇ ಇದೆ. ಸ್ವಾತಂತ್ರ್ಯ ವೀರರು ಸ್ವಾತಂತ್ರ್ಯ ಲಭ್ಯವಾದ ಮೇಲೆ ಕ್ರಮೇಣ ವಿಶ್ರಾಂತರಾಗುತ್ತ

ಹೋದರು. ಅವರಲ್ಲಿ ಕೆಲವೇ ಕೆಲವು ಅಲ್ಪ ಸಂಖ್ಯಾತರು ರಚನಾತ್ಮಕ ಕಾರ್ಯಗಳಲ್ಲಿ ಧುಮುಕಿದರು. ಅವರಲ್ಲಿ ನನ್ನೆದುರು ಪದೇ ಪದೇ ಕಾಣಿಸಿದ ಪ್ರಮುಖರಲ್ಲಿ ದೊಡ್ಮನೆ ಗಣೇಶ ಹೆಗಡೆಯವರು ಮತ್ತು ಅವರ ತಮ್ಮ ದೊಡ್ಮನೆ ರಾಮಕೃಷ್ಣ ಹೆಗಡೆಯವರು, ಗೋವಿಂದ ಶಾನುಭೋಗರು, ಹೂವಿನಮನೆ ಆರ್.ಟಿ.ಹೆಗಡೆಯವರು, ಹೊಸ್ತೋಟ ಪಟೇಲರು, ತಟ್ಟಿಕೈ ರಾಮಚಂದ್ರಭಟ್ಟರು, ಆರ್.ವಿ.ಹೆಗಡೆ ಕವಲುಕೊಪ್ಪದವರು, ಗೋರನಮನೆ ಹೆಗಡೆಯವರು, ಬೇಂಗ್ರೆಯವರು, ತವದಿ ಸೆಟ್ಟರು, ಹರಿಗೆ ಸೀತಾರಾಮ ಹೆಗಡೆಯವರು, ಮಂಜಯಿನ್ ಅವರು, ಡಾ.ಎಂ.ಪಿ.ಶೆಟ್ಟರು, ಡಾ.ಕೆ.ಜಿ.ಭಟ್ಟರು, ಹೈಸ್ಕೂಲ್ ಮುಖ್ಯೋಪಾಧ್ಯಾಯರು, ರಾಮಚಂದ್ರಾಪುರ ಮಠದ ಶ್ರೀಗಳು ಮುಂತಾದವರು ಕೆಲವರು; ಉಳಿದ ದೇಣಿಗೆದಾರರೆಲ್ಲರೂ ನನಗೆ ಚಿರಪರಿಚಿತರೂ, ಪ್ರಗತಿಶೀಲರೂ, ಉದಾರಿಗಳೂ, ಅತಿಥಿ ಸತ್ಕಾರ ಪರಾಯಣರೂ ಆಗಿದ್ದರು. ಜಾತಿಭೇದವಿಲ್ಲದೆ ಎಲ್ಲರೂ ಕಾಲೇಜಿಗೆ ನೆರವನ್ನಿತ್ತರು. ಈ ವೈದಿಕ ಸಹಕಾರವೇ ಭಾರತದ ನಾಗರಿಕತೆಯ ಆರ್ಯಸೂತ್ರ. ತದ್ವಿರುದ್ಧವಾದವೆಲ್ಲವೂ ಅರಾಷ್ಟ್ರೀಯವಾದ ಅನಾರ್ಯ ಸೂತ್ರಗಳು.

## ವಿದ್ಯಾರ್ಥಿನಿಲಯ–ಉಪಾಹಾರಗೃಹಗಳ ಅವಶ್ಯಕತೆ :

ಸಿದ್ದಾಪುರದ ಕಾಲೇಜು ಪಿ.ಯು.ಸಿ. ಸೈನ್ಸ್ ಕ್ಲಾಸುಗಳನ್ನು ಅನಂತರ ತೆರೆಯಿತು. ಈಗ 'ಕಾಮರ್ಸ್' ಮತ್ತು ವೃತ್ತಿಶಿಕ್ಷಣ' ವಿಭಾಗಗಳೂ ಕಾಲೇಜಿನಲ್ಲಿ ಉದಯವಾದವು. ಕಾಲೇಜಿನ 1)P.U.C. Arts 2) P.U.C. Science 3) Degree Classes in Arts and Commerce 4) Vocational Diploma classes ಎಂಬೀ ಪಂಚಮುಖಗಳೂ ಉತ್ತಮ ಫಲಿತಾಂಶಗಳಿಗೆ ಹೆಸರು ಪಡೆದಿವೆ. ನನ್ನ ಹಳೆಯ ಪ್ರಿಯ ವಿದ್ಯಾರ್ಥಿಯಾಗಿದ್ದ ಶ್ರೀ ಎನ್.ಎನ್.ಸಭಾಹಿತರು ದಿ.೧೦–೬–೭೬ರಿಂದ ಕಾಲೇಜಿನ ಸತ್‌ಪರಂಪರೆಯನ್ನು ಯಶಸ್ವಿಯಾಗಿ ಮುನ್ನಡೆಯಿಸಿಕೊಂಡು ಹೋಗುತ್ತಿರುವುದು ನನಗೆ ಹೆಮ್ಮೆಯ ವಿಷಯವಾಗಿದೆ. ಅವರಿಗೆ ನನ್ನ ಅಂದಿನ ಸಹೋದ್ಯೋಗಿಗಳು ಸಹಕಾರವೀಯುತ್ತಿರುವುದು ಸಮಾಧಾನಕರ.

ವಿದ್ಯಾರ್ಥಿಗಳಲ್ಲಿ ಅಕಿಂಚನರು ಅಧಿಕ. ಅವರಲ್ಲೂ 'ಮುಂದುಳಿದ' ವರ್ಗಗಳವರ ಆರ್ಥಿಕ ಹಿನ್ನಡೆ ಹಿಂದಿದ್ದ ವರ್ಗಗಳವರ ಆರ್ಥಿಕ ಹಿನ್ನಡೆಯೊಡನೆ ಸ್ಪರ್ಧೆಗೆ ನಿಂತಂತಿದೆ, ನಿಂತು ಸೋಲುತ್ತಿದೆ!

**ದಾರಿದ್ರ್ಯಜ್ಯೇಷ್ಠ ಪುತ್ರಾಶ್ಚ ।**
**ಜಾತ್ಯತೀತಾಽಭವನ್ ಯಥಾ ॥**
**ಮಾರಾಜ್ಯೇಶ್ವರ ಪುತ್ರಾಶ್ಚ ।**
**ತಥಾ ವಿದ್ಯಾರ್ಜನೇ ಧ್ರುವಂ ॥**

ಈ ಅಂಶವಿನ್ನೂ ಸರಕಾರಗಳಿಗೆ ಅರ್ಥವಾದಂತಿಲ್ಲ. ಜಾತಿಗಳೆರಡಲ್ಲದೆ ಹೆಚ್ಚಿಲ್ಲ; ಧರ್ಮಗಳೆರಡಲ್ಲದೆ ಮೂರಿಲ್ಲ. ಅವು ಕುಚೇಲ ಪುತ್ರೀಯ ಮತ್ತು ಕುಬೇರ ಪುತ್ರೀಯ. ಇದು ವ್ಯವಹಾರ. ಹಾಗೇ ಸುಶೀಲ–ದುಃಶೀಲ ಎಂಬ ಧರ್ಮಗಳು ಎರಡೇ. ಬಡ ವಿದ್ಯಾರ್ಥಿಗಳಿಗೆ ಸರಕಾರಿ ವಿಶುಲ್ಕ, ವಿದ್ಯಾರ್ಥಿ ವೇತನಗಳ ಜೊತೆಗೆ ಊರಪ್ರಮುಖರ ದಾನಗಳೂ ಶುಲ್ಕಕ್ಕಾಗಿ, ಪುಸ್ತಕಕ್ರಯಕ್ಕಾಗಿ ಮತ್ತು ಉಪಜೀವನಕ್ಕಾಗಿ ದೊರಕುತ್ತಿದ್ದುದು ಪ್ರಶಂಸನೀಯ. ಆದರೆ ವಾರಾನ್ನ–ಭಿಕ್ಷಾನ್ನಗಳಿಲ್ಲ. ಮಧ್ಯಾಹ್ನ ಭೋಜನ ವ್ಯವಸ್ಥೆಯೂ ಇಲ್ಲ. ರಾಜಕೀಯ ವ್ಯವಹಾರದ ಲೋಪದೋಷಗಳಿಂದ ಕಲುಷಿತರಾದವರೂ ಆದಂತೆ ತಿಳಿದುಕೊಂಡವರೂ ಹೆಚ್ಚುತ್ತ ಹೋದುದರಿಂದ ಊರ ಸಂಸ್ಥೆಗಳು ಎಲ್ಲ ಕಡೆಗಳಲ್ಲೂ ಈಗ 'ಮ್ಯುನಿಸಿಪಾಲಿಟಿ'ಗಳಾಗುತ್ತ ಹೋಗಿವೆ. Municipalities represent maladministration ದುಷ್‌ಪ್ರಶಾಸನವನ್ನು ಅಲಂಕರಿಸಿಕೊಂಡ ಪ್ರಮುಖ ಸಂಸ್ಥೆಗಳೆಂದರೆ ನಗರಸಭೆಗಳು. 'ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್!' ಈ 'ಮಿನಿ ಗವರ್ನ್‌ಮೆಂಟುಗಳ' ಮಾದರಿ ಸಾಂಕ್ರಾಮಿಕವಾಗುತ್ತ ಹೋದುದರಿಂದ ಕಾಲೇಜು ಸಾಧನ ಸಂಪತ್ತಿನಲ್ಲಿ ಸಮಗ್ರತೆಯನ್ನು ಮುಟ್ಟಲು ಇನ್ನೂ ಸಾಧ್ಯವಾಗಿಲ್ಲ; ಅದಕ್ಕೆ ತಕ್ಕ ಧನಬಲವೊದಗಿ ಬರಲಿಲ್ಲ; ಬಂದಷ್ಟನ್ನು ವಿನಿಯೋಗಿಸಲಾಗಿದೆ. 'ಚೆಕ್‌ಪೇಮೆಂಟ್' ಪದ್ಧತಿ ಬಂದಂದಿನಿಂದ ಪ್ರಾಧ್ಯಾಪಕರ ಸಂಬಳ ತಿಂಗಳ ಮೊದಲ ದಿನಾಂಕ ದೊರಕುವಂತಾಯ್ತು. ಅದಕ್ಕೆ ಸರಕಾರಕ್ಕೆ ಧನ್ಯವಾದಗಳನ್ನು ಅರ್ಪಿಸಬೇಕು. ಆದರೆ ಅದರ ವಿಲಂಬಾಯನ(Procrastination)ಸದ್ಯದ ಮುಖ್ಯಮಂತ್ರಿಗಳ ಬಾಯಿಂದ ಹೊರಬಿದ್ದಿರುವುದರಿಂದ ಉಕ್ತ ರೋಗ ಪರಿಹಾರವಾಗಲು ಕಾಲ ಬಂದಿತೇನೋ ಎನ್ನಿಸುತ್ತದೆ. 'ಹಾಸ್ಟೆಲ್', 'ಕ್ಯಾಂಟೀನ್'ಗಳು ಕಾಲೇಜಿಗೆ ಬೇಕು. ಬಿ.ಡಿ.ಓ. ಹನುಮಂತಯ್ಯನವರಿದ್ದಾಗ ಬಾವಿಯೊಂದು ಸಿದ್ಧವಾಯ್ತು. ಅಂದಿನವರೆಗೆ ಟಿ.ಡಿ.ಬಿ. ವರ್ಷಕ್ಕೆ ರೂ.೧೫,೦೦೦=೦೦ ದಾನವನ್ನು ಕೊಡುತ್ತಿತ್ತು! ವಿದ್ಯಾರ್ಥಿನಿಲಯ ಹಾಗೂ ಉಪಾಹಾರ ಗೃಹಗಳ ನಿರ್ಮಾಣಕ್ಕೀಗ ದೇಣಿಗೆ ಬೇಕು.

## ಉದಾತ್ತ ಸಮಾಜ ರಚನೆಯ ಗುರಿ :

'ವಿದ್ಯಾ ರಾಜಸು ಪೂಜಿತಾ ನ ತು ಧನಂ'–ಎಂದು ಕಾಲೇಜು ನಂಬಿತ್ತು. ಆದರೀಗ–'ಲಕ್ಷ್ಮೀ ರಾಜಸು ಪೂಜಿತಾ ವಿಧಿಸುತಾ ದಾಸೀವ ದುರ್ಲಕ್ಷಿತಾ' ಎಂಬ ಕ್ಷಾತ್ರ ಪೌರೋಹಿತ್ಯ ಊರೂರುಗಳನ್ನು ಹಬ್ಬುತ್ತಿದೆ. ಕಲಿತವರಿಗೆ ತಕ್ಕ ಕೆಲಸವಿಲ್ಲ; ಕಲಿತವರೆಂದೆನ್ನಿಸಿಕೊಂಡ ಹಾಗೂ ಕೊಳ್ಳದವರಿಗೆ ಸಾರ್ವಜನಿಕ ಕಾರ್ಯಾಧಿಕಾರದಲ್ಲಿ ಸಿಂಹಭಾಗ! ಇದು ರಾಷ್ಟ್ರದ ದೀನ, ದಲಿತ, ಶುಷ್ಕ ದುರ್ದೈವಿಗಳಿಗೆ ಕೊಡಲಾಗುತ್ತಿರುವ ಹೊಸ ಶಾಪ. ವಿನಯಾರ್ಜವಾದಿ ಗುಣರಹಿತವಾದ ವಿದ್ಯಾಭ್ಯಾಸ ಪ್ರಚಾರವೂ ಈಗ ಹೆಚ್ಚಿದೆ. ಇದು ರಾಷ್ಟ್ರಘಾತಕ. 'ಅಹಂ ರಾಷ್ಟ್ರಂ ಸಂಗಮನೀ' ಯೋ 'ಸಂಗಮಿನೀ' ಯೋ(+ಜನಾನಾಂ)?' ಯಾರಿಗೀಗ ಮಾತು ಬರುತ್ತದೆ? 'ಗುರವೇ ನಮಃ' ಎನ್ನಬೇಕೋ

'ಗುರುವೇ ನಮಹ' ಎನ್ನಬೇಕೋ? ಆದರೂ ಉಚ್ಚಶಿಕ್ಷಣ ಸಿದ್ದಾಪುರದಲ್ಲಿ ಊರ್ಧ್ವಗತಿಯನ್ನು ಬಿಟ್ಟಿಲ್ಲ ಎಂದು ನಂಬುತ್ತೇನೆ. ಪ್ರತಿವರ್ಷವೂ ಸರಾಸರಿ ೩೦೦ಕ್ಕೂ ಹೆಚ್ಚು ವಿದ್ಯಾರ್ಥಿಗಳಿಂದ ಕಾಲೇಜು ಪುಷ್ಟವಾಗಿದೆ. ಹೈಸ್ಕೂಲು ಮುಖ್ಯಾಧ್ಯಾಪಕರಲ್ಲಿ ನನ್ನ ಹಳೆಯ ಶಿಷ್ಯರನೇಕರೀಗ ಇದ್ದಾರೆ. ಇದು ಧೈರ್ಯ. ಅವುಗಳೇ ಕಾಲೇಜಿಗೆ ವಿದ್ಯಾರ್ಥಿಗಳನ್ನು ಕಳಿಸಿಕೊಡುತ್ತಿವೆ. ಆದುದರಿಂದ ಅವುಗಳ ಪಾತ್ರ ಹಿರಿಯದು. ಕಾಲೇಜು ಪ್ರಾಧ್ಯಾಪಕರೀಗ ಇಮ್ಮಡಿ ಉತ್ಸಾಹದಿಂದ ಸ್ವಜ್ಞಾನಾಭಿವೃದ್ಧಿಯ ಜೊತೆಗೆ ವಿದ್ಯಾರ್ಥಿಗಳಿಗೂ ಹೆಚ್ಚಿನ ಜ್ಞಾನ ಗಂಗೆಯನ್ನು ಕುಡಿಯಿಸುತ್ತಿರಬೇಕು. ತಥಾಸ್ತು!

ಇದೀಗ ಸಮಿತಿಯ ಬೆಳ್ಳಿಹಬ್ಬದ ಆಚರಣೆಯ ಸಂಧಿ. ಕಾಲೇಜಿಗೆ ಬೇಕಾದ ಸಾಮಗ್ರಿ, ಕಟ್ಟಡ ವಿಸ್ತರಣೆ, ಅನ್ನದಾನಾದಿ ಯೋಜನೆಗಳಿಗಾಗಿ ತಾಲೂಕಿನ ಆಢ್ಯರು ಯತ್ನಿಸುವುದು ಅಗತ್ಯ. ಸರಕಾರವು ಸಂಬಳದ ಅನುದಾನವನ್ನಲ್ಲದೆ ಇನ್ನೇನನ್ನೂ ಕೊಡದು. ಕಾಂಗ್ರೆಸ್ಸಿನ 'ಬಾರ್ಡೋಲಿ'ಯಾಗಿದ್ದ ಸಿದ್ದಾಪುರವು ವಿದ್ಯಾದೇವತೆಯ ಕಾಶಿಯಾಗಲು ತಡ ಮಾಡೀತೇ?

**'ಕಾಶೀಗಮನ ಮಾತ್ರೇಣ ನಾನ್ನಂ ಭಟ್ಟಾಯತೇ ದ್ವಿಜಃ'** ಎಂಬುದರ ಬದಲು–

**'ಸಿದ್ದಾಪುರ ಮಹಾವಿದ್ಯಾಪೀಠಂ ಗತ್ವಾ ಹಿ ಬಾಲಕಾಃ**

**ಅನ್ನಂಭಟ್ಟಾಯಮಾನಾಃ ಸ್ಯುಃ ಪರವಾದಿ ಭಯಂಕರಾಃ'**

ಎಂಬ ಪ್ರತೀತಿಯು ಭಾರತದಲ್ಲಿ ಹರಡುವಂತಾಗಬೇಕು. ಅನ್ನಂ(ಅಣ್ಣಂ)ಭಟ್ಟನ ತರ್ಕವಿದ್ವತ್ತೆ ಹೆಸರಾದುದೆಂಬುದು ಪ್ರಸಿದ್ಧ. ಮುಳುಗಡೆಯನ್ನು ತಡೆಯಬಲ್ಲ ವಿದ್ವಾಂಸರು ಕಾಲೇಜಿನಲ್ಲಿ ತಯಾರಾಗಿ ಹೊರಬೀಳಬೇಕು. ಸರಕಾರಕ್ಕೆ ಅಂಕೆ–ಸಂಖ್ಯೆಗಳ ಹಾಗೂ ಉದ್ಯೋಗ ಮಾನಸ ಶಾಸ್ತ್ರಗಳ ಮತ್ತು ಆರ್ಥಿಕ ವಿಜ್ಞಾನವೇತ್ತರ ಮನಂಬುಗುವ ವಾದ, ಸತ್ಯಪ್ರತೋದ ಪ್ರಯೋಗ, ನ್ಯಾಯವಿಚಾರ ಪ್ರಚಾರ, ಏಕಾಭಿಪ್ರಾಯ ನಿರ್ಮಾಣ ಮುಂತಾದವುಗಳು ಕಾಲೇಜಿನಿಂದ ಪದವೀಧರರಾಗಿ ಹೊರಬಿದ್ದ ಚಾರಿತ್ರಯುಕ್ತ ಹಾಗೂ ವಿದ್ವತ್ತಾ ಪ್ರತಿಭಾ ಸಂಪನ್ನ ತರುಣ ತರುಣಿಯರಿಂದ ಆಗಬೇಕಾದದ್ದು ಜನನಿರೀಕ್ಷಿತವಲ್ಲವೇ? ಪ್ರತಿನಿಧಿಗಳ ಅಭಿಪ್ರಾಯವು ಜನಾಭಿಪ್ರಾಯವಾಗುವುದುSellers' Market ಮಾರುವವರ ಸಂತೆಯಲ್ಲಿ; ಜನಾಭಿಪ್ರಾಯವು ಪ್ರತಿನಿಧಿಗಳ ಅಭಿಪ್ರಾಯವಾಗುವುದು Buyers' Marketಕೊಂಬವರಿಗೆ ಪ್ರಾಧಾನ್ಯವುಳ್ಳ ಪೇಟೆಯಲ್ಲಿ. ಭಾರತವೂ, ಕರ್ನಾಟಕವೂ ಉತ್ತರಕನ್ನಡವೂ ಕೊಳ್ಳುವವರ ಅನುಕೂಲದ ಮಾರ್ಕೆಟ್ಟಾಗಬೇಕಾದದ್ದು ನೆಹರು ಕನಸು ಕಂಡ Egalitarian ಉದಾತ್ತ ಸಮಾಜದ ಜೀವನಕ್ಕೆ ಅಗತ್ಯವಾದುದು. ಮಹಾತ್ಮ ಗಾಂಧಿ ಶತಮಾನ ಹೆಸರನ್ನಿಟ್ಟುಕೊಂಡು 'ಮೇಧಾ' ಪತ್ರಿಕೆಯನ್ನು ಹೊರಡಿಸುತ್ತಿರುವ ಕಾಲೇಜಲ್ಲದೆ ಇನ್ನಾವುದು ಈ ಉನ್ನತ ಆದರ್ಶವನ್ನು ಸಾಧಿಸಲು ಸೊಂಟ ಕಟ್ಟುವ ವಿದ್ಯಾರ್ಥಿಗಳನ್ನು ತಯಾರು ಮಾಡಬಲ್ಲದು? 'ಮಯಿ ಮೇಧಾಂ ಮಯಿ ಪ್ರಜಾಂ ಮಯೀಂದ್ರ ಇಂದ್ರಿಯಂ ದಧಾತು' ಎಂಬ ಪ್ರಾರ್ಥನೆ ಬ್ರಹ್ಮಚಾರಿಗಳ ಸಂಪ್ರದಾಯ.

## ಹೊಸಕಾಲದ ವ್ಯಕ್ತಿತ್ವ ವಿಕಾಸದ ಅರ್ಥ :

Standard of individual conduct and performance ವೈಯಕ್ತಿಕ ವರ್ತನೆ ಮತ್ತು ಕಾರ್ಯನಿರ್ವಾಹಗಳಲ್ಲಿ ಉನ್ನತಮಟ್ಟವನ್ನು ಆಚರಿಸಿ ತೋರಿಸಿದ ಸಿದ್ದಾಪುರ ತಾಲೂಕಿನ ವಿದ್ಯಾವಂತರ ಸಂಖ್ಯೆಯು ಮಿಕ್ಕ 'ಮುಂಬರಿದ' ತಾಲೂಕುಗಳಲ್ಲಿರುವ ಪ್ರಮಾಣದಲ್ಲಿ ಇರಲು, ಇನ್ನೂ ಹೆಚ್ಚಿನ ಸಮನ್ವಿತ ಪ್ರಯತ್ನಗಳನ್ನು ವಿದ್ಯಾಭಿಮಾನಿಗಳೂ ವಿದ್ಯಾವಂತರೂ ಶಾಲೆ–ಕಾಲೇಜುಗಳ ಸರ್ವಾಂಗೀಣ ವ್ಯಕ್ತಿ–ವಸ್ತು–ಸಂದರ್ಭಗಳ ಹಾಗೂ ಸಲಕರಣೆಗಳ ಮೂಲಕ ಮಾಡಬೇಕಾಗಿದೆ. ಯಾವ ರಾಜದಂಡಮಂಡಿತರೂ ಇಂದು ನಮಗೆ ಮಾದರಿಗಳಾಗಲಾರರು. ವಣಿಕ್‌ಪಥ ಹಿಡಿದವರೂ ಅಷ್ಟೇ. ಕೃಷಿ, ಶ್ರಮ, ಉದ್ಯಮ, ಮಧ್ಯಸ್ಥ ಮಾಧ್ಯಮಗಳನ್ನು ಹಿಡಿದವರ ಕತೆಯೂ ಬೇರೆಯಾಗಿಲ್ಲ. ಅತ್ಯಲ್ಪ ಸಂಖ್ಯಾತ ಅಪವಾದಾತ್ಮಕರು(Exceptions) ಎಲ್ಲ ವರ್ಗಗಳಲ್ಲೂ ಇದ್ದಾರೆ. ಅವರೇ ಬಾಲಕ, ಪಾಲಕ, ಸಂಸ್ಥಾಧ್ವರ್ಯು, ಸರಕಾರಗಳಿಗೆ ಅನುಕರಣೀಯರು. ಆದರೆ ಅವರನ್ನು ಮೂಲೆಗೆ ತಳ್ಳುವ ಮೂರ್ಖತೆ ತಾಂಡವವಾಡುತ್ತಿರುವುದು ಕೆಲ ವಿಶ್ವವಿದ್ಯಾಲಯಗಳಲ್ಲೇ ಕಾಣಬರುತ್ತಿರುವಾಗ ಚಿಕ್ಕ ಪುಟ್ಟ ವಿದ್ಯಾಲಯಗಳ ಅಧಿಕಾರಿಪ್ರಾಧಿಕಾರಿಗಳ ನೈತಿಕ ದೌರ್ಬಲ್ಯ ಅವರಿಂದ ಅದನ್ನಲ್ಲದೆ ಮತ್ತೇನನ್ನು ಮಾಡಿಸೀತು? ಹಿಂದುಳಿದ ವಿದ್ಯಾಲಯಗಳನ್ನು ಖಂಡಿತವಾಗಿಯೂ ಉತ್ತರಕನ್ನಡಜಿಲ್ಲೆಯ ಹಾಗೂಸಿದ್ದಾಪುರ ತಾಲೂಕಿನ ವಿದ್ಯಾಲಯಗಳು ಹಿಂದಕ್ಕೆ ಹಾಕಿವೆ. ಶಾಂತಿನಿಕೇತನದಂಥ ಮುಂಬರಿದ ಮಹಾವಿದ್ಯಾಲಯ ಕೂಡ ಈಗ ಹತ್ತರ ಕೂಡ ಹನ್ನೊಂದು ಎಂಬಂತಾಗಿದೆಯಂತೆ. ಅಂದ ಮೇಲೆ ಕೇಳಬೇಕೇ? ಬೆಂಗಳೂರು ವಿಶ್ವದ್ಯಾಲಯವನ್ನೀಗ(Politicking) ಅಪರಾಜ್ಯತಂತ್ರದಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಅನುಸರಿಸಲಾರಂಭಿಸಿದೆ ಎಂದು ಮಿತ್ರರೊಬ್ಬರು ಹೇಳಿದರು. 'ಕಾಪಿ ಹೊಡೆಯುವವರ' ಸಂತಾನಾಭಿವೃದ್ಧಿಗೆ ಹೆಸರಾದ ಪಂಕ್ತಿಬೇಧ ಪಕ್ಷಪಾತಗಳಿಂದ ಕುವಿಖ್ಯಾತವಾದ, ರಿಕ್ತಗುರು ವರ್ಗಗಳಿಂದ ಪರಿಪೂರ್ಣವಾದ, ವಿಷಯಲಂಪಟ ಶಿಷ್ಯೋತ್ತಮರಿಂದ ತುಂಬಿ ತುಳುಕುವ ವಿಶ್ವವಿದ್ಯಾಲಯಗಳಿಂದ ಹೊರಬೀಳುತ್ತಿರುವ ಪದಕ ಪದವೀಧರರಿಂದ ನಮ್ಮ ದೀನ–ದಲಿತ–ಗಿರಿ–ಹರಿಜನರ ಉದ್ಧಾರವನ್ನು ನ್ಯಾಯವಾಗಿ ಮಾಡುವ ಪ್ರಜಾಪ್ರತಿನಿಧಿತ್ವವು ಸಾರ್ಥಕವಾದೀತೇ? ಆಸ್ಥಾನ ವಿದೂಷಕನನ್ನು ಮೀರಿಸುವ ರಾಜನಾರಾಯಣರನ್ನು ಸಹಿಸಿಕೊಂಡಿದ್ದ ಮತದಾರರು ಇನ್ನಾರನ್ನು ಸಹಿಸಿಕೊಳ್ಳದಿದ್ದಾರು? ಸಿದ್ದಾಪುರದ ತರುಣ ಜನಾಂಗವು ಸಾರ್ವಜನಿಕ ಹಾಗೂ ರಾಷ್ಟ್ರೀಯ ವಿದ್ಯಮಾನಗಳಲ್ಲಿ ಶ್ರೀ ಎಚ್.ಕೃಷ್ಣಮೂರ್ತಿಯಷ್ಟಾದರೂ ಯುಕ್ತಿಯುಕ್ತವಾಗಿ ಭಾಗವಹಿಸಲಾರದೆ? (See Letters to the Editor, Illustrated Weekly of India) ಭಾಗವಹಿಸೀತು ಎಂದು ನಾನು ನಂಬುತ್ತೇನೆ.

ಹೊಸ ಕಾಲದ ಹೊಸ ಕಾರ್ಯಕರ್ತೃತ್ವಶಾಲಿಗಳಾದ ಮುಖಂಡರನ್ನು ಕಾಲೇಜು ಮುಂದೆ ತರಲಿ. ಅವರ ಜ್ಞಾನಬಲ, ಚಾರಿತ್ರಬಲ ಊರಿಂದ, ರಾಜ್ಯದಿಂದ, ದೇಶದಿಂದ

ಮುಂದಕ್ಕೆ ಹೋಗಿ ಅಂತಾರಾಷ್ಟ್ರೀಯವಾಗಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ. ಅದಕ್ಕೆ ವಿಧಿ–ವಿಧಾನಗಳನ್ನು ಶ್ರೀ ತಟ್ಟೀಕೈ ರಾಮಚಂದ್ರಭಟ್ಟರ ನೇತೃತ್ವವು ತಜ್ಞರ ಸಹಾಯದಿಂದ ರಚಿಸಲಿ; ಅಲ್ಲಾಡಲೊಲ್ಲದ ಕಲ್ಲುಗಳನ್ನು ಅಲ್ಲಾಡಿಸಲು ಸಮರ್ಥರಾಗಲಿ. ಆಗ ಮಾತ್ರ ಸಾರ್ಥಕವೂ, ಸಫಲವೂ ಆದ ಶಿಕ್ಷಣ ದೊರಕುವಂತಾಗಿ ನೌಕರಿಗೆ ಯಾರೂ ಅಂಗಲಾಚದಂತಾಗುವುದು; ಇಂದಿನ ಕಲಿತವರ ನಿರುದ್ಯೋಗವು ಇತಿಶ್ರೀಯಾಗುವಂಥ ಉದ್ಯಮೋದ್ಯೋಗಗಳನ್ನವರು ಸ್ಥಾಪಿಸಿ ಎದೆ ತಟ್ಟಿ ನಿಂತಾರು!

## ಖಾಸಗಿ ವಿದ್ಯಾಸಂಸ್ಥೆಗಳಲ್ಲಿಯ ಅತೃಪ್ತಿ ಸ್ಥಾನಗಳು :

ಖಾಸಗಿ ಸಂಸ್ಥೆಗಳು ನಡೆಸುತ್ತಿರುವ ವಿದ್ಯಾಲಯಗಳಲ್ಲಿ ಕೆಲವೆಡೆ ಅತೃಪ್ತಿಕರವಾದ ಪರಿಸರ, ಕಟ್ಟಡ, ಪೀಠೋಪಕರಣ, ಗ್ರಂಥಾಲಯ, ಶಿಕ್ಷಕರ ಚಾರಿತ್ರ, ವ್ಯಕ್ತಿತ್ವ, ನೈತಿಕತೆ ಮತ್ತು ಅನುಭವಗಳಲ್ಲದೆ, ಸಂಸ್ಥಾಧೀಶರಲ್ಲಿ ಹಲಕೆಲವರ ನಡತೆಗಳು ವಿದ್ಯಾರ್ಥಿಗಳ ಮೇಲೆ ಪರಿಣಾಮ ಬೀರುತ್ತವೆ; ಅತೃಪ್ತಿಕರ ನಡತೆಯಲ್ಲಿ ಹಲವಾರು ಪಾಲಕರ ಭಾಗವೂ ಇರುವುದುಂಟು.

೧) ಸಂಸ್ಥಾಧೀಶರು ಅಥವಾ ಮಹಾಜನರು ೨) ಪಾಲಕರು ೩) ಬಾಲಕ–ಬಾಲಿಕೆಯರು ೪) ದಾನಿಗಳು ಮತ್ತು ೫) ವಿದ್ಯಾಲಯದ ಸುತ್ತುಮುತ್ತಲೂ ವಾಸಿಸುವವರು ಅಥವಾ ವ್ಯಾಪಾರಾದಿ ವೃತ್ತಿಗಳನ್ನು ನಡೆಸುತ್ತಿರುವವರು ವಿದ್ಯಾರ್ಥಿಗಳ ಮೇಲೂ ಗುರುಗಳ ಮೇಲೂ ಪ್ರತ್ಯಕ್ಷಾಪ್ರತ್ಯಕ್ಷವಾಗಿ ತಮ್ಮ ಪ್ರಭಾವವನ್ನು ಬೀರುತ್ತಾರೆ. ಈ ಪ್ರಭಾವವು ಪುಸ್ತಕ, ಪತ್ರಿಕೆ, ಪಾಠಪ್ರವಚನ, ಸರಕಾರಿ ನಿಯಂತ್ರಣ ಮತ್ತು ಸಿನೆಮಾಗಳ ಪ್ರಭಾವಕ್ಕೆ ಸರಿಸಮವಾದುದು.

'ವಾರಾಂಗನೇವ ನೃಪನೀತಿರನೇಕರೂಪಾ' ಎಂಬ ಗಾದೆ ಭಾರತದಾದ್ಯಂತವಾಗಿ ವ್ಯಾಪಿಸಿದೆ. ಆದುದರಿಂದ ಸಂಸ್ಥಾಪ್ರಶಾಸಕರಲ್ಲಿ ಉಕ್ತನೀತಿ ಪ್ರವೇಶ ಮಾಡದಿರುವುದು ಮೊದಲ ಆವಶ್ಯಕತೆ. ಅದು ಮಿಕ್ಕವರಲ್ಲಿ, ಗಣ್ಯವಾಗಿ, ಗುರುಶಿಷ್ಯರ ತಲೆಗಳನ್ನೂ ಹೋಗಬಾರದು. ಅವರಲ್ಲದೆ ಪಾಲಕಾದಿಗಳಲ್ಲಿಯೂ ಅದು ಹೊಕ್ಕರೂ ಅವರ ಆಚರಣೆಯಿಂದ ಶಿಕ್ಷಣಾಲಯಗಳನ್ನು ಮುಕ್ತಗೊಳಿಸಿಟ್ಟಿರಬೇಕು. ವಿದ್ಯಾಲಯಗಳಿಗೆ ವಿದ್ಯಾರ್ಥಿಗಳನ್ನು ಅಟ್ಟಿದ ಮೇಲೆ ಪಾಲಕರಲ್ಲಿ ಅನೇಕರು ನಿರ್ಲಕ್ಷ್ಯದಿಂದಿರುವುದೂ ಹಾನಿಕರ. ಅವರ ಅನಾಸ್ಥೆ ಅಥವಾ ಅನುಚಿತ ಆಸ್ಥೆ ವಿದ್ಯಾಲಯಗಳ ಸತ್ಪರಂಪರೆಗೆ ಮಾರಕವಾಗುವುದು. ಮದ್ಯ ಮಾಂಸ, ಜೂಜು ಮುಂತಾದವುಗಳ ಸ್ಥಳಗಳು ವಿದ್ಯಾಲಯಗಳಿಗೆ ಸಮೀಪದಲ್ಲಂತೂ ಇರಗೊಡಲೇ ಬಾರದು; ಸಿನೆಮ–ವೇಶ್ಯಾವಾಟಿಗಳಿಗೂ ಅದೇ ನಿಯಮ ಅನ್ವಯಿಸುತ್ತದೆ. ಲಂಚ, ವಂಚನೆ, ಒತ್ತಾಯ, ಅನೃತ, ಕಳವು ಕೊಲೆ, 'ದುರ್ಗೈಡು'ಗಳ ಮಾರಾಟ ಮುಂತಾದವು ವಿದ್ಯಾರ್ಥಿ ಪ್ರಪಂಚದೊಳಕ್ಕೆ ಹೋಗದಂತೆ ಸದಾ ಕ್ರಮಗಳನ್ನು ಕೈಕೊಳ್ಳುತ್ತಿರಬೇಕು. ಸಿದ್ದಾಪುರ ಈ ಅಂಶಗಳಲ್ಲಿ ಅದ್ವಿತೀಯವಾಗಿಲ್ಲ, ಆಗಬೇಕು. ಊರ ಮುಖಂಡರು ಮನಸ್ಸು ಮಾಡಿದರೆ ಇದು ಅತಿ ಸುಲಭಸಾಧ್ಯ.

ಸರ್ವಜಾತಿ ಮತಸ್ಥರೂ ಸಮಾನ ರಾಷ್ಟ್ರೀಯತೆಯನ್ನುಳ್ಳವರು. ರಾಷ್ಟ್ರೀಯತೆಯ ನೀತಿಗಳು ಸರ್ವರಿಂದಲೂ ಪಾಲನೀಯ. ಆದುದರಿಂದ ಜ್ಞಾನಾರ್ಜನೆ, ಶೀಲಾರ್ಜನೆಗಳಂತೆಯೇ ರಾಷ್ಟ್ರೀಯ ಸೇವಾನೀತಿಗಳನ್ನೂ ವಿದ್ಯಾರ್ಥಿಗಳು ಅಳವಡಿಸಿಕೊಳ್ಳುವಂತಹ ಸಾಹಿತ್ಯ, ಸಂಶೋಧನೆ, ಕಲೆ, ಸಂಗೀತ ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳ ಉನ್ನತ ಮಾದರಿಗಳನ್ನು ನೋಡಲು ಮತ್ತು ಉತ್ತಮ ತರಬೇತನ್ನು ಪಡೆಯಲು ಮಹಾಜನರೂ ಗುರುಜನರೂ ಪಾಲಕರೂ ಸಾರ್ವಜನಿಕರೂ ಸಹಕರಿಸಿ ಅವಕಾಶ ಮಾಡಿಕೊಡುವುದು ಕ್ರೀಡಾವ್ಯವಸ್ಥೆ ಮಾಡುವುದರಷ್ಟೇ ಮುಖ್ಯವಾದುದು. ಸಿದ್ದಾಪುರದ 'ಸಿ.ಆರ್.ಹಾಲ್' ಅಂಥ ಕೆಲ ಮಾದರಿಗಳನ್ನು ಕೆಲವು ಬಾರಿ ತೋರಿಸಿದೆ. ಮನುಷ್ಯ ವ್ಯಕ್ತಿತ್ವದಲ್ಲಿ ಚಾರಿತ್ರ, ಬುದ್ಧಿಮತ್ತೆ, ಮನಃಪ್ರಣಾಲಿ, ಭಾವನಾಬಲ, ಸಂಕಲ್ಪಶಕ್ತಿ, ಸದಾದರ್ಶೋನ್ಮುಖತೆ, ಮನಃಪ್ರವೃತ್ತಿ, ಶರೀರಾರೋಗ್ಯ, ಆರ್ಯಾನಾರ್ಯವಿವೇಕ, ಆರ್ಯವಿಧೇಯತೆ, ಯುಕ್ತಾಯುಕ್ತ ವಿವೇಚನಾ ಶಕ್ತಿ, ವಿನಯ, ಆರ್ಜವ, ಪಂಚಶೀಲ, ಪರೋಪಕಾರಪರತೆ ಎಂಬ ಹತ್ತೂ ಸೇರಿ ೧೮ ಲಕ್ಷಣಗಳಿರುವುದು ಸಮಗ್ರ. ಇಂಥ ಸಮಗ್ರ ವ್ಯಕ್ತಿತ್ವವುಳ್ಳವರನ್ನು ಸಿದ್ದಾಪುರದ ವಿದ್ಯಾಲಯಗಳು ತಯಾರಿಸುತ್ತಿರುವ ಪ್ರಮಾಣವು ಮಿಕ್ಕ ಊರುಗಳ ವಿದ್ಯಾಲಯಗಳನ್ನು ಈಗ ಮೀರಿಸಿಲ್ಲ.

## ಮಹಾತ್ಮಾಗಾಂಧಿ ಶತಾಬ್ದಿ ಕಾಲೇಜಿನ ಪಾತ್ರ :

ಕಾರ್ಲೈಲನು ಒಮ್ಮೆ ಇಂಗ್ಲಿಷ್ ಪಾರ್ಲಿಮೆಂಟಿನ ಕೆಲ ಸದಸ್ಯರನ್ನು ದರ್ಜಿ ಮಾಡಿದ ಜನರೆಂದ ಹಾಗೆ ಕನ್ನಡಿಗರೀಗ ದರ್ಜಿ ನಿರ್ಮಿಸಿದ, ಕ್ಷೌರಿಕ ನಿರ್ಮಿಸಿದ ಅಥವಾ ಸಿನಿಮ ನಿರ್ಮಿಸಿದ ಪುತ್ಥಳಿಗಳಾಗಬೇಕೇ? ಅರಿವೆಯ ಗುರುಗಳಿಗೆ ಅರಿವೆಯ ಶಿಷ್ಯರಿರುವುದು ಸಹಜ. ಅರಿವಿನ ಗುರುಗಳಿಗೋ? ಅರಿವಿಲ್ಲದ ಇರವು ಇರುವೆಯ ಇರವಿಗಿಂತ ಕೀಳು. ಸರಸ್ವತಿಯನ್ನು 'ಸರ್ವಶುಕ್ಲೆ'ಯೆಂದು ದಂಡಿ ಬಣ್ಣಿಸಿದಂತೆ ಶ್ವೇತಪುರೀಯ ಸಿದ್ದಾಪುರದಲ್ಲೂ ಆಕೆ ಸರ್ವಶುದ್ಧೆ, ಸರ್ವಸಮರ್ಥೆ, ಸರ್ವೈಕ್ಯ ಸಾಧಿಕೆ ಆಗಬೇಡವೇ?

ಇಲ್ಲೀಗ 'ಜಾತಿಕಲಹನಿರ್ಮೂಲನವನ್ನು' 'ಜಾತಿನಿರ್ಮೂಲನ' ಎಂದು ಹೇಳುವವರ ರಾಜನೀತಿ ರಾಷ್ಟ್ರಮಾರಕ; 'ದಲಿತೋದ್ಧಾರವನ್ನು' 'ಶ್ರೀಮನ್ನಿರ್ಮೂಲನ' ಎನ್ನುವ ರಾಷ್ಟ್ರಧೋರಣೆ ರಾಷ್ಟ್ರಘಾತಕ. ಈ ಅಂಶವು ಗಾಂಧಿಯವರ ಸ್ಮರಣೆಗೆ ಮೀಸಲಾದ ವಿದ್ಯಾಪೀಠಕ್ಕೆ ಗೊತ್ತಿರಬೇಕು. ಜೂಜು, ಲಾಟರಿ, ಕುದುರೆರೇಸು, ಕುಡಿತ, ಲಂಚ, ವಿಳಂಬ ಅನ್ಯಾಯ, ಅಪಸಂಘಟನೆಗಳು ವಿನಾಶದೇವತೆಯ ಅಷ್ಟಮೂರ್ತಿಗಳು. ಈ ಎಂಟನ್ನು ಹುಟ್ಟಡಗಿಸುವ ಸಿದ್ದಾಪುರವು ದಿಲ್ಲಿಯವರೆಗೂ ಹೋಗಲು ಮತ್ತು ಅದರಲ್ಲಿ ಜಯಶಾಲಿಯಾಗಲು ಮಹಾತ್ಮಗಾಂಧಿ ಶತಾಬ್ದಿಯ ಕಾಲೇಜಿನ ವಿದ್ವದ್ರತ್ನಗಳು ಆಧಾರ. ಪೂಜ್ಯಪೂಜಾವ್ಯತಿಕ್ರಮವು ಊರಿನ, ರಾಜ್ಯದ, ರಾಷ್ಟ್ರದ ಅಧೋಗತಿಗೆ ಬಲವಾದ ಕಾರಣ. ಅದು ಉಕ್ತ ಅಷ್ಟಮೂರ್ತಿಗಳ ಆರಾಧಕರಿಂದಲೇ ಆಗುವುದು.

'ಮೈನಾರಿಟಿ'ಗಳಿದ್ದಲ್ಲಿ ಪ್ರಜಾಪ್ರಭುತ್ವವಿಲ್ಲ ಎಂಬುದೂ ವಿಮರ್ಶನೀಯ, ಮನನೀಯ–ಗಾಂಧಿಯವರಲ್ಲಿ ನಂಬಿಕೆ ಇದ್ದ ವಿದ್ಯಾರ್ಥಿಗಳಿಗೂ ಪಾಲಕರಿಗೂ ವ್ಯವಸ್ಥಾಪಕರಿಗೂ ಜನಸಾಮಾನ್ಯರಿಗೂ! Reservation is preservation of backwardness ಸ್ಥಾನ ಬಲಿದಾನವು ಪತಿತತ್ವದ ಸ್ಥಿರೀಕರಣಕ್ಕೆ ಕಾರಣ ಎಂಬುದು ಉಚ್ಚ ಶಿಕ್ಷಿತರಿಗೆ ಗೊತ್ತಾಗಬೇಕಾದದ್ದು! ಉಚ್ಚ ಶಿಕ್ಷಿತರು ನಮ್ಮನ್ನು ಆಳುತ್ತಿದ್ದಾರೆಯೇ?

ಪರದೇಶೀಯವಾದ ವೈಲಾಸಿಕ ದಂಭಾಚಾರದ ಕಲ್ಪನೆ, ವಿಚಾರ, ಮಾತು, ಕಾರ್ಯಕ್ರಮ, ಉಪಚಾರ, ತತ್ವವಿಶ್ಲೇಷಣೆ, ಸುಧಾರಣ ಯೋಜನೆ, ಆತ್ಮಜ್ಞಾನಗಳು ಅಷ್ಟಮದಗಳಷ್ಟು ಶತ್ರುಗಳು–ಎಂಬುದನ್ನರಿತ ಸ್ನಾತಕರೇ ನಿಜವಾದ ಸ್ನಾತಕರು, ಸರಿಯಾದ ವೈಜ್ಞಾನಿಕರು, ನ್ಯಾಯವಾದ ಶಾಸ್ತ್ರಜ್ಞರು ಎನ್ನಿಸಿಕೊಳ್ಳಲು ಭಾರತದಲ್ಲಿ ಅರ್ಹರು. ೧೯೬೯ರಿಂದ ಈವರೆಗೆ ೧೧ ವರ್ಷಗಳನ್ನು ಕಳೆದ ಕಾಲೇಜು ಉಚ್ಚ ನೀಚ ಭಾವಗಳನ್ನು ವಿವೇಚಿಸಬಲ್ಲ ಸಮರ್ಥ ನಾಗರಿಕರನ್ನು ತಯಾರು ಮಾಡಿಬಿಡಲು ಹಿಂದಾಗಲಾರದು. ಆಗಲೇ ಅದರ ಸಂಸ್ಥಾಪಕರಾದ ವ್ಯವಸ್ಥಾಪಕರಿಗೂ, ಗುರುವರ್ಯರಿಗೂ, ಪೋಷಕ–ಪಾಲಕರಿಗೂ , ದಾನಿಗಳಿಗೂ, ಅಭಿಮಾನಿಗಳಿಗೂ, ಹಳೆಯ ವಿದ್ಯಾರ್ಥಿಗಳಿಗೂ ತೃಪ್ತಿಯುಂಟಾದೀತು. ಸಹಕಾರಿ ಶಿಕ್ಷಣ ಪ್ರಸಾರಕ ಸಮಿತಿಗೆ ಪರಸ್ಪರ ಸಹಕಾರ ಭಾವನೆಯನ್ನು ತಾಲೂಕಿನಲ್ಲಿ ಕಾಲೇಜಿನ ಮೂಲಕ ಸ್ಥಿರ ಪಡಿಸಲು ಮತ್ತು ಆ ಮೂಲಕ ತಾಲೂಕಿನಲ್ಲಿ ಸರ್ವೋದಯ–ಅಂತೋದಯಗಳನ್ನು ಸಾಧಿಸಲು ಸಾಧ್ಯವಾಗದಿದ್ದರೆ ಇನ್ನಾವ ಸಮಿತಿಯಿಂದ ಸಾಧ್ಯವಾದೀತು? ಇಂದಿನ 'ದೇಶೀಯ' ಉಚ್ಚ ಶಿಕ್ಷಣವು ದೇಶದಲ್ಲಿ ನಿಜವಾಗಿ ದೇಶೀಯವೂ ಉಪಯುಕ್ತವೂ ವಿಜ್ಞಾನ ಶುದ್ಧವೂ ಆಗಿಲ್ಲದಿರುವಾಗ ಮಹಾತ್ಮ ಗಾಂಧಿ ಕಾಲೇಜು ಹಾಗೆ ಆಗುವಂತೆ ಮಾಡಿ ದೇಶಕ್ಕೇ ಒಂದು ಮಾದರಿಯನ್ನು ಹಾಕಿಕೊಡಲು ಸಮರ್ಥವಾಗಲಿ–ಎಂದು ದೇಶಾಭಿಮಾನಿ ದೇವತೆಯಾದ ಕಾಶೀವಿಶ್ವನಾಥನಲ್ಲಿ ಹೃತ್ಪೂರ್ವಕವಾಗಿ ಪ್ರಾರ್ಥಿಸುತ್ತೇನೆ.

**ಪ್ರಸನ್ನಾಃ ಪ್ರಭವಃ ಸಂತು ಮುಕ್ತಹಸ್ತಾ ಧನೇಶ್ವರಾಃ ।**
**ಅರಿಕ್ತಾ ಗುರುವಃ ಸಂತು ಶಿಷ್ಯಾ ಭವ್ಯ ಧುರಂಧರಾಃ ॥**
**ದೀನಾನಾಂ ಚ ಸಮುತ್ಥಾನೇ ಕುರ್ಯುರ್ಯತ್ನಂ ದಿನೇ ದಿನೇ ।**
**ವಿದ್ಯಾವಿನಯ ಸಂಪನ್ನಾ ಧೀರೋದಾತ್ತ ಗುಣಾನ್ವಿತಾಃ ॥**
**ನಿತ್ಯಧರ್ಮಾವಿರೋಧೇನ ಧರ್ಮಂ ವಿದ್ಯಾಲಯಾರ್ಜಿತಂ ।**
**ಚರಂತು ಚ್ಛಾತ್ರವರ್ಗಾಶ್ಚ ಸಿದ್ದಾಪುರ ಸಮುದ್ಭವಾಃ ॥**
**ವರ್ಧೇತ ದಾನೌದಾರ್ಯೇಣ ಶ್ರೀಮತ್ತಾಂ ಧರ್ಮದರ್ಶಿನಾಂ ।**
**ವಿದ್ಯಾಪೀಠಂ ಭವೇತ್ ಖ್ಯಾತಂ ಸಭಾಹಿತವಿಭೂಷಿತಂ ॥**



# ೯. ಭಾರತದ ಗ್ರಂಥಾಲಯಗಳ ಇತಿಹಾಸ

ಭಾರತದ ಪವಿತ್ರ ಗ್ರಂಥಗಳನ್ನು ನೆನಪಿಟ್ಟುಕೊಳ್ಳಲು ಅನುಕೂಲವಾಗುವಂತೆ ಕ್ರಿ.ಪೂರ್ವ ೪೦೦೦ ವರ್ಷಗಳ ಹಿಂದೆ ಗ್ರಂಥಾಲಯಗಳನ್ನು ಸ್ಥಾಪಿಸಿ ನಡೆಯಿಸಿಕೊಂಡು ಹೋಗುವ ಬಳಕೆ ಇತ್ತೆಂದು ಸಂಶೋಧಕರು ಅಭಿಪ್ರಾಯ ಪಡುತ್ತಾರೆ. ವೈದಿಕ ಯುಗದಲ್ಲಿ(ಕ್ರಿ.ಪೂ.೨೦೦೦-೫೦೦೦ ಎಂದು ಅಂದಾಜು) ಚಲಿಸುವ ಗ್ರಂಥಾಲಯಗಳಿದ್ದವು. ಬೌದ್ಧ ಯುಗದಲ್ಲಿಯೂ ಭಾರತದಲ್ಲಿ ಗುರುಕುಲಗಳೂ ಆಶ್ರಮಗಳೂ ಗ್ರಂಥಾಲಯಗಳಾಗಿದ್ದವು.

ಆಧುನಿಕ ಅರ್ಥದ ಗ್ರಂಥಾಲಯದ ರಚನೆ ಆರಂಭವಾದದ್ದು ಬೌದ್ಧಯುಗದಲ್ಲಿ(ಕ್ರಿ.ಪೂ.೬೦೦-ಕ್ರಿ.ಶ.೫೦೮). ಲಿಪಿಜ್ಞಾನವು ಅನಾದಿಯಿಂದಲೂ ಇತ್ತು. ಈಗ ಭಾರತದಲ್ಲಿರುವ ಸರ್ವಲಿಪಿಗಳು ಬ್ರಾಹ್ಮೀಜನ್ಯವೆನ್ನಲಾಗಿದೆ. ಅಂದು ಗ್ರಂಥಾಲಯವನ್ನು 'ಸರಸ್ವತೀ ಭಂಡಾರ(ಭಾಂಡಾಗಾರ)' ಎಂದು ಕರೆಯುತ್ತಿದ್ದರು. ದೇವಾಲಯ, ಅರಮನೆ ಮತ್ತು ಶ್ರೀಮಂತ ಸೌಧಗಳಲ್ಲಿ ಸರ್ವದಾ ಬಳಕೆಗಾಗಿ ಅವುಗಳನ್ನು ಇಟ್ಟು ನಡೆಯಿಸುವ ರೂಢಿ ಇತ್ತು.

ರಾವಲ್‌ಪಿಂಡಿಗೆ ೨೦ ಮೈಲು ಪಶ್ಚಿಮದಲ್ಲಿ ತಕ್ಷಶಿಲೆ ಎಂಬ ವಿಶ್ವವಿದ್ಯಾನಿಲಯವಿತ್ತು. (ಕ್ರಿ.ಪೂ.೬೦೦) ವಾರಣಾಸಿ, ರಾಜಗೃಹ, ಮಿಥಿಲೆ, ಉಜ್ಜಯಿನಿ ಮುಂತಾದ ದೂರ-ದೂರದ ನಗರಗಳಿಂದ ವಿದ್ಯಾರ್ಥಿಗಳು ತಮ್ಮ ಸ್ನಾತಕೋತ್ತರ ಅಭ್ಯಾಸಕ್ಕಾಗಿ ಅಲ್ಲಿಗೆ ಹೋಗುತ್ತಿದ್ದರು. ವೇದ, ವ್ಯಾಕರಣ, ಅಷ್ಟಾದಶ ಶಿಲ್ಪ ಮುಂತಾದ ಶಾಸ್ತ್ರಗಳನ್ನು ಅಲ್ಲಿ ಕಲಿಸಲಾಗುತ್ತಿತ್ತು. ಅವುಗಳಿಗೆ ಸಂಬಂಧಿಸಿದ ಗ್ರಂಥಗಳೂ, ಹಸ್ತಪ್ರತಿಗಳೂ ಅದರ ಗ್ರಂಥಾಲಯದಲ್ಲಿ ಯಥೇಷ್ಟವಾಗಿದ್ದವು. ಕ್ರಿ.ಶ.೨೮೦ರವರೆಗೆ ತಕ್ಷಶಿಲೆಯ ಘಟಿಕಾಸ್ಥಾನವು ಜೀವಂತವಾಗಿತ್ತು.

ನಲಂದ, ವಲಭಿ, ವಿಕ್ರಮಶಿಲೆ, ಜಗದ್ದಲ, ಓದಂತಪುರಿಗಳಲ್ಲಿದ್ದ ಬೌದ್ಧ ವಿಹಾರಗಳು ಗ್ರಂಥಾಲಯಗಳಿಗೆ ಪ್ರಖ್ಯಾತವಾಗಿದ್ದವು. ನಲಂದ ಘಟಿಕಾಸ್ಥಾನವು ಪಾಟ್ನದಿಂದ ೪೦ ಮೈಲು ದಕ್ಷಿಣದಲ್ಲಿತ್ತು.

ಕಾಂಚೀ ಪಟ್ಟಣವೂ ಅನಂತಶಯನವೂ ಪ್ರಾಚೀನ ಘಟಿಕಾಸ್ಥಾನಗಳಾಗಿದ್ದವು. ಕಾಶಿಯನ್ನುಳಿದರೆ ದಾಕ್ಷಿಣಾತ್ಯರಿಗೆ ಅವು ದೊಡ್ಡ ವಿದ್ಯಾಕೇಂದ್ರಗಳಾಗಿದ್ದವು. ಗ್ರಂಥಾಲಯವಿಲ್ಲದ ವಿದ್ಯಾಪೀಠ ಭಾರತದಲ್ಲಿ ಇರಲಿಲ್ಲ. ಘಟಿಕಾಸ್ಥಾನಗಳು ದೊಡ್ಡ ವಿಶ್ವವಿದ್ಯಾನಿಲಯಗಳು; ಅಗ್ರಹಾರಗಳು ಚಿಕ್ಕ ವಿಶ್ವವಿದ್ಯಾನಿಲಯಗಳು.

ಫಾಹೀನ್ ಮತ್ತು ಹ್ಯೂನ್‌ತ್ಸಾಂಗ್‌ರೆಂಬ ಚೀನಾ ದೇಶದ ಯಾತ್ರಿಕರು ನಲಂದದಲ್ಲಿ ಅಭ್ಯಾಸ ಮಾಡಿದರು. ಇತ್ಸಿಂಗನು ೧೦ ವರ್ಷ ಅಲ್ಲಿ ಅಧ್ಯಯನ ಮಾಡಿದನು. ಅದು ಕ್ರಿ.ಶ.೬೭೫–೬೮೫ರ ನಡುವಿನ ಅವಧಿ. ೫೬ ವಿದೇಶೀಯ ವಿದ್ವಾಂಸರು ಅಲ್ಲಿಗೆ ಸಂದರ್ಶನ ಕೊಟ್ಟಿದ್ದರು. ಮತ್ತು ಅಲ್ಲಿಂದ ಜ್ಞಾನಸಂಗ್ರಹ ಮಾಡಿಕೊಂಡು ಹೋಗಿದ್ದರು ಎಂಬುದು ಇತ್ಸಿಂಗ್‌ನ ವರದಿಯಿಂದ ಗೊತ್ತಾಗುತ್ತದೆ. ನಲಂದದ ಗ್ರಂಥಾಲಯವು ಸಮೃದ್ಧವಾಗಿತ್ತು. ಅದಕ್ಕೆ ಮೂರು ಕಟ್ಟಡಗಳಿದ್ದವು. ಅವುಗಳ ಹೆಸರುಗಳು ೧) ರತ್ನಸಾಗರ ೨) ರತ್ನೋದಧಿ ಮತ್ತು ೩) ರತ್ನರಂಜಕ. ಮೊದಲನೆಯದು ೯ ನೆಲೆಗಳ ಕಟ್ಟಡ. ಅದರಲ್ಲಿ ಪ್ರಜ್ಞಾಪಾರಮಿತೆ ಸೂತ್ರವೇ ಮೊದಲಾದ ಗಣ್ಯ ಧರ್ಮಗ್ರಂಥಗಳಿದ್ದವು. ತಾಂತ್ರಿಕ ಕೃತಿಗಳನ್ನೂ ಅದರಲ್ಲೇ ಇಟ್ಟಿದ್ದರು. ಗ್ರಂಥಾಲಯದ ಆಡಳಿತಗಾರನಿಗೆ ವಿಷಯಾನುಸಾರವಾಗಿ ಗ್ರಂಥಗಳನ್ನು ವರ್ಗೀಕರಿಸಿ ಇಡುವ ಪದ್ಧತಿ ಗೊತ್ತಿತ್ತು. ನಲಂದ ಮಠವು ೫ ರಿಂದ ೧೨ನೆಯ ಶತಮಾನದವರೆಗೆ ಊರ್ಜಿತವಾಗಿತ್ತು. ಧರ್ಮಪಾಲ, ಚಂದ್ರಗೋಮಿ ಮತ್ತು ಶಾಂತರಕ್ಷಿತ ಎಂಬ ವಿದ್ವಾಂಸರು ನಲಂದ ಮಹಾವಿಹಾರದ ಸವಿನೆನಪನ್ನು ಉಳಿಸಿದ್ದರೆ. ಯಜ್ಞವೊಂದರ ಬೆಂಕಿಯಿಂದ 'ರತ್ನೋದಧಿ' ಸುಟ್ಟುಹೋಯಿತೆಂದು ತಿಳಿದು ಬರುತ್ತದೆ.

ವಲಭಿಯ ಮಠವು ನಲಂದ ಮಠದೊಡನೆ ಪೈಪೋಟಿ ನಡೆಸುತ್ತಿತ್ತು. ಕಾಠೇವಾಡದ ವಾಲದ ಸನಿಹದಲ್ಲದು ಸ್ಥಾಪಿತವಾಗಿತ್ತು. ವಾಲವು ಮೈತ್ರಕ ದೊರೆಗಳ ರಾಜಧಾನಿಯಾಗಿತ್ತು. ಧರ್ಮೋತ್ತರ ವಿಷಯಗಳನ್ನೂ ಕಲಿಸುತ್ತಿದ್ದ ವಾಲಭಿ ವಿಶ್ವವಿದ್ಯಾನಿಲಯಕ್ಕೆ ಅವರು ಗ್ರ್ಯಾಂಟುಗಳನ್ನು ಕೊಡುತ್ತಿದ್ದರು. ಕ್ರಿ.ಶ.೭೭೫ರವರೆಗೆ ಅದು ನಡೆಯುತ್ತಿತ್ತು. ಅನಂತರ ಅರಬರ ದಾಳಿಯಿಂದ ಅದು ನಾಶವಾಯಿತು. ಆದರೆ ಮತ್ತೆ ಅದು ಪುನಾರಚಿತವಾಗಿ ೧೨ನೆಯ ಶತಮಾನದವರೆಗೂ ಮೊದಲಿನಂತೆಯೇ ಪ್ರಸಿದ್ಧವಾಗಿ ವಿದ್ಯಾದಾನ ಮಾಡುತ್ತಿತ್ತು.

೮ನೆಯ ಶತಮಾನದಲ್ಲಿದ್ದ ಧರ್ಮಪಾಲ ದೊರೆಯು ವಿಕ್ರಮಶಿಲಾ ವಿಶ್ವವಿದ್ಯಾನಿಲಯವನ್ನು ಸಂಸ್ಥಾಪಿಸಿದನು. ೧೩ನೆಯ ಶತಮಾನದವರೆಗೂ ಅವನ ವಂಶದವರು ಅದನ್ನು ಪೋಷಿಸಿಕೊಂಡು ಬಂದರು. ಅದಕ್ಕೆ ತಕ್ಕ ಗ್ರಂಥಾಲಯವಿತ್ತು. ೮೦೦೦ ವಿದ್ವತ್ ಸಂನ್ಯಾಸಿಗಳು (೧೨ನೆಯ ಶತಮಾನದಲ್ಲಿ) ಅಲ್ಲಿ ಅಭ್ಯಾಸ ನಿರತರಾಗಿದ್ದರು. ೧೨೦೩ರಲ್ಲಿ ಭಕ್ತಿಯರ್ ಖಿಲ್ಜಿಯು ಅದನ್ನು ನಾಶಮಾಡಿದನು. ಅಲ್ಲಿದ್ದ ಬೌದ್ಧ ಭಿಕ್ಷುಗಳೆಲ್ಲರನ್ನೂ ಕೊಲೆಮಾಡಲಾಯಿತು. ಹಿಂದೂ ಧರ್ಮದ ಗ್ರಂಥಗಳೂ ಅಲ್ಲಿಯ ಗ್ರಂಥಾಲಯದಲ್ಲಿದ್ದವು; ಅವುಗಳನ್ನೂ ಆಗ ನಾಶಗೊಳಿಸಲಾಯಿತು. ಶಾಕ್ಯ ಶ್ರೀ ಭದ್ರನು ೧೦೮೪–೧೧೩೦ರ ನಡುವೆ ರಾಮವಟಿ ಎಂಬ ನಗರವನ್ನು ಸ್ಥಾಪಿಸಿ ಅದರಲ್ಲಿ ಜಗದ್ದಲವೆಂಬ ವಿಹಾರವನ್ನು ಗ್ರಂಥಾಲಯ ಸಮೇತವಾಗಿ ಪ್ರತಿಷ್ಠಾಪಿಸಿದನು. ಅದು ಸುಮಾರು ೧೦೦ ವರ್ಷ ಬಾಳಿತು. ಅದನ್ನೂ ಮುಸಲ್ಮಾನರು ೧೨೦೩ರಲ್ಲಿ ನಾಶ ಮಾಡಿದರು.

ಅಭಯಕರ ಗುಪ್ತೆಯ ತೀರದಲ್ಲಿ ಓದಂತಪುರಿಯೆಂಬ ವಿಶ್ವವಿದ್ಯಾನಿಲಯವಿತ್ತು; ಅದರಲ್ಲಿ ೧೦೦೦ ಸಂನ್ಯಾಸಿಗಳು ಓದುತ್ತಿದ್ದರು. ಬಂಗಾಳದ ಪಾಲದೊರೆಗಳು ಅದನ್ನು ವಿಸ್ತರಿಸಿದರು. ಅದರಲ್ಲಿ ಹಿಂದು–ಬೌದ್ಧ ಧರ್ಮಗಳೆರಡರ ಶಾಸ್ತ್ರ ಗ್ರಂಥಗಳೂ ಇದ್ದವು. ಈ ವಿಶ್ವವಿದ್ಯಾನಿಲಯವನ್ನೇ ಮಾದರಿಯನ್ನಾಗಿ ತೆಗೆದುಕೊಂಡು ತಿಬೇಟಿನಲ್ಲಿ ಕ್ರಿ.ಶ.೭೪೯ರಲ್ಲಿ ಬೌದ್ಧಮಠದ ವಿಶ್ವವಿದ್ಯಾನಿಯವೊಂದನ್ನು ಅಲ್ಲಿಯ ರಾಜನಾದ ಖ್ರಿಸ್ರೋೕನನು ಕಟ್ಟಿಸಿದನು.

ಕಾಶ್ಮೀರದ ರಾಜಧಾನಿಯು ಹತ್ತಿರದ ಜಾಂಯೇಂದ್ರ ಮಠವು ಗ್ರಂಥಾಲಯವನ್ನಿಟ್ಟುಕೊಂಡಿತ್ತು. ಹಾಗೇ ಪಂಜಾಬಿನಲ್ಲಿಯ ಚಿನಪತಿ ಜಲಂದರ ಮಠಗಳಿದ್ದವು. ಉತ್ತರಪ್ರದೇಶದ ಬಿಜನೌರ್ ಜಿಲ್ಲೆಯಲ್ಲಿ ಮತಿಪುರವೆಂಬ ಮಠವಿತ್ತು. ಕನೌಜಿನ ಹತ್ತಿರ ಭದ್ರಮಠವಿತ್ತು. ಆಂಧ್ರಪ್ರಾಂತದಲ್ಲಿ ಹೀರಯಾನ–ಅಮರಾವತಿಗಳೆಂಬ ಗ್ರಂಥಾಲಯೋಪೇತವಾದ ಮಠಗಳಿದ್ದವು. ಬಿಜಾಪುರದ ಸಲ್ತಗಿಯಲ್ಲಿ ಸುಮಾರು ೧೦–೧೧ನೆಯ ಶತಮಾನಗಳಲ್ಲಿ ಸುಪ್ರಸಿದ್ಧ ಸಂಸ್ಕೃತ ಕಾಲೇಜೊಂದು ಶಿಕ್ಷಣ ಸೌಕರ್ಯಗಳಿಗೆ ಹೆಸರು ಪಡೆದಿತ್ತು. ದಕ್ಷಿಣ ಅರ್ಕಾಟನಲ್ಲಿ ಎನ್ನಾಯಿರಂ ಎಂಬ ವೇದವಿದ್ಯಾಪೀಠ ಕೂಡ ಹಾಗೇ ಗ್ರಂಥಾಲಯಾದಿ ಸೌಕರ್ಯಗಳಿಗೆ ಹೆಸರಾಗಿತ್ತು.

ವಾಡಿಯ ಸಮೀಪದಲ್ಲಿ ಕ್ರಿ.ಶ.೧೦೫೮ರಲ್ಲಿ ಚಾಲುಕ್ಯರಾಯ ನಾರಾಯಣ ಮಹಾರಾಜನ ಮಂತ್ರಿಯಾಗಿದ್ದ ಮಧುಸೂದನನು ಘಟಿಕಾಶಾಲೆ ಎಂಬ ಗುರುಕುಲವನ್ನು(Residential College) ಸ್ಥಾಪಿಸಿದನು. ಅದರಲ್ಲಿ ೨೦೦ ವಿದ್ವಾಂಸರು ವೇದಗಳನ್ನೂ, ೫೨ ವಿದ್ವಾಂಸರು ಶಾಸ್ತ್ರಗಳನ್ನೂ ಕಲಿಯುತ್ತಿದ್ದರು. ಮೂರು ಜನ ವೇದಾಚಾರ್ಯರು ಅದನ್ನು ನಡೆಯಿಸುತ್ತಿದ್ದರು. ಅವರಿಗೆ ಮೂವರು ಶಾಸ್ತ್ರಾಚಾರ್ಯರೂ, ೬ ಜನ ಗ್ರಂಥ ಭಂಡಾರಿಗಳೂ(ಸರಸ್ವತೀ ಭಂಡಾರಿಗಳು) ನೆರವಿಗರಾಗಿದ್ದರು. ಗ್ರಂಥಭಂಡಾರಿಯು ಆಚಾರ್ಯ (Professor) ಮಟ್ಟದವನಾಗಿರಬೇಕಾಗಿತ್ತು. ೧೧, ೧೨, ೧೩ನೆಯ ಶತಮಾನಗಳಲ್ಲಿ ತಿರುಮಕೂಡಲು, ತಿರುವಣ್ಣೂರು, ಮತ್ತು ಮಲ್ಯಪುರಗಳಲ್ಲಿ ಅಂಥ ದೇವಸ್ಥಾನದ ಕಾಲೇಜುಗಳಿದ್ದವೆಂಬುದು ಶಾಸನೋಕ್ತ. ಮುಸಲ್ಮಾನ ದೊರೆಗಳು ಬಂದು ನಾಶ ಮಾಡುವವರೆಗೆ ಅಂಥ ದೇವಾಲಯ ಗ್ರಂಥ ಭಂಡಾರಗಳು ಉತ್ತರಭಾರತದಲ್ಲಿಯೂ ಅನೇಕ ಕಡೆಗಳಲ್ಲಿದ್ದವು.

ಧಾರಾನಗರದ ಭೋಜರಾಜನ ಗ್ರಂಥಭಂಡಾರವು ಬಹಳ ಪ್ರಸಿದ್ಧವಾಗಿತ್ತು. ಅದು ಸರಸ್ವತೀ ದೇವಾಲಯದಲ್ಲಿತ್ತು. ಕಾಂಚಿಯಲ್ಲಿಯೂ ತಂಜಾವೂರು ಅರಮನೆಯಲ್ಲಿಯೂ ಶಾಂತಿನಾಥ ಜೈನಭಂಡಾರ, ಮತ್ತು ಸರಸ್ವತೀ ಭಂಡಾರಗಳಿವೆ. ಅವುಗಳಲ್ಲಿಯ ಹಸ್ತಪ್ರತಿಗಳ ಸಂಖ್ಯೆ ಅನುಕ್ರಮವಾಗಿ ೩,೦೦೦ ಮತ್ತು ೧೨,೦೦೦. ಸಂಸ್ಕೃತ–ಪ್ರಾಕೃತ ಜೈನಗ್ರಂಥಗಳಿಗೆ ರಾಜಸ್ಥಾನದಲ್ಲಿಯ ಜೇಸಲ್‌ಮೀರು ಮತ್ತು ಪಾಟಣ ಭಂಡಾರಗಳು ಹೆಸರಾಗಿದ್ದವು.

ಸರಕಾರಗಳೂ, ಶ್ರೀಮಂತರೂ ಅಂದು ಲೆಕ್ಕಿಗರಿಂದ ಪವಿತ್ರ ಗ್ರಂಥಗಳನ್ನು ದುಡ್ಡು ಕೊಟ್ಟು ನಕಲು ಮಾಡಿಸುತ್ತಿದ್ದರು. ಹಸ್ತಪ್ರತಿಗಳನ್ನೂ ಹಾಗೆ ಮಾಡಿಸಿ ಅವರು ದೇವಾಲಯದ ಗ್ರಂಥಭಂಡಾರಗಳಿಗೆ ದಾನವಾಗಿ ಕೊಡುತ್ತಿದ್ದರು. ಕ್ರಿ.ಶ.೬೨೯ರಲ್ಲಿದ್ದ ಸಂಸ್ಕೃತ ಕವಿಬಾಣನು ತನ್ನದೇ ಅದ ಗ್ರಂಥಾಲಯ ವೊಂದನ್ನಿಟ್ಟುಕೊಂಡಿದ್ದನು. ಅಲ್ಲಿಗೆ ಅನೇಕರು ಓದಲು ಹೋಗುತ್ತಿದ್ದರು.

ಹ್ಯೂನ್‌ತ್ಸ್ಯಾಂಗನು ಭಾರತದಿಂದ ಚೀನಕ್ಕೆ ೨೦ ಕುದುರೆಗಳ ಮೇಲೆ ೬೫೭ ಗ್ರಂಥಗಳನ್ನು ಒಯ್ದನು. ಈಸ್ಟ್‌ಇಂಡಿಯಾ ಕಂಪೆನಿಯ ರಾಜ್ಯಭಾರ ನಡೆಯುತ್ತಿದ್ದಾಗ ಅನೇಕ ಹಸ್ತಪ್ರತಿಗಳನ್ನು(ತಾಳೆಯೋಲೆ ಗ್ರಂಥಗಳನ್ನು) ಕೋಲ್‌ಬ್ರೂಕ್ ಮಹಾಶಯನು ಇಂಗ್ಲೆಂಡಿಗೆ ತೆಗೆದುಕೊಂಡು ಹೋದನು. ಬ್ರಿಟಿಷ್ ಮ್ಯೂಜಿಯಮ್ಮಿನಲ್ಲಿಯೂ, ಪ್ಯಾರಿಸ್ಸಿನ ಬಿಬ್ಲಿಯೋಥಿಕೆ ನ್ಯಾಷನೇಲೆಯಲ್ಲಿಯೂ ಅಂಥ ಎಷ್ಟೋ ಭಾರತೀಯ ಕೈಬರಹ ಗ್ರಂಥಗಳು ಈಗ ಸುರಕ್ಷಿತವಾಗಿ ಇವೆ.

ವಸ್ತುಪಾಲನು ೧೮ ಕೋಟಿ ರೂಪಾಯಿಗಳನ್ನು ತೆತ್ತು ೩ ಗ್ರಂಥಾಲಯಗಳನ್ನು ಸ್ಥಾಪಿಸಿದನು. ಅವುಗಳಲ್ಲಿ ಸಾಹಿತ್ಯದ ಅತ್ಯುತ್ತಮ ಕೃತಿಗಳಿದ್ದವು. ಮುಸಲ್ಮಾನ ದೊರೆಗಳ ರುಜು ಮತ್ತು ಮುದ್ರೆಗಳುಳ್ಳ ಕೆಲವು ಗ್ರಂಥಗಳೂ ಅವುಗಳಲ್ಲಿ ಕ್ರಯ ಕೊಟ್ಟು ಪಡೆದಂಥವುಗಳಾಗಿದ್ದವು. ಲಂಡನ್ನಿನಲ್ಲಿರುವ 'ಇಂಡಿಯಾ ಆಫೀಸ್ ಲೈಬ್ರೆರಿಯು' ಜಗತ್ತಿನ ಪೌರಸ್ತ್ಯ ಗ್ರಂಥಾಲಯಗಳಲ್ಲಿ ಅತ್ಯಂತ ಹೆಚ್ಚಿನದೆನ್ನಿಸಿದೆ. ಅದರಲ್ಲಿ ೨,೮೦,೦೦೦ ಮುದ್ರಿತ ಗ್ರಂಥಗಳೂ ಇಂಗ್ಲೆಂಡಿನ ಮತ್ತು ಇತರ ಪೌರಸ್ತ್ಯ ರಾಷ್ಟ್ರಗಳಾದ ಭಾರತ, ಪಾಕಿಸ್ತಾನ, ಬ್ರಹ್ಮದೇಶ, ಥೈಲೆಂಡ್, ಮಲಯ, ಸಿಂಹಳ, ತಿಬೆಟ್ ಮತ್ತು ನೇಪಾಳಗಳ ಭಾಷೆಗಳಲ್ಲಿ ಬರೆದ ಹಸ್ತಪ್ರತಿಯ ಗ್ರಂಥಗಳೂ ತುಂಬಿವೆ.

ಬಹಳ ಜನ ಮುಸಲ್ಮಾನ ದೊರೆಗಳು ಅನೇಕ ಗ್ರಂಥಾಲಯಗಳನ್ನು ಮಧ್ಯಯುಗದಲ್ಲಿ ಸುಟ್ಟರು; ಕೆಲವರು ಅವುಗಳಲ್ಲಿ ಕೆಲವುಗಳ ಪುನಾರಚನೆಗೆ ಸಹಾಯ ಮಾಡಿದರು. ಬಹಮನಿ ರಾಜ್ಯ ರಾಜಧಾನಿಯಾಗಿದ್ದ ಅಹಮದ್ ನಗರದಲ್ಲಿ ಅಂಥ ಪುನಾರಚಿತ ಗ್ರಂಥಾಲಯವಿತ್ತು.

ಆಗ್ರಪಟ್ಟಣದಲ್ಲಿ ಮೊಗಲ್ ದೊರೆ ಹುಮಾಯೂನನು ಲಾಲ್‌ಬೇಗನೆಂಬ ಗ್ರಂಥಾಲಯಾಧಿಕಾರಿಯ ಮೂಲಕ ದೊಡ್ಡ ಗ್ರಂಥಾಲಯವೊಂದನ್ನು ನಡೆಯಿಸುತ್ತಿದ್ದ. ಅಕ್ಬರನೂ ಗ್ರಂಥಾಲಯ ಪೋಷಕನಾಗಿದ್ದನು. ಅವನ ಕಾಲದಲ್ಲಿ ಫೈಜಿಯು ಗ್ರಂಥಾಲಯಾಧಿಕಾರಿಯಾಗಿದ್ದನು. ಔರಂಗಜೇಬನು 'ಫತ್ವಾ ಇ ಆಲಂಗೀರಿ' ಗ್ರಂಥಗಳನ್ನು ತನ್ನ ವಂಶಾನುಗತವಾದ ರಾಜಗ್ರಂಥಾಲಯದಲ್ಲಿಟ್ಟಿದ್ದನು.

ಮೈಸೂರು ಹುಲಿ ಟೀಪುಸುಲ್ತಾನನ ಗ್ರಂಥಾಲಯದಲ್ಲಿ ಯೂರೋಪೀಯ ಭಾಷೆಗಳಲ್ಲಿ ಬರೆದ ವಿವಿಧ ಗ್ರಂಥಗಳಿದ್ದವು. ಅವೆಲ್ಲವೂ ಈಗ 'ಇಂಡಿಯಾ ಆಫೀಸ್' ಗ್ರಂಥಾಲಯದಲ್ಲಿದೆ.

ದಿಲ್ಲಿಯ ಜಲಾಲುದ್ದೀನ್ ಖಿಲ್ಜಿಯು ದೊಡ್ಡ ಗ್ರಂಥಾಲಯವನ್ನು ಸ್ಥಾಪಿಸಿ ಅದನ್ನು ನಡೆಯಿಸಲು ಅಮೀರ್ ಖುಸ್ರುವನ್ನು ದೊಡ್ಡ ಸಂಬಳ ಕೊಟ್ಟು ನಿಯಮಿಸಿದನು. ರಾಜಸ್ಥಾನದಲ್ಲಿಯ ಅಂಬರದ ದೊರೆ ಸವಾಯಿ ಜಯಸಿಂಗನು ಪ್ರಸಿದ್ಧ ಗ್ರಂಥಾಲಯವೊಂದನ್ನು ಸಂಸ್ಥಾಪಿಸಿ ಪೋಷಿಸುತ್ತಿದ್ದನು. ಅದರ ಸಂಸ್ಥಾಪನೆಯ ಕಾಲ ಸುಮಾರು ಕ್ರಿ.ಶ.೧೭೨೪. ಅದರಲ್ಲಿ ಜಗತ್ತಿನ ನಾನಾ ಮೂಲೆಗಳಿಂದ ಸಂಗ್ರಹಿಸಿದ ಖಗೋಲಶಾಸ್ತ್ರ ಗ್ರಂಥಗಳಿದ್ದವು. ಜಯಸಿಂಗ ದೊರೆ ಸ್ವತಃ ಮಾಡಿದ ಖಗೋಲ ಶಾಸ್ತ್ರೀಯ ಸಂಶೋಧನಗಳೂ ಅಲ್ಲಿ ಗ್ರಂಥಸ್ಥವಾಗಿದ್ದವು. ಅವನು ದಿಲ್ಲಿ, ಜಯಪುರ, ಉಜ್ಜಯಿನಿ, ಕಾಶಿ ಮತ್ತು ಮಥುರೆಗಳಲ್ಲಿ ವೇದಶಾಲೆಗಳ್ನೂ ಕಟ್ಟಿಸಿದ್ದನು. ಆದರೆ ಆಮೇಲೆ ೧೮೦೩ರಲ್ಲಿ ಜಯಪುರದ ದೊರೆಯಾಗಿ ಬಂದ ಜಗತ್‌ಸಿಂಗನು ವೇಶ್ಯೆಯೊಬ್ಬಳನ್ನು ತನ್ನ ರಾಣಿಯನ್ನಾಗಿ ಮಾಡಿಕೊಂಡು ಅವಳಿಗೆ ಗ್ರಂಥಾಲಯವನ್ನು ದಾನವಾಗಿ ಕೊಟ್ಟನು. ಅವಳ ಬಂಧುಗಳು ಅಡ್ಡಾದುಡ್ಡಿಗೆ ಅದರಲ್ಲಿದ್ದ ಗ್ರಂಥಗಳನ್ನು ಮಾರಿದರು.

ಪಂಜಾಬಿನ ತೋಷಖಾನೆಯಲ್ಲಿ ಮಹಾರಾಜ ರಣಜಿತ್‌ಸಿಂಗನು 'ತ್ವರೀಖ್ ಇ ಶಿಖನ್' ಎಂಬ ಕೃತಿಯು ಕರ್ತನಾದ ಮುನಷಿ ಖುಶ್ವತ್ ರಾಯನನ್ನು ಗ್ರಂಥಾಲಯಾಧಿಕಾರಿಯನ್ನಾಗಿ ನಿಯಮಿಸಿ ಒಂದು ದೊಡ್ಡ ಗ್ರಂಥಾಲಯವನ್ನು ಸ್ಥಾಪಿಸಿ ನಡೆಯಿಸಿದನು.

ಹಳೆಯ ಗ್ರಂಥಾಲಯಗಳಲ್ಲಿ ಈಗಲೂ ಉಳಿದಿರುವ ಒಂದೇ ಒಂದೆಂದರೆ ೧೬ನೆಯ ಶತಮಾನದಲ್ಲಿ ಸ್ಥಾಪಿಸಿಲಾದ ತಂಜಾವೂರಿನ ಗ್ರಂಥಾಲಯ. ಅದರಲ್ಲಿ ದೇವನಾಗರಿ, ತೆಲುಗು, ಮಲೆಯಾಳಿ, ಬಂಗಾಳಿ, ಪಂಜಾಬಿ, ಕಾಶ್ಮೀರಿ ಮತ್ತು ಉಡಿಯ ಲಿಪಿಗಳಲ್ಲಿ ಬರೆದ ೨೦,೦೦೦ ಹಸ್ತಪ್ರತಿಗಳಿವೆ. ಅವುಗಳಲ್ಲಿ ೮೦೦೦ ಗ್ರಂಥಗಳು ತಾಳೆಯೋಲೆಯಲ್ಲಿ ಬರೆದಂಥವುಗಳು. ಬೊಂಬಾಯಿಯಲ್ಲಿಯ 'ರಾಯಲ್ ಏಷಿಯಾಟಿಕ್ ಸೊಸೈಟಿ'ಯ ಗ್ರಂಥಾಲಯದಲ್ಲಿ ೨೦೦೦ ಹಳೆಯ ಹಸ್ತಪ್ರತಿಗಳಿವೆ. ಅವುಗಳಲ್ಲಿ ಅಥರ್ವವೇದ, ಜೈನರ ಕಲ್ಪಸೂತ್ರ, ಮಹಾಭಾರತದ ಅರಣ್ಯಪರ್ವ, ಷೇಕ್ಸ್‌ಪಿಯರ್– ಡಾಂಟೇ ಕವಿಗಳ ಕೃತಿಗಳು ಸೇರಿವೆ. ಡಾಂಟೇ ಕೃತಿಯ ಹಸ್ತಪ್ರತಿ ೧೪ನೆಯ ಶತಮಾನದ್ದು; ಅಥರ್ವವೇದದ ಹಸ್ತಪ್ರತಿಯೂ ಬಹುಪುರಾತನ ಕಾಲದ್ದು. ಪಂಜಾಬಿನಲ್ಲಿಯ ಹೋಷಿಂಯಾರ್‌ಪುರದ ವಿಶ್ವೇಶ್ವರಾನಂದ ಸಂಶೋಧನಾಲಯದ ಗ್ರಂಥಾಲಯದಲ್ಲಿ(ಭೋಜ) ಭೂರ್ಜಪತ್ರದಲ್ಲಿ ಬರೆದ ಅನೇಕ ಪ್ರಾಚೀನ ಗ್ರಂಥಗಳಿವೆ.

ಹೀಗೆ ಗ್ರಂಥಾಲಯ ಅಥವಾ ಸರಸ್ವತೀ ಭಂಡಾರವು ಸಾವಿರಾರು ವರ್ಷಗಳಿಂದ ಭಾರತದ ವಿವಿಧ ವಿದ್ಯಾಕೇಂದ್ರಗಳಲ್ಲಿ ಇದ್ದವೆಂಬುದನ್ನು ಗ್ರಹಿಸಿದರೆ ಭಾರತೀಯ ನಾಗರಿಕತೆಯ ಜಿಗುಟುತನದ ಅರ್ಥವು ಸ್ಪಷ್ಟವಾಗುತ್ತದೆ. ಆದರೀಗ–

**'ಅಚ್ಚುಖಾನೆಗಳುಂಟು ವೆಚ್ಚಕ್ಕೆ ಹಣವುಂಟು**
**ಇಚ್ಚೆಯನ್ನರಿದು ಬರೆವಾತನಿರುವಾಗ**
**ಕಿಚ್ಚಿಕ್ಕು ಹಳೆಯ ಗ್ರಂಥಕ್ಕೆ'**

ಎಂಬಂತಹ ಪ್ರವೃತ್ತಿ ಅಲ್ಲಲ್ಲಿ ಕಂಡುಬರಲಾರಂಭಿಸಿದ್ದು, ಭಾರತೀಯತೆಯ ಸಾತತ್ಯಕ್ಕೆ(Continuity) ಭಂಗ ತರಬಹುದಾಗಿದೆ. ಪ್ರಾಚೀನತೆಯ ಅತ್ಯಾರಾಧನೆಯು ಅರ್ವಾಚೀನತೆಯ ಅತ್ಯಾರಾಧನೆಗೆಡೆಕೊಟ್ಟಿದೆ. ಕಾಲವು ನಿರ್ವಿಕಾರವಾದ ಕಾಲ್ಪನಿಕ ಪದಾರ್ಥ. ದೇಶದಂತೆ ಅದು ಸರ್ವಕ್ಕೂ ಆಶ್ರಯ. ಅದೆಂದೂ ಅಳತೆಗೆ ಸಾಧನವಾದ ಭೌತಿಕ ದ್ರವ್ಯದಂತೆ ವಿಕಾರ ಹೊಂದದು. ಆದುದರಿಂದ ಗ್ರಂಥ ಮೌಲ್ಯವನ್ನದು ಎಂದೂ ಬದಲಾಯಿಸಲಾರದು. ಜೀವನ–ಸಾಧನಗಳ ಬದಲಾವಣೆಗಳಿಗೆ ಕಾರಣವಾದ ಮಾನವ ಬುದ್ಧಿಯ ಬದಲಾವಣೆಗಳು ದೇಶೀಯ ಮತ್ತು ಕಾಲೀಯ ಎಂದು ಗೌಣಾರ್ಥದಲ್ಲಿ ವ್ಯವಹರಿಸಲ್ಪಡುತ್ತವೆ. ಅಂಥ ಬುದ್ಧಿ ಬದಲಾವಣೆಗಳನ್ನೂ ಮೀರಿದ ಮೌಲ್ಯ ಕೆಲವು ಗ್ರಂಥಗಳಿಗಿರುತ್ತದೆ. ಅವು ಸಾರ್ವಕಾಲಿಕ, ಸಾರ್ವದೇಶಿಕ ಎನ್ನಿಸಿ ಮಾನವ ಜಗತ್ತಿನ ಏಳಿಗೆಗೆ ಸಾಧನಗಳೆಂದು ಗೌರವಿಸಲ್ಪಡುತ್ತವೆ.

ಪುಸ್ತಕಗಳ ಸಂಖ್ಯಾಬಲವೊಂದರಿಂದಲೇ ಗ್ರಂಥಾಲಯವೊಂದರ ಯೋಗ್ಯತೆಯನ್ನು ಅಳೆಯಲು ಸಾಧ್ಯವಿಲ್ಲ; ಅವುಗಳಲ್ಲಿರುವ ಗ್ರಂಥಗಳ ವಿದ್ವತ್ತೆಯ ಮತ್ತು ರಸವತ್ತೆಯ ವಿವಿಧ ಮಟ್ಟಗಳ ಔಚಿತ್ಯದಿಂದ ಅವುಗಳ ಯೋಗ್ಯತೆಯನ್ನು ಅಳೆಯಬೇಕು. ಹಾಗೇ ಗ್ರಂಥಾಲಯದಲ್ಲಿ ಗ್ರಂಥಗಳನ್ನಿಡುವ ಕ್ರಮಗಳ ಬಗೆಗಿನ ಇಂದಿನ ಕಲ್ಪನೆಯೂ ಶಿಕ್ಷಣ ಕ್ರಮಗಳ ಬಗೆಗಿನ ಕಲ್ಪನೆಯಂತೆಯೇ ಅವಾಸ್ತವ ಅತಿಶಯದಿಂದ ಕೂಡಿರುವುದು ನಾಗರಿಕ ಸಮಾಜಕ್ಕೆ ಒಪ್ಪಿಗೆಯಾಗದು. ಕ್ರಮಗಳ ಯಾಂತ್ರಿಕತೆಗೆ ಸಲ್ಲದ ಪ್ರಾಧಾನ್ಯವಿತ್ತು ಗ್ರಂಥಾಲಯ ವ್ಯವಸ್ಥಾಪಕನ ಅನುಭವ–ಜಾಣ್ಮೆ–ಜ್ಞಾನ–ಆಸ್ಥೆಗಳಿಗೆ ಕಡಿಮೆ ಪ್ರಾಧಾನ್ಯವನ್ನಿಯುವುದು ತಪ್ಪು. ಇದಕ್ಕೆ ಈಗ ಜೀವಂತ ಉದಾಹರಣೆಗಳಿವೆ. ಅವುಗಳನ್ನು ಕಂಡೂ ಕಾಣದೆ ವಾದಿಸುವ ಪಂಡಿತರು, ವಿಮರ್ಶಬಾಹಿರರು. ಉಕ್ತ ಪ್ರಾಚೀನ ಗ್ರಂಥಾಲಯಗಳು ಚಿಕ್ಕವುಗಳಾಗಿದ್ದಿಲ್ಲ. ಆದರೆ ಅವುಗಳಿಗೆ 'ಡಿಪ್‌ಲಿಬ್ಬು'ಗಳನ್ನು ತಯಾರಿಸಿ ನಿಯಮಿಸುವ ಪದ್ಧತಿ ಇರಲಿಲ್ಲ. ಹಾಗಾದರೆ ಅವು ಇಂದಿನಷ್ಟು ಚೆನ್ನಾಗಿ ನಡೆಯುತ್ತಿದ್ದಿಲ್ಲವೆನ್ನಲು ಆಧಾರಗಳಿವೆಯೇ? ಇಲ್ಲ. ಪ್ರತಿಯೊಂದು ಕೆಲಸವನ್ನೂ ಶಾಸ್ತ್ರದ ಮಟ್ಟಕ್ಕೇರಿಸಿ, ವ್ಯವಹಾರತಃ ಅನನುಕೂಲ ಪರಿಣಾಮಕರವಾಗುವಂತೆ ನಡೆಯಿಸುವ ವಿಚಿತ್ರ ಪ್ರವೃತ್ತಿ ಭಾರತದಲ್ಲಿಂದು ಅಧಿಕೃತರಲ್ಲಿ ಹೆಚ್ಚಾಗುತ್ತ ಹೋಗಿದೆ. ಆದುದರಿಂದ ಗ್ರಂಥಾಲಯಗಳ ಯೋಗ್ಯತೆಯಂತೆಯೇ ವಿದ್ಯಾವಂತಿಕೆಯ ಯೋಗ್ಯತೆಯೂ ಇಳಿಮಟ್ಟದ್ದಾಗಲು ಶುರುವಾಗಿದೆ. ಈ 'ಪಾಮರ ಪಾಂಡಿತ್ಯ'ಕ್ಕಿಂತ ಹಿಂದಿನ ಶುದ್ಧ ಪಾಮರತೆ, ಶುದ್ಧಪಂಡಿತತೆಗಳು ದೇಶದ ಸಾಂಸ್ಕೃತಿಕ ಸಾಮಾಜಿಕ ಹಿತಗಳನ್ನು ಸಮರ್ಥವಾಗಿ ಸಾಧಿಸಿದ ಅವಧಿಮಾನಗಳು ಹೆಚ್ಚು ಗ್ರಾಹ್ಯ ಎಂದು ತೋರುತ್ತವೆ.

ದೊಡ್ಡ ಗ್ರಂಥಾಲಯಾಧಿಕಾರಿಗೆ ನಾಲ್ಕಾರು ಶಾಸ್ತ್ರಗಳನ್ನು ಚೆನ್ನಾಗಿ ಬಲ್ಲ ನುರಿತ ಪ್ರಾಧ್ಯಾಪಕನ ಯೋಗ್ಯತೆ ಇರುವುದು ಅಗತ್ಯವೆಂಬುದು ಹಿಂದಿನ ಉದಾಹರಣೆಯಿಂದ ಸ್ಪಷ್ಟವಾಗುತ್ತಿದೆ. ಈಗಲೂ ಅಂಥವರಿದ್ದ ಗ್ರಂಥಾಲಯಗಳು ಮಾತ್ರ ಚೆನ್ನಾಗಿ ನಡೆಯುತ್ತಿವೆ. ಯಾರೂ ಓದದಿರುವ ಪುಸ್ತಕಗಳ ಸಂಖ್ಯೆ ಅಧಿಕವಾಗಿರುವ ಗ್ರಂಥಾಲಯಗಳೂ ಅಸಾಂಸ್ಕೃತಿಕ ಅಭಿರುಚಿಯನ್ನು ಸಂವರ್ಧಿಸುವ ಗ್ರಂಥಗಳ ಸಂಖ್ಯೆಯೂ ಹೆಚ್ಚಾಗಿರುವ ಗ್ರಂಥಾಲಯಗಳೂ ಬಡಭಾರತಕ್ಕೆ ಹೆಣಭಾರವಾಗುವುವು ಮತ್ತು ಹಾನಿಕರವಾಗುವವು. ಆದುದರಿಂದ ಗ್ರಂಥಗಳ ಯೋಗ್ಯತೆಯನ್ನು ಸಾಮಾನ್ಯವಾಗಿ ಅಳೆಯಬಲ್ಲ ಗ್ರಂಥಾಲಯಾಧಿಕಾರಿಗಳೇ ನಮಗಿಂದು ಅಗತ್ಯ. ಜನಮನದಲ್ಲಿ ಚಿರಸ್ಥಾಯಿಯಾಗಬಲ್ಲ ಕೃತಿಗಳಿಗೆ ಪ್ರಥಮ ಪ್ರಾಧಾನ್ಯವು ಸಿಗಬೇಕು. ಅಲ್ಪಸಂಖ್ಯಪ್ರಿಯ ಮತ್ತು ಬಹುಸಂಖ್ಯಪ್ರಿಯ ಎಂಬ ಸಂಖ್ಯಾಮಾನವು ಗ್ರಂಥಗಳ ಆಯ್ಕೆಗೆಂದೂ ಪ್ರಮಾಣವಾಗದು. ಯೋಗ್ಯತೆಗೂ ಭಾರತದ ಇಂದಿನ ಪ್ರಜಾಪ್ರಭುತ್ವದ ಮತದಾನ ಪದ್ಧತಿಗೂ ಆಜನ್ಮ ಶತ್ರುತ್ವವಿದೆ; ಹಾಗೇ ಸರಕಾರೀ ನೇಮಣೂಕಿಗೂ. ಆದುದರಿಂದ ಸ್ಥಳಿಯ ವಿದ್ಯಾಲಯಸ್ಥ ಸುಸಂಸ್ಕೃತರ ಅಭಿಪ್ರಾಯದ ಮೇರೆಗೆ ಗ್ರಂಥಾಲಯಧಿಕಾರಿಯನ್ನು ಆಯ್ದರೆ ಆತನಿಂದ ಗ್ರಂಥಭಾಂಡಾರವು ಕೇವಲ ವಯೋವೃದ್ಧಿಯಿಂದ ಮಾತ್ರವಲ್ಲದೆ, ಜ್ಞಾನಾಕರ ಸಮೃದ್ಧಿಯಿಂದಲೂ ಹಿರಿಯ ಸಂಸ್ಥೆ ಎನ್ನಿಸಬಲ್ಲುದು. ಹಾಗಾದ ಗ್ರಂಥಭಂಡಾರ ಮಾತ್ರ ಸಾರ್ಥಕ, ಮಿಕ್ಕವು ನಿರರ್ಥಕ ಅಥವಾ ದುರರ್ಥಕ.

ಐಹೊಳೆ, ತಾಳಗುಂದ, ಬಳ್ಳಿಗಾಂವಿ, ಬನವಾಸಿ, ಶೃಂಗೇರಿ, ಕುಪ್ಪಟ್ಟೂರು ಮುಂತಾದ ಅನೇಕ ಸ್ಥಳಗಳಲ್ಲಿದ್ದ ದೇವಾಲಯ, ಮಠ, ವಿಹಾರ, ಬಸದಿ, ಬ್ರಹ್ಮಪುರಿ, ಅಗ್ರಹಾರಗಳು ಗ್ರಂಥಾಲಯಗಳನ್ನು ಇಟ್ಟುಕೊಂಡ ಸಂಗತಿಯು ಕರ್ನಾಟಕದ ಆದಿಮಧ್ಯ ಯುಗಗಳ ಚರಿತ್ರೆಯ ವಿವರಗಳು ಇನ್ನೂ ಸ್ಪಷ್ಟವಾಗಿ ಬೆಳಕಿಗೆ ಬಂದ ಮೇಲೆ ಹೊರಪಡಬಲ್ಲುದು. ಗೇರುಸೊಪ್ಪೆ, ಬಿಳಿಗಿ, ಹಾಡುವಳ್ಳಿ, ಭಟಕಳ, ಕುಮಟೆ, ಸೋದೆಗಳ ಸಾಮಂತರ ಹಾಗೂ ಪಾಳೆಯಗಾರರ ಚರಿತ್ರೆಗಳ ವಿವರಗಳಿಂದಲೂ ಗ್ರಂಥಾಲಯದ ಸಜ್ಜಿಕೆಯ ಸಂಗತಿಗಳು ಹೊರಬೀಳಬಲ್ಲವು. ವಿದೇಶಗಳ ವಿದ್ಯಾರ್ಥಿಗಳೂ ೧೦–೧೨ನೆಯ ಶತಮಾನಗಳಲ್ಲಿ ಮಲೆನಾಡಿನ ಅಗ್ರಹಾರಗಳಿಗೆ ವಿದ್ಯಾಭ್ಯಾಸಕ್ಕಾಗಿ ಬರುತ್ತಿದ್ದ ಅಂಶಗಳು ಶಾಸನೋಕ್ತ. ಅಂಥ ಯೋಗ್ಯತೆ ಇಂದಿನ ಮಲೆನಾಡಿಗಿಲ್ಲವಾಗಿರುವುದು ದುರ್ದೈವ. ಆ ದಿಶೆಯಲ್ಲಿ ನಮ್ಮ ಗ್ರಂಥಾಲಯ ಪೋಷಣೆ ನಡೆಯಲೆಂದು ಯಾವ ಮಲೆನಾಡಿಗನೂ ಹಾರೈಸದಿರನು.



**ಪಂಡಿತ ಜನರಲ್ ಲೈಬ್ರರಿ – (ಶಿರಸಿಯ ಶತಸಾಂವತ್ಸರಿಕೋತ್ಸವದ ಸಂಸ್ಮರಣ ಸಂಚಿಕೆ (೧೮೭೦ – ೧೯೭೦))**

# ೧೦. ತತ್ತ್ವಚರ್ಚೆಯ ಕಲೆ

## ನ್ಯಾಯದ ೧೬ ಪದಾರ್ಥಗಳು

ಅಕ್ಷಪಾದನ ಸೂತ್ರಗಳಲ್ಲಿ ಭಾರತೀಯ ತತ್ತ್ವಚರ್ಚೆಯ ಕಲೆಯು ಆಮೂಲಾಗ್ರವಾಗಿ ಪ್ರತಿಪಾದಿಸಲ್ಪಟ್ಟಿದೆ ಮತ್ತು ನ್ಯಾಯದರ್ಶನ ಅದನ್ನು ಒಳಗೊಂಡಿದೆ–ಅದರಿಂದಲೇ ಅದನ್ನು ತರ್ಕವಿದ್ಯೆ, ವಾದವಿದ್ಯೆ(ಅಥವಾ ಚರ್ಚಾವಿಜ್ಞಾನ ಇಲ್ಲವೆ ವಾದ–ಪ್ರತಿವಾದ ವಿಜ್ಞಾನ) ಎಂದು ಕೆಲವೊಮ್ಮೆ ಕರೆಯಲಾಗುತ್ತದೆ. ಬೌದ್ಧ, ಜೈನ ಮತ್ತು ಇತರ ಕೆಲ ಪಂಥದವರು ಅದರ ಬಗ್ಗೆ ತಮ್ಮ ಪಾಕ್ಷಿಕ ಭಿನ್ನಾಭಿಪ್ರಾಯವನ್ನು ವ್ಯಕ್ತಪಡಿಸಿದ್ದರೂ ಅಕ್ಷಪಾದನು ಆರಂಭಿಸಿದ ಆ ವಾದಪದ್ಧತಿಯನ್ನು ಸಾಮಾನ್ಯವಾಗಿ ಭಾರತೀಯ ದರ್ಶನವರ್ಗವಿಡೀ ಸ್ವೀಕರಿಸಿದೆ.

ಭಾರತೀಯ ನ್ಯಾಯದರ್ಶನ ಪ್ರಸ್ಥಾನವು ೧೬ ಪದಾರ್ಥಗಳನ್ನು ಪ್ರತಿಪಾದಿಸಿದೆ. ಅವು ಯಾವುವೆಂದರೆ–ಪ್ರಮಾಣ(ಸರಿಯಾದ ತಿಳಿವಳಿಕೆಯ ಸಾಧನ), ಪ್ರಮೇಯ(ಸರಿಯಾದ ತಿಳಿವಳಿಕೆಯ ವಿಷಯ), ಸಂಶಯ(ಸಂದೇಹ), ಪ್ರಯೋಜನ(ಉದ್ದೇಶ), ದೃಷ್ಟಾಂತ(ಪರಿಚಿತ ಉದಾಹರಣೆ), ಸಿದ್ಧಾಂತ(ತತ್ತ್ವಪ್ರಣಾಲಿ, ಅಂತ್ಯನಿಗಮನ, ಕೊನೆಯ ತೀರ್ಪು), ಅವಯವ(ಒಂದು ಅನುಮಾನದ, ತರ್ಕದ ಐದರಲ್ಲಿ ಒಂದು ವಾಕ್ಯ), ತರ್ಕ(ಪರೋಕ್ಷ ವಿಚಾರಕಾರ್ಯ), ನಿರ್ಣಯ(ನಿಃಸಂದಿಗ್ಧತೆಗೆ ಬಂದು ಮುಟ್ಟುವುದು), ವಾದ(ಸವಾಲು–ಪ್ರತಿಸವಾಲುಗಳನ್ನು ಹಾಕುವುದು), ಜಲ್ಪ(ಗಳಹುವಿಕೆ, ಪ್ರತಿವಾದಿಯನ್ನು ಖಟಾಟೋಪದಿಂದ ಪ್ರತಿಭಟಿಸುವಿಕೆ), ವಿತಂಡ(ಕುತರ್ಕ), ಹೇತ್ವಾಭಾಸ(ಸುಳ್ಳು ಕಾರಣ), ಛಲ(ಅಸಂಬದ್ಧ ಪ್ರಲಾಪ), ಜಾತಿ(ವೃಥಾತಂಕ) ಮತ್ತು ನಿಗ್ರಹಸ್ಥಾನ(ಅಪಜಯಾಂಶ, ಅಪಜಯಬಿಂದು). ಈ ೧೬ ಪದಾರ್ಥಗಳಲ್ಲಿ* ಪ್ರಮಾಣ–ಪ್ರಮೇಯಗಳನ್ನುಳಿದು ಮಿಕ್ಕೆಲ್ಲವೂ ಚರ್ಚಾಕಲೆಗೆ ನೆರವಾಗುವಂಥವು. ಸಂಶಯದಂಥ ಕೆಲವು ಪದಾರ್ಥಗಳು ತತ್ತ್ವಚರ್ಚೆಯ ಪ್ರಾಸ್ತಾವಿಕ ಶರ್ತಗಳನ್ನು ಬಣ್ಣಿಸುತ್ತವೆ; ಕೆಲವು ಅದರ ಮುಖ್ಯ ಭಾಗವಾಗಿರುತ್ತವೆ. ಉಳಿದವು ಅದರ ಕೊನೆಯ ಸ್ಥಿತಿಯನ್ನು ರೂಪಿಸುತ್ತವೆ. ಉದಾಹರಣೆಗಾಗಿ ನಿರ್ಣಯವನ್ನು ತೆಗೆದುಕೊಳ್ಳಬಹುದು; ಅದು ವಿಚಾರದ ಅಥವಾ ಚರ್ಚೆಯ ಅಂತ್ಯಫಲ. ಪ್ರಮಾಣ–ಪ್ರಮೇಯಗಳನ್ನು ಬಣ್ಣಿಸಿದ ಬಳಿಕ ಸ್ಪಷ್ಟವಾಗಿ ಅವುಗಳೊಗಳಗೇ ಅಡಕವಾಗುವ ಮಿಕ್ಕ ಸಂಶಯಾದಿ ೧೪ ಪದಾರ್ಥಗಳನ್ನು ಪ್ರತ್ಯೇಕವಾಗಿ ಏಕೆ ಹೇಳಲಾಯಿತೆಂಬ ಪ್ರಶ್ನೆಯನ್ನು ವಾತ್ಸ್ಯಾಯನನು ನ್ಯಾಯಸೂತ್ರದ ತನ್ನ ಭಾಷ್ಯದಲ್ಲಿ ನ್ಯಾಯವಾಗಿಯೇ ಎತ್ತಿದ್ದಾನೆ.[೧] ಭಾಷ್ಯದ ಈ ಭಾಗದ ವಿವರಣೆಯಲ್ಲಿ 'ನ್ಯಾಯವಾರ್ತಿಕ'ದ ಗ್ರಂಥಕರ್ತನಾದ

ಉದ್ಯೋತಕಾರನು ಎಲ್ಲ ಪದಾರ್ಥಗಳೂ ಪ್ರಮೇಯಭಿನ್ನಗಳವಾಗಿರುವುದರಿಂದ ಸಂಶಯಾದಿ ಪದಾರ್ಥಗಳೆಲ್ಲವೂ ಸ್ವಾಭಾವಿಕವಾಗಿ ಪ್ರಮೇಯಾಂತರ್ಗತ ಎಂದಿದ್ದಾನೆ. ಇದು ನಿಜವಾದರೆ, ಅಕ್ಷಪಾದನೇಕೆ ಸಂಶಯ ಮುಂತಾದುವುಗಳನ್ನು ಪ್ರತ್ಯೇಕವಾಗಿ ಹೇಳಿದ್ದಾನೆ? ಮೂರು ಮನ್ನಣೆವೆತ್ತ ವಿದ್ಯೆಗಳಾದ ತ್ರಯಿ(ಮೂರು ವೇದಗಳು) ವಾರ್ತೆ(ವಾಣಿಕ್ಯ–ಕೃಷಿಗಳು) ಮತ್ತು ದಂಡನೀತಿ(ರಾಜನೀತಿಶಾಸ್ತ್ರ)ಗಳ ಪ್ರತಿಪಾದ್ಯ ವಿಷಯಗಳು ಭಿನ್ನವಾದಂಥವು; ಸಂಶಯಾದಿ ೧೪ ವಿಶಿಷ್ಟ ವಿಷಯಗಳನ್ನು ಅನ್ವೀಕ್ಷಿಕಿ ಅಥವಾ ತರ್ಕಶಾಸ್ತ್ರವು ಅವುಗಳನ್ನು ಹೋಲದು–ಎಂಬ ಹೇಳಿಕೆಯನ್ನು ಕೊಡುವಾಗ ವಾತ್ಸ್ಯಾಯನನು ಈ ಆತಂಕವನ್ನು ನಿರೀಕ್ಷಿಸಿದ್ದನು. ಅದರ ವಿಶಿಷ್ಟ ವಿಷಯವನ್ನು ಪ್ರತ್ಯೇಕವಾಗಿ ಉಲ್ಲೇಖಿಸದಿದ್ದರೆ ಒಂದು ವಿಚಾರಪದ್ಧತಿಯು ತೀರ ದೆಸೆಗೆಟ್ಟುಹೋಗುತ್ತದೆ. ನ್ಯಾಯಸೂತ್ರವು ಆತ್ಮ, ಶರೀರ, ಇಂದ್ರಿಯಗಳು ಮೊದಲಾದ ೧೨ ಪ್ರಮೇಯಗಳನ್ನು ಮಾತ್ರ ಬಿತ್ತರಿಸಿ ಮತ್ತೇನನ್ನು ಮಾಡದೇ ಹೋಗಿದ್ದರೆ ಅದಕ್ಕೆ ತನ್ನದೇ ಆದ ಅನನ್ಯ ಸ್ವರೂಪ ಇಲ್ಲದೆ ಹೋಗುತ್ತಿತ್ತಲ್ಲದೆ, ಉಪನಿಷತ್ತುಗಳಂಥ ಶುದ್ಧ ತಾತ್ತ್ವಿಕ ಗ್ರಂಥಗಳಿಂದ ಅದು ಪ್ರತ್ಯೇಕವೆಂದು ಗಣಿಸಲ್ಪಡುತ್ತಲೇ ಇರಲಿಲ್ಲ. ಆದುದರಿಂದಲೇ ವಿಚಾರದಲ್ಲಿ(ಚರ್ಚೆಯಲ್ಲಿ) ಸೂಚಿತವಾದ ಸಂಶಯಾದಿಗಳನ್ನು ಕುರಿತಾಗಿ ಹೇಳಿ ನ್ಯಾಯದ ಅಭ್ಯಾಸದಲ್ಲಿ ಪ್ರತಿಪಾದಿಸಲಾಗಿದೆ.[೨]

## ಚರ್ಚಾವರ್ಗಗಳು

ಭಾರತೀಯ ಬಳಕೆಯ ಪ್ರಕಾರ 'ವಿಚಾರ'ವೆಂದರೆ 'ಕಥೆ'(ಅಥವಾ ವಿವಾದ) ಅವು ಸಮಾನಾರ್ಥಕ ಪದಗಳು. ವಾದ, ಜಲ್ಪ, ವಿತಂಡಗಳೆಂಬುದಾಗಿ ವಾತ್ಸ್ಯಾಯನನು ಕಥೆಯನ್ನು ಮೂರು ವಿಧವಾಗಿ ವಿಂಗಡಿಸುತ್ತಾನೆ.[೩] ವಿಚಾರವನ್ನು 'ತದ್ವಿದ್ಯ ಸಂಭಾಷೆ' (ಸಂಬಂಧಿಸಿದ ಶಾಸ್ತ್ರವನ್ನು ಬಲ್ಲವರೊಡನೆ ಮಾಡುವ ಚರ್ಚೆ) ಎಂದು ಚರಕಸಂಹಿತೆಯಲ್ಲಿ ಕರೆಯಲಾಗಿದೆ.[೪] ಈ ಸಂಭಾಷೆ ಅಥವಾ ಚರ್ಚೆಯು ಇಬ್ಬಗೆಯದು; ಸಂಧಾಯ ಸಂಭಾಷೆ(ಸ್ನೇಹಪೂರ್ಣವಾದ ಚರ್ಚೆ, ಸಂವಾದ) ಮತ್ತು ವಿಗೃಹ್ಯ ಸಂಭಾಷೆ(ಅಕ್ರಾಮುಕ ಚರ್ಚೆ, ವಿವಾದ) ಎಂದು. ಮೊದಲನೆಯುದನ್ನು ಅನುಲೋಮಸಂಭಾಷೆಯೆಂದೂ ವಾದಕಥೆಯೆಂದೂ ಕರೆಯುವುದುಂಟು.[೫] ಎರಡನೆಯದು ಜಲ್ಪವಿತಂಡಗಳನ್ನು ಸೂಚಿಸುತ್ತದೆ.[೬]ಆದುದರಿಂದ ನ್ಯಾಯದರ್ಶನ ಚರಕಸಂಹಿತೆಯಲ್ಲಿ ಹಿಡಿದ ವೈಚಾರಿಕ ಪದ್ಧತಿಯು ಮೂಲತಃ ಒಂದೇ ಆಗಿದೆ. ಸತ್ಯಾನ್ವೇಷಿ(ತತ್ತ್ವಜಿಜ್ಞಾಸು) ಮಾತ್ರ ವಾದಕಥೆಗಿಳಿಯಲು ಅರ್ಹ ಗುರುವಿನೊಡನೆ ಅಥವಾ ಅಂಥ ಸ್ಥಾನ–ಮಾನ ಸಂಪನ್ನರಾದ ಇತರರೊಡನೆ ವಾದಕ್ಕಿಳಿಯಬೇಕೆಂಬುದು ಉದ್ಯೋತಕಾರನ ಮತ. ನ್ಯಾಯಸೂತ್ರದ ಮೇಲಿನ ತಾತ್ಪರ್ಯ ಟೀಕೆಯ ಗ್ರಂಥಕರ್ತನಾದ ವಾಚಸ್ಪತಿಮಿಶ್ರನ ಪ್ರಕಾರ ವಾದದ ಫಲಗಳು ಮೂರು: ಅಜ್ಞಾತ ಸತ್ಯಗಳ ಅರಿವು, ಸಂದೇಹ ಪರಿಹಾರ ಮತ್ತು ಹಿಂದೆ ಪಡೆದ ಅರಿವಿನ ದೃಢೀಕರಣ.[೭] ತದ್ವಿದ್ಯ ಸಂಭಾಷೆಯು

ಪೃಚ್ಛಕನ ಕುತೂಹಲ–ಉತ್ಸಾಹಗಳನ್ನೂ ವಿಮರ್ಶಕತ್ವದ ಹರಿತವನ್ನೂ ಹೆಚ್ಚಿಸುತ್ತದೆ. ಅವನ ವಾದ ಸಾಮರ್ಥ್ಯಕ್ಕೆ ಪುಟಕೊಡುತ್ತದೆ ಮತ್ತು ಅವನಿಗೆ ಕೀರ್ತಿಯನ್ನು ತಂದುಕೊಡುತ್ತದೆ. ಇಷ್ಟಲ್ಲದೆ ಅದು–ಅವನು ಹಿಂದೆ ಪಡೆದುಕೊಂಡಿದ್ದ ತಿಳಿವಳಿಕೆಯ ಬಗೆಗಿನ ಸಂಶಯಗಳನ್ನು ಪರಿಹರಿಸುತ್ತದೆ. ಶ್ರದ್ಧಾದಾರ್ಢ್ಯವನ್ನು ಗಳಿಸಿಕೊಡುತ್ತದೆ ಮತ್ತು ಹೊಸ ಅರಿವನ್ನುಂಟು ಮಾಡುತ್ತದೆ. ಯಾವನೂ ತನ್ನ ಗುರುವಿನ ಅಥವಾ ತತ್ಸಮಾನರ ಹತ್ತಿರ ವಿಗೃಹ್ಯ ಸಂಭಾಷೆಯಲ್ಲಿ ತೊಡಗಬಾರದು. ಸ್ವಜ್ಞಾನದ ವೃದ್ಧಿಗೆ ಅವರೊಡನೆ ಸಂಧಾಯ ಸಂಭಾಷೆಯ ತೊಡಗುವುದು ಲೇಸೆಂದು ಹೇಳಲಾಗಿದೆ.ಗಣ್ಯರೊಡನೆ ವಿಗೃಹ್ಯ ಸಂಭಾಷೆಯನ್ನು ನಡೆಸುವುದರಿಂದಲೂ ಆ ಫಲ ಲಭ್ಯವೆಂದು ಕೆಲವರು ಪ್ರಶಂಸಿದ್ದುಂಟು. ಆದರೆ ಚರಕನು ಇದಕ್ಕೆ ಸ್ಪಷ್ಟವಾಗಿ ವಿರೋಧಿ.

ನ್ಯಾಯದರ್ಶನ–ಚರಕಸಂಹಿತೆಗಳು ವಾದ–ಜಲ್ಪ–ವಿತಂಡಾತ್ಮಕವಾದ 'ಕಥೆ'ಯ ಬಗೆಗೆ ವಿಸ್ತಾರವಾಗಿ ವಿವರಿಸಿವೆ. ಚರಕನು ಇನ್ನೂ ಹೆಚ್ಚಿನ ವಿಷಯಗಳನ್ನು ಹೇಳಿದ್ದಾನೆ: ಸಭೆಗಳಲ್ಲಿ(ಪರಿಷತ್ತುಗಳಲ್ಲಿ) ವಿವಿಧ ಪ್ರಕಾರಗಳಿವೆ; ಜ್ಞಾನಿಗಳ ಸಭೆ, ಅಜ್ಞಾನಿಗಳ ಸಭೆ–ಎಂಬಿವು ಸಭಾಪ್ರಭೇದಗಳು. ಆ ಜ್ಞಾನಿಗಳಲ್ಲಿ ಅಥವಾ ಅಜ್ಞಾನಿಗಳಲ್ಲಿ ಮಿತ್ರ–ತಟಸ್ಥ–ಶತ್ರುಗಳೆಂಬ ಮೂವಗೆಯವರಿರಬಹುದು. ಸಂಭಾಷೆಯಲ್ಲಿ ಭಾಗವಹಿಸುವ ಪ್ರತಿವಾದಿಗಳಲ್ಲಿ ಹೆಚ್ಚಿನವರು, ಕಡಿಮೆಯವರು ಮತ್ತು ಸಮಾನಸ್ಕಂಧರೆಂದು ತ್ರಿವಿಧ. ಪ್ರತಿವಾದಿಗಳ ಪ್ರತಿಯೊಂದು ಮಾದರಿಯನ್ನು ಇದಿರಿಸುವ ಪದ್ಧತಿಯನ್ನೂ ನಿಷ್ಕೃಷ್ಟಪಡಿಸಿಕೊಡಲಾಗಿದೆ. ತತ್ತ್ವಪ್ರಶ್ನಪರನಿಗೆ 'ವಾದಕಥೆ' ತಕ್ಕ ಸಾಧನ. 'ಕಥಾ'ರತ್ನವೆನ್ನಿಸಿರುವ ವಾದವು ಸತ್ಯ ಸಿಗುವವರೆಗೂ ಮುಂಬರಿಯುವುದು. ನಮಗೆ ತಿಳಿದಿರುವ ತತ್ತ್ವಗ್ರಂಥಗಳಲ್ಲಿ ಹೆಚ್ಚಿನವುಗಳೆಲ್ಲವೂ ವಾದಕಥಾಪದ್ಧತಿಯ ಚರ್ಚಾಮಾರ್ಗವನ್ನು ಸ್ವೀಕರಿಸಿವೆ. ಜಲ್ಪ–ವಿತಂಡಾತ್ಮಕ ವಾದ ವಿಜಿಗೀಷುಕಥೆ(ಗೆಲುವಿಗಾಗಿ ಹೂಡುವ ಚರ್ಚೆ)ಗಿಂತ ಇದು ಭಿನ್ನವಾದುದು. ವಿಶಿಷ್ಟ ಪರಿಸ್ಥಿತಿಗಳಲ್ಲಿ, ಆ ಈ ಸಂದರ್ಭಗಳಲ್ಲಿ ವಾದಕಥಾಪದ್ಧತಿಯನ್ನು ಸಾಮಾನ್ಯವಾಗಿ ಹಿಡಿದ ಗ್ರಂಥಗಳು ಕೆಲವು ಬಾರಿ ಜಲ್ಪ ಕಥಾಪದ್ಧತಿಯನ್ನು ಒಳಗೊಂಡಿದ್ದು ಕಂಡುಬಂದರೂ ಸತ್ಯನಿಷ್ಕರ್ಷೆಗೆಂದೂ ಎರಡನೆಯದನ್ನವು ಬಳಸಿಕೊಂಡದ್ದಿಲ್ಲ. ಜನರಲ್ಲಿ ಮೂರು ವರ್ಗದವರಿದ್ದಾರೆ; ಅಪ್ರತಿಪನ್ನರು(ಅಜ್ಞಾನಿಗಳು), ವಿಪ್ರತಿಪನ್ನರು(ವಿರುದ್ಧ ಮತವನ್ನು ತಾಳಿದವರು) ಮತ್ತು ಸಂದಿಗ್ಧರು(ಸಂದೇಹಗ್ರಸ್ತರು)–ಎಂದು. ಗುರುಗಳು ಅಥವಾ ತತ್ಸಮ ಸ್ಥಾನ ಉಳ್ಳವರು ಅಪ್ರತಿಪನ್ನರಿಗೆ ಒಳಿತೆಸಗುವ ಬಯಕೆಯಿಂದ ಅವರಲ್ಲಿ ನಿಷ್ಕರ್ಷವಾಗಲಿರುವ ವಿಷಯದ ಬಗೆಗೆ ಸಂದೇಹವನ್ನುಂಟು ಮಾಡಬೇಕು. ಅವರಲ್ಲಿ ಸಂಶಯವನ್ನು ಹುಟ್ಟಿಸಿದ ಅನಂತರ ವಾದಕಥೆಯಲ್ಲಿ ಅವರನ್ನು ತೊಡಗಿಸಿ ಆ ಮೂಲಕ ಸತ್ಯನಿಷ್ಕರ್ಷದಿಂದ ಸಂಶಯ ಪರಿಹಾರವಾಗುವಂತೆ ನೋಡಿಕೊಳ್ಳಬೇಕು. ಹಾಗಲ್ಲದೆ, ವಿಪ್ರತಿಪನ್ನನಾದವನು ವಿರುದ್ಧ ನಿಲುಮೆಯನ್ನು ವಹಿಸುತ್ತಾನೆ. ದಂಭ ಅಡ್ಡ ಬರುವುದರಿಂದ ಆತನ ಪ್ರತಿಶ್ರದ್ಧಾ ದಾರ್ಢ್ಯಗಳನ್ನು ಖಂಡಿಸುವಲ್ಲಿಯವರೆಗೆ ಅವನೆಂದೂ ಆರೋಗ್ಯಕರವಾದ

ಸಂದೇಹಗಳನ್ನು ತಾಳಲಾರ; ಈ ದಂಭನಾಶಕ್ಕೆ ಜಲ್ಪಕಥಾಪದ್ಧತಿ ಅಗತ್ಯ. ಜಲ್ಪ–ವಿತಂಡಗಳಿಂದ ವಿಪ್ರತಿಪನ್ನನ ವಿರುದ್ಧ ನಿಲುವನ್ನಿದಿರಿಸಿದಾಗ ಅವನು ಸಂದಿಗ್ಧನಾಗಿ ಪರಿಣಮಿಸುವನು; ಅಂದರೆ ಅವನು ತನ್ನ ಮೊದಲಿನ ನಿಲುಮೆಯ ಸತ್ಯತೆಯ ಬಗೆಗೆ ಸಂಶಯಪಡತೊಡಗುವನು. ಆಗ ವಾದಕಥೆಯಲ್ಲಿ ಅವನನ್ನು ತೊಡಗಿಸಿ, ಆ ಮೂಲಕ ಸತ್ಯನಿಷ್ಕರ್ಷೆ ಮಾಡಿಸಿಕೊಡುವುದರಿಂದ ಅವನ ಸಂದೇಹವನ್ನು ನಿವಾರಿಸಬಹುದು. ಈ ಕಾರಣದಿಂದ ಸಂಶಯವನ್ನು ಪರಿಚ್ಛೇದಿಸಿ ಸತ್ಯನಿಷ್ಕರ್ಷ ಮಾಡುವುದೇ ವಾದಕಥಾಪದ್ಧತಿಯ ಗುರಿಯೆಂದು ಹೇಳಲಾಯಿತು ಸಂದೇಹಗ್ರಸ್ತನಾದವನು (ಸಂದಿಗ್ಧ ಪುರುಷನು) ವಾದಕಥಾರ್ಹನೆಂದು ಗಣಿಸಲಾಗಿದೆ. ಈ ಕಾರಣದಿಂದ ಸಂಶಯವನ್ನು ಚರ್ಚೆಯ ಪೂರ್ವಾಂಗವೆಂದು ಕರೆಯಲಾಗಿದೆ. ವಿಚಾರದ ೧೪ ಉಪಕರಣಗಳಲ್ಲಿ ಸಂಶಯವು ಅಗ್ರಗಣ್ಯ. ಸಂಶಯವು ವಿಚಾರದ ಅಂಗವಾದರೂ ಭ್ರಾಂತಿಯು(ತಪ್ಪು ತಿಳಿವಳಿಕೆಯು) ಆಗಿಲ್ಲ. ಅಕ್ಷಪಾದನು ಸಂಶಯವನ್ನು ವಿಚಾರದ ಅವಿಭಾಜ್ಯ ಅಂಗವೆಂಬಂತೆ ಭ್ರಾಂತಿಯನ್ನು ಹಾಗೆ ಎಂದಿಲ್ಲ. ವಿಜಿಗೀಷುಕಥಾ ಪದ್ಧತಿಯಲ್ಲಿ ಪ್ರತಿವಾದಿಯ ಸೋಲೇ ಮುಖ್ಯ ಗುರಿ. ಚರ್ಚೆಗಿದಿರಾದವನ ಅಜ್ಞಾನವನ್ನು ಬಹಿರಂಗಪಡಿಸುವುದು ಅಥವಾ ವಿರುದ್ಧ ಶ್ರದ್ಧಾದಾರ್ಢ್ಯವನ್ನು ನಾಶಗೊಳಿಸುವುದು ವಿಜೀಗೀಷುಕಥಾಪದ್ಧತಿಯ ಗುರಿ; ಇದಿರಾಳಿಗೆ ಮಾನಸಿಕ ಅಪಜಯ ಉಂಟುಮಾಡುವುದರಲ್ಲಿ ಅದು ಕೊನೆಗೊಳ್ಳುವುದು. ಹಾಗಲ್ಲದೆ ವಾದಕಥಾಪದ್ಧತಿಯು ಸ್ಪಷ್ಟವಾಗಿ ಸತ್ಯನಿಷ್ಕರ್ಷವಾಗುವವರೆಗೆ ಕೊನೆಗೊಳ್ಳದು. ಶ್ರೀಕೃಷ್ಣನು ಗೀತೆಯಲ್ಲಿ ತಾನು ಚರ್ಚಾಲುಗಳಿಗೆ ವಾದವೆಂದುಕೊಂಡಿದ್ದಾನೆ.[೮] ಭಾರತೀಯ ತತ್ತ್ವಜ್ಞಾನಿಗಳು ಜನವಸತಿಗಳಿಂದ ದೂರದಲ್ಲಿರುವ ತಮ್ಮ ಗುರುಕುಲಾಶ್ರಮಗಳಲ್ಲಿ ಗ್ರಂಥರಚನೆ ಮಾಡಿದರೂ ಅಥವಾ ಕೆಲ ಸತ್ಯಗಳನ್ನು ವಿವರಿಸಿದರೂ ತಮ್ಮ ಪ್ರತಿವಾದಿಗಳೆದುರಿಡಬಹುದಾದ ಮುಖತಃ ಎದ್ದು ಕಾಣುವ ಆಕ್ಷೇಪಗಳನ್ನು(ಪೂರ್ವಪಕ್ಷಗಳನ್ನು) ಎತ್ತಿ ಹೇಳಿ ಅವುಗಳನ್ನು ಖಂಡಿಸುತ್ತಾರೆ. ಹಾಗೆ ಮಾಡುವಾಗ, ಆ ಎದುರಾಳಿಗಳು ಇದಿರೇ ಇದ್ದಾರೆಂದು ಭಾವಿಸಿ ಅವರಿಗೆ ವಿರುದ್ಧವಾದಗಳನ್ನು ಮುಂದಿಡುವ ಹಕ್ಕನ್ನು ಕೊಡುತ್ತಾರೆ. ತಟಸ್ಥರ(ಅಥವಾ ಮಧ್ಯಸ್ಥರ) ಇರವನ್ನೂ ಭಾವಿಸಿಕೊಂಡು ಅವರು ಅಂಥವರ ಸಂದೇಹಗಳನ್ನೂ ವ್ಯಕ್ತಪಡಿಸಿ ಅವುಗಳಿಗೆ ಪರಿಹಾರವನ್ನು ಸೂಚಿಸುತ್ತಾರೆ. ಹೀಗೆ ಒಬ್ಬ ಗ್ರಂಥಕರ್ತನು ಒಂದು ಗ್ರಂಥವನ್ನು ರಚಿಸುವಾಗ ಪ್ರಬುದ್ಧ ಗೃಹಸ್ಥರ ಒಂದು ಸಭೆಯಲ್ಲಿ ತಾನಿರುವೆನೆಂದು ಊಹಿಸಿಕೊಳ್ಳುತ್ತಾನೆ.

ಶಂಕರಮಿಶ್ರನು ವಾದಿವಿನೋದವೆಂಬ ತನ್ನ ಗ್ರಂಥದಲ್ಲಿ–ಇಲ್ಲಿಯವರೆಗ ಅಜ್ಞಾತವಾಗಿದ್ದ ಸತ್ಯವೊಂದರ ಅರಿವು, ಅರಿವಿನ ಸಂಚಯ ಮತ್ತು ಹಾಗೆ ಸಂಚಯಿಸಿ ಇಟ್ಟುಕೊಂಡಿದ್ದ ಅರಿವಿನ ಬಳಕೆ, ಅಲ್ಲದೆ ಇತರರಿಗೆ ಅದನ್ನು ಕೊಡುವುದು–ಎಂಬೀ ನಾಲ್ಕು ತ್ರಿಪ್ರಕಾರವುಳ್ಳ ಕಥಾಪದ್ಧತಿಯ ಗುರಿಗಳೆಂದು ಹೇಳಿದ್ದಾನೆ. ಸತ್ಯನಿಷ್ಕರ್ಷಕ್ಕಾಗಿಯೇ ಆಗಲಿ, ಚರ್ಚೆಯಲ್ಲಿ ಗೆಲ್ಲಬೇಕೆಂಬುದಕ್ಕಾಗಿಯೇ ಅಗಲಿ–ಈ ಅಂಗತ್ರಯಸಮೇತವಾದ

ಕಥಾಮಾರ್ಗವನ್ನು ಹಿಡಿಯಲು ಹಕ್ಕುಳ್ಳವರು ಉಕ್ತ ಶರ್ತಗಳನ್ನು ಪಾಲಿಸಬೇಕಾಗುತ್ತದೆ; ಅವರು ಸಾರ್ವಜನಿಕ ಅನುಭವಕ್ಕೆ ವಿರುದ್ಧವಾಗಿ ಹೋಗಬಾರದು. ಅವರ ಪ್ರತ್ಯಕ್ಷಜ್ಞಾನಕ್ಕೆ ಕಾರಣಗಳಾದ ಇಂದ್ರಿಯಗಳ ಶಕ್ತಿಯು ಅಕುಂಠಿತವಾಗಿರಬೇಕು ಮತ್ತು ಅವರು ಜಗಳಗಂಟರಾಗಿರಬಾರದು; ಇಷ್ಟಲ್ಲದೆ, ಅವರು ತಮ್ಮ ನಿಲುಮೆಯನ್ನು ಕಾಯ್ದುಕೊಳ್ಳಲು ಸಮರ್ಥರಾಗಿರಬೇಕು ಮತ್ತು ಪ್ರತಿವಾದಗಳ ದೃಷ್ಟಿಕೋನಗಳ ದೌರ್ಬಲ್ಯವನ್ನು ಬಹಿರಂಗಗೊಳಿಸಲು ಶಕ್ತರಾಗತಕ್ಕದ್ದು. ಅವರು ಜಾಗ್ರತರಾಗಿರುವುದಲ್ಲದೆ ಉಭಯ ಪಕ್ಷಗಳ ದೋಷಗಳನ್ನು ಅರಿತವರಾಗಿರುವುದಗತ್ಯ. ವಾದಕಥಾನುಸಾರಿಗಳು ಇನ್ನೂ ಹೆಚ್ಚಿನ ಅರ್ಹತೆಗಳನ್ನು ಪಡೆದಿರಬೇಕು; ಅವರು ಮೋಸಗಾರರಾಗಿರಕೂಡದು, ಚಿತ್ತಶಾಂತಿಕ್ರಿಯಾಸಿದ್ಧತೆಗಳನ್ನುಳ್ಳವರಾಗಿರಬೇಕು ಮತ್ತು ಎದುರಾಳನ್ನು ಅನವಶ್ಯಕವಾಗಿ ಖಂಡಿಸಹೋಗುವುದರತ್ತ ವಿಮುಖರಾಗಿರಬೇಕು. ಅವರು ಚರ್ಚೆಗೆ ತೆಗೆದುಕೊಂಡ ವಿಷಯಾಂಶವನ್ನು ಸಮರ್ಥಿಸುವ(ಸಿದ್ಧಮಾಡಿಕೊಡುವ) ವಾದಗಳಷ್ಟನ್ನೇ ಮಂಡಿಸತಕ್ಕದ್ದು ಮತ್ತು ತಮ್ಮ ಪ್ರತಿವಾದಿ ಮುಂದಿಟ್ಟ ನ್ಯಾಯವಾದ ವಾದಾಂಶಗಳನ್ನು ಮೆಚ್ಚಬಲ್ಲವರೂ ಆಗಿರುವುದವಶ್ಯಕ. ಎಲ್ಲಕ್ಕಿಂತ ಹೆಚ್ಚಾಗಿ ಅವರು ಸತ್ಯನಿಷ್ಕರ್ಷೆಯ ಬಗೆಗೆ ನಿಷ್ಠೆಯುಳ್ಳವರಾಗಿರಬೇಕು. ಸಮಗುಣಿಗಳಾದ ಇಬ್ಬರು ವಾದಾರ್ಹರು. ಅದೇ ಪ್ರಕಾರ ಸಮಗುಣಿಗಳಾದ ಇಬ್ಬರೇ ಜಲ್ಪ–ವಿತಂಡಗಳನ್ನು ಬಳಸಲು ತಕ್ಕವರು. ಈ ರೀತಿಯಿಂದ ಮಾತ್ರ ಮೂವಗೆಯ ಕಥಾಪದ್ಧತಿಯ ಫಲಗಳನ್ನು ಪೂರ್ಣವಾಗಿ ಪಡೆಯಬಹುದು. ವಿರುದ್ಧಗುಣಿಗಳಿಗೆ ಕಥೆಯ ಯಾವ ಪ್ರಕಾರದಲ್ಲಿಯೂ ಭಾಗವಹಿಸಲು ಹಕ್ಕಿಲ್ಲ. ಕಥಾಪದ್ಧತಿಯನ್ನು ಅನುಸರಿಸಲು ಅನರ್ಹರಾದವರು ಕಥಾಬಾಹ್ಯರು(ಚರ್ಚಾಬಾಹಿರರು).

## ಚರ್ಚೆಯ ತಂತ್ರ

ತತ್ತ್ವಶಾಸ್ತ್ರದ ಪೃಚ್ಛಕನು ಹಿಡಿಯತ್ತಕದ್ದು ವಾದಕಥಾಪದ್ಧತಿಯನ್ನು. ವಾದಕಥೆ–ಜಲ್ಪಕಥೆಗಳಲ್ಲಿ ಪಕ್ಷ (ಅನುಕೂಲ ಸಿದ್ಧಾಂತ) ಮತ್ತು ಪ್ರತಿಪಕ್ಷ (ಪ್ರತಿಕೂಲ ಸಿದ್ಧಾಂತ) ಎಂಬೆರಡನ್ನು ತೆಗೆದುಕೊಳ್ಳಬೇಕಾಗುತ್ತದೆ. ಒಂದು ವಸ್ತುವಿಗೆ ಅನ್ವಯಿಸಲಾಗುವ ಎರಡು ವಿರುದ್ಧ ಗುಣಗಳಿಗೆ ಪಕ್ಷ–ಪ್ರತಿಪಕ್ಷಗಳೆಂದು ಹೆಸರು. ಒಂದು ವಸ್ತುವಿಗೆ ವಾದಿಯು ಒಂದು ಗುಣವನ್ನು ಅನ್ವಯಿಸುತ್ತಾನೆ. ಪ್ರತಿವಾದಿಯು ತದ್ವಿರುದ್ಧವಾದ ಇನ್ನೊಂದು ಗುಣವನ್ನು ಅನ್ವಯಿಸುತ್ತಾನೆ. ಆಗ ಮೊದಲಿನದು ಪಕ್ಷ, ಎರಡನೆಯದು ಪ್ರತಿಪಕ್ಷ ಎನ್ನಿಸುತ್ತದೆ. ಒಂದೇ ವಸ್ತುವಿಗೆ ವಿರುದ್ಧ ಗುಣಗಳನ್ನು ಅನ್ವಯಿಸಲಾಗಿದೆ–ಎಂಬುದನ್ನು ಇಬ್ಬರೂ ಒಪ್ಪಿಕೊಳ್ಳಬೇಕು. ಈ ಪ್ರಕಾರವಾದಿ–ಪ್ರತಿವಾದಿಗಳಿಬ್ಬರೂ ಒಂದು ವಸ್ತುವಿಗೆ ವಿರುದ್ಧ ಗುಣಗಳನ್ನು ಅನ್ವಯಿಸಿ ಮಾತನಾಡುವುದನ್ನು ವಾದವೆನ್ನಲಾಗುತ್ತದೆ. ಆದರೆ ಒಂದು ವಸ್ತುವಿಗೆ ವಿರುದ್ಧ ಗುಣಗಳನ್ನು ಅನ್ವಯಿಸುವುದರಿಂದ ಸಂಶಯ ಉತ್ಪನ್ನವಾಗುತ್ತದೆ. ಎರಡು ವಿರುದ್ಧ ಗುಣಗಳು ಒಂದೇ ವಸ್ತುವಿನಲ್ಲಿ ಒಟ್ಟಿಗಿರಲಾರವು. ಅವು ಒಟ್ಟಿಗಿದ್ದದ್ದೇ ಆದರೆ ಅವುಗಳನ್ನು ವಿರುದ್ಧವಾದವುಗಳೆನ್ನಲಾಗದು. ಪರಸ್ಪರ

ವಿರುದ್ಧ ಗುಣಗಳುಳ್ಳದ್ದೆಂದು ಒಂದು ವಸ್ತುವನ್ನು ಪ್ರಮಾಣಗಳು ಸಿದ್ಧಮಾಡಲಾರವು. ಅಂಥ ಸಂದರ್ಭವು ಅನಂತ ಸಂದೇಹಕ್ಕೆ ಎಡೆಗೊಡುತ್ತದೆ. ಉದಾಹರಣೆ: ಶಬ್ದವು ಅನಿತ್ಯವೆಂದು ವಾದಿಯೂ ನಿತ್ಯವೆಂದು ಪ್ರತಿವಾದಿಯೂ ವಾದಿಸಿದರೆ ಒಂದೇ ವಸ್ತುವಾದ ಶಬ್ದಕ್ಕೆ ಅನಿತ್ಯತೆ–ನಿತ್ಯತೆಗಳೆಂಬ ಎರಡು ವಿರುದ್ಧ ಗುಣಗಳನ್ನು ಅನ್ವಯಿಸಿದಂಥಾಗುತ್ತದೆ. ಶಬ್ದವು ನಿತ್ಯವೋ ಅಲ್ಲವೋ ಎಂಬ ಸಂಶಯವನ್ನಿದು ನಮ್ಮಲ್ಲಿ ಉಂಟು ಮಾಡುತ್ತದೆ. ಒಂದು ಪಕ್ಷವನ್ನು ಸಿದ್ಧಪಡಿಸಿ ಇನ್ನೊಂದನ್ನು ಖಂಡಿಸುವ ಪ್ರಮಾಣಗಳು ದೊರಕುವವರೆಗೆ ಈ ಸಂಶಯವನ್ನು ಪರಿಹರಿಸಲು ಸಾಧ್ಯವಾಗದು.

ವಾದಿ–ಪ್ರತಿವಾದಿಗಳು ಚರ್ಚೆಯನ್ನಾರಂಭಿಸುವ ಮೊದಲೇ ಚರ್ಚೆಯ ಕ್ರಮವನ್ನು ನಿರ್ಧರಿಸಲಾಗುತ್ತದೆ. ಮಧ್ಯಸ್ಥನ(ನಿರ್ಣಾಯಕನ) ಮತ್ತು ಅನುವಿಧೇಯನ(ಅಧ್ಯಕ್ಷನ) ನಿಯೋಜನವು ಚರ್ಚಾಕ್ರಮ ನಿರ್ಧಾರದ ಒಂದು ಅಂಗ. ಚರ್ಚೆ ಪ್ರಾರಂಭವಾಗುವ ಮೊದಲು ವಾದಿ–ಪ್ರತಿವಾದಿಗಳು ಅನುಸರಿಸಬೇಕಾದ ಕ್ರಮವನ್ನು ನಿರ್ಣಾಯಕನು ನಿರ್ಧರಿಸುತ್ತಾನೆ. ನಿರ್ಣಾಯಕನು ಸತ್ಯಜ್ಞನೂ ಪೂರ್ವಗ್ರಹರಹಿತನೂ(ಅಥವಾ ವ್ಯಾಮೋಹ ಮುಕ್ತನೂ) ಆಗಿರಬೇಕು. ಅಂಥ ನಿರ್ಣಾಯಕನು ಚರ್ಚೆಯ ಗಡಿಮಿತಿಗಳನ್ನು ಗೊತ್ತು ಮಾಡಬೇಕು. ಮತ್ತು ವಾದಿ–ಪ್ರತಿವಾದಗಳಿಬ್ಬರ ವಾದಗಳ ಸಾರವನ್ನು ಹೇಳಬೇಕು. ಉಭಯ ಪಕ್ಷಗಳ ಗುಣದೋಷಗಳನ್ನೂ ಅವನು ಲೆಕ್ಕಿಸಿ ಬೆಲೆಕಟ್ಟಬೇಕು. ಎರಡರಲ್ಲೂ ಯಾವ ಪಕ್ಷವಾದರೂ ಸ್ವೀಕೃತ ಕ್ರಮವನ್ನು ಉಲ್ಲಂಘಿಸಿದರೆ ಹಾಗೆ ಉಲ್ಲಂಘಿಸಿದ ಪಕ್ಷಕ್ಕೆ ಆ ಉಲ್ಲಂಘನೆಯನ್ನು ವಿವರಿಸಿ ಹೇಳುವುದು ನಿರ್ಣಾಯಕನ ಕರ್ತವ್ಯ. ಚರ್ಚೆಯ ಫಲಿತಾಂಶವನ್ನೂ ನಿರ್ಣಾಯಕನು ಸಾರಬೇಕು.[೯] ಮಧ್ಯಸ್ಥ ಅನುವಿಧೇಯರ ಈ ಕರ್ತವ್ಯಗಳಿಗೂ ವಾದಕಥೆಗೂ ಸಂಬಂಧವಿಲ್ಲ. ಜಲ್ಪ–ವಿತಂಡಗಳಲ್ಲಿ ಇವು ಬಹಳ ಮುಖ್ಯ. ಪ್ರಾಮಾಣಿಕ ತತ್ತ್ವಶಾಸ್ತ್ರೀಯ ಪೃಚ್ಛಕರು ತಾವೇ ವಾದಕಥೆಯನ್ನು ನಡೆಸಬಹುದು. ಅವರಿಗೆ ನಿರ್ಣಾಯಕನಾವನೂ ಬೇಕಾಗದಿರಬಹುದು. ಅನುವಿಧೇಯನ ಆಯ್ಕೆಯೆಂದರೆ ಚರ್ಚಾಸಭೆಯಲ್ಲಿ ದೊರೆಯನ್ನೋ ಅಷ್ಟೇ ಪ್ರಭಾವಶಾಲಿಯಾದ ಇನ್ನಾವನನ್ನೋ ಅಧ್ಯಕ್ಷಪಟ್ಟದಲ್ಲಿ ಕುಳ್ಳಿರಿಸುವುದು. ನಿರ್ಣಾಯಕನು ಫಲಿತಾಂಶವನ್ನು ಸಾರಿದ ಮೇಲೆ ಈ ಅನುವಿಧೇಯನು ವಾದಿ–ಪ್ರತಿವಾದಿಗಳನ್ನು ಅವರವರ ಯೋಗ್ಯತೆಗನುಸಾರವಾಗಿ ಪ್ರಶಂಸಿಸುವನು. ಅನುವಿಧೇಯನ ಈ ಆಯ್ಕೆಯೂ ವಾದಕಥೆಗನಾವಶ್ಯಕ. ವಾದಕಥಾರ್ಹರು ಕೀರ್ತಿ–ಗೌರವಗಳ ಬಗ್ಗೆ ಆತುರರಾಗಿರರು. ಅವರು ಸತ್ಯವನ್ನಷ್ಟೇ ಶೋಧಿಸಬಯಸುವವರು. ಪಕ್ಷ–ಪ್ರತಿಪಕ್ಷಗಳ ಸ್ವೀಕಾರದಿಂದ ಉಂಟಾಗುವ ಸಂಶಯವನ್ನು ಆಗಲೇ ಉಲ್ಲೇಖಿಸಲಾಯಿತು. ಈ ಸಂಶಯವನ್ನು ಉಲ್ಲೇಖಿಸುವ ಹೇಳಿಕೆಯನ್ನು ವಿಪ್ರತಿಪತ್ತಿವಾಕ್ಯವೆಂದು ಕರೆಯಲಾಗುತ್ತದೆ. ನಿರ್ಣಾಯಕನಾಗಿ ಆರಿಸಲ್ಪಟ್ಟವನು ಈ ವಿಪ್ರತಿಪತ್ತಿವಾಕ್ಯವನ್ನು ಮಂಡಿಸುತ್ತಾನೆ. ಹಿಂದೆ ಹೇಳಲಾದ ನಿರ್ಣಾಯಕನ ವಿವಿಧ ಕರ್ತವ್ಯಗಳಲ್ಲಿ ವಿಪ್ರತಿಪತ್ತಿವಾಕ್ಯವನ್ನು ಮಂಡಿಸುವುದೂ ಒಂದೆಂದು ಗಣಿಸಲಾಗಿದೆ.

ಸಂದೇಹ ಪರಿಹಾರವಾಗದೆ ಸತ್ಯನಿಷ್ಕರ್ಷೆಯಾಗದು; ಸಂದೇಹ ಪರಿಹಾರವೇ ಚರ್ಚೆಯ ಫಲಿತಾಂಶ. ವಿಪ್ರತಿಪತ್ತಿ ವಾಕ್ಯವು ವಾದಿ–ಪ್ರತಿವಾದಗಳಲ್ಲಿ ಸಂಶಯವನ್ನುಂಟು ಮಾಡುತ್ತದೆ; ಅನಂತರ ಸಂದೇಹ ಪ್ರಜ್ಞೆಯುಂಟಾಗುವುದು; ಆಮೇಲೆ ಕೊನೆಯಲ್ಲಿ ಸಂದೇಹದ ಅನುಪಸ್ಥಿತಿಯ ಅರಿವು ಮೂಡುವುದು. ಈ ಸಂದೇಹಾಭಾವದ ಜ್ಞಾನವೇ ಚರ್ಚಾಫಲಜ್ಞಾನ. ಈ ಫಲಜ್ಞಾನ ದೊರಕಿದೊಡನೆಯೇ ಹಾಗೆ ದೊರಕಿಸಿಕೊಂಡವನು ತತ್ಪರನಾಗುವನು. ಇದರಿಂದ ಫಲಪ್ರಾಪ್ತಿಯ ಸಾಧನದ ಬಗೆಗೆ ಚರ್ಚಿಸುವುದಕ್ಕೆ ಎಡೆಯುಂಟಾಗುವುದು. ವಿವಿಧ ಗ್ರಂಥಕರ್ತರು ಅಂಥ ವಿಪ್ರತಿಪತ್ತಿವಾಕ್ಯದ ಅಗತ್ಯವನ್ನು ಎತ್ತಿ ತೋರಿಸಿದ್ದಾರೆ. ಆದರೆ ನವ್ಯನ್ಯಾಯ ಪ್ರಸ್ಥಾನದವರೂ ಮಧ್ವಪಂಥದ ಗುರುಗಳೂ ಸಂಶಯವನ್ನು ಚರ್ಚೆಯ ಪೂರ್ವಾಂಗವೆಂದು ಸ್ವೀಕರಿಸಿಲ್ಲ. ಅವರ ಪ್ರಕಾರ ವಿಪ್ರತಿಪತ್ತಿವಾಕ್ಯವು ಅಪ್ರಯೋಜಕ. ಆದರೆ ಉದಯನಾಚಾರ್ಯನವರೆಗಿನ ನೈಯಾಯಿಕರೂ ವಿವಿಧ ಅದ್ವೈತಾಚಾರ್ಯರೂ ಸಂಶಯವನ್ನು ಚರ್ಚೆಯ ಪೂರ್ವಾಂಗವೆಂದು ಗ್ರಹಿಸಿರುವುದಲ್ಲದೆ, ವಿಪ್ರತಿಪತ್ತಿವಾಕ್ಯವನ್ನು ಸಂಶಯಮಂಡನ ಮಾಡುವ ವಾಕ್ಯವೆಂದೂ ಗ್ರಹಿಸಿದ್ದಾರೆ.[೧೦] ಈ ವಿಪ್ರತಿಪತ್ತಿಮಂಡನವನ್ನು ನೈಯಾಯಿಕರ ಸಮಯಾನುಸಾರವಾಗಿ ಮಾತ್ರ ಮಾಡಲಾಗಿದೆ; ಸಾಕ್ಷಾತ್ತಾದ ಚರ್ಚೆಯಲ್ಲಿ ಅದಕ್ಕೆ ನಿಜವಾದ ಸ್ಥಾನವಾವುದೂ ಇಲ್ಲ.[೧೧]

## ವಾದದ ಕ್ರಿಯಾನುಕ್ರಮ

ಅದು ಹೇಗಾದರೂ ಇರಲಿ; ಚರ್ಚಾವಿಷಯವನ್ನು ಮಂಡಿಸಿದ ಮೇಲೆ, ವಾದಿಯು ಒಂದು ಪಕ್ಷವನ್ನೂ ಪ್ರತಿವಾದಿಯು ಇನ್ನೊಂದನ್ನೂ ತೆಗೆದುಕೊಳ್ಳುವರು. ಅಂದರೆ, ವಿಪ್ರತಿಪತ್ತಿ ವಾಕ್ಯದಲ್ಲಿರುವ ಎರಡು ವಿರುದ್ಧ ಸ್ಥಾನಗಳನ್ನು ಅವರು ಸ್ವೀಕರಿಸುತ್ತಾರೆ–ಎಂದು ಅರ್ಥ. ತನ್ನ ಸ್ಥಾನವನ್ನು ಸ್ವೀಕರಿಸಿದ ಬಳಿಕ ವಾದಿಯು ತನ್ನ ನಿಲುಮೆಯನ್ನು ಸ್ಥಾಪಿಸಬಲ್ಲ ಹೇತುವನ್ನು(ಕಾರಣವನ್ನು ಇಲ್ಲವೆ ವ್ಯಾಪ್ಯವಾದ ಲಿಂಗವನ್ನು) ಹೇಳಬೇಕು. ಇದನ್ನು ಸ್ಥಾಪನೆಯೆಂದು ಕರೆಯಲಾಗುತ್ತದೆ. ಇದನ್ನು ಮಾಡಲು ವಾದಿಯು ವಾಸ್ತವಿಕ ಘಟನಾರೂಪದ ಒಂದು ಸಪಕ್ಷ ದೃಷ್ಟಾಂತವನ್ನು ಕೊಡಬೇಕು. ಅದು ಸಿದ್ಧಮಾಡಬೇಕಾಗಿರುವ ಸಾಧ್ಯದ ಅಧಿಕರಣದಲ್ಲೇ ಇರುವಂಥದಾಗಿರಬೇಕು. ಉದಾಹರಣೆ: ವಿಪ್ರತಿಪತ್ತಿವಾಕ್ಯವು–ಶಬ್ದವು ಅನಿತ್ಯವೋ ಅಲ್ಲವೋ–ಎಂಬ ಸಂಶಯವನ್ನು ಹುಟ್ಟಿಸಿದಾಗ ಶಬ್ದವು ಅನಿತ್ಯವೆಂದು ಸಿದ್ಧಮಾಡಲೆದ್ದ ವಾದಿಯು 'ಹುಟ್ಟುಳ್ಳ'ದ್ದನ್ನು ಹೇತುವನ್ನಾಗಿ ಕೊಡಬೇಕು. ಹುಟ್ಟುಳ್ಳದ್ದನ್ನು 'ಕೃತಕ'ವೆನ್ನಲಾಗುತ್ತದೆ. ಮೂಲವನ್ನು ಅಥವಾ ಹುಟ್ಟನ್ನು ಉಳ್ಳ ಈ ಹೇತುವು ಅನಿತ್ಯವಸ್ತುವಿಗೊಂದು ದೃಷ್ಟಾಂತ. ಅನಿತ್ಯತೆಯ ಅಧಿಕರಣ#ವೆಂದು ಸ್ವೀಕರಿಸಲಾದ ಶಬ್ದದಲ್ಲಿ ಅದು ಇರುತ್ತದೆ. ಈ ಎರಡು ಸಂಗತಿಗಳು ವ್ಯಾಪ್ತಿಯನ್ನು (ಅವಿನಾಭಾವವನ್ನು ಅಥವಾ ನಿಯತಸಾಹಚರ್ಯವನ್ನು) ಮತ್ತು ಪಕ್ಷಧರ್ಮತೆಯನ್ನು (ಕರ್ತೃವಸ್ತುವಿನ ಅಥವಾ ಉದ್ದೇಶದ ವಿಶೇಷಣವಾಗಿರುವ ಶರ್ತ

ಇಲ್ಲವೆ ಉಪಾಧಿಯನ್ನು) ಪ್ರತಿನಿಧಿಸುತ್ತವೆ; ಇವು ಹೇತುವಿನ ಸಾಮರ್ಥ್ಯವೆನ್ನಿಸಿವೆ. ಇವೆರಡರ ಸಹಾಯದಿಂದ ಹೇತುವು ಸಿದ್ಧಮಾಡಬೇಕಾದ ಸಾಧ್ಯವನ್ನು ಸ್ಥಾಪಿಸುತ್ತದೆ. ಹೇತುವು ಸಾಧ್ಯಕ್ಕೊಂದು ನಿದರ್ಶನವೆಂಬುದನ್ನೂ ತೋರಿಸಬೇಕಾಗುತ್ತದೆ. ಅನುಭವದ ಉದಾಹರಣೆ ಕೊಟ್ಟು ಇದನ್ನು ಮಾಡಬೇಕು. ಹೇಗೆಂದರೆ; ಹುಟ್ಟುಳ್ಳದ್ದೆಲ್ಲವೂ ಅನಿತ್ಯ–ಮಡಿಕೆಯ ಹಾಗೆ. ಸಾಧ್ಯಕ್ಕೂ ಹೇತುವಿಗೂ ನಡುವೆ ನಿಯತವಾದ(ಬದಲಾಗದ) ಸಂಬಂಧವಿದೆ ಎಂಬುದನ್ನಿದು ತೋರಿಸುತ್ತದೆ. ಈಗ ಒಂದು ಸಾಧ್ಯವು ಒಂದು ಪಕ್ಷದಲ್ಲಿ(ಒಂದು ಪಂಚಾವಯವವಾಕ್ಯದ ಕರ್ತೃಪದದಲ್ಲಿ) ಸ್ಥಾಪಿಸಲ್ಪಡಬೇಕಾದರೆ ಆ ಹೇತುವು ಆ ಸಾಧ್ಯದ ವ್ಯಾಪ್ತಿಯೊಡನೆ ಆ ಪಕ್ಷದಲ್ಲಿ ಲಭ್ಯವಾಗಬೇಕು. ಆದುದರಿಂದ ವಾದಿಯು ಉಪನಯವನ್ನು (ಅನ್ವಯವನ್ನು) ಮಾಡಬೇಕು. ಆ ಹೇತುವು(ಇಲ್ಲಿ 'ಹುಟ್ಟುಳ್ಳದ್ದು' ಎಂಬುದು) ಆ ಸಾಧ್ಯದ(ಇಲ್ಲಿ 'ಅನಿತ್ಯತೆ') ವ್ಯಾಪ್ತಿಯೊಡನೆ ನಿಜವಾಗಿಯೂ ಆ ಪಕ್ಷ(ಇಲ್ಲಿ 'ಶಬ್ದ')ದಲ್ಲಿ ಲಬ್ಧ ಎಂದು ಹೇಳುವುದರಿಂದ ಉಪನಯ ಮಾಡಿದಂತಾಗುತ್ತದೆ. ಅನಂತರ ವಾದಿಯು, 'ಆದುದರಿಂದ ಶಬ್ದವು ಅನಿತ್ಯ' ಎಂಬ ನಿಗಮನ(ತೀರ್ಮಾನ)ದಿಂದ ತನ್ನ ವಾದವನ್ನು ಮುಗಿಸುತ್ತಾನೆ. ಕೃತಕತ್ವವೆಂಬ ಲಕ್ಷಣ ಅಥವಾ ಗುರುತು ಅನಿತ್ಯತ್ವ ಅಥವಾ ಅಶಾಶ್ವತತ್ವ ಎಂಬ ಧರ್ಮವನ್ನು ಸ್ಥಾಪಿಸುವುದರಿಂದ ಕೃತಕತ್ವದ ಆಧಾರದ ಮೇಲೆ ಶಬ್ದದ ಅನಿತ್ಯಸ್ವರೂಪದ ಬಗೆಗಿನ ಮೂಲ ಸಿದ್ಧಾಂತವು ಹೀಗೆ ಸ್ಥಾಪಿತವಾಗುತ್ತದೆ. ಕೃತಕತ್ವವೆಂದರೆ ಹುಟ್ಟುಳ್ಳದ್ದಾಗಿರುವಿಕೆ. ಈ ಹೇಳಿಕೆಗಳು 'ನ್ಯಾಯ'ವೆಂಬ ಎಲ್ಲವನ್ನೂ ಒಳಗೊಳ್ಳುವ ಹೇಳಿಕೆಯ ಐದು ಭಾಗ(ಅವಯವ)ಗಳೆನ್ನಿಸುತ್ತವೆ.

ಮೇಲೆ ತೋರಿಸಿದ ನ್ಯಾಯ ವಾಕ್ಯದ ಐದು ಅವಯವಗಳ ಬಗೆಗೆ ತಾರ್ಕಿಕರಲ್ಲಿ(ನೈಯಾಯಿಕರಲ್ಲಿ) ಬಹಳ ದೊಡ್ಡ ಭಿನ್ನಾಭಿಪ್ರಾಯಗಳಿವೆ. ಬಹಳ ಹಿಂದಿನ ನೈಯಾಯಿಕರು ಉಪನಯವೊಂದೇ ನ್ಯಾಯವಾಕ್ಯದ ಅಂಗವೆಂದರು. ಬೌದ್ಧವಾದ ವಿದ್ವಾಂಸರು ಉಪನಯ–ಉದಾಹರಣ(ದೃಷ್ಟಾಂತ, ನಿದರ್ಶನ)ಗಳೆರಡನ್ನೇ ಸ್ವೀಕರಿಸಿದರು. ಮೀಮಾಂಸಕರು ಪ್ರತಿಜ್ಞೆ(ಪ್ರಮೇಯ ಸಿದ್ಧಮಾಡಿ ತೋರಿಸಬೇಕಾದ ಸತ್ಯವನ್ನು ಹೇಳುವ ವಾಕ್ಯ), ಹೇತು(ಸಿದ್ಧಮಾಡಲು ಅಗತ್ಯವಾದ ಕಾರಣ ಅಥವಾ ಸಾಧನವನ್ನು ಹೇಳುವ ವಾಕ್ಯ) ಮತ್ತು ಉದಾಹರಣ(ವೈಯಕ್ತಿಕ ದೃಷ್ಟಾಂತದಿಂದೊಡಗೂಡಿದ ಸಾಮಾನ್ಯ ಸತ್ಯವನ್ನು ಹೇಳುವ ಒಂದು ವಾಕ್ಯ)ಗಳನ್ನು ಮಾತ್ರ ಒಪ್ಪಿದರು. ನ್ಯಾಯವಾಕ್ಯಕ್ಕೆ ಐದು ಅವಯವ ವಾಕ್ಯಗಳಿವೆಯೆಂದು ನೈಯಾಯಿಕರೊಪ್ಪಿದ್ದನ್ನು ಆಗಲೇ ಹೇಳಲಾಗಿದೆ. ಪ್ರಾಚೀನ ನ್ಯಾಯದರ್ಶನ ಪ್ರಸ್ಥಾನದ ಕೆಲವರು ಜಿಜ್ಞಾಸೆ(ಅರಿಯುವ ಆಸೆ), ಸಂಶಯ, ಶಕ್ಯಪ್ರಾಪ್ತಿ(ಪರಿಹಾರ ಸಾಧ್ಯ ಅಥವಾ ಶಕ್ಯ ಎಂಬ ನಂಬಿಗೆ), ಪ್ರಯೋಜನ ಮತ್ತು ಸಂಶಯವ್ಯುದಾಸ(ಸಂದೇಹ ಪರಿಹಾರ) ಎಂಬ ಐದು ಅವಯವಗಳನ್ನು ಪ್ರತಿಜ್ಞಾದಿ ಐದರೊಡನೆ ಸೇರಿಸಿ ದಶಾವಯವವಾದಿಗಳೆನ್ನಿಸಿಕೊಂಡಿದ್ದರು. ಜಿಜ್ಞಾಸಾದಿ ಪಂಚ ಅವಯವಗಳಾದ ಮೇಲೆ ಪ್ರತಿಜ್ಞಾದಿ ಪಂಚ ಅವಯವಗಳು ಬರುತ್ತವೆ ಎಂಬುದು

ಗಮನೀಯವಾಗಿದೆ. ಜಿಜ್ಞಾಸಾದಿ ಐದನ್ನು ನಿರ್ಧರಿಸಿದ ಮೇಲೆ ಪ್ರತಿಜ್ಞಾದಿ ಐದನ್ನು ನಿರ್ಧರಿಸಹೋಗಬೇಕು-ಎಂಬುದು ನ್ಯಾಯದರ್ಶನದ ಪ್ರಾಚೀನ ಪ್ರಸ್ಥಾನದ ಕೆಲವರ ಮತ. ನ್ಯಾಯ ಸೂತ್ರದ[೧೨] ಮೇಲಿನ ತನ್ನ ಭಾಷ್ಯದಲ್ಲಿ ವಾತ್ಸ್ಯಾಯನನು ಈ ಮತವನ್ನು ಉಲ್ಲೇಖಿಸಿದ್ದಾನೆ. ಜಗದೀಶನು ತನ್ನ ತತ್ತ್ವಚಿಂತಾಮಣಿಯ ವ್ಯಾಖ್ಯೆಯ ಪ್ರಾಸ್ತಾವಿಕ ಭಾಗದಲ್ಲಿಯೂ ಈ ಅವಯವಗಳನ್ನು ಉಲ್ಲೇಖಿಸಿದ್ದಾನೆ. ಜಿಜ್ಞಾಸೆ, ಸಂಶಯ ಮುಂತಾದ ಪಂಚಕದ ವಿಸ್ತಾರವಾದ ವಿವರಗಳನ್ನು ಯುಕ್ತಿದೀಪಿಕಾ ವ್ಯಾಖ್ಯೆಯ ಗ್ರಂಥಕರ್ತನು ಸಾಂಖ್ಯಕಾರಿಕೆಯ[೧೩] ಎರಡು ಪಂಕ್ತಿಯ ಒಂದು ಶ್ಲೋಕದ ಅರ್ಥವಿವರಣೆಯಲ್ಲಿ ಕೊಟ್ಟಿದ್ದಾನೆ. ಶಂಕರಮಿಶ್ರನ ವಾದಿವಿನೋದದಂತಹ ಕೆಲಗ್ರಂಥಗಳಲ್ಲಿ, ನ್ಯಾಯವಾಕ್ಯದ ಪ್ರಸಿದ್ಧ ಪಂಚಾವಯವಗಳಾದ ಬಳಿಕ ಕಂಟಕೋದ್ಧಾರವೆಂಬ ಹೊಸ ಅವಯವದ ಬಳಕೆಯನ್ನು ಹೇಳಲಾಗಿದೆ.

## ಇತರರು ಮಾಡಿದ ನ್ಯಾಯ ತಂತ್ರೋಪಯೋಗ

ತತ್ತ್ವಚರ್ಚೆಯ ಸ್ವರೂಪವನ್ನು ನಾವು ಸಂಕ್ಷೇಪವಾಗಿ ಬಿತ್ತರಿಸಿದೆವು. ಈ ವಿಷಯದ ಮೇಲೆ ಹೆಚ್ಚಿನ ಹೊಸ ಬೆಳಕನ್ನು ಚರಕಸಂಹಿತೆಯ ವಿಮಾನಸ್ಥಾನವೆಂಬ ವಿಭಾಗವು ಬೀರುತ್ತದೆ. ವಸುಬಂಧು, ದಿಙ್ನಾಗ, ಧರ್ಮಕೀರ್ತಿ ಮತ್ತು ಇತರ ಬೌದ್ಧ ತತ್ತ್ವಜ್ಞಾನಿಗಳು ಅಕ್ಷಪಾದ ಬಿತ್ತರಿಸಿದ ಚರ್ಚಾಕಲೆಯನ್ನು ವಿವರಪೂರ್ವಕವಾಗಿ ಪರಿಶೀಲಿಸಿದ್ದಾರೆ. ಜೈನ ತತ್ತ್ವಜ್ಞಾನಿಗಳೂ ಈ ದಿಶೆಯಲ್ಲಿ ಕೆಲಮಟ್ಟಿನ ಪರಿಶೀಲನವನ್ನು ಮಾಡಿದ್ದಾರೆ. ಉದ್ಯೋತಕಾರ, ವಾಚಸ್ಪತಿಮಿಶ್ರ, ಉದಯನ ಮತ್ತು ಇತರರು ಅವರ ಆಕ್ಷೇಪಗಳಿಗೆ ವಿಸ್ತಾರವಾಗಿ ಉತ್ತರವನ್ನು ಕೊಟ್ಟಿದ್ದಾರೆ. ಅವರೆಲ್ಲರೂ ನಿರ್ಧರಿಸಿಕೊಟ್ಟ ಚರ್ಚಾಕಲೆಯನ್ನು ಅನುಕೂಲ ರೂಪಕ್ಕೆ ತಿರುಗಿಸಿಕೊಂಡು ಬಳಸಿಯೇ ವೇದಾಂತ, ಸಾಂಖ್ಯ ಮುಂತಾದ ದರ್ಶನಗಳ ಆಚಾರ್ಯರು ತಮ್ಮ ತಮ್ಮ ತತ್ತ್ವ ಸಿದ್ಧಾಂತಗಳನ್ನು ಬಿತ್ತರಿಸಿದ್ದಾರೆ. ಅನಂತರದ ಅವಧಿಯಲ್ಲಿ ರಾಮಾನುಜ ಪ್ರಸ್ಥಾನದ ಒಬ್ಬ ಆಚಾರ್ಯನಾದ ವೇದಾಂತ ದೇಶಿಕನು ತನ್ನ ನ್ಯಾಯ ಪರಿಶುದ್ಧಿಯಲ್ಲಿಯೂ ಮಧ್ವಪ್ರಸ್ಥಾನದ ಒಬ್ಬ ಪ್ರಸಿದ್ಧ ಆಚಾರ್ಯನಾದ ವ್ಯಾಸತೀರ್ಥನು ತನ್ನ ತರ್ಕತಾಂಡವದಲ್ಲಿಯೂ ಅಕ್ಷಪಾದ ಆರಂಭಿಸಿದ ತತ್ತ್ವಚರ್ಚಾಕಲೆಯನ್ನು ಪರೀಕ್ಷಿಸಲು ಪ್ರಯತ್ನ ಮಾಡಿದರು. ಅವರೂ ನ್ಯಾಯಪ್ರಸ್ಥಾನ ಎತ್ತಿಹಿಡಿದ ಪದ್ಧತಿಶಾಸ್ತ್ರದ ವಿರುದ್ಧವಾಗಿ ಎಷ್ಟೆಷ್ಟನ್ನೋ ಹೇಳಿದರು.

ಇತರ ದರ್ಶನಗಳ ಚರ್ಚೆಯಲ್ಲಿ ಮಾಡಲಾದ ನ್ಯಾಯಾವಯವಗಳ ಅನ್ವಯವು ಅವುಗಳ ಪ್ರಯೋಜನವನ್ನು ಎತ್ತಿ ತೋರಿಸುತ್ತದೆ. ಮೀಮಾಂಸಕರೂ ವೇದಾಂತಿಗಳೂ ಚರ್ಚೆಯ ಪ್ರತಿಯೊಂದು ಘಟಕವನ್ನೂ ಒಂದೊಂದು ಅಧಿಕರಣವೆಂದು ಕರೆದಿರುವುದಿಲ್ಲಿ ಉಲ್ಲೇಖನೀಯ. ಮೀಮಾಂಸಕರ ಪ್ರತಿಯೊಂದು ಅಧಿಕರಣಕ್ಕೂ ವಿಷಯ(ಚರ್ಚಾವಸ್ತು ಅಥವಾ ಪ್ರಮೇಯ), ಸಂಶಯ, ಪೂರ್ವಪಕ್ಷ, ಸಿದ್ಧಾಂತ ಮತ್ತು ಸಂಗತಿ(ಸುಸಂಬದ್ಧತೆ) ಎಂಬ ಐದು ಅವಯವಗಳಿವೆ. ಭಾಟ್ಟದೀಪಿಕೆ ಮತ್ತು ಇತರ ಗ್ರಂಥಗಳಲ್ಲಿ

ಅಧಿಕರಣವೊಂದಕ್ಕೆ ವೇದವೊಂದಕ್ಕಿರುವಂತೆ ಷಡಂಗಗಳಿವೆಯೆಂದು ಖಂಡದೇವ ಹೇಳಿದ್ದಾನೆ. ಅವನು ಹೇಳಿದ ಆರನೆಯ ಅವಯವವೆಂದರೆ ಪ್ರಯೋಜನ. ಪೂರ್ವಪಕ್ಷ(ಮೇಲುಮೇಲಿನ ಅಭಿಪ್ರಾಯ) ಮತ್ತು ಉತ್ತರಪಕ್ಷ(ತೀರ್ಮಾನ, ಸಿದ್ಧಾಂತ)ಗಳೆರಡರ ಅಗತ್ಯವನ್ನೂ ಪ್ರತ್ಯೇಕವಾಗಿ ಹೇಳುವುದೇ ಪ್ರಯೋಜನ. ಪ್ರಯೋಜನದ ಭೇದದ ದೃಷ್ಟಿಯಿಂದ ಪೂರ್ವ ಮತ್ತು ಉತ್ತರ(ಸಿದ್ಧಾಂತ) ಪಕ್ಷಗಳೆರಡೂ ಭಿನ್ನ. ಮೀಮಾಂಸಾ ಸೂತ್ರದ ಭಾಷ್ಯಕಾರನಾದ ಶಬರಸ್ವಾಮಿಯು ಅವವುಗಳು ಕಟ್ಟುವ ಅಗತ್ಯದ (ಪ್ರಯೋಜನದ) ಬೆಲೆಯ ಮೇಲಿನಿಂದ ಪೂರ್ವಪಕ್ಷ ಮತ್ತು ಸಿದ್ಧಾಂತ ಪಕ್ಷಗಳಲ್ಲಿರುವ ವ್ಯತ್ಯಾಸವನ್ನು ಹೇಳಿದ್ದಾನೆ.

ಒಂದು ಚರ್ಚೆಗೆ ಒಂದು ಅಧಿಕರಣವನ್ನು[++] ಮೀಸಲಿಡುವ ಪದ್ಧತಿಯು ಮೀಮಾಂಸಕರಲ್ಲಿ ಮಾತ್ರ ಬಳಕೆಯಲ್ಲಿದೆ, ನೈಯಾಯಿಕರಲ್ಲಿಲ್ಲ–ಎಂದು ಬಹಳ ಜನರು ತಿಳಿದಿದ್ದಾರೆ. ಇದು ತಪ್ಪು. 'ಈ ಶಾಸ್ತ್ರದ ತತ್ತ್ವಗಳ ಸಾಮಾನ್ಯ ಜ್ಞಾನವು ಸಿದ್ಧಾಂತವನ್ನು ಸುಲಭವಾಗಿ ಊಹಿಸೀತು ಎಂದು ನಂಬಿ ನ್ಯಾಯಸೂತ್ರಕರ್ತನಾದ ಅಕ್ಷಪಾದನು ಪೂರ್ವಪಕ್ಷವನ್ನು ಎತ್ತಿ ತೋರಿಸಿ ಉತ್ತರಪಕ್ಷವನ್ನು ಉಸಿರದೆ, ಅಲ್ಲಿಗೇ ನಿಲ್ಲಿಸಿದ್ದಾನೆ' ಎಂದು ವಾತ್ಸ್ಯಾಯನ ಹೇಳಿದ್ದಿಲ್ಲಿ ಸ್ಮರಣೀಯ. ಆತ್ಮ ಅಥವಾ ಆಕಾಶದ ನಿದರ್ಶನವನ್ನು ತೆಗೆದುಕೊಳ್ಳಿರಿ. ನ್ಯಾಯದರ್ಶನದ ಪ್ರಕಾರ ಅದಕ್ಕೆ ಅವಯವವಿಲ್ಲ(ಭಾಗಗಳಿಲ್ಲ). ಹೀಗಿದ್ದರೂ ನ್ಯಾಯಸೂತ್ರಕಾರನೆಲ್ಲಿಯೂ ಇದನ್ನು ಹೇಳಿಲ್ಲ. ಶಾಸ್ತ್ರದ ತತ್ತ್ವಗಳಿಂದ ಜನರು ಇದನ್ನು ತಿಳಿದಾರು ಎಂದು ಆತನು ತರ್ಕಿಸಿನು. ಶಾಸ್ತ್ರಗಳಿಂದ ಅಥವಾ ಸೂಚನೆಗಳಿಂದ ಗೊತ್ತಾಗುವ ವಿಷಯಗಳ ಬಗೆಗೆ ಅಕ್ಷಪಾದನು ಸೂತ್ರಗಳನ್ನು ರಚಿಸಿಲ್ಲ. ಆಗಲೇ ಬಳಕೆಯಲ್ಲಿದ್ದ ನ್ಯಾಯತತ್ತ್ವಗಳ ಸಮರ್ಥನೆಗೆಂದೇ ಸೂತ್ರಗಳನ್ನು ರಚಿಸಲಾಯಿತು ಎಂಬುದನ್ನು ಭಾಷ್ಯದ ಹೇಳಿಕೆಗಳಿಂದ ಗ್ರಹಿಸಬಹುದಾಗಿದೆ. ವಿಚಾರದ(ಚರ್ಚೆಯ) ಒಂದು ಘಟಕವನ್ನೇ ಭಾಷ್ಯಕಾರನು ಅಧಿಕರಣವೆಂದು ಹೆಸರಿಸಿದ್ದಾನೆ. ಪಂಚಾವಯವದ ಅಧಿಕರಣವೂ ನ್ಯಾಯವಾಕ್ಯವೂ ಬಹಳ ಭಿನ್ನವಾಗಿಲ್ಲ ಎಂಬುದು ಸೂಕ್ಷ್ಮ ವಿಮರ್ಶೆಗೆ ಹೊಳೆಯದಿರದು. ಅಂಗವಾದ 'ವಿಷಯವು' ಧರ್ಮಿಯನ್ನು(ವಿಧೇಯದಾರಿಯನ್ನು, ಕರ್ಮಾದಿ ವಿಶೇಷಣಗಳನ್ನು ಹೊಂದಿರುವ ಕರ್ತನನ್ನು) ಸೂಚಿಸುತ್ತದೆ. ಅಂಗರೂಪದ 'ಸಂಶಯವು' ವಿರುದ್ಧವಾದ ಧರ್ಮಗಳನ್ನು(ಕರ್ಮಾದಿ ವಿಧೇಯ ಸಂಘಾತವನ್ನು) ಧರ್ಮಿಗೆ ಅನ್ವಯಿಸುತ್ತದೆ; ವಾದಬಲದಿಂದ ಅನಪೇಕ್ಷಿತವಾದ ಸಿದ್ಧಾಂತವನ್ನು ಸ್ಥಾಪಿಸುವುದು 'ಪೂರ್ವಪಕ್ಷ'; ಅಪೇಕ್ಷಿತ ಸಿದ್ಧಾಂತವನ್ನು ಪೂರ್ವಪಕ್ಷಾನುಕೂಲವಾದ ತರ್ಕವನ್ನು(ವಾದವನ್ನು) ಖಂಡಿಸುವ ಮೂಲಕ ಸ್ಥಾಪಿಸುವುದೇ 'ಸಿದ್ಧಾಂತ'; ಹಿಂದಿನ ಮತ್ತು ಮುಂದಿನ ಚರ್ಚೆಗಳ ಸಂಬಂಧವನ್ನು ತೋರಿಸುವುದೇ 'ಸಂಗತಿ'; 'ಫಲ' ಅಥವಾ ಪರಿಣಾಮವೇ 'ಪ್ರಯೋಜನ'. ಪೂರ್ವಪಕ್ಷಕ್ಕೆ ಅನುಕೂಲವಾಗಿರುವ ವಾದವು ಕೇವಲ ತೋರಿಕೆಯ ಯುಕ್ತಿ(ಯುಕ್ತ್ಯಾಭಾಷ) ಎಂಬುದನ್ನು ಈ ಸಂದರ್ಭದಲ್ಲಿ ಮರೆಯಲಾಗದು, ಸಿದ್ಧಾಂತ ಪಕ್ಷಕ್ಕೆ ಅನುಕೂಲವಾದುದೇ ನಿಜಯುಕ್ತಿ(ಸದ್ಯುಕ್ತಿ)

ತೋರಿಕೆಯ ತರ್ಕವನ್ನು ಖಂಡಿಸಿ ನಿಜವಾದ ತರ್ಕದ ಬಲದಿಂದ ಸಿದ್ಧಾಂತ(ಕೊನೆಯ ನಿಗಮನ, ಅಂತ್ಯನಿರ್ಣಯ)ವನ್ನು ಸ್ಥಾಪಿಸುವುದೇ ತತ್ತ್ವಚರ್ಚೆಯ ಗುರಿ.

## ವಾದರೂಪದ ಚರ್ಚೆ

ವಾದ, ಜಲ್ಪ, ವಿತಂಡಗಳೆಂಬ ವಿಚಾರತ್ರಯವನ್ನು(ತ್ರಿವಿಧ ಚರ್ಚೆಯನ್ನು) ಆಗಲೇ ಚರ್ಚಿಸಲಾಯಿತು. ಈಗ ನಾವು ವಾದರೂಪದ ಚರ್ಚೆಯನ್ನು(ಚರ್ಚೆಯ ವಾದವಿಧಾನವನ್ನು) ತೋರಿಸೋಣ:

| | |
|---|---|
| ಶಬ್ದವು ಅನಿತ್ಯ– | ಪ್ರತಿಜ್ಞಾವಾಕ್ಯ; |
| ಅದು ಕೃತಕ ವಸ್ತುವಾದುದರಿಂದ– | ಹೇತುವಾಕ್ಯ; |
| ಮಡಿಕೆ– | ಉದಾಹರಣವಾಕ್ಯ; |
| ಶಬ್ದ ಹಾಗೇ ಇದೆ–ಅಂದರೆ ಅನಿತ್ಯವಾಗಿದೆ– | ಉಪನಯವಾಕ್ಯ; |
| ಆದುದರಿಂದ ಶಬ್ದ ಅನಿತ್ಯ– | ನಿಗಮನವಾಕ್ಯ. |

ಈ ಪಂಚಾಂಗ ಯುಕ್ತವಾದ ನ್ಯಾಯವಾಕ್ಯವನ್ನು ಹೇಳಿದ ಮೇಲೆ ವಾದಿಯು, ಸಂಕ್ಷೇಪವಾಗಿ ಅಥವಾ ವಿವರಪೂರ್ವಕವಾಗಿ 'ಮುಳ್ಳು ಕೀಳುವ'(ಕಂಟಕೋದ್ಧಾರದ) ಕ್ರಿಯಾನುಕ್ರಮವನ್ನು ಅನುಸರಿಸುತ್ತಾನೆ; ಶಬ್ದ ಅನಿತ್ಯತೆಯನ್ನು ಸ್ಥಾಪಿಸಲು ಕೊಟ್ಟ ಕೃತಕತ್ವದ ಆಧಾರವು ತೋರಿಕೆಯ ಕಾರಣವಲ್ಲ–ಅಥವಾ ತಪ್ಪು ಕಾರಣವಲ್ಲ; ಇನ್ನೊಂದು ವಿಧವಾಗಿ ಹೇಳಬೇಕಾದರೆ ಉಕ್ತ ಆಧಾರವು ಭೇದ್ಯವಾದ ಕಾರಣವಲ್ಲ(ಹೇತ್ವಾಭಾಸವಲ್ಲ)–ಎಂಬುದು ಸಂಕ್ಷಿಪ್ತ ಕ್ರಿಯಾನುಕ್ರಮ. ಕಂಟಕೋದ್ಧಾರದ ವಿವರವಾದ ಕ್ರಿಯಾನುಕ್ರಮ ಹೀಗಿದೆ: ಕೃತಕತ್ವದ ಹೇತುವು ಅನಿತ್ಯತೆಗೆ ಸಂಬಂಧಿಸಿದಂತೆ ವ್ಯಭಿಚಾರಿಯಲ್ಲ. ಇಲ್ಲಿ ಅನಿತ್ಯತೆಯು ಸ್ಥಾಪನೀಯವಾದುದು ಮತ್ತು ಕೃತಕತ್ವವು ಹೇತು. ಕೃತಕತ್ವ ಎಂಬ ಹೇತುವು ಕೆಲವು ಸಲ ಅನಿತ್ಯತೆ ಎಂಬ ಸಾಧ್ಯದ ಅಭಾವದಲ್ಲಿ ಸಹಚರ(ಅವಿನಾಭಾವಿ)ವಾಗಿರುವಂಥದಾಗಿದ್ದರೆ ಅದು ಸಾಧ್ಯದ ದೃಷ್ಟಿಯಿಂದ ವ್ಯಭಿಚಾರಿ(ನ್ಯೂನ) ಅಥವಾ ಅನೈಕಾಂತಿಕ(ಅನಿರ್ಧಾರಿತ) ಎನ್ನಿಸುತ್ತಿತ್ತು. ಆದರದು ವ್ಯಭಿಚಾರಿಯಾಗಿಲ್ಲ; ಏಕೆಂದರೆ, ಅದು ಕೆಲವು ಸಲ ಸಾಧ್ಯದ ಅಭಾವದಲ್ಲಿ ಇದ್ದು ಬರುವುದಿಲ್ಲ. ಅದು ವಿರುದ್ಧವೂ ಅಲ್ಲ(ಪ್ರತಿನಿವಿಷ್ಟವೂ ಅಲ್ಲ); ಏಕೆಂದರೆ ಅದೆಂದೂ ಸಾಧ್ಯಾಭಾವದಲ್ಲಿ ಸಾಹಚರ್ಯದಿಂದಿರದು(ಒಟ್ಟಾಗಿ ಇರದು). ಅದು ಅಸಿದ್ಧವೂ ಅಲ್ಲ(ಅನಧಿಷ್ಠಿತವೂ ಅಲ್ಲ, ಆಧಾರರಹಿತವೂ ಅಲ್ಲ); ಏಕೆಂದರೆ, ಅದು ಸಾಧ್ಯದಲ್ಲಿಯೂ ಅಡಕವಾಗಿದೆ, ಪಕ್ಷದಲ್ಲಿಯೂ ಇದೆ. ಉಕ್ತ ಹೇತುವು ಸತ್‌ಪ್ರತಿಪಕ್ಷ ಸ್ವರೂಪದ್ದೂ(ಪ್ರತಿಕೋಲಿತವೂ) ಅಲ್ಲ; ಏಕೆಂದರೆ, ಇಲ್ಲಿ ಸಾಧ್ಯಾಭಾವವನ್ನು ಸ್ಥಾಪಿಸುವ ಪ್ರತಿಹೇತುವಿನ ಉತ್ಥಾನವೆಲ್ಲೂ ಕಾಣಿಸುವುದಿಲ್ಲ. ಅದು ಬಾಧಿತವಾಗಿಯೂ ಇಲ್ಲ(ಪ್ರತಿರುದ್ಧವಾಗಿಯೂ ಇಲ್ಲ, ಇತರ ಪ್ರಮಾಣದಿಂದ ಖಂಡಿಸಲ್ಪಡಲೂ ಇಲ್ಲ);

ಏಕೆಂದರೆ, ಕೃತಕತ್ವ ಉಳ್ಳದ್ದೆಂಬ ಹೇತುವು ಸಾಧ್ಯಾಭಾವವು ಪ್ರದರ್ಶನೀಯವಾಗಿರುವಂಥ ವಸ್ತುವಿನಲ್ಲಿ ಇಲ್ಲ. ಕಂಟಕವನ್ನು ಕಿತ್ತೆಸೆಯುವ ಕ್ರಿಯಾನುಕ್ರಮವಿರುವುದು ಎತ್ತಿಕೊಟ್ಟ ಹೇತುವಿನಲ್ಲಿ ಪಂಚ ವಿಧದ ಹೇತ್ವಾಭಾಸ ಇಲ್ಲವೆಂದು ತೋರಿಸಿಕೊಡುವುದರಲ್ಲಿಯೇ. ಮಥುರಾನಾಥ ತರ್ಕವಾಗೀಶನು ಕಂಟಕೋದ್ಧಾರವನ್ನು ಇನ್ನೊಂದು ವಿಧದಿಂದ ಹೇಳಿದ್ದಾನೆ; ಅವನ 'ಅವಯವ'[೧೪] ಎಂಬ ಭಾಗದ ಮೇಲಿನ ವ್ಯಾಖ್ಯೆಯಲ್ಲಿ ಹೀಗಿದೆ; ವಿಶಿಷ್ಟವಾದ ಪ್ರಶ್ನ ವಾಕ್ಯದಿಂದ ಕಂಟಕೋದ್ಧಾರವಾಗುತ್ತದೆ(ಉದ್ಧಾರ=ಮೇಲಕ್ಕೆ ಎತ್ತಿ ಎಸೆಯುವಿಕೆ); 'ಗುಡ್ಡದಲ್ಲಿ ಬೆಂಕಿಯಿದೆ' ಎಂಬ ಉತ್ತರವು 'ಯಾವುದರಲ್ಲಿ ಬೆಂಕಿಯಿದೆ?' ಎಂಬ ಪ್ರಶ್ನೆಯಿಂದ ದೊರಕುತ್ತದೆ; 'ಗುಡ್ಡದಲ್ಲಿ ಬೆಂಕಿಯಿದೆ' ಎಂಬುದು ಪ್ರತಿಜ್ಞಾವಾಕ್ಯ 'ಹಾಗೆ ಹೇಳಲು ಯಾವ ಕಾರಣವಿದೆ?' ಎಂಬುದು ಎರಡನೆಯ ಪ್ರಶ್ನೆ. 'ಹೊಗೆ ಅಲ್ಲಿರುವುದರಿಂದ' ಎಂಬುದು ಅದಕ್ಕೆ ಉತ್ತರ. ಇದು ಹೇತುವಾಕ್ಯದ ಅನ್ವಯ. 'ಅದರಿಂದೇನು?' ಎಂಬುದು ಮುಂದಿನ ಪ್ರಶ್ನೆ. 'ಹೊಗೆಯಿಂದ ಕೂಡಿರುವ ಪ್ರತಿಯೊಂದು ವಸ್ತುವೂ ಬೆಂಕಿಯಿಂದ ಕೂಡಿರುತ್ತದೆ' ಎಂಬುದು ಉದಾಹರಣವಾಕ್ಯರೂಪದ ಉತ್ತರ. ಆದರೆ 'ವಾದಿವಿನೋದ'ದಲ್ಲಿ ಬಿತ್ತರಿಸಿದ ಕಂಟಕೋದ್ಧಾರ ಕ್ರಮವೇ ಉಚಿತವಾದುದೆಂದು ನಮ್ಮ ಅಭಿಪ್ರಾಯ.

ಈ ಪ್ರಕಾರ ಮುಳ್ಳುಗಳನ್ನು ಕಿತ್ತೆಸೆದ ಬಳಿಕ(ಮುಳ್ಳು=ಕಂಟಕ, ಆಕ್ಷೇಪ, ಆತಂಕ)ವಾದಿಯು ತನ್ನ ವಾದವನ್ನು ನಿಲ್ಲಿಸುತ್ತಾನೆ; ಅನಂತರ ಅವನ ವಿರೋಧಿಯು ಅವನು ಹೇಳಿದ ಹೇತುವಿನ ದೋಷಗಳನ್ನು ಎತ್ತಿ ತೋರಿಸುತ್ತಾನೆ. ವಾದಿಯು ಹೇತುವೆಂದು ಹೇಳಿದ 'ಹುಟ್ಟುಳ್ಳದ್ದಾಗಿರುವಿಕೆ (ಕೃತಕತ್ವ) ಎಂಬುದು 'ಅಸಿದ್ಧ'(ಬುಡವಿಲ್ಲದ್ದು, ಆಧಾರವಿಲ್ಲದ್ದು), ಆದುದರಿಂದ ಅದು 'ಸಾಧ್ಯ'ವನ್ನು ಸಿದ್ಧಮಾಡಲಾರದು. ಈ ದೋಷೋದ್ಘಾಟನೆಯಲ್ಲಿ ಪಂಚಾವಯವ(ಪಂಚಾಂಗ)ವುಳ್ಳ ವಾಕ್ಯದ ಪ್ರಯೋಗವು ಅಗತ್ಯವಾಗದು. ಅಸಿದ್ಧ ಹೇತುವು ಸಾಧ್ಯವನ್ನು ಸಿದ್ಧಮಾಡಲಾರದೆಂಬುದು ವಾದಿ–ಪ್ರತಿವಾದಿಗಳಿಬ್ಬರಿಗೂ ಸಮ್ಮತವಾದುದು. ಆದುದರಿಂದಲೇ–

ಹುಟ್ಟುಳ್ಳದ್ದಾಗಿರುವುದು ಸಾಧ್ಯವನ್ನು ಸಿದ್ಧಮಾಡಲಾರದು; ಏಕೆಂದರೆ, ಅದಕ್ಕೆ ಬುಡವಿಲ್ಲ (ಆಧಾರವಿಲ್ಲ);

ಆಧಾರವಿಲ್ಲದ ಯಾವುದೂ ಏನನೂ ಸಿದ್ಧಮಾಡಲಾರದು–ಎಂಬಂತಹ ವಿವರಣೆಯನ್ನು ಕೊಡಬೇಕಾಗಿಲ್ಲ. ಹೇಳಲಾದ ಹೇತುವು ಏಕೆ ಸಾಧ್ಯವನ್ನು ಸ್ಥಾಪಿಸಲಾರದೆಂಬುದಷ್ಟನ್ನು ಹೇಳಿದರೆ ಸಾಕು. ಇಷ್ಟಾಗಿ ಬಿಟ್ಟರೆ, ವಿರೋಧಿಯು ಈ ಪ್ರಕಾರ ತನ್ನ ಪ್ರತಿವಾದವನ್ನು ಮಂಡಿಸಲು ಬಯಸುತ್ತಾನೆ;

'ಶಬ್ದವು ಅನಿತ್ಯವಲ್ಲ; ಅದು ನಿತ್ಯ:

ಏಕೆಂದರೆ, ಅದು ಆಕಾಶದ (ಧರ್ಮ) ಗುಣ; ಮತ್ತು ಕೇವಲ ಆಕಾಶದ್ದೇ ಆದ ಯಾವ ಗುಣವಿದ್ದರೂ ಅದು ನಿತ್ಯ ಆಕಾಶದಲ್ಲಡಗಿರುವ ಐಕ್ಯಧರ್ಮದ ಹಾಗೆ.'

ಈ ಸಂದರ್ಭದಲ್ಲಿ ನೈಯಾಯಿಕನು ಶಬ್ದದ ಅನಿತ್ಯತೆಯನ್ನೂ ಮೀಮಾಂಸಕನು ಅದರ ನಿತ್ಯತೆಯನ್ನೂ ಪ್ರತಿಪಾದಿಸುತ್ತಾರೆ ಎಂಬುದನ್ನು ನೆನಪಿನಲ್ಲಿಟ್ಟು ಕೊಳ್ಳಬೇಕು. ಇಲ್ಲಿ ನೈಯಾಯಿಕನು ವಾದಿ ಮತ್ತು ಮೀಮಾಂಸಕನು ಪ್ರತಿವಾದಿ. ನಾವಿಲ್ಲಿ ಮೂರು ಅವಯವಗಳನ್ನು ತೋರಿಸಿದ್ದೇವೆ; ಏಕೆಂದರೆ ಮೀಮಾಂಸಕನು ನ್ಯಾಯವಾಕ್ಯದ ಮೂರು ಅವಯವಗಳನ್ನು ಮಾತ್ರ ಒಪ್ಪುತ್ತಾನೆ–ಪ್ರತಿಜ್ಞೆ, ಹೇತು ಮತ್ತು ಉದಾಹರಣೆಗಳೇ ಆ ಅವಯವಗಳು.

ತನ್ನ ಹೇತುವಿನ ಕಂಟಕೋದ್ಧಾರವನ್ನು ಮಾಡಿ ವಿರೋಧಿಯು (ಪ್ರತಿವಾದಿಯು) ತನ್ನ ನಿಲುಮೆಯನ್ನು ಸ್ಥಾಪಿಸಿದ ಬಳಿಕ, ವಾದಿಯು ಪ್ರತಿವಾದಿ ಮಾಡಿದ ಆರೋಪಗಳನ್ನು ಖಂಡಿಸಲು ಪ್ರಯತ್ನಿಸುತ್ತಾನೆ.[೧೫] ಮೊಟ್ಟಮೊದಲು ಅವನು ಪ್ರತಿವಾದಿ ಎತ್ತಿದ ಆಕ್ಷೇಪಗಳಿಂದ ತನ್ನ ನಿಲುಮೆಯನ್ನು ಮುಕ್ತಗೊಳಿಸಿಕೊಳ್ಳಲು ಬಯಸುತ್ತಾನೆ. **'ಹುಟ್ಟುಳ್ಳದ್ದಾಗಿರುವಿಕೆ'** ಎಂಬ ಹೇತುವು ಅಸಿದ್ಧವೆಂದು ಪ್ರತಿವಾದಿಯು ಪ್ರತಿಪಾದಿಸಿದ್ದಾನೆ; ತದ್ವಿರುದ್ಧವಾಗಿ ವಾದಿಯು ಅದು ಹಾಗಿಲ್ಲವೆಂದು ಒತ್ತಾಯಿಸುತ್ತಾನೆ. ಶಬ್ದಕ್ಕೆ ಹುಟ್ಟಿದೆ (ಮೂಲವಿದೆ, ಆದಿಯಿದೆ, ಆರಂಭವಿದೆ) ಎಂಬುದು ಎಲ್ಲರ ಪ್ರತ್ಯಕ್ಷಕ್ಕೂ ಬಂದ ಸಂಗತಿ. ಕಕಾರಾದಿ ಅಕ್ಷರಗಳೆಲ್ಲವೂ ಉತ್ಪನ್ನ ಎಂಬುದು ಸರ್ವಪ್ರತ್ಯಕ್ಷವಾಗಿದೆ. ಈ ಅಕ್ಷರಗಳು ಶಬ್ದವೆನ್ನಿಸುತ್ತವೆ. ಉತ್ಪನ್ನವಾದ ಎಲ್ಲದಕ್ಕೂ ಒಂದು ಮೂಲ(ಹುಟ್ಟು, ಆಕರ) ಇದ್ದೇ ಇರುತ್ತದೆ. ಕಕಾರಾದಿಗಳೆಲ್ಲವೂ ಉತ್ಪನ್ನ; ಆದುದರಿಂದ ಅವುಗಳಿಗೆ ಮೂಲವಿದ್ದೇ ಇರಬೇಕು. ವಸ್ತುಸ್ಥಿತಿ ಹೀಗಿರುವಾಗ ಕೃತಕವಾದ (ಉತ್ಪನ್ನವಾದ, ಹುಟ್ಟುಳ್ಳ) ಹೇತುವಸ್ತುವು ಶಬ್ದಕ್ಕೆ ಸಂಬಂಧಿಸಿದಂತೆ ಏಕೆ ಅಸಿದ್ಧ (ಆಕರರಹಿತ) ಆಗಬೇಕು? ಶಬ್ದವು ಪಕ್ಷ ಕೃತಕತೆ ಎಂಬ ಹೇತುವು ಅದರಲ್ಲಿ ನಿತ್ಯಸಂಬದ್ಧವಾಗಿ (ಸಮವೇತವಾಗಿ) ಇಲ್ಲವಾದರೆ ಅದರಿಂದ ಸ್ವರೂಪಾಸಿದ್ಧ ಎಂಬ ಹೇತ್ವಾಭಾಸ(ಸಾರಭೂತ ಅಸತ್ಯತೆ ಎಂಬ ತೋರಿಕೆಯ ಹೇತು) ಉಂಟಾಗುತ್ತದೆ. ಅಸಿದ್ಧಿಯು ಹೇತ್ವಾಭಾಸಗಳಲ್ಲಿ ಒಂದು. ಹೇತ್ವಾಭಾಸಗಳು ಐದು: ವ್ಯಭಿಚಾರ(ಅದೃಢಸಂಬಂಧ), ವಿರೋಧ(ವಿಪರೀತಾರ್ಥತೆ), ಅಸಿದ್ಧಿ(ನಿರಾಧಾರತೆ), ಸತ್‌ಪ್ರತಿಪಕ್ಷ(ಪ್ರತಿನಿವಿಷ್ಟಪಕ್ಷ ಇರುವುದು, ಪ್ರತಿಪಕ್ಷ ಎದುರಾಗುವುದು, ಸಮತೋಲವಾದ ಹೇತುವುಳ್ಳ ಪ್ರತಿನ್ಯಾಯವಾಕ್ಯ ಉಳ್ಳದ್ದಾಗಿರುವುದು) ಮತ್ತು ಬಾಧ(ಬಾಧಿತ, ಪ್ರಮಾಣೇತರ ಬಾಧಿತ, ವಿಸಂಗತ, ಅಸಂಬದ್ಧ)–ಎಂದು ಚರ್ಚೆಗಾರ ಮುಂದಿಟ್ಟ ಹೇತುವಿನಲ್ಲಿ ಈ ಐದರಲ್ಲಿ ಯಾವುದಾದರೊಂದು ಹೇತ್ವಾಭಾಸ ಕಂಡರೆ ಆ ಹೇತುವು ಸಾಧ್ಯವನ್ನು ಸಿದ್ಧಮಾಡಿಕೊಡಲಾರದು.ಹೇತ್ವಾಭಾಸವು ಹೇತುವಿನಲ್ಲಿ ಸಾಧ್ಯವನ್ನು ಸಿದ್ಧಮಾಡಲಾರದ ಅನರ್ಹತೆ ಇರುವುದನ್ನು ಸೂಚಿಸುತ್ತದೆ. ಅಕ್ಷರದಿಂದಾಗುವ ಶಬ್ದವಲ್ಲದೆ ನಿರಕ್ಷರ ಶಬ್ದವೂ ಹುಟ್ಟುಳ್ಳದ್ದು. ಧ್ವನಿಯು ನಿರಕ್ಷರ ಶಬ್ದ. ತಂಬಟೆಯು ಸದ್ದನ್ನು ಕೇಳುವಾಗ ನಿರಕ್ಷರವಾದ ಧ್ವನಿಗೆ ಮೂಲವಿರುವ ವಸ್ತುಸ್ಥಿತಿ ಪ್ರತ್ಯಕ್ಷವಾಗುತ್ತದೆ. ಈ ಪ್ರಕಾರ ವಾದಿಯು ಮೊದಲು ಪ್ರತಿವಾದಿಯ ಆಕ್ಷೇಪ(ಆತಂಕ)ಗಳನ್ನು ಪರಿಹರಿಸಿ, ಅನಂತರ ಅವನ ಹೇತುವಿನಲ್ಲಿರುವ ದೋಷವನ್ನು ಎತ್ತಿತೋರಿಸುತ್ತಾನೆ.

ವಾದಿ ಹೀಗೆ ಪ್ರತಿಪಾದಿಸುವನು: ಶಬ್ದದ ನಿತ್ಯತೆಯನ್ನು ಸಿದ್ಧಮಾಡಲು ಪ್ರತಿವಾದಿ ಮಂಡಿಸಿದ ಹೇತುವು ಅದು ಕೇವಲ ಆಕಾಶಗುಣವಾಗಿರುತ್ತದೆ–ಎಂಬುದೇ ಆಗಿದೆ. ಆದರೆ ಈ ಹೇತುವು 'ಸಾಧ್ಯ'ವಾಗಿರುವ ನಿತ್ಯತೆಯನ್ನು ಸಿದ್ಧಮಾಡಲಾರದು. ಈ ಹೇತುವಿಗೆ ಉಪಾಧಿ(ಪರಿಸೀಮನಗೊಳಿಸುವ, ಗಡಿಗೆರೆ ಎಳೆಯುವ ವಿಶೇಷಣ ಅಥವಾ ಶರ್ತ) ಇದೆ. ಉಪಾಧಿಬದ್ಧವಾದ ಹೇತುವು ಸಾಧ್ಯವನ್ನು ಸಿದ್ಧಮಾಡಲಾರದು. ಹೀಗೆ ವಾದಿಯು ಪ್ರತಿವಾದಿ ಹೇಳಿದ ಆಕ್ಷೇಪಗಳಿಂದ ತನ್ನ ನಿಲುಮೆಯನ್ನು ಮುಕ್ತಗೊಳಿಸಿ ಪ್ರತಿವಾದಿಯ ವಾದದಲ್ಲಿ ದೋಷಗಳನ್ನು ಹೇಳಿ ವಿರಮಿಸಿದ ಮೇಲೆ, ಪ್ರತಿವಾದಿಯು ತನ್ನ ಸರದಿಯ ಪ್ರಕಾರ, ವಾದಿ ಹೊರಿಸಿದ ದೋಷಾರೋಪಗಳಿಂದ (ಆಕ್ಷೇಪಗಳಿಂದ) ತನ್ನ ನಿಲುವನ್ನು ಮುಕ್ತಗೊಳಿಸಿಕೊಂಡು, ವಾದಿ ಮಂಡಿಸಿದ ಹೇತುವಿನಲ್ಲಿ ಅಭಾಸಕತೆ$ ಇದೆಯೆಂದು ತಾನು ಹೇಳಿದ ಅಭಿಪ್ರಾಯವನ್ನು ಬಲಪಡಿಸಲುಹೊರಡುವನು.

ತನ್ನ ವಾದದ ಮೇಲಿನ ಅತಾರ್ಕಿಕತೆಯ ಆರೋಪವನ್ನು ಪರಿಹರಿಸಿಕೊಂಡ ಬಳಿಕ ಒಬ್ಬನು(ಚರ್ಚೆಗಾರನು) ಇನ್ನೊಬ್ಬನ(ಪ್ರತಿ ಚರ್ಚೆಗಾರನ) ವಾದದಲ್ಲಿರುವ ದೋಷಗಳನ್ನು ಹೇಳ ಹೊರಡಬೇಕೆಂಬುದು ಪ್ರಾಚೀನ ಆಚಾರ್ಯರು ಸ್ವೀಕರಿಸಿದ ಸಾಮಾನ್ಯ ಕ್ರಿಯಾನುಕ್ರಮ. ಭಾರತೀಯ ವಾದವಿದ್ಯಾವಾಙ್ಮಯದ ಅಭ್ಯಾಸದಿಂದ ತತ್ತ್ವಚರ್ಚೆಯೊಂದು ಶಬ್ದಯುದ್ಧವೆಂದು^ ತಿಳಿದುಬರುತ್ತದೆ. ಉಭಯ ಪಕ್ಷಗಳ ಯೋಧರೂ ಆತ್ಮರಕ್ಷಣೆಗೆ ಮೊದಲು ಸಜ್ಜುಮಾಡಿಕೊಂಡು ಆ ಬಳಿಕ ವಿರೋಧಿಗಳ ವಾದಗಳನ್ನು ಖಂಡಿಸಲು ಯೋಜಿಸಬೇಕು. ಆತ್ಮರಕ್ಷಣೆಗೆ ಚೆನ್ನಾಗಿ ಸಜ್ಜು ಮಾಡಿಕೊಳ್ಳದೆ ಪರಾಘಾತಕ್ಕೆಹೊರಡುವುದು ಹಾನಿಕರ. ಆದುದರಿಂದಲೇ ಸ್ವಪಕ್ಷಸಂರಕ್ಷಣೆಯನ್ನು ಮೊದಲು ಮಾಡಿಕೊಂಡು ಆಮೇಲೆ ಪರಪಕ್ಷ ಖಂಡನೆಗೆ ಹೊರಡುವುದು ಸಾಮಾನ್ಯವಾದ ಕ್ರಿಯಾನುಕ್ರಮ. ಆದರೆ ಶಂಕರಮಿಶ್ರ ಈ ಕ್ರಮವು ಸಂಪೂರ್ಣವಾಗಿ ಬಂಧಕ[೧೬]ವಲ್ಲ ಎಂದು ಅಭಿಪ್ರಾಯ ಪಟ್ಟಿದ್ದಾನೆ. ವಿರೋಧಿಯ ವಾದದಲ್ಲಿ ದೋಷಗಳನ್ನು ಹೇಳುವುದರಿಂದ ಮೊದಲು ಆರಂಭಿಸಿ ಆಮೇಲೆ ಒಬ್ಬನು ತನ್ನ ವಾದದ ಮೇಲೆ ವಿರೋಧಿ ಹೊರಿಸಿದ ದೋಷಗಳಿಂದ ಅದನ್ನು ಮುಕ್ತಗೊಳಿಸಲು ಹೊರಡಬಹುದು. ಆದರೆ ಕ್ರಮ ಯಾವುದಾದರೂ ಸರಿಯೆ–ಉಭಯ ಕ್ರಿಯಾನುಕ್ರಮಗಳು ವಾದಿ–ಪ್ರತಿವಾದಿಗಳಿಬ್ಬರು ಅನುಸರಿಸಲೇಬೇಕಾದವುಗಳು. ಅವುಗಳಲ್ಲಿ ಒಂದು ಮೂಲಭೂತ, ಇನ್ನೊಂದು ಹಾಗೆ ಮೂಲಭೂತವಲ್ಲ–ಎಂದು ನಾವು ಹೇಳಲಾರೆವು. ಎರಡೂ ಸಮಪ್ರಾಮುಖ್ಯ ಉಳ್ಳಂಥವು. ಇದರಿಂದಲೇ ಪ್ರತಿವಾದಿಯ ತರ್ಕದಲ್ಲಿ ದೋಷೋದ್ಘಾಟನೆ ಮಾಡುವ ಮತ್ತು ಪ್ರತಿವಾದಿ ತನ್ನ ತರ್ಕದ ಮೇಲೆ ಆರೋಪಿಸಿದ ದೋಷಗಳಿಂದ ಅದನ್ನು ಮುಕ್ತಗೊಳಿಸುವ– ಎಂಬೀ ಎರಡರಲ್ಲಿ ಯಾವುದು ಮೊದಲು ಮನಸ್ಸಿಗೆ ಹೊಳೆಯುವುದೋ ಅದನ್ನು ಮೊದಲು ಮಾಡಬೇಕೆಂದು ಶಂಕರಮಿಶ್ರ ಹೇಳಿದ್ದು.

## ಉಪಾಧಿ ಸಿದ್ಧಾಂತ

'ಉಪಾಧಿ' ಅಥವಾ ಪರಿಸೀಮನಕಾರಕ ವಿಶೇಷಣ ಎಂಬ ಕಲ್ಪನೆಯ (ಭಾವದ) ವಿಶ್ಲೇಷಣದ ರೀತಿಯು ತರ್ಕಶಾಸ್ತ್ರದ ಗಣ್ಯ ವಿಷಯವೆಂಬುದನ್ನು ಗಮನಿಸಬೇಕು. ಉಪಾಧಿಬದ್ಧವಾದ ಹೇತುವು ಸಾಧ್ಯವನ್ನು ಸಿದ್ಧಮಾಡಲಾರದು. ಸಾಧ್ಯಕ್ಕಿಂತ ವಿಸ್ತಾರವಾದ ಮತ್ತು ಹೇತುವಿಗಿಂತ ಸಂಕುಚಿತವಾದ ಪದಾರ್ಥವನ್ನು ಉಪಾಧಿಯೆನ್ನಲಾಗುತ್ತದೆ. ಉಪಾಧಿ ಸಿದ್ಧಾಂತವೊಂದು ಜಟಿಲವಾದ ವಿಷಯ. ಉದ್ಯೋತಕಾರನ ಕಾಲದಿಂದ ಇಂದಿನವರೆಗೂ ನೈಯಾಯಿಕರು ಈ ಉಪಾಧಿಯ ಬಗೆಗೆ ಬಹಳ ಚರ್ಚೆ ಮಾಡಿದ್ದಾರೆ. ತತ್ತ್ವಚಿಂತಾಮಣಿಯು ಅನುಮಾನ ಖಂಡದ ವ್ಯಾಪ್ತ್ಯಧ್ಯಾಯದಲ್ಲಿ ಉಪಾಧಿಸಿದ್ಧಾಂತವೊಂದು ಗಣ್ಯ ವಿಷಯವಾಗಿದೆ.

ಶಬ್ದದ ನಿತ್ಯತೆಯನ್ನು ಸಿದ್ಧ ಮಾಡಲು ಪ್ರತಿವಾದಿಯೀಗ ಕೇವಲ ಆಕಾಶಗುಣವಾಗಿರುವುದನ್ನು ಹೇತುವೆಂದು ಸೂಚಿಸುತ್ತಾನೆ. ಆದರೆ ವಾದಿಯು ಹೇತುವು ಉಪಾಧಿಯಿಂದ ದುಷ್ಟವಾಗಿದೆ ಎಂದು ಸೂಚಿಸುತ್ತಾನೆ. ವಿರೋಧಿಯಾದರೋ ಮುಂದೆ ಕೊಡುವ ಕಾರಣಗಳ ದೆಸೆಯಿಂದ ಉಕ್ತ ಸೂಚನೆ ನಿರಾಧಾರವೆಂದು ಸಾರುತ್ತಾನೆ; ಶಂಕಿತ ಉಪಾಧಿಯ ಬಗೆಗೆ ವಾದಿಯ ಅಭಿಮತ ಯಾವುದು? ಅದು ಜ್ಞೇಯವೋ(ಯೋಗ್ಯವೋ) ಅಲ್ಲವೋ? ವಿರೋಧಿ ಮಂಡಿಸಿದ ಹೇತುವಿನಲ್ಲಿ ಜ್ಞೇಯವಾದ ಉಪಾಧಿ ಇಲ್ಲವೆಂಬುದು, ಈಗ ಒಂದು ವಾಸ್ತವಿಕ ಸಂಗತಿ. ಹೇತುವಿನಲ್ಲಿ ಜ್ಞೇಯವಾದ (ತಿಳಿವಳಿಕೆಗೆ ಬರುವ) ಉಪಾಧಿ ಇಲ್ಲವೆಂಬುದು ಪ್ರತ್ಯಕ್ಷದಿಂದ ಸಿದ್ಧವಾಗುತ್ತದೆ. ಯುಕ್ತವಾದುದರ ಅಜ್ಞೇಯತೆಯುಜ್ಞೇಯವಸ್ತುವೊಂದರ ಅನುಪಸ್ಥಿತಿಯನ್ನು(ಅಭಾವವನ್ನು, ಇಲ್ಲದಿರುವಿಕೆಯನ್ನು) ಸ್ಥಾಪಿಸುತ್ತದೆ ಎಂಬುದು ಸಾರ್ವತ್ರಿಕ ನಿಯಮ. ಜ್ಞೇಯವಾದ ಉಪಾಧಿಯಿಂದ ಹೇತುವು ದುಷ್ಟವಾಗಿ ಹೋಗಿದ್ದರೆ ಆ ಉಪಾಧಿ ಎಲ್ಲರಿಗೂ ಗೊತ್ತಾಗುತ್ತಿತ್ತು. ಆದರೆ ಅಂಥ ಜ್ಞಾನ ಇಲ್ಲದಿರುವುದರಿಂದ, ಅಂಥ ಜ್ಞೇಯವಾದ(ಎಲ್ಲರಿಗೂ ಗೊತ್ತಾಗುವಂತಹ) ಉಪಾಧಿಯೂ ಇಲ್ಲ ಎಂದು ಸಿದ್ಧವಾಗುತ್ತದೆ. ನಾವೀಗ ಇನ್ನೊಂದು ವಿಕಲ್ಪವನ್ನು ಪರಾಂಬರಿಸೋಣ; ಸೂಚಿತ ಉಪಾಧಿಯು ಅಜ್ಞೇಯವಾಗಿದೆ. ಅಜ್ಞೇಯವಾದ ಮಾತ್ರಕ್ಕೆ ಅಜ್ಞಾತವಾದ ಉಪಾಧಿಯೊಂದು ಇರಲಾರದೆಂದು ಅಲ್ಲಗಳೆಯುವ ಹಾಗಿಲ್ಲ. ಆದರೆ ಹಾಗೆ ಅದು ಇರುವ ಸಾಧ್ಯತೆಯು ವಾದಿ ಮಂಡಿಸಿದ ಹೇತುವಿನಲ್ಲೂ ಇರಬಹುದೆಂದು ಊಹಿಸಲು ಸಾಧ್ಯವಿದೆ. ವಿವರಣೆ: ಶಬ್ದದ ನಿತ್ಯತೆಯನ್ನು ಸಾಧಿಸಲು ಪ್ರತಿವಾದಿ ಮಂಡಿಸಿದ ಹೇತುವು ಅಜ್ಞೇಯ ಉಪಾಧಿಯೊಂದರಿಂದ ದುಷ್ಟವಾದುದರಿಂದ ಅನುಪಸಂಹಾರಿ+ಯಾಯ್ತೆಂದು ವಾದಿಯು ವಾದಿಸಿದರೆ ಆಗ 'ಉಪಾಧೀ ದುಷ್ಟವಾಗಿದೆ' ಎಂದು ಈ ತರ್ಕದಲ್ಲಿ ಬಳಸಲಾದ ಹೇತುವನ್ನೂ ಅಷ್ಟೇ ಸಾಮರ್ಥ್ಯದಿಂದ 'ಅಜ್ಞೇಯ ಉಪಾಧಿಯೊಂದರಿಂದ ರೂಪಿತವಾಗಿದೆ' ಎಂದು ವಾದಿಸಿ, ವಾದಿಯು ವಾದವು ಕಳಚಿ ಬೀಳುವಂತೆ ಮಾಡಿಬಿಡಬಹುದು. ಸಿದ್ಧಮಾಡಲಾರದ, ಉಪಾದಿಯನ್ನು ಸೂಚಿಸುವುದು

ಆತ್ಮಘಾತಕವಾದುದು–ಎಂಬುದೇ ಇಲ್ಲಿ ತಿಳಿಯಬೇಕಾದ ಅಂಶ. ಅದು ಉಭಯ ಪಕ್ಷಗಳಿಗೂ ಹೊಡೆತ ಕೊಟ್ಟು ಚರ್ಚೆಯನ್ನು ನೆನೆಗುದಿಗಿಳಿಸುತ್ತದೆ. ಇದರ ಒಟ್ಟಿನ ಫಲಿತಾಂಶವೆಂದರೆ–ವಿರೋಧಿ ಇಲ್ಲಿ ಮಂಡಿಸಿದ ಹೇತುವು ಇಬ್ಬಗೆಯ ಉಪಾಧಿಗಳಿಂದಲೂ ಮುಕ್ತ ಮತ್ತು ಈ ಕಾರಣದಿಂದ ವಾದಿ ತಂದ ಅನುಪಸಂಹಾರಿತ್ವದ ಆರೋಪಕ್ಕೆ ಅದು ತುತ್ತಾಗದು. ಹುಟ್ಟುಳ್ಳದ್ದೆಂಬ ಹೇತುವು ಶಬ್ದವೆಂಬ ಪಕ್ಷದಲ್ಲಿ ಇದೆಯೆಂಬುದನ್ನು ಸಿದ್ಧಮಾಡಲು ವಾದಿಯು 'ಈಗ ಗಕಾರವೆಂಬ ಶಬ್ದವನ್ನು ಉಂಟುಮಾಡಲಾಯಿತು', 'ತಮಟೆ ಸದ್ದು ಮಾಡಿತು' ಎಂಬಂತಹ ಪ್ರತ್ಯಕ್ಷ ಪ್ರಮಾಣಗಳಿಂದ ಶಬ್ದಕ್ಕೆ ಸಂಬಂಧಿಸಿದಂತೆ ಹುಟ್ಟುಳ್ಳದ್ದೆಂಬ ಲಕ್ಷಣವನ್ನು ಸಾರಿದ್ದಾನೆ. ಆದರಿದು ಅಯುಕ್ತ. ಅಂಥ ಪ್ರತ್ಯಕ್ಷಗಳಿಗೆ ಶಬ್ದದ ಅಭಿವ್ಯಕ್ತಿಯಷ್ಟೇ ವಸ್ತುವಾಗಬಲ್ಲದು. ಅಂದರೆ, ಅವು ಶಬ್ದಕ್ಕೆ ಹುಟ್ಟಿದೆ ಎಂಬುದನ್ನು ತೋರಿಸುವುದಕ್ಕಿಂತ ಹೆಚ್ಚಾಗಿ ಶಬ್ದ ಅಭಿವ್ಯಕ್ತವಾಯಿತು ಎಂಬುದನ್ನೇ ತೋರಿಸಬಹುದು. ತಂಬಟೆಯು ಸದ್ದನ್ನು ಹುಟ್ಟಿಸದು; ಸದ್ದು ಅದರ ಮೂಲಕ ಅಭಿವ್ಯಕ್ತವಾಗುತ್ತದೆ.

ವಾದಿಯು ಇನ್ನೂ ಮುಂದಕ್ಕೆ ಹೋಗಿ–ಇದು ಚರ್ಚೆಯ ೫ನೆಯ ಘಟ್ಟವಾಗುತ್ತದೆ–ವಿರೋಧಿ ಹೇಳಿದ 'ಜ್ಞೇಯವಾದ ಉಪಾಧಿಯ ಅಭಾವವನ್ನು ಅದರ ಅಪ್ರತ್ಯಕ್ಷೀಕರಣವು ಸ್ಥಾಪಿಸುತ್ತದೆ' ಎಂಬ ಸಾಧನೆಯು ಸರಿಯಲ್ಲ–ಎಂದು ವಾದಿಸಬಹುದು. ಏಕೆಂದರೆ, ಇಲ್ಲಿ ಅನುತ್ಪನ್ನತ್ವವೆಂಬ ಗುಣವು ಹೇತುವಿನಲ್ಲಿರುವ ಉಪಾಧಿ–ಹೇತುವಿಲ್ಲಿ ಕೇವಲ ಆಕಾಶಗುಣವಾಗಿರುವುದರಿಂದ. ಯುಕ್ತವಾದುದರ(ಯುಕ್ತವಾದ ಜಾತಿಯ) ಅಪ್ರತ್ಯಕ್ಷೀಕರಣದ ದೆಸೆಯಿಂದ ಈ ಉಪಾಧಿಯು ನಿಷೇಧಿಸಲ್ಪಟ್ಟಿಲ್ಲ. ದೃಷ್ಟಾಂತದಲ್ಲಿ ಕಾಣುವ ಮತ್ತು ಪಕ್ಷದಲ್ಲಿ ಕಾಣದ ಲಕ್ಷಣವೇ ಇಲ್ಲಿಯ ಉಪಾಧಿ. ಇದೇ ಉಪಾಧಿ ನಿರ್ಣಯದ ವಿಶಾಲ ಸೂತ್ರ.ದೃಷ್ಟಾಂತದಲ್ಲಿ ತೋರುವಂತೆ ಉಕ್ತ ಉಪಾಧಿಯು ಸಾಧ್ಯಕ್ಕಿಂತ ಹೆಚ್ಚು ವಿಸ್ತಾರವಾದುದು(ವ್ಯಾಪಕವಾದುದು), ಮತ್ತು ಪಕ್ಷದಲ್ಲಿ ಕಾಣದಿರುವುದರಿಂದ ಅದು ಹೇತುವಿಗಿಂತ ವಿಸ್ತಾರವಾದುದಲ್ಲ. ಸಾಧ್ಯಕ್ಕಿಂತ ವಿಸ್ತಾರವಾದುದೂ ಹೇತುವಿನಷ್ಟು ವಿಸ್ತಾರವಾಗಿಲ್ಲದುದೂ ಆದ ಗುಣವೇ ಉಪಾಧಿ. ಇಲ್ಲಿ ವಿರೋಧಿಯಾಗಿರುವ ಮೀಮಾಂಸಕನು ಶಬ್ದದ ನಿತ್ಯತೆಯನ್ನು ಸ್ಥಾಪಿಸಲು 'ಕೇವಲ ಆಕಾಶ ಗುಣತ್ವ' ಎಂಬುದನ್ನು ಹೇತುವನ್ನಾಗಿ ಮಂಡಿಸಿದ್ದಾನೆ. ಆಕಾಶದಲ್ಲಿ ಮಾತ್ರ ಇರುವ ಅನಂತವಾದ ಅಳತೆ, ಸಾಂಖ್ಯೇಯ ಐಕ್ಯಗಳಂತಹಗುಣಗಳು ನಿತ್ಯವಾದಂಥವು. ಶಬ್ದವೂ ಆಕಾಶದ ಗುಣ. ಆದುದರಿಂದ ಅದು ನಿತ್ಯ. ಇದೇ ಮೀಮಾಂಸಕನ ಮತ. ಆದರೆ ವಾದಿಯಾದ ನೈಯಾಯಿಕನಿಲ್ಲಿ ಹೀಗೆ ವಾದಿಸುವನು; ಆಕಾಶದ ಅನಂತತೆಯು ನಿತ್ಯವೋ, ಅದರ ಸಾಂಖ್ಯೇಯ ಐಕ್ಯ ನಿತ್ಯವೋ? ಅದು ನಿತ್ಯವಾಗಿರುವುದು ಅನುತ್ಪನ್ನವಾದುದರಿಂದಲೋ, ಆಕಾಶಕ್ಕೆ ಗುಣವಾಗಿರುವುದರಿಂದಲೋ? ಎಲ್ಲರಿಗೂ ತಿಳಿದಿರುವ ಹಾಗೆ ಆಕಾಶದ ಅಳತೆಯು ಅನಂತ; ಏಕೆಂದರೆ, ಅದಕ್ಕೆ ಹುಟ್ಟಿಲ್ಲ; ಕೇವಲ ಆಕಾಶಗುಣವಾದ ಮಾತ್ರದಿಂದ ಅದು ನಿತ್ಯವೆನ್ನಿಸಿಲ್ಲ. ಆದುದರಿಂದ ಅನುತ್ಪನ್ನತ್ವವೆಂಬ ಗುಣವು ದೃಷ್ಟಾಂತದಲ್ಲಿ ಕಾಣುತ್ತದೆ;

ಅಂದರೆ ಆಕಾಶದ ಅಳತೆ ಇಲ್ಲಿ ದೃಷ್ಟಾಂತ. ಅದರಲ್ಲಿ ಕಾಣುವಂತೆ ಶಬ್ದವೆಂಬ ಪಕ್ಷದಲ್ಲಿ ಉಕ್ತಗುಣ ಕಾಣಿಸದು. ಈಗ, ನಿತ್ಯವಾದುದೆಲ್ಲವೂ ಅನುತ್ಪಾದ್ಯ(ಹುಟ್ಟಿಸಲೂ ಬಾರದಂಥದು). ಇದರಿಂದಲೇ ಅನುತ್ಪನ್ನತ್ವವೆಂಬ ಗುಣವು ನಿತ್ಯತೆ ಎಂಬ ಸಾಧ್ಯಕ್ಕಿಂತ ಮತ್ತು ಆಕಾಶ ಮಾತ್ರಗುಣತ್ವವೆಂಬ ಹೇತುವಿಗಿಂತ ವಿಸ್ತಾರವಾಗಿದೆ. ಆದರೆ ಅನುತ್ಪನ್ನತ್ವವೆಂಬ ಗುಣವು ಶಬ್ದದಲ್ಲಿಲ್ಲ. ಈ ಕಾರಣದಿಂದ ಉಕ್ತ ಉಪಾಧಿಯು ಹೇತುವಿನ ಕಕ್ಷೆಯಿಂದ ಹೊರಗುಳಿಯುತ್ತದೆ. ಗಕಾರಾದಿ ಶಬ್ದಗಳ ಉತ್ಪಾದನದಿಂದ ಶಬ್ದವು ಉತ್ಪನ್ನ(ಉತ್ಪಾದಿತ)ವೆಂಬುದು ಸ್ಪಷ್ಟವಾಗುತ್ತದೆ. ಶಬ್ದದ ಉತ್ಪಾದನವನ್ನು ಬೇರೆ ರೀತಿಯಿಂದ ಅರ್ಥಯಿಸಬೇಕು. ಮೀಮಾಂಸಕನ ಹೇಳಿಕೆಯು ತರ್ಕಶುದ್ಧವಲ್ಲ. ಉತ್ಪಾದನದ ಪ್ರತ್ಯಕ್ಷ ಜ್ಞಾನವನ್ನು ಅಭಿವ್ಯಂಜನೆಯೆಂದು ತಿಳಿದುಕೊಳ್ಳಬೇಕೆಂಬುದು ಯುಕ್ತವಾಗದು. ಬಲವತ್ತರವಾದ ವಿರುದ್ಧ ಪ್ರಮಾಣವಿದ್ದಾಗ ಮಾತ್ರ ಪ್ರತ್ಯಕ್ಷದ ಪ್ರಾಮಾಣ್ಯವನ್ನು ಬದಿಗೊತ್ತಬಹುದು. ಇಲ್ಲವಾದರೆ ಪ್ರತ್ಯಕ್ಷಜ್ಞಾನಗಳೆಲ್ಲವನ್ನೂ ಅಯಥಾರ್ಥವೆಂದು ಹೇಳಬೇಕಾದೀತು. ಆಗ ನಾವು ನಮ್ಮ ಸರ್ವವ್ಯವಹಾರಗಳನ್ನೂ ಸಂಪೂರ್ಣವಾಗಿ ತಡೆಹಿಡಿದಿಡಬೇಕಾಗಿ ಬಂದೀತು.

## ವಾದಕಥೆಯಲ್ಲಿ ಬರುವ ಇತರ ಕಾರಕಗಳು

ಈ ಪ್ರಕಾರ ಚರ್ಚಾಪ್ರವಾಹವು ಹಲವಾರು ಘಟ್ಟಗಳ ಮೂಲಕ ಹರಿಯಬಹುದು. ಅವುಗಳಲ್ಲಿ ವಾದಿ–ಪ್ರತಿವಾದಿಗಳಿಬ್ಬರ ವಾದಕೌಶಲಕ್ಕೂ ಅತ್ಯುತ್ತಮ ಪ್ರಕಟನಾವಕಾಶ ದೊರಕಬಹುದು. ಇದರಿಂದಲೇ ವಾದವುಂಡನೆಯು ಬಹಳ ಕಾಲ ಮುಂದುವರಿಯಬಹುದು. ಆದರೆ ಇಬ್ಬಣಗಳಲ್ಲಿ ಒಂದರ ಉತ್ಸಾಹ ಕುಗ್ಗಿ ಹೋದರೂ ಸಾಕು, ಕೂಡಲೇ ತರ್ಕಪ್ರವಾಹವು ನಿಂತುಹೋಗುವುದು. ಈ ಸಂದರ್ಭದಲ್ಲಿ ವಾದಿ–ಪ್ರತಿವಾದಿಗಳು ಎಷ್ಟೇ ಉತ್ಸಾಹಿಗಳಾಗಿದ್ದರೂ ಶಬ್ದಗಳ ಮಿತವ್ಯಯದತ್ತ ಲಕ್ಷ್ಯ ಹಾಕಬೇಕೆಂಬುದು ಅವಿಸ್ಮರಣೀಯ. ಉಭಯ ಪಕ್ಷಗಳೂ ವಿರೋಧಿಯ ತರ್ಕವನ್ನೆದುರಿಸಲು ಬೇಕಾದಷ್ಟೇ ಪದಗಳನ್ನು ಬಳಸಬೇಕು–ಹೆಚ್ಚನ್ನು ಬಳಸಕೂಡದು. ಅವರಲ್ಲಿ ಹೇಳಬೇಕಾದದ್ದು ಬಹಳವಾಗಿರಬಹುದು. ಆದರೂ ಅದರಲ್ಲಿ ಯಾರೂ ಅಸಂಬದ್ಧ, ಪುನರುಕ್ತ ಎನ್ನಿಸಬಹುದಾದ ಒಂದಕ್ಷರವನ್ನೂ ಉಚ್ಚರಿಸಬಾರದು.

ತತ್ತ್ವಚರ್ಚೆಯ ಸ್ವರೂಪವನ್ನು ತೋರಿಸಲು ಹೊರಟ ನಾವು ನೈಯಾಯಿಕನು ವಾದಿಯಾಗಿ ಮೀಮಾಂಸಕನು ಪ್ರತಿವಾದಿಯಾದಾಗ ಅದು ಯಾವ ರೂಪವನ್ನು ತಾಳುತ್ತದೆ ಎಂಬುದನ್ನು ತೋರಿಸಿದೆವು. ಚರ್ಚೆ ನೈಯಾಯಿಕನೊಡನೆ ನಡೆಯುವಾಗ ವಾದಕಥೆಯಲ್ಲಿ ತರ್ಕ(ನ್ಯಾಯ)ವಾಕ್ಯದ ಐದೂ ಅವಯವಗಳನ್ನು ಬಳಸಬೇಕು; ಆದರದು ಮೀಮಾಂಸಕನೊಡನೆ ಅಥವಾ ಬೌದ್ಧನೊಡನೆ ನಡೆಯುವಾಗ ಪಂಚಕದ ಪ್ರಯೋಗಕ್ಕೆ ಅಂಟಿಕೊಳ್ಳಬೇಕಾಗಿಲ್ಲ. ಅವಯವಗಳ (ಅಂಗವಾಕ್ಯಗಳ) ಬಳಕೆಯು ಸಂಬಂಧಿಸಿದ ಪಕ್ಷಗಳ ನಿರ್ಣಯಗಳಿಗನುಗುಣವಾಗಿರಬೇಕು. ತನ್ನ ಅದ್ವೈತ ಸಿದ್ಧಿ[೧೭] ಎಂಬ ಗ್ರಂಥದಲ್ಲಿ

ಮಧುಸೂದನನು ಇದೇ ಮಾತನ್ನು ಹೇಳಿದ್ದಾನೆ. ಒಂದು ಚರ್ಚೆಯಲ್ಲಿ ಅವಯವವಾಕ್ಯಗಳ ಬಗೆಗೆ ಯಾವುದಾದರೊಂದು ಸ್ಥಿರವಾದ ನಿಯಮವಿರಲಾರದು. ಏಕೆಂದರೆ, ಎಲ್ಲ ಚರ್ಚೆಗಾರರೂ ಐದೂ ಅವಯವಗಳನ್ನು ಒಪ್ಪಲಾರರು. ವಾದಿಯು ತರ್ಕದ ನೆರವಿನಿಂದ ಪ್ರಮಾಣಗಳನ್ನು ಮುಂದಿಟ್ಟು ತನ್ನ ನಿಲುಮೆಯನ್ನು ಸ್ಥಾಪಿಸಿಕೊಂಡು ಪ್ರತಿವಾದಿಯ ನಿಲುಮೆಯನ್ನು ಖಂಡಿಸಬೇಕು–ಎಂದಿದ್ದಾನೆ ಅಕ್ಷಪಾದ. ಪ್ರತಿವಾದಿಯೂ ಇದೇ ಕ್ರಿಯಾನುಕ್ರಮವನ್ನು ಹಿಡಿಯುವನು. ತರ್ಕದ ನೆರವನ್ನು ಪಡೆದ ಪ್ರಮಾಣಗಳನ್ನು ಬಳಸಬೇಕೆಂದು ಅಕ್ಷಪಾದನು ಹೇಳುವಾಗ, ವಾದಕಥೆಯಲ್ಲಿ ಛಲ, ಜಾತಿ, ನಿಗ್ರಹಸ್ಥಾನಗಳನ್ನು ಬಳಸಕೂಡದೆಂಬುದು ಅವನ ಇಂಗಿತ. ಇವುಗಳಿಂದ ಯಾವನೂ ತನ್ನ ನಿಲುಮೆಯನ್ನು ಸ್ಥಾಪಿಸಲಾರ. ಆದರೆ ವಿರೋಧಿಯ ತರ್ಕದ ದೋಷಗಳನ್ನು ಮಾತ್ರ ಉದ್ಘಾಟಿಸಬಲ್ಲ ಸತ್ಯಾನ್ವೇಷಿಗಳಿಗಷ್ಟೇ ಮೀಸಲಾದ ವಾದಕಥೆಗೆ ಅಕ್ಷಪಾದನು ಇದನ್ನು ಶಿಫಾರಸು ಮಾಡುವುದಿಲ್ಲ.

## ಛಲ, ಜಾತಿ ಮತ್ತು ನಿಗ್ರಹಸ್ಥಾನ

ಚರ್ಚಾಕಲೆಯನ್ನು ಚೆನ್ನಾಗಿ ಅರಿತುಕೊಳ್ಳಬೇಕಾದರೆ ಛಲ, ಜಾತಿ, ನಿಗ್ರಹಸ್ಥಾನಗಳ ಜ್ಞಾನವು ಅನಿವಾರ್ಯ. ಛಲದಲ್ಲಿ ಮೂರು ಬಗೆಗಳಿವೆ. ಜಾತಿಯ ಬಗೆಗಳು ೨೪; ಮತ್ತು ನಿಗ್ರಹ ಸ್ಥಾನದಲ್ಲಿ ೨೨ ವಿಧಗಳಿವೆ. ಇವುಗಳನ್ನರಿತುಕೊಳ್ಳಲು ವಿಶೇಷಾಭ್ಯಾಸವು ಅಗತ್ಯ; ಆದರೆ ಇವುಗಳ ಬಿತ್ತರಣೆಯು ಈ ಪ್ರಬಂಧದ ಕಕ್ಷೆಯ ಹೊರಗಿನದು. ವಾದಿಯ ಹೇಳಿಕೆಯನ್ನು–ಅದರ ಅರ್ಥವನ್ನು ಬುದ್ಧಿಪೂರ್ವಕವಾಗಿ ತಿದ್ದಿ–ಖಂಡಿಸುವುದೇ ಛಲ.[೮] ಉದಾಹರಣೆ: ಈ ಮನುಷ್ಯನು ನೇಪಾಳದಿಂದ ಬಂದಿದ್ದಾನೆ; ಏಕೆಂದರೆ ಇವನ ಹತ್ತಿರ ಒಂದು ನವಕಂಬಲ(ಹೊಸ ಕಂಬಳಿ) ಇದೆ. ಇಲ್ಲಿ ವಾದಿಯು ಸ್ಪಷ್ಟವಾಗಿ ನವಕಂಬಲವೆಂಬ ಪದವನ್ನು ಹೊಸ ಕಂಬಳಿ ಎಂಬ ಅರ್ಥದಲ್ಲಿ ಬಳಸಿದ್ದಾನೆ. ವಾದಿಯ ಹೇಳಿಕೆ ಸುಳ್ಳೆಂಬುದನ್ನು ತೋರಿಸಲು ಪ್ರತಿವಾದಿಯು ನವಪದಕ್ಕೆ ಒಂಬತ್ತೆಂದು ಅರ್ಥ ಮಾಡಿ, 'ಅವನ ಒಂಭತ್ತು ಕಂಬಳಿಗಳೆಲ್ಲಿವೆ?' ಎಂದು ಕೇಳುತ್ತಾನೆ. ಇದರ ತಾತ್ಪರ್ಯವೇನೆಂದರೆ, ಹೊಸ ಕಂಬಳಿಯನ್ನು ಹೊದೆದಿರುವನೆಂಬ ಹೇತುವು ಪಕ್ಷದಲ್ಲಿ ಏಕತ್ರ ಸನ್ನಿಹಿತವಾಗಿಲ್ಲ; ಆದುದರಿಂದ ಅದು ನಿರಾಧಾರವೆನ್ನಿಸುತ್ತದೆ. ಹಾಗಲ್ಲದೆ, ವ್ಯಾಪ್ತಿ ಅಥವಾ ನಿಯತ ಸಾಹಚರ್ಯವನ್ನು (ಅವಿನಾಭಾವವನ್ನು, ಸಹಸ್ಥಿತಿಯನ್ನು) ಹೊರಗಿಟ್ಟು, ಕೇವಲ ಸಾದೃಶ್ಯ–ಅಸಾದೃಶ್ಯಗಳ ಬಲದಿಂದ ವಾದಿಯ ಹೇತುವಿನಲ್ಲಿ ದೋಷಗಳನ್ನು ಕಾಣುವುದು ಜಾತಿ ಎನ್ನಿಸುತ್ತದೆ. ಅಕ್ಷಪಾದನು–ಸಾದೃಶ್ಯ–ಅಸಾದೃಶ್ಯಗಳ ಬಲದಿಂದ[೯] ವಾದಿಯನ್ನೆದುರಿಸುವುದೇ ಜಾತಿ–ಎನ್ನುತ್ತಾನೆ. 'ಶಬ್ದವು ಅನಿತ್ಯ; ಏಕೆಂದರೆ ಅದಕ್ಕೆ ಹುಟ್ಟಿದೆ; ಅದಕ್ಕೆ ದೃಷ್ಟಾಂತವಾಗಿ ಮಡಿಕೆಯಿದೆ' ಎಂಬುದು ವಾದಿಯ ಸಿದ್ಧಾಂತವಾಗಿತ್ತು. ಈ ಪ್ರಮೇಯದಲ್ಲಿ ದೋಷವನ್ನು ಹುಡುಕಲೆಂದು ಮೀಮಾಂಸಕನು ಹೀಗೆ ಜಾತಿಯನ್ನು ಬಳಸಬಹುದು; ಕೃತಕವಾದ ಶಬ್ದವು ಮಡಿಕೆಯಂತೆ

ಅನಿತ್ಯವೆನ್ನಿಸುವುದಾದರೆ, ಮಡಿಕೆಯಂತೆ ಅದಕ್ಕೆ ಬಣ್ಣವಿರಬೇಕಾಯಿತು ಮತ್ತು ಅದರಂತೆಯೇ ಇದು ದೃಶ್ಯವೂ ಆಗಬೇಕಾಯಿತು. ಕೃತಕತ್ವವೆಂಬ ಹೇತುವಿಗೆ ಅನಿತ್ಯತೆಯೊಡನೆ ವ್ಯಾಪ್ತಿಯಿದೆ (ಅವಿನಾಭಾವಿದೆ); ಆದರೆ ಅದಕ್ಕೆ ವರ್ಣವಂತಿಕೆ ಮತ್ತು ದೃಶ್ಯತೆಗಳೊಡನೆ ಅಂಥ ವ್ಯಾಪ್ತಿಯಿಲ್ಲ; ಕೇವಲ ಕೃತಕತ್ವವೆಂಬ (ಉತ್ಪನ್ನತ್ವವೆಂಬ) ಹೇತುವಿಗೆ ಮಡಿಕೆಯಲ್ಲಿ ವರ್ಣವಂತಿಕೆ ಮತ್ತು ದೃಶ್ಯತೆಗಳೊಂದಿಗೆ ಒಡಬಾಳಿದೆ (ಒಟ್ಟು ಬಾಳಿದೆ). ಇದು ಜಾತ್ಯುತ್ತರದಂತಹ ಉತ್ತರ; ಏಕೆಂದರೆ ಇಲ್ಲಿ ವ್ಯಾಪ್ತಿಯನ್ನು ಹೊರಗಿಟ್ಟು ಕೇವಲ ಸಾದೃಶ್ಯದ ಬಲದಿಂದ ವಾದಿಯ ನಿಲುಮೆಯಲ್ಲಿ ದೋಷವನ್ನು ಕಾಣಲಾಗಿದೆ.

ಸೋಲಿನ ಸಹನೆಯೇ ನಿಗ್ರಹಸ್ಥಾನ.[೨೦] ಅಕ್ಷಪಾದನು–ವಿರುದ್ಧಾರ್ಥವನ್ನು ಗ್ರಹಿಸುವುದು ಅಥವಾ ಏನನ್ನೂ ಗ್ರಹಿಸದಿರುವುದು ನಿಗ್ರಹಸ್ಥಾನ–ಎಂದಿದ್ದಾನೆ. ಈ ಎರಡೂ ವಾದಿಯನ್ನು ಸೋಲಿಗೊಯ್ದು ಮುಟ್ಟಿಸುತ್ತವೆ. ವಿರುದ್ಧಾರ್ಥವನ್ನು ಗ್ರಹಿಸುವವನು ಸೋಲನ್ನು ಒಪ್ಪಿಕೊಳ್ಳಬೇಕು–ಎನ್ನುತ್ತಾನೆ ವಾತ್ಸ್ಯಾಯನ. ಮಾಡಬೇಕಾದ್ದನ್ನು ಮಾಡದಿರುವುದು ಅಗ್ರಹಣ (ಶೂನ್ಯಗ್ರಹಣ, ಏನನ್ನೂ ತಿಳಿದುಕೊಳ್ಳದಿರುವುದು). ವಾದಿ ಮಂಡಿಸಿದ ಹೇತುವನ್ನು ಖಂಡಿಸಲು ಬಾರದ ಪ್ರತಿವಾದಿಯು ಸೋಲಿಗೆ ಸಿದ್ಧನಾಗಿರಬೇಕು. ಹಾಗೇ, ಪ್ರತಿವಾದಿ ಸೂಚಿಸಿದ ದೋಷವನ್ನು ಪರಿಹರಿಸಲಾರದಾದ ವಾದಿಯು ಅದೇ ಹಾದಿಯನ್ನು ಹಿಡಿಯಬೇಕಾಗುವುದು. ೨೨ ನಿಗ್ರಹ ಸ್ಥಾನಗಳಲ್ಲಿ ವಿರುದ್ಧಾರ್ಥ ಗ್ರಹಣದಲ್ಲಿ ಕೆಲವು ಮತ್ತು ಶೂನ್ಯಾರ್ಥಗ್ರಹಣದಲ್ಲಿ ಕೆಲವು ಅಡಕವಾಗುತ್ತವೆ.

ಸಾಮಾನ್ಯವಾಗಿ ವಾದಕಥೆಯಲ್ಲಿ ನಿಗ್ರಹಸ್ಥಾನವನ್ನು ಬಳಸಬಾರದು. ವಾದಕಥೆಯು ಸತ್ಯಾನ್ವೇಷಿಗಳಲ್ಲಿ ನಡೆಯುವ ಚರ್ಚೆ. ಇನ್ನೊಬ್ಬನನ್ನು ಸೋಲಿಸಲು ಅದರಲ್ಲಿ ಯಾವನೂ ನಿಗ್ರಹಸ್ಥಾನವನ್ನು ಬಳಸಬಾರದು. ಸಾಮಾನ್ಯವಾಗಿ ವಾದಕಥೆಯಲ್ಲಿ ನಿಗ್ರಹಸ್ಥಾನದ ಪ್ರಯೋಗವು ವರ್ಜ್ಯವೆಂದು ಹೇಳಲಾಗಿದ್ದರೂ ಸತ್ಯ ನಿಷ್ಕರ್ಷಕ್ಕೆ ಸಹಾಯಕವಾಗುವಂಥ ನಿಗ್ರಹಸ್ಥಾನಗಳಿದ್ದರೆ ಅವುಗಳನ್ನು ಬಳಸಬಹುದು. ಇದನ್ನು ಸೂಚಿಸಲೆಂದೇ ಅಕ್ಷಪಾದನು–ವಾದವು ಸ್ವೀಕೃತ ತತ್ತ್ವಗಳಿಗೆ ಎದುರಾಡಬಾರದು–ಎಂದಿದ್ದಾನೆ.[೨೧] ಹಾಗೆ ಎದುರಾಡಿದರೆ ವಾದವು ಸತ್ಯಾನ್ವೇಷಣೆಗೆ ನಮ್ಮನ್ನೊಯ್ದು ಮುಟ್ಟಿಸದು. ಇದರಿಂದಲೇ ಅಪಸಿದ್ಧಾಂತವೆಂಬ ನಿಗ್ರಹಸ್ಥಾನವನ್ನು ವಾದಕಥೆಯಲ್ಲಿ ಬಳಸಬಹುದು. ನ್ಯೂನ(ಅಪೂರ್ಣ), ಅಧಿಕ(ಪುನರುಕ್ತ) ಮತ್ತು ಅಪಸಿದ್ಧಾಂತ(ಬದಲಾಯಿಸಲಾದ ಸಿದ್ಧಾಂತ, ಒಪ್ಪಿಕೊಂಡಿರುವ ಸಿದ್ಧಾಂತದಿಂದ ಬೇರೆಯಾದ ಸಿದ್ಧಾಂತ)ಗಳನ್ನು ವಾದಕಥೆಯಲ್ಲಿ ಬಳಸಬಹುದೆಂದು ನ್ಯಾಯವಾರ್ತಿಕಕಾರ ಹೇಳುತ್ತಾನೆ.[೨೨] ಸತ್ಯನಿಷ್ಕರ್ಷಕ್ಕೆ ಅನುಕೂಲವಾಗಿರುವುದರಿಂದ ಈ ಮೂರನ್ನು (ವಾದಕಥೆಯಲ್ಲಿ) ಬಳಸಿಕೊಳ್ಳಲಾಗುವುದು. ಉಳಿದ ೧೯ ನಿಗ್ರಹಸ್ಥಾನಗಳನ್ನು ವಾದ ಕಥೆಯಲ್ಲಿ ಬಳಸಬಾರದು.

ಈ ನಿಗ್ರಹಸ್ಥಾನಗಳನ್ನು ನಿಕಟವಾಗಿ ನಾವು ಚರ್ಚಿಸಿದರೆ ತತ್ತ್ವಚರ್ಚೆಯ ಸಾಮರ್ಥ್ಯವನ್ನೂ ಗಾಂಭೀರ್ಯವನ್ನೂ ನಾವು ಅರಿತುಕೊಳ್ಳಬಲ್ಲವರಾಗುವೆವು. ಈ

೨೨ ನಿಗ್ರಹ ಸ್ಥಾನಗಳಲ್ಲಿ ನಿರನುಯೋಜ್ಯಾನುಯೋಗವೆಂಬುದೊಂದು: ವಾದಿ–ಪ್ರತಿವಾದಿಗಳಿಬ್ಬರೂ ನಿರ್ದಿಷ್ಟ ಹೇತುಗಳನ್ನು ಮಂಡಿಸಿದರೆಂದು ಇಟ್ಟುಕೊಳ್ಳೋಣ. ಹೀಗಿದ್ದರೂ ಅವರಲ್ಲಿ ಒಬ್ಬನು ಇನ್ನೊಬ್ಬ ಮಂಡಿಸಿದ ಹೇತುವಿನಲ್ಲಿ ದೋಷವನ್ನು ಹೇಳಿದಾಗ, ಹಾಗೆ ಅಸತ್ಯದೋಷಾರೋಪ ಮಾಡಿದವನು ಈ ನಿಗ್ರಹ ಸ್ಥಾನವನ್ನು ಬಳಸಿದ ದೋಷಕ್ಕೆ ಗುರಿಯಾಗುತ್ತಾನೆ. ವಾದಿಯೋ ಪ್ರತಿವಾದಿಯೋ ದುಷ್ಟಹೇತುವೊಂದನ್ನು ಮಂಡಿಸಿದನೆಂದುಇಟ್ಟುಕೊಳ್ಳೋಣ. ಆದರೆ ಅದನ್ನೆತ್ತಿ ತೋರಿಸದಿದ್ದರೆ ಅಂಥ ಕರ್ತವ್ಯಲೋಪವು ಪರ್ಯನುಯೋಜ್ಯೋಪೇಕ್ಷಣ ಎಂಬ ನಿಗ್ರಹಸ್ಥಾನದಲ್ಲಿ ಸಿಲುಕುವುದು. ಅನಾವಶ್ಯಕ ಹೇಳಿಕೆಗಳನ್ನು ಕೊಡುವುದು ಅಧಿಕ(ಪುನರುಕ್ತಿ) ಎಂಬ ನಿಗ್ರಹ ಸ್ಥಾನಕ್ಕೊಯ್ದು ಮುಟ್ಟಿಸುವುದು. ಅನಾವಶ್ಯಕವಾದ ಅಧಿಕ ಅವಯವವಾಕ್ಯಗಳನ್ನು (ನ್ಯಾಯವಾಕ್ಯದಲ್ಲಿ) ಸೇರಿಸಿ ವಾದಿಸುವುದೂ ಈ ನಿಗ್ರಹಸ್ಥಾನಕ್ಕೊಯ್ದು ಮುಟ್ಟಿಸುವುದು. ಚರ್ಚೆಗೆ ಸಂಬಂಧಿಸದ ಹೇತು ಲಕ್ಷಣವೊಂದನ್ನು ಹೇಳುವುದೂ ಈ ನಿಗ್ರಹಸ್ಥಾನಕ್ಕೆ ಕರೆದೊಯ್ಯುವುದು. ಆವಶ್ಯಕವಾದ ಹೇತುಲಕ್ಷಣವನ್ನು ಹೇಳದಿರುವುದು ನ್ಯೂನವೆಂಬ ನಿಗ್ರಹಸ್ಥಾನಕ್ಕೊಯ್ದು ಒಗೆಯುವುದು. ಮೇಲೆ ಹೇಳಿದ ೫ ಹೇತ್ವಾಭಾಸಗಳೂ ನಿಗ್ರಹ ಸ್ಥಾನಗಳೇ. ಹೇತ್ವಾಭಾಸವೊಂದು ನಿಗ್ರಹಸ್ಥಾನವೇ ಆದರೂ–ವಾದಕಥೆಯಲ್ಲಿ ಐದೂ ಹೇತ್ವಾಭಾಸಗಳನ್ನು ಬಳಸಬಹುದು. ಆದರೆ ನ್ಯೂನ, ಅಧಿಕ, ಅಪಸಿದ್ಧಾಂತಗಳನ್ನುಳಿದು ಇತರ ಯಾವ ನಿಗ್ರಹಸ್ಥಾನವನ್ನೂ ಬಳಸಬಾರದು–ಎಂಬ ಕಾರಣದಿಂದ ಹೇತ್ವಾಭಾಸವನ್ನು ಪ್ರತ್ಯೇಕವಾಗಿ ಹೇಳಲಾಗಿದೆ. ಹೇತ್ವಾಭಾಸಗಳನ್ನು ಪರಾಮರ್ಶಿಸಿ ಖಂಡಿಸದಿದ್ದರೆ ವಾದಕಥೆಯಲ್ಲಿ ಸತ್ಯ ನಿಷ್ಕರ್ಷ ಮಾಡುವುದು ಅಸಾಧ್ಯವಾಗಿಬಿಡುತ್ತದೆ. ಈ ಪ್ರಕಾರ ಹೇತ್ವಾಭಾಸಗಳ ಬಳಕೆಯು ವಾದಕಥೆಯಲ್ಲಿ ಅವಶ್ಯಕ.

## ಜಲ್ಪಕಥೆ

ನಾವೀಗ ಜಲ್ಪಕಥೆಯನ್ನು ಚರ್ಚಿಸೋಣ. ವಾದಕಥೆಯ ಲಕ್ಷಣಗಳು ಜಲ್ಪಕಥೆಯಲ್ಲಿಯೂ ಕಂಡುಬರುತ್ತದೆ.[೨೩] ಜಲ್ಪಕಥೆಯ ಹೆಚ್ಚಿನ ಲಕ್ಷಣವೆಂದರೆ, ಎದುರು ಪಕ್ಷದ ವಾದದಲ್ಲಿ ದೋಷಗಳನ್ನು ಹೇಳುವಾಗ ಛಲ, ಜಾತಿ, ನಿಗ್ರಹ ಸ್ಥಾನಗಳನ್ನು ಬಳಸಲು ಅಪ್ಪಣೆಯಿದೆ. ವಾದಿಯನ್ನು ಸೋಲಿಸುವುದೇ ಜಲ್ಪರೂಪದ ಚರ್ಚೆಯ ಮುಖ್ಯ ಗುರಿ. ವಿರೋಧಿಯ ತರ್ಕಕೌಶಲವನ್ನು ಪರೀಕ್ಷಿಸಲು ಮಾತ್ರ ಜಲ್ಪಕಥೆಯಲ್ಲಿ ಪಕ್ಷಕಾರರು ಭಾಗವಹಿಸುತ್ತಾರೆ. ಸತ್ಯನಿಷ್ಕರ್ಷವು ಕೇವಲ ಅನುಷಂಗಿಕ. ಜಲ್ಪಚರ್ಚೆಯು ಸತ್ಯನಿಷ್ಕರ್ಷೆಗೆ ಕಾರಣವಾದ ಮಾತ್ರದಿಂದ ಅದೆಂದೂ ಜಲ್ಪವಲ್ಲ ಎಂದೆನ್ನಿಸದು. ಅಪರಿಹಾರ್ಯವಾದ ದಂಬದಿಂದ ಅಪಾರ್ಥಪರನೊಬ್ಬನು ಚರ್ಚೆಗಿಳಿದರೆ ಆಗ ಜಲ್ಪಕಥೆಯನ್ನು ಅವನ ದುರಹಂಕಾರವನ್ನು ಇಳಿಸಲು ಬಳಸಬಹುದು. ಸತ್ಯನಿಷ್ಕರ್ಷೆಯನ್ನು ಮಾಡಡದೆ ಕೂಡ ವಾದಿಯ ಬಾಯಿಯನ್ನು ಮುಚ್ಚಲು ಜಲ್ಪಕಥೆಯನ್ನು

ಆರಂಭಿಸಬಹುದು. ನ್ಯಾಯಕುಸುಮಾಂಜಲಿಯಲ್ಲಿ ವಾದಿಯ ಬಾಯಿ ಮುಚ್ಚಿಸುವ ಕ್ರಮವನ್ನು ಅನುಸರಿಸಲಾಗಿದೆ.[೨೪] ನ್ಯಾಯಕುಸುಮಾಂಜಲಿಯು ವಾದಗ್ರಂಥವಾದರೂ ಅದು ಕೆಲ ಸಂದರ್ಭಗಳಲ್ಲಿ ಜಲ್ಪವನ್ನು ಅನುಪ್ರವೇಶ ಮಾಡಿದೆ.

ಜಲ್ಪಕಥೆಯಲ್ಲಿ ಇರುವುದು ವಾದಿ–ಪ್ರತಿವಾದಿಗಳ ತರ್ಕಶಕ್ತಿಯ ಪರೀಕ್ಷೆ. ಅದರಲ್ಲಿ ಅವರು ಕೆಲವು ನಿಯಮಗಳನ್ನು ಪಾಲಿಸಲು ಒಪ್ಪಿಕೊಂಡಿರುತ್ತಾರೆ. ವಾದಿ–ಪ್ರತಿವಾದಿಗಳು ಚರ್ಚೆಯ ವಿಷಯವನ್ನು ಬಿಟ್ಟು ಅಸಂಬದ್ಧ ವಿಷಯಗಳನ್ನು ಕುರಿತು ಅಡ್ಡಮಾತುಗಳನ್ನು ಆಡಬಾರದೆಂಬುದು ಅವುಗಳಲ್ಲಿ ಒಂದು. ನಿಷ್ಪಕ್ಷಪಾತಿಯಾದ ನಿರ್ಣಾಯಕನನ್ನೂ ಅನುವಿಧೇಯನನ್ನೂ ನಿಯಮಿಸಿಕೊಳ್ಳುವುದು ಜಲ್ಪಕಥೆಯಲ್ಲಿ ಅತ್ಯಂತ ಮುಖ್ಯ. ಅಲ್ಲದೆ ನಿಗ್ರಹಸ್ಥಾನ ಮುಂತಾದವುಗಳನ್ನು ಹೇಗೆ ಬಳಸಬೇಕೆಂಬುದನ್ನು ಮೊದಲೇ ನಿರ್ಧರಿಸಿಕೊಳ್ಳಬೇಕು. ಚರ್ಚೆಯನ್ನು ಮುಗಿತಾಯಗೊಳಿಸುವುದನ್ನು ನ್ಯಾಯವೆನ್ನಿಸುವ ತಪ್ಪು ಯಾವುದೆಂಬುದನ್ನು ನಿಷ್ಕರ್ಷಿಸಿಕೊಂಡಿರಬೇಕು. ಕ್ರಿಯಾನುಕ್ರಮವನ್ನು ಬರೆದಿಡಬೇಕೆಂದಿದ್ದರೆ ಲೇಖಕನೊಬ್ಬನನ್ನು ನಿಯಮಿಸಿಕೊಂಡಿರಬೇಕು. ಲೇಖಕನು ಉಭಯ ಪಕ್ಷಗಳಿಗೂ ಗ್ರಾಹ್ಯನಾದವ ನಾಗಿರಬೇಕು. ವಾದಿ–ಪ್ರತಿವಾದಿಗಳಿಬ್ಬರೂ ಸಮಪಾಂಡಿತ್ಯವುಳ್ಳವರಾಗಿರಬೇಕು. ಇಲ್ಲವಾದರೆ ಅವರ ತರ್ಕಶಕ್ತಿಯನ್ನು ನ್ಯಾಯವಾಗಿ ಪರೀಕ್ಷಿಸಲು ಸಾಧ್ಯವಾಗದು; ಚರ್ಚೆ ಆಗ ವ್ಯರ್ಥವಾಗಿ ಪರಿಣಮಿಸುತ್ತದೆ. ಅಂಥ ಚರ್ಚೆಯ ನ್ಯಾಯಾಧೀಶಮಂಡಲವು ಇಬ್ಬಣಗಳಿಗೂ ಗ್ರಾಹ್ಯವಾಗಿರಬೇಕು. ನ್ಯಾಯಾಧೀಶರು ಆಯಾ ತತ್ತ್ವದರ್ಶನಗಳಲ್ಲಿ ಮನ್ನಣೆ ಪಡೆದವರಾಗಿರಬೇಕಲ್ಲದೆ, ಅವರು ಉಗ್ರ ನಿಷ್ಪಕ್ಷಪಾತಿಗಳೂ ಆಗಿರಬೇಕು, ಅಷ್ಟೇ ಅಲ್ಲದೆ, ಅವರು ವಾದಿ–ಪ್ರತಿವಾದಿಗಳ ಅಭಿಪ್ರಾಯಗಳನ್ನು ಪೂರ್ಣವಾಗಿ ಅರಿತುಕೊಂಡು ವಿವರಿಸಬಲ್ಲವರಾಗಿರತಕ್ಕದ್ದು. ನ್ಯಾಯಾಧೀಶರ ಸಂಖ್ಯೆಯು ೩, ೫, ೭ ಮುಂತಾಗಿ ಬೆಸವಾಗಿರಬೇಕು(ಮಿಗಿಲೆಯಾಗಿರಬೇಕು). ಆಗ ಬಹುಸಂಖ್ಯಾತರ ತೀರ್ಪು ಆ ಈ ಬಣದ ಜಯವನ್ನು ಇಲ್ಲವೆ ಅಪಜಯವನ್ನು ನಿರ್ಧರಿಸಬಲ್ಲುದು. ಈ ಚರ್ಚೆಗಳಲ್ಲಿ ಅಧ್ಯಕ್ಷತೆ ವಹಿಸುವವನು ನಿಷ್ಪಕ್ಷಪಾತಿಯೂ ವಾದಿ–ಪ್ರತಿವಾದಿ ನ್ಯಾಯಾಧೀಶರೆಲ್ಲರಿಗೂ ಸಮ್ಮತನಾಗಿಯೂ ಇರಬೇಕು.

ಜಲ್ಪ ಚರ್ಚೆಯ ಕ್ರಿಯಾನುಕ್ರಮ ಇಂತಿದೆ: ತಟಸ್ಥನೊಬ್ಬನು ಗಾಳಿಯು ಪ್ರತ್ಯಕ್ಷವೋ ಅಪ್ರತ್ಯಕ್ಷವೋ ಎಂಬ ಸಂಶಯವನ್ನು ವ್ಯಕ್ತಪಡಿಸಿದಾಗ, ನಿಯಮಗಳನ್ನು ಒಪ್ಪಿಕೊಂಡು, ಮೀಮಾಂಸಕನು ಸ್ಥಾಪನಾನುಗುಣವಾಗಿ (ಅನುಷೇಧ ಪರವಾಗಿ, ಪ್ರತ್ಯಕ್ಷವೆಂದು ಸಾಧಿಸುವುದರ ಪರವಾಗಿ) ನ್ಯಾಯವಾಕ್ಯವೊಂದನ್ನು ಪ್ರಯೋಗಿಸುತ್ತಾನೆ. ನೈಯಾಯಿಕನ ಪ್ರಕಾರ ಗಾಳಿಯು ಅಪ್ರತ್ಯಕ್ಷ ವಸ್ತುಮತ್ತುರೂಪಾದಿ ಪಂಚಗುಣಗಳಲ್ಲಿ ಒಂದೂ ಅದಕ್ಕಿಲ್ಲ. ಸ್ಪರ್ಶ ಹೇಗೂ ಇಲ್ಲವೇ ಇಲ್ಲ. ಆದುದರಿಂದ ಅದರ ಅಸ್ತಿತ್ವವನ್ನು ತರ್ಕಿಸಿ ಸಿದ್ಧಮಾಡಬೇಕು. ಈಗ ಮೀಮಾಂಸಕನು ತನ್ನ ವಾದವನ್ನು ಹೀಗೆ ಮಂಡಿಸುತ್ತಾನೆ:

ಗಾಳಿಯು ಪ್ರತ್ಯಕ್ಷ,

ಏಕೆಂದರೆ, ಅದು ಪ್ರತ್ಯಕ್ಷವಾದ ಸ್ಪರ್ಶಗುಣದ ಆಶ್ರಯದ್ರವ್ಯ; ಪ್ರತ್ಯಕ್ಷಸ್ಪರ್ಶಕ್ಕೆ ಆಶ್ರಯವಾದುದೆಲ್ಲವೂ ಪ್ರತ್ಯಕ್ಷ–

ದೃಷ್ಟಾಂತ–ಮಡಿಕೆ.

ಆತನು ಕಂಟಕೋದ್ಧಾರವನ್ನೂ ಹೀಗೆ ಮಾಡುತ್ತಾನೆ;

ಇದು ಹೇತ್ವಾಭಾಸವಲ್ಲ,

ಏಕೆಂದರೆ, ಇದಕ್ಕೆ ಹೇತ್ವಾಭಾಸದ ಯಾವ ಲಕ್ಷಣವೂ ಇಲ್ಲ.

ಇಲ್ಲಿ ನೈಯಾಯಿಕನು ಪ್ರತಿವಾದಿ(ವಿರೋಧಿ). ಅವನು ಈ ಪ್ರಕಾರ ಎರಡನೆಯ ಘಟ್ಟದ ಚರ್ಚೆಯನ್ನು ನಡೆಸುತ್ತಾನೆ; ಗಾಳಿಯು ಪ್ರತ್ಯಕ್ಷ ಸ್ಪರ್ಶದ ಆಶ್ರಯದ್ರವ್ಯವಾದಾಗ ಅದು ಸ್ವತಃ ಪ್ರತ್ಯಕ್ಷವಾಗಬೇಕಾಗಿಲ್ಲ. ಪ್ರತ್ಯಕ್ಷ ಸ್ಪರ್ಶಕ್ಕೆ ಆಶ್ರಯವಾಗಿರುವುದು ಮತ್ತು ತಾನೇ ಸ್ವತಃ ತೋರುವುದು ಎಂಬೀ ಎರಡರಲ್ಲಿ ಒಂದಿದ್ದಲ್ಲಿ ಇನ್ನೊಂದು ಇದ್ದೇ ತೀರಬೇಕೆಂಬ ಸಾಹಚರ್ಯ ನಿಯಮವೆಲ್ಲೂ ಇಲ್ಲ. ಮೀಮಾಂಸಕನ ಪ್ರಕಾರ ಪ್ರತ್ಯಕ್ಷ ಸ್ಪರ್ಶಕ್ಕೆ ಆಶ್ರಯವಾಗಿರುವುದು ಹೇತು ಮತ್ತು ಪ್ರತ್ಯಕ್ಷ ಗ್ರಾಹ್ಯತೆಯು ಸಾಧ್ಯ. ಸಾಧ್ಯದೊಡನೆ ಅವಿಭಾಜ್ಯವಾಗಿರುವ ಹೇತುವು ಸಾಧ್ಯವನ್ನು ಸಿದ್ಧಮಾಡುತ್ತದೆ. ಆದರೆ ಈ ಹೇತು ಹಾಗಿಲ್ಲದುದರಿಂದ ಸಾಧ್ಯವನ್ನು ಸಿದ್ಧಮಾಡುವುದಿಲ್ಲ. ನೈಯಾಯಿಕ ಮುಂದರಿಸುವುದು ಹೀಗೆ:

'ಗಾಳಿಯು ಅಪ್ರತ್ಯಕ್ಷ;

ಏಕೆಂದರೆ, ಅದೊಂದು ವರ್ಣರಹಿತವಾದ ಬಾಹ್ಯವಸ್ತು:

ವರ್ಣರಹಿತವಾದ ಬಾಹ್ಯ ವಸ್ತುಗಳೆಲ್ಲವೂ ಅಪ್ರತ್ಯಕ್ಷವಾದಂಥವು–

ದೃಷ್ಟಾಂತ: ಆಕಾಶ,

ಇದಕ್ಕೆ ಅಂಥ ಗುಣವಿದೆ–ಅಂದರೆ ಅಪ್ರತ್ಯಕ್ಷಕರತ್ವವಿದೆ:

ಆದುದರಿಂದ ಇದು ಅಪ್ರತ್ಯಕ್ಷ.'

ನೈಯಾಯಿಕನು ವಾದದಲ್ಲಿ ನ್ಯಾಯವಾಕ್ಯದ ಐದೂ ಅವಯವಗಳನ್ನು ಬಳಸಲು ಬದ್ಧನು. ಆದುದರಿಂದ ಅವನು ಈ ಐದನ್ನೂ ಹೇಳಿದ್ದಾನೆ. ಮೀಮಾಂಸಕನು ಮೂರೇ ಮೂರನ್ನು ಬಳಸಲು ಬದ್ಧನಾಗಿರುವುದರಿಂದ ಮೂರನ್ನೇ ಹೇಳಿದ್ದಾನೆ. ಅನಂತರ ನೈಯಾಯಿಕನು ಕಂಟಕೋದ್ಧಾರದ ಸಲುವಾಗಿ–ಈ ಹೇತುವು ಅಭಾಸಿಕವಾದುದಲ್ಲ; ಏಕೆಂದರೆ, ಇದರಲ್ಲಿ ಹೇತ್ವಾಭಾಸದ ಯಾವ ಲಕ್ಷಣವೂ ಇಲ್ಲ ಎನ್ನುತ್ತಾನೆ. ಮೂರನೆಯ ಘಟ್ಟದ ತರ್ಕದಲ್ಲಿ ಮೀಮಾಂಸಕನು–

'ನಾವು ಪ್ರತ್ಯಕ್ಷ ಸ್ಪರ್ಶಕ್ಕೆ ಆಶ್ರಯವಾಗಿರುವುದನ್ನು ಹೇತುವೆಂದು ಮಂಡಿಸುತ್ತೇವೆ. ಈ ಹೇತುವು ಸಾಧ್ಯವನ್ನು ಸ್ಥಾಪಿಸದೆಂದು ಸಿದ್ಧಮಾಡಲು ನೈಯಾಯಿಕನು–ಈ ಹೇತುವು

ವ್ಯಭಿಚಾರಿ(ಸ್ಥಳ ಬದಲಾಯಿಸುವಂಥದು)ಯಾದುದರಿಂದ ಸಾಧ್ಯವನ್ನು ಸಾಧಿಸಿಕೊಡದು– ಎಂದು ವಾದಿಸಿದ್ದಾನೆ. ಆದರೆ ನಾವು ಮುಂದಿಟ್ಟ ಹೇತುವು ವ್ಯಭಿಚಾರಿಯಲ್ಲವಾದುದರಿಂದ ನೈಯಾಯಿಕನು ಮುಂದಿಟ್ಟ ಹೇತುವು ಅಸಿದ್ಧ(ನಿರಾಧಾರ)ವಾಗಿ ಹೋಯಿತು. ಆದುದರಿಂದ ಅದು ನಮ್ಮ ಹೇತುವಿನ ಅನರ್ಹತೆಯನ್ನು ಸಿದ್ಧ ಮಾಡಲಿಲ್ಲ' ಎನ್ನುತ್ತಾನೆ. ಆಗ ನೈಯಾಯಿಕನು 'ಗಾಳಿಯು ಅಪ್ರತ್ಯಕ್ಷತೆಯನ್ನು–ವರ್ಣರಹಿತ ಬಾಹ್ಯವಸ್ತುವಾಗಿರುವುದರಿಂದ–ಎಂಬ ಹೇತುವಿನಿಂದ ಸಿದ್ಧ ಮಾಡಬಹುದು' ಎನ್ನುತ್ತಾನೆ. ಇದೂ ಸರಿಯಲ್ಲ. ನೈಯಾಯಿಕನ ಈ ಹೇತುವು ಗಾಳಿಯ ಅಪ್ರತ್ಯಕ್ಷತೆಯನ್ನು ಸಿದ್ಧಮಾಡುವುದಿಲ್ಲ; ಏಕೆಂದರೆ, ಈ ಹೇತುವಿನಲ್ಲಿ ಸ್ಪರ್ಶಗುಣರಹಿತತ್ವ ಎಂಬುದು ಪರಿಸೀಮನಕಾರಿಯಾದ ವಿಶೇಷಣ(ಉಪಾಧಿ); ಮತ್ತು ಉಪಾಧಿಬದ್ಧವಾದ ಹೇತುವು ಸಾಧ್ಯವನ್ನು ಸಿದ್ಧಮಾಡಲಾರದು. ನೈಯಾಯಿಕನ ನ್ಯಾಯವಾಕ್ಯದಲ್ಲಿ ಗಾಳಿಯು ಪಕ್ಷ ಮತ್ತು ಆಕಾಶವು ದೃಷ್ಟಾಂತ. ಸ್ಪರ್ಶಗುಣರಹಿತತ್ವವೆಂಬ ಲಕ್ಷಣವು ದೃಷ್ಟಾಂತದಲ್ಲಿದೆಯಲ್ಲದೆ ಪಕ್ಷದಲ್ಲಿಲ್ಲ. ಆದುದರಿಂದ ಅದು ಈ ಪ್ರಕಾರವಾಗಿ ಹೇತುವಿನ ದೃಷ್ಟಿಯಿಂದ ಒಂದು ಉಪಾಧಿ. ಇಂಥ ಜಲ್ಪ ಚರ್ಚೆಯು ನಿಗ್ರಹಸ್ಥಾನವು ಚರ್ಚಾಸೂತ್ರವನ್ನು ಹರಿದೊಗೆಯುವವರೆಗೆ ಹಂತಹಂತವಾಗಿ ಮುಂದುವರಿಯುವುದು.

## ವಿತಂಡ ಕಥೆ

ಪ್ರತಿಸಿದ್ಧಾಂತವಾವುದನ್ನೂ ಮಂಡಿಸದೆ(ಪ್ರತಿಪಕ್ಷವಾವುದನ್ನೂ ಮುಂದಿಡದೆ) ಈ ಜಲ್ಪವನ್ನು ಬಳಸಿದರೆ ಅದು ವಿತಂಡವೆನ್ನಿಸಿಕೊಳ್ಳುತ್ತದೆ.[೨೫] ವಿತಂಡವನ್ನು ಲಕ್ಷಣಿಸುವ ಸೂತ್ರದ ಮೇಲೆ ಭಾಷ್ಯವನ್ನು ಬರೆಯುವಾಗ ವಾತ್ಸ್ಯಾಯನನು, ಒಂದು ವಿಷಯಕ್ಕೆ ಸಂಬಂಧಿಸಿದ ಪರಸ್ಪರ ವಿರುದ್ಧವಾದ ಎರಡು ವಿಧೇಯಗಳನ್ನು(ಉದ್ದೇಶ್ಯದ, ಕರ್ತೃವಿನ ಕರ್ಮಾಧಿ ಸಂಘಾತಗಳನ್ನು) ಪಕ್ಷ–ಪ್ರತಿಪಕ್ಷಗಳೆನ್ನಲಾಗುತ್ತದೆ, ಎಂದು ಹೇಳುತ್ತಾನೆ. ವಿತಂಡವಾದಿಯು ಈ ಎರಡರಲ್ಲಿ ಯಾವ ಒಂದನ್ನೂ ಬಳಸನು. ವಿರೋಧಿಯ ವಾದವನ್ನು ಖಂಡಿಸುವುದೊಂದೇ ಅವನ ಉದ್ಯೋಗ. ವಾದಿಯೊಂದು ಪ್ರಮೇಯವನ್ನು ಎದುರಿಡುತ್ತಾನೆ. ವಿತಂಡವಾದಿಯು ಅದನ್ನು ಖಂಡಿಸುತ್ತಾನೆ. ಚರ್ಚೆಯಲ್ಲಿ ಗೆಲ್ಲಬೇಕೆಂಬವರಿಗೆ ಕೂಡ ಈ ವಿತಂಡ ಸಾಧನವೆನ್ನಿಸುತ್ತದೆ. ಎದುರಿರುವ ವಿಷಯದ ಮೇಲಿನ ಹೇಳಿಕೆಯಲ್ಲಿ (ವಿಪ್ರತಿಪತ್ತಿವಾಕ್ಯದಲ್ಲಿ) ಎರಡು ವಿಕಲ್ಪಗಳನ್ನು ಹೇಳಲಾಗುತ್ತದೆ.ಈ ವಿಕಲ್ಪಗಳಲ್ಲಿ ಯಾವ ಒಂದನ್ನಾದರೂ ಸ್ಥಾಪಿಸಲು ಹೂಡುವ ತರ್ಕಕ್ಕೆ ಸ್ಥಾಪನೆ ಎಂದು ಹೆಸರು. ವಿತಂಡವಾದಿಯು ಸ್ಥಾಪನೆ ಮಾಡುವುದಿಲ್ಲ. ಕೇವಲ ತನ್ನ ವಿರೋಧಿಯ ದೋಷಗಳನ್ನು ಎತ್ತಿ ತೋರಿಸುತ್ತಾನೆ. ಆದುದರಿಂದ ವಿತಂಡಚರ್ಚೆಯಲ್ಲಿ ಒಂದೇ ಒಂದು ಸಿದ್ಧಾಂತವನ್ನು ಸ್ಥಾಪಿಸಲು ವಾದವನ್ನು ಮಂಡಿಸಲಾಗುತ್ತದೆ. ಜಲ್ಪಕಥೆ–ವಿತಂಡಕಥೆಗಳೆರಡೂ ತರ್ಕಶಕ್ತಿ ಪರೀಕ್ಷೆಗಾಗಿಯೇ ಇವೆ. ಯಾವುದನ್ನಾದರೂ ಬರಿದೆ ಸಿದ್ಧ ಮಾಡುವುದರಿಂದ ಅಥವಾ ಅಸಿದ್ಧವೆಂದು ತೋರಿಸುವುದರಿಂದ ಒಬ್ಬನ ನಿಲುಮೆಯ ಸಾಮರ್ಥ್ಯವು ನಿರ್ಧರಿಸಲ್ಪಡದು. ಒಂದು ಪಕ್ಷವು ಬರಿದೆ ತನ್ನ ನಿಲುಮೆಯನ್ನು

ರಕ್ಷಿಸಿಕೊಳ್ಳುತ್ತ ಹೋದರೆ ಮತ್ತು ಇನ್ನೊಂದು ಪಕ್ಷವು ಬರಿದೆ ಅದರಲ್ಲಿ ದೋಷವನ್ನೇ ತೋರಿಸುತ್ತ ಹೋದರೆ ನಿಜವಾದ ಶಕ್ತಿಪರೀಕ್ಷೆ ಹೇಗೆ ಆದೀತು? 'ಈ ಪ್ರಕಾರ ಪರಸ್ಪರರ ಶಕ್ತಿಯು ನಿರ್ಧರಿಸಲ್ಪಟ್ಟರೆ ಜಲ್ಪ ಕಥೆಯ ಅಗತ್ಯವೇನು?' ಎಂದು ಕೇಳಬಹುದು. ಇದಕ್ಕೆ ಉತ್ತರವಾಗಿ, 'ಜಲ್ಪಕಥೆಯಲ್ಲಿ ವಾದಿ–ಪ್ರತಿವಾದಿಗಳಿಬ್ಬರೂ ತಮ್ಮ ತಮ್ಮ ನಿಲುಮೆಗಳನ್ನು ಕಾಯ್ದುಕೊಳ್ಳುವರು. ಮತ್ತು ತಮ್ಮ ತಮ್ಮ ವಿರೋಧಿಗಳ ತರ್ಕದಲ್ಲಿ ದೋಷಗಳನ್ನು ತೋರಿಸುವರು. ಆದುದರಿಂದ ಪ್ರತಿಯೊಬ್ಬರ ತರ್ಕಶಕ್ತಿಯೂ ಸ್ವಪಕ್ಷರಕ್ಷಣೆ ಮತ್ತು ಪರಪಕ್ಷ ಖಂಡನೆಗಳೆರಡರಿಂದಲೂ ನಿರ್ಧರಿಸಲ್ಪಡುತ್ತದೆ. ಆದರೆ ವಿತಂಡಕಥೆಯಲ್ಲಿ ವಾದಿಯು ತನ್ನ ನಿಲುಮೆಯನ್ನು ಕಾಯ್ದುಕೊಳ್ಳುವನಷ್ಟೇ ಮತ್ತು ವಿರೋಧಿಯು ಅವನ ರಕ್ಷಣ ತರ್ಕದಲ್ಲಿ ದೋಷಗಳನ್ನು ಮಾತ್ರ ಹೇಳುವನು. ಆದುದರಿಂದ ಇಲ್ಲಿ ವಾದಿಯ ಬಲವು ಅವನ ಸ್ವಪಕ್ಷರಕ್ಷಣೆಯಲ್ಲೂ ಪ್ರತಿವಾದಿಯ ಬಲವು ಪರಪಕ್ಷ ಖಂಡನೆಯಲ್ಲೂ ಇದೆ'–ಎನ್ನಬಹುದು.

ಶ್ರೀ ಹರ್ಷನ ಸುಪ್ರಸಿದ್ಧ ಗ್ರಂಥವಾದ ಖಂಡನಖಂಡಖಾದ್ಯವು ವಿತಂಡವಾದದ ಅತ್ಯಂತ ಗಣ್ಯವಾದ ಉದಾಹರಣೆಯಾಗಿದೆ. ಶೂನ್ಯವಾದಿಯಾದ ಮಾಧ್ಯಮಿಕನೂ ಅದ್ವೈತಿಯೂ ವಿತಂಡವನ್ನು ಬಳಸಿದ್ದಾರೆ. ವಿತಂಡಕಥೆಯ ಸ್ವರೂಪವನ್ನು ಖಂಡನಖಂಡಖಾದ್ಯವನ್ನೋದಿ ಅರಿತುಕೊಳ್ಳಬಹುದಾಗಿದೆ. ಅದ್ವೈತರತ್ನರಕ್ಷಣವೆಂಬ ಗ್ರಂಥದಲ್ಲಿ ನೈಯಾಯಿಕರು ಕೊಟ್ಟ ಪ್ರಮಾತ್ವ ಲಕ್ಷಣಗಳನ್ನು (ಯಥಾರ್ಥಜ್ಞಾನದ ಲಕ್ಷಣಗಳನ್ನು) ಖಂಡಿಸಲಾಗಿದೆ.[೨] ಮಧುಸೂದನ ಸರಸ್ವತಿಯು ನೈಯಾಯಿಕರು ಹೇಳಿದ ಮೇರೆಗೆ ಪ್ರಮಾತ್ವದ ೧೦ ಲಕ್ಷಣಗಳನ್ನು ಹೇಳಿ, ಅನಂತರ ಅವುಗಳೆಲ್ಲವನ್ನೂ ಖಂಡಿಸಿದ್ದಾನೆ. ಅವನು ಕೊನೆಗೆ, 'ಹೀಗೆ ಯಥಾರ್ಥತೆಯ ಲಕ್ಷಣವನ್ನು ಹೇಳುವುದು ಅಸಾಧ್ಯವಾದುದರಿಂದ ಭೇದವು ಯಥಾರ್ಥ ಜ್ಞಾನದ ವಸ್ತು(ವಿಷಯ)ವೆಂದುಸಾಧಿಸುವುದು ದುಃಸಾಧ್ಯ' ಎಂದು ನಿರ್ಣಯಿಸಿದ್ದಾನೆ. ಇದಕ್ಕೆ ಉತ್ತರವಾಗಿ ದ್ವೈತಿಗಳು, 'ಯಥಾರ್ಥ ಜ್ಞಾನದ ಕಲ್ಪನೆಯನ್ನು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಪ್ರತಿಯೊಬ್ಬನೂ ಅದನ್ನು ಬಳಸುತ್ತಾನೆ. ಇದರ ಸಾರ್ವತ್ರಿಕ ಬಳಕೆಯನ್ನು ಅದ್ವೈತಿಗಳೇ ಸ್ವತಃ ಹೇಗೆ ವಿವರಿಸಬಲ್ಲರು? ಪ್ರಮಾತ್ವವನ್ನು ಲಕ್ಷಣಿಸಲು ಸಾಧ್ಯವಿಲ್ಲವೆಂದಾದರೆ ಅದ್ವೈತಿಯಾದರೂ ಅದನ್ನು ಹೇಗೆ ಬಳಸಬಲ್ಲ? ಪ್ರಮೆ ಅಥವಾ ಯಥಾರ್ಥ ಜ್ಞಾನವನ್ನು ಅದ್ವೈತಿಯು ಸಮರ್ಥಿಸಲಾರದವನಾದರೆ ಅವನಿಗೆ ಶಾಸ್ತ್ರಜ್ಞಾನವಿದೆಯೆಂದು ಹೇಳಲು ಬರುವಂತಿಲ್ಲ. ಹೀಗೆ ಪ್ರಮಾತ್ವದ ಕಲ್ಪನೆಯನ್ನು ಖಂಡಿಸುವುದರಿಂದ ಅದ್ವೈತಿಯು ಆತ್ಮಘಾತ ಮಾಡಿಕೊಳ್ಳುವನಷ್ಟೆ' ಎಂದು ವಾದಿಸುತ್ತಾರೆ. ಇದಕ್ಕೆ ಪ್ರತ್ಯುತ್ತರವಾಗಿ ಮಧುಸೂದನನು, 'ವಿತಂಡವನ್ನು ಬಳಸಲು ನಿಂತ ಅದ್ವೈತಿಯನ್ನು–ಪ್ರಮೇಯ ಕಲ್ಪನೆಯ ಬಳಕೆಯನ್ನು ನೀನು ಹೇಗೆ ಸಮರ್ಥಿಸುವೆ?–ಎಂದು ಕೇಳಲು ಬರುವುದಿಲ್ಲ. ವಿತಂಡವೆಂಬ ಕಥೆ(ವಾದಪದ್ಧತಿ, ತರ್ಕವಿಧಾನ), ಎಲ್ಲರೂ ಒಪ್ಪಿಕೊಂಡಿರುವಂತೆ, ಹೊರಡುವುದೇ ಹಾಗೆ: ಒಬ್ಬನು ತನ್ನ ನಿಲುಮೆಯನ್ನು ಸ್ಥಾಪಿಸಿದರೆ, ಮತ್ತೊಬ್ಬನು ಅದನ್ನು ಖಂಡಿಸುವನು.

ಆದುದರಿಂದ ಅದ್ವೈತಿ ಹೇಗೆ ಪ್ರಮೇಯವನ್ನು ಸಮರ್ಥಿಸಬಲ್ಲನೆಂಬುದೊಂದು–ಅಸಂಬದ್ಧ ಪ್ರಶ್ನೆ' ಎಂದು ವಾದಿಸಿದ್ದಾನೆ. ಈ ಚರ್ಚೆಯನ್ನು ಮಧುಸೂದನನು ಖಂಡನಖಂಡಖಾದ್ಯದಿಂದ ಒಂದು ಶ್ಲೋಕವನ್ನೆತ್ತಿ ಹೇಳಿ ಮುಗಿಸಿದ್ದಾನೆ. ಆ ಶ್ಲೋಕದ ಸಾರ ಇಂತಿದೆ:

'ಸತ್ಯಜ್ಞಾನದ ಮತ್ತು ವ್ಯಾವಹಾರಿಕ ಜೀವನದ ಸ್ವರೂಪವನ್ನು ಸ್ಪಷ್ಟಪಡಿಸಲು ಯಾರು ಹೊರಟರೂ ಅಂತ್ಯದಲ್ಲಿ ಅವರು ತಮ್ಮ ಗುರಿಯನ್ನು ಸಾಧಿಸುವುದರಲ್ಲಿ ಸೋತುಹೋಗುವರು. ಆದುದರಿಂದ ಎಲ್ಲ ವಾದಿಗಳೂ ಕ್ರಮೇಣ ಅನಿರ್ವಚನೀಯತೆಯ ತತ್ತ್ವವನ್ನು(ಹೇಳಲು ಬಾರದಿರುವ ಸ್ಥಿತಿಯನ್ನು) ಒಪ್ಪಿಕೊಳ್ಳಲೇಬೇಕಾಗುವುದು.' ಇದು ವಾದ, ಜಲ್ಪ ಮತ್ತು ವಿತಂಡಗಳೆಂಬ ಸಾಮಾನ್ಯವಾಗಿ ಮನ್ನಣೆ ಪಡೆದ ಮೂರು ವಿಧದ ಚರ್ಚೆಯ ವಿಶ್ಲೇಷಣೆಯನ್ನು ಮುಗಿತಾಯಗೊಳಿಸುತ್ತದೆ.

## ಅಡಿ ಟಿಪ್ಪಣಿಗಳು

* ಪದಾರ್ಥ=ಉನ್ನತ ವರ್ಗನಾಮ; ಅನೇಕ ಉಪವರ್ಗಗಳನ್ನದು ಒಳಗೊಂಡಿರುತ್ತದೆ: ಉದಾ–ಭಾವಪದಾರ್ಥ, ಅಭಾವಪದಾರ್ಥ; ದ್ರವ್ಯ, ಗುಣ, ಕರ್ಮ, ಸಾಮಾನ್ಯ, ಸಮವಾಯ, ವಿಶೇಷಗಳು ಭಾವಪದಾರ್ಥಗಳು ಮತ್ತು ಅಭಾವವು ಅಭಾವ ಪದಾರ್ಥ. ಭಾವಾಭಾವಗಳೆರಡೂ ಪ್ರಮೇಯಗಳು.

೧. ನ್ಯಾಯಸೂತ್ರ,I., ೧.೧

೨. ನ್ಯಾಯಭಾಷ್ಯ (ಮೆಟ್ರೊಪೊಲಿಟನ್ ಸಂಪಾದನೆ), ಪುಟ ೩೪, ೩೫

೩. ನ್ಯಾಯಭಾಷ್ಯ,I.೨.೧

೪. ಚರಕಸಂಹಿತೆ, ವಿಮಾನಸ್ಥಾನ, VIII.

೫. ನ್ಯಾಯಸೂತ್ರ, I. ೨.೧. ವಾದಕಥೆಯ ಲಕ್ಷಣಗಳನ್ನು ಲೆಕ್ಕಿಸಿ ಹೇಳುತ್ತದೆ.

೬. ಅದೇ ಗ್ರಂಥ, I. ೨.೨.೩. ಜಲ್ಪಕಥೆ–ವಿತಂಡಕಥೆಗಳ ಲಕ್ಷಣಗಳನ್ನು ಲೆಕ್ಕಿಸುತ್ತದೆ.

೭. ನ್ಯಾಯವಾರ್ತಿಕ ತಾತ್ಪರ್ಯ ಟೀಕೆ. I. ೨.೧.

೮. ಭಗವದ್ಗೀತೆ, X, ೩೨.

೯. ವಾದಿವಿನೋದ, ಪುಟ ೧೧೨

೧೦. ಅದ್ವೈತ ಸಿದ್ಧಿ (ನಿರ್ಣಯಸಾಗರ ಸಂಪಾದನ), ಪುಟ ೧೬, ೧೭.

೧೧. ಹೋಲಿಸಿರಿ: ನ್ಯಾಯಾಮೃತ(ಮರ್ಧವವಿಲಾಸ ಮುದ್ರಣಾಲಯ ಸಂಪಾದನೆ), I., ೧. ಪುಟ ೮

# ಅಧಿಕರಣ=ಆಶ್ರಯ, ಆಸ್ಪದ, ಇರುವ ಸ್ಥಳ

೧೨. ನ್ಯಾಯಸೂತ್ರ, I. ೧.೩೨.

೧೩. ಸಾಂಖ್ಯಕಾರಿಕೆ, ೬.

++ ಅಧಿಕರಣ=ಗ್ರಂಥವೊಂದರ ಅಣುವಿಭಾಗ.

೧೪. ಮಥುರಾನಾಥನು ತನ್ನ ಪ್ರಖ್ಯಾತ ವ್ಯಾಖ್ಯಾನವನ್ನು ಬರೆದ 'ತತ್ತ್ವಚಿಂತಾಮಣಿ' ಒಂದು ಭಾಗದ ಹೆಸರು ಅವಯವ.

೧೫. ವಾದವಿನೋದ ಪುಟ ೧೪

$ ಅಭಾಸಕತೆ=ಬೇಧ್ಯತೆ=ಖಂಡನೀಯತೆ=ದೋಷ.

^ ಶಬ್ದವಿಲ್ಲಿ ಅರ್ಥಕ್ರಿಯಾಕಾರಿ; ಅರ್ಥವು ಅನುಭವಾನುಸಾರಿ: ಅನುಭವವು ಪ್ರತ್ಯಕ್ಷ, ಅನುಮಿತಿ, ಉಪಮಿತಿ, ಶಾಬ್ದವೆಂದು ನಾಲ್ಕು ವಿಧ.

೧೬. ಪೂರ್ವೋಕ್ತ ಗ್ರಂಥ.

+ ಅನುಪಸಂಹಾರಿ=ನಿಗಮನಕ್ಕೆ ಬರಲಾರದಂಥ, ತೀರ್ಮಾನಕ್ಕೆ ಒಯ್ದು ಮುಟ್ಟಿಸಲಾರದಂಥ.

೧೭. ಅದ್ವೈತ ಸಿದ್ಧಿ, ಪುಟ ೩೧ (ಸಿದ್ಧಿ ಎಂಬ ಬಲಭದ್ರ ವ್ಯಾಖ್ಯೆಯೊಡನೆ)

೧೮. ನ್ಯಾಯಸೂತ್ರ, I., ೨.೧೦.

೧೯. ಅದೇ ಗ್ರಂಥ, I., ೨.೧೮.

೨೦. ನ್ಯಾಯಭಾಷ್ಯ, I., ೨.೧೯.

೨೧. ನ್ಯಾಯಸೂತ್ರ, I., ೨.೧.

೨೨. ಅದೇ ಗ್ರಂಥ, I., ೧.೧.

೨೩. ಅದೇ ಗ್ರಂಥ, I., ೨.೨.

೨೪. ನ್ಯಾಯಕುಸುಮಾಂಜಲಿ, III., ೭; III. ೭೩.

& ಅನ್ನಂಭಟ್ಟನ ತರ್ಕಸಂಗ್ರಹದ ಪ್ರಕಾರ ಗಾಳಿಯು ರೂಪ (ಬಣ್ಣ) ರಹಿತ ಮತ್ತು ಸ್ಪರ್ಶಯುಕ್ತವಾದುದು. ಆದುದರಿಂದ ಪ್ರಸ್ತುತ ನೈಯಾಯಿಕನು ಆ ಪರಂಪರೆಯಿಂದ ಭಿನ್ನನು. ರೂಪ, ರಸ, ಗಂಧ, ಸ್ಪರ್ಶ, ಶಬ್ದಗಳು ಪಂಚೇಂದ್ರಿಯ ಗ್ರಾಹ್ಯವಾದ ಗಣ್ಯ ಗುಣಗಳು. ಅವುಗಳಲ್ಲಿ ಒಂದೊಂದು ಇಂದ್ರಿಯ ಗ್ರಹಿಸುತ್ತದೆ.

೨೫. ನ್ಯಾಯಸೂತ್ರ, I., ೨.೩.

೨೬. ಅದ್ವೈತರತ್ನರಕ್ಷಣ, ಪುಟ ೩೨.



['ಯುಗಯಾತ್ರೀ ಭಾರತೀಯ ಸಂಸ್ಕೃತಿ' – ಪುಟ ೩೯೨]

# ೧೧. ವೇದಕಾಲೀನ ಲೌಕಿಕತೆ

'Secularism'ಎಂಬ ಆಂಗ್ಲಪದವನ್ನು ನಾವಿಂದು 'ಲೌಕಿಕತೆ' ಎಂದು ಬಳಸಿಕೊಳ್ಳುತ್ತಿದ್ದೇವೆ. Secular affairs–ಲೌಕಿಕ ವ್ಯವಹಾರಗಳು ಎಂದರೆ ಪವಿತ್ರ, ಮಠೀಯ, ಆರ್ತ್ವಿಜ ವ್ಯವಹಾರಗಳಿಂದ ಭಿನ್ನ; ಪ್ರಸ್ತುತಕಾಲಿಕ, ಪ್ರಾಪಂಚಿಕ, ಧಾರ್ಮಿಕ ಸತ್ಯಗಳಿಗೆ ಹೆಚ್ಚು ಮಹತ್ವ ಕೊಡದ, ತಾತ್ಕಾಲಿಕ ಕಾಲಧರ್ಮ ಸಹಜ, ಲೋಕರೂಢಿಬದ್ಧ ಆಚಾರಗಳು ಎಂದು ಹೇಳಬಹುದು. ಭಾರತದ ರಾಜಕೀಯ ಸತ್ತೆ ಈ ಲೌಕಿಕತೆಯನ್ನು ಆಧರಿಸಿರುವುದರಿಂದ ಇದಕ್ಕಿಂದು ಮಹತ್ವ ಬಂದಿದೆ. ಆದುದರಿಂದ ಇದರ ವ್ಯವಹಾರ ಸಾರ್ಥಕತೆಯ ವ್ಯಾಪ್ತಿಯನ್ನು ತಿಳಿದುಕೊಳ್ಳುವುದವಶ್ಯಕವಾಗಿದೆ.

ಯಾವುದಾದರೊಂದು ಮತವನ್ನು, ಧರ್ಮವನ್ನು ನಂಬಿದ ರಾಜ್ಯಗಳಲ್ಲಿ ರಾಷ್ಟ್ರಗಳ ವೈಯಕ್ತಿಕ ಮತ್ತು ಸಾಮೂಹಿಕ, ವ್ಯಕ್ತಿಗಳ ಕೌಟುಂಬಿಕ ಮತ್ತು ಸಾಮಾಜಿಕ, ವ್ಯವಹಾರಗಳೆಲ್ಲವನ್ನೂ ಮತ ಅಥವಾ ಧರ್ಮ ವ್ಯಾಪಿಸಿತ್ತು. ಪ್ರತಿಯೊಂದು ವ್ಯವಹಾರದ ಆತ್ಯಂತಿಕ ಸತ್ಯ, ನ್ಯಾಯ, ಬೆಲೆ ಧರ್ಮಸಿದ್ಧಾಂತಗಳನುಸಾರ ನಿರ್ಣಯಿಸಲ್ಪಡುತ್ತಿತ್ತು. ಆದುದರಿಂದ ಧರ್ಮ ಎಂದರೆ ಜೀವನ ನೀತಿ ಎಂಬ ವಿಶಾಲಾರ್ಥ ಹುಟ್ಟಿತು. ಲೌಕಿಕತೆಯನ್ನು ತತ್ವಪ್ರಣಾಲಿ ಎಂಬ ಆಧುನಿಕ ದೃಷ್ಟಿಗೆ ಸ್ವತಂತ್ರ ಸ್ಥಾನವಿಲ್ಲದ ಅಂದು ಅದೂ ಧರ್ಮದೊಳಗೇ ಅಡಕವಾಗಿತ್ತು. ಧರ್ಮದ ಹಿರಿಯಣ್ಣತನದಲ್ಲಿ ಲೌಕಿಕತೆ ಮನುಷ್ಯ ಭೂಮಿಗೆ ಅವತರಿಸಿದಂದಿನಿಂದಲೂ ನಡೆದುಕೊಂಡು ಬರುತ್ತಿತ್ತು. ದೇಹವಿರುವಲ್ಲೆಲ್ಲ ಲೌಕಿಕತೆ ಇರುವುದು ತಪ್ಪಿದ್ದಲ್ಲ. ಧಾರ್ಮಿಕತೆ ಅಥವಾ ವೈದಿಕತೆ ಲೌಕಿಕತೆಯನ್ನು ಗೌಣವೆಂದು ಗಣಿಸುತ್ತ ಬಂದಿದೆಯಲ್ಲದೆ ಸಂಪೂರ್ಣವಾಗಿ ಬಹಿಷ್ಕರಿಸಿ ಬದುಕಿಲ್ಲ. ಬಹುಸಂಖ್ಯ ಜನಸ್ತೋಮದ ಜೀವನ ಎಂದಿನಿಂದಲೂ ಇದಕ್ಕೆ ನಿದರ್ಶನವಾಗಿದೆ. ಭಾರತದ ಹೊಸ ಯುಗದಲ್ಲಿಂದು ಕೇಂದ್ರ ವ್ಯವಹಾರ ಲೌಕಿಕತೆಗೆ ಹಿರಿಯತನವಿತ್ತು ವೈದಿಕತೆಗೆ ಗೌಣಸ್ಥಾನ ಕೊಟ್ಟಿದೆಯಲ್ಲದೆ ಬಹಿಷ್ಕಾರ ಹಾಕಿಲ್ಲ. ಇದರಿಂದ ವೈದಿಕತೆ ಲೌಕಿಕತೆಗಳಲ್ಲಿ ಭೇದವನ್ನು ಗ್ರಹಿಸಿದಂತಾಗಿದೆಯದಲ್ಲದೆ ವಿರೋಧವನ್ನು ಕಲ್ಪಿಸಿದಂತಾಗಿಲ್ಲ; ಇದರಿಂದ ಸಂಕುಚಿತ ಧಾರ್ಮಿಕತೆಗಳ ದೆಸೆಯಿಂದ ಕಲಹ ಉಂಟಾಗುವುದು ಅಸಾಧ್ಯವಾಗುವಂತಾಯಿತು. ಭಿನ್ನ ಧರ್ಮೀಯರಿರುವ ಭಾರತದ ರಾಷ್ಟ್ರಧರ್ಮ ಹೀಗೆ ಧರ್ಮಶತ್ರುವಾಗದೆ ಧರ್ಮಸಾಮ್ಯಬುದ್ಧಿಯಿಂದ ವ್ಯವಹರಿಸುವುದು ಸಮಯೋಚಿತವಾಗಿದೆ. ಹಿಂದಿನ ಕಾಲದಲ್ಲಿ ಅರಸರ ವೈಯಕ್ತಿಕ ಧರ್ಮ ಯಾವುದಿದ್ದರೂ ರಾಷ್ಟ್ರದಲ್ಲಿಯ ಭಿನ್ನ ಧರ್ಮಗಳಲ್ಲಿ ಪಂಕ್ತಿಭೇದ ಮಾಡದೆ ಸಮಾನ ಗೌರವದಿಂದ ನಡೆಸಿಕೊಂಡದ್ದಕ್ಕೆ ಇತಿಹಾಸ ಉದಾಹರಣೆ ಕೊಡುತ್ತದೆ.ಆದರೆ ಭಾರತದ ರಾಜಕೀಯ ಪರ್ವದ ಅಂಬೇಡಕರಾಧ್ಯಾಯದಲ್ಲಿ ಸಂಕುಚಿತ ಧರ್ಮ ಪರಧರ್ಮ ಸಹಿಷ್ಣುವಾಗಿ

ವರ್ತಿಸಿದಂತೆ ಸಂಕುಚಿತ ಲೌಕಿಕತೆ ಧರ್ಮಶತ್ರುವಾಗಿ ವರ್ತಿಸಲು ಪ್ರಯತ್ನಿಸಿ ಫಲಕಾರಿಯಾಗದಾಯಿತು.

ರಾಷ್ಟ್ರಧರ್ಮ ಶುದ್ಧ ಲೌಕಿಕವಾಗಿರಬೇಕಾದದ್ದು ಅಬಾಧಿತ ನ್ಯಾಯ. ಆದರೆ ಪ್ರಜೆಗಳ ಸಾಮಾಜಿಕ ವೈಯಕ್ತಿಕ ವ್ಯವಹಾರಗಳಲ್ಲಿ ತಲೆ ಹಾಕಿದರೆ ತನ್ನ ರಾಜಕೀಯತೆಯ ಕುಬ್ಜತ್ವದ ಪರಿಣಾಮವಾಗಿ ಅದು ಅನಾಗರಿಕ, ಅಪ್ರಗತಿಪರ, ಬಲಾತ್ಕಾರ ಪ್ರಯೋಜಕ ಆಡಳತೆಗಾರಂಭಿಸುತ್ತದೆ. ಧರ್ಮತಿರಸ್ಕಾರ ಮಾಡಲೊಪ್ಪದ ಬಹುಸಂಖ್ಯ ಭಾರತೀಯ ಹೃದಯಗಳಿಂದು ಈ ಅಧಿಕಪ್ರಸಂಗದ ಫಲವಾಗಿ ಮೊದಲಿಗಿಂತ ಹೆಚ್ಚು ನೈತಿಕ ದೌರ್ಬಲ್ಯಕ್ಕೆ ಇಳಿವಂತಾಯಿತು. ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ನಾನಾರೂಪದ, ನಾನಾ ಮಟ್ಟದ ಕಪಟ ವ್ಯವಹಾರ ಎಲ್ಲ ಕ್ಷೇತ್ರಗಳಲೂ ಹೆಚ್ಚುವುದು ಸಾಮಾನ್ಯವಾಗಿ ಹೋಯಿತು. ಈ ನೀತಿ ಹಿಂದೆ ಕೆಲರಾಜರ ಸ್ವಧರ್ಮವನ್ನು ಸರ್ವಪ್ರಜೆಗಳ ಮೇಲೆ ಹೇರಹೋದ ಬಲಾತ್ಕಾರಕ್ಕೆ ಸರಿದೊರೆಯಾಯಿತು.

ಬುದ್ಧನ ಅನಂತರ ಬೌದ್ಧಧರ್ಮದ ಅತಿವೃತ್ತಿಯ ಫಲವಾಗಿ ದೇಶದಲ್ಲಿ ನಿರಾಶಾವಾದ ನಿರ್ವೀರ್ಯತೆಗಳುಂಟಾದವೆಂದು ಕೆಲವರ ಆರೋಪವಿದೆ; ಅದರಿಂದ ಪರದೇಶೀಯರ ಆಕ್ರಮಣವನ್ನು ಭಾರತ ತಡೆಗಟ್ಟಲಾರದಾಯಿತೆಂದು ಅವರ ವಾದ. ಅದೇ ಮೇರೆಗೆ ಇಂದು ಪಾಶ್ಚಾತ್ಯ ಲೌಕಿಕತೆ ಚಾರ್ವಾಕತೆಯ ಅತ್ಯಾಶಾವಾದಕ್ಕಿಳಿದು ಸ್ವಾರ್ಥಸಾಧಕ ಪರಹಿಂಸಾಬುದ್ಧಿಯಿಂದ ಜಗತ್ತಿನಲ್ಲಿ ಚಿರಶಾಂತಿ ನಿಲ್ಲದೆ ಯುದ್ಧಪ್ರವೃತ್ತಿ ಬೆಳೆಯುವಂತೆ ಮಾಡಿದೆ ಎಂಬ ಕೆಲವರ ಮಾತಿನಲ್ಲೂ ಸತ್ಯಾಂಶವಿದೆ ಎಂಬುದು ಪ್ರತ್ಯಕ್ಷಸಿದ್ಧವಾಗಿದೆ. ಈ ಎರಡೂ ಅನುಭವಗಳನ್ನೆದುರಿಟ್ಟುಕೊಂಡು ವೇದಗಳನ್ನು ಅವಲೋಕಿಸ ಹೋದರೆ ಪ್ರಾಪಂಚಿಕ ಪ್ರಯೋಜನಗಳ ಮತ್ತು ಅಲೌಕಿಕ, ಅತೀಂದ್ರಿಯ ಪುರುಷಾರ್ಥಗಳ ಸಾಧನೆ ಹೇಗೆ ಸಮನ್ವಿತವಾಗಿ ಸಾಗುತ್ತಿತ್ತೆಂಬುದು ಸ್ಪಷ್ಟವಾಗುತ್ತದೆ.

ವೇದಗಳಲ್ಲಿ ಸರ್ವಸಾಧಾರಣವಾಗಿ ಕಂಡುಬರುವುದು ಬಹುದೇವತಾರಾಧನೆ; ದೇವತೆಗಳಿಂದ ಪ್ರಾಪಂಚಿಕ ಜೀವನದ ಸೌಕರ್ಯಗಳು ಸಿಗಲೆಂದು ಬೇಡುವ ಪ್ರಾರ್ಥನೆ. ಪ್ರೊ.ಎ.ಎ.ಮೆಕ್ಡೊನೆಲ್ಲರು ವೈದಿಕ ದೇವತೆಗಳ ಬಗ್ಗೆ ಬರೆಯುವಲ್ಲಿ–'They are benevolent beings who bestow prosperity on mankind; the only one in whom injurious traits appear being Rudra. They are described as 'true' and 'not deceitful', being friends and protectors of the honest and righteous, but punishing sin and guilt ಆ ದೇವತೆಗಳು ಸತ್ಕಾರ್ಯಪರರು, ಮಾನವಕುಲಕ್ಕೆ ಉತ್ಕರ್ಷವನ್ನು ದಯಪಾಲಿಸುವವರು; ಅವರಲ್ಲಿ ರುದ್ರನೊಬ್ಬನೇ ಅಪಾಯಕರ ಗುಣಗಳುಳ್ಳವನು. ಅವರು ಪ್ರಾಮಾಣಿಕರೆಂದೂ ನಿರ್ವಂಚಕರೆಂದೂ ಪ್ರಾಮಾಣಿಕ ನ್ಯಾಯಶೀಲರ ಸ್ನೇಹಿತರಾಗಿ ಅವರನ್ನು ಕಾಯುವವರೂ ಪಾಪಿಗಳನ್ನೂ ಅಪರಾಧಿಗಳನ್ನೂ ಶಿಕ್ಷಿಸುವವರೂ ಆಗಿರುವರೆಂದೂ ಬಣ್ಣಿಸಲ್ಪಟ್ಟಿದ್ದಾರೆ' ಎಂಬುದಾಗಿ ಹೇಳಿದ್ದಾರೆ. (೧) 'ಸ ನಃ ಪಿತೇವ ಸೂನವೇಗ್ನೇ ಸೂಪಾಯನೋ ಭವ–ಎಲೈ

ಅಗ್ನಿಯೇ, ಮಗನಿಗೆ ತಂದೆ ಸುಲಭ ಗಮ್ಯನಾಗುವಂತೆ ನಮಗೆ ನೀನು ಸುಲಭಸಾಧ್ಯನಾಗು', (೨) 'ಹಿರಣ್ಯಹಸ್ತೋ ಅಸುರಃ ಸುನೀಥಃ ಸುಮೃಳೀಕಃ ಸ್ವವಾಂ ಯಾತ್ವರ್ವಾಙ್–ಬಂಗಾರದ ಕೈಯ ದಿವ್ಯಾತ್ಮನಾದ(ಸೂರ್ಯನು) ದೇವ ಸದ್ಬುದ್ಧಿದಾಯಕ, ಅತ್ಯಂತ ದಯಾಮಯ, ಒಳ್ಳೆಯ ನೆರವಿಗ; ಅಂಥವನು ಇತ್ತ ಬರಲಿ'. (೩) 'ಆತೇ ಪಿತರ್ಮರುತಾಂ ಸುಮ್ನಮೇತು.....ಪ್ರಜಾಯೇ ಮಹಿ ರುದ್ರಪ್ರಜಾಭಿಃ–ಮರುತ್ತುಗಳ ತಂದೆಯೇ ನಿನ್ನ ಸದಾಶಯ ನಮ್ಮತ್ತ ಹರಿಯಲಿ.....ಮಕ್ಕಳು ಮರಿಗಳನ್ನು ಪಡೆದು ನಾವು ಆಢ್ಯರಾಗುವಂತಾಗಲಿ'. (೪) 'ಮಿತ್ರೋ ಜನಾನ್ಯಾತಯತಿ ಬ್ರುವಾಣೋ.....ಮಿತ್ರಃ ಕೃಷ್ಟೀರ ನಿಮಿಷಾಭಿಚಷ್ಟೇ ಮಿತ್ರಾಯಹವ್ಯಂ ಘೃತವಜ್ಜು ಹೋತ–ಮಿತ್ರದೇವತೆ ಮಾತಾಡುತ್ತ ಜನಗಳಲ್ಲಿ ಚಟುವಟಿಕೆ ಹುಟ್ಟಿಸುತ್ತಾನೆ......ಅನಿಮಿಷನಯನನಾಗಿ ಜನರನ್ನು ನೋಡಿಕೊಳ್ಳುತ್ತಾನೆ; ಅಂಥ ಮಿತ್ರನಿಗೆ ತುಪ್ಪ ಹಾಕಿದ ಹವಿರ್ಭಾಗವನ್ನು ಕೊಡು' ಎಂಬಂತೆ ವೇದಸೂಕ್ತಗಳಲ್ಲಿ ದೇವ–ಮಾನವ ಸಂಬಂಧ ಬಹಳ ಸಲಿಗೆಯುಳ್ಳದ್ದೂ ಸುಪರಿಚಿತವೂ ಸುಸ್ನಿಗ್ಧವೂ ಆಗಿತ್ತೆಂಬುದು ಕಂಡುಬರುತ್ತದೆ.

ಲೌಕಿಕತೆ ದೇಹಾಧಿಷ್ಠಿತ, ವೈದಿಕತೆ ಮಿಶ್ರ, ಕೇವಲ ತಾತ್ವಿಕ ಧಾರ್ಮಿಕತೆ ಶುದ್ಧ ಆತ್ಮಾಧಿಷ್ಠಿತ. ಮಾನವ ತತ್ವದ ವಿಕಾಸದಲ್ಲಿ ಇವು ಉತ್ತರೋತ್ತರೋತ್ಕರ್ಷದ ಮೂರು ಮಟ್ಟಗಳು. ಬಹುಸಂಖ್ಯರ ಹಿತಾನುಸಾರ ಈ ಮೂರು ಮೆಟ್ಟಿಲುಗಳನ್ನು ಕ್ರಮವಾಗಿ ಏರತಕ್ಕದ್ದು ಸಹಜ. ತಮ್ಮ ತಮ್ಮ ಪರಿಪೂರ್ಣತೆಯ ಅವಸ್ಥೆಯಲ್ಲಿ ಪಶುನೀತಿಯ ಅತಿಲೌಕಿಕತೆಯೂ ಪಶುಪತಿ ನೀತಿಯ ಅತ್ಯಾಧ್ಯಾತ್ಮಿಕತೆಯೂ ಶುದ್ಧ ವೈಯಕ್ತಿಕ ಸಿದ್ಧಿಗಳೆನಿಸುವುದರಿಂದ ಸಾಮಾನ್ಯ ಸಾಮೂಹಿಕ ವ್ಯಕ್ತಿಜೀವನ ನೀತಿಯ ಸಮತೋಲ ಉಳಿಯಬೇಕಾದರೆ 'ಆತ್ಮಾಯತ್ತ ದೇಹಾಧಿಷ್ಠಿತ ಲೌಕಿಕತೆ' ಅಥವಾ ಆಧ್ಯಾತ್ಮಿಕತೆಯ ಮಾನವೋತ್ತರ ವಿಕಾಸದ ಗುರಿಯನ್ನು ಪರಮಾರ್ಥವನ್ನಾಗಿ ಇಟ್ಟುಕೊಂಡು, ತತ್ಪೋಷಕವಾದ ಲೌಕಿಕ ವ್ಯಕ್ತಿಜೀವನ ಸಮಾಜ ಹಿತಕರವಾಗಿ ಕ್ರಮಿಕಗತಿಯಿಂದ ಸಾಗುವಂತೆ ನೋಡಿಕೊಂಬ ವೈದಿಕತೆ ಸಾರ್ವತ್ರಿಕವಾಗಿರಬೇಕಾದ ರಾಷ್ಟ್ರಧರ್ಮವಾಗಬೇಕು. ವೈದಿಕತೆ ಅಥವಾ ವೇದಧರ್ಮವು ಪ್ರವಾದಿಕೃತವಲ್ಲವಾದುದರಿಂದ ಅದು ಇಡಿ ಜಗತ್ತಿನ, ಮಾನವರ ಒಂದು ವ್ಯವಹಾರ ಸಾಧಕ, ಸಂಸ್ಕೃತಿ ಸಂವರ್ಧಕ ವಿಶ್ವದೃಷ್ಟಿ ಎಂಬ ಅರ್ಥ ಸುಲಭೋಹ್ಯವಾಗಿದೆ.

ಭೌತಿಕ ಸುಖಸಾಧನಗಳು ಪ್ರಯೋಜನ ನಿಷ್ಠ. ಅತೀಂದ್ರಿಯ ಪದಗಳು ಆತ್ಯಂತಿಕ ಮೂಲ್ಯ ಅಥವಾ ಪರಮಪುರುಷಾರ್ಥನಿಷ್ಠ. ಮನೋಮಯಾತ್ಮರಾದ ಮನುಷ್ಯರ ಶಾಂತಿ, ಪುಷ್ಟಿ, ತುಷ್ಟಿಗಳು ನೆಲದಿಂದ ಮುಗಿಲತ್ತ ಸಾಗುವ ಪ್ರಾಪಂಚಿಕ ವ್ಯವಹಾರದಿಂದ ಮಾತ್ರ ಸಾಧ್ಯ. ನಮ್ಮ ಕಣ್ಣು ಕೈಕಾಲುಗಳೆಲ್ಲ ಮುಮ್ಮೊಗವಾಗಿ ಮುನ್ನೋಟದಿಂದ ನಡೆವಂತೆ, ನಮ್ಮ ಇಷ್ಟಾನಿಷ್ಟಗಳ ಪರಿವೆಯಿಲ್ಲದೆ,ಸ್ಪಷ್ಟವಾಗಿರುವುದು ಮಾನವ ಪ್ರತಿಕ್ಷಣಕ್ಕೂ ಮುಂದೆ ಮುಂದೆ, ಮೇಲೆ ಮೇಲೆ, ಎತ್ತರ ಎತ್ತರಕ್ಕೆ ತನ್ನ ಮನೋಮಯ ಸ್ವರೂಪವನ್ನು–ಅನಿವಾರ್ಯತೆಯ ಬಲಾತ್ಕಾರಕ್ಕೊಳಗಾಗಿಯಾದರೂ–ಏರಿಸುತ್ತ ಹೋಗಬೇಕಾಗಿದೆ ಎಂಬ

ಸೌರಸತ್ಯ ಮತ್ತು ಮಾನವೋತ್ಪತ್ತಿಯ ಧಾರಾವಾಹಿತ್ವದ ಸ್ಥಿತಿಸ್ಥಾಪಕ ಸತ್ಯ–ಇವು ಮಿಶ್ರಜಾತಿಯ ವೈದಿಕತೆಯೊಂದೇ ಸಾರ್ವಮಾನವ ಧರ್ಮವಾಗಬಲ್ಲುದೆಂಬುದನ್ನು ಧ್ವನಿಸುತ್ತವೆ; ಕೇವಲ ವೈಯಕ್ತಿಕತೆಯ ತರ್ಕಾಂತಸ್ಥಿತಿಯುಳ್ಳ ಅತಿ ಭೌತಿಕತೆ ವ್ಯಕ್ತಿಯ ಮತ್ತು ಆ ಮೂಲಕ ಸಮಾಜದ ಅಧೋಗತಿಗೆ ಕಾರಣವಾದರೆ, ದೇಹಪ್ರಧಾನ ದೃಷ್ಟಿಯಿಂದ ಜನಿಸಿದ ಮಾನವ ಕುಲದಲ್ಲಿ ಕೆಲವರು ನಡುವಿನ ಮೆಟ್ಟಿಲನ್ನು ಬಿಟ್ಟು ಒಮ್ಮೆಲೇ ಅಲೌಕಿಕ(ಅರ್ಥಾತ್ ಸಮಾಜಾತೀತ) ಧ್ಯೇಯಸಾಧನೆಗೆ ಶಕ್ತರಾದಾರೆಂಬುದನ್ನು ಒಪ್ಪಿದರೂ ಅವರಿಂದ ಸಮಾಜ ಹಿತಸಾಧನೆ, ಸಾರ್ವಮಾನವ ಸಂಬಂಧ ಪೋಷಣೆ ಸಾರ್ವಲೌಕಿಕ ವಿವರಗಳಿಂದ ಸಾಗುವುದು ಅಸಾಧ್ಯ. ಹೀಗಿರುವುದರಿಂದ ಯಜ್ಞಾದಿ ಧರ್ಮಕಾರ್ಯಗಳನ್ನು ವ್ಯಕ್ತ್ಯುತ್ತರ ದೃಷ್ಟಿಯಿಂದ ನಡೆಸಿ, ಆ ಮೂಲಕ ಅರ್ಥ ಸಮೀಕರಣ, ಪರಹಿತ ಸಾಧನೆಯ ಮೂಲಕ ಸ್ವಹಿತ ಸಾಧಿಸಿಕೊಳ್ಳುವ ವ್ಯಕ್ತಿಯ ಸಾಮಾಜಿಕ ಜೀವನನೀತಿಯ ಪ್ರಸಾರ ಮತ್ತು ಮಳೆ, ಬೆಳೆ, ನೀರು, ನೆಲ, ಗಾಳಿ, ಬೆಳಕು ಮುಂತಾದ ಲೌಕಿಕ ಪದಾರ್ಥಗಳಿಂದ ಮೈದಳೆದ ದೇವತೆಗಳ ತೋಷಣದ ಮೂಲಕ ಜನತೆಯಲ್ಲಿ ಮಾನವೋತ್ತರ ಅಸ್ತಿತ್ವಗಳ ಬಗ್ಗೆ ಕಲಹರಹಿತ, ಏಕೀಕೃತ ಶ್ರದ್ಧೆ ಉಳಿಯುವ ವ್ಯವಸ್ಥೆ ಈ ಎಲ್ಲವನ್ನೂ ವೇದಕಾಲದ ಆದಿಭಾಗದ ಭಾರತ ಸಾಧಿಸಿದ್ದು ನಮಗಿಂದು ಉತ್ತರಣ ಮಾರ್ಗವನ್ನು ಸೂಚಿಸಬಲ್ಲುದಾಗಿದೆ. ವೇದ ನಾಗರಿಕತೆಯ ಪ್ರಾತಃಕಾಲ ಕಳೆದ ಬಳಿಕ ಕ್ರಮೇಣ ವೈದಿಕತೆಯ ಹೆಸರಿನಲ್ಲಿ ಕರ್ಮಠತೆ, ಜಾತೀಯತೆ, ಸಂಕುಚಿತ ಲೌಕಿಕತೆ, ಕುಲ–ಪ್ರದೇಶ–ದೇವ–ಪ್ರವಾದಿ ನಿಷ್ಠ ಅಂಧಭಕ್ತಿ ಮುಂತಾದವು ಏರಿಳಿತದ ಗತಿಯಲ್ಲಿ ಸಾಗಿ, ಅಂತ್ಯದಲ್ಲಿ ಭಾರತದ ಜನತಾಸೂರ್ಯನ ಜ್ಞಾನಮುಖಕ್ಕೆ ಖಗ್ರಾಸ ಗ್ರಹಣ ಹಿಡಿಯುವಂತೆ ಮಾಡಿ, ನವಭಾರತದಲ್ಲಿಂದು ಒಮ್ಮೆ ಪ್ರತೀಕಾರ ಬುದ್ಧಿಯ ಸಂಕುಚಿತ ಅತಿಲೌಕಿಕತೆ ಸಾಮೂಹಿಕವಾಗಿ ಜಾರಿಗೆ ಬರಬೇಕೆಂಬ ಚಳವಳಿ ರಾಜಕೀಯ, ಮತ್ತು ಶೈಕ್ಷಣಿಕ ಕ್ಷೇತ್ರಗಳಲ್ಲಿ ಬೇರೂರಲು ಕಾರಣವಾಯಿತು. ಆದರೆ ಸ್ವಾತಂತ್ರ್ಯ ಪಡೆದು ವಿಚಾರಪರವಾದ ನಮ್ಮ ಜನತೆ ಇದೀಗ ಕ್ರಮೇಣ ವಿಶ್ವಹಿತಕರವಾದ ವೈದಿಕ ಲೌಕಿಕತೆಯ ಹಿಂದುವರ್ತನೆ ಭಾರತ ಸಂಸ್ಕೃತಿಯ ವೈಶಿಷ್ಟ್ಯ, ಸರ್ವ ಅತಿವಾದಗಳನ್ನು ತಡೆಹಿಡಿಯುವ ದೊಡ್ಡ ಬೇಲಿ, ನಿಮಿಷಾರ್ಧದಲ್ಲಿ ಬುದ್ಧಿಭೇದ ಹೊಂದಿ, ಪಕ್ಷಪಂಗಡಗಳಾಗಿ ಒಡೆದು, ಕಲಹವೆಬ್ಬಿಸಿ ರಾಷ್ಟ್ರದ ಶಾಂತಿ, ಸಮಾಜದ ಸುವ್ಯವಸ್ಥೆಗಳಿಗೆ ಧಕ್ಕೆಯುಂಟು ಮಾಡದಂತೆ ನೋಡಿಕೊಂಬ ಶ್ರದ್ಧಾವಜ್ರಬಂಧ ಎಂಬುದನ್ನು ಅರಿತುಕೊಳ್ಳುತ್ತಿರುವುದು ಶುಭಚಿಹ್ನವೇ ಸರಿ.

ಋಗ್ವೇದ ಕಾಲದಲ್ಲಿ ಯಜ್ಞವು, 'ಪಶುಮಾರಣ'ದ 'ದಾರುಣಕರ್ಮ' ವಾಗಿರಲಿಲ್ಲವೆಂದೂ ಸಾಮೂಹಿಕ ಅಥವಾ ವೈಯಕ್ತಿಕ ಪ್ರಾರ್ಥನೆಯ ರೂಪದಲ್ಲಿ ಮೂರ್ತಿ ಪೂಜೆಯಿಲ್ಲವಾದರೂ ಹೆಚ್ಚು ಕಡಿಮೆ ಇಂದಿನ ದೇವಸ್ಥಾನದ ನೈವೇದ್ಯ, ಮಂಗಳಾರತಿ, ಸ್ತೋತ್ರ, ಪ್ರದಕ್ಷಿಣೆಗಳಿಂದ ಒಡಗೂಡಿತ್ತೆಂದೂ ಗಣ್ಯರ ಮತವಿದೆ. ಆ ಕಾಲದಲ್ಲಿಯೇ ಒಂದು ವಿಧದ ಪ್ರಾಥಮಿಕ ಧರ್ಮಘಟಿತ ಸಾಮ್ಯವಾದದಂತೆ ಜನಜೀವನ ಸಾಗಿತ್ತೆಂದು ಕೆಲವರು ತರ್ಕಿಸಿದ್ದಾರೆ. ಅಂಥ ಸುರಮ್ಯ ಸ್ಫೂರ್ತಿಯ ಅವಲೋಕನದ

ಆದರ್ಶ ಭಾರತಕ್ಕಿಂದು ಪುನರುತ್ಸಾಹ ನೀಡಬಲ್ಲುದಲ್ಲದೆ ಬರಿಯ ತಿರುಳಿಲ್ಲದ ಕರ್ಮಠತೆಯಲ್ಲ. ಕರ್ಮಠತೆಯ ಪುನರುದಯ ಸರ್ವಥಾ ತ್ಯಾಜ್ಯ. ಅದರಿಂದ ಅಂಥ ಸದಾದರ್ಶದ ಬೆಳಕನ್ನು ಕಂಡ ಗಾಂಧೀಜಿ ಸಾಮೂಹಿಕ ಪ್ರಾರ್ಥನಾಯಜ್ಞವನ್ನು ರಾಷ್ಟ್ರಕ್ಕೆ ಆಚರಿಸಿ ತೋರಿಸಿದರು. ಅದನ್ನು ಮೊದಲು ಶೈಕ್ಷಣಿಕ ಕ್ಷೇತ್ರದಲ್ಲಿ ತರತಕ್ಕದ್ದು ನಮ್ಮ ಆದ್ಯ ಕರ್ತವ್ಯ. ರವೀಂದ್ರರು ವಿಶ್ವಭಾರತಿಯಲ್ಲಿ ತಂದ ಅಂಥದೇ ಸದಾಚಾರ ಪದ್ಧತಿ ನಮ್ಮ ರಾಷ್ಟ್ರಾಚಾರವಾಗಲರ್ಹವಾಗಿದೆ. ಶೈಕ್ಷಣಿಕ, ರಾಜಕೀಯ, ಸಾಮಾಜಿಕ, ಕೌಟುಂಬಿಕ, ಸಾಂಸ್ಕೃತಿಕ ಚಟುವಟಿಕೆಗಳೆಲ್ಲವೂ ಮೊಟ್ಟಮೊದಲು ಪ್ರಾರ್ಥನೆಯಲ್ಲಿ ಆದ್ಯಂತಗಳಲ್ಲಿ ರೂಢಿಗೆ ತರುವುದು ನವೋತ್ಸಾಹ ಸಾಧಕ. 'ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಂ' ಎಂದು ದೇವತೆಗಳ ಕೇಂದ್ರೀಕರಣವನ್ನು ಋಗ್ವೇದದ ಪುರುಷಸೂಕ್ತ ಆಗಲೇ ಸಾಧಿಸಿಬಿಟ್ಟಿದೆ. 'ಉತಾಮೃತತ್ವಸ್ಯೇಶಾನೋಯದನ್ನೇನಾತಿರೋಹತಿ–ಅವನೇ ಅಮೃತತ್ವದ ಒಡೆಯ, ಅನ್ನದ ಮೂಲಕ ಅವನು ತನ್ನನ್ನು ಮೀರಿ ಬೆಳೆದು ಅದನ್ನು ಮುಟ್ಟುತ್ತಾನೆ' ಎಂದು ಆ ಮಾನವನ ಭೌಮ್ಯಾವಸ್ಥೆ ಲೌಕಿಕ ಸಾಧನಗಳ ಮೂಲಕ ಲೋಕೋತ್ತರ ಅಸ್ತಿತ್ವಕ್ಕೇರುವ ಮಾರ್ಗವನ್ನು ಘೋಷಿಸಿದೆ. ರಾಷ್ಟ್ರದ ಪ್ರಜೆಗಳೆಲ್ಲರಿಗೂ ವೈಯಕ್ತಿಕವಾಗಿ ಅಂಥ ಲೋಕೋತ್ತರ ಸಿದ್ಧಿಯನ್ನು ಅಂತ್ಯದಲ್ಲಿ ಪಡೆಯಲು ಅಗತ್ಯವಾದ ಸಾಮಾಜಿಕ ಆವರಣ ರಚಿಸಿಕೊಡುವುದು ಸಾಮಾನ್ಯವಾಗಿ ಸರ್ವರೂ ವಿಶೇಷವಾಗಿ ಜನನಾಯಕರೂ ಮಾಡಬೇಕಾದ ಸಮಾಜ ಹಿತಸಾಧನೆ, ರಾಷ್ಟ್ರೀಯ ಅಂತರ್ರಾಷ್ಟ್ರೀಯ ಜೀವನ ವ್ಯವಸ್ಥಾಪನೆ. ಇಂಥ ತಾತ್ವಿಕ ಸೂತ್ರಕ್ಕೊಳಗಾದ ನ್ಯಾಯ, ನೀತಿ, ಕಾಯದೆ, ಕಲಿಯುವಿಕೆ, ನಿಯಮ, ನಿಯಂತ್ರಣ, ನಿರ್ದೇಶ, ಆದೇಶ, ಉಪದೇಶಗಳ ಸೂತ್ರಬದ್ಧತೆಯಿಲ್ಲದೆ ಭಾರತಕ್ಕೆ ಮಾನವದೃಷ್ಟಿ–ರಾಷ್ಟ್ರದೃಷ್ಟಿ ಎಂಬುದು ಬರಲಾರದು.

ಸಂಬಾರ ಬಟ್ಟಲಿನ ಅರೆಗಳಂತಿವೆ ಜಗತ್ತಿನ ದೇಶ–ಕಾಲ–ಪರಂಪರೆಗಳಿಂದ ಪರಿಚ್ಛಿನ್ನವಾದ ಸಾಂಸ್ಕೃತಿಕ ಪ್ರದೇಶಗಳು. ಇಂದ್ರಿಯಗ್ರಾಹ್ಯವಾದ ಎಲ್ಲ ಪದಾರ್ಥಗಳಲ್ಲಿ ಭೌತಿಕಾವಸ್ಥೆಯಲ್ಲಿ ಎಂದೂ ಸಂಪೂರ್ಣ ಸಾಮರಸ್ಯ ಅಸಾಧ್ಯವಾಗಿರುವುದರಿಂದ ಸಾರ್ವದೇಶಕಾಲಿಕ ಪುರುಷಾರ್ಥದ ನಡುಗಂಬದ ಸುತ್ತ ವಿಶಿಷ್ಟ ಪ್ರಾದೇಶಿಕ ಸಂಸ್ಕೃತಿಗಳ ಸುಸಂಬದ್ಧ ಸಂವರ್ಧನೆ ನಡೆಯಬೇಕೆಂಬುದು ವ್ಯವಹಾರ ಲೌಕಿಕತೆ. ಭಿನ್ನ ವೇದಶಾಖೆಗಳ ಅಭ್ಯಾಸವನ್ನು ಭಿನ್ನ ಕುಟುಂಬಗಳಿಗೆ ವಹಿಸಿದಂತೆ. ರಾಷ್ಟ್ರದ ಭಿನ್ನಭಾಷಾವಚ್ಛಿನ್ನ ಸಂಸ್ಕೃತಿಗಳು ಏಕರಾಷ್ಟ್ರ ಪುರುಷನ ಅಂಗಗಳಾಗಿ ವೃದ್ಧಿ ಹೊಂದುವುದು ನೈಸರ್ಗಿಕವೆಂದೇ ಆಂಧ್ರ–ಕರ್ನಾಟಕಾದಿ ಪ್ರದೇಶಗಳ ಜನರು ಆಂದೋಲನ ಹೂಡಿ ಯಶಸ್ಸನ್ನು ಹೊಂದುತ್ತಿದ್ದಾರೆ. ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ ಮನೋಧರ್ಮಗಳು 'ಪುರುಷಾಂಗ'ಗಳಾದಂತೆ ವಿಶ್ವಭಾರತ ಸಂಸ್ಕೃತಿಗೆ ಪ್ರಾದೇಶಿಕ ಭಾಷೆ, ಜೀವನ, ಸಂಸ್ಕೃತಿ, ಸಂಪತ್ತುಗಳು ಉಪನದಿಗಳೆನಿಸಿವೆ. ಈ ಅಂಶವನ್ನು ಗಮನಿಸದ Discovery of India–ಭಾರತ ದರ್ಶನದಲ್ಲಿ ನ್ಯಾಯವಾದ ಲೌಕಿಕತೆಯಿಲ್ಲ; ಪ್ರತ್ಯಕ್ಷ ಪ್ರಮಾಣಕ್ಕೆ ಮಾನ್ಯತೆ ಇಲ್ಲ; ವೈದಿಕ ಸತ್ವದ ಸಮನ್ವಯ ತತ್ವಕ್ಕೆ ಕಾಲಿಡಲೆಡೆಯಿಲ್ಲ. ಆದುದರಿಂದ ಅದು ಅಭಾರತೀಯ. ಧರ್ಮಶತ್ರು ಲೌಕಿಕತೆ ಅನ್ಯಾಯದ್ದಾಗುವಂತೆ, ಅವೈಜ್ಞಾನಿಕವಾಗುವಂತೆ

ಭಾಷಾಶತ್ರು ಲೌಕಿಕತೆ ಅಸಾಂಸ್ಕೃತಿಕ, ಅರಾಷ್ಟ್ರೀಯ ಎನಿಸುವುದು ಭಾರತದಂಥ ವಿವಿಧ, ವಿಪುಲ, ನೆಲ, ಜಲ, ಜನ, ಮನ, ನಡೆ, ನುಡಿಗಳಿರುವ ದೇಶದಲ್ಲಿ ಸರ್ವಥಾ ಸಿದ್ಧ.

ಇಂದ್ರ, ಅಗ್ನಿ, ಮಿತ್ರ, ವರುಣ, ಮಾತರಿಶ್ವ ಮುಂತಾದ ವಿವಿಧ ದೇವತೆಗಳ ಆರಾಧನೆಗೆ ವೇದಗಳು ಅವಕಾಶ ಕೊಟ್ಟಿದ್ದಂತೆ. ಹಾಗೆ ಕೊಟ್ಟೇ 'ಏಕಂ ಸದ್ವಿಪ್ರಾ ಬಹುಧಾ ವದಂತಿ' ಎಂಬ ಸಾಕ್ಷಾತ್ಕಾರಕ್ಕೆ ಕಾರಣವಾದವೋ ಅಂತೆಯೇ ಭಿನ್ನಭಾಷೆಯ ಜನರಿಗೆ ಭಿನ್ನ ಸಂಘಟಿತ ಜೀವನಕ್ಕೆಡೆ ಮಾಡಿಕೊಟ್ಟೇ ಅಖಿಲ ಭಾರತ ನಾಯಕರು– 'ಏಕಾಂ ತಾಂ ಹಿಂದೀಂ ಬಹುಧಾ ವದಂತಿ । ಬಾಂಗ್ಲಾಮಾಂಧ್ರಾಂ ಕನ್ನಡಾ ಮುರ್ದುಮಾಹುಃ' ಎಂಬ ಸತ್ಯದರ್ಶನ ಜನಕ್ಕಾಗುವಂತೆ ಮಾಡಬಹುದೇ ವಿನಾ ಈಗಿನಂತೆ 'ಏಕಾ ಸಾ ಹಿಂದೀ ಸಕಲೈಃ ಸುಪೂಜ್ಯಾ । ಹನ್ಯಾದನ್ಯಾಃ ಸರ್ವ ಭಾಷಾ ಜಘನ್ಯಾಃ' ಎಂಬ ಧೋರಣ ಹಿಡಿಯುವುದು ಸ್ವಧರ್ಮವನ್ನು ಎಲ್ಲರೂ ಸ್ವೀಕರಿಸಬೇಕೆಂಬ ಬಲಾತ್ಕಾರದ, ಸರ್ವಧರ್ಮಶತ್ರುವಾದ ಸಂಕುಚಿತ ಲೌಕಿಕತೆಯ ಹಠವೆನಿಸಿ ರಾಷ್ಟ್ರಕ್ಕೆ ಕೇಡನ್ನುಂಟು ಮಾಡೀತು.

ಇಂಗ್ಲೆಂಡ್ ಅಮೇರಿಕಗಳಂಥ ಸಣ್ಣ ಕೌಮಾರ ರಾಜ್ಯಗಳಲ್ಲಿಯ ಸ್ವಾಭಾವಿಕ ಭಾಷೈಕ್ಯ ಕಣ್ಣೆದುರು ನೇತುಬಿದ್ದಿರುವುದನ್ನು ನೋಡಿ, ಋಗ್ವೇದದ ಜೂಜುಗಾರ ಸಂತಸಬಟ್ಟು ಆ ಪಗಡೆ ದಾಳವನ್ನೆತ್ತಿ ಆಡಿ ಸೋತು ಪಶ್ಚಾತ್ತಾಪ ಪಡುವಂತೆ, ಜಗಜಗಿಸುವ ಪರದೇಶೀಯ ಜೀವನ ನೀತಿಗಳಿಗೆ ಮರುಳಾಗಿ ಸ್ಫೂರ್ತಿ ಸಿಕ್ಕಿತೆಂದು ನವಭಾರತ ಬಾಯ್ನೀರುಗರೆದು ಕುತ್ತಿಗೆಯನ್ನು ಕೊಕ್ಕರಿಸಿದರೆ ಕ್ರಮೇಣ ನಷ್ಟ ಹೊಂದಿ ತೀವ್ರ ಸಂತಾಪ ಹೊಂದಬೇಕಾಗಿ ಬಂದೀತು. ಪಾಶ್ಚಾತ್ಯರ ನಾಗರಿಕತೆಯು ಸ್ಥಾಯಿಭಾವ Anthropolological ಕೇವಲ ಮಾನವನಿಷ್ಠವಾಗಿದ್ದರೆ, ಭಾರತೀಯ ವೇದಮೂಲ ನಾಗರಿಕತೆಯದು Cosmic ವಿಶ್ವನಿಷ್ಠವಾಗಿದೆ. ಆದುದರಿಂದ ಹೆಸರನ್ನು ಒಂದೇ ಮಾಡಿ ಇಟ್ಟುಕೊಂಡಾಕ್ಷಣ ಪಾಶ್ಚಾತ್ಯ ಪೌರಸ್ತ್ಯ ಲೌಕಿಕತೆಗಳ ಸತ್ವ ಏಕರೂಪದ್ದಾಗಲಾರದು. ಜನಜೀವನದಲ್ಲಿಂದು ಇಲ್ಲಿ ಎಣಿಸಿದ್ದಷ್ಟು ಸ್ಫೂರ್ತಿ, ಉತ್ಸಾಹ, ಉಲ್ಲಾಸ, ಸಂಭ್ರಮ, ಕಾರ್ಯದಕ್ಷತೆ ಸ್ವಾತಂತ್ರ್ಯಲಾಭದಿಂದ ಕಂಡುಬರದಾದುದು ಜನನಾಯಕರು ನಮ್ಮನ್ನು Borrowed ಕಡ ತಂದ ನವಿಲುಗರಿಗಳನ್ನು ಧರಿಸಿ ಕುಣಿಯಹಚ್ಚಿದ್ದೇ ಕಾರಣ.

A.C.Bouquetನು ವೈದಿಕ ಜೀವನದ ಪ್ರಥಮದಶೆಯನ್ನು ವರ್ಣಿಸುತ್ತ, 'The polytheism of these northerners as expressed in their hymns is joyus and even rollicking and much resembles that of the Vikings of Scandinavia– ಈ ಔತ್ತರೇಯರ ಬಹುದೇವತಾರಾಧನೆಯು, ಅವರ ಸೂಕ್ತಗಳಲ್ಲಿ ಕಾಣುವಂತೆ, ಉಲ್ಲಾಸಮಯ ಅಥವಾ ಅಷ್ಟೇ ಏಕೆ–ಅಟ್ಟಹಾಸಮಯವಾಗಿತ್ತು; ಅದು ಸ್ಕ್ಯಾಂಡಿನೇವಿಯದ ವೈಕಿಂಗರ ಬಾಳುವೆಯನ್ನು ಹೆಚ್ಚಾಗಿ ಹೋಲುತ್ತದೆ' ಎಂದಿದ್ದಾನೆ. ಅವನ ಹೋಲಿಕೆ ಎತ್ತಲಾದರೂ ಹೋಗಲಿ, ಅಂದಿನ ಭೂ ಜೀವನ ಸ್ವರ್ಗೀಯವಾಗಿತ್ತೆಂದು ತಿಳಿಯಲು

ಏನೂ ಅಡ್ಡಿಯಿಲ್ಲ. ನಮ್ಮ ಹಿರಿಯಜ್ಜರ ರಸಮಯ ಜೀವನಕ್ಕೆ ಎಲ್ಲಿಂದ ಸ್ಫೂರ್ತಿ ಬಂದಿತು? ಅವರ ಲೌಕಿಕದೃಷ್ಟಿಗೆ ಯಾವ ವೈದಿಕ ಕನ್ನಡಕ ದೊರಕಿತು? ಅಂಥ ಆರೋಗ್ಯಕರವಾದ ವೈದಿಕ ಲೌಕಿಕತೆಯೇ 'ಭಾರತೀಯತೆ' ಎಂಬುದು. 'If we learn to think of Hinduism not as an institution but as an event–ಹಿಂದು ಧರ್ಮವನ್ನು ಒಂದು ಮತಾಚಾರವೆಂದು ಗ್ರಹಿಸದೆ, ಅದೊಂದು (ನಾನಾ ಸಂಗತಿಗಳ ತುಮುಲದಿಂದೊಡಗೂಡಿದ್ದರೂ ಏಕಸೂತ್ರತೆಯೊಂದನ್ನಿಟ್ಟುಕೊಂಡ) ಘಟನೆ ಎಂದು ಭಾವಿಸಿದರೆ' ಸುವ್ಯಕ್ತವಾಗುತ್ತದೆ. ಲೌಕಿಕತೆ ನಾನಾತ್ವವುಳ್ಳದ್ದು. ಅದರ ವೈವಿಧ್ಯಗಳನ್ನು ಸುಸಂಬದ್ಧ ಸ್ಥಿತಿಯಲ್ಲಿಡಲು ಆಧ್ಯಾತ್ಮಿಕ ಅಥವಾ ಮಾನವೋತ್ತರ ತತ್ವಗಳಲ್ಲಿಯ ಶ್ರದ್ಧೆಯನ್ನು ವೈದಿಕಯುಗ ಬಳಸಿಕೊಂಡಿತು. ಈ ಗುಟ್ಟನ್ನು ಮಾನಿಸದಿದ್ದರೆ ಪರದೇಶದಿಂದ ಬರುವ ರಾಜಕೀಯ ಮತ್ತು ವೈಜ್ಞಾನಿಕ ಇಜಂಗಳ ಧಾಳಿಯಿಂದ ಭಾರತ ಒಡೆದು ಅಧೋಗತಿಗಿಳಿಯುವ ಭಯದ ಸತ್ಯತೆಯೆತ್ತ, ಅದರ ಮುಂದೆ ನುಸಿಗಿಂತ ಕ್ಷುದ್ರವಾದ ಭಾಷಾವಾರು ಪ್ರಾಂತರಚನೆಯಿಂದ ಐಕ್ಯಭಾವ ನಾಶವಾದೀತೆಂಬ ಭಯದ ಭ್ರಮೆಯೆತ್ತ! ಒಂದು ವಿಚಾರವನ್ನು ಎಲ್ಲರೂ ನೆನಪಿಡಬೇಕು: ಮಾನವಮನದಲ್ಲಿ ಕಂಡುಬರುವ ಎಲ್ಲ ವಿಚಾರ, ಕಲ್ಪನೆ, ಭಾವನೆಗಳೂ ಮಾನವೀಯ, ವೈಜ್ಞಾನಿಕ 'ಆಬ್ಜೆಕ್ಟಿವಿಟಿ'–ದತ್ತವಲ್ಲ. ಅಂಥ ಒಂದು ಸರ್ವತಂತ್ರ ಸ್ವತಂತ್ರ ಸತ್ಯವಿದ್ದರೆ ಅದು ಮಾನವೇತರ ಮತ್ತು ಮಾನವೋತ್ತರ. ಆದ್ದರಿಂದ ಅದು ಮಾನವ ಮಾನಸಾತೀತ; ದಿವ್ಯ ದೃಷ್ಟಿಗಮ್ಯ, ವಿಜ್ಞಾನಗಮ್ಯವಲ್ಲ, ವಿಚಾರಗಮ್ಯವೂ ಅಲ್ಲ. ವಿಜ್ಞಾನ–ವಿಚಾರಗಳು ಮಾನವನ ಮಾನಸ ಮಟ್ಟದವು. ಈ ಮಾನಸಮಟ್ಟದ ರಾಜಕೀಯ–ವೈಜ್ಞಾನಿಕ ಕಲ್ಪನೆಗಳ ತಾಂಡವಕ್ಕೆ ತಲೆಗೊಡುವುದನ್ನು ಭಾರತ ಹಿಡಿದರೆ ಅದರ ಐಕ್ಯ–ಶಾಂತಿಗಳು ಗಾಳಿಗೊಡ್ಡಿದ ದೀಪದಂತಾಗುವುದು ಹದಿನಾರಾಣೆಯ ನಿಶ್ಚಯ. ದೇವತಾರ್ಪಣ ಬುದ್ಧಿಯಿಂದ ಸತ್ಕಾರ್ಯ ಮಾಡೆಂಬ ಭಾಷೆಯಿಂದ ಭಾರತೀಯನಿಗೆ ಹೇಳಿದಾಗ ಮಾತ್ರ ಅವನೆದೆಗದು ತಾಗಿ ಆ ಮೂಲಕ ಜನತಾ ಜನಾರ್ದನ ಹಿತಸಾಧಕ ಕಾರ್ಯಮಾಡಲು ಅವನು ಶಕ್ತನಾದಾನಲ್ಲದೆ, ಕೇವಲ ರಾಜಕೀಯ ಇಜಂಗಳ ಅಥವಾ ಬುಡವಿಲ್ಲದ ನೈತಿಕತೆಯ ಕೂಗುಗಳಿಂದ ಭಾರತಾತ್ಮ ಎಚ್ಚರವಾಗದು. ಕೆಲ ಜನರೆದೆ ಎಚ್ಚತ್ತಂತೆ ಕಂಡರದು ತೋರಿಕೆಗೆ ಮಾತ್ರ; ನಿಜವಾಗಿ ಅದು ಕಪಟ ಎಂಬುದು ಇಂದಿನ ಸುಶಿಕ್ಷಿತಂಮನ್ಯರನೇಕರ ದೇಶ ಸೇವಾ ಕಾರ್ಯಕ್ರಮಗಳಿಂದ ಸ್ಪಷ್ಟವಾಗಿದೆ. ನಮಗೆ ನೆಹರೂ–ಧರ್ಮಬೇಡ, ಗಾಂಧಿ ಧರ್ಮವೇ ಹಿತಕರ ಎಂದು ಬಹುಸಂಖ್ಯರ ಅಂತರಾತ್ಮ ದನಿಗೂಡುತ್ತಿದೆ. ಗಾಂಧಿಯವರ ವೈದಿಕ ಲೌಕಿಕತೆಯ ಸಾರ–

'ಬ್ರಹ್ಮಾರ್ಪಣಂ ಬ್ರಹ್ಮ ಹವಿರ್<br>
ಬ್ರಹ್ಮಾಗ್ನೌ ಬ್ರಹ್ಮಣಾ ಹುತಂ<br>
ಬ್ರಹ್ಮೈವ ತೇನ ಗಂತವ್ಯಂ<br>
ಬ್ರಹ್ಮಕರ್ಮ ಸಮಾಧಿ ನಾ'

ಎಂಬ ಒಂದು ಮಾತಿನಲ್ಲಿದೆ. ಇದನ್ನು ಯಾವನೂ ಇಲ್ಲಿ ಅಲ್ಲಗಳೆದಾಗಲಿ, ಹೀಗಳೆದಾಗಲಿ ಗೆಲ್ಲಲಾರ ಎಂಬುದನ್ನಿಂದು ಕರ್ನಾಟಕ ರಾಜ್ಯ ನಿರ್ಮಾಣಕ್ಕಾಗಿ ಪ್ರಾಣತೆರಲೆದ್ದ, ತೆರುತ್ತಿರುವ ಹಲವಾರು ವೀರಸತ್ಯಾಗ್ರಹಿಗಳ ಉಪವಾಸ ವ್ರತನಿಷ್ಠೆ ಘಂಟಾಘೋಷವಾಗಿ ಸಾರುತ್ತಿದೆ. ಈಶ್ವರಾರ್ಪಣಬುದ್ಧಿ ನಮ್ಮ ಕಾರ್ಯಕ್ಷಮತೆ ಹೆಚ್ಚಿಸುವಂತೆ ಇನ್ನಾವುದೂ ಹೆಚ್ಚಿಸದೆಂಬುದನ್ನರಿಯದ ಪಾಶ್ಚಾತ್ಯ ವೈಜ್ಞಾನಿಕನೊಬ್ಬ ಅದರಿಂದ ಸಾಮಾಜಿಕ ಹಾನಿಯೇ ಫಲಿತ ಎಂದು ಹುಚ್ಚನಂತೆ ಬಡಬಡಿಸಬೇಕಲ್ಲದೆ ಮತ್ಯಾರೂ ಅವನಂತೆ ಹೇಳಲಾರರು.



**['ಜೀವನ' – ಸಂಪುಟ ೧೪ – ಜುಲೈ ೧೯೫೩ – ಸಂಚಿಕೆ ೩]**

# ೧೨. ಉಪನಿಷತ್ತುಗಳ ಸಂದೇಶ

ವೇದಗಳ ಸೂಕ್ತಗಳಿಗೆ ಅವುಗಳಲ್ಲಿರುವ ನಾನಾರ್ಥಕ ಪದಗಳ ಬಳಕೆ ವಿಘ್ನಕರ– ಎಂದೊಮ್ಮೆ ನಾನು ಹೇಳಿದಾಗ ವರಕವಿ ಬೇಂದ್ರೆಯವರು ಆ ಗುಣವೇ ಅವುಗಳ ಹೆಚ್ಚುಗಾರಿಕೆ ಎಂದು ಉತ್ತರಕೊಟ್ಟರು. ಉಪನಿಷತ್ತುಗಳು ವೇದಭಾಗಗಳು. ಅವುಗಳನ್ನು ಕಂಡೇ ವ್ಯಾಸ ಮಹಾಭಾರತವು,

**ತರ್ಕೋಽಪ್ರತಿಷ್ಠಃ ಶ್ರುತಯೋ ವಿಭಿನ್ನಾ ನೈಕೋ ಋಷಿರ್ಯಸ್ಯ ವಚಃ ಪ್ರಮಾಣಂ**
**ಧರ್ಮಸ್ಯ ತತ್ವಂ ನಿಹಿತಂ ಗುಹಾಯಾಂ ಮಹಾಜನೋ ಯೇನ ಗತಃ ಸ ಪಂಥಾಃ॥**

ಹೇಳಿದ್ದಾಗಿರಬೇಕು. ಉಪನಿಷದ್ ಗಣವು ಮೋಕ್ಷಶಾಸ್ತ್ರ. ಅವುಗಳ ಸಂಖ್ಯೆ ೧೦ ರಿಂದ ೧೨೦. ಹತ್ತರಲ್ಲಾಗಲಿ, ನೂರಾಇಪ್ಪತ್ತರಲ್ಲಾಗಲಿ–ಭೇದವಾಕ್ಯಗಳನ್ನು ಮರೆಯಿಸುವಷ್ಟು ಅಭೇದ ವಾಕ್ಯಗಳ ಪ್ರಭಾವವಿದೆ. ಆಧ್ಯಾತ್ಮಿಕವಾದ ಆತ್ಯಂತಿಕ ಅಭೇದದ ಅಪರೋಕ್ಷಾನುಭೂತಿಯು ಉಪನಿಷತ್ತುಗಳ ತಾತ್ಪರ್ಯ ಎಂಬುದು ಜಗತ್ತಿನ ಹೆಚ್ಚಿನ ವಿದ್ವಾಂಸರ ಮತ.

'ಇಬ್ಬರು ಎದುರು ನಿಂತಾಗ ಅವರು ಪರಸ್ಪರ ಕಣ್ಣುಗಳನ್ನು ಪ್ರವೇಶಿಸುತ್ತಾರೆ. ಆಗ ಅವರಿಬ್ಬರು ಹೆಸರಿನಲ್ಲಿ ಮಾತ್ರ ಭಿನ್ನ. ಆಕೃತಿಯಲ್ಲಿ ಮಾತ್ರ ಭಿನ್ನ–ಎಂದೆನ್ನಿಸುತ್ತಾರೆ. ನಾಮರೂಪಗಳನ್ನುಳಿದು ಇತರ (ಅಸ್ತಿತ್ವ, ಭಾವ, ಪ್ರಿಯತ್ವ) ಅರ್ಥದಲ್ಲಿ ಅವರಿಬ್ಬರೂ ಒಬ್ಬರೇ. ಮುಮುಕ್ಷು(ಜಿಜ್ಞಾಸು)ವಿನ ಒಳಗಣ್ಣು(ಜ್ಞಾನಚಕ್ಷುಸ್ಸೂ) ಮುಕ್ತ ಸತ್ಯಪದಾರ್ಥದ ಅಥವಾ ಪರಮಾತ್ಮನ ಅಂತಶ್ಚಕ್ಷುಸ್ಸೂ ಒಂದಾದಾಗ ಮುಮುಕ್ಷುವು ಮುಕ್ತನಾಗುವನು'– ಎಂಬುದು ಶ್ರೀ ಸತ್ಯಸ್ವಾಮಿಗಳ ಮಾತಿನ ತಾತ್ಪರ್ಯ. ಈ ಸಾಯುಜ್ಯ ಸ್ಥಿತಿಯನ್ನು ಅದ್ವೈತವೆಂದೂ ಸಾರೂಪ್ಯ(ಸಮಾನವಂತಿಕೆ)ವನ್ನು ವಿಶಿಷ್ಟಾದ್ವೈತವೆಂದೂ ಸಾಲೋಕ್ಯಾಂತರ್ಗತ ಸಾಮೀಪ್ಯ ತಾರತಮ್ಯವನ್ನು ದ್ವೈತವೆಂದೂ ಕರೆಯುವುದು ರೂಢಿ. ಆದರೆ ಬುದ್ಧಿಗೆ ಅನೇಕ ಸ್ಥಿತಿಯೆಂದು ವರ್ಣಿಸಲ್ಪಟ್ಟಿರುವುದರಿಂದ 'ಸಾಯುಜ್ಯ'ವೇ ಉಪನಿಷತ್ತುಗಳ ಆತ್ಯಂತಿಕ ಸಂದೇಶವೆಂದು ತೋರುತ್ತದೆ. ಶ್ರೀ ಶಂಕರಾಚಾರ್ಯ, ಶ್ರೀ ರಾಮಕೃಷ್ಣ ಪರಮಹಂಸ, ಶ್ರೀ ವಿವೇಕಾನಂದ, ಶ್ರೀ ರಾಮತೀರ್ಥ , ಶ್ರೀ ರಮಣ ಮಹರ್ಷಿ, ಶ್ರೀ ಅರವಿಂದ, ಶ್ರೀ ಸತ್ಯಸ್ವಾಮಿ, ಶ್ರೀ ಶ್ರೀಧರಸ್ವಾಮಿ, ಶ್ರೀ ವಾಸಿಷ್ಠ ಗಣಪತಿ ಮುನಿಗಳ ಉಪದೇಶಗಳ ತಾತ್ಪರ್ಯ ಸಾರವು ಹೀಗೆ ಹೇಳಲು ಆಧಾರ. ಈ ಮಹಾತ್ಮರ ವಾಗ್ಭೇದಗಳು ಮುಕ್ತಿಯ ಬಗೆಗೆ ಅನೈಕ್ಯಾರ್ಥಗಳಾಗಿಲ್ಲ. ಈಯೆಲ್ಲರೂ ಸ್ವದರ್ಶನದಿಂದ ಮುಕ್ತಸ್ಥಿತಿಯನ್ನು ಐಕ್ಯಭಾವದಿಂದ ಭಿನ್ನವಲ್ಲವೆಂದು ಹೇಳಿದ್ದಾರೆ.

ಹಾಗೇ ಈ ಮೂರು ದರ್ಶನವನ್ನೂ ಹೇಳಿಕೆಗಳನ್ನೂ ಅವಲಂಬಿಸದೆ ಸ್ವಬುದ್ಧಿಯಿಂದ ಉಪನಿಷತ್ತುಗಳನ್ನು ಅರ್ಥಮಾಡಿಕೊಳ್ಳಲು ತೊಡಗಿದರೂ ಅಂತ್ಯದಲ್ಲಿ ಸ್ಥೂಲವಾಗಿಯಾದರೂ ಅತೀಂದ್ರಿಯ, ಅತಿಮಾನಸ, ಅತಿಬೌದ್ಧಿಕ ಎನ್ನಿಸಬಹುದಾದ ಅನಂತಾನುಭವವನ್ನೇ ಆತ್ಯಂತಿಕವಾಗಿ ಅವಲಂಬನೀಯ ಪದಾರ್ಥ ಎಂದು ಬೋಧಿಸಿದುದು ಅವುಗಳ ಸಂದೇಶ ಎನ್ನಿಸುತ್ತದೆ. ಸಾಲೋಕ್ಯ ಸಾಮೀಪ್ಯಾದಿಗಳೆಲ್ಲವೂ ಸಾಯುಜ್ಯಭಿನ್ನ ಮತ್ತು ಬುದ್ಧಿಯ ಲಕ್ಷಣವಾದ ಭೇದಗ್ರಹಣದ ಮೂಲಕ ಮಾತ್ರ ಗ್ರಾಹ್ಯ. ಸಾಯುಜ್ಯವು ಕ್ಷೀರ–ಕ್ಷೀರ ಸಾಮರಸ್ಯ; ನೀರಕ್ಷೀರಸಮನ್ವಯ ಅಥವಾ ಸಂಮಿಶ್ರಣವಲ್ಲ. ಇನ್ನು ಬುದ್ಧಿಗೆ ಅತ್ಯತೀತವಾದುದನ್ನು ಬುದ್ಧಿ ಹೇಗೆ ಒಪ್ಪಿಕೊಳ್ಳಲು ಸಾಧ್ಯ? ಎಂದು ಯಾರಾದರೂ ಕೇಳಿದರೆ ಅದು ಹಾಗೆಂಬುದು ಬುದ್ಧಿಗೆ ತಿಳಿಯದಿದ್ದರೂ ಹೊಳೆಯುತ್ತದೆ–ಎಂಬ ಒಂದೇ ಉತ್ತರವನ್ನು ಆಗಮಾನುಸಾರಿ ಕರ್ಮದ ಮೂಲಕ ಕೊಡಬಹುದು. ಆಗಮಾಕ್ಷರಗಳಷ್ಟರಿಂದ ಅಥವಾ ತರ್ಕವೊಂದರಿಂದ ಈ ಉತ್ತರಕ್ಕೆ ನಾವು ಬಂದು ನಿಲ್ಲಲಾರೆವು.

ಕೇವಲಾದ್ವೈತ, ಶುದ್ಧಾದ್ವೈತ, ಅಚಿಂತ್ಯಭೇದಾಭೇದದರ್ಶನ, ಭೇದಾಂತರ್ಗತ ಅಭೇದದರ್ಶನ ನಿರ್ವಾಣ ಅಥವಾ ಸಮಗ್ರ ಅದ್ವೈತ–ಎಂಬಿವು ಶಕ್ತಿವಿಶಿಷ್ಟಾದ್ವೈತದಂತೆಯೇ 'ಶಕ್ತಿ ಶಕ್ತಿ ಮತೋ ಭೇದಃ' ಎಂಬ ಅನುಭವದಿಂದ ಹೇಗೋ ಹಾಗೆ ವಿಶೇಷಣ–ವಿಶೇಷ್ಯ ಭೇದದ ಅನುಭವದಿಂದ ಸಮರಸವಾದಾವು. ಅದರೆ ಆತ್ಯಂತಿಕತೆಯ ಅನೂಹ್ಯತೆ(ಆತರ್ಕ್ಯತೆ)ಯ ದೆಸೆಯಿಂದ ಅಲ್ಲಿ ಭೇದಾರೋಪವು ಮನುಷ್ಯರಿಗೆ ಅಸಾಧ್ಯ. ಅದು ತನ್ನ ಸ್ವದರ್ಶನವೆಂದು ಮಾತ್ರ ಯಾರಾದರೂ ಭೇದದರ್ಶನವನ್ನು ಸಮರ್ಥಿಸಿಕೊಳ್ಳಬಹುದು; ಇತ್ಯಂತಿಕವೆಂದು ಹೇಳಬಹುದು.

'ಆತ್ಮ ಬ್ರಹ್ಮ'ಗಳು ಮಾತ್ರ ಪರ್ಯಾಯವಾಗಿ ಮುಕ್ತತೆಯನ್ನು ಸೂಚಿಸುತ್ತವೆ. ತದಿತರವಾದ ದೇಹ, ಇಂದ್ರಿಯ, ಅಂತರಂಗ, ಅಹಂಕಾರ, ಪ್ರಾಣಬುದ್ಧಿ ಎಂಬಿವುಗಳಲ್ಲಿ ಯಾವುದೂ ಮುಕ್ತಿಯ ಸಚ್ಚಿದಾನಂದವನ್ನೂ ಸತ್ಯಜ್ಞಾನಾನಂತತೆಯನ್ನೂ ಸೂಚಿಸುವುದಿಲ್ಲ; 'ಜೀವ' ಕೂಡ ಅವಿಶಿಷ್ಟವಾಗಿ ಸೂಚಿಸದು. ಏಕೆಂದರೆ ಈಯೆಲ್ಲವುಗಳೂ ಆದಿ ಮಧ್ಯ ಅಂತ್ಯಗಳುಳ್ಳ ಅನುಭವಗಳು. ಗೀತೆಯ ಐದನೆಯ ಅಧ್ಯಾಯದಲ್ಲಿ ಅಜ್ಞಾನದಿಂದ ಜ್ಞಾನವು ಆವೃತವಾಗಿರುವುದು ಮೌಢ್ಯಸ್ಥಿತಿಯೆಂದೂ ಜ್ಞಾನದಿಂದ ಆ ಅಜ್ಞಾನವು ನಷ್ಟ ಹೊಂದಿದರೆ ತ್ರಿಕಾಲಾಬಾಧಿತ ಸತ್ಯದ ಉದಯ ಅಂಥವನಿಗೆ ಆಗುವುದೆಂದೂ ಹೇಳಿರುವ ಮಾತೊಂದು ಸಾಕು–ತತ್ವಜ್ಞಾನದ ಬೌದ್ಧಿಕ ಜಿಡುಕನ್ನು ತೋರಿಸಲು. ಅಜ್ಞಾನವು ಜ್ಞಾನವನ್ನು ಹೇಗೆ ಆವರಿಸಲು ಶಕ್ತ? ಹಾಗೆ ಆವರಿಸುವುದು ನಿಜವಾದರೆ ಆ ಆವರಣದಿಂದ ಜ್ಞಾನಕ್ಕೆ ಬಿಡಿಸಿಕೊಳ್ಳುವ ಶಕ್ತಿ ಎಲ್ಲಿಂದ ಬಂದೀತು? ಎಂದು ಯಾರಾದರೂ ಕೇಳಬಹುದು. ಅಭಿಧಾರ್ಥ ವ್ಯಾಹತಿಯು ತರ್ಕದ ಅವಶ್ಯಕತೆಯನ್ನು ಉಪನಿಷತ್ತುಗಳಲ್ಲೂ ತರುವುದು. ಆಗ ಅವುಗಳ ತಾತ್ಪರ್ಯಕ್ಕೆ ಹಾನಿ ಪ್ರಸಂಗವುಂಟಾದಂತೆ ತೋರುವುದು. ಆಗ ಯೋಗಸಮಾಧಿಯ ಅಪರೋಕ್ಷಾನುಭೂತಿಯ ನಿರ್ಣಾಯಕತ್ವಕ್ಕೆ ಶರಣಾಗಬೇಕಾಗುವುದು.

ಒಂದು ಮಾತು ಮಾತ್ರ ನಿಜ. ಆಕಾಶಕ್ಕಿಂತಲೂ ಸೂಕ್ಷ್ಮತರವಾದ(ದಿಕ್ಕಾಲಾದ್ಯನವಚ್ಛಿನ್ನ) ಸತತಾನುಭವವು ತದಿತರಾನುಭವಗಳ ನಶ್ವರತೆಯನ್ನೂ ಅನವಲಂಬನೀಯತೆಯನ್ನು ದೃಢಪಡಿಸಿಕೊಟ್ಟಾಗ ಉಪನಿಷತ್ ಸಂದೇಶವು ಸ್ಪಷ್ಟವಾಗುವುದು. ಬ್ರಾಹ್ಮೀ ಸ್ಥಿತಿಯ (ಮುಕ್ತಿಯ) ಅರ್ಥದ ಸಾತ್ಮ್ಯಭಾವವು ಲಭಿಸುವುದು. ಅಲ್ಲಿಯವರೆಗಿನ Scientists are dumb but philosophers are garrulous ಕ್ಷಪಾತಿಗಳು ಮೌನಧಾರಿಗಳೂ ತತ್ವಜ್ಞಾನಪ್ರಿಯರು ಹಲವನ್ನು ಹರಟುವವರಿರುತ್ತಾರೆ. ಆದುದರಿಂದ ಉಪನಿಷತ್ತುಗಳ ಸಂದೇಶವೂ ಭಿನ್ನಸ್ವರೂಪದವುಗಳೆಂದು ಪ್ರಚಾರ ಮಾಡಲ್ಪಡುತ್ತವೆ.

ಭೌತಿಕ ಜಗತ್ತು ವಾಸ್ತವಿಕ ವ್ಯಾವಹಾರಿಕ ದೃಷ್ಟಿಯ ವಿಶ್ಲೇಷಣೆಯಿಂದ ಅಸತ್ಯವೆಂದು ಕಂಡೀತು; ನಶ್ವರವೆಂದು ತೋರೀತು; ಆದರೆ ಬುಧ್ಯುತ್ತರ ದೃಷ್ಟಿಯಿಂದ ಸತ್ಯ (ಬ್ರಹ್ಮ ಆತ್ಮ ಶಾಶ್ವತ ಚಿದ್ಭಾವ) ಎಂಬುದು ದೃಷ್ಟಿಭೇದವನ್ನು ಎತ್ತಿ ಹೇಳುವ ಔಪನಿಷದಿಕತೆ. ಒಂದು ಇಂದ್ರಿಯಾಧೀನ ಜ್ಞಾನವಾದರೆ ಇನ್ನೊಂದು ಬ್ರಹ್ಮಾಧೀನವಾದ (ಅತೀಂದ್ರಿಯವಾದ) ಜ್ಞಾನ ಅಥವಾ ಅನುಭವ. ಇಂದ್ರಿಯವು ಭೌತಿಕ, ಅಶುದ್ಧ ಭೌತಿಕ. ಅತೀಂದ್ರಿಯವು ಅಭೌತಿಕ ಶುದ್ಧ ಬೌದ್ಧಿಕ. ಈ ಶುದ್ಧಾಶುದ್ಧ ವಿವೇಕವೇ ಆತ್ಮಾನಾತ್ಮ ವಿವೇಕ; ಬುದ್ಧ್ಯತೀತ ಬ್ರಹ್ಮಾತ್ಮಕತೆ, ಕೈವಲ್ಯ, ಸಾಯುಜ್ಯ, ಸಹಜ ಸಮಾಧಿ ಎಂಬುದು ತತ್ಸಾಧ್ಯ. ಸದ್ಗುರುವಿನ ವ್ಯಕ್ತಿತ್ವದ ಪ್ರಭಾವವು ಅದಕ್ಕೆ ಸೇತುವೆ. ಆದ್ದರಿಂದ ಸಾಕ್ಷಾತ್ಕಾರ ಹೊಂದಿದ ಗುರುವಿನ ಅನುಗ್ರಹವನ್ನು ಉಪನಿಷತ್ತು ಒತ್ತಿಹೇಳುತ್ತದೆ. ಉಪ=ಸಮೀಪದಲ್ಲಿ ನಿಷತ್=ಕುಳಿತುಕೊಂಡಿರುವುದು–ಸದ್ಗುರುವಿನ ಅಂತೇವಾಸಿಯಾಗಿರುವುದು ಮುಮುಕ್ಷುವಿಗೆ ಅಗತ್ಯ. ಅದಕ್ಕೆ ನಿತ್ಯಾನಿತ್ಯವಸ್ತುವಿವೇಕ, ಶಮದಮಾದಿ ಸಾಧನ ಸಂಪತ್ತಿ. ಮುಮುಕ್ಷತ್ವ ಮತ್ತು ಇಹಾಮುತ್ರಭೋಗ ವಿರಾಗಗಳು ಆವಶ್ಯಕ. ಇವುಗಳಿಲ್ಲದವನ ಪಾಲಿಗೆ ಉಪನಿಷತ್ತುಗಳಿಲ್ಲ ಅಥವಾ ಅಪಾರ್ಥಕ, ವ್ಯರ್ಥ.

One becomes what he believes Sincerely–ಯೋ ಯಚ್ಛ್ರದ್ಧಃ ಸ ಏವ ಸಃ–ಪ್ರಾಮಾಣಿಕವಾಗಿ ಮನುಷ್ಯನು ನಂಬಿದ್ದೇ ಆಗುವನು ಎಂಬುದು ಅನುಭವದ ಮಾತು. ಅದರಿಂದ ಮುಕ್ತಿಯ, ದೇವರ, ಪೂರ್ಣತೆಯ ಧ್ಯಾನವನ್ನು ತನ್ಮಯತೆಯ ಅಭ್ಯಾಸವನ್ನು ಉಪನಿಷತ್ಸಾರವೆನ್ನುತ್ತದೆ ಗೀತೆ. (ಸರ್ವೋಪನಿಷದೋಗಾವೋ ದೋಗ್ಧಾ ಗೋಪಾಲನಂದನಃ) ಸತ್ಯಸ್ವಾಮಿಗಳು ಅದನ್ನೇ ಹೇಳುತ್ತಾರೆ. ಅದಕ್ಕೆ ಶಂಕರಾಚಾರ್ಯರು 'ಜ್ಞಾನನಿಷ್ಠೆ' ಎಂದಿದ್ದಾರೆ. ಬ್ರಹ್ಮೋನ್ಮುಖತೆ, ಬ್ರಹ್ಮಾನುಸ್ಮೃತಿ, ಬ್ರಹ್ಮಮಯತೆಗಳು ಬ್ರಹ್ಮಭಕ್ತಿಯಿಂದ ಆರಂಭವಾಗುತ್ತವೆ. ಬ್ರಹ್ಮಾಸ್ಮಿ, ಕೇವಲಮಸ್ಮಿ ನಿತ್ಯಸತ್ತಾಜ್ಞಾನ ನಿರ್ವಿಕಲ್ಪಜ್ಞಾನ ಎಂದು ಮುಂತಾಗಿ ಹೇಳುವುದು ಉಪನಿಷತ್ತುಗಳು. ನಮ್ಮ ಮುಂದಿಡುವ ಧ್ಯೇಯ ಒಂದೇ ಒಂದು ಉಪನಿಷದ್ ವಾಕ್ಯ–ಸರ್ವಂ ಖಲ್ವಿದಂ ಬ್ರಹ್ಮ, ತಜ್ಜಲಾನಿತಿ ಶಾಂತ ಉಪಾಸೀತ–ಇದು ಉಪನಿಷದ್‌ಬೋಧ ಸಾರ. ಮಹಾವಾಕ್ಯಗಳ ರಾಶಿಗಳನ್ನು ಉದ್ಧರಿಸಿ ಹೇಳುವುದು ಇಲ್ಲಿ ಅನವಶ್ಯಕ. ಪಾಂಡಿತ್ಯಪ್ರದರ್ಶನವು ಮುಕ್ತಿಸಾಧನೆಯಲ್ಲವೆಂಬುದು ಔಪನಿಷದಿಕ ಮತ. ಶ್ರೋತವ್ಯಕ್ಕೆ, ಮಂತವ್ಯಕ್ಕೆ, ನಿಧಿಧ್ಯಾಸಕ್ಕೆ

ಉಕ್ತ ಒಂದು ಮಹಾವಾಕ್ಯ ಸಾಕು. ಉಪಮಾತೀತವಾದ ಮುಕ್ತಿಸತ್ಯಕ್ಕೆ ಉಪಮೆ ದೃಷ್ಟಾಂತ ನಿದರ್ಶನಗಳು ಪೂರ್ಣಸ್ವರೂಪದಲ್ಲಿ ದೊರಕಲಾರವು. ಅದೊಂದು ಅನನ್ವಯಾಲಂಕಾರ. ಅದರಂತೆ ಮಾತ್ರ ಅದು ಇದೆ. ಆದುದರಿಂದ ಸುರೇಂದ್ರನಾಥ ದಾಸಗುಪ್ತರಂಥವರು ತರ್ಕನೀತಿಯನ್ನು ಮೀರಿ, ಶಂಕರರು ಪ್ರಪಂಚಕ್ಕೆ ಕೊಟ್ಟ ರಜ್ಜು ಸರ್ಪನ್ಯಾಯ ಮುಂತಾದವುಗಳನ್ನು ಖಂಡಿಸಿದರು. ಬ್ರಹ್ಮಾನುಭವಿಗೆ ಕೂಡ ಪ್ರಪಂಚವು ಅನಿರ್ವಚನೀಯವಾಗಿರುವುದರಿಂದ(Inexplicable ಆಗಿರುವುದರಿಂದ).

ಉಪನಿಷದುಕ್ತ ಸಾಧನಾಭೇದಗಳು ಪಾತ್ರಾಪಾತ್ರ ವಿವೇಕವನ್ನು, ಪಾತ್ರ ತಾರತಮ್ಯವನ್ನು, ಅಧಿಕಾರಿಭೇದವನ್ನು ಆಧರಿಸಿದ್ದು. ಎ.ಸಿ.ಬೋಕೆಯವರು ತಮ್ಮ 'Comparative Religion' ಎಂಬ ಪುಸ್ತಕದಲ್ಲಿ To exist in tune with the Infinite ಅನಂತ ಸತ್ಯಕ್ಕನುಗುಣವಾಗಿ ಬದುಕಬೇಕೆಂಬುದು ಉಪನಿಷದ್ಧರ್ಮ ಎಂದಿದ್ದಾರೆ. ಆ ಸತ್ಯವು Monism ಏಕತಾವಾದ–The theory of the Great Self ಅದು Surpasses definition ಲಕ್ಷಣಾತೀತ–ಎಂದು ವ್ಯಾಖ್ಯಾನಿಸಿದ್ದಾರೆ. ಅದಾದ ಅನುಭವವೇ ಮುಕ್ತಿ ಎಂಬುದು ಉಪನಿಷತ್ ಸಂದೇಶದ ಶಿಖರ. ಅದು Being ಇರವು;Becoming ಆಗುವುದಲ್ಲ! ಭಾರತೀಯರ ಮನೋಧರ್ಮಕ್ಕೆ ಇಂಥ ವಿರುದ್ಧ ಭಾವಗಳೆಲ್ಲವುಗಳಿಗೂ ಆಶ್ರಯಕೊಡುವಂಥ ಗುಣವಿದೆ ಎಂದು ಅವರು ಹೇಳುವಾಗ 'ತತ್ತು ಸಮನ್ವಯಾತ್' ಎಂಬ ಬ್ರಹ್ಮಸೂತ್ರವನ್ನು ಮರೆತಿದ್ದಾರೆ. ಜ್ಞಾತೃಜ್ಞೇಯ, ಜ್ಞಾನಗಳ ಐಕ್ಯಬೋಧೆಗೂ (Knowledge by Identity) ಸತ್+ತ್ಯತ್ (Being+ Becoming) ಸಮನ್ವಯ ಸಿದ್ಧಾಂತಕ್ಕೂ (Coherence Theory of Truth) ನಡುವೆ ವಿರೋಧವನ್ನು ಅವರು ಗುರುತಿಸುತ್ತಾರೆ. ಅಂಥವೆಲ್ಲ ವಿರೋಧಾಭಾಸಗಳಲ್ಲದೆ ವಿರೋಧಗಳಲ್ಲ ಎಂಬುದು ಔಪನಿಷದಿಕತೆ. ಐಕ್ಯ ಪೂರ್ಣತೆಯೇ ಸಮನ್ವಯದ ಪೂರ್ಣಸ್ವರೂಪ, ಪೂರ್ಣತೆಯ ಹಂತ, ಅದ್ವಿತೀಯ ಪರಾಕಾಷ್ಠೆ ಎಂಬ Gradualism ಕ್ರಮವಿಕಾಸ ಶೈಲಿಯು ಉಪನಿಷತ್ತುಗಳಿಗೆ ಸಹಜ ಉದಾಹರಣೆ–

ಅನ್ನಂ ಬ್ರಹ್ಮೇತಿ ವ್ಯಜಾನಾತ್ ಪ್ರಾಣೋ ಬ್ರಹ್ಮೇತಿ ವ್ಯಜಾನಾತ್
ಮನೋ ಬ್ರಹ್ಮೇತಿ ವ್ಯಜಾನಾತ್ ವಿಜ್ಞಾನಂ ಬ್ರಹ್ಮೇತಿ ವ್ಯಜಾನಾತ್
ಆನಂದಂ ಬ್ರಹ್ಮೇತಿ ವ್ಯಜಾನಾತ್

ಸ್ವತಃ ಪ್ರಾಮಾಣ್ಯವು the proof of Self-Evidence ಅದರಿಂದಲೇ ಔಪನಿಷದಿಕ. ಇದನ್ನರಿಯದ ಭಾರತೀಯರೂ ತದಿತರರೂ ಎಷ್ಟೋ ಸಲ ಉಪನಿಷದ್ ಬೋಧೆಯಿಂದ ಅಪನಿಗಮನಗಳನ್ನು ತರ್ಕಿಸಿದ್ದಾರೆ. ಅವುಗಳಾವುವೆಂದರೆ;

೧. ನೀತ್ಯತೀತತೆ Amoralism =ದುರ್ನೀತಿ Bad Morals

೨. ಜಗನ್ಮಿಥ್ಯಾತ್ಮ=ಜಗದನಿತ್ಯತ್ವ=ಜಗತ್ತು ಶೂನ್ಯ

೩. ವೈರಾಗ್ಯ Objectivity =ಜಗತ್ಯಾಗವಾದ

೪. ಮುಕ್ತಿ (Absolute Freedom)=ಶೂನ್ಯತೆ, ಅಚೇತನತೆ

೫. ಮುಕ್ತಿ ವ್ಯಕ್ತಿತ್ವದ ಸರ್ವವ್ಯಾಪಕತ್ವ=ವ್ಯಕ್ತಿಸ್ವಾರ್ಥದ ಪರಾಕಾಷ್ಠೆ

೬. ಅಪರೋಕ್ಷಾನುಭೂತಿ Transcendental Realism =ಬಿಸಿಲುಗುದುರೆಯ ಅನುಭವ

ಉಪಕ್ರಮಾದಿ ತಾತ್ಪರ್ಯ ನಿರ್ಣಾಯಕ ನಿರ್ಣಯಗಳನ್ನು ಪಾಲಿಸಿದರೂ ದೇಶ ಕಾಲಾದಿ(ಮಮ್ಮಟೋಕ್ತ) ೧೧ ಸಂದರ್ಭಗಳನ್ನು ಗಣನೆಗೆ ಸರಿಯಾಗಿ ತೆಗೆದುಕೊಳ್ಳದಿರುವುದು ಅಪನಿಗಮನಕ್ಕೆ ಕಾರಣ. ಅಪಾರ್ಥಗಳ ದೆಸೆಯಿಂದ ಅಪಲಾಪಗಳೂ ಅಪಪ್ರಚಾರಗಳೂ ನಾಗರಿಕತೆಯನ್ನು ಕೆಡಿಸುತ್ತವೆ. ಆದುದರಿಂದ ಸರ್ವ ವಿಷಯಗಳಿಗೂ ಕೇಂದ್ರ ಶಿಖರ, ಮೂಲ ಎನ್ನಿಸುವ ಉಪನಿಷದಭ್ಯಾಸಯುಕ್ತವಾದ ನಿಷ್ಕಾಮಕರ್ಮ ಪದ್ಧತಿಯ ಲೋಕಹಿತಕರ ಪ್ರವೃತ್ತಿಯನ್ನು ಮುಕ್ತ್ಯುನ್ಮುಖವಾಗಿ ಬೆಳೆಸಿಕೊಳ್ಳಲು ಬೇಕಾದ ಶಿಕ್ಷಣ ಕ್ರಮವನ್ನು ಪ್ರಾರಂಭಿಸಬೇಕೆಂಬುದು ಔಪನಿಷದಿಕರ ಸಂದೇಶ, ಆದೇಶ. ಶ್ರೀ ಎಸ್.ಎನ್.ಮುಕರ್ಜಿ ಬರೆದ History of Education In India ಭಾರತದ ಶೈಕ್ಷಣಿಕ ಇತಿಹಾಸ ಎಂಬ ಗ್ರಂಥದಲ್ಲಿ Ethico-Spiritual ನೈತಿಕ–ಆಧ್ಯಾತ್ಮಿಕ ಶಿಕ್ಷಣದ ಉಲ್ಲೇಖವಿಲ್ಲದಿರುವುದು ಅನೌಪನಿಷದಿಕ, ಅಭಾರತೀಯ.

*ಉಪನಿಷತ್ತೆಂದರೆ ಆದರ್ಶ ಭಾರತ. In the Golden and the Silver Ages, both the government and the governed are Self realised Vice-less,law-abiding and Jivanmukta ಸುವರ್ಣ ರೂಪ್ಯ ಯುಗದಲ್ಲಿ ಶಾಸಕ–ಶಾಸ್ಯ ವರ್ಗಗಳೆರಡೂ ಆತ್ಮಜ್ಞಾನಿಗಳಿಂದಲೂ ದುರಭ್ಯಾಸರಹಿತರಿಂದಲೂ ಧರ್ಮನಿಷ್ಠರಿಂದಲೂ ಜೀವನ್ಮುಕ್ತರಿಂದಲೂ ತುಂಬಿರುತ್ತವೆ. ('Future of Mankind' by Ishvaria Vishva Vidyanilaya) ಎಂಬುದನ್ನು ಲಕ್ಷಿಸಬೇಕು.



['ತತ್ವ ಸೌರಭ']

---

* ಉಪನಿಷದ್=Setting at rest ignorance by Knowledge of the Supreme Spirit= ಪರಮಾತ್ಮ ಜ್ಞಾನದಿಂದ ಅಜ್ಞಾನವನ್ನು ಪರಿಹರಿಸಿಕೊಳ್ಳುವುದು (p.201, Sanskrit-English Dictionary by Sir Monier Monier-Williams)

# ೧೩. ಹಿಂದೂ ಧರ್ಮ ಮತ್ತು ದೇವರು

ತಮ್ಮ ೮೦ನೆಯ ವಯಸ್ಸಿನಲ್ಲಿರುವ ಶ್ರೀ ಪಿ.ಕೋದಂಡರಾಯರು ನೀತಿಯುಕ್ತವಾಗಿ ನಡೆದುಕೊಳ್ಳಬೇಕಾದರೆ ದೇವರನ್ನು ನಂಬಬೇಕಾಗಿಲ್ಲ ಎಂದು ೯–೬–೭೪ರ ಡೆಕ್ಕನ್ ಹೆರಾಲ್ಡ್‌ನಲ್ಲಿ ಬರೆದಿದ್ದಾರೆ. ಅದರಿಂದಲೇ ಶ್ರೀ ಸತ್ಯಸಾಯಿಬಾಬಾ ಎಂಬ ಸಾಧುಗಳು ದೈವಭಕ್ತಿ ಇಲ್ಲದಲ್ಲಿ ನೀತಿವಂತಿಕೆ ಹುಟ್ಟದು ಮತ್ತು ದೈವಭಕ್ತಿಗೆ ಪವಾಡಗಳು ಆಧಾರಗಳಾಗುತ್ತವೆ ಎಂದು ಸಾಮಾನ್ಯರನ್ನು ಕುರಿತು ಅಭಿಪ್ರಾಯ ಪಟ್ಟದ್ದುಂಟು. ಇವೆಲ್ಲ ತರ್ಕ ಮತ್ತು ವ್ಯವಹಾರ ಜ್ಞಾನ. ಅನುಭವದಲ್ಲಿ ದೇವರನ್ನು ಕಂಡವರ ಮಾತು ಬೇರೆ. ಶ್ರೀ ರಮಣಮಹರ್ಷಿಗಳ ಮಾತು ಅಂಥದು. ದೇವರ ಹೆಸರಲ್ಲಿ ಖೂನಿ ಮಾಡುವಂತೆಯೇ ಇತರ ವ್ಯಾವಹಾರಿಕ ತತ್ವಗಳ ಮೇಲೆ ವಿಶ್ವಾಸವಿಟ್ಟು ಸಹ ಹಿಂಸೆ, ಲಂಚ, ವಂಚನೆ, ಅಕ್ರಮ, ಪರಸ್ವಾಪಹರಣ ಮಾಡುವುದುಂಟು. ಆದುದರಿಂದ ಮನುಷ್ಯ ಮಾಡುವುದಕ್ಕೆಲ್ಲ ದೇವರೇ ಆದಿ ಕಾರಣ. ಕೋದಂಡರಾಯರಂತವರ ನಾಸ್ತಿಕತೆಗೂ ದೇವರು ಮಾಡಿದ ಬುದ್ಧಿಪ್ರೇರಣೆಯೇ ಕಾರಣ. 'ತೇನವಿನಾ ತೃಣಮಪಿ ನ ಚಲತಿ' ಎಂದು ಉಪನಿಷತ್ತು ಹೇಳಿರುವುದರಿಂದ.

ಅದ್ವೈತದ ಪ್ರಕಾರ ಬಂಧ ಮೋಕ್ಷಗಳ ಮಾಯೆಯನ್ನು ಜೀವರಿಗೆ ದೇವರೇ ತೋರಿಸುವವನು; ಜೀವಪ್ರಜ್ಞೆಯೂ ಆತನಿಂದಲೇ ಬಂದದ್ದು. ಜೀವರ ಪ್ರತ್ಯೇಕತಾಭಾವವು ಮೋಕ್ಷಾಂತ. ಯಾವ ವಿಜ್ಞಾನಕ್ಕೂ ಅಜ್ಞಾತಾಂಶವಿಲ್ಲದಿಲ್ಲ. ಆ ಅಜ್ಞಾತವೇ ದೇವರು. ಕಾರ್ಯ ಕಾರಣ ಬುದ್ಧಿಯನ್ನು ಆ ದೇವರೇ ಮಾನವರಿಗೆ ಕೊಟ್ಟದ್ದು. ಅದರ ವ್ಯಾಪ್ತಿಯನ್ನು ಮೀರಿದ್ದು ದೇವರ ಇಚ್ಛಾಶಕ್ತಿ. ಇಚ್ಛಾಶಕ್ತಿಯು ಅನುಲ್ಲಂಘನೀಯ. ಕಾರ್ಯ ಕಾರಣ ಯುಕ್ತಿಯನ್ನದು ಬೇಕಾದಾಗ ಉಲ್ಲಂಘಿಸುತ್ತದೆ; ಬೇಡವಾದಾಗ ಬಿಡುತ್ತದೆ, ಅರಿಷಡ್ವರ್ಗವನ್ನು ಜಯಿಸದವರಿಗೀ ಮಾತು ಜೀರ್ಣವಾಗದು. ಅರಿಷಡ್ವರ್ಗವನ್ನು ಜಯಿಸುವ ಶಕ್ತಿಯನ್ನು ದೇವರೇ ಮಾನವರಿಗೆ ಕೊಡಬೇಕು; ಇಲ್ಲವಾದರಿಲ್ಲ.

ಮಾನವನು ತನ್ನ ಕೈಯಲ್ಲಾದುದನ್ನು ಮಾಡುತ್ತಾನೆ. ಅಸಾಧ್ಯವು ಅಸಾಧ್ಯ. ಅವುಗಳಿಗೆ ದೈಹಿಕ, ಮಾನಸಿಕ ವಿಘ್ನಗಳಲ್ಲದೆ ತದಿತರ ವಿಘ್ನಗಳೂ ಕಾರಣಗಳಾಗಬಹುದು. ದೇವರು ವಿಘ್ನೇಶ್ವರ. ವಿಘ್ನಗಳನ್ನು ಆತನು ಒಡ್ಡಬಲ್ಲ; ಹಾಗೆಯೇ ಪರಿಹರಿಸಬಲ್ಲ. ವಿಘ್ನಗಳು ಪ್ರತಿಬಂಧಕಗಳು. ಪ್ರತಿಬಂಧಕಾಭಾವ ವಿಶಿಷ್ಟವಾದರೇನೇ ಕಾರಣ ಸಾಮಗ್ರಿಯು ಕಾರ್ಯವನ್ನು ಉಂಟುಮಾಡಬಲ್ಲದು. 'ಧಿಯೋ ಯೋ ನಃ ಪ್ರಚೋದಯಾತ್' ಎಂಬ ಗಾಯತ್ರಿಯು ದೇವರಿಗೆ ಸರ್ವ ಪ್ರಚೋದಕತ್ವವನ್ನು ಕೊಟ್ಟಿದೆ. ಇದು ವಿಶ್ವ ಹಿಂದೂ ಧರ್ಮ.

ಪ್ರಾಪಂಚಿಕರು ಪ್ರಚೋದ್ಯರು. ಅವರ ವಿಶ್ವರೂಪಗಳನ್ನು ಅರ್ಜುನನಿಗೆ ಶ್ರೀ ಕೃಷ್ಣ ತೋರಿಸಿದನು. ಅಷ್ಟು ಚೆನ್ನಾಗಿ ಶ್ರೀ ಕೋದಂಡರಾಯರು ವಿಶ್ವವನ್ನು ಕಂಡಿಲ್ಲ.

ದೇವರು ಅವರಿಗೆ ಅಂಥ ಶಕ್ತಿಯನ್ನು ಕೊಡಲಿಲ್ಲ. ಆದುದರಿಂದಲೇ ಅವರು ದೇವರಿಲ್ಲವೆಂದು ಬೌದ್ಧಮತ ಹೇಳಿರುವುದೆಂದು ಭಾವಿಸಿ, ಅದಕ್ಕೆ ಅಗ್ರಪ್ರಾಶಸ್ತ್ಯವನ್ನು ಅದು ಉಪದೇಶಿಸಿದ ಸಾರ್ವಮಾನವ ನೀತಿ ನಡತೆಗಳನ್ನಾಧರಿಸಿ, ಕೊಟ್ಟಿದ್ದಾರೆ.

ಬೌದ್ಧಮತದಲ್ಲಿರುವ ನಿರ್ವಾಣವು ಅಚಲವಾದ ಪರಮ ಮುಕ್ತಿ ಎಂದು ಡಾ.ರಾಧಾಕೃಷ್ಣರಂಥವರು ಬರೆದಿದ್ದಾರೆ. ಅದರಲ್ಲಿಲ್ಲವೆಂದ ಆತ್ಮವು ಜೀವದ ಪ್ರತ್ಯೇಕತಾ ಪ್ರಜ್ಞೆಯನ್ನಾಧರಿಸಿದ ನಶ್ವರವಾದ ಆತ್ಮ. ಬದ್ಧತೆ ಮುಕ್ತತೆಗೆ ಸಾಪೇಕ್ಷ ಅಬದ್ಧರು ಬುದ್ಧನ ಉಪದೇಶ ಪಡೆದು ನಿರ್ವಾಣವನ್ನು ಹೊಂದಬೇಕಾಗಿಲ್ಲ. ಬಂಧವು ಅನ್ಯಾಯದ ಅನುಭವ. ಅನ್ಯಾಯಕ್ಕೆ ಒಳಕಾರಣ ಅಥವಾ ಹೊರಕಾರಣಗಳಿರಬಹುದು. ಅನ್ಯಾಯದ ಅಂಶವಿಲ್ಲದ ಲೋಕವ್ಯವಹಾರಗಳ ಪರಮ ಪವಿತ್ರತೆಯು ಅಲಭ್ಯ. ನೂರಕ್ಕೆ ನೂರು ನ್ಯಾಯ ಬದ್ಧತೆಯು ಜಗತ್ತಿನಲ್ಲಿಲ್ಲ; ನೂರಕ್ಕೆ ತೊಂಬತ್ತೊಂಬತ್ತರಷ್ಟು ನ್ಯಾಯವಿರಬಹುದೆಂದು ಊಹಿಸಲು ಆಧಾರವಿರುವ ಸಂದರ್ಭಗಳಲ್ಲೂ ಅಂಶ ನ್ಯೂನತೆಯು ಬುದ್ಧಿವಂತರಿಗೆ ಹೊಳೆಯದಿರದು. ವಿಚಾರಿಗೆ ವಿಶ್ವದ ಸಮಸ್ತ ಗೋಲಗಳೂ ಕಕ್ಷಾಂತರ್ಗತ; ಅದಕ್ಕಿಂತ ಕಡಿಮೆ ವ್ಯಾಪ್ತಿಯ ತರ್ಕವು ಬಹಿಷ್ಕಾರ್ಯ–ಜಗಜ್ಜೀವನ ವಿಶ್ಲೇಷಣೆಯಲ್ಲಿ ತೊಡಗಿದಾಗ.

ಅನ್ಯಾಯವೆಂಬುದು ಅನೀತಿಜನ್ಯ. ಅನೀತಿಯು ಅಹಂಕಾರ, ಕಾಮ, ಕ್ರೋಧ ಮುಂತಾದ ಲೋಭಪ್ರಕೃತಿಜನ್ಯ. ಅಲುಬ್ಧರೇ ಋಗ್ವೇದ ಕಾಲೀನ ಬ್ರಹ್ಮರ್ಷಿಗಳು, ಮಂತ್ರದ್ರಷ್ಟಾರರು. ಆ ಮಟ್ಟದ ಅಲುಬ್ಧತೆ ಯಾವ ಗೃಹಸ್ಥನಲ್ಲೀಗ ಸಾಮಾನ್ಯವಾಗಿ ಕಾಣಲು ಸಾಧ್ಯ? ಲುಬ್ಧರ ದರ್ಶನವು ಈ ದೇಶದಲ್ಲಿ ವೇದಾಂತವೆನ್ನಿಸಿಲ್ಲ. ಲುಬ್ಧರು ಬರೆದ ವೇದಾಂತ ವ್ಯಾಖ್ಯೆಗಳೂ ಹಿಂದುಧರ್ಮವಲ್ಲ. ಹಿಂದೂ ಧರ್ಮದ ಆಭಾಸವನ್ನು ಯಾರು ಖಂಡಿಸಿದರೂ ನ್ಯಾಯ, ಆಭಾಸವು ಅಸತ್ಯ.

ದೇವರು ಪರಮಾರ್ಥ, ಪರಮಸತ್ಯ, ನಿತ್ಯನಿರ್ವಿಕಾರ ಸತ್ಯ, ಪೂರ್ಣ ಸತ್ಯ ಜಗತ್ತು ಅಪೂರ್ಣ. ಅಪೂರ್ಣವು ಆಭಾಸಿಕ. ಅದನ್ನುಳಿದು ಭಾಸನಾದ ದೇವರಲ್ಲಿ ಒಂದಾಗಿರ ಬಯಸುವುದು ಬುದ್ಧಿವಂತರಿಗೆ ಸ್ವಾಭಾವಿಕ. ದೈವತ್ವ=ಪೂರ್ಣತ್ವ Perfection of all the virtues recognised by the most cultured man of India. ಈ virtues ಸುಲಕ್ಷಣಗಳು ಗುಣಾತೀತ ಅಥವಾ ನಿರ್ಗುಣ ಎಂದದ್ದೊಂದು ವೇದಾಂತ ಪರಿಭಾಷೆ. ತತ್ಕಾಲೀನ ಸಂದರ್ಭ ಆ ಪರಿಭಾಷೆಗೆ ಸಮರ್ಥನೆಯನ್ನು ಕೊಟ್ಟಿದೆ.

ದೇವತಾರಾಧನೆಯು ಮುಕ್ತಿಯ ಒಂದು ಮಾರ್ಗವಲ್ಲದೆ ಅದೊಂದೇ ಮಾರ್ಗವೆಂದು ವೇದಾಂತ ಹೇಳಿಲ್ಲ. ಮುಕ್ತಿಯನ್ನೊಲ್ಲದವರ ಮುಕ್ತಿಯ ಅರ್ಥವು ದೇವರನ್ನೊಲ್ಲದವರ ದೇವವ್ಯಾಖ್ಯೆಯಂತೆಯೇ ಸ್ವಕಪೋಲಕಲ್ಪಿತ. ಅದನ್ನು ಖಂಡಿಸಿದರೆ ಯಾವ ಹಿಂದುವೂ ಅಳಬೇಕಾಗಿಲ್ಲ. ಅವರವರಿಗೆ ಬೇಡವಾದ ಸ್ಥಿತಿಯನ್ನು ಅವರವರು ಒಲ್ಲೆವೆನ್ನುತ್ತಾರೆ ಅಷ್ಟೆ. ಹಿಂದು ಧರ್ಮದಲ್ಲಿ ದೇವರಲ್ಲಿಯ ನಂಬಿಗೆಯ ಬಗೆಗೆ ಬಲಾತ್ಕಾರವಿಲ್ಲವೆಂಬುದು ಶ್ರೀ ಕೋದಂಡರಾಯರಿಗೂ ತಿಳಿದ ಸಂಗತಿ. ಬಲಾತ್ಕಾರವೆಲ್ಲವೂ ದೇವರಿಗೇ ಮೀಸಲು;

ಮನುಷ್ಯನು 'ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ' ಎಂಬ ಉಪದೇಶಕ ಮಾತ್ರ ಆಗಬಲ್ಲ. ಅದೂ ದೇವತಾನುಗ್ರಹವಿದ್ದರೆ ಮಾತ್ರ.

ಅವರವರ ತರ್ಕಾಭಿರುಚಿಯು ತರ್ಕಮಿತಿಯನ್ನೂ ವಿಜ್ಞಾನಾಭಿರುಚಿಯು ವಿಜ್ಞಾನಮಿತಿಯನ್ನೂ ಚೆನ್ನಾಗಿ ಅರಿತುಕೊಂಡ ಮೇಲೆ ಮಾತ್ರ ಬುದ್ಧಿವಂತರಿಗೆ 'ಅನ್ಯಥಾ ಶರಣಂ ನಾಸ್ತಿ' ಎಂದು ದೇವರತ್ತ ಬುದ್ಧಿಯು ಹರಿಯುವುದು ಸ್ವಾಭಾವಿಕ. 'ಯದಹರೇವ ವಿರಜೇತ್ ತದಹರೇವ ಪ್ರವ್ರಜೇತ್' ಎಂಬುದು ಧರ್ಮಶಾಸ್ತ್ರಾಜ್ಞೆ. ಸ್ಥಾಯಿಯಾದ ವಿರಾಗವಿಲ್ಲದಲ್ಲಿ ದೇವಸಂಶೋಧನೆಯು ವ್ಯರ್ಥ. ವಿರಾಗವು ಶುದ್ಧ ವೈಯಕ್ತಿಕತೆ, ನಿಷ್ಪಕ್ಷಪಾತತೆ, ನಿಃಸ್ವಾರ್ಥತೆ, ವಸ್ತುನಿಷ್ಠತೆ. 'ಪರಸ್ಯ ನ ಪರಸ್ಯೇತಿ ಮಮೇತಿ ನ ಮಮೇತಿ ಚ' ಎಂಬ ನಿರ್ವಿಕಲ್ಪ ದೃಷ್ಟಿಕೋನ. ಇದು ಮಾನವ ಜೀವನದಲ್ಲಿ ಪಡೆಯಬಹುದಾದ ಆರೋಗ್ಯಕರವಾದ ನ್ಯಾಯನಿಷ್ಠುರತೆ. ಉಳಿದ ನ್ಯಾಯಗಳೆಲ್ಲವೂ ಈ ನ್ಯಾಯದಷ್ಟು ಪರಮಾರ್ಥತೆಯನ್ನು ಉಳ್ಳವುಗಳಲ್ಲ–ಪರಿಪೂರ್ಣವಲ್ಲ. ವಿರಕ್ತಿಯು ಜಗದ್ದ್ವೇಷವಲ್ಲ–ಜಗದ್ ವ್ಯವಹಾರಗಳ ನ್ಯೂನತೆಗಳ ಬಗೆಗೆ ಉದಾಸೀನನಾಗಿ ತೋರುವಂತೆ ವೈಯಕ್ತಿಕ ಜೀವನವನ್ನು ಪ್ರಜ್ಞೆಯಲ್ಲಿ ಪ್ರತ್ಯೇಕಿಸಿಕೊಂಡು ಸಾಕ್ಷೀಭೂತನಾಗಿ ನೋಡುವ ಶಕ್ತಿಯನ್ನು ಪಡೆದಿರುವುದು. ಇದೇ ಆತ್ಮಶುದ್ಧೀಕರಣ. ಶುದ್ಧೀಕರಣವಿರುವುದು ಅನ್ಯಾಯಗಳಲ್ಲಿ ಭಾಗವಹಿಸದಿರುವ ಭಾವವನ್ನು ತಾಳುವುದರಲ್ಲಿ.ಹೆಚ್ಚು ವ್ಯಾಪ್ತಿಯ ನ್ಯಾಯವು ಕಡಿಮೆ ವ್ಯಾಪ್ತಿಯನ್ಯಾಯಕ್ಕೆ ಮಾರ್ಗದರ್ಶಕ. ದೇವರ ವ್ಯಾಪಕತ್ವವು ಅದ್ವಿತೀಯ. ಆದುದರಿಂದ ಅವನ ನ್ಯಾಯವು ಪೂರ್ಣ. ಅದು ಅನ್ಯರಿಗೆ ಅಜೀರ್ಣಕರ. ಆದುದರಿಂದ ಅದೇವರು ದೇವರನ್ನು ಕುರಿತು ಅಸಾಂಗತ್ಯ ಪರಿಹಾರಕ್ಕೆಂದು ಪ್ರಾರ್ಥಿಸುತ್ತಾರೆ; ಕರುಣಿಯಾದ ಅವನು ತನ್ನದೇ ಆದ ರೀತಿಯಿಂದ ಆ ಪ್ರಾರ್ಥನೆಯನ್ನು ಈಡೇರಿಸುವನು. ಆ ರೀತಿಯನ್ನು ಮಾತ್ರ ಮಾನವೇಷ್ಟವು ಪ್ರಾರ್ಥನೆಯಿಂದ ಪಡೆಯಲು ಯಾವಾಗಲೂ ಸಮರ್ಥವಾದೀತೆನ್ನಲು ಸಾಧ್ಯವಿಲ್ಲ. ಕವಿಗಳಿಗಿಂತಲೂ ದೇವರು ಹೆಚ್ಚು ನಿರಂಕುಶ!

ದೇವರ ನಿರಂಕುಶತೆಯೊಂದು ವಸ್ತುಸ್ಥಿತಿಯಾದುದರಿಂದ ಅದರೊಡನೆ ಹೋರಾಡುವುದು ವ್ಯರ್ಥ. ಅದರಿಂದಲೇ 'ಯತ್ನೇ ಕೃತೇ ಯದಿ ನ ಸಿಧ್ಯತಿ ಕೋತ್ರ ದೋಷಃ?' ಎಂಬ ನ್ಯಾಯದ ಸಮಾಧಾನವನ್ನು ಬುದ್ಧಿವಂತರು ಪಡೆಯುತ್ತಾರೆ. ಇಲ್ಲಿ ನಿರಾಶೆಗೆ ಎಡೆಯೇ ಇಲ್ಲ; ದುರಂತವು ಅಭಾವನೀಯ. ದೈವೇಚ್ಛೆ ತಿಳಿಯದಂತಾಗಿರುವಾಗ ಪ್ರಯತ್ನ ದಿಕ್ಕು ತಪ್ಪುವುದು ಸಹಜ. ಅದರಿಂದ ಮಾನವ ಬೇಸರ ಪಡಬೇಕಾಗಿಲ್ಲ. ಅವನು ದೇವರು ಕೊಟ್ಟದ್ದನ್ನು ದೇವರಿಗೆ ಸಮರ್ಪಿಸಿದ ಸಂತೃಪ್ತಿಯಲ್ಲಿರಬಲ್ಲ. ತೃಪ್ತಿಯಿಲ್ಲದಲ್ಲಿ ಶಾಂತಿಯಿಲ್ಲ; ಶಾಂತಿಯಿಲ್ಲದಲ್ಲಿ ಸುಖವಿಲ್ಲ. ಈ ಮಾನಸಶಾಸ್ತ್ರೀಯ ಆರೋಗ್ಯಸೂತ್ರವನ್ನು ಶ್ರೀ ಕೋದಂಡರಾಯರು ಅರಿತಂತಿಲ್ಲ.

ಅನೇಕ ಸಲ ಅತೃಪ್ತಿಯು Neurotics ಅರೆಹುಚ್ಚರನ್ನೂ Psychotics ಪೂರ್ಣ ಹುಚ್ಚರನ್ನೂ ತಯಾರಿಸುತ್ತದೆ. ಅವರ ಬಾಳು ಅತ್ಯಸುಖಕರ, ಅತ್ಯಸಂಸ್ಕೃತ. ಆಸೆಗಳಿಗೆ ಪಾರವಿಲ್ಲದುದರಿಂದ ಅತೃಪ್ತಿ ಮಾನವನನ್ನು ಅನೇಕ ವೇಳೆ ಸುಡುತ್ತದೆ, ಪ್ರಮಾದಕ್ಕೆ

ತಳ್ಳುತ್ತದೆ. ದೇವಲೀನತೆಯು ಅಂಥ ಪರಿಸ್ಥಿತಿಯಿಂದ ಮನುಷ್ಯರನ್ನು ಪಾರು ಮಾಡಿದಂತೆ ಇನ್ನಾವುದೂ ಪಾರು ಮಾಡಲಾರದು. ದೇವರಿಗಿಂತ ಹೆಚ್ಚಿನ ಭವರೋಗಭೇಷಜ ಇನ್ನಾವುದೂ ಇಲ್ಲ. ಅವನ ನಿತ್ಯತೆ ಇನ್ನಾವುದಕ್ಕೂ ಇಲ್ಲ; ಅವನ ಸತ್ಯತೆಯೂ ಹಾಗೇ ಅದ್ವಿತೀಯ ಅನುಪಮ. ಅವನು ಲಿಂಗಾತೀತನು, ಜಾತ್ಯತೀತನು, ವಚನಾತೀತನು– ಎಂಬುದು ಹಿಂದು ವೇದಾಂತದ ಸಿದ್ಧ. ಅವನಿಗೆ ಯಾವ ರೂಪ ನಾಮಗಳನ್ನು ಯಾರು ಬೇಕಾದರೂ ತಮ್ಮ ಅನುಕೂಲಕ್ಕಾಗಿ ಕೊಟ್ಟು ಕೊಳ್ಳಬಹುದು. ಪರರ ಮನಸ್ಸನ್ನು ನೋಯಿಸಲೆಂದು ಅಲ್ಲ. ಪರ ಹಿಂಸೆಯು ದೈವಭಕ್ತಿಗೆ ತಕ್ಕಗುಣವಲ್ಲ. ಹಿಂಸಾಮಯ ದೈವಾರಾಧನೆಯು ಅತ್ಯಜ್ಞಾನ ಜನ್ಯ. ತ್ರಿಕರಣ ಶುದ್ಧವಾದ ಅಹಿಂಸೆಯು ಭಕ್ತನ ಪಾತ್ರತೆಗೆ ನಿಕಷ. ಹಿಂದೂ ಮತದ ಆಭಾಸ ಮಾತ್ರ ಇದನ್ನು ವಿರೋದಿಸೀತು. ದೇವರು ಸಚ್ಚಿದಾನಂದನಾಗಿರುವುದೂ ಆತನು ದುಶ್ಚಿದಾನಂದನಾಗಿರದಿರುವುದೂ ಅಹಿಂಸೆಗೆ ತಕ್ಕ ಆಧಾರ.

ಅಪೂರ್ಣ ಅನ್ಯಾಯಗಳಿಗೆ ನ್ಯಾಯ ಜಗತ್ತಿನಲ್ಲಿ ಅವಕಾಶವಿರುವುದು ಜಗತ್ತೇ ಅಪೂರ್ಣವಾಗಿರುವುದರಿಂದ. ಅದರ ಅಪೂರ್ಣತೆಗೆ ಪೂರ್ಣನಾದ ದೇವರೇ ಮೂಲಾಧಾರ. ಅವನು ಕೊಟ್ಟಷ್ಟು ಶಕ್ತಿಯಿಂದ ಅನ್ಯಾಯ ಪರಿಮಾರ್ಜನೆ ಮಾಡುತ್ತಾ ಹೋಗುವುದೊಂದೆ ಮನುಷ್ಯನ ಸುಸಂಸ್ಕೃತತೆಯ ಲಕ್ಷಣ. ಯಾವ ಬುದ್ಧಿವಂತನೂ ಇದಕ್ಕಿಂತ ಭಿನ್ನವಾದ ಸಂಸ್ಕೃತ ಕರ್ತವ್ಯವನ್ನು ಇದಕ್ಕಿಂತ ಮೇಲೆಂದು ಹೇಳಲಾರ. ಅನ್ಯಾಯ–ನ್ಯಾಯಗಳ ಅರ್ಥ ಬೇರೆ ಬೇರೆಯವರಿಗೆ ಬೇರೆ ಬೇರೆ ರೀತಿಯಲ್ಲಾದಾಗ ಘರ್ಷಣೆ ತಪ್ಪದು. ಜಗತ್ತಿನ ಇತಿಹಾಸದಲ್ಲಿ ಘರ್ಷಣೆ ಆಗ ಈಗ ಬಂದೇ ಬಂದಿದೆ. ಅದರ ಅನಿವಾರ್ಯತೆಗೆ ದೇವರೇ ಮೂಲ ಕಾರಣ. 'ಕರ್ತವ್ಯಮಿತಿ ಕರ್ತವ್ಯಂ' 'ಮಾಮನುಸ್ಮರ ಯುಧ್ಯಚ' 'ಕರ್ಮಣ್ಯೇವಾಧಿಕಾರಸ್ತೇ' ಎಂಬ ಉಪದೇಶಗಳು ಶುದ್ಧ ವೈಜ್ಞಾನಿಕ ಸತ್ಯಗಳು. ಟೆನಿಸನ್ ಕವಿ ಹೇಳಿದಂತೆ 'Try to seek to find and not to yield' 'To fail greatly may sometimes be greater than to succeed' ಎಂಬ ಮಾನವಸಾಹಸದ ಮಾತಿಲ್ಲಿ ಸ್ಮರಣೀಯ. ಮತ್ತು ಯತ್ನಕ್ಕೆ ಕಾರ್ಯಸಾಧನೆಯಾಗುವವರೆಗೆ ಅಂತ್ಯವೆಂಬುದೇ ಇಲ್ಲ; ಮಾನವನ ಸಹಿಷ್ಣುತೆಗೆ ಮಾತ್ರ ಅಂತ್ಯವಿದೆ, ಶಕ್ತಿಗೆ ಮಾತ್ರ ಕ್ಷೀಣದೆಶೆಯಿದೆ– ಅದೂ ದೇವದತ್ತ, ದೈವಾಧೀನ.

ಕರ್ಮಠತೆಯು ಹಿಂದು ಧರ್ಮದ ಅನಿವಾರ್ಯ ಅಂಗವಲ್ಲ. ಅತಿಕರ್ಮ ಅಕರ್ಮಗಳೆರಡೂ ಅವ್ಯಾವಹಾರಿಕ, ಅಪ್ರಯೋಜಕ ಅಥವಾ ದುಷ್ಪರಿಣಾಮಕರ. ಮಾನವನು ಪರಿಮಿತ ಮಾನದಂಡದಿಂದ ಸೃಷ್ಟನಾದವನು. ವಿವಿಧ ಮಾನವರ ಮಿತಿಗಳು ವಿವಿಧ. ಯಥಾಶಕ್ತಿ, ಯಥಾಮಿತಿ ಪರೋಪಕಾರ ಮಾಡುವುದೇ ಸತ್ಕರ್ಮ. ದೇವರು ಮಾಡುವುದೆಲ್ಲ ಪರೋಪಕಾರ. ಏಕೆಂದರೆ ಅವನಿಗೆ ಸ್ವಂತಕ್ಕಾಗಿ ಏನೂ ಆಗಬೇಕಾಗಿಲ್ಲ. ಅವನು ಶಿಕ್ಷೆ ವಿಧಿಸಿದರೂ ಅದು ಉಪಕಾರವೇ, ಶಿಕ್ಷಣವೇ. ಅವನಿಗಿಂತ ದೊಡ್ಡ ತಂದೆಯೂ ಇಲ್ಲ, ತಾಯಿಯೂ ಇಲ್ಲ. ಗುರುವೂ ಇಲ್ಲ. ಅವನಿಗೆ ನಮ್ಮ ಹಿತ

ತಿಳಿದಷ್ಟು ನಮಗೆ ತಿಳಿಯದು. ನಮ್ಮ ಭವಿಷ್ಯಜ್ಞಾನ ಎಂದೂ ನೂರಕ್ಕೆ ನೂರು ಖರೆಯಾಗದು. ಆದುದರಿಂದ ದೇವರಿಗೇ ನಮ್ಮ ಒಳಿತು ಸಂಪೂರ್ಣವಾಗಿ ಗೊತ್ತು ಎಂದು ಭಾರತೀಯ ತಿಳಿಯುತ್ತಾನೆ. ಅಸಂಪೂರ್ಣ ಜ್ಞಾನಿಯು ಅಜ್ಞಾನಿ. ಅಜ್ಞಾನಿಯು ದೇವರಿಲ್ಲವೆಂದರೆ ದೇವರಿಗೆ ಕೋಪ ಬರುವುದಿಲ್ಲ. ದೇವರು ಎಂದರೆ ಪೂರ್ಣ ಜ್ಞಾನ, ಪೂರ್ಣ ಸತ್ಯ, ಪೂರ್ಣ ಆನಂದ ಎಂದು ನಂಬಲು ಅತ್ಯಂತ ಅರ್ಹರಾದ ಋಷಿಗಳು ಹೇಳಿದ್ದಾರೆ. ಪೂರ್ಣತೆ ಯಾರಿಗಾದರೂ ಬೇಡವಾದ ವಸ್ತುವೆ? ಸಾಧ್ಯವಾಗದೆನ್ನಿಸಬಹುದು. ಆದರೆ ಬೇಡವೆನ್ನಿಸಲಾರದು–ಬುದ್ಧಿವಂತರಿಗೆ. ಆದುದರಿಂದ ಭಾರತೀಯನು ಪೂರ್ಣತೆ ಬೇಕೆಂದು ನಿತ್ಯವೂ ಪ್ರಾರ್ಥಿಸುತ್ತಾನೆ. ಅಂದರೆ 'ನೀನು' ಬೇಕೆಂದು ದೇವರನ್ನು ಬೇಡುತ್ತಾನೆ; ಬೇಡಿ ಬೇಡಿ ಅವನೇ ಆಗುವನೆಂಬುದು ದೇವಾರಾಧಕನ ಶ್ರದ್ಧೆ. ಶ್ರದ್ಧೆ ಎಂಥದೋ ಮನುಷ್ಯ ಅಂಥವನಾಗುವನು ಎಂಬುದು ಮನಃಶಾಸ್ತ್ರಸಿದ್ಧ. ರಾವಣನಾಗಬೇಕೆಂದು ಹಗಲಿರುಳೂ ಅವನ ಚರಿತ್ರೆಯನ್ನು ಅನುಕರಿಸುವವನು ರಾವಣನಾಗುವನು; ರಾಮನಾಗಬೇಕೆಂದು ರಾಮನ ಜೀವನ ಧರ್ಮವನ್ನು ಅನುಸರಿಸುವವನು ರಾಮನಾಗುವನು!



**['ಸೇವಾಸದನ'– ಆಗಸ್ಟ್ ೭೪ – ಪುಟ ೯]**

# ೧೪. ಮಾನವಿಕತೆ ಮತ್ತು ಭಾರತೀಯತೆ

Humanities ಎಂದರೆ ಮಾನವಿಕತೆ, ಅಭಿಜಾತ ವಾಙ್ಮಯದ ರಾಶಿ. ಅಭಿಜಾತ್ಯವಿರುವುದು ಸತ್ ಸಂಪ್ರದಾಯದಲ್ಲಿ. 'ಸತ್' ಎಂದು ಭಾರತೀಯ ನಂಬುವುದು ನಿತ್ಯ ಮಂಗಲಕರ ಧ್ಯೇಯ; ಆ ಆತ್ಯಂತಿಕ ಸರ್ವೋದಯ ದೃಷ್ಟಿ ಅನುಸ್ಯೂತವಾಗಿರುವ ವಿಚಾರ ಪರಂಪರೆ ಮಾನವಿಕತೆ ಎನ್ನಿಸೀತು. ಅದೇ ವಿದ್ಯೆಯಿಂದ ಬರುವ ವಿನಯ (Politeness). ರಾಜವಿದ್ಯೆಯು ವಿನಯಪ್ರಧಾನವೆನ್ನುತ್ತದೆ ಸ್ಮೃತಿ. ಹಿಂದು ನಾಗರಿಕತೆಯ ಆದರ್ಶಗಳಲ್ಲಿದು ಗಣ್ಯ.

'ಅವಿನೀತಂ ಮಗನೇ? ಎಂದು ಕೇಳಿದ ಕವಿಗಿದು ಗೊತ್ತು. ನೀತಿಯ ಸಾಮಾನ್ಯತೆ, ವಿಶಿಷ್ಟತೆಗಳು ಪ್ರಸಿದ್ಧ. ಅವುಗಳಲ್ಲಿ ಸಮನ್ವಯ ಇರುವುದು ನಿರೀಕ್ಷಿತ. ಅಭಿಜಾತರ ಜಾತಿಯೇ ಜಾತಿ, ಮಿಕ್ಕ ಜಾತಿ 'ಜಾತಿ'ಯೇ ಅಲ್ಲ. ಇದನ್ನು ನಂಬಿದರೆ ಜಾತ್ಯತೀತತೆಗೆ ಅವಕಾಶ ಸಿಕ್ಕದು; ಅಥವಾ ಅಭಿಜಾತ್ಯದ ಜಾತಿಯೇ ಜಾತ್ಯತೀತ. ಭಾರತೀಯ ವಾಙ್ಮಯದ ಸೃಷ್ಟಿಯ ಆದಿ ಅಭಿಜಾತ್ಯವುಳ್ಳದ್ದು. ವೇದಗಳ ಮೂಲಕಲ್ಪನೆ ಅಭಿಜಾತ, ಮಾನವಿಕ.

ವೈಜ್ಞಾನಿಕತೆಯಲ್ಲಿ ಅವೈಜ್ಞಾನಿಕತೆ ಸೇರುವಂತೆ ಅಭಿಜಾತ ಸಂಪ್ರದಾಯದಲ್ಲಿ ಅನಭಿಜಾತತೆ ಸೇರಿದ್ದುಂಟು. ಆಗ ನಾಗರಿಕತೆಯಲ್ಲಿ ಪರಿವರ್ತನ ದೃಷ್ಟಿ ಮೂಡುವುದು. ಸತ್ ಸಂಪ್ರದಾಯಕ್ಕೆ ಅನುಗುಣವಾದ ಪರಿವರ್ತನೆಯು ವಿಕಾಸ, ಪ್ರಗತಿ. ತದ್ ವಿರುದ್ಧವಾದುದು ಅದರ ಆಭಾಸ, ತೋರಿಕೆ. ಭಾಸವಿದ್ದಲ್ಲಿ ಆಭಾಸವಿರುವುದು ದ್ವಂದ್ವ ನಿಯಮ. 'ದ್ವಂದ್ವಃ ಸಾಮಾಸಿಕಸ್ಯ ಚ' ಎಂದು ಗೀತೆ ಹೇಳಿರುವುದು ಇಲ್ಲಿ ಮನನೀಯವಾದ ಜಗಲ್ಲಕ್ಷಣ. ಪರಮಾತ್ಮ ಅದರ ಮೂಲ. ಅವನ ಪ್ರಕೃತಿ ಅವನ ಶಕ್ತಿ. ಜನಕ–ಜನ್ಯ ಭಾವವಿಲ್ಲದ ಕಾರಣ–ಕಾರ್ಯಯೋಜನೆಯಿಲ್ಲ.

ನಮ್ಮ ನಾಗರಿಕತೆಯಲ್ಲಿರುವ ಅಭಿಜಾತ್ಯವನ್ನು ನಮ್ಮ ಅಭಿಜಾತ ವಾಙ್ಮಯದಲ್ಲಿ ಕಂಡುಕೊಳ್ಳುವುದೇ ಪರಮಾರ್ಥಶೋಧ. 'ಮನ್ಮನಾಭವ ಮದ್‌ಭಕ್ತೋ ಮದ್ಯಾಜೀ ಮಾಂ ನಮಸ್ಕುರು ಮಾಮೇ ವೈಷ್ಯಸಿ ಸತ್ಯಂ' ಎಂಬುದು ಭಗವದಾಶ್ವಾಸನ. ಕೃಷ್ಣಧರ್ಮವೆಂಬುದಿಲ್ಲಿ ಇಂಗಿತ. ಕೃಷ್ಣಾಚಾರವು ನಮ್ಮ ರಾಜಕೀಯ, ಆರ್ಥಿಕ, ಕಲಾತ್ಮಕ ಚಟುವಟಿಕೆಗಳಲ್ಲಿ ಹಾಸುಹೊಕ್ಕಾಗಿರಬೇಕೆಂಬುದೇ ಇಲ್ಲಿ ಉದ್ದಿಷ್ಟ. ಕೃಷ್ಣ ಹೋರಾಡಿದ್ದು ಇಂದಿನ ಭಾಷೆಯಲ್ಲಿ Social Justice ಸಾಮಾಜಿಕ ನ್ಯಾಯಕ್ಕಾಗಿ. ಅವನ ಇಡೀ ಜೀವನದಲ್ಲಿ ಅವನ ವೈಯಕ್ತಿಕವಾದ ಲೌಕಿಕ ಸಂಪಾದನೆ ಅಪ್ರಧಾನ. ಅದು ಸರ್ವಪ್ರಧಾನವಾದಾಗ ರಾಷ್ಟ್ರದ ರಾಷ್ಟ್ರತ್ವ ದುರ್ಬಲವಾಗುವುದು. ಆದುದರಿಂದಲೇ ಇಂದು 'ಸಮಾಜವಾದ' ಪ್ರಜಾಪ್ರಭುತ್ವವಾದಿಗಳಿಗೆ ಪ್ರಿಯವಾಗಿದೆ. ವೈಯಕ್ತಿಕವಾದ ಆಸ್ತಿಯ ಹಕ್ಕು ಸಮಾಜವಾದಕ್ಕೆ ವಿರುದ್ಧ ಎಂದು ಅನೇಕರ ಭಾವನೆ. ಇದು ಸುಳ್ಳು.

ಅಸ್ತಿತ್ವವೇ ನಮ್ಮ ಸರ್ವೋಚ್ಚ ಆಸ್ತಿ. ಅಸ್ತಿತ್ವ ಪೋಷಕವಾದ ಅಹಿಂಸಾದಿ ಧರ್ಮಗಳು ಎಲ್ಲ ಆಸ್ತಿಗಳ ಆಧಾರ. ನಿತ್ಯಾಸ್ತಿತ್ವದ ಎಚ್ಚರವೇ ಜೀವನ್ಮುಕ್ತಿ. ಅನಿತ್ಯವಾದ ಅಸ್ತಿತ್ವವು ಅಪ್ರಧಾನ. ವ್ಯಾವಹಾರಿಕವಾಗಿ ಕಸಿದುಕೊಳ್ಳಬಾರದೆಂದು ನಿಯಮಿಸಿದ ಆಸ್ತಿಯು ನಿತ್ಯವಾದ ಆಸ್ತಿ. ಪರರ ದೇಹವನ್ನು ಕಸಿದುಕೊಳ್ಳುವುದು ಕೊಲೆ. ವ್ಯಕ್ತಿಯ ಆಸ್ತಿಯನ್ನು ಕಸಿದುಕೊಳ್ಳುವದು ಕಳವು. ರಾಷ್ಟ್ರರಾಶಿಯಲ್ಲಿ ರಾಷ್ಟ್ರವೂ ಒಂದು ವ್ಯಕ್ತಿ. ಸರ್ವಾಧಿಕ ವ್ಯಕ್ತಿಯು ಜಗತ್, ವಿಶ್ವ, ಪ್ರಪಂಚ. ಕೃಷ್ಣನು ಅದರ ಆಧಾರವೆನ್ನಿಸಿದ್ದರಿಂದ ಪುರುಷೋತ್ತಮ–ತತ್ವಜ್ಞಾನದಲ್ಲಿ.

ಕನಿಷ್ಠ ಪ್ರಮಾಣದ ಅತ್ಯಾವಶ್ಯಕ ಜೀವನ ಸೌಕರ್ಯಗಳು ಪ್ರತಿ ಪ್ರಜೆಗೂ ದೊರಕಬೇಕೆಂಬ ಸಮಾಜವಾದದಲ್ಲಿ ಅವನಿಗೆ ದೊರಕುವುದೆಲ್ಲ ಅವನ ಆಸ್ತಿಯಾಗದೆ ಉಳಿಯುವುದೇ? ಆಸ್ತಿಯ ಕಲ್ಪನೆಯು ಪ್ರಪಂಚ ಜೀವದಲ್ಲಿ ವೈಯಕ್ತಿಕ ಮತ್ತು ಸಾಮೂಹಿಕ ಅಸ್ತಿತ್ವಗಳಿಗೆ ಮೂಲಾಧಾರ. ಸಮೂಹಕ್ಕೆ ವ್ಯಕ್ತಿತ್ವ ಬರುವುದು ಸಮೂಹದ ಸಾಂಸ್ಕೃತಿಕ ನಾಯಕನಿಂದಲೇ. ನಾಯಕತೆಯು ವ್ಯಕ್ತಿತ್ವದ ಕಲ್ಪನೆಯಿಂದ ಅವಿಚ್ಛಿನ್ನ. ಅದೇ Organiser ಸಂಘಟಕ ಶಕ್ತಿ. ಸಮಾಜಕ್ಕೆ ಸಂಘಟನೆಯೇ ಉಸಿರು.

ಅವಿಭಕ್ತತೆ–ವಿಭಕ್ತತೆಗಳ ಸಮನ್ವಯವಿಲ್ಲದೆ ಸಾಮರಸ್ಯವು ಅವ್ಯವಹಾರ್ಯ. ಆದುದರಿಂದ ಸಾಮಾನ್ಯ ಜೀವನದ ಮಾನ್ಯ ನಿಯಮದ ಪ್ರಕಾರ ವ್ಯಕ್ತಿತ್ವ–ಸಮಾಜತ್ವಗಳೆರಡೂ ಸತ್ಯ.ಸ್ವಾತಂತ್ರ್ಯವು ಸುಖಕರವೆಂಬ ಕಲ್ಪನೆ ಇರುವ ತನಕ ವ್ಯಕ್ತಿತ್ವವಿಲ್ಲದಂತೆ ಮಾಡುವುದು ನರಕೋನ್ಮುಖ. ವ್ಯಕ್ತಿತ್ವಗಳ ಅನುಪಾತಿಕ ಸಮಾನತೆ Social Justice ಸಾಮಾಜಿಕ ನ್ಯಾಯದ ಆರ್ಥಿಕ ಮುಖ. ಆದುದರಿಂದಲೇ ಉಳುವವನಾದರೂ ಇಂದು 'ಒಡೆಯ'ನಾಗಬೇಕಾಯಿತು. ಸ್ವಾತಂತ್ರ್ಯದಂತೆಯೇ ಒಡೆಯತನವಾದರೂ ಸೀಮಿತ–ಅನುಪಾಹಿತವಲ್ಲ. ಆದರೂ 'ಒಡೆಯತನ' ನಿರ್ಮೂಲನವಾಗದು. ಸಮಷ್ಟಿಯ ಒಡೆಯತನ ಎಂದು ಹೇಳಿಕೊಂಡಾಗಲೂ ಆಳುವ ಯಜಮಾನ(ಅಧಿಕಾರಿ) ಒಬ್ಬನೇ ಮೇಲ್ತುದಿಯಲ್ಲಿ.

'ದೊಣ್ಣೆ ಯಾರದೋ ಎಮ್ಮೆ ಅವನದು' ಎಂಬುದನ್ನು ತಪ್ಪಿಸಲು ಹೊರಟ ಪ್ರಜಾಪ್ರಭುತ್ವಗಳಲ್ಲಿಯೂ ದೊಣ್ಣೆ ಅಧ್ಯಕ್ಷನ ಕೈಯಲ್ಲೋ ಪ್ರಧಾನಿಯ ಕೈಯಲ್ಲೋ ಇರುವುದು ಅನಿವಾರ್ಯವಾಯ್ತು. ಅವರು ಆಯ್ಕೆ ಹೊಂದುವುದಕ್ಕೂ ಆಯ್ಕೆ ಮಾಡಿಸಿಕೊಳ್ಳುವುದಕ್ಕೂ ಅಂತರ ಕಡಿಮೆಯಾಗುತ್ತ ಹೋದುದು ಸ್ಪಷ್ಟ. ಆದುದರಿಂದ ಪದ್ಧತಿಗಳಲ್ಲಿಯ ಲೋಪದೋಷಗಳಿಗಿಂತ ಮನುಷ್ಯನ ಲೋಪದೋಷಗಳೇ ಪ್ರಬಲ ಎಂಬುದು ಸ್ಪಷ್ಟವಾಗುತ್ತದೆ.

ಐತಿಹಾಸಿಕವಾಗಿ ಪದ್ಧತಿಗಳಿಗೆ ಬಾಲ್ಯ, ಯೌವನ, ವಾರ್ಧಕ್ಯ, ಮರಣಗಳಿರುವುದು ಕಂಡು ಬರುತ್ತದೆ. ಇದಕ್ಕೆ ಮಾನವನೇ ಉದ್ದಕ್ಕೂ ಕಾರಣ. ಆದಮನಿಗೆ ಜೀವನದ ನಿತ್ಯತೆ ಬೇಸರ ಬಂದು ಅನಿತ್ಯತೆಯನ್ನು ಬೇಡಿ ಪಡೆದುಕೊಂಡನೆಂಬ ಕಥೆಯ ಹಾಗೆ ಇನ್ನಾವ ಕಾರಣವೂ ಇರದೆ ಹೋದರೂ 'ಬೇಸರ' ಎಂಬ ಮಾನಸಿಕ ರೋಗದ ದೆಸೆಯಿಂದ ಪದ್ಧತಿಗಳು ಅಳಿದು ಹೋಗುವುವು. ಬೇಸರದ ಕಾರಣ ಸಮತ್ವರಾಹಿತ್ಯ.

ಸಮತ್ವವನ್ನು ಗೀತೆ ಯೋಗವೆಂದಿದೆ. ಯಾವುದರ ಸಮತ್ವ? ದ್ವಂದ್ವಗಳ ಬೆಲೆಯನ್ನು ಸಮನಾಗಿ ನೋಡುವುದು ಸಮತ್ವ. ಅಂಥ ಮನಃಸ್ಥಿತಿ ಸುಲಭ ಸಾಧ್ಯವೇ? ಅದಕ್ಕೇನು ಬೇಕು? ತಕ್ಕವಿದ್ಯಾಭ್ಯಾಸಬೇಕು. ಕೆಲವರು ತಾಮಸರಾಗಿಯೂ ಕೆಲವರು ರಾಜಸರಾಗಿಯೂ ಹುಟ್ಟಿ ಬೆಳೆಯುತ್ತಾರೆ. ಸಾತ್ವಿಕರಾಗಿ ಹುಟ್ಟಿ ಬೆಳೆಯುವವರು ವಿರಳ. ಅಂಥ ದೇವ ಸಂಸ್ಕಾರ ಕೊಡುವ ವಿದ್ಯೆಯೇ ಸದ್‌ವಿದ್ಯೆ. ಮಾನವಿಕತೆಯಲ್ಲಡಗಿದ 'ಮಾನವೀಯತೆ' ಅದರಿಂದ ಮಾತ್ರ ಹುಟ್ಟೀತು.

Modern Indian Education is dominated by the aim of passing examinations with high honours; This aim was practically non-existant in Ancient India–ಆಧುನಿಕ ಭಾರತದಲ್ಲಿ ಪರೀಕ್ಷೆ ಪಾಸು ಮಾಡಿಬಿಟ್ಟರೆ ಆಗಿ ಹೋಯ್ತು; ಅದರಲ್ಲಿ ಉತ್ತಮ ದರ್ಜೆಯಲ್ಲಿ ತೇರ್ಗಡೆ ಹೊಂದಿದರೆ ಮುಗಿಯಿತು. ಈ ಗುರಿ ಪ್ರಾಚೀನ ಭಾರತೀಯ ವಿದ್ಯಾಭ್ಯಾಸದಲ್ಲಿ ವ್ಯಾವಹಾರಿಕವಾಗಿ ಇರಲಿಲ್ಲ' ಎಂದು ಡಾ.ಎ.ಎಸ್.ಅಳ್ತೇಕರರು ಹೇಳಿದ್ದಾರೆ. ವ್ಯಾವಹಾರಿಕ ಪರಿಣಾಮದ ದೃಷ್ಟಿಯಿಂದ, ಪರೀಕ್ಷೆ ಇಲ್ಲದ ವಿದ್ಯಾಭ್ಯಾಸಕ್ಕೆ ಅರ್ಥವಿಲ್ಲ; ಆದರೆ ಪರೀಕ್ಷೆ ಪಾಸಾದ ಬಳಿಕ ಕಲಿತದ್ದೆಲ್ಲವನ್ನೂ ಮರೆತರೂ ಒಬ್ಬ ವಿದ್ಯಾವಂತನೆನ್ನಿಸಿಕೊಳ್ಳುವ ಸಾಮಾಜಿಕ ಆವರಣವು ಕೇಡಿಗೆ ಕಾರಣ. 'ಸ್ಮೃತಿಭ್ರಂಶಾದ್ ಬುದ್ಧಿನಾಶಃ' ಎಂದು ಗೀತೆ ಹೇಳಿದ್ದು ಇಂಥ ಪರಿಣಾಮವನ್ನು ಊಹಿಸಿಯೇ. ವಿದ್ಯೆ ಮರೆತು ಹೋದರೆ ಅವಿದ್ಯೆ ಚಿಗುರುತ್ತದೆ. ಅವಿದ್ಯೆಯೇ ಅಪಮಾನವೀಯತೆಗೆ ಬೀಜ. ಮರೆಯದಂತೆ ಬದುಕುವ ವಿದ್ಯೆ ಚಿಕ್ಕಂದಿನಿಂದ ರೂಢವಾಗಿರಬೇಕು. ಈಗ ರೂಢವಾಗುತ್ತಿಲ್ಲ. ಆತ್ಮದ ವ್ಯಾಪಕತ್ವ ಮರೆಯದೆ ಇರಬೇಕಾದ ಧರ್ಮ. ಇಲ್ಲಿ ವ್ಯಷ್ಟಿತ್ವವು ಸಮಷ್ಟಿಯನ್ನು ಗರ್ಭೀಕರಿಸಿಕೊಂಡಿರುತ್ತದೆ. ನಿತ್ಯತೆ–ಪೂರ್ಣತೆಗಳಿಲ್ಲದ ಆತ್ಮವು ಆತ್ಮವಲ್ಲ.

ಆಧ್ಯಾತ್ಮಿಕತೆಗೂ ಅಹಂಕಾರಿಕತೆಗೂ ಅಜಗಜಾಂತರವಿದೆ. Ego-centric ಅಹಂನಿಷ್ಠ ವ್ಯಕ್ತಿತ್ವವನ್ನು ಸರ್ವಪ್ರಧಾನವೆಂದು ಭಾರತ ಹಿಂದೆ ನಂಬಿರಲಿಲ್ಲ. ೧೨ನೆಯ ಶತಮಾನದಲ್ಲಿ ವೈಯಕ್ತಿಕತೆಯ ಆತ್ಯಂತಿಕ ನಿತ್ಯತೆಯ ವಾದ ಬೆಳೆಯಿತು. ಅಲ್ಲಿಂದ ಭಾರತದ ಸಾಂಸ್ಕೃತಿಕ ಅವನತಿ ಸ್ಪಷ್ಟವಾಗಿ ಆರಂಭವಾಯ್ತು; ಬ್ರಿಟಿಷ್ ಚಕ್ರಾಧಿಪತ್ಯ ಸ್ಥಾಪಿತವಾದಾಗ ಅದು ಪರಾಕಾಷ್ಠತೆಯನ್ನು ಮುಟ್ಟಿತು; ಎಂಬುದು ಇಡೀ ಭಾರತವನ್ನು ವೈನತೇಯ ದೃಷ್ಟಿಯಿಂದ ನೋಡಿದರೆ ಗೊತಾಗುತ್ತದೆ. ಈಗ ಆತ್ಮವು ಅಹಮ್ಮಿಗಿಂತ ಭಿನ್ನವಾಗಿಲ್ಲ–ಅನೇಕ ನೇತಾರರಿಗೆ. ಅಂಥವರ ಸಮಾಜವಾದವು 'ಸಮಜ'ವಾದವಾಗಿ ಪರಿಣಮಿಸಿದರೆ ಆಶ್ಚರ್ಯ ಪಡಬೇಕಾಗಿಲ್ಲ. ಪರದೇಶಗಳಲ್ಲಿ ಕೆಲವು ಅಹಮಾತ್ಮರು ಸಮಾಜವಾದೀಯ ಸಮಾಜವನ್ನು ಸ್ಥಾಪಿಸಿಲ್ಲವೇ? ಎಂದು ಕೇಳಬಹುದು. ಆದರೆ ಅದರ ಸ್ವರೂಪ ಪರದೇಶೀಯರಿಗೆ ಕೆಲ ಕಾಲ ಚೆಂದವೆನ್ನಿಸೀತು; ನಮಗಲ್ಲ. ಜೀವನದ ಭಾರತೀಯ ಅಭ್ಯಾಸಗಳು ಅಭಿರುಚಿ ನಿರ್ಮಾಪಕವಾಗಿರುವುದರಿಂದ ಪಾಶ್ಚಾತ್ಯ ಗ್ರಂಥಗಳ ಮೂಲಕ ಪರಿಚಿತವಾದ ಸಮಾಜವಾದವು ಅಭಾರತೀಯ; ಅಪಥ್ಯ. ಭಾರತೀಯ ಸಮಾಜವಾದವು ಗಾಂಧ್ಯುಕ್ತ.

ಅದಕ್ಕೆ ದಿ.ಜೆ.ಸಿ.ಕುಮಾರಪ್ಪನವರು ಬರೆದ ವ್ಯಾಖ್ಯೆ ಅಗತ್ಯ; ಗುರುಕುಲ ವಿದ್ಯಾಭ್ಯಾಸದ ಪೂರ್ಣ ಸ್ವರೂಪವು ಜಾರಿಗೆ ಬರುವುದು ಅನಿವಾರ್ಯ. ಗುರುಪರಾಧೀನತೆ ಸದ್ಗುರುವರಣಕ್ಕೆ ಉತ್ತರಕಾಲೀನ. ಗುರು ಲಘುವಾಗಿರುವುದು ಇಂದಿನ ವಿದ್ಯಾಭ್ಯಾಸದಲ್ಲಿರುವ ಸರ್ವದೋಷಹೇತು.

**'ಜಡಾನಾಮವಿವೇಕಾನಾಂಅಶೂರಾಣಾಮಪಿ ಪ್ರಭೋ ।**

**ಭಾಗ್ಯಭೋಗ್ಯಾನಿ ರಾಜ್ಯಾನಿಸಂತ್ಯನೀತಿಮತಾಮಪಿ ॥**

ಎಂಬ ಪರಿಸ್ಥಿತಿಯಿಂದ ಪ್ರಜಾಪ್ರಭುತ್ವ–ಸಮಾಜವಾದಗಳು ನಷ್ಟಪ್ರಾಯವಾಗುವುವು. ನಾಮಮಾತ್ರದವುಗಳೆನ್ನಿಸುವುವು. ಜಡರನ್ನು ಅಜಡರೆಂದೂ ಅವಿವೇಕಿಗಳನ್ನು ವಿವೇಕಿಗಳೆಂದೂ, ಹೇಡಿಗಳನ್ನು ಶೂರರೆಂದೂ ಯೇನಕೇನ ಪ್ರಕಾರೇಣ ಪ್ರಸಿದ್ಧರಾಗುವವರು ಭಾಗ್ಯವಂತರೆಂದೂ ಗ್ರಹಿಸಬೇಕೆಂದು ಒತ್ತಾಯಿಸುವ ಆಗ್ರಹದ ಸಂನಿವೇಶವು ನಾಮಮಾತ್ರ ಸತ್‌ಪ್ರಭುತ್ವಗಳಲ್ಲಿ ಸಹಜ; ನಾಮಮಾತ್ರ ಸ್ವಾತಂತ್ರ್ಯಕ್ಕೆ ಗುರುತು. ಜಗತ್ತಿನಲ್ಲಿ ರೂಪವಿಲ್ಲದ ನಾಮಕ್ಕೆ ಅರ್ಥವೆಷ್ಟು? ನಾಮರೂಪಾತೀತವಾದ ಆತ್ಮದ ಅನುಭಾವಿಕತೆ ಶ್ರದ್ಧಾಮೂಲವಾಗಿರದಾಗ ಲೋಕಾಚಾರಗಳು ಗಣಾಚಾರಗಳಲ್ಲದೆ ಶಿವಾಚಾರಗಳಾಗಲಾರವು. ನಿಃಶಸ್ತ್ರೀಕರಣದ ಪರಿಷತ್ತುಗಳು ಬರಿಗುಲ್ಲು ನಿದ್ದೆಗೇಡೆನ್ನಿಸದಿರವು.

'ಇಂದು ಯಾವುದೇ ಕಾಲೇಜು, ವಿಶ್ವವಿದ್ಯಾಲಯ, ಸಂಶೋಧನ ಸಂಸ್ಥೆಗಳಿಗೆ ಹೋಗಿ ನೋಡಿದರೆ ಹೆಚ್ಚಿನ ಸಂಶೋಧಕರು ಹತ್ತು ರೂಪೈ ಡಿ.ಎ.ಹೇಗೆ ಗಿಟ್ಟಿಸಬೇಕೆಂಬ ವಿಚಾರದಲ್ಲಿರುತ್ತಾರೆಯೇ ಹೊರತು, ತನ್ನ ಕ್ಷೇತ್ರದಲ್ಲಿ ತನ್ನ ಕೊಡುಗೆ ಏನು? ಅದು ಹೇಗಿರಬೇಕು? ಎನ್ನುವುದರ ಕಡೆಗೆ ಲಕ್ಷ್ಯ ಕೊಡುವುದು ತೀರ ಕಡಿಮೆ' ಎಂದದ್ದು ಶ್ರೀ ಕೃಷ್ಣಾನಂದ ಕಾಮತ್; ಇದಕ್ಕೆ ಯಾರು ಹೊಣೆ?

'ಉಪಾಧ್ಯಾಯಾಶ್ಚ ವೈದ್ಯಾಶ್ಚ ಕಾರ್ಯಂತೇ ಅಪ್ರಯೋಜಕಾಃ' ಎಂಬ ಧೋರಣೆಯನ್ನು ತಾಳಿದೆ ಉಪಾಧ್ಯಾಯ ನಿಯಾಮಕ ಸಂಸ್ಥೆಗಳು, ನಿಯುಕ್ತ ಉಪಾಧ್ಯಾಯತ್ವದಲ್ಲಿಂದು ಗುರುತ್ವ ಕಡಿಮೆಯಾಗಿ ಹೋಗಿದೆ. ಅನಿಯುಕ್ತರ ಗುರುತ್ವ ಸುದುರ್ಲಭ ಮತ್ತು ಅನಪೇಕ್ಷಿತ. ಆದುದರಿಂದ ಗುರುಗಳು ಸತ್ಪ್ರಜಾ ನಿರ್ಮಾಪಕರಾಗುವುದು ಅಸಂಭವ. ಕಾರ್ಯಕಾಲೇಪಿ ಅಪ್ರಯೋಜಕಾಃ ಎನ್ನಿಸುವ ಗುರುಪರಂಪರೆ ಈಗ ಕಾಲಿಟ್ಟಿದೆ! ಕಾಲ ಕೆಟ್ಟು ಹೋಗುವುದೂ ಮಾನವಿಕತೆ ಅಮಾನವಿಕತೆಯಾಗುವುದೂ ಹೀಗೆ!

We see to-day that in the strict sense there are no exact sciences ಖಚಿತಾರ್ಥದಲ್ಲಿ ಇಂದು ಖಚಿತ ವಿಜ್ಞಾನಗಳೆಂಬಂಥವುಗಳಿಲ್ಲ ಎಂದದ್ದು ಜೆ.ಬ್ರೋನೋವ್‌ಸ್ಕಿ. ವಸ್ತುಸತ್ಯ ಪ್ರಧಾನರಲ್ಲಿ ಇದನ್ನು ತಿಳಿದವರಿಂದು ಬಹಳ ಕಡಿಮೆ. ಆದುದರಿಂದ 'ಟ್ರೇನಿಂಗಿನಿಂದ' ಯಾರನ್ನಾದರೂ ಯಾರಾದರೂ ಎಂಥವರನ್ನಾಗಿ ಬೇಕಾದರೂ ಬದಲಾಯಿಸಬಹುದು–ಎಂಬ ಅವಿವೇಕ(Lack of Commonsense)

ತಲೆದೋರಿದೆ. ಪ್ರಜಾಪ್ರಭುತ್ವದ ಎಷ್ಟೋ ಮುಖಂಡರು ಕುಂಬಾರನಿಂದ ನಿರ್ಮಿತರಾದರಂತೆಯೋ ಶೂರ್ಪಣಖಿಯಿಂದ ನಿರ್ಮಿತರಾದವರಂತೆಯೋ ಕಂಡು ಬರಲು ಗುರು–ಲಘುಗಳನ್ನು ವಿಂಗಡಿಸಿ ಗುರುತಿಸಲಾರದ ಅವಿದ್ಯೆಯೇ ಕಾರಣ. ವೇದಯುಗದ ನಮ್ಮ ನಾಗರಿಕತೆಯಲ್ಲಿ ಇಂಥ ಅವಿದ್ಯೆ ವಿರಳವಾಗಿತ್ತಂತೆ.

ವಿಜ್ಞಾನ(ಶಾಸ್ತ್ರ) ಎಂಬುದು ಮನಸ್ಸು ಬಳಸುವ ಒಂದು ಭಾಷೆ; ಮನಸ್ಸು ತೊಡುವ ಒಂದು ಅಂಗಿ; ಅದಕ್ಕೆ ಜ್ಞಾನದ ಸಮನ್ವಯದ ಹೊಲಿಗೆ ಅಗತ್ಯ. ಅದಿಲ್ಲವಾದುದರಿಂದ, (social sciences) ಸಾಮುದಾಯಿಕ ಜೀವನದ ಸಾಮಾಜಿಕತೆಯ ವಿವಿಧ ಚಟುವಟಿಕೆಗಳನ್ನು ಕುರಿತು ಬರೆದ ಶಾಸ್ತ್ರಗಳನ್ನು Humanities ಮಾನವಿಕಶಾಸ್ತ್ರಗಳು ಎಂದು ಕರೆಯುವುದುಂಟು. ನಾಮದಂತೆ ರೂಪವಿಲ್ಲ. ರೂಪದಂತೆ ನಾಮವಿಲ್ಲ! Truth rests on an act of free human judgement ಸತ್ಯವು ಮುಕ್ತಮಾನವನ ನಿರ್ಣಯವನ್ನಾಧರಿಸಿದೆ. (Commonsense of Science, ಪುಟ ೧೩೧) ಎಂಬುದರ ಅರ್ಥ ಅನನುಭವಿಗಳಿಗೆ ಅರಿಯದು. ಮುಕ್ತಿಯ ಅನುಭವ ಉಳ್ಳವರಿಂದು ಅಶ್ರದ್ಧೇಯರು, ಅಸ್ಪೃಶ್ಯರು. ಷಡ್ರಿಪುಮುಕ್ತತೆಯೇ ನಿಜವಾದ ಮುಕ್ತಿಯಲ್ಲವೇ? ಷಡ್ರಿಪುದಾಸರು ಮಾನವರಲ್ಲ, ದಾನವರು. ದಾನವರ ನಾಮರೂಪಗಳ ಪರಸ್ಪರ ಪೋಷಕತೆ ಪುರಾಣೋಕ್ತ. ಆದುದರಿಂದ De humanisation ಅಮಾನವೀಕರಣದ ಮೂಲಕ ಮಾನವಿಕ ಶಾಸ್ತ್ರಗಳು ನಿರುಪಯುಕ್ತ ಅಥವಾ ದುರುಪಯುಕ್ತ ಎನ್ನಿಸುವುದುಂಟು. ಸತ್ಯವು ಎಲ್ಲ ಬೆಲೆಗಳಿಗೂ ಆಧಾರ ರೂಪವಾಗಿರುವ ಬೆಲೆ ಎಂಬುದನ್ನು ಚಿಕ್ಕಂದಿನಿಂದ ಅರಿತು ಅರಗಿಸಿಕೊಳ್ಳದಿದ್ದಲ್ಲಿ Intellectual Honesty ಬೌದ್ಧಿಕ ಪ್ರಾಮಾಣಿಕತೆಯನ್ನು ಹುಡುಕಿದರೆ ಸಿಕ್ಕೀತೇ? ಸಂಶೋಧನದ ಹೆಸರಿನಲ್ಲಿ ನಮ್ಮ ದೇಶದಲ್ಲಿಂದು ಕಾಲದ ವ್ಯರ್ಥ ವ್ಯಯವಾಗುವುದು ಇತರ ಧ್ಯೇಯಗಳ ಹೆಸರಿನಲ್ಲಾಗುವಂತೆಯೇ ಸಾಮಾನ್ಯವಾಗಿ ಹೋಗಿದೆ. ಜೈನ, ವೈಷ್ಣವ, ವೀರಶೈವಾದಿ ವಿವಿಧ ಜ್ಞಾನಪೀಠಗಳ ನಿರ್ಮಾಣವೂ ಜಾತಿನಿರ್ಮೂಲನೋಪದೇಶವೂ ಮಾತ್ರ ಸ್ಪಷ್ಟ ದೇವತೆಗಳಂತಾಗಿರುವುದು ಇದಕ್ಕೆ ಉದಾಹರಣೆ. Indologyಯೂ ಒಂದು ಶಾಸ್ತ್ರ! Libidinouness ಎಂಬುದು ಕಲಾಶಾಸ್ತ್ರದ ಅಂಗ! ಸಿನೆಮಗಳನ್ನು ನೋಡಿರಿ–ಗೊತ್ತಾಗುತ್ತದೆ. ಪವಾಡಗಳನ್ನಷ್ಟೇ Trick ಮಾಯಾಜಾಲವೆನ್ನಬೇಕೇ? ಮನುಷ್ಯ ಮಾಯಾವಿಯಾದಾಗ ಅವನು ಹೇಳುವುದೂ, ಮಾಡುವುದೂ, ಸ್ವತಃ ಅವನೂ ಮಾಯೆಗಳೇ ಅಲ್ಲವೇ? ಮಾನವಿಕತೆಯ ಸಾಮಾಜಿಕತೆಯ ವಾಸ್ತವಿಕತೆ ಮಾಯಾವಿತನವನ್ನು ಸಮಾಜದಿಂದ ದೂರವಿರಿಸಿದ ಮೇಲೆ ಮಾತ್ರ ಲಭ್ಯ.

ವ್ಯವಹಾರ ಪ್ರಪಂಚದಲ್ಲಿ ಪರಂಪರಾಸತ್ಯವು ಮಾನವಿಕತೆಗೆ ಆಧಾರ. ಅಸತ್ ಪರಪಂಪರೆಯನ್ನು ಸತ್ ಪರಂಪರೆಯೆಂದು ಭಾವಿಸಿದಾಗ ಅಮಾನವಿಕತೆಯು (ಅದಕ್ಕೆ ಯಾವ ಅರ್ಥವಿದ್ದರೂ ಸರಿಯೆ) ಮಾನವಿಕತೆಯೆಂಬಂತೆ ತೋರುತ್ತದೆ. ಅದು Trick ಮಾಯೆ! ಸಮಾಜವೊಂದು ಜಾತಿಯೆಂಬುದನ್ನು ಅರಿಯದವರಿಗಿಂದು ಜಾತಿಗಳನ್ನು

ಸಮಾಜ ಎಂದು ಕರೆಯುವ ಇತ್ತೀಚಿನ ರೂಢಿ ಬುದ್ಧಿಗಲಿಸುತ್ತಿದೆ. ಹಿಂದುಳಿದ ಜಾತಿಗಳು ಹಿಂದುಳಿದ ಸಮಾಜಗಳಾಗಿವೆ! ಹಿಂದುಳಿಯುವಿಕೆಯೊಂದು ರಾಜಕೀಯ ಮಾಯೆಯಾಗಿ ಪರಿಣಮಿಸುತ್ತಿದೆ.ಪ್ರಚಾರವೆಂಬ ಮಾದಕಪೇಯವನ್ನು ಸಮಾಜ ಶಿಕ್ಷಣ ಎಂಬುದು ಮಾಯೆಯಲ್ಲವೆ? ಅದರಲ್ಲೂ ಅಸತ್‌ಪ್ರಚಾರದ ಅವಾಸ್ತವಿಕತೆಯ ಇಂದ್ರಜಾಲದಿಂದ ಜನಮನವನ್ನು ಮರುಳ್ಗೊಳಿಸುವುದರಿಂದ ಸಮಾಜವಾದೀಯ ಸಮಾಜ ನಿರ್ಮಾಣ ಸಾಧ್ಯವೇ?

ಒಂದು ದೇಶದ ಭೌಗೋಲಿಕ–ಚಾರಿತ್ರಿಕ ಧರ್ಮಗಳನ್ನು ಕಡೆಗಣಿಸಿ ಹೊಸ ಜೀವನ ಪದ್ಧತಿಯೆಂದು ಭಿನ್ನ ದೇಶಗಳ ಭೌಗೋಲಿಕ–ಚಾರಿತ್ರಿಕ ಆವರಣಗಳಿಗೆ ತಕ್ಕವಾದಂಥವುಗಳನ್ನು ಅನುಕರಿಸುವುದು ಮನೋವಶೀಕರಣದ ಮಾಯೆ. ಮಾಯಾನಿರ್ಮಿತ ನಾನಾಕಾರಗಳು ಅಚಿರಂಜೀವಿ, ಅಸ್ಥಾಯಿ. ಮನಃಪರಾಧೀನತೆಯು ಸ್ವಾತಂತ್ರ್ಯದ ಲಕ್ಷಣವಲ್ಲ. ಭಾರತೀಯ ಸಮಾಜವಾದದ ದಾರ್ಶನಿಕ ಗಾಂಧೀಜಿ. ಅದಾರ್ಶನಿಕರ ಧ್ಯೇಯವಾದಗಳು ಯಾವ ದೇಶವನ್ನೂ ಪುನಾರಚಿಸಲಾರವು. Indian Interpretation of Historyಚರಿತ್ರೆಯ ಭಾರತೀಯ ಭಾಷ್ಯವನ್ನು ಗಾಂಧೀಜಿ ಬರೆದರು. ಅರವಿಂದರು ಬರೆದರು. ಮಿಕ್ಕವರು ಅದರ ಆಭಾಸವನ್ನು ಬರೆದರು– ಭಾಸವನ್ನಲ್ಲ. ನಮ್ಮ ಮಾನವಿಕ ಶಾಸ್ತ್ರಾಭ್ಯಾಸಿಗಳಿತ್ತ ಗಮನಿಸಬಹುದೇ? ಗಮನಿಸದುದರಿಂದಲೇ ಕೂಲಿಕಾರ ಸಾವಕಾರರ ಪರ–ವಿರುದ್ಧವಾದಗಳಲ್ಲಿ ಬಳಕೆಗಾರನ ವಾದ ತಲೆಯೆತ್ತಲೇ ಇಲ್ಲ. ಹಿಂದು–ಮುಂದುಳಿದವರ ವಾದಗಳಿಂದ ಬಡವರು ಬಡವರಾಗಿಯೇ ಉಳಿದರು. ಬಡವರಿಗೆ ಮಾತ್ರ ಕುಟುಂಬ ಸದಸ್ಯರ ಸಂಖ್ಯೆಯನ್ನು ಪರಿಸೀಮನಗೊಳಿಸಬೇಕಾದ ಸಮಾಜವಾದೋಪದೇಶ ಶುರುವಾಯ್ತು. ಈ 'ಸಾಮಾಜಿಕ ನ್ಯಾಯ'ಗಳ ಪಟ್ಟಿಗೆ ಸೇರಬಹುದಾದ ಇತರ ಅನೇಕ ಅಂಶಗಳನ್ನು ಇಂದಿನ ಎಷ್ಟೋ ವಿಧಿಗಳು ಹಡೆಯುತ್ತಿವೆ.

Theory ವಾದಕ್ಕಿಂತ ವೇದ(ಜ್ಞಾನ) ಮುಖ್ಯ ಎಂಬುದೇ ಇಂದು ನಿಜವಾದ ಮಾನವಿಕತೆ. ವಾದಯುದ್ಧವೂ ರಾಜಕೀಯ ಪಕ್ಷಗಳ ಅಸಂಖ್ಯಾತೆಯಿಂದಾದ ವಿರೋಧಗಳು ಒಂದೇ ದೋಣಿಯಲ್ಲಿ ಯಾನ ಮಾಡುವಂಥವು. Quality ಗುಣವನ್ನು ಮರೆತ Quantity ಪರಿಮಾಣವಾದವು ಅಮಾನವಿಕ, ಅಸನ್ಮಾನವಿಕ. ತ್ರಿಕರಣಶುದ್ಧಿಯನ್ನು ಆಚರಣೆಗೆ ತರಲು ವಿಘ್ನಕಾರಿಗಳಾದ ಎಲ್ಲ ಬದಲಾವಣೆಯ ಪ್ರಯೋಗಗಳೂ ವ್ಯವಹಾರ ಪದ್ಧತಿಗಳೂ ನಿಯೋಜನ ನಿಯಮಗಳೂ ಪ್ರಶಾಸನ ತಂತ್ರಗಳೂ ವಿಧಿವಿಧಾನಗಳೂ ಅವನತಿಕರಗಳೆಂಬುದನ್ನು ಅರಿತದ್ದೇ ಇಂದು ೨೦ ಅಂಶದ ಕಾರ್ಯಕ್ರಮವನ್ನು ಜಾರಿಗೆ ತರಬೇಕೆಂಬ ಧ್ಯೇಯ ತಲೆಯೆತ್ತಲು ಕಾರಣ. ಅತಿಯಾದ ವಾದಮಗ್ನತೆಗೂ ಅತಿಯಾದ ವಿಚಾರ ವಿಮುಖತೆಗೂ ದುಷ್ಪರಿಣಾಮಕತೆಯೊಂದೇ ಫಲ. ನಮ್ಮ ರಾಷ್ಟ್ರವಿಂದು ಈ ಅತಿಯಿಂದ ಮುಕ್ತವಾಗಬೇಕಾಗಿದೆ. ಮಾನವಿಕ ಶಾಸ್ತ್ರಜ್ಞರಿಲ್ಲಿ Fundamental Thinking ಆಧಾರ ಸತ್ಯಗಳ ವಿವೇಚನೆಗೆ ನಿಲ್ಲಬೇಕು. ಪರಭೂಮಿಯ, ಪರಚರಿತ್ರೆಯ

ಆಧಾರ ಕಲ್ಪನೆಗಳು ಆರೋಗ್ಯಕರವಾದ ಭಾರತೀಯ ಅನನ್ಯತೆಯನ್ನು ಹೊಳೆಯಿಸಲಾರವು. ಡಾ.ಬೆಟ್ಟಹಾಮನ್ ಮತ್ತು ಸರ್ ಜಾನ್‌ವುಡ್ರೋಫ್ ಎಂಬ ವಿದ್ವಾಂಸರು ಎಂದೋ ಈ ಮಾತನ್ನು ಹೇಳಿದ್ದರು. ಭಾರತೀಯ ತತ್ವಜ್ಞಾನವು ಇನ್ನೊಂದು ದೇಶದಲ್ಲಿ ಹುಟ್ಟಲಿಲ್ಲ. ಇನ್ನೊಂದು ದೇಶದ ತತ್ವಜ್ಞಾನವು ಭಾರತೀಯವಾಗಲಿಲ್ಲ–ಎಂಬುದನ್ನು ರಾಷ್ಟ್ರೀಯ ಮಾನವಿಕರು ಗಮನಿಸುವುದು ಅಗತ್ಯವಲ್ಲವೇ?



**['ಮಾನವಿಕ ಕರ್ನಾಟಕ' – ಪುಟ ೧, ಮೈಸೂರು ವಿಶ್ವವಿದ್ಯಾಲಯ, ಸಂಪುಟ ೬, ಸಂಚಿಕೆ ೨, ೧೯೭೬]**

# ೧೫. ಮಾನವ ಸಂಸ್ಕೃತಿಯ ಭೇದಾಭೇದಗಳು

ಮಾನವನ ಪ್ರಾಣಿಸಹಜ ಮೂಲಪ್ರವೃತ್ತಿಗಳನ್ನು(ಹೇಗೋ ಬೆಳೆಸಿಕೊಂಡ ಏನೋ ಆಗಿರುವ) ವಿವೇಕವೆಂಬ ಬುದ್ಧಿರೂಪದ ಅಂಕೆಗೊಳಪಡಿಸಿ ರೂಪಾಂತರಗೊಳಿಸಿ ಸಮಾಧಾನಪಟ್ಟುಕೊಂಬುದು ಸಂಸ್ಕೃತಿಯ ರೀತಿ. ವಿಶಾಲಾರ್ಥದ ಭಾಷೆಯಲ್ಲಿ ಅಭಿಪ್ರಾಯವಾಹಕಗಳಾಗಿ ಅಂಗ, ವಾಕ್, ವೇಷ, ಮುಖ ವ್ಯತ್ಯಾಸಗಳಿರುವಂತೆ ಸಂಸ್ಕೃತಿಯಲ್ಲಾದರೂ ಮೂಲವರ್ತನೆ, ಆಚಾರ ವಿಚಾರ ಮತ್ತು ಮೂಲ್ಯ ವಿವೇಕಗಳು ಅದರ ವ್ಯಂಜಕಗಳೆನಿಸಿವೆ.

(Gesture language) ಅಂಗವಿನ್ಯಾಸ ಸ್ಥೂಲಾವಸ್ಥೆಯಲ್ಲಿ ಸಾರ್ವಮಾನವ ಪ್ರತೀಕಗಳನ್ನೊಳಗೊಂಡಿದೆ. ಪರಸ್ಪರ ಸಂಪರ್ಕವಿಲ್ಲದ ಭಿನ್ನ ಜನಾಂಗಗಳಲ್ಲಾದರೂ ಬಾ, ಹೋಗು, ಹೊಡೆಯುತ್ತೇನೆ, ಶರಣು ಹೊಕ್ಕೆ ಮುಂತಾದ ಇದೇ ಮೇರೆಗೆ ಸಮಾನಶೀಲ ವ್ಯಸನಿಗಳೊಡನೆ ಗೆಳೆತನದಿಂದ ವರ್ತಿಸುವುದು, ಅತಿ ಸಂಕಟಗ್ರಸ್ತರಿಗೆ ಆಗಿಂದಾಗ ಅಲ್ಪ ಸಹಾಯವನ್ನಾದರೂ ಮಾಡುವುದು, ತಮ್ಮವರ ಮತ್ತು ತಮ್ಮದರ ಬಗ್ಗೆ ಅಭಿಮಾನ ತಾಳುವುದು ಮುಂತಾದ ವರ್ತನಾರೀತಿಗಳು ಸರಳ ವರ್ತನದಂತೆ ಸರ್ವಜನಾಂಗ ಸಹಜ. ಪ್ರಾಚೀನ ಮಾನವ ಕುಲದಲ್ಲಿ ಸಾಮಾಜಿಕತೆ ಬೆಳೆದಂದಿನಿಂದ ಈವರೆಗೆ ಎಲ್ಲೆಡೆಯಲ್ಲೂ ಇಂಥ ಮೌಲಿಕ ಅನ್ಯೋನ್ಯ ವ್ಯವಹಾರಗಳು ತಾವಾಗಿಯೇ ಎಂಬಂತೆ ನಡೆದುಕೊಂಡು ಬಂದಿವೆ. ತುತ್ತನ್ನು ಬಾಯಿಗೆ ಬಲಗೈಯಿಂದ ಎತ್ತಿ ಹಾಕಿಕೊಂಬುದು ಎಷ್ಟು ವಿಶ್ವವ್ಯಾಪ್ತಿಯುಳ್ಳದ್ದೋ ಅಷ್ಟೇ ವಿಶ್ವವ್ಯಾಪ್ತಿ ಕುಟುಂಬಭರಣ ಉದ್ಯೋಗಶೀಲತೆ, ಕುಲ–ಜಾತಿ–ಜನಾಂಗಾದಿಗಳ ಸೇವೆ, ಮೂಲ ಪ್ರವೃತ್ತಿ ನಿಯಂತ್ರಿತ ಸ್ತ್ರೀ ಪುರುಷ ವ್ಯವಹಾರ, ಅಪತ್ಯ ಪ್ರೇಮ, ಭಯಾದಿ ಭಾವಚೋದಿತ ವರ್ತನೆ ಮುಂತಾದವು ಸ್ಥೂಲವಾಗಿ ನಿಕಟ ಸಾದೃಶ್ಯವುಳ್ಳವಾಗಿ ಸರ್ವಮಾನವರಲ್ಲಿ ಕಂಡು ಬಂದಿವೆ.

ಆದರೆ ಇವೇ ವರ್ತನೆಗಳಲ್ಲಿ ವಿಶಿಷ್ಟ ಲಕ್ಷಣ ಬೆಳೆದರೆ ಜನಾಂಗ–ಕುಲ–ಜಾತಿ–ಕುಟುಂಬ–ವ್ಯಕ್ತಿಗಳಲ್ಲಿ ಸಾಂಸ್ಕೃತಿಕ ಭೇದ ತಲೆದೋರುತ್ತದೆ. ಸರಳ ವರ್ತನವು ವೃಶ್ಚಿಕಮುದ್ರೆ, ಚಿನ್ಮುದ್ರೆ, ವ್ಯಾಖ್ಯಾನ ಮುದ್ರೆ, ವರದಹಸ್ತ, ಅಭಯಹಸ್ತ ಮುಂತಾದವುಗಳನ್ನು ಬಳಸತೊಡಗಿದರೆ ಅನಭ್ಯಸ್ತರಿಗೆ ಹೇಗೆ ಆ ವರ್ತನ ಅರ್ಥಹೀನವಾಗಿ ತೋರುವುದೋ ಹಾಗೇ ಮಾನವನ ಮೂಲ ಹಾರ್ದಿಕ ಪ್ರವೃತ್ತಿಗಳ ಕಾರ್ಯರೂಪ ಸುಧಾರಿಸುತ್ತ ಹೋದ ಹಾಗೆ ವೈಯಕ್ತಿಕ ವೈಶಿಷ್ಟ್ಯವನ್ನು ಪಡೆದು ಭೇದಕ್ಕೆ ಕಾರಣವಾಗುತ್ತದೆ. ಶೀಲ, ವ್ಯಸನಗಳ ಜೊತೆಗೆ ಭಾಷೆ, ಜಾತಿ, ರೂಪ, ವಿದ್ಯೆ, ರಾಷ್ಟ್ರೀಯತೆ, ಅಭಿಪ್ರಾಯ, ಆಚಾರಗಳ

ಉಪಾಧಿಗಳು ಸ್ನೇಹ ವ್ಯವಹಾರದಲ್ಲಿ ಹೊಕ್ಕಲ್ಲಿ ಅದರ ಮೊದಲ ವಿಶ್ವಜನೀನತೆ ಬಹಳ ಕಡಿಮೆಯಾಗುತ್ತದೆ. ಆದರೆ ಆದರ್ಶ ಸ್ನೇಹಿತರೆಂದು ರಸ ದೃಷ್ಟಿಯಿಂದ ಕೊಂಡಾಡಲರ್ಹರಾದ ಜೊತೆಗಾರರಲ್ಲಿ ಸಂಕುಚಿತ ವ್ಯಾಪ್ತಿಯ ಈ ಬಹುಲೋಪಾಧಿ ಸಾಮ್ಯವುಳ್ಳ ಗೆಳೆಯರಲ್ಲಿ ಸರ್ವಾಂತರ್ ಬಾಹ್ಯ ಸಾಮ್ಯವೇ ಶೋಭನೀಯವೆನಿಸುತ್ತದೆ! ಈ ಸಾಧಾರಣ ಧರ್ಮಗಳ ಹೆಚ್ಚು ಕಡಿಮೆಗಳು ಪದಗಳ ವೈಯಕ್ತಿಕ ಅರ್ಥ ನಿಷ್ಕರ್ಷ ಮತ್ತು ಜಾತೀಯ ಅರ್ಥವ್ಯಾಪ್ತಿ ಹೆಚ್ಚು ಕಡಿಮೆಯಾಗುವುದನ್ನು ಹೋಲುತ್ತವೆ. ಸಾಹಿತ್ಯ ದೃಷ್ಟಿಯಿಂದ ಮಾನವ ಸಂಸ್ಕೃತಿಯ ಶ್ರೇಷ್ಠತೆಯನ್ನು ನಂಬುವುದು ಆಧ್ಯಾತ್ಮಿಕ ಮನೋಧರ್ಮಕ್ಕೆ ಹತ್ತಿರವಾಗುತ್ತದೆ, ಕಲಾದೃಷ್ಟಿಗೆ ದೂರವಾಗುತ್ತದೆ. ಅದರಿಂದಲೇ ನೀತಿ ಆಧ್ಯಾತ್ಮಗಳು ಒಂದೆಡೆ, ಕಲೆ ವ್ಯವಹಾರಗಳು ಇನ್ನೊಂದೆಡೆ ಭಿನ್ನಮುಖವಾಗಿ ಹರಿಯುವ ಒಕ್ಕಟ್ಟನ್ನು ತಾಳಿದ್ದು ಅನೇಕ ಸಂದರ್ಭಗಳಲ್ಲಿ ಕಂಡುಬರುವುದು.

ಸಹಜೀವಿಗಳಲ್ಲಿ ರೂಪ, ಯೌವನ, ಲಿಂಗ, ಆಢ್ಯತೆ ಉಪಯೋಗ ಕಾಲತ್ವಗಳ ಉಪಾಧಿಗಳನ್ನು ಹುಡುಕಿ ಅನಂತರ ನಿಯಮ ಪ್ರದರ್ಶನ ಮಾಡಹೊರಟಾಗ ವಿನಯ ವರ್ತನೆಯ ವ್ಯಾಪ್ತಿ ಕಿರಿದಾಗುತ್ತದೆ. ಅದರೆ ನಾಗರಿಕತೆ, 'ರೋಮಾಂಟಿಕ್' ಸೌಂದರ್ಯ ಹೆಚ್ಚುತ್ತವೆ ಎಂಬುದು ಮೊದಲು ಹಳ್ಳಿಗನಾಗಿದ್ದು ಅನಂತರ ಪಟ್ಟಣಿಗನಾದ ಸಾಕ್ಷಿ ಚೈತನ್ಯವುಳ್ಳ ಯಾವನಿಗಾದರೂ ಹೊಳೆಯದಿರದು. ಸಂಕಟಗ್ರಸ್ತರಿಗೆ ಸಹಾಯ ಮಾಡುವಾಗಲೂ ತನ್ನ ಮತ್ತು ಅವರ ವಿಕಲ್ಪ ವಿಶೇಷಣ ಉಪಾಧಿಗಳ ವಿಚಾರವನ್ನು ತಳೆದು ಅವುಗಳಿಗೆ ಪ್ರಾಧಾನ್ಯ ಕೊಡುತ್ತ ಹೋಗುವುದು ಎದುರಾಬದುರು 'ಕಾಲರ್' ಹಿಡಿದು ಕೇಳಿದಾಗ ಅನ್ಯಾಯವೆಂದು ಒಪ್ಪಿಕೊಂಡರೂ ಸಾಮಾನ್ಯ ವ್ಯವಹಾರದ, ಗಂಭೀರ ಸ್ಥಿತಿಯಲ್ಲಿ ಅದೇ ನಾಗರಿಕತೆ ಎನಿಸುತ್ತದೆ. ಅಂದರೆ ಸಂಸ್ಕೃತಿಯು ನಾಗರಿಕತೆಗೆ ಸಮೀಪವಾಗುತ್ತ ಹೋದ ಹಾಗೆ ಸಂಕುಚಿತವೂ ಸುವ್ಯಕ್ತವೂ ಆಗುತ್ತ ಹೋಗುತ್ತದೆ; ಆಧ್ಯಾತ್ಮಿಕ ನೀತಿಯತ್ತ ಸರಿಯುತ್ತ ಹೋದ ಹಾಗೆ ವಿಶಾಲವೂ ಅವ್ಯಕ್ತವೂ ಆಗುತ್ತ ಹೋಗುತ್ತದೆ. ನಾಗರಿಕತೆ ಅತಿ ಸ್ಥೂಲ, ಬಾಹ್ಯ, ಭೌತ, ಪ್ರದರ್ಶನೀಯ ಎನಿಸುವ ಶುಚಿ, ಸೌಂದರ್ಯ ಮತ್ತು ಔಚಿತ್ಯ. ಆಧ್ಯಾತ್ಮಿಕ ನೀತಿಮತ್ತೆ ಸೂಕ್ಷ್ಮ, ಅಂತರ, ಭಾವಿಕ, ದರ್ಶನೀಯ ಎನಿಸುವ ಕಾರ್ಯ ಸತ್ಯ ಸಂಪನ್ನ ಪ್ರಿಯ–ಹಿತ–ಸಮಾಧಾನಕಾರಿತ್ವ. ಹೀಗೆ ಮೂಲ ವರ್ತನೆಗಳಲ್ಲಿ ವೈಶ್ವಾಂಶಗಳು ಅನುಪಹತ ವ್ಯಕ್ತಿ ಮನದಲ್ಲಿ ಬಹಳ ಸಿಗುತ್ತವೆ. ಅವುಗಳ ಸಂವರ್ಧನೆಗೆ ರಾಷ್ಟ್ರ, ನಾಗರಿಕತೆ, ಜಾತಿ, ಕುಲ, ವರ್ಣ, ಸೌಂದರ್ಯ, ಸ್ವಾರ್ಥಗಳು ವಿಘ್ನಕಾರಿಗಳು. ಹಿತಸಂಘರ್ಷ ಪ್ರಸಂಗದಲ್ಲಿ ಈ ಸತ್ಯ ಅನುಭವಕ್ಕೆ ಬರುತ್ತದೆ. ರಾಜಕೀಯ ಸ್ವಾತಂತ್ರ್ಯ, ಅಧಿಕಾರ, ಲಾಭ, ಲಾಲಸಗಳ ಇತಿಹಾಸದ ಅವಲೋಕನ ಇದನ್ನು ಸ್ಪಷ್ಟಪಡಿಸುತ್ತದೆ.

ಮೂಲ ವರ್ತನೆಗೆ ನೃತ್ಯದ ವಿಶ್ವಸಾಧಾರಣತೆ ಇದ್ದರೆ ಆಚಾರಕ್ಕೆ ಸಂಗೀತದ ಸಾರ್ವತ್ರಿಕತೆಯಿದೆ. ಪಾಶ್ಚಾತ್ಯರ ಮತ್ತು ಪೌರಸ್ತ್ಯರ ಸಂಗೀತ ಪದ್ಧತಿಗಳು ಪರಸ್ಪರರಿಗೆ ಹೇಗೆ ಮತ್ತು ಎಷ್ಟು ರಮ್ಯಮನೋಹರವೋ ಅವರಿವರ ಆಚಾರಗಳಾದರೂ ಹಾಗೆ

ಅಷ್ಟೇ ಮೌಲಿಕ. ಮಧುರ ಸ್ವರವನ್ನು 'ಶಿಶುರ್ವೇತ್ತಿ ಪಶುರ್ವೇತ್ತಿ ವೇತ್ತಿಗಾನರಸಂಫಣೀ' ಎಂದು ಹೊಗಳಬಹುದಾದರೂ ಅನೇಕ ಮಧುರ ಸ್ವರಗಳ ಸಾಂಗತ್ಯ ಪದ್ಧತಿಯನ್ನು ಎಲ್ಲ ಕಿವಿಗಳೂ ಒಂದೇ ಮಟ್ಟದಲ್ಲಿ ಮೆಚ್ಚುವವು. ಒಂದು ವಿಧದ ಸ್ಥೂಲತೆ ಅಥವಾ ಒರಟುತನ ವಿಶ್ವವ್ಯಾಪ್ತಿಗೆ ಅವಶ್ಯಕ. ಸುಧಾರಣೆ ವೈಶಿಷ್ಟ್ಯ, ಸಂಕೋಚಗಳಿಲ್ಲದೆ ಸಾಗದು. ಕಂಠೀರವ ನರಸರಾಜ ಒಡೆಯರು ಕಲ್ಲು ಕಂಬ ಕಡಿದೊಗೆಯಲು ಬಳಸಿದ ಕತ್ತಿಯ ಸ್ಥಿತಿ ಕಲ್ಪನಾತೀತ. ಅದು ನಿಜವಾದರೆ ಆ ಶಕ್ತಿಯ ಅಲಗು ಕ್ಷೌರಿಕನ ಕತ್ತಿಯ ಹರಿತಕ್ಕಿಂತ ಕಡಿಮೆಯದಾಗಿತ್ತೆನ್ನಲೇಬೇಕು. ಏಕೆಂದರೆ 'ಪ್ರಾಯೇಣ ಸಾಮಗ್ರ್ಯ ವಿಧೌಗುಣಾನಾಂ ಪರಾಙ್ಮುಖೀ ವಿಶ್ವಸೃಜಃ ಪ್ರವೃತ್ತಿಃ'

ಸಾಮಾಜಿಕ–ಕೌಟುಂಬಿಕ ಆಚಾರಗಳಲ್ಲಿ ವೇಷ, ಭಾಷೆ, ನಡತೆಗಳೂ ನಂಬಿಗೆ, ಕಲ್ಪನೆ, ವ್ರತ, ಉತ್ಸವಾದಿಗಳೂ ಹೇಗೆ ದೇಶ, ಧರ್ಮ, ಹವೆ, ತ್ರಯಶಕ್ತಿ, ಸಾಮಾನ್ಯ ಜ್ಞಾನಗಳನ್ನವಲಂಬಿಸಿ ಪ್ರತ್ಯೇಕವಾಗಿರುತ್ತವೆ ಎಂಬುದು ಸ್ವತಃ ಸಿದ್ಧ; ಇವುಗಳಲ್ಲಿ ವಿಶಾಲ ವ್ಯಾಪ್ತಿ ಸಿಗುವುದಾದರೆ ಅದು ಈ ಮಾಧ್ಯಮಗಳ ಮೂಲಕ ಸೂಚಿತವಾಗುವ ಭಾವ ಕಲ್ಪನೆಗಳಲ್ಲಿ ಮಾತ್ರ. ಸತ್ತವರಿಗೆ ಏನಾದರೂ ಮಾಡಬೇಕು, ಯಾವುದಾದರೊಂದು ಗೌರವಾರ್ಹ, ಪವಿತ್ರ ಕ್ರಮದಿಂದ ಅವರಿಗೆ ಅಂತ್ಯಕ್ರಿಯೆ ಎಸಗಬೇಕು ಎಂಬಲ್ಲಿ ಸಾರ್ವತೆಯಿದೆ. ಆದರೆ ಕ್ರಮಗಳಲ್ಲಿ ಭೇದವಿದೆ. ಇಂಥ ಭಿನ್ನ ಕ್ರಮಗಳಲ್ಲಿ ಸರಳತೆಯನ್ನು ಕೆಲವರು ಮೆಚ್ಚಿದರೆ ಅನೇಕರಿಗೆ ಸಂಯುಕ್ತ, ವಿಭವ ಪೂರ್ಣ ಕ್ರಿಯೆಯನ್ನು ಮತ್ತೆ ಕೆಲವರು ಮೆಚ್ಚುತ್ತಾರೆ. ಮದುವೆಯನ್ನು ತೆಗೆದುಕೊಂಡರೆ ಅದರಲ್ಲಿಯ ವೈವಿಧ್ಯ ಅಸಂಖ್ಯ. ಆದರೆ ಸುಮ್ಮನೆ ಪುಂಸ್ತ್ರೀ ಸಂಯೋಗ ನಡೆಯುವುದಕ್ಕಿಂತ ಹೆಚ್ಚಿನ ಗೌರವ ಮದುವೆಯಲ್ಲಿದೆ–ಅದು ಎಂಥ ಮದುವೆಯೇ ಆಗಲಿ–ಎಂಬುದು ವಿಶ್ವಮಾನ್ಯ. ಇವು(Social values of importance) ಪ್ರಾಧಾನ್ಯ ನಿಷ್ಠ ಮೂಲ್ಯಗಳು. ಇವುಗಳಲ್ಲಿ ನ್ಯಾಯಾನ್ಯಾಯ ಪ್ರಶ್ನೆ ಕಡಿಮೆ. ಸ್ವಾಭಾವಿಕತೆ ಜಾಸ್ತಿ. ಆದುದರಿಂದ ಅವನ್ನು ಬದಲಿಸಿ ಬೇರೆ ವಿಧಾನವನ್ನು ಪ್ರಚುರಗೊಳಿಸಹೋಗುವುದು ಅಸಾರ್ಥಕ, ಅಥವಾ ಹಾನಿಕರ. ಹಾಗೆ ಮಾಡಬೇಕಾದರೆ ಜಾತಿ ಬದಲಾಯಿಸುವುದೊಂದು ಅಸ್ತ್ರ. ಆದರೆ ಅದರ ಪ್ರಯೋಜನ ತಾತ್ವಿಕವಾಗಿ ಬಹಳ ಕಡಿಮೆ. ಹಾಗೆ ಬದಲಾದರೂ ಸಹವಾಸ ಸಂಪರ್ಕಗಳಿಂದ ಇಷ್ಟು ಬದಲಾವಣೆ ವಸ್ತುತಃ ಆದರೂ ಸಾರತಃ ಆಗದಿರಬಹುದು. ಒಮ್ಮೆ ಸಾರತಃ ಬದಲಾವಣೆಯಾದರೆ ಕಾರ್ಯತಃ ಮೂಲ ಸಾತ್ವಿಕ ನೀತಿಗೆ, ಮತ್ತು ಆ ಕಾರಣದಿಂದ ಸ್ವ–ಪರ ಹಿತಕ್ಕೆ ಕ್ರಮಿಕ ನಾಶವೊದಗಿದರೂ ಒದಗೀತು. ಹಿಂದು ಕಾಯದೆಯ ಕ್ರೋಡೀಕರಣ ಇದಕ್ಕೊಂದು ಉದಾಹರಣೆ. ಮನುಷ್ಯರ ಸುಖದುಃಖ, ಶಾಂತಿ ಅಶಾಂತಿ, ಹಿತಾಹಿತಗಳು ಅಂತ್ಯದಲ್ಲಿ ಪರಸ್ಪರ ದೃಷ್ಟಿಯಿಂದ, ಯುಕ್ತ ದೃಷ್ಟಿಯ ಸ್ಥಾಯಿತ್ವದಿಂದ, ಸ್ಥಾಯಿತ್ವನಿಷ್ಠೆ ಕಾರ್ಯ ಪ್ರವೃತ್ತಿಯಿಂದ ರೂಪಿಸಲ್ಪಡುತ್ತವೆ. ಹೀಗೆ ಭೇದಮಯ ಸಂಸ್ಕೃತ್ಯಂಗಗಳು ಜಟಿಲ, ಸಂಕುಚಿತ, ತರ್ಕ ನಿರಪೇಕ್ಷ, ಸ್ವಯಂವರಣೀಯ, ಅಪ್ರತೀಕರಣೀಯ.

## ಆಚಾರ–ವಿಚಾರ

ವಿಚಾರ ಸಂಕರಕ್ಕಿಂತ ಆಚಾರಸಂಕರ ಸಮಾಜದಲ್ಲಿ ಅಸುಖ ಉಂಟಾಗುವಂತೆ ಮಾಡುವುದು ಹೆಚ್ಚು. ಆಚಾರದ ಬದಲಾವಣೆ ವಿಚಾರಜನ್ಯವಾಗಿರುವುದು ಸಾವಿರಕ್ಕೊಮ್ಮೆ ಮಾತ್ರ. ಆಚಾರಗಳಿಗಿರುವಷ್ಟು ಉಪಾಧಿ ಬಂಧನ ಮತ್ತಾವುದಕ್ಕೂ ಇಲ್ಲ. ಮನುಷ್ಯನು ಈ ದೇಶದವನು ಎನ್ನಿಸಿಕೊಂಬುದು ಆಚಾರದಿಂದಲೇ, ಈ ಸಮಾಜದವನು ಎನ್ನಿಸಿಕೊಂಬುದು ಅಥವಾ ಸಂಸ್ಕೃತಿಯವನೆನಿಸಿಕೊಂಬುದು ಕೂಡ(ಸಂಕುಚಿತಾರ್ಥದಲ್ಲಿ) ಆಚಾರದಿಂದಲೇ. ಭಾವನಿಷ್ಠತೆ ಇದಕ್ಕೆ ಹೆಚ್ಚು; ಇದರ ಭಾವಪ್ರೇರಕತೆಯನ್ನು ಹಾಳು ಮಾಡದೆ ಇರುವ ಸುಧಾರಕರು ಕಡಿಮೆ. ಮ.ಗಾಂಧಿ ಇಂದು ಹಾಗೆ ಹಾಳು ಮಾಡದೆ ಸುಧಾರಣೆಯನ್ನು ತರಲು ಯತ್ನಿಸಿ ಕೆಲಮಟ್ಟಿಗೆ ಯಶಸ್ವಿಗಳಾದವರು. ಹಿಂದಿನ ಉದಾಹರಣೆ ಶಂಕರಾಚಾರ್ಯರದು. ಕ್ಷೇತ್ರ ಬೇರಾದರೂ ಅವರಿಬ್ಬರೂ ವಹಿಸಿದ ಪಾತ್ರ ಒಂದೇ. Custom is the best interpreter of laws–ಆಚಾರವೇ ಕಾಯಿದೆಗಳ ವಿವರಣೆಯ ಅತ್ಯುತ್ತಮ ಸಾಧನ ಎಂಬ ಮಾತು ಹುಟ್ಟಿಸಿಕೊಳ್ಳಲು Public opinion ಜನಮತ ಮತ್ತು ಸುಧಾರಣೆ ಒಟ್ಟೊಟ್ಟಿಗೆ ಸಾಗಬೇಕು ಎಂಬ ನೀತಿಯೇ ಆಧಾರ. ಜನಮತ ಜೀವತಾವಶ್ಯಕತೆಗಳು (ಮಾನಸಿಕ, ಆರ್ಥಿಕ ಅಥವಾ ಆಧ್ಯಾತ್ಮಿಕವಿರಲಿ) ದೇಶಕಾಲಾವಚ್ಛಿನ್ನ. ಆದುದರಿಂದ ಸಂಸ್ಕೃತಿಯಲ್ಲಿಯ ಭೇದಾಂಶಗಳಲ್ಲಿ ಹೆಚ್ಚಿನವಕ್ಕೆ ಆಚಾರ ಭೇದಗಳೇ ಕಾರಣವೆನ್ನಬಹುದು. ನಿಜ ನಾಗರಿಕನು ಆಚಾರ ಭೇದ ನಿರಪೇಕ್ಷ ದೃಷ್ಟಿಯನ್ನು ತಿಳಿಯಬಲ್ಲನಾದುದರಿಂದ ತನ್ನ ವಿಶ್ವದೃಷ್ಟಿಯನ್ನು ಕಳೆದುಕೊಳ್ಳದೆ ಪರಾಚಾರ ಸಹಿಷ್ಣುವೂ ಸ್ವಾಚಾರ ನಿಷ್ಠನೂ ಆಗಿರುವನಲ್ಲದೆ, ಈ ಬಾಹ್ಯ ಬಗೆಯನ್ನು ಬದಲಿಸಲು ಶನಿ ದೃಷ್ಟಿಯಿಂದ ಪ್ರಯತ್ನಿಸಹೋಗನು.

ವಿಚಾರಗಳು ಹೆಚ್ಚಾಗಿ(Academic) ವಿಚಾರ ಕ್ಷೇತ್ರದಲ್ಲಷ್ಟೇ ಉಳಿಯುವುದು ರೂಢಿ. ಆದರೆ ಬಹಳ ಕಾಲಾನಂತರ ಅವು ಕ್ರಮಿಕ ಆಚಾರ ಪರಿವರ್ತನಕ್ಕೆ ಕಾರಣಗಳಾಗಬಹುದು. ಅವುಗಳಿಂದಾದ ತಾತ್ಕಾಲಿಕ ಬಹು ಪರಿಣಾಮ ಅಚಿರಸ್ಥಾಯಿ. ಮೊದಲಿನ ಜಗತ್ತಿನಲ್ಲಿ ಆಸ್ತಿಕತೆಯೊಂದು ವಿಶ್ವಸಾಧಾರಣವಾಗಿತ್ತು. ಅಂಥ ಒಂದನ್ನು ಹುಡುಕ ಹೋದರೆ ಇಂದು ಸಿಗುವುದು 'ಸಹಕಾರ' ತತ್ವವೊಂದೇ.ಆಸ್ತಿಕತೆಯಲ್ಲಿ ದೈವಭೇದವಿದ್ದಂತೆ ಸಹಕಾರದಲ್ಲಿ ಪಕ್ಷಭೇದ ನಿಷ್ಠತೆಯಿದೆ. ಜನಸಂಘಟನೆಗೆ ಕಾರಣವಾದ ವಿಚಾರ ಸ್ಥಿತಿಪರಿವರ್ತಕವಾಗುತ್ತದೆ. ಇವಾದರೂ ಹೆಚ್ಚಾಗಿ ದೇಶಕಾಲಗಳಲ್ಲಿಯ ಆವಶ್ಯಕತೆಗಳ ಪೂರಣಕ್ಕಾಗಿ ಹುಟ್ಟುತ್ತವೆ. ಅಂಥ ಆವಶ್ಯಕತೆಗಳನ್ನವಲಂಬಿಸದ ವಿಚಾರಗಳು ದೇಶ ಜೀವನ ಮಾರಕಗಳಾಗುತ್ತವೆ. ಜಾಗತಿಕ ಸರಕಾರ, ಏಕ ಜಗತ್ತು, ಮಾನವ ಸಮಾಜ ಮುಂತಾದವು ವಿಶ್ವವಿಶಾಲ ವಿಚಾರಗಳು. ಅನುಭವ ಬಾಹಿರವಾದ ವಿಶಿಷ್ಟ ವಿಜ್ಞಾನ–ತತ್ವಜ್ಞಾನಗಳ ಅಭಿಪ್ರಾಯಗಳನ್ನು ಆಮದು ಮಾಡಿಕೊಂಬ ಅಭ್ಯಾಸ ಜೀವನ ಘಾತಕ. ಅವು ತಮ್ಮ ವಾದವೆಂಬ ಭ್ರಮೆ ಆತ್ಮಾಧಮ ಭಾವದ ಗುರುತು. ವಿಚಾರಗಳ ದೇಶೀಯತೆ ಸಾಧಾರಣವಾಗಿ ಅನುಭವ, ತರ್ಕ, ಶ್ರದ್ಧೆಗಳನ್ನು ಆಧರಿಸುತ್ತವೆ.

ಪರಿಪೂರ್ಣತೆಯಲ್ಲಿ ಈ ಮೂರೂ ಸೇರಿ ವಿಶ್ವತೆಗೇರುವದು ಸಾಧ್ಯ. ಒಂದು ಕಾಲದಲ್ಲಾದರೂ ವ್ಯಕ್ತಿ ಮಹಾತ್ಮ್ಯ ಬಲದಿಂದ. ಆದರೆ ಸಾಮಾನ್ಯವಾಗಿ ಅವು ದೇಶೀಯ, ಖಂಡ ವಿಶಿಷ್ಟ, ಗೋಲಭಾಗ ವಿಶಿಷ್ಟ ಸಾರ್ವತ್ರಿಕತೆಯುಳ್ಳವಾಗಿರುವುದೇ ಹೆಚ್ಚು. ಏಕೆಂದರೆ ವಿಚಾರದಲ್ಲಿ ಧರ್ಮ, ರಾಜಕಾರಣ, ವಿಜ್ಞಾನ, ತತ್ವಜ್ಞಾನ ಮುಂತಾದ ಜ್ಞಾನ ಶಾಖೆಗಳು ಬರುತ್ತವೆ. ಇವುಗಳಲ್ಲಿ ತತ್ವಜ್ಞಾನ ಪ್ರಧಾನ ಎಂಬುದು ಮನಃಪ್ರಧಾನ ಜೀವಿಗಳಿಗೆಲ್ಲ ಗೊತ್ತು. ರಾಜಕೀಯ, ಆರ್ಥಿಕ, ಧಾರ್ಮಿಕ, ನೈತಿಕ, ಶೈಕ್ಷಣಿಕ ಸಿದ್ಧಾಂತಗಳಿಗೆ ವಿಶಾಲ ವ್ಯಾಪ್ತಿಯ ತತ್ವಜ್ಞಾನವೇ ಬುನಾದಿ. ಇಂದು ಒಂದೇ ಪ್ರದೇಶದಲ್ಲಿ ಸ್ಥೂಲ ಸಿದ್ಧಾಂತೈಕ್ಯವೂ ಇಲ್ಲದ ಜನ ವಾಸಿಸುವುದನ್ನೊಪ್ಪಿಕೊಂಡದ್ದರಿಂದ ನಾಗರಿಕತೆ ಹೆಚ್ಚಿತು, ಸಂಸ್ಕೃತಿ ನಿರ್ವೀರ್ಯವಾಯಿತು. ವಿಚಾರ ವಿಘ್ನಿತವಾಗಿ ಕಾರ್ಯಕರತೆಯಲ್ಲಿ ಹೀನವಾಗಿ, ಕಲಹ ಅಶಾಂತಿಗಳುದಿಸಿ ಕೇವಲ ವಿಚಾರದಲ್ಲಿ(ಇದು ಅನಾಗರಿಕತೆ) ಪರಿಣಮಿಸುವಂತಾಗಿದೆ. ಅನಾಗರಿಕತೆಗೆ ಹೇಸುವ ನಾಗರಿಕತೆಯಲ್ಲಿ ವಿಚಾರ, ವಿಲಾಸವಸ್ತು ಅಥವಾ ರಾಜಕೀಯ ಬಲಾತ್ಕಾರ ಎನಿಸುವುದು ಅನಿವಾರ್ಯವಾಗಿದೆ. ಏಕಧರ್ಮೀಯ ಸಹಜೀವನ ಹಿಂದಿನ ಸುವ್ಯವಸ್ಥೆಯಾಗಿತ್ತು. ಅಂಥದು ಸದ್ಯಃ ಅಸಾಧ್ಯವೆಂದು ಜನ ತಿಳಿದಿದೆ–ಪಾಕಿಸ್ತಾನ ಅಂಥ ಒಂದು ಬದಲಾವಣೆಗೆ ಅಪ್ರತ್ಯಕ್ಷ ವೇಷದಿಂದ ಕಾರಣವಾದಾಗಲೂ!

ವಿಚಾರದ ಸ್ವಭಾವವೇ ತಜ್ಜನಕ ಭೌತಬುದ್ಧಿಯಂತೆ ಚಂಚಲ. ಆದರೆ ಅದರ ಚಂಚಲತೆಯ ಆಧಾರವಾಗಿ ಸ್ಥೂಲ ದೇಶೀಯತೆಯಿದ್ದಾಗ ಮಾತ್ರ ಸಹಕೃತ ಜೀವನ ಸಾಧ್ಯ. ಕೇವಲ, ದೇಶ ಪ್ರೇಮ ಯಾವಾಗಲೂ ಇದನ್ನು ಸಾಧಿಸದು. ಸಾರ್ವಜನಿಕ ಸ್ವತ್ತನ್ನು ಆಧರಿಸಿ ಹೊರೆವ ಮಹಾಸ್ತಂಭವೆಂದರೆ ಅಭಿಪ್ರಾಯ ವಿಚಾರ. ಅಂಥ ಸಾರ್ವಜನಿಕ ಸ್ಥಾಯಿಭಾವನಾ ರೂಪಣ ದೇಶ ಪೂಜ್ಯರಿಂದಲ್ಲದೆ, ಪ್ರದೇಶ ಪ್ರಾಂತ ಪೂಜ್ಯರಿಂದ ಸಾಧ್ಯವಿಲ್ಲ. ಗಾಂಧಿ, ಅರವಿಂದ, ರವೀಂದ್ರರು ದೇಶಪೂಜ್ಯರು. ಮಿಕ್ಕ ಇಂದಿನ ಮುಖಂಡರ ಜೀವನ ನೀತಿ ವಿವೇಕ ಕೇಳಹೋದುದರಿಂದಲೇ ಜನಜೀವನ ಅಶಾಂತಿ, ಅತುಷ್ಟಿಗಳಿಗೀಡಾಗಿದೆ; ಜನಾಂಗಿಕ ಸಾಮರಸ್ಯವಿಲ್ಲದಾಗಿದೆ. ಭಾಷಾವಾರ ಪ್ರಾಂತರಚನೆಯ ಪ್ರಶ್ನೆ ಇದಕ್ಕೊಂದು ನಿದರ್ಶನ. ನೆಹರುಗಳ ಪಾತ್ರ ಅದರಲ್ಲಿ ಸ್ಪಷ್ಟವೇ ಆಗಿದೆ.

ಸುವ್ಯವಸ್ಥೆಯೇ ರಾಜ್ಯದ ಸುರಕ್ಷಿತತೆಗೆ ಆಧಾರ ಎಂಬುದನ್ನು ಒಪ್ಪುವ ಯಾರಾದರೂ ಕೊನೆಯ ಪಕ್ಷ ರಾಜಕೀಯ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಸ್ಥೂಲ ಧ್ಯೇಯಗಳಲ್ಲಾದರೂ ತಾತ್ವಿಕ ಒಂದುತನವಿರುವುದು ಅಂಥ ವ್ಯವಸ್ಥೆಗೆ, ಸುಸಂಬದ್ಧಯುಕ್ತ–ಸಹಕೃತ ಜೀವನಕ್ಕೆ ಅಗತ್ಯವೆಂಬುದನ್ನು ಒಪ್ಪದಿರಲಾರರು. ಇಂಗ್ಲೆಂಡಿನ ಪ್ರಗತಿ ಸಾಧನೆಗೆ ಅಲ್ಲಿಯ ಜನತೆಯ ಆಂತರಂಗಿಕ ಸ್ಥಾಯಿ ಭಾವದಲ್ಲಿ ಒಂದುತನವಿರುವುದೇ ಕಾರಣ. ಭಾವ ಅಭಿಪ್ರಾಯ ಭಾವಿ ನಿಯಂತ್ರಿತ. ಅಂಥ ಅಭಿಪ್ರಾಯಭೇದಗತಸ್ಥಾಯಿ ಭಾವವನ್ನು ಕಳೆದುಕೊಂಡ ದೇಶ ಅಸ್ವತಂತ್ರವಾಗುತ್ತದೆ, ಪುಂಸ್ತ್ವನಾಶ ಹೊಂದುತ್ತದೆ; ನೈತಿಕ ವ್ಯಭಿಚಾರ, ಸಾಮಾಜಿಕ ಅರುಚಿಕತೆಗಳಿಗಿಳಿಯುತ್ತದೆ. ಸದ್ಯದ ಭಾರತ ಈ ಹಾದಿ ಹಿಡಿದ ದೇಶಗಳಿಗೊಂದು ದೃಷ್ಟಾಂತ.

ವಿಶ್ವಪ್ರಜಾತ್ವ ಆತ್ಮವಿಶಾಲ, ಸುಂದರ; ಆದರೆ ಸದ್ಯಃ ಅವ್ಯವಹಾರ್ಯ; ಕೆಲ ದೇಶಗಳಲ್ಲಿ ನಿಂದ್ಯ–ಅಪ್ರತ್ಯಕ್ಷವಾಗಿ ಶಿಕ್ಷಾರ್ಹ. Universe is the realized thought of God– ವಿಶ್ವವು ಬ್ರಹ್ಮನ ಸಾಕ್ಷಾತ್ಕೃತ ವಿಚಾರ ಎಂದಿರುವುದರಿಂದ ಆಧ್ಯಾತ್ಮನಿಷ್ಠನೀತಿಮತ್ತೆಯಿಲ್ಲದೆ ಜನ ವಿಶ್ವಪ್ರಜತ್ವವನ್ನು ವಿಚಾರದ ಗಡಿಯಿಂದ ಆಚಾರದೊಳಗಿಳಿಸಲಾರದು. ರಾಜಕಾರಣದ ಮಾರ್ಗದಿಂದಲೂ ಅದು ಖಂಡಿತ ಅಸಾಧ್ಯ. ಏಕೆಂದರೆ ಅದು ತಂತ್ರಪ್ರಧಾನವಾದದ್ದು. ಹೀಗಿರುವುದರಿಂದ ದೇಶ–ಪ್ರದೇಶ ಜಿಲ್ಲಾ ಪ್ರಜಾಭೇದವಲ್ಲದೆ ಇತರ ಹಲವಾರು ಬಗೆಯ ಉಪಾಯಗಳಿಂದ ಪ್ರಜಾಜೀವನ ಭೇದವುಂಟಾಗಿ ಭಾರತದ ಸಾಂಸ್ಕೃತಿಕ ಐಕ್ಯ ಇಂದು ಭಂಗ ಹೊಂದಿದೆ. ಅದರಿಂದಲೇ ರಾಜಕೀಯ ಸ್ವಾತಂತ್ರ್ಯ ದೊರೆತರೂ ಪಾಶ್ಚಾತ್ಯ ನಾಗರಿಕತೆಯ ಛಾಯೆ ತೆಳ್ಳಗೆ ಹರಡಿದ್ದರೂ ಭಾರತೀಯ ಜೀವನ ಸಾರ್ವಾಂಗಿಕ ಉಧ್ವಸ್ತ ಸ್ಥಿತಿಯಲ್ಲಿದೆ–ಬಹುಸಂಖ್ಯಾಕರಲ್ಲಿ ಬರಿ ಸ್ವಯಂ ಸೂಚನೆಯಿಂದ ವಾಸ್ತವಿಕ ಇಷ್ಟಾರ್ಥ ಸಿದ್ಧಿಸುವಷ್ಟು ಆತ್ಮಬಲ ನಮಗಿಲ್ಲ. ಆದುದರಿಂದ ಈ ಮೂಲ ಕಾರಣ ವಿಶ್ಲೇಷಣ ಮಾಡಿ ಅದರ ನಿರಾಸಕ್ಕೆ ಅನುಭವತಃ ಪ್ರಾರಂಭಿಸಬೇಕು.

ವಿಚಾರಕ್ಕೂ ಮುಖ್ಯ ವಿವೇಕಕ್ಕೂ ಬಹಳ ಸಂಬಂಧವಿದೆ. ಚತುರ್ವಿಧ ಪುರುಷಾರ್ಥಗಳು ಭಾರತೀಯ ಮೂಲ್ಯಗಳು. ಪಾಶ್ಚಾತ್ಯರ ಪರಮಾರ್ಥವೇನೆಂದು ಅಂಧ ನಿಸರ್ಗ ಶಕ್ತಿಗಳನ್ನೇ ಕೇಳಬೇಕು. ಪರಿವರ್ತನ ಸೂತ್ರ ಹಿಡಿದ ಪಾಶ್ಚಾತ್ಯನಿಂದು ಮೂಲ್ಯ ಪರಿವರ್ತನೀಯ ಎಂದು ನಂಬಿದ್ದೇನೆ. ಅಖಂಡ, ಅವ್ಯಾಹತ ಕ್ರಮಗತಿ ಅಥವಾ ವಿಶ್ವವಿಶಾಲ, ಪರಿವರ್ತನೀಯತೆ ಅವನ ಮನೋವಾಕ್ಕಾಯ ಕರ್ಮಕೃತ ಸರ್ವಜೀವಿತ ಕಾರ್ಯಗಳಿಗೂ ಆಧಾರವೆಂದು ನಂಬಿದಾಗ ಪಾಶ್ಚಾತ್ಯ ಸಂಸ್ಕೃತಿಗಿಂದು ಪರಮಾರ್ಥ ಅಥವಾ ಪ್ರಧಾನ ಪುರುಷಾರ್ಥವಿದೆ ಎಂದು ಭಾರತೀಯ ತತ್ವಜ್ಞಾನಿ ಒಪ್ಪುವುದು ಕಷ್ಟ. ಆದುದರಿಂದ ಅವನಿಗೂ ನಮಗೂ ಮೊದಲ ಮೂರು ಪುರುಷಾರ್ಥಗಳು ಭಿನ್ನರೂಪದಲ್ಲಿದ್ದರೂ ಜಾತ್ಯಾ ಸಾಧಾರಣಗಳು ಎಂದು ಬಹಳ ಸ್ಥೂಲವಾಗಿ ಹೇಳಬಹುದು. ಏಕೆಂದರೆ ನೀತಿ ಸಿದ್ಧಿ, ಅರ್ಥನ್ಯಾಯ ಮತ್ತು ಮಾನವ್ಯ ಸುಖ ಸಾಧನಗಳ ಬೆಂಬತ್ತಿ ಅವನಾದರೂ ಅನ್ಯ ದೇಶೀಯರಂತೆಯೆ ಸಾಗುತ್ತಿದ್ದಾನೆ. ಅವುಗಳಲ್ಲಿ ಭೇದಕ್ಕಾರಂಭವಾಗುವುದು ಕ್ರೈಸ್ತ, ಬಿಳಿಯ, ಪ್ರಜಾಪ್ರಭುತ್ವವಾದೀ ಪಾಶ್ಚಾತ್ಯ, ಮಿತ್ರ ರಾಷ್ಟ್ರೀಯ ಮುಂತಾದ ವಿಕಲ್ಪಗಳ ಪ್ರತಿರೂಪಗಳನ್ನು ಅವನ ಜಾಗ್ರತ್ ಚೈತನ್ಯ ಗ್ರಹಿಸಿದಾಗ. ಹಾಗೆ ಗ್ರಹಿಸದಿರುವ ವೇಳೆ ವಿರಳವಾದುದರಿಂದಲೇ ಪಾಶ್ಚಾತ್ಯರನ್ನು ನಾವಿಂದು ಏಶಿಯನ್ನರನ್ನು ಕಂಡಂತೆ ಕಾಣಲಾರದಾಗಿದ್ದೇವೆ. ಜೊತೆಗೆ ವಿಜ್ಞಾನದ ಹೆಸರಿನಲ್ಲಿ ಸ್ವದೇಶಾರ್ಥವನ್ನು ವ್ಯಾಪಾರಾದಿಗಳಲ್ಲಿ ಸೂಕ್ಷ್ಮ ರೀತಿಯಿಂದ ಸಾಧಿಸಿಕೊಂಡು ಪೌರಸ್ತ್ಯರಲ್ಲಿ ಬುದ್ಧಿ ಭೇದ ಉಂಟುಮಾಡಲಿಕ್ಕಾರಂಭಿಸಿ ಗೆಲುವಿನ ನಗೆಗಳು ಶ್ರೀಮಂತಿಕೆಯ ದಬ್ಬಾಳಿಕೆ ಅವನಿಗೆ ನಿಜವಾಗಿ ಉಕ್ತ ಮೂಲತ್ರಯವಿದ್ದರೂ ಇಲ್ಲವೇನೋ ಎಂಬಂತೆ ತೋರಗೊಟ್ಟಿದೆ. ಅದಕ್ಕೆ ಮತ್ತೂ ಒಂದು ಕಾರಣವೆಂದರೆ ವಿಜ್ಞಾನ ಭೌತವೇಷದಿಂದ ತಾ ಹೇಳಿದ್ದೇ ತತ್ವ, ತಾ ಗಳಿಸಿದ್ದೇ ಮೌಲ್ಯ ಎಂಬ ವಿಕ್ಷಿಪ್ತತೆ.

ಇದೆಂದೂ ವೈಶ್ವನರವಾಗಲಾರದು; ಹಾಗೆ ನೋಡಿದರೆ ಅಂಥ ಸಿದ್ಧಿಯ ಪರಮಶತ್ರು ಈ 'ವೈಜ್ಞಾನಿಕತೆ'.ಸೈನ್ಯಬಲ, ಅರ್ಥ, ಪ್ರಭಾವ ಹೆಚ್ಚಿರುವ ಹತ್ತು ಜನ ಹೇಳಿದ್ದೇ ಮೌಲ್ಯ, ನ್ಯಾಯ, ಧರ್ಮ, ವೈಜ್ಞಾನಿಕ ಎಂಬುದಕ್ಕೆ ವಿಶ್ವವ್ಯಾಪ್ತಿ ಬರಬೇಕಾದರೆ ದೂರದೃಷ್ಟದಿಂದ ಪ್ರಲಯೋಪಾಂತ ಕಾಲ ಬದಿಗಿರಬೇಕು–ಅಷ್ಟೆ. ದೇಶ ಕಾಲಾತೀತ ಚಿರಂತನ ವಾಸ್ತವಿಕ ಅಸ್ತಿತ್ವಾಂಶವೊಂದನ್ನು ಒಪ್ಪುವ ಬುದ್ಧಿ ಜಗತ್ತಿನ 'ಛಪ್ಪನ್ನೈವತ್ತಾರು' ರಾಷ್ಟ್ರಗಳ ಪ್ರಾತಿನಿಧಿಕ ತತ್ವಜ್ಞಾನಿಗಳಲ್ಲಿ ಉದಯವಾಗದೆ ಎಂದೂ ನಿಜವಾದ ವಿಶ್ವ ಸಾಧಾರಣ ಪುರುಷಾರ್ಥಗಳು ಕಾಣಿಸಲಾರವು. ಸೃಷ್ಟಿಯ 'ಬಹುಸ್ಯಾಂ' ನೀತಿಯನ್ನು ತರ್ಕಶುದ್ಧ ದುಃಸಹ ಕೋಟಿಗೆ ಒಯ್ಯುವ ಪಂಥ ಹಿಡಿದ ವೈಜ್ಞಾನಿಕ ತತ್ವಜ್ಞಾನ ಪರಂಪರೆ ಎಂದೂ ಸಾಧಾರಣೀಕರಣ, ಸಮನ್ವಯ, ಸಹಮತ, ಸಹಾನುಭೂತಿ, ಸಹೇಕ್ಷಣಗಳನ್ನು ಭಿನ್ನ ಜನಾಂಗಗಳಲ್ಲಿ ಹುಟ್ಟಿಸಲಾರದು. ಅನುಲ್ಲಂಘ್ಯ ಭೇದಗತಿಯನ್ನು ಸಹಿಸಿಕೊಂಬ ಶಕ್ತಿ ಮಾನವ ಸ್ವಭಾವಕ್ಕಿಲ್ಲ. ಅನಂತ ಬಹುತ್ವದ ಕಲ್ಪನೆಯಲ್ಲಿ ಮಾತ್ರ ವ್ಯಕ್ತಿ ರಮಿಸಬಲ್ಲ. ಅವುಗಳ ಕಾರ್ಯಗತಿಗೆ ಏಕಕಾಲದಲ್ಲಿ ಸಿಕ್ಕಿದರೆ ಅವ ನುಚ್ಚು ನೂರು! ಜಗತ್ಸಾಧಾರಣ ಮೌಲ್ಯ ನಿಷ್ಠೆಯಿಲ್ಲದೆ, ಒಂದು ಜಗತ್ತಾಗದು, ಜಾಗತಿಕ ಸರಕಾರ ಹುಟ್ಟದು, ಮಾನವ ಸಂಸ್ಕೃತಿ ಒಂದೆನಿಸದು; ಹಾಗಾಯಿತೆಂದು ತಿಳಿವವ ಹಗಲುಗನಸು ಕಾಂಬ ತಿರುಕ.

ಈ ಸಂದರ್ಭದಲ್ಲಿ ಪ್ರಸಿದ್ಧ ವಿಮರ್ಶಕ ಟಿ.ಎಸ್.ಇಲಿಯಟ್‌ನ ಅಭಿಪ್ರಾಯವನ್ನು ಉಲ್ಲೇಖಿಸುವುದು ಅಪ್ರಸ್ತುತವಾಗಲಾರದು. 'ಪಾಶ್ಚಾತ್ಯೀಕರಣದ ಅರ್ಥವಿಜಯದಿಂದ ಪೌರಸ್ತ್ಯ ಸಮಾಜದ ಕೆಲ ಸದಸ್ಯರು ಬಹುಬೇಗ ಆಭಾಸಿಕ ಲಾಭಗಳನ್ನು ಪಡೆದರು. ಅದರಿಂದ ಪೌರಸ್ತ್ಯನು ತನ್ನ ನಾಗರಿಕತೆಯ ಬಗ್ಗೆ ಹೆಚ್ಚು ಅತೃಪ್ತನಾಗುವಂತಾಗಿ ಆ ಮೂಲಕ ಈ ಅತೃಪ್ತಿಗೆ ಕಾರಣವಾದುದನ್ನು ಹೆಚ್ಚು ತಿರಸ್ಕರಿಸತೊಡಗಿದನು; ಅಲ್ಲದೆ, ಅವನು ಭೇದಗಳನ್ನು ಹೆಚ್ಚಾಗಿ ಗಮನಕ್ಕೆ ತಂದುಕೊಳ್ಳುವಂತಾಯಿತು. ಈ ಭೇದಗಳಲ್ಲಿ ಕೆಲವೇನೋ ಆ ಅರ್ಥವಿಜಯದಿಂದ ಮಾಯವಾಗುವಂತಾದುದು ನಿಜ. ಆದರೆ ಅದು ದೇಶೀಯ ಸಂಸ್ಕೃತಿಯನ್ನು ಅದರ ಅತ್ಯುಚ್ಚ ಮಟ್ಟದಲ್ಲಿ ಭಂಗಿಸಿತಲ್ಲದೆ ಜನಪದವನ್ನು ಮುಟ್ಟದೆ ಹಾಗೇ ಉಳಿಯಿತು.' ಭಾರತ ಸಂಸ್ಕೃತಿಯ ಪ್ರಸಿದ್ಧ ಮಟ್ಟವಿಂದು ವಿಸಂಗತ, ಅಪಶ್ರುತಿಸಂಪನ್ನ ಎನಿಸಲು ಮೇಲಿನ ವಿವರಣೆ ಕಾರಣ ಕೊಡುತ್ತದೆ. ಬ್ರಿಟಿಷರ ಸಂಸ್ಕಾರದಾನಪದ್ಧತಿಯಲ್ಲಿ ಉತ್ತಮಿಕೆಯ ಅಹಂಕಾರವಿದ್ದುದು ಅದು ಇಲ್ಲಿ ಜೀರ್ಣವಾಗದೆ ಉಳಿಯಲು ಮತ್ತೂ ಒಂದು ಕಾರಣ. ಬ್ರಿಟಿಷರ ಈ ಅಪಜಯವನ್ನು ಇಲಿಯಟ್ ಧಾರ್ಮಿಕ ಸೋಲು ಎನ್ನುತ್ತಾನೆ. ಏಕೆಂದರೆ ಅವನ ಪ್ರಕಾರ ಧರ್ಮ ಮತ್ತು ಸಂಸ್ಕೃತಿಗಳು ಒಂದೇ ನಾಣ್ಯದ ಎರಡು ಮುಖಗಳು. 'ಭಾರತದಲ್ಲೇನಾದರೂ ಸ್ತಿಮಿತತೆ ಉಳಿಯಬೇಕಾದರೆ ಶಾಂತಿಯುತ ವಾತಾವರಣದಲ್ಲಿ ಅನೇಕ ರಾಜ್ಯಗಳ ಶಿಥಿಲ ಸಂಯುಕ್ತ ಸಂಬಂಧ ಬೆಳೆಯಬೇಕು. ಹಾಗಲ್ಲದೆ ಸರ್ವಸಾಮರೂಪ್ಯ ತರಲೆಂದು ಸರ್ವ ವರ್ಗ ವಿನಾಶವನ್ನೂ ಸರ್ವಧರ್ಮ ಪರಿತ್ಯಾಗವನ್ನೂ ಆರಂಭಿಸಿದರೆ ಭಾರತೀಯ ಸಂಸ್ಕೃತಿಯೇ

ನಷ್ಟವಾದೀತು' ಎಂದು ಪ್ರಾದೇಶಿಕ ಭೇದಾಂಶಗಳನ್ನು ಬದುಕಿಸಿಕೊಂಡು ಹೋಗಬೇಕೆಂಬ ಇಲಿಯಟ್ ಜಾಗತಿಕ ಸಂಸ್ಕೃತಿಯ ಸಿದ್ಧಿ ಅಸಾಧ್ಯ ಎಂದು ಧ್ವನಿಸಲು ಸದ್ಯದ ನಾಗರಿಕತೆಗಳಲ್ಲಿಯ ನಾನಾವಿಧವಾದ ಅಂಗರಸಗಳನ್ನು ಸಸೂತ್ರಗೊಳಿಸುವ ಯಾವ ಒಂದು ಅಂಗರಸವೂ ಹೊಳೆಯದಾಗಿರುವುದೇ ಕಾರಣ. ದೇವರನ್ನು ಹೊರಗಟ್ಟಿದ ವಿಜ್ಞಾನ ಪಶ್ಚಿಮ ಅವನಿಗೆ ಸಮವಾದ ಬಲಿಷ್ಠ ಮೌಲ್ಯವನ್ನೂ ಜಗತ್ತಿಗೆ ನೀಡಿಲ್ಲ. ಈ ಅವಸ್ಥೆ ಉಳಿದಿರುವವರೆಗೆ ಕೇವಲ ಧರ್ಮಾರ್ಥ ಕಾಮಗಳ ಅತಿ ಮೌಲಿಕ ಅತಿ ಸ್ಥೂಲ ಸಾದೃಶ್ಯದಿಂದ–ಅದರಲ್ಲೂ ಹೃದಯಕ್ಕೆ ನ್ಯಾಯವಾದ ಸ್ಥಾನ ಕೊಡದ ವಿಜ್ಞಾನಿಗಳೂ ರಾಜಕಾರಣಿಗಳೂ ಏಕಜಗತ್ತನ್ನು ನಿರ್ಮಿಸಲು ಶಕ್ತರಾದಾರೆಂಬುದು ಗಗನಕುಸುಮ. ಭೇದಾಂಶ ಅಭೇದಾಂಶಗಳ ಸಮಪ್ರಾಧಾನ್ಯ ಆರೋಗ್ಯಕರ, ಸಾಂಸ್ಕೃತಿಕ ಜೀವನಕ್ಕೆ ಅವಶ್ಯಕ ಎಂಬುದು ನಿಜ. ಆದರೆ ಅಭೇದಾಂಶಗಳಲ್ಲಿ ಒಂದಾದರೂ ಭೇದದ ಮಣಿಗಳನ್ನು ಪೋಣಿಸುವ ಸಾಮರ್ಥ್ಯ ತಳೆಯದೇ ಇದ್ದಲ್ಲಿ ಬಲಿಷ್ಠ ಭೇದಗಳ ಘರ್ಷಣವನ್ನು ದುರ್ಬಲ ಅಭೇದಗಳು ನಿಲ್ಲಿಸಲಾರದೆ, ಜಾಗತಿಕ ಒಂದುತನ ಸಾಂಸ್ಕೃತಿಕವಾಗಿ ಸಾಧ್ಯವಾಗದು. ಸಾಂಸ್ಕೃತಿಕ ಅಡಿಗಟ್ಟಿಲ್ಲದ ಆರ್ಥಿಕ, ಸಾಮಾಜಿಕ, ರಾಜಕೀಯ ಕೂಡಿಕೆಗಳು ಅಚಿರಸ್ಥಾಯಿ, ಅಪೂರ್ಣ, ಅಭಾಸಿಕ, ಅನವಲಂಬನೀಯ. ಧರ್ಮ ಸ್ಫೂರ್ತಿಯಿಲ್ಲದ ಸಂಸ್ಕೃತಿಯ ಹಣೆಯಬರಹವೂ ಅಷ್ಟೆ. ಸ್ಫೂರ್ತಧರ್ಮ ಪರಮಾರ್ಥದಲ್ಲಿ ಅಲೌಕಿಕ, ಅತೀಂದ್ರಿಯ, ಅಪರಿವರ್ತನೀಯ ಅಂಶಗಳನ್ನು ಕಂಡೇ ತೀರುತ್ತದೆ. ಹಿಂದಿನ ನಾಗರಿಕತೆಗಳ ಮತ್ತು ಇಂದಿನ ಬಹುಸಂಖ್ಯ ನಾಗರಿಕತೆಗಳ ಅಂತರ್ಯವನ್ನು ವಿಶ್ಲೇಷಿಸಿ ನೋಡಿದರೆ ಇದರ ಅರ್ಥ ಮನದಟ್ಟಾಗುತ್ತದೆ. ಅತಿ ಸ್ವಲ್ಪ ವಿದ್ಯಾವಂತಮನ್ಯರ ಹೊರಮಾತುಗಳ ಆಧಾರದಿಂದ ಯಾವ ದೇಶ ಕಾಲದಲ್ಲೂ ಸಂಸ್ಕೃತಿ, ನಾಗರಿಕತೆಗಳ ಬಗ್ಗೆ ಅಭಿಪ್ರಾಯ ತಾಳಲು ಬರದು.

Culture is an aquaintance with the best that has been thought and said–ಹೇಳಿದ ಮತ್ತು ಆಲೋಚಿಸಿದ ಅತ್ಯುತ್ತಮ ವಿಷಯಗಳ ನಿರ್ಣಯ ಆಯಾ ವ್ಯಕ್ತಿಯ ಕೃತಾಕೃತ ಜೀವನ ದರ್ಶಕ ವಿವೇಕವನ್ನವಲಂಬಿಸಿದೆ. ಅಂಥ ವಿವೇಕಕ್ಕೆ ತನ್ನನ್ನು ರೂಪಿಸಿಕೊಳ್ಳಲು ವ್ಯಕ್ತಿ ಸಂಸ್ಕೃತಿಯು ಕ್ರಮಬದ್ಧವಾಗಿ, ಉದ್ದೇಶ ಘಟಿತವಾಗಿ ಜ್ಞಾನಾರ್ಜನೆ ಮಾಡಬೇಕು. ಹಾಗೆ ಜ್ಞಾನಾರ್ಜನೆ ಮಾಡದವರು, ಮಾಡಿ ಅದರಂತೆ ಜೀವನ ರೂಪಿಸಿಕೊಳ್ಳದವರು ಮನೋವಾಕ್ಕರ್ಮದಲ್ಲಿ ಸಾಂಗತ್ಯವುಳ್ಳ ಅರೆವಾನಿಸಿಸರೇ ಸರಿ. ಸಂಸ್ಕೃತಿ ಸುಶಿಕ್ಷಿತನ ಧೀಮಂತನ ದೃಷ್ಟಿಕೋನ. ಅಂಥ ಧೀಮಂತಿಕೆ ಸಂಸ್ಕೃತಿಯ ಚತುರಂಗಗಳ ಪರಿಜ್ಞಾನದಿಂದ ಶಕ್ತ್ಯನುಸಾರ ವರ್ತನೆಯ ಮಾನದಂಡವನ್ನಿಟ್ಟುಕೊಂಡು ವ್ಯವಹರಿಸುವ ಅತ್ಯಲ್ಪ ಸಂಖ್ಯರಲ್ಲಿ ಮಾತ್ರ ಕಂಡುಬರುತ್ತದೆ–ಎಲ್ಲ ಕಾಲ, ದೇಶಗಳಲ್ಲೂ ಬರಿ ಶಬ್ದಕೋಶ, ಅರ್ಥಕೋಶ, ಕಲ್ಪನಾಕೋಶ, ಸ್ವಪ್ನಕೋಶ ಎನಿಸುವ ವಿದ್ವಾಂಸರ ಆತ್ಮಸಮರ್ಥನಾ ತಂತ್ರ ಎಂದೂ ಸಂಸ್ಕೃತಿ ದ್ಯೋತಕವಾಗಲಾರದು.

ಎರಡನೆಯದಾಗಿ ಸಂಸ್ಕೃತಿಯ ಹ್ರಸ್ವದೀರ್ಘ ಬಗೆಗಳಲ್ಲಿ ಅಡಿಗಟ್ಟು ಚಾಂಚಲ್ಯವೇ ಆದರೆ ಅಲ್ಲಿ ಸಂಸ್ಕೃತಿ ಸಾರ್ಥಕವಾಗಿ ಬೆಳೆಯಲಾರದು. ಸರ್ವಂ ಕ್ಷಣಿಕಂ ಎಂಬವರು ಕುರ್ವತೋ–ಜೀವತೋ ವ್ಯಾಘಾತವನ್ನು ಆಚರಿಸುತ್ತಾರೆ. ಅವರ ಸಂಸ್ಕೃತಿ ಮಳಲ ಮೇಲೆ ಕಟ್ಟಿದ ಮನೆ. ಸ್ವಭಾವ ಸಂಸ್ಕೃತಿಗಳ ನಿತ್ಯಾನಿತ್ಯತೆ ಮಾನವನ ಆಯುಃ ಪ್ರಮಾಣದ ಪ್ರಮಾಣಾನುಗುಣವಾಗಿ ವಿವೇಚನೀಯ; ಅವನ ಜೀವನದ ಆತ್ಯಂತಿಕ ಸತ್ಯದ ಬೆಳಕಿನಲ್ಲಿ ನಿರ್ಣೇಯ. ಲೋಕೋತ್ತರ ಆತ್ಮಜ್ಞಾನ ಸಾಮಾನ್ಯವಾಗಿ ಅಶಕ್ಯವಾದರೆ, ಲೌಕಿಕ ಆತ್ಮಜ್ಞಾನವಾದರೂ ಇದಕ್ಕೆ ಅಗತ್ಯ. ಅಷ್ಟಾದರೂ ಸಾಂಗೋಪಾಂಗವುಳ್ಳವರು ಸಾವಿರಕ್ಕೊಬ್ಬರು. ಹೀಗಿರುವುದರಿಂದಲೇ ಕೆಲ ಪಂಡಿತರು ಮಾನವ ಸಂಸ್ಕೃತಿ ಒಂದೇ ಎಂದು ತಮ್ಮ ವಿಶ್ವನರ ಸಿದ್ಧಾಂತವನ್ನು ಬಾಯಲ್ಲಿ ಘೋಷಿಸುತ್ತ ಹೋದರೆ, ಮತ್ತೆ ಕೆಲವರು ರಾಷ್ಟ್ರ, ಜಾತಿ, ಕುಲ, ವರ್ಣಗಳ ಉಪಾಧಿಯಿಂದ ಸ್ವಸಂಸ್ಕೃತಿಯವೆಗ್ಗಳವನ್ನು ಅನ್ಯರಿಗೆ ಹಿಂಸೆಯಾಗುವಂತೆ ಹೇಳುತ್ತ ಹೋಗುತ್ತಾರೆ. ಈ ಇಬ್ಬಗೆಯ ದೋಷಗಳು ಜಗತ್ತಿನ ಅತಿ ದೊಡ್ಡವರೆನಿಸಿಕೊಳ್ಳಬಯಸಿದ ಅನೇಕರಲ್ಲಿ ಕಂಡುಬರುವ ಸಂಸ್ಕೃತಿಯ ದ್ವಿಮುಖ ಅವರಿಗೆ ಹೊಳೆಯದಿಹುದೇ ಕಾರಣ. ಇನ್ನು ಇವುಗಳಲ್ಲಿ ಯಾವ ಮುಖ ಉತ್ತಮ ಎಂದು ಕೇಳುವವರಿಗೆ (ವಿಶ್ವಮುಖವೋ ಸಂಕುಚಿತ ಮುಖವೋ ಎಂದು ಪ್ರಶ್ನಿಸುವವರಿಗೆ) ನಿವೃತ್ತಿ ಪ್ರವೃತ್ತಿ ಮಾರ್ಗಗಳಲ್ಲಿ ಯಾವುದಕ್ಕೆ ನಿಮ್ಮ ಮನ ಹೆಚ್ಚು ಹತ್ತಿರವಾಗುತ್ತದೋ ಅನುಕ್ರಮವಾಗಿ ಅದು ಉತ್ತಮ ಎಂದು ಉತ್ತರ ಕೊಡಬೇಕಾಗುತ್ತದೆ. ಏಕೆಂದರೆ ವ್ಯಕ್ತ್ಯಹಂಕಾರ ವಿಶ್ವಾಹಂಕಾರಗಳು ಪ್ರವೃತ್ತಿ ನಿವೃತ್ತಿಗಳ ತಾರ್ಕಿಕ ತುದಿಗಳು. ಸಾರ್ವಾಂಗಿಕ ಸೊನ್ನೆಯಂತೆ ಭಾವ ಪದಾರ್ಥಕ್ಕೆ ಸಾರ್ವಾಂಗಿಕ ನಿವೃತ್ತಿ ಅಥವಾ ತಾಟಸ್ಥ್ಯ ಅಸಾಧ್ಯ, ಅಕಲ್ಪನೀಯ. ಆದುದರಿಂದ ಸಂಸ್ಕೃತಿ ವಿಶ್ವಪರತೆಯ ಮೂಲ ವ್ಯಾಪ್ತಿಯಿಂದ ಕೇವಲ ಸ್ವಪರತೆಯ ಅಂತ್ಯವ್ಯಾಪ್ತಿಯವರೆಗೆ ಅನಂತ ಸಂಖ್ಯಾಮಾನದ ಚಿಕ್ಕ ದೊಡ್ಡ ವೃತ್ತಗಳಲ್ಲಿರಬಹುದು. ಕೇವಲ ಲೌಕಿಕ ಸ್ವಪರತೆ ಅಸಂಸ್ಕೃತಿ ಕುಸಂಸ್ಕೃತಿ ಎಂದು ವ್ಯವಹರಿಸಲ್ಪಡುತ್ತದೆ–ಕೇವಲ ವೈಷಯಿಕ ಸ್ವಹಿತದಂತೆ.

ಸಂಕೋಚ ಭೇದಪರ, ವಿಕಾಸ ಅಭೇದಪರ. ಐಹಿಕ ಉತ್ಕರ್ಷಗಳ ಸುಖ ಪರಿಪೂರ್ಣತೆಯ ಕಲ್ಪನೆ ಸಂಕೋಚವನ್ನವಲಂಬಿಸಿದೆ. ಆದರೆ ಸಂಕೋಚದ ತಾರ್ಕಿಕ ಅಂತ್ಯ ಸ್ವಪರಿತಕ. ಆದುದರಿಂದ ನಮ್ಮ ಪ್ರಯತ್ನ ಯಥಾಶಕ್ತಿ ವಿಕಾಸದತ್ತಲೆ ಹರಿಯಬೇಕಾಗಿದೆ. ಅದರಿಂದ ಬಾಹ್ಯ ಚಿಹ್ನವಾದ ನಾಗರಿಕತೆ ಮತ್ತು ಆಂತರಿಕ ಪ್ರಗತಿ ಚಿಹ್ನವಾದ ಸಂಸ್ಕೃತಿ ಇವುಗಳಲ್ಲಿ ಘರ್ಷಣೆ ಬಂದಾಗ ಬಾಹ್ಯಕ್ಕಿಂತ ಆಂತರಿಕ ಜೀವನಕ್ಕೆ ಬೆಲೆ ಹೆಚ್ಚು ಕೊಡಬೇಕೆಂದು ಭಾರತೀಯ ಮತಿ ಹೇಳುತ್ತ ಹೇಳುತ್ತ ಬಂದಿದೆ. ಅಲ್ಲಿಯವರೆಗೆ ಸಾಮಾನ್ಯ ಸಂಸ್ಕೃತರು ಮಧ್ಯಮ ಪರಿಮಾಣದಲ್ಲಿ ಸಾಗುತ್ತಾರೆ.



['ಜಯಕರ್ನಾಟಕ']

# ೧೬. ಅಹಿಂಸೆ ಮತ್ತು ಜಗತ್ತಿನ ಉಳಿವು

ಪ್ರಾಣಿಶಾಸ್ತ್ರ ಕಲಿಸುವ 'ಜೀವಕ್ಕೆ ಜೀವ ಆಹಾರ' ಎಂಬ ನೀತಿಯನ್ನು ಸಾರುವ ಮಾನವ ವರ್ಗವು ಜಾಗತಿಕ ಶಾಂತಿಯನ್ನು ಉಪದೇಶಿಸಿ, ಮುಂದೆ ಎಂದೂ ಯುದ್ಧವಾಗದಂಥ ಆವರಣವನ್ನು ನಿರ್ಮಿಸೀತು ಎಂಬುದು ಬುದ್ಧಿವಂತರ ಆಶಾವಾದವಾಗಲಾರದು. ಕಾರಣವಿಲ್ಲದೆ ಕಾರ್ಯವಾಗುವುದೇ? ಮದ್ಯ ಮಾಂಸಗಳು ಮಾನವನ ಅನಿವಾರ್ಯವೂ ಅತ್ಯಗತ್ಯವೂ ಆದ ಆಹಾರ ಪದಾರ್ಥಗಳಲ್ಲವೆಂಬುದು ಪ್ರತ್ಯಕ್ಷ ಸಿದ್ಧವಾದುದು. ಆದರೂ ಅವುಗಳಿಗೆ ಬಾಯಿನೀರು ಬಿಡುವ ಇಂದ್ರಿಯ ಚಾಪಲ್ಯವುಳ್ಳ ರಾಜಸತ್ವವಿದ್ದಾಗ ಯಾವ ನಾಯಕರು ಎಂಥ ಜಾಗತಿಕ ಸರಕಾರವನ್ನು ರಚಿಸಿದರೂ ಅದು ಚಂದ್ರಲೋಕದಲ್ಲಿ ಖಾಯಂ ಆಗಿ ಉಪನಿವೇಶಿಸಿ ಇರುವ ಮಾನವ್ಯ ಆಶೆಯಷ್ಟೇ ಸ್ಥಿರತೆಯುಳ್ಳದ್ದು. ವಿಜ್ಞಾನ ಪುರಾಣಿಕರ ಅಸಂಬದ್ಧ ಪ್ರಚಾರ ಇದಕ್ಕಿಂತ ಹೆಚ್ಚು ಬುರುಡೆಯಾಗಲು ಸ್ಥಳಾವಕಾಶವಿಲ್ಲ.

**ಜಾಗತಿಕ ಶಾಂತಿ ಪ್ರಯತ್ನ:**ಭಾರತದ ಜೈನ–ಬೌದ್ಧ–ಹಿಂದು (ವೀರಶೈವ ಸಹಿತ) ಸಮಾಜ ಮೇಲಿನ ಅಂಶವನ್ನರಿತೇ 'ಅಹಿಂಸೆಯನ್ನು ಪರಮಧರ್ಮ' ಎಂದು ಸ್ವೀಕರಿಸಿತು. ಈ ಸ್ವೀಕೃತ ಆದರ್ಶ ಸಮಸ್ತ ಭಾರತದಲ್ಲಿ ಇನ್ನೂ ಸಾಕಷ್ಟು ವ್ಯಾಪಕವಾಗಿ ಪ್ರಭಾವ ಬೀರಿಲ್ಲ. ಆದರೆ ಈ ಆದರ್ಶ ಸ್ವೀಕಾರವು ಜಾಗತಿಕ ಶಾಂತಿಯನ್ನು ಸ್ಥಾಪಿಸುವ ಯತ್ನದ ಅಡಿಗಲ್ಲು ಎಂಬುದನ್ನು ಬಹಳ ಜನ ಅರಿಯರು. ಕಾಮ, ಕ್ರೋಧ, ಮದ, ಮತ್ಸರಗಳಿಲ್ಲದ ಮನುಷ್ಯರು ಹುಟ್ಟರಾದರೂ ಪ್ರಾಣಿಹಿಂಸಾ ವಿಮುಖತೆಯ ಸಂಸ್ಕಾರ ತಲೆ ತಲಾಂತರಗಳಿಂದ ಜಗತ್ತಿನ ಎಲ್ಲ ರಾಷ್ಟ್ರಗಳಲ್ಲೂ ನಡೆದು ಬಂದರೆ ರಕ್ತಪಾತ ಅಸಹ್ಯವೆನ್ನಿಸಿ ದುಷ್ಟರು ತಮ್ಮ ದುರಾಶೆಗಳನ್ನು ಸಾಧಿಸಲು ಯುದ್ಧೇತರ(ಮಾರಣೇತರ) ಮಾರ್ಗಗಳನ್ನು ಅನುಸರಿಸುವ ಸಂಭವ ಹೆಚ್ಚಾಗಬಹುದಾಗಿದೆ. ಯುದ್ಧ ನಿವಾರಣೆಗಾಗಿ ಅಣುಚಾಲಿತ ಶಸ್ತ್ರಗಳನ್ನು ಬಹಿಷ್ಕರಿಸುವ, ಮಾರಣಾಸ್ತ್ರಗಳನ್ನು ನಾಶ ಮಾಡಿ ಮತ್ತು ಉತ್ಪಾದಿಸದಂತೆ ಕರಾರು ಮಾಡಿಕೊಳ್ಳುವ ಮುಂತಾದ ಯಾವ ಮಾರ್ಗವೂ ಹೃದಯ ಪರಿವರ್ತನ ಮಾಡಲು ಸಮರ್ಥವಾಗದು. ಹೃದಯದಲ್ಲಿ ದುರಾಲೋಚನೆಯೇಳುತ್ತಿರುವುದನ್ನು ಸಂಪೂರ್ಣವಾಗಿ ಎಲ್ಲ ಮನುಷ್ಯರಲ್ಲೂ ನಿಲ್ಲುವಂತೆ ಮಾಡಲಾಗದಿದ್ದರೂ ದುಷ್ಕಾರ್ಯಗಳಲ್ಲಿ ಅತ್ಯಂತ ಹೇಯವೂ ವಿನಾಶಕರವೂ ಆದ ಯುದ್ಧದ ಪರಿಚಯ, ಬಳಕೆಯ ಆಸೆ ಮತ್ತು ಅನುಕೂಲಗಳನ್ನು ಶಿಕ್ಷಣಬಲದಿಂದ ಮಾಂಸಾಹಾರಿಯಲ್ಲದ ಶಾಸ್ತ್ರೀಯ ಲಕ್ಷಣವುಳ್ಳ ಅಹಿಂಸಾತ್ಮಕ ಮನುಷ್ಯನಿಗೆ ತಿಳಿಸಿ, ಈ ಮೂರಕ್ಕೂ ಹಿನ್ನಲೆಯಾದ ಮನೋಧರ್ಮವನ್ನು ವಿವರಿಸಿ, ಯುದ್ಧ ತ್ಯಾಗ ಬುದ್ಧಿ ಹುಟ್ಟಿ ನೆಲೆ ನಿಲ್ಲುವಂತೆ ಯುದ್ಧದಿಂದಾಗುವ ದೀರ್ಘ ಕಾಲಿಕವೂ ಬಹುಜನ ವ್ಯಾಪಕವೂ

ಆದ ದುಷ್ಪರಿಣಾಮಗಳನ್ನು ಮನಂಬುಗುವಂತೆ ಬೋಧಿಸಿ, ಹೆಚ್ಚು ಸಫಲತೆ ಹೊಂದಬಹುದು. ಅಹಿಂಸೆಯ ಅಖಂಡೋಪಾಸನೆಯನ್ನು ಮಾಡದ, ಮಾನವಶಕ್ತಿಯ ಶಕ್ಯತೆಗೆ ತಕ್ಕಷ್ಟು ಅಹಿಂಸಾಚಾರವನ್ನು ರೂಢಿಸಿಕೊಳ್ಳದ ಜನರ ಹೃದಯದಲ್ಲಿ ಯುದ್ಧ ಸಂನ್ಯಾಸವನ್ನು ನೆಲೆ ನಿಲ್ಲಿಸುವುದು ಅಷ್ಟು ಚಿರಸ್ಥಾಯಿಯಾಗಲಾರದು. ಮಾನವ ಶಕ್ತಿಗೆ ಪ್ರಾಣಿ–ಪಕ್ಷಿಗಳನ್ನು ಕೊಂದು ತಿನ್ನುವುದನ್ನು ಬಿಡಲು ಅಸಾಧ್ಯವಾಗದು. ಈ ಮಾಂಸ ತ್ಯಾಗವು ಅಹಿಂಸೆಯ ಆಧಾರವಾದ ಪ್ರಾಥಮಿಕ ಪಾಠ. ಜಗತ್ತಿನ ಆದ್ಯಂತವಾಗಿ ಈ ಪ್ರಥಮ ಪಾಠವನ್ನುಪ್ರಚುರಪಡಿಸಿದರೆ ದ್ವಿತೀಯ ಪಾಠ ಹೆಚ್ಚು ಫಲಕಾರಿಯಾದೀತು.

**ಅಹಿಂಸೆಯ ದ್ವಿತೀಯ ಪಾಠ:** ಅಹಿಂಸೆಯ ದ್ವಿತೀಯ ಪಾಠದಲ್ಲಿ ಶಾಶ್ವತ ನೀತಿಗಳಿಂದ ಪರಿಬದ್ಧವಾದ ಮತ್ತು ಸಂದರ್ಭ ಸಹಜವಾದ ನ್ಯಾಯಕ್ಕೆ ಅವಿರುದ್ಧವಾಗಿದ್ದು ಪರಿಣಾಮ ಪರಿಚ್ಛಿನ್ನವಾದ ಅಹಿಂಸಾತ್ಮಕ ವಿಚಾರ–ಆಚಾರ–ಉಚ್ಚಾರಗಳನ್ನು ರೂಢಿಸಿಕೊಳ್ಳುವುದು ಗಣ್ಯ. ಅಹಿಂಸೆ, ಸತ್ಯ ಅಸ್ತೇಯ(ಒಳ–ಹೊರ) ಶೌಚ, ಇಂದ್ರಿಯ ನಿಗ್ರಹಗಳು ಮಾನವ ಜಾತಿಯ ಯೋಗ್ಯತೆಯನ್ನು ಮತ್ತು ಉಳಿವನ್ನು ಅಳೆದು ನಿರ್ಧರಿಸಬಲ್ಲ ಶಾಶ್ವತ ನೀತಿಗಳು. ಈ ನೀತಿಗಳ ಆತ್ಯಂತಿಕ ಶುಭಪರಿಣಾಮಕತೆಗೆ ಭಂಗವುಂಟಾಗದಂತೆ ಮತ್ತು ಪೋಷಕವಾಗುವಂತೆ ಸಂಗತಿಗಳ ನ್ಯಾಯವನ್ನು ನಿರ್ಣಯಿಸುವ ಮಾರ್ಗವನ್ನು ಹಿಡಿದಾಗ ಮಾತ್ರ ಯಾವುದು ಯಾವಾಗ ಎಷ್ಟರ ಮಟ್ಟಿಗೆ ಹಿಂಸೆ ಅಥವಾ ಅಹಿಂಸೆ ಎಂಬುದು ಸತ್ಯವಾಗಿ ಸಿದ್ಧವಾಗುತ್ತದೆ.ರಚನಾತ್ಮಕ ದೃಷ್ಟಿಯ ಈ ರಹಸ್ಯವನ್ನರಿಯದೆ ಹೋದರೆ, ಇದು ಅಥವಾ ಅದು ಹಿಂಸೆ ಅಥವಾ ಅಹಿಂಸೆ ಎಂದು ವ್ಯರ್ಥ ವಾದದಲ್ಲಿ ಕಾಲ ಕಳೆಯುವ ದುರ್ಗತಿ ಪ್ರಾಪ್ತವಾಗುತ್ತದೆ. ರುಚಿದಾಸ್ಯವನ್ನು ಅನಿವಾರ್ಯವನ್ನಾಗಿತೆಗೆದುಕೊಳ್ಳುವ ವಾದಗಳಿಂದು ತತ್ವನಿಷ್ಠ ಜೀವನಕ್ಕೆ ಕುಠಾರಗಳಾಗಿವೆ. ಮದ್ಯಪಾನದ ಗ್ರಾಹ್ಯತೆ ಇಂದು ಅಂಥ ಒಂದು ವಾದ. ಸರಕಾರಿ ನೌಕರಿಗಳನ್ನೂ ಶಾಲೆ ಕಾಲೇಜುಗಳ ಸೀಟುಗಳನ್ನೂ ಜಾತ್ಯನುಸಾರ ಹಂಚುವುದು ಅಂಥ ಇನ್ನೊಂದು ರುಚಿವಾದ. ಸಮಾಜವಾದವನ್ನು ಜಾರಿಗೆ ತಂದರೆ 'ಪುಣ್ಯವಂತರ' ಜೀವನ ಮಟ್ಟ ಕೆಳಗಿಳಿಯುತ್ತದೆ–ಎಂಬುದು ಅಂಥ ಮೂರನೆಯ ವಾದ. ನ್ಯಾಯ ಸಾಧನೆಯ ಮೃದು ಮಾರ್ಗಗಳಿಗೆ ಬಗ್ಗದೆ, ಉಗ್ರ ಮಾರ್ಗಗಳನ್ನು ಹಿಡಿದರೆ, ಅಂಥ ಚಳವಳಕಾರರನ್ನು ಹತ್ತಿಕ್ಕುವ ಕ್ರಮವನ್ನು ನ್ಯಾಯವೆಂಬುದು ನಾಲ್ಕನೆಯ ರುಚಿದಾಸವಾದ. 'ತಿಂದ ಕೂಳು ಹಲ್ಲಿಗೆ ಹಿಡಿದಿದೆ' ಎಂಬ ಮಾತು ರುಚಿದಾಸ್ಯದ ಮದವನ್ನು ಚೆನ್ನಾಗಿ ವ್ಯಕ್ತಮಾಡುತ್ತದೆ.

**ರುಚಿವಾದಗಳ ಅವೈಜ್ಞಾನಿಕತೆ:** ರುಚಿವಾದಗಳ ಅವಿಚಾರ ಬದ್ಧತೆ ಆಭಾಸಿಕ–ಸರ್ವೋದಯದ ರಚನಾತ್ಮಕ ದೃಷ್ಟಿ ವಿರುದ್ಧವಾದ, ವಿಶಿಷ್ಟ ವರ್ಗ ಹಿತಾರ್ಥಗಳಿಗೆ ಅಧೀನವಾದ ತರ್ಕ ಮಾಡುವ ದುಷ್ಕೌಶಲ. ಈ ದುಷ್ಕೌಶಲದ ಪುರಸ್ಕಾರವು ಪ್ರಜಾಪ್ರಭುತ್ವದ ಹೃದಯವಾದ ಸಮಾಜವಾದದ ಪರಮ ಶತ್ರು. ಯುದ್ಧ, ಕಲಹ, ಮಾರಣ ಹಿಂಸೆಗಳನ್ನು ಅನಿವಾರ್ಯವಾದವುಗಳೆಂದು ಹಠ ಹಿಡಿಯುವ ವರ್ಗಗಳು ಜಾಗತಿಕ ಶಾಂತಿಯ ಮಾತನ್ನೆತ್ತುವುದು ಗೋಮುಖ ವ್ಯಾಘ್ರ ತಂತ್ರ. ಜಾಗತಿಕ ಸರಕಾರ ರಚನೆಯಾಗುವವರೆಗೆ

ಮಾಡಿದಂತೆ ಮಾಡುವ ಪ್ರತೀಕಾರ ನ್ಯಾಯವು ಅನಿವಾರ್ಯವೆಂಬುದು ಎಷ್ಟು ಗಮನಾರ್ಹವೋ ಜಾಗತಿಕ ಒಕ್ಕೂಟಕ್ಕಾಗಿ ಅವಿರತ ಪ್ರಯತ್ನಗಳನ್ನು ಮಾಡುತ್ತ ಹೋಗುವುದೂ ಅಷ್ಟೇ ಗಮನಾರ್ಹವಾದ ಸಮಕಾಲಿಕ ಕರ್ತವ್ಯ.

ಅಖಿಲ ಭಾರತೀಯ ನ್ಯಾಯ ದೃಷ್ಟಿಗೆ ಕೇಂದ್ರ ಸರಕಾರವು ಬೆಲೆ ಕೊಡದಿರುವಾಗ ಪ್ರಾಂತೀಯತೆಯ ಹೋರಾಟವು ನ್ಯಾಯ. ಆದರೆ ಈ ಹೋರಾಟದ ಜೊತೆಗೇ ಅಖಿಲ ಭಾರತೀಯತೆಯನ್ನು ಎತ್ತಿ ಹಿಡಿಯಲು ಪ್ರಾಂತ ನ್ಯಾಯ ದಾನವು ಅನಿವಾರ್ಯ ಸಾಧನವೆಂಬುದನ್ನು ಬಿಂಬಿಸುತ್ತ ಹೋಗುವ ಪ್ರಯತ್ನವೂ ಸಾಗಬೇಕು. ಈಯೆರಡರಲ್ಲಿ ಯಾವುದೂ ಬಿಡಲು ತಕ್ಕದ್ದಲ್ಲ; ಬಿಟ್ಟರೆ ಅದು ಅನ್ಯಾಯ, ಸರ್ವೋದಯ ಮಾರಕ. ವೃತ್ತಿ–ಸಮಾಜಗಳ ಹಿತಾರ್ಥ ವಿರೋಧವೂ ಅಹಿಂಸೆಯಂತೆಯೇ ಹಿತದ ಅರ್ಥವೂ ಶಾಶ್ವತ ಮೌಲ್ಯಗಳ ನೆಲೆಯಿಂದ ಮತ್ತು ದೀರ್ಘ ಪರಿಣಾಮಗಳ ನಿರೀಕ್ಷೆಯಿಂದ ಬಹುಜನ ವ್ಯಾಪ್ತಿಯ ಆಧಾರದ ಮೇಲೆ ನಿರ್ಣಯಿಸಲ್ಪಡದುದರಿಂದಲೇ ಸಂಭವಿಸುತ್ತದೆ. 'ವಿರೋಧವು ಆಭಾಸಿಕ, ಅದು ನಿತ್ಯಸತ್ಯವಲ್ಲ, ವಿರುದ್ಧಗಳ ಸಮನ್ವಯವು ಚಾತುರ್ಯದಿಂದ ಸಾಧ್ಯ' ಎಂಬುದು ಬುದ್ಧಿವಂತರ ಮಾನವ ಸಹಜ ಶ್ರದ್ಧೆ. ಈ ಶ್ರದ್ಧೆಗೆ ಧ್ರುವತ್ವವನ್ನು ಕೊಡದೆ, ಇಂಥ ಧ್ರುವ ಪರಿಧಿಯ ಪ್ರಭಾವಲಯವನ್ನು ಲೆಕ್ಕಿಸದೆ ಹೋದಾಗ ಶಾಶ್ವತ ಮೌಲ್ಯಗಳು ಆಚಾರ ಕ್ಷೇತ್ರದಿಂದ ಹೊರ ತಳ್ಳಲ್ಪಟ್ಟು ಮಾನವ ಸಮಾಜ ಅಧಃಪಾತ ಹೊಂದುತ್ತದೆ.

**ಅಹಿಂಸೆಯ ಸತ್ವಸ್ವರೂಪ:** ಮಹಾಭಾರತವು ಅಹಿಂಸಾತ್ಮಕತೆಯು ಪರಮ ಸತ್ಯ ಎಂದಿರುವುದು ಜೀವನಾಧಾಯಕ ನೀತಿ. ಸೃಷ್ಟಿಯ ಜೀವನದ ಉಳಿವು ಈ ನೀತಿಯ ಪರಮ ಸತ್ಯತೆಗೆ ಅಭೇದ್ಯವಾದ ಪ್ರಮಾಣ. ಹಿಂಸೆಯು ತಿಳಿವಿನ ಧರ್ಮ. ಅದರ ಅನಿವಾರ್ಯ ನ್ಯಾಯತೆಯು ತಾತ್ಕಾಲಿಕ, ಉದ್ದೇಶ ಪರಿಚ್ಛಿನ್ನ. ಶರೀರ ಶಕ್ತಿಯನ್ನೂ ಬುದ್ಧಿಶಕ್ತಿಯನ್ನೂ ತಾತ್ಕಾಲಿಕವಾಗಿ ಉತ್ತೇಜಿಸಿ, ಕೊಡುವ ಆ ಈ ಸತ್ ಫಲಕ್ಕಿಂತ ಹತ್ತು ಪಟ್ಟು ದುಷ್ಫಲಗಳನ್ನು ಕಾಲಾಂತರದಲ್ಲಿ ಚಿರವರ್ತಿಯಾಗುವಂತೆ ಕೊಡುವ ಮದ್ಯಪಾನವು ಹಿಂಸೆ. ಮಿತಪಾನವು ಮಿತ ಹಿಂಸೆ; ಅತಿಪಾನವು ಅತಿ ಹಿಂಸೆ; ವ್ಯಕ್ತಿಗೂ ಹಿಂಸೆ, ವ್ಯಕ್ತಿಗಳಿಂದ ತುಂಬಿದ ಸಮಾಜಕ್ಕೂ ಹಿಂಸೆ–ಮೊದಲು ಅಲ್ಪವಾಗಿ ತೋರಿದರೂ ಕೊನೆಗೆ ಮಹತ್ತಾಗಿ ಪರಿಣಮಿಸುವ ಹಿಂಸೆ! ದೀರ್ಘ ಕಾಲದ ಪರಿಣಾಮವನ್ನು ಚಿಂತಿಸದ ಅದೂರ ದೃಷ್ಟಿಯೆಂದಾದರೂ 'ಪ್ರಾಗ್ಮ್ಯಾಟಿಕ್ಕೇ?' 'ಪ್ಲ್ಯಾನ್ ಕಾನ್‌ಷಸ್ಸೇ?'(ವಾಸ್ತವಿಕ ಪ್ರಯೋಜನ ದೃಷ್ಟಿಯುಳ್ಳದ್ದೇ? ಪೂರ್ವಯೋಜಕ ಬುದ್ಧಿಯುಳ್ಳದ್ದೇ?)

ಬುದ್ಧಿಗಳಿರುವಷ್ಟು ವಾದಗಳಿರಬಹುದು. ಆದರೆ ಮೇಲಿನ ನಿಯಮಗಳನ್ನು ಅನ್ವಯಿಸಿದರೆ ಅವುಗಳಲ್ಲಿ ಒಂದೇ ಒಂದು ವಾದವು ಒಂದು ಸಂದರ್ಭದ ನ್ಯಾಯದ ಅವಿಕಲ್ಪಕ ಸತ್ಯವನ್ನು ಸಾಕ್ಷಾತ್ಕರಿಸಿಕೊಡಬಲ್ಲುದು. ವಿಜ್ಞಾನದ, ಅಂಕೆಸಂಖ್ಯೆಯ, ಪ್ರಾಕ್ಷಿಕ ಅನುಭವದ ಆಧಾರಗಳಿಂದ ವಾದಿಸಿ ಅಲ್ಪಬುದ್ಧಿಗಳನ್ನು ಅನುಕೂಲಿಸಿಕೊಳ್ಳುವ

ದುರಾಚಾರ ರುಚಿಸಂಪನ್ನರು ರಾಷ್ಟ್ರಹಿತಾರ್ಥಿಗಳಿಂದ ದಂಡನೀಯರಾಗುತ್ತಾರೆ. ಅಪಸಂಸ್ಕೃತರ ತಾತ್ಕಾಲಿಕ ಸುಖಜೀವನಕ್ಕಾಗಿ ಸಂಸ್ಕೃತರ ದೀರ್ಘಕಾಲಿಕ ಉಚ್ಚ ಆದರ್ಶಗಳನ್ನು ನಿಂದಿಸುವುದು ಬೆಳೆಯುತ್ತಿರುವ ಭಾರತದ ಸ್ವಾತಂತ್ರ್ಯ–ಶಾಂತಿಗಳಿಗೆ ಕಾಲಾಂತರ ಶತ್ರು.

ಜೀವಶಾಸ್ತ್ರಕ್ಕೆ ಮನಃಶಾಸ್ತ್ರವು ಪಾಠ ಕಲಿಸಬೇಕು. ರುಚಿವಿಚಾರವನ್ನು ಆದರ್ಶ ವಿಚಾರಗಳಿಗೆ ಅಧೀನಗೊಳಿಸಬೇಕು. ಆದರ್ಶಾಧೀನವಲ್ಲದ ವಿಚಾರವು ನೆಲೆಯಿಲ್ಲದುದು, ದುರ್ವಿಚಾರವಾಗಿ ಅಂತ್ಯದಲ್ಲಿ ಪರಿವರ್ತನ ಹೊಂದುವಂಥದು. ನೆಲಕ್ಕೆ ಆಕಾಶವಲ್ಲದೆ ಆಕಾಶಕ್ಕೆ ನೆಲ ಮೂಲಾಧಾರವಲ್ಲ. ಜಡಕ್ಕೆ ಜೀವ, ಜೀವಕ್ಕೆ ಬುದ್ಧಿ. ಬುದ್ಧಿಗೆ ಉಚ್ಚ ಆದರ್ಶ ತಾರಕಸೀಮೆ, ಸಾರ್ಥಕತೆಯ ಗಡಿ, ಪರಮಸಾಧ್ಯ. ಪರಮಸಾಧ್ಯವನ್ನು ನಿರ್ಲಕ್ಷಿಸುವ ಯಾವ ರಾಜಕೀಯವೂ ಜಗತ್ತಿಗೆ ಕ್ಷೇಮಕಾರಿಯಾಗದು.

**ಅದರ ಅರ್ಥ ಸೂಕ್ಷ್ಮ:** ಪಾಕಿಸ್ತಾನಕ್ಕೆ ಬಲಾತ್ಕಾರದಿಂದ ಬುದ್ಧಿ ಕಲಿಸುವುದು ಜಗದ್ಧಿತ. ಭ್ರಷ್ಟಾಚಾರವನ್ನು ಬಲಪ್ರಯೋಗದಿಂದ ನಿಲ್ಲಿಸುವುದು ಪ್ರಪಂಚದ ಸಂಸ್ಕೃತಿಯನ್ನು ಸಂವರ್ಧಿಸುವ ಮಹಾಸೇವೆ. ಬಲಪ್ರಯೋಗವು ಹಿಂಸೆಯೆಂಬುದು ನಿರವಗ್ರಹ ವಿಚಾರ. ಆದರ್ಶದ ಅಂಕುಶಕ್ಕೆ ಅಧೀನವಾದ ತರ್ಕದಂತೆ ಅದು ಅಹಿಂಸೆ. ಎಲ್ಲ ಆದರ್ಶಗಳೂ ಶ್ರುತಿ ಪ್ರಕಟಿತ, ವಿಜ್ಞಾನ ಸಿದ್ಧವಾದವುಗಳಲ್ಲ. ಅವುಗಳಲ್ಲಿ ಅಹಿಂಸೆ ಅಗ್ರೇಸರ. ಭಾರತೀಯರಿಗೆ ಅಹಿಂಸೆಯ ಮರ್ಮ ಅರಿಯದಾದರೆ ಮಿಕ್ಕವರಿಗೆಲ್ಲಿ ಅರ್ಥವಾದೀತು? ಮರ್ಮಜ್ಞತೆಯಿಲ್ಲದ ಶಬ್ದಾರ್ಥವಾದಗಳಿಂದ ಇಂದು ಶಿಕ್ಷಿತರು ಮೋಸಹೋಗಿದ್ದಾರೆ. 'ಹಿರಣ್ಮಯೇನ ಪಾತ್ರೇಣ ತತ್ವಂ ಪೂಷನ್ನಪಾವೃಣು' ಎಂಬ ಪ್ರಾರ್ಥನೆಯನ್ನು ಸತತವಾಗಿ ಮಾಡುವ ಶಿಕ್ಷಿತರಿಗೆ ಅಹಿಂಸಾದಿ ಮಹಾ ಮೌಲ್ಯಗಳ ನಿಜವಾದ ಅರ್ಥ ಹೊಳೆಯುವುದು. ಜಂಭದಂಭಗಳ ವೈಜ್ಞಾನಿಕತೆಯ ಶಪಥಗಳು ಏನನ್ನೂ ಸಾಧಿಸಿಕೊಡಲಾರವು!



**['ಸಚೇತನ' – ಅಕ್ಟೋಬರ್ ೧೯೬೬ – ಪುಟ ೮]**

# ೧೭. ಭಾರತೀಯ ನಾಗರಿಕತೆಯ ಸತ್ವ ಮತ್ತು ಸ್ವರೂಪ

## ೧. ಭಾರತ ಮತ್ತು ಈಜಿಪ್ಟ್

ಈಜಿಪ್ಟಿನ ನಾಗರಿಕತೆ ೭೦೦೦ ವರ್ಷ ಹಿಂದಿನದೆಂದು ಸಿದ್ಧವಾಗಿದೆ. ಸುಮೇರಿಯ, ಬ್ಯಾಬಿಲೋನ್, ಸಿಂಧು ಕಂದರಗಳ ನಾಗರಿಕತೆಗಳು ಅದಕ್ಕೆ ಹೆಚ್ಚು ಕಡಿಮೆ ಸಮಕಾಲೀನ. ಸುಮೇರಿಯದ ಲಿಪಿಜ್ಞಾನ ಕ್ರಿ.ಪೂ.೩೫೦೦ ವರ್ಷಗಳ ಹಳೆಯದು. ಆದ್ದರಿಂದ ಈ ನಾಗರಿಕತೆಗಳೆಲ್ಲವುಗಳಿಗೂ ಅದನ್ನು ಹೋಲುವ ಲಿಪಿಜ್ಞಾನ ಅಂದೇ ಇತ್ತೆಂದು ಊಹಿಸಲಾಗಿದೆ. ಯಾರಿಂದ ಯಾರು ಕಲಿತರು ಎಂಬುದು ಮಾತ್ರ ನಿತ್ಯ ಸಂದಿಗ್ಧ. ಮಾಹೆಂಜೋದಾರೋವಿನ ಮುದ್ರೆಗಳು ಕ್ರಿ.ಪೂ.೨೮೦೦ ವರ್ಷದವು. ಮೆಸೊಪೊಟೇಮಿಯದ ಉರುಕ್ಷಿತಿ(ಉರ್, ಕಿಷ್) ಎಂಬ ಸ್ಥಳದಲ್ಲಿ ಅವು ಸಿಕ್ಕಿವೆ. ವೈದಿಕ ಆರ್ಯರು ಅಂದು ಅಲ್ಲಿ ಹೋಗಿ ನೆಲೆಸಿದ್ದರೆಂದು ಇದರಿಂದ ಗೊತ್ತಾಗುತ್ತದೆ. ಋಗ್ವೇದದ ೭–೧೦೦–೪ ಸೂಕ್ತ ಉರುಕ್ಷಿತಿಯನ್ನು ಹೆಸರಿಸುತ್ತದೆ. ಅದೇ ವೇದದ ೯–೪೮–೧, ೧೦–೧೧೮–೮, ೧೦–೧೧೮–೯ ಸೂಕ್ತಗಳಲ್ಲೂ ಉರುಕ್ಷಿತಿ ಬಂದಿದೆ. ಅಂದ ಮೇಲೆ ವೈದಿಕ ನಾಗರಿಕತೆಯ ಆರಂಭ ಕ್ರಿ.ಪೂ.೩–೪ ಸಾವಿರ ವರ್ಷ ಹಳೆಯದು ಎನ್ನಬೇಕಾಯಿತು. ಅಥವಾ ಡಾ.ಶ್ರೀಕಂಠಶಾಸ್ತ್ರಿಗಳು ಹೇಳಿದಂತೆ (ಬರಿಯೂಪೀಯವೆಂದು ಹರಪ್ಪದ ಹೆಸರು, ವೇದೋಕ್ತವಾಗಿರುವುದರಿಂದ) ಸಿಂಧುಕಂದರದ ನಾಗರಿಕತೆ ಆರ್ಯಪೂರ್ವ ನಿವಾಸಿಗಳದ್ದಲ್ಲ. ಆರ್ಯರದೇ ಎಂದು ಸಿದ್ಧವಾಗುತ್ತದೆ; ಆರ್ಯ–ಆರ್ಯೇತರ ನಾಗರಿಕತೆಗಳು ನಿಕಟವರ್ತಿಗಳೆಂದೂ ಸಮಕಾಲೀನವೆಂದೂ ಹೇಳಬಹುದು. ಅವುಗಳಲ್ಲಿಯ ಸಾಂಸ್ಕೃತಿಕ ಕೊಡಕೊಳ್ಳುಗಳು ಕ್ರಿ.ಪೂ.೫೦೦೦ ವರ್ಷಗಳಿಂದಲೂ ನಡೆದುಬರುತ್ತಿದೆ ಎನ್ನಬಹುದು. ಯಯಾತಿಯ ಮಕ್ಕಳಾದ ಅನು–ತುರ್ವಸುಗಳು ಮ್ಲೇಚ್ಛ ಯವನರಾದರೆಂದು ಮಹಾಭಾರತ ಹೇಳಿದ್ದು ಕ್ರಿ.ಪೂ.೨೮೦೦ರಲ್ಲಿ. ಆರ್ಯರು ಉರುಕ್ಷಿತಿಯನ್ನು ಗೆದ್ದು ಆಳಲು ಹೋಗಿ ನೆಲೆಸಿದ್ದರೆಂಬುದನ್ನು ಸಮರ್ಥಿಸುತ್ತದೆ ಎಂಬುದು S.M. EI MANSOURI ಅವರ ಮತ.

ಕ್ರಿ.ಪೂ.೩೦೦೦ ವರ್ಷಗಳ ಹಿಂದೆ ಮೆಸೊಪೊಟೇಮಿಯದಲ್ಲಿ ದೊರಕಿದ ದೇವತಾ ವಿಗ್ರಹಗಳನ್ನು ಹೋಲುವ ವಿಗ್ರಹಗಳು ಸಿಂಧು ಕಂದರದ ಆ ಕಾಲದ ವಿಗ್ರಹಗಳನ್ನು ಹೋಲುತ್ತದೆ. ಅಂದರೆ ವಿಗ್ರಹಾರಾಧನೆ ಇಲ್ಲಿ ಇಂದಿಗೆ ೫೦೦೦ ವರ್ಷಗಳಾದರೂ ಹಳೆಯದೆನ್ನಬಹುದು; ಅಂದರೆ ವೇದಕಾಲದಲ್ಲಿ ವಿಗ್ರಹಾರಾಧನೆ ಇತ್ತೆಂದ ಹಾಗಾಯಿತು; ವೈದಿಕ ಮತದ ಆರ್ಯರು ಅದಕ್ಕೆ ಮೊದಲು ಪ್ರಾಧಾನ್ಯ ಕೊಟ್ಟಿರಲಿಕ್ಕಿಲ್ಲ–ಅದು ವಿದೇಶೀಯ ಪದ್ಧತಿ ಎಂದು. ಕ್ರಮೇಣ ಅವರ ಯಜ್ಞಸಂಸ್ಥೆ ಶಿಥಿಲವಾಗಿ ವಿಗ್ರಹಾರಾಧನೆ ಬಲಿಷ್ಠವಾಯಿತು. ಯಜ್ಞ ವೇದಿಕೆಯ ಯೋಜನೆ

ದೇವಸ್ಥಾನದ ನಕ್ಷೆಯಲ್ಲಿ ಲೀನವಾಗಿ ಹೋಯಿತು. ಮಹಾಭಾರತ ಹೇಳುವಂತೆ ಸಾತ್ವಿಕ ಪೂಜೆಯೇ ಬ್ರಾಹ್ಮ ಯಜ್ಞ, ಮೊದಲು ಪಶುಯಜ್ಞವು ಕ್ಷಾತ್ರ, ಕಡಿಮೆ ತರಗತಿಯದೆಂದಾಗಿತ್ತು.

ಭಾರತದ ಭಜ ಎಂಬಲ್ಲಿಯ ಗುಹಾಂತ ದೇವಾಲಯದಲ್ಲಿ ಈಜಿಪ್ಟಿನ ಮಾದರಿಯನ್ನು ಕಾಣಬಹುದು. ಅದರ ಕಾಲ ಕ್ರಿ.ಪೂ.೨ನೇ ಶತಮಾನ. ಆ ಕಾಲದಿಂದ ಭಾರತದಲ್ಲಿ ದೇವಾಲಯಗಳ ರಚನೆ ಜನಪ್ರಿಯವಾಗುತ್ತ ಹೋಯಿತೆನ್ನಬಹುದು. 'ಕಾರ್ಲಿ'ಯ ಗುಹಾಂತರ್ದೇವಾಲಯಗಳು ಅಂಥ ಇನ್ನೊಂದು ಉದಾಹರಣೆ. ಇಟ್ಟಿಗೆ ಮಡಿಕೆಗಳ ನಿರ್ಮಾಣದಲ್ಲೂ ಪ್ರಾಚೀನ ಈಜಿಪ್ಟು ಪ್ರಾಚೀನ ಭಾರತವನ್ನು ಹೋಲುತ್ತದೆ. ಮಣ್ಣು-ಮರಗಳಿಂದ ಮೊದಲು ಪ್ರತಿಮೆಗಳನ್ನು ಭಾರತವು ತಯಾರಿಸುತ್ತಿದ್ದರೆ ಕ್ರಿ.ಪೂ.೨೦೦ರಿಂದ ಕಲ್ಲಿನಿಂದ ತಯಾರಿಸಲಾರಂಭಿಸಿತು. ಬಿಹಾರದ ಬಾರಾಬರ ಗುಡ್ಡದಲ್ಲಿರುವ ಗುಹಾಂತರ್ದೇವಾಲಯಗಳು ಕ್ರಿ.ಪೂ.೩೦೦ವೆಂದು ಗುರುತಿಸಲಾಗಿದೆ.

ಶಿಖರ, ಸ್ವಸ್ತಿಕ ಚಿಹ್ನ ಮತ್ತು ಅಗ್ನ್ಯಾರಾಧನೆ-ಸೂರ್ಯಾರಾಧನೆಗಳು ಈಜಿಪ್ಟು-ಭಾರತಗಳಿಗೆ ಹಿಂದೆ ಸಾಧಾರಣವಾಗಿತ್ತು. ದಕ್ಷಿಣ ಮೆಸೊಪೊಟೇಮೀಯ ಕೂಡ ಇವುಗಳಿಗೆ ಹೊರತಾಗಿರಲಿಲ್ಲ. ಕ್ರಿ.ಪೂ. ೫೦೦ರ ಮಣ್ಣಿನ ಬುದ್ಧ ಶಿರಸ್ಸು ಈಜಿಪ್ಟಿನ ರಾಜಧಾನಿಯಾಗಿದ್ದ ಮೊಂಫಿಸ್ಸಿನಲ್ಲಿ ದೊರಕಿದೆ.

ಭಾರತದ ಸೂರ(ಸೂರ್ಯ) ಈಜಿಪ್ತಿನ 'ರ' ಅವನಿಗಲ್ಲಿ ಪ್ರಜಾಪತಿಯ ಸ್ಥಾನ. ಇಲ್ಲಿಯ ಈಶ್ವರ ಅಲ್ಲಿಯ 'ಒಸೊರಿಸ್'. ಆದರೆ ಒಸೊರಿಸ್ಸನದು ಬ್ರಹ್ಮ (ತ್ರಿಮೂರ್ತಿಗಳಲ್ಲಿಯ) ಸ್ಥಾನ; ಅವನು ಕಮಲಸಂಭವ.

ಗ್ರೀಕರು ಬಾಹ್ಯ ಸೌಂದರ್ಯಾರಾಧಕರು. ಕ್ರೈಸ್ತರು ಪ್ರೇಮಪೂಜಕರು. ಭಾರತೀಯರೂ ಈಜಿಪ್ತರೂ ಶಕ್ತ್ಯಾರಾಧಕರು. ಬಹುಪತ್ನೀತ್ವವಿಲ್ಲಿ ವ್ಯಕ್ತಿಯ ಬಹುಬಲಾಢ್ಯತೆಯ ಪ್ರತೀಕವಾಗಿತ್ತು. ಅದರಿಂದಲೇ ಕೃಷ್ಣನಿಗೆ ೧೬೦೦೦ ಜನ ಹೆಂಡಿರಿದ್ದರೆಂದು ಹೇಳಲಾಯಿತು. ಪ್ರಾಚೀನ ಈಜಿಪ್ತು ಭಾರತದಂತೆಯೇ ಪುನರ್ಜನ್ಮ, ಸ್ವರ್ಗ, ನರಕಗಳನ್ನು ನಂಬಿತ್ತು. ಎರಡೂ ದೇಶಗಳಲ್ಲಿ ಅಂದು ಮೋಕ್ಷವೆಂದರೆ Changeless and timeless state of the gods, ದೇವತೆಗಳಂತೆ ವ್ಯಕ್ತಿತ್ವ ಮುಕ್ತವಾಗಿ ಕಾಲಾತೀತ ಅಚಲ ಸ್ಥಿತಿಯಲ್ಲಿರುವುದು ಎಂದು ತಿಳಿಯಲಾಗಿತ್ತು; ಅದೇ ಇಂದಿನ ಬ್ರಹ್ಮೀಭವನ ಅಥವಾ ಶಿವೈಕ್ಯ ಸಿದ್ಧಿ. ಅಹಿಂಸೆ-ತಪಸ್ಸುಗಳು ಮೋಕ್ಷಸಾಧನಗಳೆಂಬುದೂ ಉಭಯ ಸಾಮಾನ್ಯವಾದ ನಂಬಿಗೆಯಾಗಿತ್ತು. ಈಜಿಪ್ಟಿನ Sphinx ನಮ್ಮ ನರಸಿಂಹನ ವಿಪರೀತ ರೂಪ.

ಕ್ರಿ.ಪೂ.೧೪೫-೧೧೬ರ ನಡುವೆ ಅರೇಬೀಯದಲ್ಲಿ ಆಳುತ್ತಿದ್ದ ೨ನೆಯ ಯೂರ್ಜೆಟಿಸ್ ದೊರೆಯ ಆಸ್ಥಾನಕ್ಕೆ ಭಾರತೀಯ ನಾವಿಕನೊಬ್ಬನನ್ನು ಒಯ್ದದ್ದು ಭಾರತಿಯರ ಸಾಮುದ್ರಿಕಾ ವ್ಯಾಪಾರಕ್ಕೆ ಪ್ರಮಾಣವಾಗಿದೆ. ಕ್ರಿ.ಶ.೧ನೆಯ ಶತಮಾನದಲ್ಲಿ ಭಾರತವು ಯೂರೋಪಿನ ದೇಶಗಳಿಗೆ ತನ್ನ ಹಡಗುಗಳ ಮೂಲಕ ಸಾಮಾನುಗಳನ್ನು ಕಳಿಸುತ್ತಿತ್ತು. (Vide 'The periplus of the Erythraean sea') ನವರತ್ನ, ಅಂಜನಮಸ್ಲಿನ್ನು, ಮಸಾಲೆಗಳೇ ನಿರ್ಯಾತದ ಸಾಮಾನುಗಳಾಗಿದ್ದವು.

ಜಗತ್ತಿನಲ್ಲಿ ಮೊದಲು ಸಕ್ಕರೆಯನ್ನು ಮಾಡಿದ್ದು ಭಾರತ. ವಸ್ತ್ರ, ಗೋಧಿ, ಕೈಗಾರಿಕೆಯ ಸಾಮಾನುಗಳನ್ನು ಈಜಿಪ್ತಿನಿಂದ ಭಾರತ ಆಯಾತಮಾಡಿಕೊಳ್ಳುತ್ತಿತ್ತು.

ಇರಾಕಿನ ಟೆಲ್ ಅಸ್ಮಾರಿನಲ್ಲಿ ಕ್ರಿ.ಪೂ.೨೪೦೦ ವರ್ಷಗಳ ಭಾರತೀಯ ಸಾಮಾನುಗಳು ದೊರಕಿವೆ. ಬೆಂಕಿಯಲ್ಲಿ ಸುಟ್ಟ ಇಟ್ಟಿಗೆಗಳ ಬಳಕೆ ಈಜಿಪ್ತಿನಿಂದ ಭಾರತ ಕಲಿತಿತು. ಉಭಯ ದೇಶಗಳ ಕಲೆಗೆ 'Conceptual thought defines emotions, where as visual ideas embody them–ಭಾವನೆಗಳನ್ನು ಆಧ್ಯಾತ್ಮಿಕ ವಿಚಾರಗಳು ರೂಪಿಸಿದರೆ,ಅವುಗಳನ್ನು ಐಂದ್ರಿಯ ವಿಚಾರಗಳು ಮೂರ್ತಗೊಳಿಸುತ್ತಿದ್ದವು'– ಎಂಬುದೇ ಮೂಲ ಸೂತ್ರ.

ಪ್ರೊ.ಮಾರ್ಕೋ ಪಲ್ಲಿಯವರ ಪ್ರಕಾರ ಅತಿಭೌತಶಾಸ್ತ್ರೀಯ ಕಲ್ಪನೆಗಳೇ ಸಂಪ್ರದಾಯ ಪ್ರಧಾನವಾದ ನಾಗರಿಕತೆಯ ಆಧಾರ. ಗುರು–ಶಿಷ್ಯ ಸಂಪ್ರದಾಯ ಅಂಥ ನಾಗರಿಕತೆಯ ಚಿರಸ್ಥಾಯಿತ್ವಕ್ಕೆ ಕಾರಣ. ಅಂಥಲ್ಲಿ ಕಲೆಗಳೂ ಜೀವನದ ಅಂಗಗಳಾಗಿರುತ್ತವೆ. ಅವು ಇಂದಿಗೂ ಸರ್ವಸುಲಭಗ್ರಾಹ್ಯವಾಗಿರುವುದೂ ಅಂಥ ನಾಗರಿಕತೆಯ ಲಕ್ಷಣ. ಅದರಿಂದಲೇ ಭಾರತ ಮತ್ತು ಈಜಿಪ್ಟುಗಳಲ್ಲಿ ಕಲೆಗಳು ವ್ಯಕ್ತಿಗಳ ದಾಖಲೆಗಳಾಗಿಲ್ಲ, ಸಮಾಜದ ಇತಿಹಾಸಗಳಾಗಿವೆ. ಇಲ್ಲಿ ಕಲೆಗಾರರು ನಿಸರ್ಗದ ಬಾಹ್ಯರೂಪವನ್ನಲ್ಲ–ಆಂತರಿಕ ಸಾರವನ್ನು ಮೂರ್ತೀಕರಿಸಿದರು. ನಿಸರ್ಗವನ್ನು ಮಾನವ ಜೀವನದೊಡನೆ ಹೊಂದಿಸುವುದೇ ಅವರ ಗುರಿಯಾಯಿತು. ವಸ್ತುನಿಷ್ಠತೆ ಮತ್ತು ವ್ಯಕ್ತಿ ನಿಷ್ಠತೆಗಳ ಭೇದ ಈ ಕಲಾ ಪ್ರಜ್ಞೆಗೆ ಇಲ್ಲ. ಇದನ್ನು Intuitive Naturalism ಪ್ರಾತಿಭ ನೈಸರ್ಗಿಕತೆ ಎನ್ನಬಹುದು. ಕಲೆಗಾರರು ಸಮಾಜದ ಪೂಜ್ಯರ ಸೇವಕರು. ಅನುಯಾಯಿಗಳು; ಪೂಜ್ಯ ನಿರಪೇಕ್ಷರಾಗಿದ್ದಿಲ್ಲ. ಪಾಟ್ನದ ಯಕ್ಷದೇವತೆಯ ಅತಿದೊಡ್ಡ ವಿಗ್ರಹ ಕ್ರಿ.ಪೂ.೨೦೦ರದು. ಅದು ಈಜಿಪ್ಟಿನ ವಿಗ್ರಹಗಳನ್ನು ಹೋಲುತ್ತದೆ. ಈಜಿಪ್ಟಿನ ಪಿರಮಿಡ್ಡುಗಳೂ ಭಾರತದ ಗೋಪುರ(ಶಿಖರ)ಗಳೂ ಸಂಬಂಧಿಕರು. ಇಲ್ಲಿ ಕಲೆಗಾರರು ತಮ್ಮ ಕೃತಿಗಳ ಸೇವಕರಲ್ಲದೆ, ಒಡೆಯರಲ್ಲ. ಅವರು ನಿಸರ್ಗದ ಅಂತಃಸೌಂದರ್ಯವನ್ನಲ್ಲದೆ ಬಹಿಃಸೌಂದರ್ಯವನ್ನು ಆರಾಧಿಸುತ್ತಿದ್ದಿಲ್ಲ. ಯೂರೋಪು ಮನೋಮಯ ದೃಷ್ಟಿಯದಾದರೆ ಭಾರತ ಈಜಿಪ್ಟುಗಳು ವಿಜ್ಞಾನಮಯ ದೃಷ್ಟಿಯವು. ಮನವೋ ವಿಜ್ಞಾನೋನ್ಮುಖ, ವಿಜ್ಞಾನವು ಆನಂದೋನ್ಮುಖ. ಆನಂದವು Universal, eternal, infinite ಸರ್ವ, ನಿತ್ಯ, ಅನಂತ. ಭಾರತದ ಶಿವಪೂಜೆ ೫೦೦೦ ವರ್ಷ ಹಳೆಯದು. ಈಜಿಪ್ತಿನಲ್ಲಿ ಅದು ಇನ್ನೂ ಪುರಾತನವೆಂದು ನಂಬಲಾಗಿದೆ. ಅಲ್ಲಿಯ ರುದ್ರರೂಪದ ಶಿವ 'ಸೇಟ್'. ಓಸೊರಿಸ್–ಸೇಟರು ಈಶ್ವರ–ರುದ್ರರು. ಐಸಿಸ್(ಈಸಿಸ್) ಪಾರ್ವತಿ; ಆಪಿಸ್ ನಂದಿ; ಸೈನೋಸೆಫಾಲಸ್ ಎಂದರೆ ಹನುಮಂತ. ಭಾರತದ ಆರ್ಯ–ದ್ರಾವಿಡ ಪ್ರಶ್ನೆ ಕುಲದ್ದಲ್ಲ.



**['ಶ್ರೀಧರ ಸಂದೇಶ']**

# ೧೮. ಭಾರತೀಯ ನಾಗರಿಕತೆಯ ಸತ್ವ ಮತ್ತು ಸ್ವರೂಪ

## ಲೇಖಾಂಕ : ೭ ಭಾರತೀಯ ನಾಗರೀಕತೆಯಲ್ಲಿ ನಡೆದುಬಂದ ದೌರ್ಬಲ್ಯಗಳು

ಸರ್ವಜ್ಞಾನವೂ ಲೋಕದಲ್ಲಿ ಅರ್ಥವಿವರಣಕಾರರ ಅಧೀನ. ತತ್ವಜ್ಞಾನವೂ ಇದಕ್ಕೆ ಹೊರತಲ್ಲ. ದೈವಶಾಸ್ತ್ರ, ಪುರಾಣಕಥೆ, ನೀತಿ, ಅತಿಭೌತವಿಚಾರ, ಮರಣೋತ್ತರ ಜೀವನ ವಿಚಾರ, ಮನಃಶಾಸ್ತ್ರ ಎಂಬ ಆರು ವಿಷಯಗಳ ಜೊತೆಗೆ ಸೃಷ್ಟಿ ವಿವರಣೆಯೂ ಸೇರಿ ಏಳನ್ನು ತತ್ವಜ್ಞಾನವು ಒಳಗೊಂಡಿದೆ. ದೈವ (ದೇವತಾ) ಶಾಸ್ತ್ರಕ್ಕೆ ಸಂಪ್ರಜ್ಞಾತ ಸ್ವರೂಪದ ಸಮಾಧಿ ಸಾಕ್ಷಾತ್ಕಾರವು ಆಧಾರ. ಪುರಾಣ ಕಥೆಗೆ ಕವಿ ಕಲ್ಪನಾ ಮಿಶ್ರಿತವಾದ ಇತಿಹಾಸವು ಆಧಾರ. ನೀತಿಗೆ ಅತಿಭೌತಶಾಸ್ತ್ರವೂ ವ್ಯವಹಾರ ವಿವೇಕವೂ ಆಧಾರ. ಅತಿಭೌತಶಾಸ್ತ್ರಕ್ಕೆ ಅಸಂಪ್ರಜ್ಞಾತ ಸ್ವರೂಪದ ಸಮಾಧಿ ಸಾಕ್ಷಾತ್ಕಾರವು ಆಧಾರ. ಮರಣೋತ್ತರ ಜೀವನಕ್ಕೆ ಅತಿಭೌತಶಾಸ್ತ್ರ–ಮನಃಶಾಸ್ತ್ರಗಳು ಆಧಾರ. ಮನಃಶಾಸ್ತ್ರಕ್ಕೆ ಅಂತರ್ ನಿರೀಕ್ಷಣೆ–ಬಹಿರ್ ನಿರೀಕ್ಷಣೆಗಳು ಆಧಾರ. ಸೃಷ್ಟಿ ವಿವರಣೆಗೆ ಪ್ರಕೃತಿಶಾಸ್ತ್ರ* ಅತಿ ಭೌತಶಾಸ್ತ್ರ–ಖಗೋಲ–ಭೂಗರ್ಭಶಾಸ್ತ್ರಗಳು ಆಧಾರ. ಉಕ್ತ ಎಲ್ಲ ಶಾಸ್ತ್ರಗಳನ್ನೂ ಪುರಾಣ ಕಥೆ ಮೆಟ್ಟಿ ನಿಲ್ಲಲು ಅವಕಾಶಕೊಟ್ಟದ್ದು ಮೊದಲನೆಯ ಮಹಾದೌರ್ಬಲ್ಯ, ಮಂತ್ರ–ಬ್ರಾಹ್ಮಣ–ಆರಣ್ಯಕ–ಉಪನಿಷತ್ತುಗಳಲ್ಲಿ Parables ನೀತಿಬೋಧಕವಾದ, ಕವಿ ಪ್ರೌಢೋಕ್ತಿಮಯವೆನ್ನಿಸಿದ್ದ ಐತಿಹ್ಯಗಳು ಅತಿಪ್ರಧಾನವಾಗಿ(ಆಸೇತು ಹಿಮಾಚಲ) ಹರಡಲು ಕ್ರಿ.ಶ.೮೦೦ರಿಂದ ಪ್ರಾರಂಭಿಸಿ ಈವರೆಗೂ ಮುಂದುವರಿಯುತ್ತ ಬರುವಾಗ ಅನೇಕ ಮೂಢನಂಬಿಗೆಗಳಿಗೆ ಅವಕಾಶ ಕೊಟ್ಟು ಉದ್ದೇಶ ಹಾನಿಕರವಾಗಗೊಟ್ಟದ್ದು ಆರ್ಯ(ಹಿಂದು) ಸಂಸ್ಕೃತಿಯ ಅವನತಿಗೆ ಬಹಳ ಸಲ ಕಾರಣವಾಯಿತು.

ಮಂತ್ರಗಳಲ್ಲಿ ಹೇಗೋ ಇತರ ವೇದಭಾಗಗಳಲ್ಲಿಯೂ ಹಾಗೇ ನೀತಿಕಥೆ–ತತ್ವಕಥೆಗಳನ್ನು ಮತ್ತು ರೂಪಕಾದಿ ಪ್ರತಿಮೆ, ಗಣಿತಾದಿ ಸಂಖ್ಯೆಗಳ ಮೂಲಕ ಪ್ರಕೃತಿ ದೇವತಾಶಾಸ್ತ್ರಗಳ ತತ್ವವನ್ನು ಹೇಳಹೊರಟ ವಾಙ್ಮಯದ ಅಕ್ಷರಾರ್ಥವಷ್ಟೇ ಬಲಿಷ್ಠವಾಗಿ ನಿಲ್ಲಲು ಅವಕಾಶ ಕೊಟ್ಟು ಪ್ರತ್ಯಕ್ಷ–ಅನುಮಾನಗಳಿಂದ ನಿರ್ಣಯವಾಗತಕ್ಕ ಲೋಕಜ್ಞಾನಕ್ಕೆ ವಿರುದ್ಧವಾದ ಕಲ್ಪನೆಗಳನ್ನು ಸರ್ವ ಸಾಂಸ್ಕೃತಿಕ ಮಟ್ಟಗಳವರೂ ನಂಬಿಕೊಂಡು ಬರಲಾರಂಭಿಸಿದ್ದು ಮೂಢ ನಂಬಿಕೆಗಳ ಮೂಲ ಆಕರ. ಜ್ಞಾನವೃದ್ಧರಿಗೆ ಕೇವಲ ವಯೋವೃದ್ಧರು ಪರ್ಯಾಯವಾಗಿ ನಿಲ್ಲಲದು ಅನುವು ಮಾಡಿಕೊಟ್ಟಿತು. ಅಂದಿನಿಂದ ಭಾರತದ ಬಹುಸಂಖ್ಯರು ಅಂಧಭಕ್ತಿಪರರಾಗುತ್ತ ಬಂದರು; ಸದಾದರ್ಶಗಳ ಅಪಾರ್ಥಗಳನ್ನು ಅನುಸರಿಸತೊಡಗಿದರು; ಯಾವ ಜ್ಞಾನಿಯೂ ಉದ್ಧಾರ

---

* ರಸಾಯನ, ಭೌತ, ಜೀವಶಾಸ್ತ್ರಗಳು ಪ್ರಕೃತಿ ಶಾಸ್ತ್ರಗಳು.

ಮಾಡಲಾಗದಷ್ಟು ಅವಿದ್ಯಾ-ಅಪವಿದ್ಯಾ ಸಂಪನ್ನರು ಹೆಚ್ಚುತ್ತಾ ಹೋದರು. ತತ್ಫಲವಾಗಿ ಧರ್ಮಗ್ಲಾನಿ ಪದೇ ಪದೇ ಸಂಭವಿಸಿತು; ಕೃಷ್ಣಾವತಾರ ಮಾತ್ರ ಪದೇ ಪದೇ ಸಂಭವಿಸಲಿಲ್ಲ. ಇಂದಿನ ಅರೆವಿಜ್ಞಾನಾವತಾರ ಹೊಸಬಗೆಯ ಅಜ್ಞರನ್ನೂ ಠಕ್ಕರನ್ನೂ ಭಾರತದಲ್ಲಿ ತರಬೇತುಗೊಳಿಸಲಾರಂಭಿಸಿದೆ. ಹಳೆಯ ಮಾದರಿಯ ಅಜ್ಞ-ಠಕ್ಕರ ಜೊತೆಗೆ ಈ ಹೊಸ ಮಾದರಿಯವರೂ ಸೇರಿ ದೇಶವು ಸರ್ವ ಕಾರ್ಯಕ್ಷೇತ್ರಗಳಲ್ಲೂ ಶೋಷಣೆಗೆ ಒಳಪಡುವಂತಾಗಿದೆ.

ಶ್ರೀ ವಿವೇಕಾನಂದರು ಬಾಲ್ಯವಿವಾಹವನ್ನು ನಿಂದ್ಯವೆಂದರು. ಹಾಗೇ ತಿಳಿದವರು ಡಾಲ್ಡಾ ವನಸ್ಪತಿ ತ್ಯಾಜ್ಯವೆಂದರು. ಯಾವುದನ್ನು ಗ್ರಾಮ-ನಗರ ಭಾರತ ಈಗ ಎಷ್ಟರಮಟ್ಟಿಗೆ ಬಿಡುತ್ತ ಬಂದಿದೆ ಎಂಬುದು ಸ್ಪಷ್ಟ. Religious Superstition ಮತಾಧಾರ್ಮಿಕ ಅರ್ಥಾತ್ ಪೌರಾಣಿಕ ಕುರುಡು ನಂಬಿಕೆಗಳಂತೆಯೇ ವೈಜ್ಞಾನಿಕ ಕುರುಡು ನಂಬಿಕೆಗಳೂ ಭಾರತದಲ್ಲಿ ತುಂಬಿಕೊಂಡಿವೆ. ಮಿದುಳು ತನಗೆ ತಾನೇ ವಿಷ ಕೊಟ್ಟುಕೊಳ್ಳುವುದೆಂದರೆ ಹೀಗೇ ಎಂದರು ವಿವೇಕಾನಂದರು. ಕರುಡು ನಂಬಿಕೆಗಳನ್ನೂ ಪ್ರಬುದ್ಧ ನಂಬಿಕೆಗಳನ್ನೂ ಪರಸ್ಪರ ವಿನಿಮಯ ಮಾಡಿಕೊಂಡಿರುವ ಮಿದುಳುಗಳು ಸನಾತನಿ ವಿನೂತನಿಗಳಿಬ್ಬರ ವರ್ಗಗಳಲ್ಲೂ ಬೇಕಾದಷ್ಟಿವೆ. ಈ ಅತಿವಾದೀಯ ಅಂಧಕಾರದಿಂದ ವ್ಯಾಪ್ತರಾಗಿರುವಾಗ ನಾಯಕರು(ರಾಜಕೀಯ, ಸಾಮಾಜಿಕ ಮತ್ತು ನೈತಿಕ) ಕರ್ಮಮಾರ್ಗಗಳನ್ನು ಶೋಷಣೋನ್ಮುಖವಾಗಿಯೇ ಹಾಕಿಕೊಡುತ್ತ ಹೋಗುವರು ಎಂಬುದಕ್ಕೆ ಪಾನಪ್ರತಿಬಂಧದ ಅದಕ್ಷಪ್ರಯೋಗ ಮತ್ತು ಅವಿವೇಕ ಪೂರ್ಣವಾದ ವಿಮೋಚನಗಳು ಉದಾಹರಣೆಗಳು.

ಪವಾಡದ ಅಂಧ ಆಕರ್ಷಣೆ ಇತ್ತೀಚಿನ ಹೊಸ ಆವೇಶವೆನ್ನಿಸಿದೆ. ವೇದಕಾಲದಿಂದ ಇಂದಿನವರೆಗೂ ಅದನ್ನು ಖಂಡಿಸುತ್ತ ಬರಲಾಗಿದ್ದರೂ ಜನಸಾಮಾನ್ಯ ಜನಮಾನ್ಯರಿಬ್ಬರಲ್ಲೂ ಪವಾಡಪುರುಷಾನ್ವೇಷಣ ಒಂದೊಂದು ಇತಿಹಾಸಾವಧಿಯಲ್ಲಿ ಅಸಹ್ಯವಾಗುವಷ್ಟು ವ್ಯಾಪಿಸುತ್ತ ಬಂದಿದೆ. ಹಾಸ್ಯಾಸ್ಪದವಾಗುವಂತೆ ಜ್ಯೋತಿಷದ ಭವಿಷ್ಯ ಕಥನಕ್ಕೆ ಅಂಟಿಕೊಳ್ಳುವ ಹುಚ್ಚೂ ಈಗ ಹೆಚ್ಚಾಗಿ ಪಸರಿಸುತ್ತಿದೆ. ಪಿಶುನವೃತ್ತಿಯು ಧಾರಾವಾಹಿಯಾಗಿ ಶತಮಾನಗಳಿಂದ ಹರಿದುಬಂದಿದೆ; ದಕ್ಷಿಣಾಗ್ರಹಣವು ಲಂಚಗ್ರಹಣವಾಗಿ ಪರಿವರ್ತನೆ ಹೊಂದಿದೆ. ಭೂತಾರಾಧನೆಯ ಬದಲು ವೈಯಕ್ತಿಕ ಹಾಗೂ ಸಾಂಘಿಕ ಲಂಚಾರಾಧನೆ ಎದ್ದಿದೆ. ಆಧುನಿಕ-ಅನಾಧುನಿಕ ಧ್ಯೇಯಪ್ರಚಾರಗಳಲ್ಲಿ ಅನೇಕ ಕಡೆ ನಾಮ(ಶಬ್ದ) ಪ್ರಾಧಾನ್ಯವಲ್ಲದೆ, ಅರ್ಥಪ್ರಾಧಾನ್ಯವಿಲ್ಲ. 'ಯಜ್ಞಾನಾಂ ಜಪಯಜ್ಞೋಽಸ್ಮಿ' ಎಂಬುದರ ಅಪಾನುಸರಣವಿದು. ಇಂದ್ರಿಯ ಗ್ರಾಹ್ಯ, ವಿಚಾರಗ್ರಾಹ್ಯ ಮತ್ತು ವಿಜ್ಞಾನಗ್ರಾಹ್ಯ ಎನ್ನಿಸಿದ ಪ್ರಾಪಂಚಿಕ ಸತ್ಯಗಳಲ್ಲಿ ಹಾನಿಕರವಾಗಿ ತಾರತಮ್ಯವನ್ನು ಕಲ್ಪಿಸಿಕೊಂಡ ಪಾಶ್ಚಾತ್ಯ ಆಧುನಿಕತೆ ಓದಿದವರಿಗೆ ಅದಮ್ಯ ಆಕರ್ಷಣೆಯಾಗಿರುವುದು ನಗರ-ಪಟ್ಟಣಗಳಲ್ಲಿ ಇಂದು ಕಂಡುಬರುವ ದೊಡ್ಡ ದೌರ್ಬಲ್ಯ. ಪ್ರಚಾರವು ಬಹಳ ಕಡೆ ಪ್ರತಾರಣವಾಗಿದೆ. ಒಂದೊಂದು ವಿಧದ ದೌರ್ಬಲ್ಯವು ನೂರಾರು ರೂಪಗಳಲ್ಲಿ

ಭಾರತವನ್ನಿಂದು ಕಾಡುತ್ತಿದೆ. ಮಾಯಾ ಪ್ರಪಂಚದ ಮಾಯೆಯ Hot saturated solution ಕುದಿ ಕುದಿಯಾದ ಸಾಂದ್ರತಮ ದ್ರಾವಕವನ್ನು ಸೇವಿಸುವ ಜನರಿಗೆ ಇಹ–ಪರಗಳಲ್ಲಿ ಯಾವುದಾದರೂ ಸಾಧ್ಯವಾಗುವುದು ಸಂಭವವೇ? ಅರಾಷ್ಟ್ರೀಯತೆಯಿಂದು ಅನೈಹಿಕತೆ, ಅನಾಮುಷ್ಮಿಕತೆ. ರಾಷ್ಟ್ರೀಯತೆಯ ಅಪಾರ್ಥವನ್ನಾಧರಿಸಿದ ವ್ಯಕ್ತಿ ಸ್ವಾತಂತ್ರ್ಯದ ವ್ಯವಹಾರವು ಸರ್ವನಾಶಕರವಾದ ಪಾಪ.

ಕರ್ಮಠತನವು ಪೌರಾಣಿಕ ಅಂಧಭಕ್ತಿಪರತೆಯ ಆಚಾರ ವಿಭಾಗ. ದೇಶದ ಉನ್ನತ, ಸಾಂಸ್ಕೃತಿಕ ಮಟ್ಟದವರಿಗೆ ಆ ಸಾಂಕ್ರಾಮಿಕ ಹಿಡಿದುದರಿಂದ ಮಿಕ್ಕ ಮಟ್ಟದವರಲ್ಲೂ ಅಂಧತೆ ಅತಿಯಾಗುತ್ತಾ ಹೋಯಿತು. 'ಅಂಧೇನೈವ ನೀಯಾಮಾನ ಯಥಾಂಧಾಃ' ಎಂಬ ಉಪನಿಷದುದ್ಗಾರ ಸತ್ಯವಾಗಿ ಪರಿಣಮಿಸಿ, ಆರ್ಯ ಸಮಾಜದ ಶಕ್ತಿಹ್ರಾಸವುಂಟಾಗಿ, ವಿದೇಶೀಯ–ಸ್ವದೇಶೀಯ ದಂಗೆ, ದಾಳಿ, ಶೋಷಣೆ, ಅನ್ಯಾಯ, ಅರಾಜಕತೆ, ಅಪಜೀವನಗಳು ಇತಿಹಾಸದ ವಿವಿಧ ಅವಧಿಗಳಲ್ಲಿ ಪುನಃ ಪುನಃ ಉದಯಿಸಿದವು. ಬ್ರಿಟಿಷರ ಆಡಳಿತದಲ್ಲಿ ಮತ್ತು ಈಗ ಪ್ರಾಚೀನ–ಅರ್ವಾಚೀನ ಮಾದರಿಗಳ ಧೃತರಾಷ್ಟ್ರರು ಸಮಾಜ–ರಾಜಕೀಯಗಳ ನಾಯಕರಾದುದು ಉಕ್ತ ವಿವೇಚನೆಗೆ ನಿದರ್ಶನಗಳು. ವರ್ಣಾಶ್ರಮ ಧರ್ಮಗಳು ದೇಶಧರ್ಮ–ಕಾಲಧರ್ಮಗಳನ್ನು ಧಿಕ್ಕರಿಸಿ ಉಳಿದುದು ಜನತೆಯ ನಿರ್ವೀರ್ಯತೆಗೆ ಕಾರಣವಾಯಿತು.

ವರ್ಣವು ಜಾತಿಯಾಗಿ ಅನುವಂಶಿಕವೆಂದು ಗೃಹೀತವಾದುದು ಅರ್ಧಸತ್ಯವಲ್ಲದೆ ಪೂರ್ಣಸತ್ಯವಲ್ಲವೆಂಬುದು ಪ್ರತ್ಯಕ್ಷ ಮತ್ತು ಜನನ ಶಾಸ್ತ್ರ ಶೋಧಗಳಿಂದ ಈಗ ಸಿದ್ಧವಾಗಿದೆ. ಪೂರ್ವಕರ್ಮಬಲದಿಂದ ಆನುವಂಶಿಕ ಗುಣ ವಿಪರ್ಯಸ್ತವಾಗಬಹುದೆಂದು ಶ್ರೀ ಶ್ರೀಧರಸ್ವಾಮಿಗಳು 'ಆರ್ಯ ಸಂಸ್ಕೃತಿ'ಯಲ್ಲಿ ಸೂಚಿಸಿದ್ದಾರೆ. ಅಪವಾದಗಳಿಲ್ಲದ ನಿಯಮ ಈ ಕ್ಷೇತ್ರದಲ್ಲಿಲ್ಲವೆಂಬುದನ್ನು ಗಣಿಸದೆ ಹೋದುದು ಅಂಧಶ್ರದ್ಧೆ; ಅದರಲ್ಲೂ ಅಪವಾದದವ್ಯಾಪ್ತಿ ನೂರಕ್ಕೆ೫೦ರಷ್ಟಾದ ಈ ಕಾಲದಲ್ಲಿ. ಹಾಗೇ ಕರ್ಮಶಕ್ತಿ ರೂಪದ ವಿಧಿಯು ಕರ್ಮದಿಂದ ಪರಿವರ್ತನೀಯವೆಂಬ ರಮಣ ಸಿದ್ಧಾಂತವನ್ನು ಕಾಣದೆ ವಿಧಿವಾದ ಶರಣರಾದುದು ಮತ್ತೊಂದು ಅಂಧಸ್ಥಿತಿ.

ಪ್ರತ್ಯಕ್ಷ–ಅನುಮಾನ–ಉಪಮಾನಗಳಿಗೆ ವಿರುದ್ಧವಾದ ಲೋಕಸತ್ಯವು ಅಗ್ರಾಹ್ಯವೆಂಬುದು ಶಂಕರೋಕ್ತ. ಶಾಂಕರರಿಗೇ ಇದು ಮರೆತು ಹೋದಾಗ ಉಳಿದವರೇನು ಮಾಡಿಯಾರು? ರಾಜನಿಲ್ಲದಿದ್ದರೆ ಲೋಕ ಅರಾಜಕವಾಗುವುದೆಂದು ಮನು ಹೇಳಿರುವಾಗ, ಸರಕಾರ ನಿಯಂತ್ರಿಸದೆ ಆರ್ಥಿಕ ವೈಷಮ್ಯ ಜನರಲ್ಲಿ ಹೊರಟುಹೋಗದೆಂಬುದನ್ನು ತಿಳಿಯಲಾರದಿದ್ದರದು ಯಾರ ತಪ್ಪು? ಅಹಿಂಸೆಯನ್ನು ಆತ್ಮಗುಣಗಳಲ್ಲಿ ಅಗ್ರಗಣ್ಯವೆಂದು ಧರ್ಮಶಾಸ್ತ್ರ ಹೇಳುವಾಗ, ಅದಕ್ಕೆ ವಿರುದ್ಧವಾಗಿ ಯಾವುದಾದರೂ 'ಶಾಸ್ತ್ರದ' ಹೆಸರು ಹೇಳಿ ಹಿಂಸಾಮಯ ಕಾರ್ಯವನ್ನು ಮಾನವಕುಲ ಸಾಮಾನ್ಯದ ಸಮತಾ ನ್ಯಾಯಭಂಗವಾಗುವಂತೆ ತ್ರಿಕರಣಗಳಿಂದ ವ್ಯಕ್ತಿಯು ಆಚರಿಸುವುದು ಎಂಥ ಧರ್ಮ? ಪ್ರದರ್ಶನವು ದರ್ಶನವೆಂತಾದೀತು? ಅಂಧಾಚಾರವು

ಶಾಸ್ತ್ರೀಯವೆಂತಾದೀತು? ಕೌಟುಂಬಿಕ ವ್ಯಕ್ತಿತ್ವದ ಅರ್ಥಸಾಮ್ಯವು ನಿತ್ಯಾನುಭವದಲ್ಲಿರುವಾಗ ರಾಷ್ಟ್ರೀಯ ವ್ಯಕ್ತಿತ್ವದ ಅರ್ಥಸಾಮ್ಯವು ಹೇಗೆ ನಿಷೇಧನೀಯವಾಗುವುದು? ನಿಯತಾವಧಿಕ ಅಸ್ಪೃಶ್ಯತೆ ಜೀವಾವಧಿಯ ಅಸ್ಪೃಶ್ಯತೆಗೆ ಹೇಗೆ ಸಮಾನವೆನ್ನಿಸೀತು? ಪರೋಪಕಾರದಲ್ಲಿ ಪರ ಶಿಕ್ಷಣವು ಅಡಕವಾಗಿರುವಾಗ, ಸಹಜೀವಗಳಲ್ಲಿ ಅಜ್ಞಾನ ಸವಂರ್ಧನೆಗೆಡೆಗೊಡುವುದು ಧರ್ಮವೆಂತಾದೀತು? ಶಾಶ್ವತ ಧರ್ಮಗಳಿಗೆ ವಿರುದ್ಧವಾದ 'ಧರ್ಮಗಳು' ಧರ್ಮಗಳೇ? 'ಯಸ್ತರ್ಕೇಣಾನುಸಂಧತ್ತೇ ಸಧರ್ಮೋ ವೇದ ನೇತರಃ'; 'ಯುಕ್ತಿ ಯುಕ್ತಂ ವಚೋ ಗ್ರಾಹ್ಯಂ ನ ಗ್ರಾಹ್ಯಂ ಗುರುಗೌರವಾತ್'. ಪರಮಾಗಮಗಳಿಗೆ ವಿರುದ್ಧವಾದ 'ಅಪರಾಗಮಗಳಿಗೆ' ಹೆಚ್ಚಿನ ಮಹತ್ವವನ್ನು ಹೇಗೆ ಕೊಡಲು ಸಾಧ್ಯ? ಅಪರಾಗಮಗಳ ಹಾವಳಿಯಿಂದ ಭಾರತೀಯ 'ನಾಗರಿಕತೆಗೆ' ಅಪರ ಕ್ರಿಯತೆ ಮಾಡಬೇಕಾದ ಇತಿಹಾಸಿಕ ಅನಿವಾರ್ಯತೆಯುಂಟಾಯಿತು. ವಿಧವಾ ವಿವಾಹ, ಅಸ್ಪೃಶ್ಯತಾ ನಿವಾರಣೆ, ಜಾತಿಯತಾವಿರೋಧ, ಸರ್ವವಿದ್ಯಾಧಿಕಾರ ಪ್ರಚಾರಗಳಿಂದು ಅದಕ್ಷವಾಗಿಯಾದರೂ ಪ್ರಚಾರಕ್ಕೆ ಬಂದಿರುವುದು ಅಪರಾಗಮದಿಂದಾದ ಹಾನಿಯು ಅಸಹ್ಯವಾದುದರಿಂದ; ಆದರೂ ಪ್ರಚಾರದಂತೆ ಆಚಾರ ಉಂಟಾಗದುದು ಅಂಧ ಪರಂಪರೆಯ ವಜ್ರಲೇಪದ ದೆಸೆಯಿಂದ. ಈ ವಜ್ರಲೇಪ ಹೋಗಬೇಕಾದರೆ ಭಾರ್ಗವ ಪರಶುರಾಮನ ಅಥವಾ ವಿಶ್ವಾಮಿತ್ರನ ಅಭೇದ್ಯ ಪ್ರತಿಜ್ಞೆಯನ್ನು ಉಚ್ಚ ಸಾಂಸ್ಕೃತಿಕ ಮಟ್ಟದವರು ಮಾಡಬೇಕು. 'ವೈದಿಕ'ವೆಂದು ಹೇಳಲಾಗುವ ಕರ್ಮಗಳನೇಕ ಇಂದಿನ ಜೀವನದಲ್ಲಿ ಸನಾತನೆಯನ್ನು ಕಳೆದುಕೊಂಡಿರುವುದು ಗೊತ್ತಾದರೂ ಶ್ರುತಿಯ ಹೆಸರಿನಲ್ಲಿ ಜ್ಞಾನಕಾಂಡಕ್ಕೆ ಅಪಮಾನವಾಗುವಂತೆ ಆಚಾರ–ವ್ಯವಹಾರಗಳನ್ನಿಟ್ಟು ಕೊಂಡವರು ಆಧುನಿಕ ಪಾಶ್ಚಾತ್ಯರ ಅಂಧಾನುಯಾಯಿಗಳಿಗಿಂತ ಹೇಗೆ ಉತ್ತಮರೆನ್ನಿಸಿಯಾರು? ಒಬ್ಬನು ಹುಟ್ಟು ಕುರುಡ; ಇನ್ನೊಬ್ಬ ಆಪರೇಶನ್ನಿನಿಂದ ಕುರುಡನಾದವನು–ಇವರಲ್ಲಿ ತಾರತಮ್ಯವನ್ನು ಹೇಗೆ ಮಾಡಲು ಸಾಧ್ಯ?

ವೇದಗಳಷ್ಟೇ ಬ್ರಹ್ಮನ ಉಸಿರಾಗಿರುವುದು ಹೇಗೆ? ಜಗತ್ತೇ ಅವನ ಉಸಿರಲ್ಲವೇ? ದಶಾವರತಾರವಷ್ಟೇ ಹೇಗೆ ಅವತಾರ? ಜಗತ್ತೇ ಅವನ ಅವತಾರವಲ್ಲವೇ? ತಾರತಮ್ಯವಿರುವುದು ಲೋಕಸತ್ಯಗಳಲ್ಲಿ; ಅಲೌಕಿಕ ಸತ್ಯದಲ್ಲಿ ತರವೆಲ್ಲಿ? ತಮವೆಲ್ಲಿ? ಈಶ್ವರನ ಈಶ್ವರತ್ವವು ತ್ರಿಗುಣಗಳಿಂದ ವ್ಯಾಕೃತವಾದ ಲೋಕಸತ್ಯಗಳಿಗೆ ಸಾಪೇಕ್ಷವಲ್ಲವೇ? ಸ್ವರ–ವರ್ಣ–ಅಕ್ಷರಗಳು ಇಂದ್ರಿಯಗ್ರಾಹ್ಯವಾದ ಲೋಕಸತ್ಯಗಳಲ್ಲವೇ? ಯಾವ ಲೋಕಸತ್ಯಕ್ಕೆ ಬ್ರಹ್ಮಸತ್ಯದ ಅಭೇದ್ಯತೆ, ಅನುಲ್ಲಂಘನೀಯತೆ, ಅಪರಿವರ್ತನೀಯತೆ ಇದೆ? ಶಾಂಕರ ಭಾಷ್ಯ ಸಾರಿದೆ–ವೇದಾದಿ ಸರ್ವ ಪ್ರಮಾಣಗಳೂ ಬ್ರಹ್ಮೇತರ, ಅವಿದ್ಯಾಮಯ ಎಂದು; ಆದುದರಿಂದ ಲೋಕದಲ್ಲಿ ಗ್ರಾಹ್ಯ ಅವಿದ್ಯೆ, ತ್ಯಾಜ್ಯ ಅವಿದ್ಯೆಗಳನ್ನು ಬೇರ್ಪಡಿಸುವುದು ಉದ್ದೇಶಾನುಗುಣವಲ್ಲದೆ ನಿತ್ಯನಿಯಮಾನುಗುಣವಲ್ಲ. ಮೋಕ್ಷೋದ್ದೇಶದ ಹೆಸರಿನಲ್ಲಿ ಅರ್ಥೋದ್ದೇಶ ಕಾಮ್ಯೋದ್ದೇಶಗಳ ಸಾಧನೆಗೆ ಬೇಕಾದ ತರ್ಕಸಮರ್ಥನೆಯನ್ನು ಧರ್ಮವೆಂದು ಹೇಳಿದ್ದು ಅಂಧಶ್ರದ್ಧೆ, ಶಾಠ್ಯ, ಪ್ರತಾರಣ.ಸ್ವರ್ಗ

ಕೂಡ ಕಾಮ್ಯವೆಂಬುದು ಸುಪ್ರಸಿದ್ಧ. ಶತಶ್ರುತಿಗಳು ಸೇರಿಯೂ ಲೋಕ(ಸ್ವರ್ಗವು ಲೋಕಾಂತರ್ಗತ) ಸತ್ಯವನ್ನು ಬಾಧಿಸಲಾರವು–ಲೋಕಪ್ರಜ್ಞೆಯನ್ನು ಅವಲಂಬಿಸಿದವರ ವ್ಯವಹಾರದಲ್ಲಿ. ಅಲೌಕಿಕ ಪ್ರಜ್ಞೆಯವರಿಗೆ ಲೋಕಾಧಿಕಾರವಿಲ್ಲ; ಲೋಕಪ್ರಜ್ಞೆಯವರಿಗೆ ಅಲೌಕಿಕ ಪ್ರಪಂಚದ ಪ್ರಭುತ್ವವಿಲ್ಲ. ಯೋಗಿ–ಭೋಗಿಗಳಿಗೆಲ್ಲಿ ಎಂತಯ್ಯಾ ಸಾಮಾನ್ಯಧರ್ಮ? ಆ ಈ ಕರ್ಮ–ಉಪಾಸನೆಗಳೂ ನಿಷ್ಕಾಮವಾಗದಿರುವಾಗ ಅವುಗಳಿಂದಾಗುವ ಪರಹಿಂಸೆ–ಸ್ವಹಿಂಸೆ ಹೇಗೆ ಸಮರ್ಥನೀಯ?



[**'ಶ್ರೀಧರ ಸಂದೇಶ'**]

# ೧೯. ಸಮಾಜ ಮತ್ತು ಸ್ವಸ್ತಿಪಂಥ

ನೀತಿ-ಅನೀತಿಗಳ ಅವ್ಯವಸ್ಥೆ ಸಮಾಜದಲ್ಲಿಂದು ತೋರುವ ಅಶಿಸ್ತಿಗೆ ಕಾರಣ. ಮಂತ್ರಿಗಳಿಂದ ಹಿಡಿದು ಗ್ರಾಮಸ್ಥನವರೆಗೆ ಸಾಮಾಜಿಕ ಆಚಾರದ ಸಾರ್ವತ್ರಿಕ ನಿಯಮಗಳು ಒಂದೇ ಆಗಿರುವುದು ಸುಸಂಘಟಿತ ಸಮಾಜದ ಲಕ್ಷಣ. ಇಂದಿನ ನಮ್ಮ ಪರಿಸ್ಥಿತಿ ಹಾಗಿಲ್ಲ.

(೧) ಮದ್ಯಪಾನ ಮಾಡುವವನು ಗೌರವಾರ್ಹನೋ ಅಲ್ಲವೋ? (೨) ಕಾಯಿದೆಗೆ ಹೊಂದದ ಸ್ತ್ರೀ ಸಂಬಂಧವನ್ನು ಇಟ್ಟುಕೊಂಡವನು ಆರ್ಯಗೃಹ್ಯನೋ ಅಲ್ಲವೋ? (೩) ವೃತ್ತಿನೀತಿಯ ಹೆಸರಿನಲ್ಲಿ ಸ್ವತಃ ಅಪರಾಧಿ ಎಂದು ಗೊತ್ತಿದ್ದ ವ್ಯಕ್ತಿಯನ್ನು ಎತ್ತಿ ಹಿಡಿದು ವಾದಿಸುವ ವಕೀಲ ಸದ್ಗೃಹಸ್ಥನೋ ಅಲ್ಲವೋ? (೪) ಒಂದು ಕಾರಣಕ್ಕಾಗಿ ಒಬ್ಬನ ಮೇಲೆ ಕ್ರುದ್ಧನಾಗಿ ಅದನ್ನು ಹೇಳದೆ ಇತರ ಅಸತ್ಯ ಕಾರಣಗಳನ್ನು ನಿರ್ಮಿಸಿ ಒಬ್ಬನ ವಿರುದ್ಧವಾಗಿ ಪ್ರಚಾರ ಮಾಡುವಾತ ಮರ್ಯಾದಸ್ಥನೇ ಅಲ್ಲವೇ? (೫) ಸಂಬಳ ಕೊಡುವ ಸ್ಥಾನದಲ್ಲಿದ್ದೇನೆಂಬ ಅಹಂಕಾರದಿಂದ ಸಂಬಳ ತೆಗೆದುಕೊಂಡು ದುಡಿಯುವ ವಿದ್ಯಾವಂತರನ್ನು ಅಗೌರವಿಸುವಾತ ಗೌರವಕ್ಕೆ ಪಾತ್ರನೋ ಅಲ್ಲವೋ? (೬) ಕುಟುಂಬ ಸ್ವಾರ್ಥದ ಪರಮಾವಧಿಯ ಮಟ್ಟವನ್ನೇರಿ ಇತರ ಕುಟುಂಬಿಗಳನ್ನು ವಿವಿಧ ವ್ಯವಹಾರಗಳ ಮೂಲಕ ಆರ್ಥಿಕ, ಸಾಮಾಜಿಕ ಶೋಷಣೆಗೆ ಒಳಪಡಿಸುವ ಸಾಹಸ ಭೀಮ ಸಭ್ಯನೋ ಅಲ್ಲವೋ? (೭) ತೆಗೆದುಕೊಂಡ ಸಂಬಳಕ್ಕೆ ಸರಿಯಾದ ದುಡಿಮೆಯನ್ನು ತೋರಿಸದ ನೌಕರ ಯೋಗ್ಯನೋ ಅಯೋಗ್ಯನೋ? (೮) ಆತ್ಮಸಾಕ್ಷಿಯಾಗಿ ಅವನು ಹಾಗೆ ಇವನು ಹೀಗೆ ಎಂಬುದನ್ನು ಅರಿಯದೆ ಅವನ ಅಥವಾ ಇವನ ಸ್ಥಾನ-ಮಾನಗಳನ್ನು ಬದಲಾಯಿಸ ಹೋಗುವವ ಸಮಾಜಘಾತಕನೇ ಸಮಾಜ ಹಿತಚಿಂತಕನೇ? (೯) ದೇಶ, ಕಾಲ, ಸಂದರ್ಭ, ಪೂರ್ವಚರಿತ್ರೆಗಳ್ನು ಅರಿತುಕೊಳ್ಳದೆ ಅವ ಹಾಗೆ ಇವಳು ಹೀಗೆ ಎಂದು ಭಾವಿಸುವಾತ ವಂದ್ಯನೋ ನಿಂದ್ಯನೋ? (೧೦) ಸ್ವದೋಷವನ್ನು ಎಂದೂ ಅರಿಯಲು ಪ್ರಾಮಾಣಿಕ ಪ್ರಯತ್ನವನ್ನು ಮಾಡದೆ ಅದನ್ನು ಅನ್ಯರಲ್ಲಿ ಕಾಣುವ ಮನುಷ್ಯನು ನ್ಯಾಯಸ್ಥನೆನ್ನಿಸುವನೋ ಇಲ್ಲವೋ?

ಮಾದರಿಗಾಗಿ ೧೦ ಪ್ರಶ್ನೆಗಳನ್ನು ಇಡಲಾಗಿದೆ. ಇವುಗಳನ್ನು ಯಾವ ಸಂದರ್ಭಕ್ಕಾದರೂ ಅನ್ವಯಿಸಿ ಪರೀಕ್ಷೆ ಮಾಡಬಹುದು. ಇಲ್ಲಿ ಅಹುದು-ಅಲ್ಲ ಎಂಬೆರಡನ್ನು ಬಿಟ್ಟರೆ ಮೂರನೆಯ ಉತ್ತರವಿಲ್ಲ. ಆದುದರಿಂದ ಇವು ಸಾಮಾನ್ಯವಾದ ಬುದ್ಧಿ ಪರೀಕ್ಷಾ ಪ್ರಶ್ನೆಗಳೆನ್ನಬಹುದು. ಶ್ರೀ ಶಂಕರಾಚಾರ್ಯರು 'ಕಸ್ತ್ವಂ? ಕೋಹಂ? ಕುತಃ ಆಯಾತಃ?' ಎಂಬ ಪ್ರಶ್ನೆ ಮಾಲಿಕೆಯನ್ನು ಕೊಟ್ಟದ್ದು ಆಧ್ಯಾತ್ಮಿಕ ಜಿಜ್ಞಾಸುವಿಗೆ ಹೇಗೋ ಹಾಗೇ ನೀತಿ ಜಿಜ್ಞಾಸುವಿಗೂ ಅನ್ವಯಿಸುತ್ತದೆ.

ಸಮಾಜದ ಆದರ್ಶಗಳು ನೈತಿಕ ಸ್ವರೂಪದಲ್ಲಿ ಸ್ಥಿರ ಪಡಲು ಸಾವಿರಾರು ವರ್ಷಗಳು ಹಿಡಿದವು. ಉಪನೀತಿಗಳು ಕಾಲಕಾಲಕ್ಕೆ ಬದಲಾಗಬಹುದು; ಆದರೆ ಮಹಾನೀತಿಗಳು ಹಾಗೆ ಬದಲಾಗ ಕೂಡದು. ಮಾನವರ ಪರಸ್ಪರ ಹೃದಯಗಳ ಶುಭಸಂಬಂಧಗಳನ್ನು ನಿರ್ಮಿಸುವ ಮಹಾನೀತಿಗಳನ್ನು ಗುರುತಿಸಲಾರದ ವಿದ್ಯೆ ವಿದ್ಯೆಯಲ್ಲ, ಪಾಂಡಿತ್ಯ ಪಾಂಡಿತ್ಯವಲ್ಲ. ಹಾಗೆ ಗುರುತಿಸಿಯೂ ಸ್ವಂತದ ಅಸದಭಿರುಚಿಯ ದೆಸೆಯಿಂದ ಅವುಗಳನ್ನು ಕಃಪದಾರ್ಥಗಳೆಂದು ತಿಳಿದು ನಡೆದುಕೊಳ್ಳುವವನು ಸಮಾಜಘಾತಕನು. ಈ ಬಗೆಯ ಸಮಾಜಘಾತಕತೆ ಹಿಂದುಗಳಲ್ಲಿ ಹೆಚ್ಚುತ್ತಿರುವುದು ಭಾರತದ ಶಕ್ತಿ–ಸ್ವಾತಂತ್ರ್ಯಗಳ ಪೋಷಣೆಗೆ ಪ್ರತಿಕೂಲವಾಗಿದೆ.

ಒಬ್ಬ ಹೊಸ ವ್ಯಕ್ತಿ ಒಂದು ಮಹಾನೀತಿಯನ್ನಿಂದು ನಿರ್ಮಿಸಲಾರ. ಮಹಾನೀತಿಗಳು ಶಾಶ್ವತವಾದ ಮಾನವ ಸಾಮಾನ್ಯ ಧರ್ಮಗಳು. ಅವುಗಳ ಮಹತ್ವವನ್ನು ಯಾವ ವಿಜ್ಞಾನಿಯೂ ಕಡಿಮೆ ಮಾಡಿ ಆತ್ಯಂತಿಕ ಜಯವನ್ನು ಹೊಂದಲಾರ. ಅಂಥ ಪ್ರಯತ್ನವು ಸರ್ವತ್ರ ಪ್ರತಿಭಟನೀಯವೆಂಬುದನ್ನು ಒಂದು ಸಮಾಜದ ಪ್ರತಿಯೊಬ್ಬ ಸದಸ್ಯನೂ ಅರಿತು ಆಚರಿಸಲು ಸಿದ್ಧನಾಗಿರಬೇಕು. ಅಂಥ ಮಾನಸಿಕ ಸಿದ್ಧತೆಯನ್ನು ವಿದ್ಯಾರ್ಥಿಯಲ್ಲಿ ರೂಪಿಸದ ಶಿಕ್ಷಣ ವ್ಯರ್ಥ ಶಿಕ್ಷಣ, ಅದೂರ ದೃಷ್ಟಿಸಂಪನ್ನವಾದ ಶಿಕ್ಷಣ ಅಥವಾ ಹೊಣೆಗೇಡಿ ಶಿಕ್ಷಣ.

ಒಂದು ದೃಷ್ಟಿಯಿಂದ ಡಾಕ್ಟರ್ ಆರ್.ಸಿ.ಬಡವೆಯರು ಎತ್ತಿ ತೋರಿಸಿರುವಂತೆ ಅಂಥ ಇನ್ನೊಂದು ದೃಷ್ಟಿಯಿಂದ ಸಂಸ್ಕೃತವಾಙ್ಮಯದ ಅನಾದರಣೆ ರಾಷ್ಟ್ರೀಯ ಸಮಾಜದ ಶಿಥಿಲತೆಯು ಮೂಲಕಾರಣ. ವಾಗ್‌ದೋಷ, ಅರ್ಥದೋಷ, ವ್ಯವಹಾರ ನೀತಿದೋಷಗಳೆಲ್ಲವುಗಳನ್ನೂ ಸಂಸ್ಕೃತದ ಸುಭಾಷಿತಗಳು ಅಖಿಲಭಾರತೀಯವಾಗಿ ಹೇಳಿವೆ. ಅವುಗಳನ್ನು ಬಿಟ್ಟು ನಡೆಯುವ ಸಮಾಜಶಿಕ್ಷಣಕ್ಕೆ ಏನಾದರೂ ಅರ್ಥವಿರುವುದು ಶಕ್ಯವೇ? ಈ ಅರ್ಥಹೀನ ಸರಕಾರಿ ಪ್ರಚಾರವು ಸಮಾಜದ ಮೇಲೆ ಮೋಹನಾಸ್ತ್ರವನ್ನು ಎಸೆದಿದೆ. ತನ್ನ ಅರ್ಥಹೀನ ಕ್ರಮವನ್ನದು ಮತದಾರ ಗ್ರಾಹ್ಯವೆಂದು ವೃಥಾ ತಿಳಿದಿದೆ. ಭಕ್ತಿಭಂಡಾರದ ಸಾಹಿತ್ಯಗಳು ಅಂಧಾಚಾರದ ಮೂಲಸ್ತಂಭಗಳಾಗಿ ಹೋಗಿವೆ. ಅವುಗಳಷ್ಟನ್ನು ಪರೀಕ್ಷಿಸಿಯೇ ಪ್ರಚಾರ ಮಾಡಬೇಕು–ಎಂಬುದು ಮಾತ್ರ ಸತ್ಯ. ಅವು ಯಾವ ಭಾಷೆಯಲ್ಲಿದ್ದರೂ ಅಷ್ಟೇ; ಪರಮತ ತಿರಸ್ಕಾರದ ಸ್ವಮತ ಪ್ರಶಂಸೆಯ ಪೌರಾಣಿಕತೆ (Mythological and dogmatic attitude) ಅವುಗಳಲ್ಲಿ ಹಲವೆಡೆ ಕಂಡು ಬರುತ್ತದೆ.

ಭಾರತೀಯ ಮಾನ್ಯತೆಯ ನಿಜವಾದ ಅರ್ಥ ಗೊತ್ತಿದ್ದರೂ ಯೂರೋಪೀಯ ನಡಾವಳಿಗಳನ್ನು ಆಧುನಿಕ ಕಾಲಕ್ಕೆ ಯೋಗ್ಯ ಎಂದು ಹಠಬಲದಿಂದ ನಂಬಿದ ವಿದ್ಯಾವಂತರ ಹಾವಳಿ ಉಂಟು ಮಾಡಿದ ಮಾನಸಿಕ ಅವ್ಯವಸ್ಥೆಯನ್ನು ನಗರಗಳು ಸ್ಪಷ್ಟವಾಗಿ ಬಿಂಬಿಸುತ್ತವೆ. ಅದಕ್ಕೆ ಸರಿಯಾದ ಡೆಮೊಕ್ರೆಸಿಯ ಚುನಾವಣೆಯ 'ಸದಾಚಾರ'!

ಭಾರತೀಯ ಅಮಾನ್ಯತೆಗಳ ಬದಲು ಯೂರೋಪೀಯವಾದ ಮಾನ್ಯತಾಭಾಸಗಳನ್ನು ಪ್ರಚಾರ ಮಾಡುವುದು ಮೂಢತನ. ಭಾರತೀಯ ಸಾಹಿತ್ಯರತ್ನಗಳಲ್ಲಿ ಅತ್ಯಾಧುನಿಕ ನೀತಿವಿಮರ್ಶೆ ಇದೆ ಎಂದು ತೋರಿಸಲು ಮಹಾಭಾರತದಲ್ಲಿ ಬರುವ ಅಜಗರ ಯುಧಿಷ್ಠಿರ ಸಂವಾದ ಮತ್ತು ತುಲಾಧಾರ ಜಾಜಲಿ ಸಂವಾದಗಳನ್ನು ಉದಾಹರಿಸಬಹುದು. ಚುನಾವಣೆಯಲ್ಲಿ ಗುಪ್ತವಾಗಿ ಮತದಾನ ಮಾಡುವುದು ಮೋಸವನ್ನು ಸಾರ್ವತ್ರಿಕವಾಗಿ ಕಲಿಸಲು ನಿಂತಿದೆ; ಸುಳ್ಳು ಹೇಳುವುದನ್ನು ಮತದಾರರಿಗೆ ಅಭ್ಯಾಸ ಮಾಡಿಸುತ್ತಿದೆ. ಇಂಥ ವಿಷ ಪ್ರಯೋಗದಿಂದ ವಿದೇಶೀಯರ ಸಮಾಜಗಳಲ್ಲಿ ಕೆಲವು ದುರಾಚಾರಿಗಳು ಸಂಖ್ಯಾಭಿವೃದ್ಧಿಯಿಂದ ಬಳಲಲಿಲ್ಲ ಎಂಬ ಕಾರಣದಿಂದ ಭಾರತೀಯ ಸಮಾಜ ಕೆಡಕೂಡದು ಎಂದು ಹಠ ಮಾಡಿ ವಾದಿಸುವುದು ಸಮಾಜಕಂಟಕ ಪ್ರವೃತ್ತಿ. ಭಿನ್ನ ಭೂಜಲವಾಯುಗಳ ಆವರಣ, ಭಿನ್ನ ಇತಿಹಾಸ–ಸಂಸ್ಕೃತಿಗಳ ಸಂಸ್ಕಾರ ಮತ್ತು ಭಿನ್ನ ಜೀವನ ಪುರುಷಾರ್ಥಗಳ ಸಾಧನೆಯ ಗುರಿ ಇರುವ ಭಿನ್ನ ಸಮಾಜಗಳ ಭಿನ್ನ ಸದಸ್ಯ ಸಂಬಂಧಗಳನ್ನು ಗಣಿಸದೆ ಅಲ್ಲಿಯ ಆಚಾರ ವಿವರಗಳೆಲ್ಲವೂ ಇಲ್ಲಿಗೆ ಆರೋಗ್ಯಕರ ಎಂದು ತಿಳಿದ ನೇತಾರರು ಭಾರತದ ಭವಿಷ್ಯವನ್ನು ನೇತಾಡಿಸುತ್ತಿದ್ದಾರೆ!

ಮದ್ಯ–ಮಾಂಸಗಳಲ್ಲಿ ಸಾರ್ವಭಾರತೀಯವಾದದ್ದನ್ನು ಕ್ರಿ.ಪೂ.೬೦೦ ರಿಂದ ಇಂದಿನವರೆಗೆ ನಾವು ಕಾಣಲಾರೆವು. ಮಹಾವೀರ ಜಿನ ಕೇವಲಿಯ ಕಾಲದಿಂದ(ಕ್ರಿ.ಪೂ.೬೦೦ರಿಂದ), ಶ್ರೀ ಶಂಕರಾಚಾರ್ಯರ ಕಾಲದಿಂದ(ಕ್ರಿ.ಶ.೪೫೦–೪೮೨ರಿಂದ) ಮತ್ತು ಮಹಾತ್ಮಾ ಗಾಂಧಿಯವರ ಕಾಲದಿಂದ ಮದ್ಯ–ಮಾಂಸ ನಿಷೇಧದ ಬಹುಸಂಖ್ಯ ಅನುಯಾಯಿಗಳು ಭಾರತದಲ್ಲಿ ಕಾಲಕಾಲಕ್ಕೆ ಅಹಿಂಸಾ ಸಂದೇಶವನ್ನು ಪ್ರಚುರಪಡಿಸಿದ್ದು ಸುವಿದಿತ. ಬಾಗೇವಾಡಿಯ ಬಸವೇಶ್ವರರ ಅನುಯಾಯಿಗಳು ಬ್ರಾಹ್ಮಣರಂತೆಯೇ ಇಂದಿಗೂ ಸಸ್ಯಾಹಾರಿಗಳೂ ಮದ್ಯ ತಿರಸ್ಕಾರ ಧರ್ಮಿಗಳೂ ಆಗಿರುವುದು ರಾಷ್ಟ್ರೀಯವಾದ ಸಾಮಾಜಿಕ ಮಹಾನೀತಿಯ ಉದಾಹರಣೆ. ಜೈನ ಬೌದ್ಧರಂತೂ ಎಂದಿನಿಂದಲೂ ಪ್ರಸಿದ್ಧ ಅಹಿಂಸಾ ಪುರಸ್ಕರ್ತರು.

ತನ್ನಿಂದ ಅಪರಿಣೀತರಾದ ಸ್ತ್ರೀಯರಲ್ಲಿ ಕಾಮಸಂಬಂಧವನ್ನು ಇಟ್ಟುಕೊಳ್ಳುವುದು ಅಭಾರತೀಯವೆಂಬುದಕ್ಕೆ ನಮ್ಮ ಶಾಸನ ಸಾಹಿತ್ಯದತ್ತ ಲಕ್ಷ್ಯಹಾಕಿದರೆ ಅಲ್ಲಿ ಕಾಣುವ ಹೆಮ್ಮೆಯ ರಾಜಬಿರುದುಗಳಲ್ಲಿ ಒಂದಾದ 'ಪರನಾರೀ ಸಹೋದರ' ಎಂಬ ಬಿರುದು ಪ್ರಮಾಣವಾಗಿದೆ. ಇಂಥ ಆದರ್ಶಗಳನ್ನು ಮುರಿದ ಭಾರತೀಯರಿದ್ದಾರೆ; ಆದರೆ ಅವರು ಮಾನ್ಯರೆಂದು ಜನರು ಈವರೆಗೆ ನಂಬುತ್ತ ಬಂದಿಲ್ಲ–ಅವರ ಅಂತಃಕರಣ ಇಂದಿಗೂ ಅದಕ್ಕೆ ಅನುಮೋದನೆ ಕೊಡದು. ಅಭಿಪ್ರಾಯಕ್ಕೂ ಹಾರ್ದಿಕ ಅನಿಸಿಕೆಗೂ ಅಜಗಜಾಂತರವಿರಬಹುದು. ಅಭಿಪ್ರಾಯ ಸಂಗ್ರಹಕ್ಕೆ ಬಂದ ವ್ಯಕ್ತಿ ಮತ್ತು ಸನ್ನಿವೇಶಗಳ ಬಲದಿಂದ ಎಷ್ಟೋ ಜನರು ತಾವು ಹಾರ್ದಿಕವಾಗಿ ಒಪ್ಪದ ಮಾತುಗಳನ್ನೂ ಆಡಿಬಿಡುವುದು ಉಂಟು, ಬರೆದುಕೊಡುವುದುಂಟು. Coscience ಎಂದರೆ ವಿದೇಶಗಳಲ್ಲಿ ಸಂಸ್ಕಾರಜನ್ಯವಾದ ಮನಃಸಾಕ್ಷಿ; ಇಲ್ಲಿ ಆತ್ಮಸಾಕ್ಷಿ–ಆತ್ಮವು ಸನಾತನ ಸತ್ಯದರ್ಪಣ,

ನಿತ್ಯಶುದ್ಧವಸ್ತು; ಮನಸ್ಸಿನಂತೆ ಅನಿತ್ಯ ಸಂಸ್ಕಾರ ವರ್ಣಿತವಲ್ಲ. ಚಾಂಚಲ್ಯೋಪಾಸಕರಷ್ಟೇ ಆತ್ಮವಿಮುಖರು, ನಶ್ವರತೆಯ ಪೂಜಾರಿಗಳಷ್ಟೇ ಆತ್ಮಸಾಕ್ಷಿರಹಿತರು.

ಅಪರಾಧಿಗಳನ್ನು ಬಚ್ಚಿಡುವ, ನಿರಪರಾಧಿಗಳೆಂದು ಸಮರ್ಥಿಸುವ, ಕ್ಷಮ್ಯರೆಂದು ಗಣಿಸುವ, ಕ್ಷುದ್ರ ದೋಷಯುಕ್ತರೆಂದು ಆದರಿಸುವ ಮಹಾ ಪಾಪವು ಇಂದು ಸಾಮಾಜಿಕರ ಹೃದಯವನ್ನು ತಾಮಸ ದಿಕ್ಕಿಗೆ ತಿರುಗಿಸುತ್ತಿದೆ. ನಿರಪರಾಧಿಗಳನ್ನು ಶಿಕ್ಷಿಸುವ, ತಿರಸ್ಕರಿಸುವ, ನಿಂದಿಸುವ, ಅಪಾತ್ರರೆಂದು ಸಾರುವ, ಅಗೌರವಿಸುವ, ಅರ್ಥಾಧಿಕಾರ ಸಂಪನ್ನತೆ ಅಂಥ ಮಹಾ ಪಾಪದ ಇನ್ನೊಂದು ಮುಖ. ಈ ಇಮ್ಮಂಡೆಯ ಹಾವು ಮಧ್ಯಮ ವರ್ಗೀಯರನ್ನೂ, ಬಡವರನ್ನೂ ಆಹುತಿ ತೆಗೆದುಕೊಳ್ಳುವುದಕ್ಕಾಗಿ ಸರ್ಪಾಸ್ತ್ರವು ಕರ್ಣನನ್ನು ಆಶ್ರಯಿಸಿದಂತೆ ಶ್ರೀಮಂತರನ್ನೂ ಮಹಾಧಿಕಾರಿಗಳನ್ನೂ ಆಶ್ರಯಿಸುತ್ತದೆ. ಅವರಿಂದು ಭಾರತೀಯ ನಾಗರಿಕತೆಯ ಮೇಲ್ಪಂಕ್ತಿಗಳನ್ನು ಹಾಕಿ ಕೊಡುವ ಧಾರ್ಷ್ಟ್ಯವನ್ನು ತಮ್ಮ ಅಸದಾಚಾರ ಸಮರ್ಥನೆಯ ಆಗ್ರಹದ ಮೂಲಕ ಪ್ರದರ್ಶಿಸುವುದು ಎಷ್ಟೋ ಕಡೆ ಜನಜನಿತವಾಗಿದೆ. ಇದು ಆಸುರೀ ಸಂಪತ್ತು. ಈ ಆಸುರೀ ಶಕ್ತಿಯ ವ್ಯಾಪಕತೆಗೆ ಅವಕಾಶ ಕೊಟ್ಟ ರಾಜ್ಯಧರ್ಮವು ಶುದ್ಧ ಅಧರ್ಮ–ಅದನ್ನು ಡೆಮಾಕ್ರಸಿ ಎಂದರೇನು? ಸೋಶಲಿಜಂ ಎಂದರೇನು? ದೇವರ ಹೆಸರಿನಲ್ಲಿ ಅಜಾಪುತ್ರನನ್ನು ಬಲಿಕೊಟ್ಟರೆ ಬಂದದ್ದೇನು? ರೂಪಕ್ಕೆ ವಿರುದ್ಧವಾದ ನಾಮವನ್ನು ಧರಿಸಿದ ಮನುಷ್ಯರ ಅವಲಂಬನೀಯತೆ ಎಷ್ಟು ಸಾಧು? ದಯಾ ದಾನಾದಿಗಳ ಅಪಾತ್ರವಿನಿಯೋಗವನ್ನೂ ಅಕ್ರಮಾಚಾರಣೆಯನ್ನೂ ಅದೂರದೃಷ್ಟಿಯ ವಿತರಣವನ್ನೂ Humanism ಮಾನವತಾವಾದ, ಮಾನವೀಯತೆ ಎಂದು ತಿಳಿದಿರುವುದಕ್ಕೆ ಅಶಿಕ್ಷಿತರಾಗಿ ಉಳಿದ ಕಳ್ಳ ಪೇಟೆಯ ವ್ಯಾಪಾರಿಗಳೇ ಸಾಕ್ಷಿ; ಅದಂಡಿತರಾಗಿ ಉಳಿದ ಕೊಲೆಗಡಿಕರೂ ಕಳ್ಳರೂ ಪ್ರಮಾಣ.

ಧರ್ಮವು ಆಚರಣೆಯಲ್ಲಿ ಇರುವಂತೆ ನೋಡಿಕೊಳ್ಳುವುದು ತಮ್ಮ ಕರ್ತವ್ಯವೆಂದು ಸನ್ಮಾನ್ಯ ಹಿಂದು ಅರಸರೆಲ್ಲರೂ ತಿಳಿದು ಆಚರಿಸುತ್ತಿದ್ದರು. ಆದರಿಂದಿನ ಅನೇಕ ಆಳರಸರಲ್ಲಿ ಬಳಕೆಗೆ ಬಂದಿರುವುದು–ಧರ್ಮಕ್ಕೆ ಅರ್ಥವಿಲ್ಲ. ಅರ್ಥಹೋದ ಹಾದಿಯೇ ಧರ್ಮ–ಎಂಬ ಪ್ರಭುಧರ್ಮಸೂತ್ರ. ಈ ವಿಕಟ ಮತಿತ್ವದ ದೆಸೆಯಿಂದ ದೇಶಶೋಷಣೆ–ವಿದೇಶಪೋಷಣೆ ನಾನಾ ವಿಧವಾಗಿ ಶುರುವಾಗಿವೆ. ಒಳಕಾರಣಗಳಾದ (೧) ಬಂಧು–ಜಾತಿ ವ್ಯಾಮೋಹ ಮತ್ತು ಸ್ಥಳದ ಅಂಧಾಭಿಮಾನ (೨) ಸ್ವಪ್ರತಿಷ್ಠಾ ಸಂವರ್ಧನೆಗೆ ಯಾವುದನ್ನೂ ಸಾಧನವನ್ನಾಗಿ ಮಾಡಿಕೊಳ್ಳಬಹುದೆಂಬ ವ್ಯಭಿಚಾರಿ ಮನೋಭಾವ, (೩) ಸ್ವದೇಹ ಸುಖಕ್ಕಾಗಿ ಯಾರನ್ನೂ ಯಾವುದನ್ನೂ ಬಲಿತೆಗೆದುಕೊಳ್ಳಬಹುದೆಂಬ ರಾಕ್ಷಸತ್ವ. ಹೃದಯದಲ್ಲಿ ಪ್ರಭುಪೀಠವನ್ನೇರಿರುವ ಅಂಶವು ಆಳರಸರಲ್ಲಿ ಅನೇಕರ ನಡವಳಿಕೆಯಿಂದ ಪ್ರತಿದಿನ ವ್ಯಕ್ತವಾಗುತ್ತಿದೆ. ಇದು ಸರ್ವತ್ರ ಖಂಡನೀಯವೆಂಬುದನ್ನು ಧೀಮಂತರು ಅರಿತು ಆಚರಿಸುವುದು ಅವರ ಸಮ್ಯಗ್ ಜೀವನಕ್ಕೆ ಧಾತುಪುಷ್ಟಿ ಲೇಹವೆನ್ನಿಸದಿರುದು.

ಬಾಯಲ್ಲಿ Scientific Attitude ವೈಜ್ಞಾನಿಕ ಮನೋಧರ್ಮವನ್ನು ಪದೇ ಪದೇ ಉಚ್ಚರಿಸುವ ಅನೇಕ ಗೋಮುಖವ್ಯಾಘ್ರರಿಂದು ಸಮಾಜದ ಆರ್ಥಿಕ ಪ್ರಾಣಸ್ಥಾನಗಳಲ್ಲಿರುವುದು ಕ್ರಾಂತಿಗೆ ಬರಲು ಕೊಡುವ ಆಮಂತ್ರಣ. ಕ್ರಾಂತಿಯ ದುರ್ಮೌಲ್ಯಗಳ ಜೊತೆಗೆ ಶೋಷಕರ ವ್ಯವಸ್ಥೆಯಲ್ಲಿರುವ ಸನ್ಮೌಲ್ಯಗಳನ್ನೂ ನಾಶ ಮಾಡುತ್ತದೆ. ಆದುದರಿಂದ ಕೆಸರನ್ನು ಮುಟ್ಟಿ ಕೈತೊಳೆದುಕೊಳ್ಳುವುದಕ್ಕಿಂತ ಮುಟ್ಟದೆ ಇರುವುದೇ ಲೇಸು. ಈಗಲೇ ಜಾಗ್ರತರಾಗುವುದು ಬುದ್ಧಿವಂತರ ಲಕ್ಷಣ.

'ರಾಜನಿರ್ಮಾಪಕರು' ಎಂದು ಸೈಯದ್ ಅಬ್ದುಲ್ಲ ಮತ್ತು ಸೈಯದ್ ಹುಸೇನ್ ಎಂಬ ಸಹೋದರರು ದಿಲ್ಲಿಯ ಮೊಗಲ್ ಮನೆತನದ ಅಂತ್ಯಾವಸ್ಥೆಯಲ್ಲಿ ತಮಗೆ ಬೇಕಾದವರನ್ನು ಪಟ್ಟಕ್ಕೇರಿಸಿ ಬೇಡವಾದಾಗ ಅವರನ್ನು ಪಟ್ಟದಿಂದ ಇಳಿಸಿ ಹೆಸರು ಪಡೆದರು. ಹಾಗೇ ಶ್ರೀ ಕಾಮರಾಜರು ಹಿಂದೆ ಮದ್ರಾಸಿನಲ್ಲಿ 'ಮಂತ್ರಿನಿರ್ಮಾಪಕರು' ಎನ್ನಿಸಿದ್ದರು. ಈಗ ಅಂಥ ಹೆಸರನ್ನು ಗಳಿಸಬಲ್ಲ ಅನೇಕರು ನಾಯಕಪಟ್ಟದಲ್ಲಿರುವ ಮುಖಂಡರಲ್ಲಿ ದೊರಕುತ್ತಾರೆ. ಪ್ರತಿಯೊಂದು ಜಾತೀಯ ಸರಕಾರವೂ 'ನೌಕರ ನಿರ್ಮಾಪಕ' ಎನ್ನಿಸಿಕೊಳ್ಳುವುದರಲ್ಲಿ ಹೆಮ್ಮೆಪಡಲಾರಂಭಿಸಿದೆ. ಈ 'ಜಾತ್ಯತೀತ ಜಾತೀಯತೆ' ಯಿಂದ ದೇಶಕ್ಕಾಗುತ್ತಿರುವ ವ್ಯಾವಹಾರಿಕ ಹಾಗೂ ಸಾಂಸ್ಕೃತಿಕ ಹಾನಿಯನ್ನೀಗ ಕಡೆಗಣಿಸಲಾಗುತ್ತಿದೆ. ಇದು ಮಹಾನೀತಿಗಳಿಗೆ ತೀರ ವಿರುದ್ಧವಾದ ಖಾಸಗಿ ಹಾಗೂ ಸರಕಾರಿ ವ್ಯಾವಹಾರಿಕ ಧೋರಣ ನಡೆಸಲಾರಂಭಿಸಿದ ಸಮಾಜ ಕಂಟಕ ಧೋರಣ. ಜಾತ್ಯುದ್ಧಾರವು ನೌಕರಿದಾನದಿಂದ ಮಾತ್ರ ಸಾಧ್ಯ ಎಂಬ ಅಜ್ಞಾನದ ಆರಾಧನೆ ಈಗ ಸಾರ್ವತ್ರಿಕವಾಗುತ್ತಾ ಹೋಗಿರುವುದು ನಾಗರಿಕತೆಯ ಅಧಃಪಾತದ ಲಕ್ಷಣ. ನೌಕರರಾದರೂ ಅಧಿಕಾರಸ್ಥ ರಾಜಕೀಯ ಪಕ್ಷದ ಗಣ್ಯರ ಅನುಕೂಲತೆಯಂತೆ ನಡೆದುಕೊಳ್ಳುವುದೇ ಧರ್ಮ ಎಂದು ತಿಳಿದುಕೊಳ್ಳಬೇಕಾದ ಪರಿಸ್ಥಿತಿಯನ್ನು ಉಂಟು ಮಾಡಿದ ಆಳರಸಗಿರಿಯದು ಪರಮ ಪಾಪಚಾರ. ಸಾಮಾಜಿಕ ಸ್ವಾಸ್ಥ್ಯಕ್ಕಿಂದು ಇದು ಕೊಟ್ಟಷ್ಟು ದೊಡ್ಡ ಕೊಡಲಿಯ ಪೆಟ್ಟನ್ನು ಇನ್ನಾವುದೂ ಕೊಟ್ಟಿಲ್ಲ ಎನ್ನಬಹುದು. ಧಾರ್ಮಿಕ ಮತಗಳಿಗಿಂತಲೂ ರಾಜಕೀಯ ಮತಗಳಿಂದು( Voting creeds)ಬಹಳ ವಿಧ್ವಂಸಕಗಳಾಗುತ್ತಿವೆ. ಮತಧರ್ಮಗಳಿಗಿಂತ ಮತರಾಜಕಾರಣ ಭಯಂಕರವೆನ್ನುವಂಥಾಗಿದೆ. ಸ್ಥಾನದಾನ, ಸ್ಥಾನಾಪಹಾರಗಳನ್ನು ಜಾತೀಯವಾಗಿ ನಡೆಸುವ ಮನುಷ್ಯರ ಗೌರವಸ್ಥಿಕೆಯನ್ನು ಪ್ರಶ್ನಿಸದಿರುವುದು ಗಂಡಾಂತರಕಾರಿಯಾದುದಲ್ಲವೇ? ಸ್ಥಳೀಯತೆಯ ವ್ಯಾಮೋಹವು ಜಾತೀಯತಾ ರೋಗದ ಅವಳಿಜವಳಿ–ಸ್ಥಾನ ಅಧಿಕಾರಗಳ ವಿತರಣದಲ್ಲಿ. ಶ್ರೀ ಶಂಕರಾಚಾರ್ಯರ ಅಖಿಲಭಾರತೀಯತೆಯ ಮಹಾದರ್ಶದ ವಿರುದ್ಧವಾದ ಈ ಪ್ರತಾಪಗಳು ಸಾಂಸ್ಕೃತಿಕ ಭಾವೈಕ್ಯವನ್ನು ಎಂದಾದರೂ ಸಾಧಿಸಿಕೊಡಲು ಸಾಧ್ಯವೇ?

**'ಪ್ರಣಷ್ಟಃ ಶಾಶ್ವತೋಧರ್ಮಃ ಸದಾಚಾರೇಣ ಮೋಹಿತಃ**
**ತೇನ ವೈದ್ಯಃ ತಪಸ್ವೀ ವಾ ಬಲವಾನ್ ವಾ ವಿಮುಹ್ಯತೇ'**

ಎಂಬ ಸನ್ನಿವೇಶವು ಇತಿಹಾಸದಲ್ಲಿ ಪದೇ ಪದೇ ಉದಯವಾಗುತ್ತದೆ. ಭಾರತೀಯ ಐಕ್ಯದ ಧಾತುಪುಷ್ಟಿ ಲೇಹದಂತಿದ್ದ ಪಂಚಬ್ರಹ್ಮ ದೇವತಾರಾಧನೆಯ ಸ್ಮಾರ್ತ ಸೂತ್ರವನ್ನು ಸಾಂಸ್ಕೃತಿಕ ಐಕ್ಯಸಾಪನೆಗಾಗಿ ಶ್ರೀ ಶಂಕರಾಚಾರ್ಯರು ಅಂದು ಪ್ರಕಟಿಸಿದಂತೆಯೇ ರಾಜಕೀಯವಾದ ಐಕ್ಯಸೂತ್ರವೊಂದನ್ನು ಕಂಡುಹಿಡಿದು ಪಕ್ಷ ರಾಜಕಾರಣಕ್ಕೆ ಇತಿಶ್ರೀ ಬರೆಯಬೇಕಾದದ್ದು ಇಂದು ಅತ್ಯಗತ್ಯ. ಅರ್ಥಹೀನವೆಂದು ಪರಾಮರ್ಶಿಸಿದರೆ ಸ್ಪಷ್ಟವಾಗಿ ಗೊತ್ತಾಗುವ ರಾಜಕೀಯ ಪಕ್ಷ ಭೇದಗಳಿಲ್ಲಿ ತ್ಯಾಜ್ಯ. ಶ್ರೀ ಜಯಪ್ರಕಾಶನಾರಾಯಣರೆಂದಿರುವಂತೆ ಪಕ್ಷಾತೀತ ಸರಕಾರಗಳು ಮಾತ್ರ ಈ ದೇಶಕ್ಕೆ ಆರೋಗ್ಯಕರ. ಅಂಥ ಆವರಣದಲ್ಲಿ ಮಾತ್ರ ಜಾತೀಯತೆ ಮಾಯವಾದೀತು, ಲಂಚಗುಳಿತನ ಕಡಿಮೆಯಾದೀತು, ಸ್ಥಳೀಯತೆಯ ವಿಷಧಾರೆಯ ನಿಶಿತತೆ ಅಳಿದೀತು.

ವ್ಯಕ್ತಿಯ ನೀತಿಮತ್ತೆಯನ್ನಿಂದು ಕೆಡಿಸುವುದರಲ್ಲಿ ರಾಜಧರ್ಮದ ಅಭಾಸವು ಮಹತ್ವದ ಪಾತ್ರವನ್ನು ಇಲ್ಲಿ ವಹಿಸಿದೆ. ನೀತಿಯಿಲ್ಲದೆ ಸಮಾಜವಿರಲಾರದು. ನೀತಿಯ ವ್ಯಾಪ್ತಿಯನ್ನು ರಾಜಕೀಯ ಹಾಗೂ ಆರ್ಥಿಕ ವಾದಗಳು ಮೊಟಕುಗೊಳಿಸಲು ಯಾವಾಗಲೂ ಅವಕಾಶ ಕೊಡಬಾರದು. ಭಾರತದ ೨೦ನೆಯ ಶತಮಾನದ ಬಹುಜನಾರಾಧ್ಯವಾದ ತತ್ವಜ್ಞಾನವೆಂದರೆ ಸರ್.ಎಸ್.ರಾಧಾಕೃಷ್ಣರು ವಿವರಿಸಿದ ಅದ್ವೈತ ಸಿದ್ಧಾಂತ. ಅದರ ವೈಶಾಲ್ಯ ಇನ್ನೊಂದಕ್ಕಿಲ್ಲ. ಆ ಮೂಲಸ್ಥಾಯಿಗನುಗುಣವಾದ ಸಮಾಜ ಮಹಾ ನೀತಿಗಳನ್ನು ಆಚರಣೆಗೆ ತರಲು ದ್ವಾರಕಾಪೀಠದ ಜಗದ್ಗುರು ಶ್ರೀ ಶಂಕರಾಚಾರ್ಯರೀಗ ಸಮರ್ಥ ಪ್ರಯತ್ನವನ್ನು ನಡೆಸುತ್ತಿರುವುದು ಅನುಕರಣೀಯ. ಶ್ರೀ ಶ್ರೀಧರ ಸ್ವಾಮಿಗಳ ವಿಶ್ವಮಾನವೀಯತೆಯಂತೂ ಸುಪ್ರಸಿದ್ಧ–ಮಲೆನಾಡು, ಮಹಾರಾಷ್ಟ್ರ ಮುಂತಾದ ಕಡೆಗಳಲ್ಲಿ. ನಮ್ಮ ಶಿಕ್ಷಣಸಂಸ್ಥಾ ಸಂಘಟಿಕರು ಇತ್ತ ಲಕ್ಷ್ಯ ಹಾಕಬೇಕು. ಮಾನವೀಯ ಮೌಲ್ಯಗಳ ಪ್ರಾಧಾನ್ಯವನ್ನು ಎಂದಿನಿಂದಲೂ ನಮ್ಮ ನ್ಯಾಯವಾದ ಸಾಧುಸಂತ ಪರಂಪರೆ ಎತ್ತಿ ಹಿಡಿಯುತ್ತ ಬಂದಿದೆ. ಆಧುನಿಕ ಭಾರತ ಈ ಅಂಶವನ್ನು ಸಾಕಷ್ಟು ಚೆನ್ನಾಗಿ ಗಮನಿಸಿಲ್ಲ. ಶಿಕ್ಷಣಾಲಯಗಳು ವಿಶ್ವಮಾನವತೆಯ ಬಗ್ಗೆ ಭಾಷಣಗಳನ್ನಿಡಿಸಿ ಏನನ್ನೂ ಸಾಧಿಸಲಾರವು. ಅಂಥ ಪರಂಪರೆಯ ಆರಾಧಕರನ್ನು ಶಿಕ್ಷಣಾಧ್ವರ್ಯುತ್ವದಲ್ಲಿ ನಿಲ್ಲಿಸಬೇಕು.

ಬಸವೇಶ್ವರರ ಮಹಾತತ್ವಗಳ ಬಗ್ಗೆ ಭಾಷಣಗಳಿಂದು ನಡೆದು ಹೋಗುತ್ತಿರುವ ಕಾಲ. ಅವೆಲ್ಲವೂ ಅದ್ವೈತ ನೀತಿಧರ್ಮದ ಸಾರಾಂಶಗಳು. ನಿತ್ಯಾನಿತ್ಯ ವಸ್ತುವಿವೇಕ ಅಂಥವುಗಳಲ್ಲಿ ಅಗ್ರಗಣ್ಯ. ಸಮಾಜದ ಪಂಗಡಗಳಲ್ಲಿಯ ತಾತ್ಕಾಲಿಕ ಉಪಾಧಿಬದ್ಧ ಭೇದಗಳಿಗೆ ಮಹತ್ವವನ್ನು ಕೊಡದಿರುವುದು ನಿತ್ಯಾಂಶದ ಪ್ರಾಧಾನ್ಯವನ್ನು ಒಪ್ಪಿಕೊಳ್ಳುವುದರಲ್ಲಿ ಅಡಕವಾಗುತ್ತದೆ. ಶಿವಲೋಕದಬಾಳು ಭವಲೋಕದ ಬಾಳಿಗಿಂತ ನಿತ್ಯವೆಂದ ಬಸವೇಶ್ವರರು ನಿತ್ಯ ಸತ್ಯಾರಾಧಕರು. ಸಾಮಾಜಿಕರ ಪರಸ್ಪರ ಸೌಹಾರ್ದ ನಿತ್ಯವಾಗಿರುವ ಸತ್ಯಕ್ಕೆ ಬೆಲೆ ಕೊಟ್ಟಾಗಲೇ ನಿತ್ಯವಾಗಿ ಉಳಿದೀತು. ಶರೀರಕ್ಕೆ ಸಂಬಂಧಿಸಿದ ಭೇದಗಳು ನಿತ್ಯವಲ್ಲ 'ಅನಿತ್ಯಾನಿ ಶರೀರಾಣಿ'. ಆತ್ಮಹಿತಾನುಸಾರವಾಗಿ ಶರೀರ ಹಿತಸಾಧನೆ

ನಡೆಯಬೇಕಲ್ಲದೆ ತದ್ವಿರುದ್ಧವಾಗಿ ಅಲ್ಲ, ಆತ್ಮಹಿತವು ಸರ್ವಜೀವಿ ಸಾಧಾರಣ; ಜಾತಿವಿಶಿಷ್ಟವಲ್ಲ, ಸ್ಥಳ ವಿಶಿಷ್ಟವಲ್ಲ. ಫ್ಯಾಶನ್ನುಗಳಷ್ಟು ಅನಿತ್ಯಗಳಾದ ಜಾತಿಲಾಂಛನ, ಜಾತೀಯ ಯಾಂತ್ರಿಕ ಕರ್ಮ ಸಂಸ್ಕಾರಜಾತ್ಯಭಿಮಾನಗಳು ಭಾರತೀಯ ಸಾಮಾಜಿಕತೆಗೆ ವಿಘ್ನಗಳೆಂಬುದು ಸ್ಪಷ್ಟ. ರಾಜಕೀಯ ಮತಾಹಂಕಾರ (ಪಕ್ಷಾಹಂಕಾರ) ಮತಧಾರ್ಮಿಕ ಅಹಂಕಾರದಂತೆ ಮತ್ತು ಸ್ಥಳದುರಭಿಮಾನ ರೂಪದ ಅಹಂಕಾರದಂತೆ ಸಮಾಜ ವಿಚ್ಛೇದಕಾರಕ. ಅವು ವಿವಿಧ ನಾಮ ಮೋಹ–ರೂಪಮೋಹಗಳ ಮಾತಾಪಿತೃಗಳು. ಈ ಮೋಹಗಳೆಲ್ಲವೂ ಸಮಾಜದ ಐಕ್ಯಸಾಧನೆಗೆ ಕುಠಾರಪ್ರಾಯವಾದಂಥವು. ಮೋಹನಿರಾಸವೇ ರಾಷ್ಟ್ರೀಯ ವಿದ್ಯಾಭ್ಯಾಸದ ಅಡಿಗಲ್ಲು. ವ್ಯಾವಹಾರಿಕ ಅದ್ವೈತದಲ್ಲಿಂದು ರಾಷ್ಟ್ರಾಭಿಮಾನವು ಪರಾಕಾಷ್ಠೆ. ಅದಕ್ಕೆ ವಿರುದ್ಧವಾದ ಅಲ್ಪವ್ಯಾಪ್ತಿಯ ಅಭಿಮಾನಗಳು ಮೋಹಗಳು. ಅಲ್ಪವಸ್ತುಗಳ ಮೋಹಗಳಲ್ಲಿ ಕುಟುಂಬೈಕ ನಿಷ್ಠೆ ಅಗ್ರಗಣ್ಯ–ವ್ಯಕ್ತಿಸ್ವಾರ್ಥ ಅದರ ಮರಿ. ಇವೇ ಇಂದು ಜೀವನವನ್ನು ಸಾಮಾಜಿಕವಾಗಿ ರೋಗಗ್ರಸ್ತತೆಗಿಳಿಸಿದ ಮಾರಿಗಳು.

ಶಿರಾಳಕೊಪ್ಪದ ಸನಿಹದ ಬಳ್ಳಿಗಾಮ ಅಥವಾ ಬಲಿಪುರವು ಅಲ್ಲಮಪ್ರಭುಗಳ ಜನ್ಮಸ್ಥಳ. ಅವರು ಅದ್ವೈತಿಗಳು ಮತ್ತು ಬಸವೇಶ್ವರರ ಗುರುಗಳು. ಆದುದರಿಂದ ಬಲಿಪುರವನ್ನು ಮೈಸೂರು ರಾಜ್ಯದ ಕಾಲಟೆ(ಡಿ) ಎಂದು ಕರೆಯಬಹುದು. ಲಿಂಗಧಾರಣೆ–ಜನಿವಾರ ಧಾರಣೆಗಳಿಗಿಂದು ಜಾತೀಯತಾ ಪ್ರಚೋದಕತೆಯೊಂದನ್ನುಳಿದರೆ ಮತ್ತಾವ ಅರ್ಥವೂ ಜನತೆಯಲ್ಲಿ ಹಾರ್ದಿಕವಾಗಿ ಉಳಿದಿಲ್ಲ. ವೇದಗಳು ತ್ರೈಗುಣ್ಯ ವಿಷಯಗಳಾಗಿರುವಂತೆಯೇ ಆಗಮಗಳೂ ತ್ರೈಗುಣ್ಯ ವಿಷಯಗಳು. ಶಂಕರರೂ ಅಲ್ಲಮರೂ ನಿಸ್ತ್ರೈಗುಣ್ಯದ ಮೌಲ್ಯವನ್ನು ಶ್ರೀಕೃಷ್ಣನಂತೆ ಸರ್ವೋಚ್ಚವೆಂದವರು. ಈ ಸರ್ವೋಚ್ಚ ಮೌಲ್ಯಕ್ಕೆ ಅನುರೋಧವಾಗಿ ನಡೆಯುವವರೆಗೆ ತ್ರೈಗುಣ್ಯಸಹಜವಾದ ಆಚಾರ, ಪೂಜೆ, ಪುರಸ್ಕಾರ, ವ್ಯವಹಾರ, ಶಿಕ್ಷಣ ಮುಂತಾದವುಗಳು ಗ್ರಾಹ್ಯ; ಅದಕ್ಕೆ ವಿರುದ್ಧವೆಂದು ಕಂಡಾಗ ಅಂಥವುಗಳೆಲ್ಲವೂ ತ್ಯಾಜ್ಯ. ಸರ್ವ ಶಿಕ್ಷಣದ ಪರಾಕಾಷ್ಠೆಯೂ ಸ್ಥಿತಪ್ರಜ್ಞತೆ.(Attainment of a balanced personality) ಸ್ಥಿತಪ್ರಜ್ಞನು ತ್ರಿಗುಣಾತೀತನು; ತ್ರಿಗುಣ ಪ್ರಪಂಚದ ಭೇದಗಳಿಗೆ ಮಹತ್ವವನ್ನು ಕೊಡದವನು. ಹೀಗಿರುವಾಗ ಸಾಮಾಜಿಕ ಪುನರುತ್ಥಾನಕ್ಕೆ, ನ್ಯಾಯ ಜೀವನ ಸಂಸ್ಥಾಪನೆಗೆ,ಯುಕ್ತಾಯುಕ್ತ ವಿವೇಕಕ್ಕೆ ನಿತ್ಯಾನಿತ್ಯಗಳನ್ನು ವಿಂಗಡಿಸಿ ಅವು ಅವುಗಳಿಗೆ ತಕ್ಕ ಸ್ಥಾನಗಳನ್ನು ಜೀವನದಲ್ಲಿ ಕೊಡುವುದು ಅದ್ವೈತ ವ್ಯವಸ್ಥೆಯೊಂದೇ. ಅದೇ ಸಮಾಜ ಶಕ್ತಿ ಪೋಷಕವಾದುದು. ಅನಿತ್ಯ, ಅನಿತ್ಯತರ, ಅನಿತ್ಯತಮ ಎಂಬ ಬಗೆಯ ತಾರತಮ್ಯ ವಿವೇಕವೊಂದೇ ಜೀವನ ನೀತಿಯ ವ್ಯಾಪ್ತಿಮತ್ತೆಯ ಸಾರ್ವಜನಿಕ ಮುಖವನ್ನು ಬೆಳೆಯಿಸಲು ತಕ್ಕ ಸಾಧನ.

ಕ್ಷುದ್ರ ಈರ್ಷ್ಯಾಸೂಯಗಳಿಂದ ಜರ್ಜರಿತವಾದ ಸಾಮಾಜಿಕ ಸಂಬಂಧಗಳನ್ನು ಸುಧಾರಿಸಲು ಅದ್ವೈತ ತೇಜಸ್ಸು ಮಾತ್ರ ಸಮರ್ಥ. ಅದನ್ನು ಬೆಳೆಸಿಕೊಂಡವರೇ ನಿಜವಾದ ರಾಷ್ಟ್ರೀಯರು ಮಾನವರು ವಿದ್ವಾಂಸರು. ವ್ಯವಹಾರದ ಭೇದಗಳಿಗೆ ತಾರತಮ್ಯ

ವಿವೇಕದ ಪ್ರಕಾರವೇ ತಕ್ಕ ತಕ್ಕ ಗೌಣ, ಗೌಣತರ ಸ್ಥಾನಗಳನ್ನು ಕೊಡಬಲ್ಲ ಬುದ್ಧಿ, ಅದ್ವೈತ ಸಂಸ್ಕಾರವೊಂದರಿಂದಲೇ ಇಲ್ಲಿ ಸಾಧ್ಯ. ಅದ್ವೈತವು ಸರ್ವಸಂಬಂಧಗಳಿಂದ ಮುಕ್ತವಾದ ಹಾಗೂ ಸರ್ವಸಂಬಂಧಗಳ ಮೂಲಾಧಾರ. ಬ್ರಹ್ಮಾದ್ವೈತ–ಶಿವಾದ್ವೈತಗಳು ಅಭಿನ್ನ. ಅನಿತ್ಯಗಳ ವ್ಯವಸ್ಥೆ ನಿತ್ಯಾನುಗುಣವಾಗಿರುವುದು ಈ ಅಭೇದವಾದದ ಸಾಮಾಜಿಕ ಮಹಾನೀತಿ. ಅದೇ ಸೂರ್ಯ–ಚಂದ್ರರಂತೆ ಬಾಳುವ ವೇದೋಕ್ತ ಸ್ವಸ್ತಿಪಂಥ.

**‘ಸ್ವಸ್ತಿ ಪಂಥಾಮನುಚರೇಮ**
**ಸೂರ್ಯಾಚಂದ್ರಮಸಾವಿವ’**



[**‘ಶ್ರೀಧರ ಸಂದೇಶ’**]

# ೨೦. ಲೋಕಶಿಕ್ಷಣದ ನಾಯಕತ್ವ ಮತ್ತು ಸಂನ್ಯಾಸಿ ಸಾಮರ್ಥ್ಯ

'ಒಂದು ಗಿಡವನ್ನು ಅದು ಹುಟ್ಟಿದ ಸ್ಥಳದಿಂದ ಕಿತ್ತು ಮರುಭೂಮಿಯಲ್ಲಿ ಒಗೆಯುವುದಕ್ಕೂ ಒಬ್ಬ ವ್ಯಕ್ತಿಯು ಸಮಾಜದಿಂದ ಸಂಪೂರ್ಣ ಸ್ವತಂತ್ರನಾಗಿ, ಸುಖಿಯಾಗಿ ಇರಬಲ್ಲ ಎಂಬುದಕ್ಕೂ ವ್ಯತ್ಯಾಸವಿಲ್ಲ' ಎಂದರು ಟಾಲ್‌ಸ್ಟಾಯ್. ಈ ಅಪ್ರತಿಹತ ಸತ್ಯದೆದುರು ಭಾರತದ ನಿವೃತ್ತಿ ಧರ್ಮವನ್ನು ಇಟ್ಟು ನೋಡುವುದಿಂದು ಅತ್ಯಂತ ಅಗತ್ಯ.

ನಿವೃತ್ತನು ಸಂನ್ಯಾಸಿ; ಅವನಿಗೆ ಕರ್ಮವಿಲ್ಲ–ಎಂಬ ಅಭಿಪ್ರಾಯ ಪ್ರಕಟನೆಯನ್ನು ಅಪಾರ್ಥ ಮಾಡುತ್ತ ಬಂದು ಶತಮಾನಗಳು ಭಾರತದಲ್ಲಿ ಕಳೆದುಹೋಗಿವೆ. ಕರ್ಮದ ಸಂನ್ಯಾಸವು ವ್ಯಕ್ತ್ಯರ್ಥದ ಲೌಕಿಕ ಮತ್ತು ಮತಾಚಾರಿಕ ಕರ್ಮತ್ಯಾಗವನ್ನು ಹೇಳುತ್ತದೆ; ಅಲ್ಲಿಯೂ ವ್ಯಕ್ತಿಯ ವಿಶಿಷ್ಟ ಶಾರೀರಿಕ ವರ್ತನೆಯನ್ನು(ಚಲನ–ವಲನಾತ್ಮಕವಾದ ಪೂಜೆ ಪುರಸ್ಕಾರಗಳನ್ನು) ಮತ್ತು ಧರ್ಮಾರ್ಥ ಕಾಮಗಳ ಸಂಪಾದನೆಗೆ ಕಾರಣೀಭೂತವಾದ ಕರ್ಮವನ್ನು ಬಿಡತಕ್ಕದ್ದಲ್ಲದೆ ಅಕ್ಷರಶಃ ಸರ್ವ ವಿಧದ ಕರ್ಮಗಳನ್ನೂ ಎಂದಲ್ಲ–ಎಂಬುದು ವ್ಯವಹಾರ್ಯವಾದ ತಾತ್ಪರ್ಯ. ಪ್ರವೃತ್ತಿ ಕರ್ಮಗಳು ಧರ್ಮ ವಿರುದ್ಧವಾಗದ ವಿವಿಧ ಲೌಕಿಕ ಆಚಾರ–ವ್ಯವಹಾರಗಳು. ಅವುಗಳಿಂದ ಕಾವ್ಯ ಕರ್ಮಗಳು(ಫಲಾಪೇಕ್ಷೆಯಿಂದ ಕೂಡಿದ ಕರ್ಮಗಳು) ಹೊರಗುಳಿಯವು; ಅವೆಲ್ಲವೂ ಸಕಾಮ ಕರ್ಮಗಳು; ಆದರೆ ಧರ್ಮಕ್ಕೆ (ಸಮಾಜಹಿತಕ್ಕೆ) ವಿರುದ್ಧವಾದವುಗಳಲ್ಲ.

ಸಾಮಾನ್ಯವಾಗಿ ನಿಷ್ಕಾಮ ಕರ್ಮವನ್ನು ಪ್ರವೃತ್ತಿ ಕರ್ಮಗಳಲ್ಲಿ ಅಡಕಗೊಳಿಸುವುದು ಅಪಾರ್ಥಕರ. ಅದು ವ್ಯಕ್ತಿ ಸ್ವಾರ್ಥ ಸಾಧಕವಾದ ಪ್ರವೃತ್ತಿಯೇ ಅಲ್ಲ. ಪರಾರ್ಥಸಾಧಕವಾದ ಪ್ರವೃತ್ತಿಗೂ ನಿವೃತ್ತಿಗೂ ಭೇದವನ್ನು ತೋರಿಸಲು ಸಾಧ್ಯವಾಗದು. ಏಕೆಂದರೆ ನಿಷ್ಕರ್ಮವು ಶೂನ್ಯಕರ್ಮವಲ್ಲ. ಶೂನ್ಯಕರ್ಮವು ಅಸಾಧ್ಯ; ನ್ಯಾಯವಾದ ನಿವೃತ್ತಿ ಕರ್ಮವೆಂದರೆ ನಿಷ್ಕಾಮ ಕರ್ಮವೇ. ಸಮಾಜಾವಧೂತ್ಯದ (ಸಮಾಜ ನಿರಪೇಕ್ಷವಾದ) ಬದುಕುವಿಕೆ ಸಾಧ್ಯವೆಂಬುದು ಒಮ್ಮೆ ಸಮಾಜವು ಕರುಣಿಯಾಗಿದ್ದಾಗ ಅಥವಾ ಮೂಢವಾಗಿದ್ದಾಗ ಇಲ್ಲವೇ ಉದಾರಿಯಾಗಿದ್ದಾಗ ಸಾಧ್ಯವೆನ್ನಿಸಬಹುದಾದ ಪಾಕ್ಷಿಕ ಸತ್ಯವಲ್ಲದೆ ಸಾರ್ವಕಾಲಿಕ–ಸಾರ್ವತ್ರಿಕ ಸತ್ಯವಲ್ಲ. ಇದನ್ನು ನಿತ್ಯ ಸತ್ಯವೆಂದು ತಿಳಿದು ಮೋಸ ಹೋದವರು ನಿವೃತ್ತಿಕರ್ಮವನ್ನು ಲೋಕ ಧಿಕ್ಕಾರವೆಂದು, ಲೋಕ ವಿಮುಖತೆಯೆಂದು, ಲೋಕ ನಿರಪೇಕ್ಷತೆಯೆಂದು ಅರ್ಥಯಿಸಹೋದುದು ಕಂಡು ಬಂದಿದೆ. ಇಂಥ ಮೋಸ ಹೋಗುವಿಕೆಯು ಅದ್ವೈತೇತರ ಸಹೋದರರಲ್ಲಿ ಸಹಜ; ಅದ್ವೈತಾನುಯಾಯಿಗಳಲ್ಲಿ

ಅಸಹಜ. ಅದ್ವೈತದ ಜಗನ್ಮಿಥ್ಯೆಯು ಜಗತ್ತನ್ನು ಶೂನ್ಯವೆಂದಿಲ್ಲ, ಬ್ರಹ್ಮಾತ್ಮಕವೆಂದಿದೆ, ಸತ್ಯಾನೃತ ಸಂಮಿಶ್ರವೆಂದಿದೆ; ಚಾಂಚಲ್ಯವು ಅದರ ಅನೃತಭಾಗ, ಅನಿತ್ಯಭಾಗ: ಅದರ ಅಚಂಚಲತೆಯ ಪ್ರಜ್ಞೆಯನ್ನು ತೆರೆಯಿಸುವುದೇ ಲೋಕ ಕಲ್ಯಾಣ. ಗುಣ–ದೋಷಗಳ ಆಧಾರವಾದ ಆತ್ಮ ಧರ್ಮವು ನಿತ್ಯ. ಅದೇ ಬ್ರಹ್ಮ ಧರ್ಮ. ಅದರ ಸ್ಥಿರತೆ ಇರುವುದು ಆತ್ಮವೆಂಬ ಮಾನಸ ಮಧ್ಯಗತವಾದ ಅಮರಶಕ್ತಿಯಲ್ಲಿ. ಅಂಥ ಶಕ್ತಿಯು ಪ್ರಾಣ+ಪ್ರಜ್ಞಾತ್ಮಕ. ಅದರ ವಿಶ್ವಜನೀನ ಪ್ರವೃತ್ತಿಯನ್ನು 'ನಿವೃತ್ತಿ' ಅಥವಾ 'ನಿಷ್ಕರ್ಮ' ಇಲ್ಲವೆ 'ನಿಃಸ್ವಾರ್ಥ ಪ್ರವೃತ್ತಿ' ಎಂದು ತಿಳಿಯಬೇಕು. ಆತ್ಮಶಕ್ತಿಯು ಅಶರೀರವಾದಾಗ ಅವ್ಯಕ್ತವಾಗಿ, ಲೇಪರಹಿತವಾಗಿ ಮಹಾಕರ್ಮಗಳನ್ನು ಮಾಡುತ್ತದೆ; ಸಶರೀರವಾದಾಗ ವ್ಯಕ್ತವಾಗಿ ಅಂಥ ಭೌತಿಕ–ಅಭೌತಿಕ ಕರ್ಮಗಳನ್ನು ಮಾಡುತ್ತದೆ.

ಭೌತಿಕವಾದ ಯಜನ–ಯಾಜನಗಳಷ್ಟನ್ನೇ ಹಿಂದೆ 'ಕರ್ಮ'ವೆಂದು ಗ್ರಹಿಸಿ ಅವುಗಳ ತ್ಯಾಗವನ್ನು 'ನಿವೃತ್ತಿ' ಎಂದರು; ಅಧ್ಯಯನ–ಅಧ್ಯಾಪನಗಳನ್ನೂ ದಾನ–ಪ್ರತಿಗ್ರಹಗಳನ್ನೂ ಲೋಕೋಪಕಾರ ದೃಷ್ಟಿಯಿಂದ ಮಾಡುವುದನ್ನು ಸನ್ಯಾಸಿಗೆ ಹೇಳಿಸಿದ ಕರ್ಮವಲ್ಲ ಎಂದು ಗ್ರಹಿಸಿದ್ದಿಲ್ಲ. ಭಿಕ್ಷೆಯು ದಾನಸ್ವೀಕಾರ; ಹಸಿದ ಪ್ರಾಣಿಗೆ ಜಲ–ಆಹಾರಗಳನ್ನು ಈಯುವುದು ದಾನ. ಇವು ಸನ್ಯಾಸಿಗೆ ವರ್ಜ್ಯವಾಗಿದ್ದುದು ಎಲ್ಲಾದರೂ ಉಂಟೇನು? ಹಾಗೇ ಮುಮುಕ್ಷುವಿಗೆ ಬ್ರಹ್ಮವಿದ್ಯೋಪದೇಶ ಮಾಡುವುದನ್ನೂ ತಾನು ಬ್ರಹ್ಮವಿದ್ಯೆಯನ್ನು ಅಭ್ಯಸಿಸುವುದನ್ನೂ ಸನ್ಯಾಸಿ ಮಾಡಬಾರದು–ಎಂದು ಎಲ್ಲಾದರೂ ಹೇಳಿದ್ದುಂಟೇ? ಈ ಅಂಶಗಳನ್ನು ಪರಿಗಣಿಸದಾಗ ವಿಮೂಢರು ಶವಾಸನ ಹಾಕಿ ೨೪ ತಾಸುಗಳ ಕಾಲವೂ ೩೬೫ ದಿನಗಳೂ ೧೦೦ ವರುಷವೂ ಕುಳಿತಿರುವಂಥ ಬದುಕೇ ಶ್ರೇಷ್ಠ ಸನ್ಯಾಸದ ಲಕ್ಷಣ–ಎಂದು ಭಾವಿಸಿ ಬೋಧಿಸಿದರು. ಅದರಿಂದಲೇ ಕರ್ಮವಾದ–ಜ್ಞಾನವಾದಗಳ ವೈರವು ಕಲ್ಪಿತವಾಯಿತು; ಶಂಕರಾಚಾರ್ಯ–ಬಸವಣ್ಣನವರುಗಳು ಭಿನ್ನ ಮಾರ್ಗಿಗಳೆಂದು ತಿಳಿಯಲಾಯಿತು. 'ವಿಮೂಢಾನ ಅನುಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ' ಎಂಬ ಗಾದೆ ಸತ್ಯವಾಯಿತು. ಅನುದರ್ಶನವಿಲ್ಲದ್ದು ಆಭಾಸಿಕ ದರ್ಶನ. ಶುದ್ಧವಾದ ಜ್ಞಾನವೆಂದರೇನು? ಕರ್ಮಕ್ಕೆ ಆಧಾರವಾದ ಬ್ರಹ್ಮಶಕ್ತಿಯಲ್ಲವೇ? 'ಜನ್ಮಾದಿಗಳು ಬ್ರಹ್ಮನ ದೆಸೆಯಿಂದ' ಎಂದಿಲ್ಲವೇ ಬ್ರಹ್ಮಸೂತ್ರ? ಬ್ರಹ್ಮಸೂತ್ರವು ಕೇವಲ ಜನಿವಾರವಾಗಿ ಹೋಯಿತೇ? ಕರ್ಮವು ಆಧಾರರಹಿತವಾಗಿ ನಡೆಯುತ್ತದೆಯೇ?

ವ್ಯಕ್ತಿಯ ಹೊಟ್ಟೆಗಾಗಿಯೇ ಸಮಾಪ್ತವಾಗುವ ಕಾಯಕವು ಬ್ರಹ್ಮಕರ್ಮವಲ್ಲ; ಅದನ್ನು ಸಕಲ ಚರಾಚರಗಳೂ ಯಾರ ಉಪದೇಶವೂ ಇಲ್ಲದೆ ಒಂದಲ್ಲ ಒಂದು ರೀತಿಯಿಂದ ಮಾಡಬಲ್ಲವು. ಅಂಥ 'ಕಾಯಕ' ಕೈಲಾಸ ಸಾಧಕವಾಗದು. ನಿಃಸ್ವಾರ್ಥಿಗಳ ಉಪದೇಶದ ಅಗತ್ಯ ಉಂಟಾಗಿಲ ಮೂಲಕ ಕಂಡ ಜ್ಞಾನ ಅಥವಾ ಕರ್ಮ ಎಂಬುದು ಮಾನಸ ಶಾಸ್ತ್ರೀಯವಾಗಿ ಯಾವಾಗಲೂ ವೈಶ್ವಿಕ(Universal) ದೃಷ್ಟಿಯದಾಗಿ ಇರುತ್ತದೆ. ವಿಶ್ವಪ್ರಜ್ಞೆಯು ವಿಶ್ವಕರ್ಮದ ಆಧಾರ. ಸನ್ಯಾಸಿಯು ವಿಶ್ವಕರ್ಮಿ ಅಥವಾ ವಿಶ್ವಜ್ಞಾನಿ ಹೇಗೆಂದರೂ ಅರ್ಥಭೇದ ಉಂಟಾಗದು. ವಿಶ್ವವಿಲ್ಲಿ ಅಸೀಮ ಎಂಬ ಅರ್ಥದಿಂದ

ಲಕ್ಷಿತವಾಗಿರುವುದರಿಂದ. ವಿಶ್ವಾಮಿತ್ರ ಅಂಥ ಋಷಿ(ಕರ್ಮಿ ಅಥವಾ ಜ್ಞಾನಿ) ಎನ್ನಿಸಿದ್ದನು. ಬ್ರಹ್ಮರ್ಷಿ ಅಥವಾ ಜೀವನ್ಮುಕ್ತನು ಭಾರತದಲ್ಲಿ ಪರಮಪೂಜ್ಯ; ಅದಕ್ಕಿಂತ ಹೆಚ್ಚಿನ ಪದವಿಲ್ಲ.

'ವಿಶ್ವಮಾನವತೆ' ಎಂಬುದೇನೂ ಬಹಳ ಹೊಸ ಸಂಶೋಧನೆ ಅಲ್ಲ. ವಿಶ್ವಾಮಿತ್ರತ್ವವು ಅದಕ್ಕಿಂತಲೂ ಹೆಚ್ಚು ವ್ಯಾಪಕವಾದ ಕಲ್ಪನೆ. ವಿಶ್ವಾಮಿತ್ರನು(ವಿಶ್ವದ ಮಿತ್ರನು) ವಶಿಗಳಲ್ಲಿ ಶ್ರೇಷ್ಠ (ವಶಿಷ್ಠ). ಅವನು ಅತ್ರಿ(ಮೂರಲ್ಲ) ಅಥವಾ ಏಕಮೇವಾದ್ವಿತೀಯತೆಯ ಪ್ರಜ್ಞೆಯುಳ್ಳಾತ. ಆತನು ಭರದ್ವಾಜ ಅಥವಾ ವಿಶ್ವಕ್ಕೆ ಆಹಾರವನ್ನು ಪೂರಯಿಸುವವನು; ವಿಶ್ವಾಧಾರನಾಗಿರುವುದರಿಂದ ಆತ ವಿಶ್ವಾಹಾರನಾಗುತ್ತಾನೆ. ಅವನು ಗೋತಮ ಅಥವಾ ಭೂಮಿಗಳಲೆಲ್ಲಾ ಅತ್ಯಂತ ಹೆಚ್ಚಿನ ಭೂಮಿ(ಪದ ಅಥವಾ ಸ್ಥಾನ). ಅವನೇ ಜಮದಗ್ನಿ ಅಥವಾ ವಿಶ್ವದ ಬದುಕಿನ ಸಾರಭೂತವಾದ ಶಕ್ತಿ ಅಥವಾ ವೀರ್ಯ. ಅವನು ಕಶ್ಯಪ ಅಥವಾ ಆಕಾಶ, ಬಯಲು ಇಲ್ಲವೆ ಎಲ್ಲದಕ್ಕೂ ಅವಕಾಶವನ್ನು ಕಲ್ಪಿಸಿಕೊಡುವ ದೃಷ್ಟಿಯುಳ್ಳವನು. ಇಂಥವನು ನೈಷ್ಕರ್ಮ್ಯ ಸಿದ್ಧಿಯನ್ನು ಪಡೆದ ಸನ್ಯಾಸಿ, ಜೀವನ್ಮುಕ್ತ, ದೇವ, ಪರಮಸತ್ಯ, ಪರಬ್ರಹ್ಮ, ಕರ್ಮಯೋಗಿ, ಜ್ಞಾನಯೋಗಿ, ಭಕ್ತಿಯೋಗಿ ಎಂಬ ಪದಗಳ ಅರ್ಥಗಳ ಪರಿಪೂರ್ಣತೆಗೆ ಪಾತ್ರನಾದ(ವ್ಯಕ್ತಿಯಲ್ಲ) ವಿಶ್ವಶಕ್ತಿ. ಬ್ರಹ್ಮದ ಅಥವಾ ಪರಿಪೂರ್ಣತೆಯ 'ಅವಸ್ಥೆ'ಗಳು ಅನಂತ. ಅವುಗಳಲ್ಲಿ ಪ್ರತಿಯೊಂದು ಪದದ ಅರ್ಥವೂ ಭಿನ್ನ. ಪ್ರತಿಯೊಂದೂ ಪಾಕ್ಷಿಕ ಸತ್ಯ; ಭೇದ, ವಿರೋಧಗಳಿಂದ ಸಂಬದ್ಧ.

ಕೇವಲ ಲೋಕೋಪಕಾರವು ವಾಚ್ಯ, ಲಕ್ಷ್ಯ, ವ್ಯಂಗ್ಯಗಳಲ್ಲಿ ಯಾವ ರೂಪದಲ್ಲಿಯೂ ಇರಬಹುದು. ಅದರ ಕರ್ಮ–ಉಪಾಸನಾ–ಜ್ಞಾನರೂಪಗಳೆಲ್ಲವೂ ಆಭಾಸಿಕ. ಅದು ಅರೂಪ, ಅಗುಣ, ಅಕರ್ಮ, ನಿತ್ಯ, ಸತ್ಯ; ಆದುದರಿಂದ ಅದು ಪರಮ ಸಾಮಾಜಿಕ, ಸಾಮಷ್ಟಿಕ, ಸಾಮ್ಯೈಕ ಸೂತ್ರಬದ್ಧ ಅಥವಾ ಸಮಾಜವಾದದ ಸಮ್ಯಕ್ತ್ವದಶೆ. ಸ್ವಾರ್ಥವು ಅನಿತ್ಯ, ಅಸತ್ಯ. ಪರಾರ್ಥವು ನಿತ್ಯ, ಸತ್ಯ, ಪರಮಾರ್ಥ. ಪರಾರ್ಥಕವಲ್ಲದ ಪರಮಾರ್ಥದ ಕಲ್ಪನೆಯೂ ಭ್ರಮಾತ್ಮಕ. ವಿಶ್ವಪರಾಧೀನನೇ ಸ್ವಾಧೀನ, ಸ್ವತಂತ್ರ. ವಿಶ್ವವುಪರ, ಅನ್ಯಾತ್ಮಕ, ಶ್ರೇಷ್ಠ ಒಂದು ಅನ್ಯವ್ಯಕ್ತಿ ವಿಶ್ವವಲ್ಲ; ಅಂಥ ಎಲ್ಲ ವ್ಯಕ್ತಿಗಳೂ ಅನನ್ಯವಾಗಿ ಕಾಣುವಂತಾದಾಗ ಒಂದು ವ್ಯಕ್ತಿಗೆ ಮಾಡಿದ ಉಪಕಾರವೂ ವಿಶ್ವೋಪಕಾರ. ಸ್ವಾರ್ಥಿಯ ಸ್ವಾತಂತ್ರ್ಯವು ದಾಸ್ಯ, ಬಂಧ, ಪರಾಧೀನತೆ. ಆಧ್ಯಾತ್ಮಿಕತೆಯು ವಿಶ್ವ ಲೌಕಿಕತೆ, ಅಲೌಕಿಕತೆಯು ವಿರಾಟ್ ಲೌಕಿಕತೆ–ಲೋಕದ್ವೇಷ, ಲೋಕತ್ಯಾಗ ಅಲ್ಲ. ವಿಶ್ವಪ್ರಭು ವಿಶ್ವಲೀನ; ಅದರಿಂದಲೇ ಅವನು ಅದೃಶ್ಯ, ಅವ್ಯಕ್ತ, ವ್ಯಂಗ್ಯ. ಸ್ವಾರ್ಥಿಯಾದ ಸ್ವತಂತ್ರನು ಜೀವ–ಜಡಗಳ ದಾಸಾನುದಾಸ; ಲೋಕಮುಗ್ಧ, ಜಡವಶ್ಯ!

ಪ್ರಸ್ಥಾನತ್ರಯಿಯಲ್ಲಿ ಗೀತೆ ಹೆಚ್ಚು ಜನಪ್ರಿಯವಾಗಲು ಅದು ನಿವೃತ್ತಿಮಾರ್ಗವನ್ನು ನಿಷ್ಕಾಮ ಕರ್ಮ, ಅನಾಸಕ್ತಿ ಯೋಗ, ಕರ್ಮಫಲತ್ಯಾಗ ಎಂದು ಸರಿಯಾಗಿ ವ್ಯಾಖ್ಯಾನಿಸಿ ಹೇಳಿದ್ದರಿಂದಲೇ, 'ನಿವೃತ್ತಿ'ಗೆ ಅಪಾರ್ಥ ಉಂಟಾದದ್ದು ಗೀತೆಗೆ ಗೊತ್ತು. ಆದುದರಿಂದಲೇ ಅದಕ್ಕೆ ನಿಷ್ಕಾಮ ಕರ್ಮವೇ ಸರಿಯಾದ ಅರ್ಥವೆಂದು ಹೇಳಲಿಲ್ಲ. ಅದರ ಬದಲು

ಕರ್ಮಯೋಗವೆಂದು ನಿಷ್ಕಾಮಕರ್ಮವನ್ನು ಕರೆದು, ಅದಕ್ಕೆ ಪ್ರವೃತ್ತಿಮಾರ್ಗದಲ್ಲೇ ಸ್ಥಳ ಮಾಡಿಕೊಟ್ಟಿತು; ಮತ್ತು ಅದರ ಪ್ರಾಧಾನ್ಯವನ್ನು ಯಥೇಷ್ಟವಾಗಿ ಹೊಗಳಿತು. ನಿಷ್ಕಾಮ ಕರ್ಮದಲ್ಲಿ ವೈಯಕ್ತಿಕವಾದ ಕರ್ಮಫಲತ್ಯಾಗಬುದ್ಧಿಯೂ ವಿಶ್ವಾತ್ಮಕವಾದ ಮಹಾಕರ್ಮ ಸಾಧನೆಯ ಮಹತ್ವಾಕಾಂಕ್ಷೆಯೂ ಅಡಗಿದೆ. ಇದು ಸಮತ್ವ, ನಿವೃತ್ತಿ ಪ್ರವೃತ್ತಿಗಳ ಯೋಗ, ಏಕಸ್ವರೂಪದ ಅಂತರರ್ಥ, ಆದರ್ಶಪರಾಕಾಷ್ಠೆಯ ಸಮತೋಲ, ಈಶಾವಾಸ್ಯದ ಜ್ಞಾನಕರ್ಮಸಮನ್ವಯ.

ತ್ರಿಕಾಲಾಬಾಧಿತವಾದ ಮೂಲದ ಏಕತ್ವವನ್ನು ಅನೇಕತ್ವವೆಂದು ಭಾವಿಸಿದ ವೈಯಕ್ತಿಕತೆಯ ದೆಸೆಯಿಂದ ಏಕೀಕರಣ, ಸಾಮ್ಯ, ಸಮನ್ವಯ, ಸಾಮರಸ್ಯ ಭೇದ ಪರಿಹಾರ, ಮುಂತಾದವುಗಳ ಅವಶ್ಯಕತೆ ಜೀವನದ ವಿವಿಧ ಅನುಭವಗಳಲ್ಲಿ ಕಂಡುಬರುತ್ತದೆ. ವೈಯಕ್ತಿಕತೆಯು ಸರ್ವತ್ರ ವಿಭಾಜಕ ಗುಣ. ಕ್ರಿಯೆ ಎಲ್ಲವೂ ಸಾಕಾರ ಸಂಕ್ರಾಂತ; ಆದುದರಿಂದ ಅದರ ದ್ವೈತವು ಮಿಥ್ಯೆ ಅಥವಾ ತುಚ್ಛ; ಆದರೆ ಶೂನ್ಯವಲ್ಲ! ಶೂನ್ಯವು ಎಲ್ಲೂ ಯಾವಾಗಲೂ ಇಲ್ಲ. ಅಪೂರ್ಣವು ಭೇದ, ಶೂನ್ಯಸದೃಶ, ಅಸಾಮಾಜಿಕ, ಸ್ಥೂಲ, ಅನೇಕ, ಸ್ವಾರ್ಥಪರ, ರಾಜಸ ತಾಮಸ, ಸರೂಪ, ಸನಾಮ, ಸವಿಶೇಷ. ಪೂರ್ಣದ ಏಕತ್ವವು ಅನೇಕದೊಳಗಿನ ಪ್ರತ್ಯೇಕವಾಗಿರುವ ಬಡಪಾಯಿತನದ ಏಕತ್ವವಲ್ಲ; ಸಮೃದ್ಧ ಸಿರಿವಂತಿಕೆಯ ಔದಾರ್ಯದ ಪರಾಕಾಷ್ಠೆಯ ಸಮರ್ಥ ಐಕ್ಯಭಾವ; ವ್ಯಕ್ತ್ಯಹಂಕಾರವಿಲ್ಲದ ಐದು ಬೆರಳುಗಳ ಹಸ್ತಾಂಕಿತ ಏಕತ್ವದ ಪ್ರಜ್ಞೆ. ಐದು ಬೆರಳುಗಳೂ ಭಿನ್ನವಾಗಿದ್ದೂ ಏಕ–ಎಂಬುದು ಅದ್ವೈತದ ಜ್ಞಾನಧರ್ಮದ ಅರ್ಥ, ಬ್ರಹ್ಮಾನುಭೂತಿ–ಅಥವಾ ಶ್ರವಣ, ಮನನ, ನಿದಿಧ್ಯಾಸಗಳಿಂದ ಜಾಗರಿತವಾಗುವ ಸ್ಥಿತಿ. ಆತ್ಮದಲ್ಲಿ ಬುದ್ಧಿಯನ್ನು ಯೋಜಿಸುವುದು ಸರ್ವಯೋಗಗಳ ಒಂದೇ ಒಂದಾದ ಬುನಾದಿ. ಅದಾದ ಮೇಲೆ ಯಾವ ಯೋಗದಂತೆ ನಡೆದರೂ ಉದ್ದೇಶಹಾನಿ ಉಂಟಾಗದು, ಯಾವ ಮಾರ್ಗ ಹಿಡಿದರೂ ಅಕಲ್ಯಾಣಕರವಾಗಿ ಪರಿಣಮಿಸದು. ಆತ್ಮವು ಬ್ರಹ್ಮ, ವಿಶ್ವಾಧಾರ, ವಿಶ್ವಸಾರ, ವಿಶ್ವಶಕ್ತಿ ಮತ್ತು ವೈಶಾಲ್ಯ ಸಮಶ್ರುತಿಗಳ ಚರಮಸೀಮೆಯನ್ನು ಮುಟ್ಟಿದ ಪ್ರಜ್ಞಾನ ಸ್ಥಿತಿ. ಆನಂದವು ನಿತ್ಯವಾಗಿರಲು ಇತರ ಸ್ಥಿತಿಗಳು ಸಾಕಾಗುವುದಿಲ್ಲ. ಅನಿತ್ಯಾನಂದಕ್ಕಾಗಿ ಯಾರೂ ಬಹಳ ಪ್ರಯತ್ನ ಮಾಡಬೇಕಾಗಿಲ್ಲ. ಅತ್ಯಂತ ಸೋಮಾರಿಗೂ ಅಕಸ್ಮಾತ್ತಾಗಿ ಆನಂದದ (ಅನಿತ್ಯ ಸುಖದ) ಅನುಭವ ಒಮ್ಮೆ ಉಂಟಾಗಬಹುದು. ಆತ್ಮದರ್ಶನವನ್ನರಿಯದ ಸತತೋದ್ಯಮಿಗೂ ಅಪೇಕ್ಷಿತ ಆನಂದ ನಿತ್ಯವಾಗಿ ದೊರಕದು. ಅಪೂರ್ಣ ಗುರಿಯು ಅನಿತ್ಯ, ಅನೇಕ. ಪೂರ್ಣ ಗುರಿಯು ಒಂದೇ ಒಂದು ಮತ್ತು ನಿತ್ಯ. ಅದರಲ್ಲಿ ಸರ್ವ ಚರಾಚರಗಳ ಒಳಿತಿಗಾಗಿಯೇ ತನ್ನ ವ್ಯಕ್ತಿಲಕ್ಷಿತ 'ಸ್ವ' ಆತ್ಮವು ಪ್ರಿಯವಾಗುವುದು. ಅದಕ್ಕಾಗಿ ಇವುಗಳು ಪ್ರಿಯವಾಗುವುದಲ್ಲ. ಆತ್ಮವೆಂದೂ ಸ್ವಾರ್ಥಸಾಧಕವಲ್ಲ; ಸರ್ವಾರ್ಥಸಾಧಕ. ಅಹಂ(ವ್ಯಕ್ತಿಲಾಂಛನ) ಒಂದೇ ಸ್ವಾರ್ಥಸಾಧಕ. ಅಹಮಾತ್ಮರೆಂದೂ 'ಪ್ರವೃತ್ತಿ ಧರ್ಮದ ನಿಷ್ಕಾಮ ಕರ್ಮದ' ಆದರ್ಶದಲ್ಲಿ ಆಧ್ಯಾತ್ಮಿಕರೆನ್ನಿಸರು. ನಿಷ್ಕಾಮಧರ್ಮಿಗಳಲ್ಲದ ಪ್ರವೃತ್ತಿಪರರು(ರಾಜಸ) ಧಾರ್ಮಿಕರು

ಅಥವಾ ತಾಮಸಿಕ ಅಧಾರ್ಮಿಕರು; ಅವರೆಂದೂ (ಸಾತ್ವಿಕ) ದೈವೀ ಸಂಪತ್ತಿನ ವರ್ಗದವರಲ್ಲ.

ದೈವವು ದ್ಯೋತನಶೀಲ. ದ್ಯುತಿಯು ವಿಶ್ವವ್ಯಾಪಕ. ವಿಶ್ವವ್ಯಾಪಕವಾದುದು ಆತ್ಮ, ಸಾಧುತ್ವ, ವಿಶ್ವಕುಟುಂಬಿತ್ವ, ವಿಶ್ವತ್ವ. ವಿಶ್ವವು ಮೇಯವನ್ನೊಳಗೊಂಡ ಅಪ್ರಮೇಯ. ಪ್ರಮೇಯಗಳೆಲ್ಲವೂ ಅನಿತ್ಯ. ಅನಿತ್ಯವಾದದ್ದು ಮಾತ್ರ ಅಸತ್ಯ. ಶೂನ್ಯಾತ್ಮಕ ಅಸತ್ಯ ಎಲ್ಲೂ ಇಲ್ಲ. ಅಪ್ರಮೇಯವೊಂದೇ ಪೂರ್ಣ, ಆದುದರಿಂದ ಅಬಾಧಿತ ಸತ್ಯ. ಬಾಧಾ ಸಂಭಾವ್ಯತೆಯು ಹೆಡತಲೆಯ ಮೃತ್ಯುವಿನಂತೆ ಚಿಂತಾಜನಕ. ಚಿಂತಾಗರ್ಭಿತ ಆನಂದವು ಸ್ವಾರ್ಥಕರ್ಮಲಬ್ಧ. ನಿಃಸ್ವಾರ್ಥಿಯ ಇನ್ನೊಂದು ಹೆಸರು ಸಂನ್ಯಾಸಿ. ಸಂನ್ಯಾಸಿಯು ಆತ್ಮ, ಬ್ರಹ್ಮ, ಕರ್ಮಯೋಗಿ; ಲೋಕೋಪಕಾರಿ, ವಿಶ್ವಮಾನವ ಇತ್ಯಾದಿ. ಅವನ ವರ್ತನೆ ಅಪ್ರಮೇಯ, ಪರಮವೀರ, ಭಾರತೋದ್ಧಾರಕ, ವಿಶ್ವವಿಜಯಿ, ಸುವರ್ಣಯುಗ ಸಂಸ್ಥಾಪಕ. 'ಜಟಿಲೋಮುಂಡೀ, ಲುಂಚಿತಕೇಶ; ಕಾಷಾಯಾಂಬರ ಬಹುಕೃತವೇಷಃ' ಸಂನ್ಯಾಸಿಯಲ್ಲ. ಸಾಮಾಜಿಕ, ರಾಜಕೀಯ ಮುಖಂಡರು ಮತ್ತು ವ್ಯಾಪಾರೋದ್ಯಮ ಧನಿಗಳು ಕಪಟ ಸಂನ್ಯಾಸಿಗಳಂತಾದಾಗ ಕಪಟ ಸಂನ್ಯಾಸಿಗಳು ಸ್ಪರ್ಧೆಯಲ್ಲಿ ಸೋತು ಅಡಗುವರು. ಅಂಥ 'ಸಮಜ'ದ ಉದ್ಧಾರಕ್ಕೆ ಕೇವಲ ಆ ಈ ನೀತಿವಿದರ ಶಕ್ತಿ ಸಾಕಾಗದು; ಅಧ್ಯಾತ್ಮದ ಸುದರ್ಶನವನ್ನು ಹಿಡಿದ ಬ್ರಾಹ್ಮಕ್ಷಾತ್ರ ಪರಮವೀರರ ಸಂಘವೇ ಬೇಕು! ಭಾರತಕ್ಕದು ದೊರೆಯಲಿ!



['ಶ್ರೀಧರ ಸಂದೇಶ']

# ೨೧. ಧರ್ಮ ಸಂಭವ

('ವಿಶ್ವವಾಣಿ'ಯ ದಿ.೨೫-೪-೧೯೬೪ರ ಸಂಚಿಕೆಯಲ್ಲಿ ಪ್ರಕಟಿತವಾದ ಶ್ರೀ ಎಂ.ಬಿ.ಬೂದಿಹಾಳಮಠ ಅವರ 'ಧರ್ಮಸಂಭವ' ಎಂಬ ವಿಶೇಷ ಲೇಖನಕ್ಕೆ ಪೋಷಕವಾಗಿ ಪ್ರೊ.ಶ್ರೀಧರ ಅವರು 'ಭಾರತೀಯ ಸರ್ವಧರ್ಮ ನಿಗಮ ಸಂಸ್ಥಾಪನೆ'ಯ ವಿಷಯವನ್ನು ಪ್ರಸ್ಥಾಪಿಸಿದ್ದಾರೆ.)–ವಿಶ್ವವಾಣಿ ತಾ.೨-೫-೧೯೬೪

**ಭಾರತದಲ್ಲಿ ಧರ್ಮದ ಗ್ಲಾನಿಯಾದಾಗ, ಅಧರ್ಮವು ಅಭ್ಯುತ್ಥಾನವಾದಾಗ ಸ್ವಯಂ ಪ್ರೇರಣೆಯಾಗಬೇಕು;ಯುಗಯುಗಕ್ಕೂ ಈ ಧರ್ಮ ಸಂಭವ ನಡೆಯಬೇಕು. ಇದು ಭಗವತ್ ಸಂಕಲ್ಪ.**

ಯಾರು ಏನೇ ಹೇಳಲಿ, ಯಾರು ಏನೇ ತಿಳಿದುಕೊಳ್ಳಲಿ, ಒಂದು ಮಾತನ್ನು ಇಂದು ಹೇಳದೇ ಗತ್ಯಂತರವಿಲ್ಲ, ಆಡದೇ ಗತ್ಯಂತರವಿಲ್ಲ.

ಭಾರತದಲ್ಲಿ ಧರ್ಮವನ್ನುವುದು ಇರಬೇಕೆನ್ನುವುದಾದರೆ ಈಗಿನ ಸ್ಥಿತಿಯು ಹೀಗೆಯೇ ಮುಂದುವರಿದರೆ ಅದು ಇದ್ದರೂ ಇಲ್ಲದಂತೆಯೆ.

'ಧರ್ಮ'ದ ಅರ್ಥ ಒಂದೆಡೆ ಕೂಡಿಸಿ ಹಿಡಿದಿಡುವುದು ಎಂದಿದೆ. ನಮ್ಮ ಧರ್ಮವು ಅಥವಾ ಧರ್ಮಗಳು ನಮ್ಮನ್ನು ಒಂದೆಡೆ ಕೂಡಿಸಿಟ್ಟಿವೆಯೇ? ನಾವು ಇಂದು ಕೂಡಿರುವುದು ಧಾರ್ಮಿಕವಾಗಿಯೇ? ಅಥವಾ ರಾಜಕೀಯವಾಗಿಯೇ? ಧಾರ್ಮಿಕವಾಗಿ ಕೂಡಿರದಿದ್ದರೆ, ರಾಜಕೀಯವಾಗಿ ಬಹುದಿನ ಕೂಡಿರಲು ಸಾಧ್ಯವೇ? ರಾಜಕೀಯ ಮತ್ತು ಧಾರ್ಮಿಕ ಕಾರ್ಯಗಳ ಉದ್ದೇಶಗಳು ಬಹ್ವಂಶದಲ್ಲಿ ಒಂದೇ ಇರುವಾಗ, ರಾಜಕೀಯದ ಪ್ರಲೋಭ ಪ್ರವೃತ್ತಿಯು ಧಾರ್ಮಿಕದ ತ್ಯಾಗ ಪ್ರವೃತ್ತಿಯನ್ನು ಹಿಂದೆ ಹಾಕಲಿಕ್ಕಿಲ್ಲವೇ?

ಬಹು ಜನರು ಮಾತಿನ ಚಪಲತೆಗಾಗಿ 'ಹಿಂದೂ' ಶಬ್ದವನ್ನು ಬಳಸುತ್ತಾರೆ. 'ಹಿಂದೂ' ಶಬ್ದವನ್ನು 'ಜನಾಂಗ' ವಾಚಕವಾಗಿ ಉಪಯೋಗಿಸಿದರೂ ಅದು ಪರಿಪೂರ್ಣಾರ್ಥವನ್ನು ಕೊಡಲಾರದಷ್ಟು ನಿರ್ವಿಣ್ಣವಾಗಿ ಹುಟ್ಟಿಕೊಂಡಿದೆ. ನಿರ್ವಿಣ್ಣವಾಗಿ ಹುಟ್ಟಿದ ಶಬ್ದವನ್ನು ಶೋಷಣೆಗಾಗಿ ಇಂದು ರಾಜಕೀಯದಲ್ಲಿ ಮತ್ತು ಧಾರ್ಮಿಕ ವಿಚಾರದಲ್ಲಿ ಉಪಯೋಗಿಸಲಾಗುತ್ತಿದೆ.

'ಹಿಂದೂ', ಧರ್ಮ ಸ್ಥಾಪನೆಗಾಗಲೀ 'ಹಿಂದೂ' ಜನಾಂಗದ ಅಭಿವೃದ್ಧಿಗಾಗಲೀ ನಮ್ಮ ದೇಶದಲ್ಲಿ ವ್ಯವಸ್ಥಿತ ಸಾಹಸಗಳು ಸತತ ಪ್ರಯತ್ನಗಳು ದೇಶದಾದ್ಯಂತ ನಡೆಯದೇ

ಇರುವಾಗ, 'ಹಿಂದೂ' ಶಬ್ದದ ಘೋಷಣೆಯು ಸಂಪೂರ್ಣವಾಗಿ ಆತ್ಮವಂಚನೆಯದಾಗುವುದು.

ಲೋಕರಾಜಾಡಳಿತದಲ್ಲಿ (Secular Government) ತಮ್ಮ ತಮ್ಮ ಧರ್ಮಗಳ ರಕ್ಷಣೆಯನ್ನು ಮಾಡಿಕೊಳ್ಳದವರು ವಿವೇಕಹೀನರಾಗಲಿ ಇಲ್ಲವೆ ವಿಪರೀತ ಉದಾರಿಗಳಾಗಲೀ ಇರುವರಲ್ಲವೇ? ಈ ಔದಾರ್ಯ, ಈ ಅವಿವೇಕಗಳು ಸ್ವ-ಜನಘಾತಕ್ಕೆ ಹೆದ್ದಾರಿಯನ್ನು ಮಾಡಿಕೊಡುವವು. ಲೌಕಿಕರು ಲೋಕಾಚಾರದಲ್ಲಿ ಕಣ್ಣು ತೆರೆದು ಬಾಳುವೆ ಸಾಗಿಸಲು ಶಕ್ತರಾಗದಿದ್ದರೆ, ಅವರು ಕೌಪೀನವನ್ನು ಧರಿಸಿ ಅರಣ್ಯವನ್ನು ಸೇರುವುದು ಸೂಕ್ತ ಮಾರ್ಗ.

ಅರ್ಧಮರ್ಧ ಲೌಕಿಕರು ಅರ್ಧಮರ್ಧ ಲೋಕಾತೀತರು ಆ ಜನಾಂಗಕ್ಕೆ ನಿಜವಾಗಿಯೂ ಘಾತಕವನ್ನೆಸಗುವರು. ಭಾರತದಲ್ಲಿ ಅರೆಮನಸ್ಸಿನ ಧಾರ್ಮಿಕರು. ಗೃಹಸ್ಥರು, ಸನ್ಯಾಸಿಗಳು, ಬಹುಸಂಖ್ಯೆಯಲ್ಲಿರುವುದರಿಂದ, ಭಾರತೀಯರ ಬಾಳುವೆಯು ಅಪೂರ್ಣವೂ, ಯಾವ ಸಾರ್ಥಕವನ್ನು ಸಾಧಿಸದಂತಹದೂ ಆಗಿದೆ.

ಉಳಿದ ಧರ್ಮಗಳೊಡನೆ ಹೋಲಿಸಿದಾಗ, ಭಾರತೀಯರ ಧರ್ಮನಿಷ್ಠೆಯು ಅಪಹಾಸ್ಯದ ಮೇರೆಯಲ್ಲಿ ಲಾಸ್ಯವಾಡುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ನಮ್ಮ ಕೆಲವು ಧರ್ಮಗುರುಗಳು, ಅನೇಕ ಅನಾಚಾರದ ಲೌಕಿಕರಿಗೆ ಮಿಗಿಲಾಗಿ ಅನಾಚಾರದಲ್ಲಿ ತೊಡಗಿರುವುದರಿಂದ ಲೌಕಿಕರ ಧರ್ಮನಿಷ್ಠೆಯು ದಿನದಿನಕ್ಕೂಕ್ಷೀಣವಾಗತೊಡಗಿದೆ.

ಇದರೊಂದಿಗೆ, ಕಟ್ಟುನಿಟ್ಟಾದ ಒಂದು ಧರ್ಮವು ಭಾರತವನ್ನು ಅಖಂಡವಾಗಿ ತನ್ನ ಮುಷ್ಟಿಯಲ್ಲಿ ಹಿಡಿದಿಟ್ಟಿಲ್ಲವೆಂಬ ಮಾತನ್ನು ನೆನೆದರೆ, ಇಂದು 'ಹಿಂದೂ' ಜನಾಂಗದ ಮಹಿಳೆಯರ, ಕನ್ಯೆಯರ, ಅಸಹಾಯಕ ಅವಸ್ಥೆಯ ಹಿನ್ನಲೆಯ ಸ್ಪಷ್ಟ ಚಿತ್ರವು ದೊರೆಯುವುದು.

ರಾಜ್ಯಾಡಳಿತ ಮಟ್ಟದಲ್ಲಿ 'ಹಿಂದೂ' ಜನಾಂಗದ ಸಮಸ್ಯೆಗಳು ಬಗೆಹರಿಯುವುದು ಸಾಧ್ಯವಿಲ್ಲ. ರಾಜ್ಯಕೀಯ ಅಂತಸ್ತನ್ನು ತಲುಪುವ ಮೊದಲು ಕೌಟುಂಬಿಕ ಸಾಮಾಜಿಕ ಮತ್ತು ಧಾರ್ಮಿಕ ನಿಲುವುಗಳಲ್ಲಿ ನಾವು 'ಹಿಂದೂ' ಜನಾಂಗದ ಆದರ್ಶಗಳನ್ನು ಸಿದ್ಧಿಸಿಕೊಳ್ಳಲು ಅಖಂಡವಾಗಿ ಅವಿರತವಾಗಿ ಹೋರಾಡಬೇಕು.

ಹೊತ್ತು ಹೊರಟಾಗೊಮ್ಮೆ ಹೊತ್ತು ಮುಳುಗುವಾಗೊಮ್ಮೆ 'ಹಿಂದೂ ಜನಾಂಗದ ಸಂಘಟನೆ'ಯ ಮಾತುಗಳಿಂದ ತೃಪ್ತಿಪಡುವವರೂ ತೃಪ್ತಿಪಡಿಸುವವರೂ ಅರಿಯದೆಯೋ ಅರಿತೋ ಕಾಳಸರ್ಪದ ಹೆಡೆಯ ಮೇಲೆ ಅಡಿಯನ್ನಿರಿಸುವರು.

ಪುಣ್ಯವಶಾತ್, ವಿವೇಕಯುತ ಮುಖಂಡತ್ವವು ದೇಶಕ್ಕೆ ದೊರೆತಿರುವುದರಿಂದ ಇಷ್ಟು ದಿನ ದೇಶವು ಧಾರ್ಮಿಕ ನೆರವಿಲ್ಲದೆ ಕೇವಲ ರಾಜಕೀಯ ಚಾತುರ್ಯದಿಂದ ತನ್ನ ಸಾರ್ವಭೌಮತ್ವವನ್ನು ಕಾಪಾಡಿಕೊಂಡು ಬಂದಿದೆ. ಈ ಪುಣ್ಯಕಾಲವು ಹೀಗೆಯೇ ಮುಂದುವರಿಯುವುದೆಂದು ಹೇಳುವ ಧೈರ್ಯವು ಮಾತ್ರ ಈ ದೇಶದಲ್ಲಿ ಈಗ ಯಾರಿಗೂ ಇಲ್ಲ.

ರಾಜ್ಯಕೀಯದಲ್ಲಿ, ಸ್ವಾರ್ಥವು ತನ್ನ ಮಾನವೀಯ ಮರ್ಯಾದೆಯನ್ನು ಮೀರಿ ಸಿಕ್ಕ ಸಿಕ್ಕ ಕಡೆಗೆ ಕೈಚಾಚುತ್ತಿದೆ. ಸ್ಥಿರವಾದ, ಧೀರವಾದ ನಿಲುಮೆಯಿಂದ ರಾಷ್ಟ್ರದ ಘನತೆಗೆ, ಭದ್ರತೆಗೆ ದುಡಿಯುವ ಹುಮ್ಮಸ್ಸು ಇನ್ನೂ ಉದಯವಾಗಿಲ್ಲ. ರಾಜ್ಯಕೀಯವನ್ನು ನಿಯಂತ್ರಣದಲ್ಲಿರಿಸಿಕೊಳ್ಳುವ ಸಾಮರ್ಥ್ಯವನ್ನು ಜನತೆಯು ನಿತ್ಯ ಜಾಗ್ರತೆಯಿಂದ ಇನ್ನೂ ಪಡೆದುಕೊಂಡಿಲ್ಲ.

ಈ ನಿಯಂತ್ರಣ ಸಾಮರ್ಥ್ಯಕ್ಕೆ ಅಂತಃಶಕ್ತಿಯ ಸಂಸ್ಕೃತಿಯು ಅತಿ ಅವಶ್ಯವಿದೆ. ಈ ಸಂಸ್ಕೃತಿಯನ್ನು ಧಾರ್ಮಿಕ ಆಚಾರ–ವಿಚಾರಗಳಿಂದ ಬೆಳೆಸಿ ಪೋಷಣೆ ಮಾಡುವುದೇ ಸಮಾಜದ ಮತ್ತು ಜನಾಂಗದ ಕರ್ತವ್ಯವಾಗಿದೆ.

ಈ ಕರ್ತವ್ಯದ ಅರಿವನ್ನು ಸಮಾಜವು ತನ್ನ ಗುರು ಹಿರಿಯರ ಮುಖಾಂತರ ಜನತೆಗೆ ತಂದು ಕೊಡಬೇಕು. ಈ ಸಮಾಜ ಕಾರ್ಯಕ್ಕೆ ಪ್ರತಿಯೊಂದು ಮನೆತನವೂ ತನ್ನ ಪಾಲಿನದನ್ನು ಮುಟ್ಟಿಸಬೇಕು.

ಈ ರೀತಿ ಕುಟುಂಬ, ಸಮಾಜ ಮತ್ತು ಜನಾಂಗಗಳು ಸಂಘಟನೆಗೆ ಸಿದ್ಧವಾದರೆ ಮಾತ್ರ ಯಾವುದೊಂದು ಧರ್ಮವು ಸ್ಥಿರಬುದ್ಧಿಯಿಂದ ಪರಿಣಾಮಕಾರಿ ಹಾದಿಯಲ್ಲಿ ತನ್ನ ಅನುಯಾಯಿಗಳನ್ನು ಕರೆದೊಯ್ಯಬಹುದು.

ಹೀಗೆ ವ್ಯವಸ್ಥಿತವಾಗಿಸುಸಂಘಟಿತವಾದ ಜನಾಂಗವು ಇಂದಿನ ದಿನಮಾನಗಳಲ್ಲಿ ಬಾಳಿ ಬದುಕಲು ಅರ್ಹವಾಗುವುದು. ಈ ಅರ್ಹತೆಯಿಲ್ಲದ ಜನಾಂಗವು ಹಿಂದಿನವರ ಇತಿಹಾಸವನ್ನು ಹೇಳುವುದರಲ್ಲಿಯೇ ಮನಸ್ಸಿನ ತೃಪ್ತಿಯನ್ನು ಪಡೆದು, ತನ್ನ ರಥ ಚಕ್ರಗಳು ತಾವಾಗಿಯೇ ಉರುಳಿದಷ್ಟು ದಿನ ಉರುಳಿಸಿಕೊಂಡು ಹೋಗಬಹುದು. ಆದರೆ ಅದಕ್ಕೆ ಸ್ವಯಂಚಾಲನೆಯ ಶಕ್ತಿಯಾಗಲೀ ಎದುರು ಬಂದುದನ್ನು ಮೀರಿ ಮುಂದೆ ನುಗ್ಗುವ ಸಾಮಥ್ಯವಾಗಲೀ ಇರುವುದಿಲ್ಲವೆಂಬುದುನಿಜ.

ಇಂತಹ ಚೈತನ್ಯರಹಿತ ಹಿಂದೂ ತತ್ವವನ್ನು ನಂಬಿಕೊಂಡು ನಾವು ಹಿಂದೂ ಜನಾಂಗದ ಸಂಘಟನೆಯನ್ನು ಮಾಡಲು ಮಾತಾಡುವುದನ್ನಾದರೂ ಬಿಟ್ಟು ಕೊಡಬೇಕು. ಇಲ್ಲವಾದರೆ, ಈ ಸಂಘಟನೆಗೆ ಅವಶ್ಯವಿರುವ ಚೈತನ್ಯವನ್ನು ಉಕ್ಕಿಸಲು ದೇಶದ ದಶದಿಕ್ಕುಗಳಲ್ಲಿ ಸಮಗ್ರ ಆಂದೋಲನವನ್ನು ಹೂಡಬೇಕು.

ಸದಭಿಮಾನಕ್ಕೆ ಸ್ವಾಭಿಮಾನಕ್ಕೆ ಈಗ ಸಮಯವು ಬಂದಿದೆ. ಹಿಂದೂ ಜನಾಂಗದವರಾಗಿ ಈ ದೇಶದ ಬಹುಸಂಖ್ಯಾಕ ನಾಗರಿಕರು ಬದುಕಿ ಬಾಳಬೇಕೆನ್ನುವ ಸಂಕಲ್ಪಕ್ಕೆ ಬರಲು ಸಮಯವೇ ಅವರಿಗೆ ಪ್ರೇರಣೆಯನ್ನೀಯುತ್ತಿದೆ. ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಳ್ಳುವುದನ್ನು ಮಾತ್ರ ನಾವು ಮಾಡಕೂಡದು.

ಸ್ವಧರ್ಮದ ಬಗೆಗೆ ಅಭಿಮಾನಿಗಳಾಗಿರುವುದು ರಾಷ್ಟ್ರನಿಷ್ಠೆಗೆ ವಿರೋಧವಾದುದೇನಲ್ಲ. ಅದು ಮುಂದುವರಿದ ಜನಾಂಗಕ್ಕೆ ಅಗೌರವವನ್ನೂ ತರುವುದಿಲ್ಲ.

ಅಭಿಮಾನ–ಧನರಾಗಿ ನಾವು ನಮ್ಮ ರಾಷ್ಟ್ರ, ನಮ್ಮ ಧರ್ಮ ಇವುಗಳನ್ನು ಸಂರಕ್ಷಿಸಿಕೊಳ್ಳಬೇಕು. 'ಧರ್ಮೋ ರಕ್ಷತಿ ರಕ್ಷಿತಃ' ಎಂಬ ಸೂಕ್ತಿಯೂ ಇದೇ ಮಾತನ್ನು ಶಾಶ್ವತವಾಗಿ ಹೇಳಿದೆ.

ಹಿಂದೂ ಧರ್ಮವನ್ನು ನಾವು ಸಂಯುಕ್ತ ಪದ್ಧತಿಯೀಂದ ಸಂಘಟಿಸುವುದು ಅನಿವಾರ್ಯ. ಈ ಹಿಂದೆ ನಮ್ಮ ಪೂರ್ವಜರು ಈ ರೀತಿಯ ಪ್ರಯೋಗಗಳನ್ನು ಅಲ್ಲಲ್ಲಿ ಧರ್ಮ ಸಂಘಗಳ ಸ್ಥಾಪನೆಯ ಮೂಲಕ ಮಾಡಿದ್ದರು.

ಈಗ ಭಾರತದಲ್ಲಿರುವ ಎಲ್ಲ ಧರ್ಮಗಳ ಒಂದು ಸಂಯುಕ್ತ ಸಂಘವನ್ನು ಸಂಘಟಿಸಿ(Corporation of Indian Religions) ಅದಕ್ಕೆ ಸರ್ವಸಾಮಾನ್ಯವಾದ ನಡತೆಯ ಕಟ್ಟಳೆಗಳನ್ನು ರೂಪಿಸಿಕೊಳ್ಳುವುದು ಅವುಗಳ ಶಿಷ್ಟಾಚಾರಕ್ಕೆ ಅಧೀನರಾಗಿ ನಡೆದುಕೊಳ್ಳುವುದು ಅತ್ಯವಶ್ಯ.

ಈ ಸಂಯುಕ್ತ ಆಚರಣೆಗೆ ಪ್ರೇರಕವಾಗಿ ಭಾರತೀಯರು ಒಂದು ಜನಾಂಗದವರು ಎಂಬ ತಿಳಿವಳಿಕೆಯು ನಿಲ್ಲಬೇಕು. ಈಗ ಭಾರತದಲ್ಲಿರುವ ಎಲ್ಲ ಧರ್ಮ ಮತಾವಲಂಬಿಗಳು ಈ ನೆಲದ ಬಗೆಗೆ ನಿಷ್ಠೆಯುಳ್ಳವರಾಗದಿದ್ದರೆ ಯಾವ ಧರ್ಮವೂ ಯಾವ ರಾಜ್ಯಕೀಯವೂ ಅವರ ಜೀವನಗಳಿಗೆ ಭದ್ರತೆಯನ್ನು ಒದಗಿಸಲಾರದು.

ಚೀನಿಯರ ತೀವ್ರತೆಯ ಸಾಮ್ಯವಾದವನ್ನು ಎದುರಿಸುವುದಾಗಲೀ ಪಾಕಿಸ್ತಾನದವರ ಮತಾಂಧತೆಯನ್ನು ಎದುರಿಸುವುದಾಗಲೀ ಈಗಭಾರತಕ್ಕೆ ಕಠಿಣವಾಗಿ ಪರಿಣಮಿಸಿರುವುದಕ್ಕೆ ನಮ್ಮ ರಾಷ್ಟ್ರ ನಿಷ್ಠೆಯ ಬಗೆಗೆ ನಾವು ಅರ್ಧಮನಸ್ಕರಾಗಿರುವುದೇ ಕಾರಣವಾಗಿದೆ.

ಈಗ ನಾವು ಒಂದು ಜನಾಂಗದವರಾಗಬೇಕು. ಒಂದು ರಾಷ್ಟ್ರದವರಾಗಬೇಕು. ಧಾರ್ಮಿಕ ಸಂಯುಕ್ತ ಆಚರಣೆಯ ಒಂದು ಕ್ರಮಕ್ಕೆ ಒಳಪಟ್ಟಿರುವವರಾಗಿರಬೇಕು. ಈ ಸ್ನೇಹ ಬಂಧನದಿಂದಲೇ ಈ ನೆಲದ ಮೇಲೆ ಹುಟ್ಟಿದವರೆಲ್ಲರೂ ಭದ್ರವಾಗಿ ಬಾಳಿ ಬದುಕಬಹುದು.

ನಮ್ಮ ಆರ್ಥಿಕ ವ್ಯವಹಾರಗಳನ್ನು, ನಮ್ಮ ನಾಗರಿಕ ರೀತಿ ನೀತಿಗಳನ್ನು ಇನ್ನೂ ಅನೇಕ ಜೀವನದ ವ್ಯವಹಾರಗಳನ್ನು ನಾವು ಒಂದು ಸಂಘ ಶಕ್ತಿಗೆ ಒಳಪಡಿಸಿ ಒಂದು ವ್ಯಕ್ತಿಯಂತೆ ನಡೆದುಕೊಳ್ಳಲು ಮನಸ್ಸು ಮಾಡಿದ್ದೇವೆ. Finance Corporation, Municipal Corporation ಹೀಗೆಯೇ ಮುಂದುವರಿಯುತ್ತ ನಾವು ಧರ್ಮ ಕ್ಷೇತ್ರವೊಂದನ್ನು ಒಂದು ಸರ್ವಧರ್ಮ ಸಂಘಕ್ಕೆ ಹೊಂದಿಕೊಳ್ಳುವಂತೆ ವ್ಯವಸ್ಥೆ ಮಾಡಬೇಕಾಗಿದೆ.

ಧರ್ಮವು ಭಾರತೀಯರ ಜೀವದ ಜೀವಾಳ. ಇಲ್ಲಿ ಅವ್ಯವಸ್ಥೆ ಇರುವುದರಿಂದಲೇ ದೇಶದ 'ಭಟ್ಟಿ'ಯು ಆಗಾಗ ಕೆಡುತ್ತದೆ.

ಇಂತಹ ಸಂಯುಕ್ತ ವ್ಯವಸ್ಥೆಗೆ Corporation Federation or Community of Religions ಯಾವುದೊಂದು ಧರ್ಮವು ಒಪ್ಪದಿದ್ದರೆ ಅದು ರಾಷ್ಟ್ರಕ್ಕೆ ನಿಷ್ಠೆಯುಳ್ಳದ್ದಲ್ಲವೆಂದು ನಿರ್ಣಯಿಸುವ ಶಕ್ತಿಯನ್ನು ಜನತಾ ಪ್ರಭುತ್ವವು ಶಾಸನಬದ್ಧವಾಗಿ

ಪಡೆಯಬೇಕು. ಆಗ 'ಹಿಂದೂ' ಶಬ್ದವನ್ನು ಪ್ರಯೋಗಿಸುವ ಅಧಿಕಾರವು ಭಾರತೀಯರಿಗೆ ಬರಬಹುದು.

ಆಗ 'ಹಿಂದೂ' ಶಬ್ದವು ಜಾತಿವಾಚಕವಲ್ಲ; ವಿಶಿಷ್ಟ ಧರ್ಮವಾಚಕವಲ್ಲ. ಭಾರತದ ನೆಲದ ಮೇಲೆ ಹುಟ್ಟಿ ಬೆಳೆದು ಬದುಕುವ ಸರ್ವ ಜನತೆಯನ್ನು ಪ್ರತಿನಿಧಿಸುವ ಜನಾಂಗ ವಾಚಕ ಶಬ್ದ ಪ್ರಯೋಗವೆನ್ನಬಹುದು.

ಅನಂತರ ರಾಷ್ಟ್ರವು ತನ್ನ ಉದ್ದೇಶವನ್ನು ಈಡೇರಿಸಿಕೊಳ್ಳಲು ಸಮರ್ಥವಾಗುವುದು. ಈ ಸಂಯುಕ್ತ ಆಚರಣೆಯಿಂದ 'ಹಿಂದೂ' ಜನಾಂಗಕ್ಕೊಂದು ಸಂಸ್ಕೃತಿ, ನಾಗರಿಕತೆ, ಸ್ವಧರ್ಮ ಇವೆಲ್ಲವೂ ದೊರೆಯುವವು. ಆಗ ನಿಜವಾದ 'ಹಿಂದೂ' ಜನಾಂಗದ ಉದಯವಾಗುವುದು.

ಲೇಖಕರು – ಶ್ರೀ ಎಂ.ಬಿ. ಬೂದಿಹಾಳಮಠ



**['ವಿಶ್ವವಾಣಿ' – ದಿನಾಂಕ ೨೪–೫–೧೯೬೪]**

# ೨೨. ಭಾರತೀಯ ಸರ್ವಧರ್ಮ ನಿಗಮ ಸಂಸ್ಥಾಪನೆ ಲೇಖನ – ೨

**ಭಾರತದ ಐಕ್ಯತೆಯನ್ನು ಕಾಪಾಡಿಕೊಳ್ಳಲು ಅದೆಂತು ಧರ್ಮವು ತನ್ನ ಪಾಲಿನ ಕರ್ತವ್ಯವನ್ನು ಮಾಡಬಹುದೆಂಬುದನ್ನು ಇಲ್ಲಿ ವಿವೇಚಿಸಲಾಗಿದೆ.**

ಭಾರತದಲ್ಲಿಂದು ಸರ್ವಧರ್ಮ ನಿಗಮವನ್ನು ಸ್ಥಾಪಿಸುವ ಅಗತ್ಯವನ್ನು ಕುರಿತು ಶ್ರೀ ಬೂದಿಹಾಳಮಠರು ಆಡಿದ ಸೂಚನೆ ವಿವೇಕಿಗಳ ಗಮನಕ್ಕೆ, ವಿದ್ವಾಂಸರ ಲಕ್ಷ್ಯಕ್ಕೆ ಬರುವುದು ಅತ್ಯಾವಶ್ಯಕ. ಭಾರತದಲ್ಲಿ ಇಂದಿರುವ ಸಾಮಾಜಿಕ, ರಾಜಕೀಯ ಪರಿಸ್ಥಿತಿಯನ್ನು ಪರಾಮರ್ಶಿಸಿದರೆ ದೇಶದ ಅಭದ್ರತೆಯ ಬೀಜಗಳೂ ಮೊಳಕೆಯೊಡೆಯುತ್ತಿರುವುದು ಸ್ಪಷ್ಟವಾಗುತ್ತದೆ. ನಮ್ಮ ನೆರೆಯ ಪಾಕಿಸ್ತಾನ ಇಸ್ಲಾಂ ರಾಜ್ಯವಾದರೆ, ಬ್ರಹ್ಮದೇಶವು ಬೌದ್ಧರಾಜ್ಯವಾಗಿದೆ. ಪಾಶ್ಚಾತ್ಯರವು ಕ್ರೈಸ್ತ ರಾಷ್ಟ್ರಗಳು. ಕಮ್ಯುನಿಷ್ಟ್ ದೇಶಗಳು ಕಮ್ಯುನಿಜಂ ಧರ್ಮಾವಲಂಬಿಗಳು. ಹೀಗಿರುವಾಗ ಪ್ರಧಾನ ಮಂತ್ರಿಗಳಾದ ಪಂಡಿತ ನೆಹರು ಅವರ ಬಳಿಕ ಭಾರತದ ಯಜಮಾನಿಕೆಯನ್ನು ಯಾರು ವಹಿಸಿಕೊಂಡರೂ, ಮಾನ್ಯಲೇಖಕರು ಅಭಿಪ್ರಾಯ ಪಟ್ಟಿರುವಂತೆ, ಭಾರತೀಯರಲ್ಲಿ ಲೌಕಿಕತೆಯನ್ನು ಹೃದ್ಗತಗೊಳಿಸಿ ಐಕ್ಯವನ್ನು ಪ್ರತಿಷ್ಠಾಪಿಸಲಾರರು.

ಆಗಲೇ ಪಾಕಿಸ್ತಾನವಾದಿ ವಿದೇಶಗಳ ಹಸ್ತಕರು ಪಂಚಮದಲ ರಚನೆಯಲ್ಲಿ ತೊಡಗಿರುವ ನಿದರ್ಶನಗಳನ್ನು ಪಶ್ಚಿಮಬಂಗಾಳ ಮುಂತಾದೆಡೆಗಳಲ್ಲಿ ಕಾಣಬಹುದು. ಹಿಂದುಗಳ ಧರ್ಮಾಭಿಮಾನ ತ್ರಿಶಂಕು ಸ್ಥಿತಿಯಲ್ಲಿರುವುದು ಸುಸ್ಪಷ್ಟ. ಶೈಕ್ಷಣಿಕ ಚಳವಳದ ಮೂಲಕ ಈವರೆಗೂ ಭಾರತೀಯತೆಯನ್ನು ಸರ್ವಪ್ರಜೆಗಳಲ್ಲಿ ದೃಢಗೊಳಿಸಲು ಸಾಧ್ಯವಾಗಿಲ್ಲ. ಈ ಅಪಾಯಕರ ಸನ್ನಿವೇಶದಲ್ಲಿ ದೇಶದ ತತ್ವಜ್ಞಾನಿಗಳಾದ ವಿದ್ವಾಂಸರು ರಾಷ್ಟ್ರಪತಿ ಡಾ.ರಾಧಾಕೃಷ್ಣನ್‌ರನ್ನು ಕಂಡು ಅವರ ಆಶೀರ್ವಾದ ಸಲಹೆ–ಸಂರಕ್ಷಣೆಗಳ ಬಲದಿಂದ ಭಾರತೀಯರೆಲ್ಲರಿಗೂ ಸಾರ್ವಜನಿಕ ಕರೆಕೊಟ್ಟು ಅವರ ಸದಾಶಯಗಳ ಮೂಲಕ ಇಡೀ ಭಾರತವನ್ನು ಪ್ರತಿನಿಧಿಸುವ ಸರ್ವಧರ್ಮ ನಿಗಮವನ್ನು ಸ್ಥಾಪಿಸಲು ಮುಂದೆ ಬರುವುದು ಅಗತ್ಯ. ಪ್ರತಿಯೊಬ್ಬ ಭಾರತೀಯ ಪ್ರಜೆಯೂ ಈ ನಿಗಮದ ಪಟ್ಟಿಯಲ್ಲಿ ತನ್ನ ಹೆಸರನ್ನು ನೋಂದಾಯಿಸಿಕೊಳ್ಳಬೇಕು.

ನಿಗಮಕ್ಕೊಂದು ಸಂವಿಧಾನವನ್ನು ಈ ವಿವಿಧ ಮತೀಯ ವಿದ್ವಾಂಸರು ರಚಿಸಬೇಕು. ಅದರಲ್ಲಿ ಭಾರತೀಯ ರಾಷ್ಟ್ರನಿಷ್ಠೆಗೆ ಅಗ್ರಸ್ಥಾನವಿರಬೇಕು. ಅನಂತರ ಸರ್ವಮತ ಸಾಧಾರಣವಾದ ಕೌಟುಂಬಿಕ, ಸಾಮಾಜಿಕ ಮತ್ತು ಧಾರ್ಮಿಕ ಶಿಷ್ಟಾಚಾರಗಳ ನಿಯಮಗಳನ್ನು ರಚಿಸಬೇಕು. ಈ ನಿಯಮಗಳಿಗೆ ಭಂಗ ಉಂಟಾಗದಂತೆ ವಿಶಿಷ್ಟ ಮತಾಚಾರಗಳನ್ನು ಉಳಿಸಿಕೊಳ್ಳಬಹುದೆಂಬ ಉಪಾಧಿಯಿರಬೇಕು.

ಬಾಹ್ಯ ಚಿಹ್ನೆಗಳು ಆಂತರಿಕವಾಗಿ ಹೃದಯದ ಮೇಲೆ ಪರಿಣಾಮ ಮಾಡುವುದರಿಂದ ಭಾರತದ ಪ್ರತಿಯೊಂದು ಕಟ್ಟಡಕ್ಕೂ ಅಶೋಕ ಚಕ್ರದ ಮುದ್ರೆ ಇರಬೇಕೆಂದು ನಿಯಮ ಮಾಡಿಕೊಳ್ಳಬೇಕು. ಪ್ರತಿಯೊಬ್ಬ ಭಾರತೀಯನೂ ಕೊರಳಲ್ಲಿ ಈ ಸರ್ವ ಧರ್ಮ ಸಮನ್ವಯದ ಸಂಕೇತವಾದ ಅಶೋಕ ಚಕ್ರ ಮುದ್ರೆಯನ್ನು ಧರಿಸಿಕೊಳ್ಳಬೇಕು. ಪ್ರತಿಯೊಂದು ಮತ–ಪಂಥ–ಪ್ರಸ್ಥಾನದವರೂ ಅಶೋಕ ಚಕ್ರವನ್ನು ತಮ್ಮ ಅತ್ಯುಚ್ಚ ಆರಾಧ್ಯ ದೈವತ್ವದ ಪರಮ ಪವಿತ್ರ ಸಂಕೇತವೆಂದು ಒಪ್ಪಿಕೊಳ್ಳಬೇಕು. ಸರ್ವಧರ್ಮ ನಿಗಮದ ಸದಸ್ಯತ್ವಕ್ಕೆ ಇಂಥ ಕೆಲ ಮೂಲಭೂತ ಶರ್ತುಗಳನ್ನಿಡಬೇಕು. ಈ ಸೂಚನೆಗಳೆಲ್ಲ ಕೇವಲ ದಿಗ್ದರ್ಶನ ಸ್ವರೂಪವುಳ್ಳವು ಅಷ್ಟೆ. ಪ್ರತಿ ಭಾನುವಾರವೂ ಆಯಾ ಊರಿನ ಪ್ರಜೆಗಳು ತಮ್ಮ ತಮ್ಮ ಪೂಜೆಯ ಅಥವಾ ಪ್ರಾರ್ಥನೆಯ ಮಂದಿರಗಳಲ್ಲಿ ಅಶೋಕ ಚಕ್ರ ವಂದನೆಯನ್ನು ಮೊಟ್ಟ ಮೊದಲು ಮಾಡಿ ಮುಂದಿನ ಕಾರ್ಯಾಂಗಗಳನ್ನು ನಡೆಸುವ ಪದ್ಧತಿಯನ್ನು ಕಟ್ಟುನಿಟ್ಟಾಗಿ ಹಿಡಿಯಬೇಕು.

ಸರ್ವ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಔದ್ಯಮಿಕ ಮತ್ತು ಇತರ ಕಾರ್ಯಗಳ ಆರಂಭದಲ್ಲೂ ಗಣಪತಿ ಪೂಜೆಗಿಂತಲೂ ಮೊದಲು ಅಶೋಕ ಚಕ್ರದ ನಮನ, ಪೂಜನ, ಸ್ಮರಣ ಅಥವಾ ಧ್ಯಾನ ನಡೆಯಬೇಕೆಂಬುದನ್ನು ನಿಗಮ ಸದಸ್ಯತ್ವದ ಅಪರಿಹಾರ್ಯ ನಿಯಮವನ್ನಾಗಿಸ್ವೀಕರಿಸಬೇಕು. ಪಂಚಶೀಲಗಳನ್ನು ಶಾಶ್ವತ ಅಭೇದ್ಯ ಮತ್ತು ಸರ್ವ ಅಭಿಪ್ರಾಯ ತತ್ವಗಳನ್ನು ವ್ಯಾಪಿಸಿರುವ ತತ್ವಗಳೆಂದು ಎಲ್ಲರೂ ತಮ್ಮ ಸಾರ್ವಜನಿಕ ಧರ್ಮಕೇಂದ್ರಗಳಲ್ಲಿ ಪ್ರತಿಜ್ಞೆ ಮಾಡಬೇಕು. ಹೀಗೆ ವಿಚಾರ ಮಾಡಿ ಸರ್ವಸಮರ್ಪಕವಾದ ಆಚಾರ ಕ್ರಮಗಳನ್ನು ರೂಪಿಸಿಕೊಂಡು ಅವನ್ನು ನಿಗಮ ಸಂವಿಧಾನದ ಅಂಗವನ್ನಾಗಿ ಮಾಡಿಕೊಂಡು ಆ ಸಂವಿಧಾನದ ಪ್ರಕಟಿತ ಪ್ರತಿಯೊಂದನ್ನು ೨೧ ವರ್ಷ ವಯಸ್ಸಿನ ಪ್ರತಿಯೊಬ್ಬ ಅಕ್ಷರಸ್ಥನೂ ಓದಲಿಟ್ಟುಕೊಳ್ಳುವಂತೆ ವ್ಯವಸ್ಥೆ ಮಾಡಬೇಕು. ಅವು ಭಾರತದ ೧೪ ಭಾಷೆಗಳಲ್ಲೂ ಲಭ್ಯವಾಗಬೇಕು.

ದೈವಾಧಿಪತ್ಯವನ್ನು, ದೇವ ಸರ್ವಾಧಿಕಾರವನ್ನು ಒಪ್ಪುವುದು ಎಲ್ಲಮತ ಧರ್ಮಗಳಿಗೂ(ಸಾಮಾನ್ಯವಾಗಿ) ಸಾಧಾರಣ ಎನ್ನಬಹುದು. ಅಖಿಲ ಭಾರತ ಧರ್ಮ ನಿಗಮದವರಾಗಿರುವ ಎಲ್ಲ ಭಾರತೀಯರೂ ನಿಗಮದ ಕರ್ತವ್ಯ ನಿಯಮಾವಳಿಯನ್ನು ದೈವೋಕ್ತವೆಂದು ತಿಳಿದು ಅದಕ್ಕೆ ಬದ್ಧರಾಗಿ ನಡೆಯುವ ಯೋಜನೆಯು ಇಂದಿನ ಭಾರತೀಯ ಭೂರಿ ಜನಸ್ತೋಮದ ಮನೋಧರ್ಮದ ವಿಶ್ವಾಸೋನ್ಮುಖ ಪ್ರವೃತ್ತಿಗೆ ಅನುಗುಣವಾಗಿದೆ.ಭಾರತೇತರ ರಾಷ್ಟ್ರಗಳಲ್ಲಿಯೂ ಸಾಮಾನ್ಯ ಜನರಾಶಿಯು ಶುದ್ಧ ವಿಜ್ಞಾನೋನ್ಮುಖ ಮನೋಧರ್ಮವನ್ನು ರೂಪಿಸಿಕೊಂಡು ಅದರಂತೆ ಬಾಳುತ್ತಿಲ್ಲ. ಸಾಮಾಜಿಕ ಸಂಪ್ರದಾಯ, ಸದಾಚಾರ, ಪರಂಪರೆ, ರೂಢಿ, ಅಭ್ಯಾಸ, ಶಿಸ್ತು, ಮನೋರಂಜನೆ, ಗಂಭೀರಸ್ಥಿಕೆ ಮುಂತಾದ ಹಲವಾರು ಹೆಸರುಗಳ ಮರೆಯಲ್ಲಿ ನಡೆಯುವ ರಾಜಕೀಯ, ಸಾಮಾಜಿಕ ವ್ಯವಹಾರಗಳ ಮೂಲವು ಆ ರಾಷ್ಟ್ರಗಳ ಪ್ರಸಿದ್ಧ ಮತಧರ್ಮಗಳಲ್ಲೇ ಇರುವುದು ಸೂಕ್ಷ್ಮಜ್ಞರಿಗೆ ತಿಳಿಯದಿರಲಾರದು. ಹಾಗೇ

ಭಾರತೀಯ ಶಿಷ್ಟಾಚಾರದ ಸಾರಭೂತವಾದ ಗುರುತಿನ ಗೆರೆಗಳು ಈ ದೇಶದಲ್ಲಿ ಈಗ ೪೫೦೦ ವರ್ಷಗಳ ಪ್ರಾಚೀನತೆಯುಳ್ಳ ಹಿಂದು ಸಂಸ್ಕೃತಿಯಲ್ಲಿರುವುದು ಸರ್ವವಿದಿತ.

ಅಖಿಲಭಾರತ ಸರ್ವಧರ್ಮ ನಿಗಮದಲ್ಲಿ ಬ್ರಹ್ಮವು ಇತರ ಎಲ್ಲ ಪರಮಾಧಿಕಾರ ಸಂಪನ್ನ ದೇವರುಗಳ ಒಂದೇ ಒಂದು ಪ್ರತೀಕವಾಗಬಲ್ಲದು. ಅದರ ಹಿಂದೂತ್ವವು ಸಂಕುಚಿತ ಮತಧಾರ್ಮಿಕ ಶಾತ್ಯ ದುರಭಿಮಾನಗಳಿಂದ ಮುಕ್ತವಾದುದು. 'ಗಾಡ್' ಎಂಬ ಅಥವಾ ದೇವರು ಎಂಬ ಪದಗಳಷ್ಟೇ ಅರ್ಥವಿಶಾಲತೆಯುಳ್ಳ ಅದರಲ್ಲಿ ದೇಶೀಯ ಸಾಂಸ್ಕೃತಿಕ ಮೌಲ್ಯವು ಘನೀಭೂತವಾಗಿದೆ. ಕ್ರೈಸ್ತ, ಅಲ್ಲ, ಜಿನ, ಬುದ್ಧ, ಅಹುರ ಮಜ್ಧ, ಹರಿ, ಹರರ ಏಕಮೇವಾದ್ವಿತೀಯ ಸಂಕೇತವಾಗಬಲ್ಲ 'ಬ್ರಹ್ಮ'ದಂತಹ ಪದವು ತಾತ್ವಿಕ ವೈಜ್ಞಾನಿಕ Absolute ನಿರಪೇಕ್ಷ ನಿದಾನವನ್ನು ನಿರ್ದಿಷ್ಟವಾಗಿ ಸೂಚಿಸಬಲ್ಲದು ಎಂದು ತೋರುತ್ತದೆ. ಈ ನಿಗಮದಂತಹ ಯಾವುದಾದರೊಂದು ಸಮನ್ವಯ ಪ್ರಯತ್ನ ಅತ್ಯಗತ್ಯವೆಂದು ಕೆಲ ವರ್ಷಗಳ ಹಿಂದೆ ಪ್ರಸ್ತುತ ಲೇಖಕನು 'ಕರ್ಮವೀರ'ದ ದೀಪಾವಳಿ ಸಂಚಿಕೆಯಲ್ಲಿ 'ಮಾನವನ ಮೇಲೆ ಧರ್ಮದ ಪ್ರಭಾವ' ಎಂಬ ಶೀರ್ಷಿಕೆಯಲ್ಲಿ ಚರ್ಚಿಸಿದ್ದಿಲ್ಲಿ ಸ್ಮರಣೀಯ. ಅಲ್ಲಿ ಈ ಸಮನ್ವಯವನ್ನು ಸಾಧಿಸಲು ಪ್ರಯೋಗವನ್ನಾರಂಭಿಸುವ ಹೊಣೆಯನ್ನು ಸರಕಾರ ಹೊರಬೇಕೆಂದು ಅಭಿಪ್ರಾಯಪಟ್ಟ ನೆನಪು. ಅಲ್ಲದೆ ೩ ವಿಕಲ್ಪಗಳನ್ನು ಅದರಲ್ಲಿ ಜಾತೀಯತೆಗೆ ಪರಿಹಾರಗಳನ್ನಾಗಿ ಉಲ್ಲೇಖಿಸಲಾಗಿದೆ. ಆದರೀಗ ಜಾತೀಯ, ಧರ್ಮಾತೀತ ಸರಕಾರ್ಕಕಿಂತ ಇಂಥ ಪ್ರಯತ್ನವನ್ನು ದೇಶದ ನಾನಾ ಕಡೆಗಳಲ್ಲಿರುವ ಪ್ರಬುದ್ಧ ಭಾರತೀಯ ಪ್ರಜೆಗಳು ಆರಂಭಿಸುವುದೇ ಯೋಗ್ಯವೆಂದು ತೋರುತ್ತದೆ. ಈ ಆರಂಭವು ಬ್ರಹ್ಮಾದಿಯಾದರೆ ಅದರ ಪ್ರಗತಿಯು ಹೆಚ್ಚು ನಿರ್ವಿಘ್ನವಾಗಿ ಸಾಗಬಹುದು.

ಹೀಗೆ ಶ್ರೀ ಬೂದಿಹಾಳಮಠರ ವಿಚಾರದ ಒಂದು ವಿಸ್ತರಣವನ್ನು ಮಾಡಲು ವಿಚಾರವಂತರಿಂದು ಪ್ರಯತ್ನಿಸಿ ಮೊದಲು ನಮ್ಮ ರಾಜ್ಯ ಮಟ್ಟದ ಪ್ರಾತಿನಿಧಿಕ ಸಭೆಯೊಂದನ್ನು ಹುಬ್ಬಳ್ಳಿಯಲ್ಲಿ ಏರ್ಪಡಿಸಿ, ಕರಡು ಸಂವಿಧಾನವನ್ನು ತಯಾರಿಸಿ ಸಾರ್ವಜನಿಕ ಅಭಿಪ್ರಾಯಕ್ಕಾಗಿ ಪ್ರಕಟಿಸಬಹುದು. ಆ ಬಳಿಕ ಅದನ್ನನುಸರಿಸಿ ಒಕ್ಕಣೆಗಳ ಪರಿಷ್ಕಾರ ಮಾಡಿ ವಿವಿಧ ಪ್ರಾಂತಗಳ ವಿದ್ವಜ್ಜನರಿಗೆ ಅದರ ಪ್ರತಿಗಳನ್ನು ಕಳಿಸಿ, ಅವರ ಅಭಿಪ್ರಾಯ–ಸಲಹೆ–ಸೂಚನೆಗಳೊಡನೆ ದಿಲ್ಲಿಯಲ್ಲಿ ಅಖಿಲಭಾರತ ಪರಿಷತ್ತನ್ನು ನಡೆಯಿಸಿ, ಕೊನೆಯ ತೀರ್ಮಾನವನ್ನು ಕೈಗೊಂಡು, ಸರ್ವಧರ್ಮ ನಿಗಮವನ್ನು ಕಾಯದೆಬದ್ಧವಾಗಿ ಸ್ಥಾಪಿಸಿ ರಿಜಿಸ್ಟರ್ ಮಾಡಿಸಬಹುದು. ನಿಗಮದ ಸದಸ್ಯರು ಎಲ್ಲ ರಿಕಾರ್ಡುಗಳಲ್ಲೂ ತಾವು ಸರ್ವ ಧರ್ಮೀಯರೆಂದು ಉಲ್ಲೇಖಿಸುವಂತಾಗಬೇಕು. ಅಥವಾ ಸರ್ವಜ್ಞ ಜಾತಿಯವರೆಂದು ಪ್ರತಿಜ್ಞೆ ಮಾಡಿ ನಿಗಮ ನಿಯಮಾವಳಿಗೆ ಬದ್ಧರಾಗಿ ನಡೆದುಕೊಳ್ಳಬೇಕು. ಈ ಐಕ್ಯಸಂಘದ ಸದಸ್ಯರಾಗದೆ ಉಳಿಯುವವರು ಸದಸ್ಯರಾದವರೊಡನೆ ಯಾವ ಸರಕಾರೇತರ ವ್ಯವಹಾರವನ್ನು ಮಾಡಲೂ ಅವಕಾಶವನ್ನು ಸದಸ್ಯರು ಕೊಡಕೂಡದು ಎಂಬುದು ನಿಗಮದ ಸರ್ವವ್ಯಾಪಕ ಸೂತ್ರವಾಗಿರಬೇಕು.

ಈ ಬಗ್ಗೆ ದೇಶದ ವಿಶ್ವವಿದ್ಯಾನಿಲಯಗಳ ತತ್ವಶಾಸ್ತ್ರ ಪ್ರಾಧ್ಯಾಪಕರ ಬೆಂಬಲವನ್ನು ಪಡೆಯಲು ಪ್ರಯತ್ನಿಸಬಹುದು. ಧರ್ಮ ಪೀಠಗಳ ಸಹಾನುಭೂತಿಯನ್ನು ಲಿಖಿತವಾಗಿ ಪಡೆದುಕೊಳ್ಳಬಹುದು. ನಮ್ಮ ದೇಶದ ಭವಿಷ್ಯಕ್ಕಡರಿದ ಕಾರ್ಮೋಡವನ್ನು ಚದುರಿಸಲು ಕಳಕಳೆಯುಳ್ಳ ಧೀರರು ಈ ವಿಚಾರವನ್ನು ಕಾರ್ಯರೂಪಕ್ಕೆ ತರಲು ಮುಂದೆ ಬಂದಾರೆಂದು ಹಾರೈಸಬಹುದಲ್ಲವೇ?

– ಬಿ.ಎಚ್. ಶ್ರೀಧರ್



# ೨೩. ಸರ್ವಧರ್ಮ ಸಮನ್ವಯದ ಮಾರ್ಗಸೂಚನೆ ಲೇಖನ ೩

ಪಾಶ್ಚಿಮಾತ್ಯ ರಾಷ್ಟ್ರಗಳಿಂದ ವಿಜ್ಞಾನ–ತಂತ್ರಜ್ಞಾನಗಳನ್ನೂ ಉದ್ಯಮ–ಉಪಯೋಗ ದೃಷ್ಟಿಗಳನ್ನೂ ಆಭಾಸಿಕವಾಗಿ ಅನುಕರಣ ಮಾಡಹೊರಟು ನಿಜವಾದ ಪ್ರಗತಿಯನ್ನು ನಾವಿಲ್ಲಿ ಸಾಧಿಸಲಾರದಾಗಿದ್ದೇವೆ. ಆ ನಾಗರಿಕತೆಯ ಬಾಹ್ಯಾಂಗಗಳನ್ನು ಪೋಷಿಸುವ ಅಂತರಂಗ ಚೇತನೆಯನ್ನು ನಾವಿಂದು ಗುರುತಿಸಬೇಕಾಗಿದೆ. ಪಶ್ಚಿಮ ರಾಷ್ಟ್ರಗಳ ಸಮೃದ್ಧಿಯ ಸಾಧನಗಳ ಹಿನ್ನಲೆಯಲ್ಲಿ ಅಲ್ಲಿಯ ಜನರ ರಾಷ್ಟ್ರೀಯ ಭ್ರಾತೃಭಾವದ ದಾರ್ಢ್ಯವು ಮಹಾಸ್ತಂಭವಾಗಿ ನಿಂತಿದೆ. ಇಂಥ ದಾರ್ಢ್ಯವು ಅವರ ಜೀವನದ ಆಳದಲ್ಲಿ ಭದ್ರವಾಗಿ ನಿಂತ ಸಂಸ್ಕೃತಿಯ ಅಥವಾ ಧರ್ಮಸಾರದ ಬತ್ತದ ಸೆಲೆಯಿಂದ ಪುಷ್ಟವಾಗುತ್ತಿದೆ. ಮತ ಧಾರ್ಮಿಕ ಆಚಾರ ಭೇದ ಅಲ್ಲಿ ಕಡಿಮೆ. ಅದರಿಂದ ಸಾಮಾನ್ಯ ಸಂಸ್ಕೃತಿ ಅವರಲ್ಲಿ ಸುಲಭವಾಗಿ ರೂಪಿತವಾಗಿದೆ, ಸುದೃಢವಾಗಿ ಕಾರ್ಯಕರವಾಗಿದೆ. ಧಾರ್ಮಿಕ ನಂಬಿಗೆಗಳಲ್ಲಿ ಭೇದಗಳಿದ್ದರೂ ಅವು ಭಾರತದಲ್ಲಿರುವಷ್ಟು ಹರಿತವಾದ ಅಲಗುಗಳಿಂದ ಹೊಳೆಯುವ ಖಡ್ಗ ಘರ್ಷಣದಂತಿಲ್ಲ. ಧಾರ್ಮಿಕ ಕೊಲೆ ಇಲ್ಲದಿದ್ದರೂ ಸುಲಿಗೆ ಇಲ್ಲಿ ಅತಿರೇಕವಾಗಿದೆ. ಇದನ್ನೇ ನಮ್ಮ ಮುಖಂಡರು ಭಾವೈಕ್ಯದ ಅಭಾವವೆಂದು ಹೇಳುತ್ತಾರೆ.

ಭಾವವು ಸಂಸ್ಕೃತಿಯ ಸಾಮಾನ್ಯ ಸಾಮುದಾಯಿಕ ಏಕಪ್ರಕಾರತೆಯನ್ನು ಧರಿಸಿದರೆ ಮಾತ್ರ ರಾಷ್ಟ್ರೀಯ ಸಮಾಜದ ವಿಕಾಸವು ಸಾಧ್ಯ. ಭಾವದ ಅಥವಾ Attitude ಮನಃ ಪ್ರಣಾಳಿಯ ಏಕಮುಖತೆಯನ್ನು ರೂಪಿಸಲು ಜೀವನದ ಮೌಲಿಕ ಕಲ್ಪನೆ, ಭಾವನೆ, ತಿಳಿವಳಿಕೆಗಳಲ್ಲಿ ಸರ್ವಸಾಧಾರಣಾಂಶಗಳು ಹೆಚ್ಚುತ್ತ ಹೋಗುವುದಗತ್ಯ.

ಇಂಥ ಸಾಧಾರಣೀಕರಣದ ಪ್ರಯತ್ನವು ದೈವಾಧೀನ ಮನಸ್ಕತೆಯುಳ್ಳ ಬಹುಸಂಖ್ಯದ ದೈವವೆಂಬ ಮಹಾ ಮೌಲ್ಯದ ಸಮನ್ವಯ ಸಾಮರಸ್ಯಗಳತ್ತ ಸಾಗುವುದಿಂದು ಅತ್ಯಂತ ಅನಿವಾರ್ಯವಾಗುತ್ತ ಹೋಗಿದೆ. ಸಾಮಾಜಿಕ ಹಾಗೂ ನೈತಿಕ ಆಚಾರಗಳು ದೈವಾರಾಧನೆಗೇ ಹೆಚ್ಚಾಗಿ ಹೊಂದಿಕೊಂಡಿರುವುದು ಜಾತಿ ಮತಪ್ರಜ್ಞೆ ಜಾಗೃತವಾಗಿರುವ ದೇಶದಲ್ಲಿ ಸಹಜ.

ದೇವತ್ವದ ಕಲ್ಪನೆಯು ಮತ–ಧರ್ಮಗಳಲ್ಲಿ ಅತಿ ಉನ್ನತವಾದ ಮೌಲ್ಯ. ಅನಂತರ ಮುಕ್ತಿಯ ಕಲ್ಪನೆ. ಮುಕ್ತಿಯ ಸಾಧನೆಗೆ ಅನುಕೂಲವಾಗುವಂಥ ನಿತ್ಯ–ನೈಮಿತ್ತಿಕ ಆಚಾರಗಳ

ನಿಯಮಾವಳಿಯನ್ನು ನೀತಿ ಮತ್ತು ಪೌರಾಣಿಕ ನಂಬಿಗೆಗಳು ರೂಪಿಸುತ್ತವೆ. ಮತ ಧರ್ಮದಲ್ಲಿ ಇವಿಷ್ಟೂ ಅಡಕವಾಗಿರುವುದರಿಂದ ಮಾನವರ ವಿವಿಧ ಗುಂಪುಗಳ ಸಂಸ್ಕೃತಿ ನಾಗರಿಕತೆಗಳಲ್ಲಿ ಕಂಡು ಬರುವ ರುಚಿ ಅಭಿರುಚಿಗಳನ್ನೂ ಸಾಮೂಹಿಕ ಹಾಗೂ ವೈಯಕ್ತಿಕ ಒಲವು ನಿಲುವುಗಳನ್ನೂ ಅದು ರೂಪಿಸುತ್ತದೆ. ಭಾರತದಲ್ಲಿ ವೈಷ್ಣವಾಚಾರ, ಶಿವಾಚಾರ, ಅಲ್ಲಾಚಾರ, ಜೈನಾಚಾರ, ಬೌದ್ಧಾಚಾರ, ಕ್ರೈಸ್ತಾಚಾರ ಮತ್ತು ಝುರತುಷ್ಟ್ರಾಚಾರ ಎಂಬ ಸಪ್ತ ಧರ್ಮಾಚಾರ ಪದ್ಧತಿಗಳು ಗಣ್ಯವಾಗಿದೆ. ಅವುಗಳ ಹಿನ್ನೆಲೆಯಿರುವ ಶಿವ, ವಿಷ್ಣು, ಅಲ್ಲ, ಬುದ್ಧ, ಜಿನ, ಕ್ರೈಸ್ತ ಮತ್ತು ಝುರತುಷ್ಟ್ರರ ದೈವಿಕ ಸ್ವರೂಪಗಳ ಸಮಾನತೆಯನ್ನು ಮನ್ನಿಸುವುದು ಭಾರತೀಯ ಮನು ಪ್ರಣಾಳಿಕೆಯ ಸಮೀಕರಣದ ಪ್ರಯತ್ನದ ಮೊದಲ ಹೆಜ್ಜೆಯೆನ್ನಬಹುದು. ದೇವರು ಸ್ವರೂಪತಃ ಅದೃಶ್ಯ, ಅಸ್ಪೃಶ್ಯ ಅರ್ಥಾತ್ ಇವೆರಡಕ್ಕೂ ಅತೀತ. ಆತನ ಚಿತ್ರ, ಮೂರ್ತಿ, ಚಿಹ್ನೆ ಅಥವಾ ಸಂಕೇತಗಳೆಲ್ಲವೂ ಕೃತಕ ಎಂಬುದು ವಿಚಾರವಂತರಿಗೆ ಸ್ಪಷ್ಟ. ಆದುದರಿಂದ ಅವುಗಳ ಸಮಾನ ಪೂಜ್ಯತೆಯನ್ನು ದೇವ ಸಾಮ್ಯದ ಅಥವಾ ದೈವೈಕ್ಯದ ಬುದ್ಧಿಯು ಸಹಜವಾಗಿ ಸುಲಭಗೊಳಿಸುತ್ತದೆ. ಪೌರಾಣಿಕ ನಂಬಿಗೆಗಳ ವೈವಿಧ್ಯ ವೈಷಮ್ಯಗಳನ್ನು ಕಡಿಮೆಗೊಳಿಸಲು ಅವನ್ನು ಅಹಿಂಸೆಯ ಮೂಸೆಯಲ್ಲಿ ಕಾಯಿಸಿ ಶುದ್ಧಗೊಳಿಸುವುದಗತ್ಯ. ನೀತಿಗಳ ವಿಶ್ವವ್ಯಾಪಕ ಅಂಶಗಳಿಗೆ ಪ್ರಾಧಾನ್ಯ ಕೊಡುವುದು ಕ್ರಮಪ್ರಾಪ್ತ.

ವರ್ಧಿಸು, ಪ್ರಕಾಶಿಸು, ಮಾತನಾಡು, ಗರ್ಜಿಸು, ಘೀಳಿಡು, ಬೆಳೆಯಿಸು ಎಂಬ ಅರ್ಥಗಳುಳ್ಳ ಬ್ರಹ್ಮವು ಕಾಳಿದಾಸ, ರವೀಂದ್ರ ಠಾಕೂರರ ಕೃತಿಗಳಲ್ಲಿ ಮಾನ್ಯತೆ ಹೊಂದಿದ ದೇವವಾಚಕ ಶಬ್ದ. ವಿಶ್ವ ಕವಿಗಳಿಬ್ಬರಿತ್ತ ಬ್ರಹ್ಮಕಲ್ಪನೆ ಭಾರತದಲ್ಲಿ ಎಲ್ಲ ದೇವರುಗಳ ಕಲ್ಪನೆಗಳಿಗೂ ಏಕಾದೇಶವಾಗಬಲ್ಲದು. ಇಂಥ ಒಂದು ಸರ್ವ ಪ್ರಾತಿನಿಧಿಕ ದೇವಪದವನ್ನು ರಾಷ್ಟ್ರೀಯವಾಗಿ ಒಪ್ಪಿಕೊಂಡು ಉಳಿದ ಎಲ್ಲ ದೇವವಾಚಕ ಪದಗಳೂ ಅದರ ಪರ್ಯಾಯ ನಾಮಗಳೆಂದು ಗ್ರಹಿಸುವುದು ಸರಳವಿಚಾರ. ಎಲ್ಲ ಮತಗಳೂ ಆಗ ಬ್ರಾಹ್ಮ ಮತದಲ್ಲಿ ಗರ್ಭಿತವಾಗುತ್ತವೆ. ಬ್ರಹ್ಮಾಚಾರದ ಸ್ವರೂಪವು ರಾಷ್ಟ್ರೀಯ ಆಚಾರದ ಪರ್ಯಾಯವಾಗುವಂತೆ ರೂಪಿತವಾಗಲು ವಿವಿಧ ಮತಗಳಲ್ಲಿರುವ Universal moral principles ವಿಶ್ವಮಾನ್ಯ ನೀತಿ ತತ್ವಗಳನ್ನಾಯ್ದು ಸಮೀಕರಿಸಬೇಕು. ಅವುಗಳಲ್ಲಿ ಸಾಧ್ಯಗಳಾದ ಮುಕ್ತಿ–ಸ್ವರ್ಗಾದಿಗಳ ಕಲ್ಪನೆಗಳಲ್ಲಿರುವ ಸಾಧಾರಣಾಂಶಗಳನ್ನು ಆಯ್ದು ಏಕೀಕರಿಸಬೇಕು. ಅಂದರೆ ಮತಧರ್ಮಗಳಲ್ಲಿರುವ ಶಾಶ್ವತ ಸತ್ಯಗಳನ್ನು ಕ್ರೋಢೀಕರಿಸಿ ಅವುಗಳಿಗೆ ಅವಿರುದ್ಧವಾಗಿಯೇ ಮಿಕ್ಕೆಲ್ಲ ತತ್ವ ನೀತಿ, ಆಚಾರಗಳೂ ಕಾರ್ಯರೂಪಕ್ಕೆ ಬರಬೇಕು ಎಂಬ ವಿಧಿಯನ್ನು ನಮ್ಮ ಮೇಲೆ ನಾವು ಹೇರಿಕೊಳ್ಳಬೇಕು. ಅಹಿಂಸೆ, ಸತ್ಯ, ಅಸ್ತೇಯ, ಶೌಚ, ಇಂದ್ರಿಯ ನಿಗ್ರಹಗಳು ಅಂಥ ಶಾಶ್ವತ ನೀತಿ ಸತ್ಯಗಳು. ಜಗತ್ತಿನ ಯಾವ ಮತವೂ ಇದನ್ನು ಧಿಕ್ಕರಿಸದು. ಸರ್ವಾಚಾರಗಳೂ ಇವುಗಳಿಗೆ ಸರ್ವತ್ರ ಅವಿರುದ್ಧವಾಗಿ ನಡೆಯುವಂತೆ ಏರ್ಪಡಿಸಿಕೊಂಡರೆ ದೈವಾರಾಧನೆ–ಪೌರಾಣಿಕ ನಂಬಿಗೆಗಳಲ್ಲಿರುವ ಅನಾಗರಿಕ ಅಥವಾ ಅಜ್ಞಾನಜನ್ಯ ಆಚಾರವಿಚಾರಾಂಶಗಳು ಕಳಚಿ ಹೋಗುವವು. ಆಗ ಭಾರತದಲ್ಲಿ

ಸರ್ವಧರ್ಮಗಳ ಸಂಕೇತವಾದ ಬ್ರಹ್ಮಧರ್ಮವು ರಾಷ್ಟ್ರೀಯತೆಯ ಜೊತೆಗೆ ಅಂತರ್‌ರಾಷ್ಟ್ರೀಯತೆಯನ್ನು ಅಳವಡಿಸಿಕೊಂಡಂತಾಗುವುದು.

ನಮ್ಮ ನಾಗರಿಕತೆಗೆ ವೇದವಾಙ್ಮಯವು ಬುನಾದಿಯಾದುದರಿಂದ ಬ್ರಹ್ಮವು ಭಾರತೀಯ ದರ್ಶನಗಳಲ್ಲಿ ಅದ್ಯಾಪಿ ಪರಮತತ್ವವಾಚಕವಾಗಿರುವುದರಿಂದ ತ್ರಿಮೂರ್ತಿಗತ ಬ್ರಹ್ಮನಿಂದ ಈ ತತ್ವವು ಪ್ರತ್ಯೇಕವಾಗಿರುವುದರಿಂದ ಮತ್ತು ಮಾನವ ವಿಕಾಸದ ಬುದ್ಧ್ಯತೀತ ಪರಾತ್ಪರ ಸ್ಥಿತಿಯ ಸಂಕೇತವಾಗಿರುವುದರಿಂದ ಅಲ್ಲದೆ ಬ್ರಹ್ಮನ ವಿಗ್ರಹಾರಾಧನೆ ಅರೂಢವಾಗಿರುವುದರಿಂದ ಭಾರತದ ಎಲ್ಲ ಮತ ಧರ್ಮೀಯರೂ ಒಕ್ಕೊರಲಿನಿಂದ ಬ್ರಹ್ಮನನ್ನು ಸರ್ವಧರ್ಮ ಸಂಕೆತವನ್ನಾಗಿ ಸ್ವೀಕರಿಸಬಹುದೆಂದು ತೋರುತ್ತದೆ. ಹೀಗೆ ದೇವಸಂಕೇತವೊಂದನ್ನು ನಿರ್ಧರಿಸಿಕೊಂಡರೆ, ಭಾವೈಕ್ಯದ ಪ್ರಯತ್ನದಲ್ಲಿ ಅರ್ಧಯಶಸ್ಸು ಸಿಕ್ಕಿದ ಹಾಗೆ. ಅನಂತರ ಮುಕ್ತಿಯ ಕಲ್ಪನೆ (ಸ್ವರ್ಗದ ಕಲ್ಪನೆಯನ್ನೊಳಗೊಂಡು)ಗಳಲ್ಲಿ ಹೊಂದಿಕೆಯನ್ನು ಕಾಣಲು ಅವುಗಳಿಗೂ ದೈವಕಲ್ಪನೆಯಂತೆಯೇ (Supra rational) ವಿಚಾರಾತೀತ ಹಾಗೂ ಶ್ರದ್ಧೈಕ್ಯ ಗಮ್ಯ ಸ್ವರೂಪವನ್ನು (ವಿಜ್ಞಾನಯುಗಕ್ಕೆ ಸಹಜವಾದ ವಿಚಾರ ಸರಣಿಯಂತೆ) ಒಪ್ಪಿಕೊಂಡರೆ, ಅವುಗಳಲ್ಲಿಯ ಬೇಧಗಳು ಹೇಗಿದ್ದರೂ ಹಾಗೇ ಅವು ವೈಯಕ್ತಿಕ ಭಾವನೆಗೆ ಸೇರಿದವುಗಳೆಂದು ಗ್ರಹಿಸಿ ಚರ್ಚಾರಹಿತವಾಗಿ ಅವುಗಳಲ್ಲಿ ಪರಸ್ಪರ ಸಮ ಗೌರವವನ್ನು ಎಲ್ಲರೂ ಇಟ್ಟುಕೊಳ್ಳಲು ಯಾವ ವಿಘ್ನವು ಎದುರಾಗಲಾರದು. ಮುಕ್ತಿ, ಸ್ವರ್ಗಗಳು ಪಾಪ ಪುಣ್ಯಾಧೀನ ಅಥವಾ ದೈವ ಕೃಪಾಧೀನ ಎಂಬುದು ಸಮಸ್ತ ಮತ ಸಾಧಾರಣ. ದೈವಶಕ್ತಿಯು ಅಪರೋಕ್ಷ ಜ್ಞಾನಾಧೀನ ಎಂದು ಒಂದು ಮತ ಹೇಳಿದರೆ ಆಗ ಅದು ಬುದ್ಧ್ಯತೀತವೆನ್ನಿಸುವುದರಿಂದ ವಾದಾತೀತವಾಗುತ್ತದೆ. ಮುಕ್ತಿ ಸ್ವರ್ಗಗಳಿಗೆ ಸಂಬಂಧಿಸಿದ ಶ್ರುತಿ–ಅಥವಾ ಪವಿತ್ರ ಗ್ರಂಥಗಳ ವಾಕ್ಯಗಳ ಅರ್ಥಗಳಲ್ಲಿ ಭೇದಗಳಿದ್ದರೆ ಅವೆಲ್ಲವೂ ಬುದ್ಧ್ಯತೀತ ಪ್ರಪಂಚಕ್ಕೆ ಸೇರಿದವುಗಳಾಗುತ್ತವೆ. Unknown (ಅಜ್ಞಾನ) ಅಜ್ಞೇಯದಲ್ಲಿ ಪ್ರಕಾರಗಳನ್ನು ಹೇಳಹೋದರೆ ಅದಕ್ಕೆ ಅರ್ಥವುಂಟೇ? ಅವ್ಯಕ್ತವು ಅಕ್ಷರಶಃ ಅವ್ಯಕ್ತವಲ್ಲವೇ? ಆದುದರಿಂದ ಅಂಥ ಕಲ್ಪನೆಗಳನ್ನೆಲ್ಲ 'ದೈವಸಾನ್ನಿಧ್ಯ' ಎಂಬ ಒಂದೇ ಒಂದು ಕಲ್ಪನೆಯಲ್ಲಿ ಅಡಕಗೊಳಿಸಬಹುದು ಅಥವಾ 'ಸದ್ಗತಿ' ಎಂದರೂ ಸರಿಯೆ. ಇಂಥ ಒಂದು ಸರ್ವಗ್ರಹಪದವನ್ನು ಸಂಕೇತವನ್ನಾಗಿಟ್ಟುಕೊಂಡು ವ್ಯವಹರಿಸುವುದು ಸಮನ್ವಯ ಪ್ರಯತ್ನದ ಎರಡನೆಯ ಹೆಜ್ಜೆಯೆಂದು ತಿಳಿದುಕೊಳ್ಳಬಹುದು. ಸ್ವರ್ಗ ಮುಕ್ತಿಗಳಲ್ಲಿ ಭೇದವನ್ನು ಮಾಡುವ ಮತಗಳಲ್ಲಿ ಮೊದಲನೆಯದನ್ನು ಅಲ್ಪಕಾಲಿಕ ಸದ್ಗತಿಯೆಂದೂ ಎರಡನೆಯದನ್ನು ನಿತ್ಯಸದ್ಗತಿಯೆಂದೂ ತಿಳಿದುಕೊಳ್ಳುವುದು ಸುಲಭ, ಸಹಜ. ಇಹ–ಪರಗಳ ಹಾಗೂ ರಾಷ್ಟ್ರ–ವಿಶ್ವಗಳ ಹಿತಾಶಯಗಳಲ್ಲಿ ವಿರೋಧ ಬರುವುದು ಇತಿಹಾಸದಾದಿಯಿಂದಲೂ ಅಕ್ರಮ ಧರ್ಮವನ್ನೂ ಅನಾಕ್ರಮಣ ನೀತಿಯನ್ನೂ ಅನುಸರಿಸುತ್ತ ಬಂದ ಭಾರತದಲ್ಲಿ ಅಸಂಭವ. ಪರಕ್ಕಾಗಿ ಐಹಿಕ–ಕರ್ಮವನ್ನು ಬಿಡುವ ನಿವೃತಿತ ಮಾರ್ಗವು(ಸಂನ್ಯಾಸವೂ) ೭೫ ವರ್ಷವಾದವರಿಗಷ್ಟೇ ತಕ್ಕದ್ದು ಎಂಬುದಕ್ಕೆ ಕಾಳಿದಾಸನು ಪ್ರಮಾಣ:

**ಶೈಶವೇಽಭ್ಯಸ್ತ ವಿದ್ಯಾನಾಂ ಯೌವನೇ ವಿಷಯೈಷಿಣಾಂ**
**ವಾರ್ಧಕ್ಯೇ ಮುನಿವೃತ್ತೀನಾಂ ಯೋಗೇನಾಂತೇ ತನುತ್ಯಜಾಂ ॥**

ಭಾರತೀಯ ಸಂಸ್ಕೃತಿಯ ಸಾರವನ್ನು ಕಾಳಿದಾಸನು ಹೀಗೆ ಅರ್ಥಯಿಸಿ ಹೇಳಿದರೆ ಅದು ಯಾವ ಮತದವರಿಗೂ ವಿರುದ್ಧವಾಗದು.

ಸಾಮಾಜಿಕ ಹಾಗೂ ದೇವಪೂಜಾ ಸಮಾರಂಭಗಳ ಔಪಚಾರಿಕ ಆಚಾರ ಪ್ರಕಾರಗಳ ವೈವಿಧ್ಯವು ರಾಷ್ಟ್ರೀಯತೆಗೆ ಬಾಧಕವಾಗದು. ಅವುಗಳಲ್ಲಿ ಅಹಿಂಸಾ ತತ್ವವಿದ್ದರೆ ಸರಿ; ಅವೆಲ್ಲವನ್ನೂ ಎಲ್ಲರೂ ಸಮಾನ ಗೌರವದಿಂದ ನೋಡಬಹುದು. ಅಲ್ಲೇನೂ Unity ಐಕ್ಯಕ್ಕಾಗಿ Uniformity ಸಾಮ್ಯರೂಪ್ಯ ಅಗತ್ಯವಿಲ್ಲ. ಪರಮತನಿಂದೆ ಹೇಗೂ ಸರ್ವತ್ಯಾಜ್ಯ. ಜೊತೆಗೆ Preferential Treatment ವಿಶಿಷ್ಟ ಉಪಚಾರ ಯಾವ ಜಾತಿ ಮತದವರೂ ಅಪೇಕ್ಷಿಸರು. ಆಗ Majority ಮಹಾಭಾಗದ ದಬ್ಬಾಳಿಕೆಗೂ Minority ಅಲ್ಪಭಾಗದ ಆರ್ತಸ್ವರಕ್ಕೂ ಎಡೆಯೇ ಇಲ್ಲದಂತಾಗುವುದು. ಸರ್ವಧರ್ಮ ಸಮನ್ವಯದ ಮೂಲಕ ರಾಷ್ಟ್ರೀಯ ಭಾವೈಕ್ಯ ಸಿದ್ಧಿಗೆ ಅಗತ್ಯವೆನಿಸುವ ಉಪಯುಕ್ತ ಸತ್ಯ ಪ್ರತಿಜ್ಞೆಯನ್ನು ಸಮನ್ವಿತ ವಿಶ್ವಭಾರತ ಧರ್ಮದ ಪ್ರತಿಯೊಬ್ಬ ಸದಸ್ಯನೂ ಪಾಲಿಸಬೇಕು. ಇದಕ್ಕೆ ತಪ್ಪಿದವನ ರಾಷ್ಟ್ರೀಯತೆಯನ್ನು ಈ ಧರ್ಮ ಸಂಘವು ಪ್ರಶ್ನಿಸಬೇಕು; ವ್ಯಾವಹಾರಿಕ ಸಂಬಂಧ ವಿಚ್ಛೇದದಿಂದ ಹಾದಿಗೆ ತರಬೇಕು, ರಾಷ್ಟ್ರ ಹಿತವು ಸ್ವಹಿತಕ್ಕೆ ಅತ್ಯನಿವಾರ್ಯ ಎಂಬುದನ್ನು ಇಂದಿನ ಜಾಗತಿಕ ರಾಷ್ಟ್ರ ಸಾರ್ವಭೌಮತ್ವದ ನೀತಿಯನ್ನರಿತ ಯಾರಿಗೂ ಹೊಸದಾಗಿ ಹೇಳಬೇಕಾಗಿಲ್ಲ.

ಸರ್ವಧರ್ಮಗಳ ಆದರ್ಶಗಳ ಸಾಧನೆಗೂ ರಾಷ್ಟ್ರೀಯತೆಯೇ ಪರಿಧಿ. ಆತ್ಮಕ್ಕೆ ದೇಹವಿದ್ದ ಹಾಗೆ ಸಮಾಜಕ್ಕೆ ರಾಷ್ಟ್ರವು ದೇಹ. ದೇಹದ ಆರೋಗ್ಯ ಮತ್ತು ಅದರ ಮೇಲೆ ವಿವೇಕದ ಪ್ರಭುತ್ವ ಇರುವುದು ವ್ಯಕ್ತಿಯ ಪುರುಷಾರ್ಥ ಸಾಧನೆಗೆ ಎಷ್ಟು ಅವಶ್ಯಕವೋ ರಾಷ್ಟ್ರದ ಪ್ರಜೆಗಳೆಲ್ಲರ ಭ್ರಾತೃತ್ವ ಮತ್ತು ಅವರ ಮೇಲೆ ಸಾಮಾಜಿಕ ವಿಧೇಯಕದ ನಿಯಂತ್ರಣ ಇರುವುದು ಸರ್ವರ ಸ್ವತಂತ್ರ ಅಸ್ತಿತ್ವದ ರಕ್ಷಣೆಗೂ ಅಷ್ಟೇಅವಶ್ಯಕ. ಮಹಾತ್ಮಾ ಗಾಂಧಿಯವರು ಹೇಳಿದ 'ಈಶ್ವರ ಅಲ್ಲಾ ತೇರೇ ನಾಮ್' ಸೂತ್ರವು ಸರ್ವಧರ್ಮ ಸಮನ್ವಯದ ನಾಂದೀ ಶ್ಲೋಕ. ಅಂಥ ಸಮನ್ವಯ ಸಾಧನೆಯ ಸನ್ಮತಿಯನ್ನು ರಾಷ್ಟ್ರ ದೈವತ್ವವು ಸರ್ವರಿಗೂ ಕರುಣಿಸಲಿ ಎಂದು ಹಾರೈಸುತ್ತೇನೆ.

– ಬಿ.ಎಚ್. ಶ್ರೀಧರ್



[ವಿಶ್ವವಾಣಿ–೧೩–೭–೧೯೬೪]

# ೨೪. ಧರ್ಮದ ಲೋಕೋಪಯೋಗೀ ಕಾರ್ಯ ಸಕಲರಿಗೆ ಕಾಣಬೇಕು – ಲೇಖನ ೪

**ಚಿಕಿತ್ಸಕ ಬುದ್ಧಿಯಿಂದ, ಆಧುನಿಕ ತರ್ಕ ಸಮ್ಮತ ವಿವೇಚನೆಯಿಂದ ನಮ್ಮ ಪೂರ್ವಜರ ಗಳಿಕೆಯನ್ನು ಸಂವರ್ಧಿಸುವ ಆಹ್ವಾನವನ್ನು ನಾವಿಂದು ಸ್ವೀಕರಿಸಬೇಕು.**

ಧರ್ಮವು ಒಂದು ಶಾಸ್ತ್ರ: ಒಂದು ವಿಶೇಷ ಜ್ಞಾನ. ವಿಜ್ಞಾನಕ್ಕೆ ಮತ್ತು ಶಾಸ್ತ್ರಕ್ಕೆ ಇರುವ ಎರಡು ಅಂಗಗಳು ಧರ್ಮಕ್ಕೂ ಉಂಟು. ಧರ್ಮದ ತಿಳಿವಳಿಕೆ, ಧರ್ಮದ ಆಚರಣೆ ಇವೇ ಆ ಎರಡು ಅಂಗಗಳು. ತಿಳಿವಳಿಕೆಯಿಲ್ಲದ ಆಚರಣೆ, ಆಚರಣೆಯಿಲ್ಲದ ತಿಳಿವಳಿಕೆ ಎರಡೂ ಅಪೂರ್ಣ ಮತ್ತು ಘಾತಕ.

ಬಹುಶಃ ಎಲ್ಲ ಧರ್ಮಗಳೂ ದೈವೀ ಅವಿಷ್ಕಾರದ(Revelation) ಮುಖವಾಡದಲ್ಲಿ ತಮ್ಮ ಶಾಸ್ತ್ರಸಮ್ಮತವಾದ ಜ್ಞಾನ–ಕ್ರಿಯೆಗಳ ಸಮುಚ್ಚಯದ ಭಾಂಡಾರವನ್ನು ರಕ್ಷಿಸಿಕೊಂಡಿರುವುದನ್ನು ಇಂದಿನ ವಿವೇಚನಾಪರ ಉಪಾಸಕರು ಕಂಡುಕೊಳ್ಳಬಹುದು. ಅಲ್ಲದೆ ಅಲೌಕಿಕ ಚಮತ್ಕೃತಿ ಅಥವಾ ಪವಾಡ(Miracle)ದಲ್ಲಿ ಸಾಮಾನ್ಯರ ಬುದ್ಧಿಗಳನ್ನು ವಶಪಡಿಸಿಕೊಳ್ಳುವ ಒಳಹಾದಿಯನ್ನು ಧರ್ಮಪ್ರತಿಪಾದಕರು ಬಳಸಿರುವುದನ್ನು ಇಂದಿನವರು ಕಾಣಬಹುದು.

ಆದರೆ ಧರ್ಮವು ಸುಸಂಬದ್ಧ ಶಾಸ್ತ್ರವೆಂದು ಭಾರತೀಯರು ಬೃಹತ್ಪ್ರಮಾಣದ ಮೇಲೆ ಅಭ್ಯಾಸ ಮಾಡಿ, ಅಲ್ಲಿರುವ ಲೋಕೋಪಯೋಗಿ ಅಂಶವನ್ನು ಹುಡುಕಿ ತೆಗೆದು ವಿಶ್ವಾಸದಿಂದ ಇಮ್ಮಡಿ ಧೈರ್ಯದಿಂದ ಆಚರಣೆಯಲ್ಲಿ ತರುವ ಗೋಷ್ಠಿಗೇ ಇಂದು ಹೋಗಿಲ್ಲ.

## ಚಿಕಿತ್ಸಕ ಮನೋವೃತ್ತಿ

ಭಾರತೀಯರು ಬಹು ಪ್ರಾಚೀನಕಾಲದಿಂದಲೂ ಧರ್ಮವನ್ನೇ ಪ್ರಮುಖ ಸ್ಥಾನದಲ್ಲಿರಿಸಿಕೊಂಡು ಜೀವನಕ್ಕೆ ಉಪಯುಕ್ತವಿರುವ ಎಲ್ಲ ವಿಶೇಷ ಜ್ಞಾನಭಾಂಡಾರವನ್ನು ಧರ್ಮಸೂತ್ರಗಳಲ್ಲಿ ಪ್ರಕಟಗೊಳಿಸಿದರು.

ಶಾಸ್ತ್ರದ ಗಳಿಕೆ ಎಲ್ಲವೂ ಅಲೌಕಿಕ ಚಮತ್ಕೃತಿಯಾಗಲೂ ಧರ್ಮದ ರಕ್ಷಾಕವಚವೇ ಕಾರಣವಾಯಿತು. ಇಂದು ಮನಃಶಾಸ್ತ್ರಜ್ಞರು ವಿವರವಿವರವಾಗಿ ಬಿಡಿಸಿಕೊಡಬಲ್ಲ ತೊಡಕುಗಳನ್ನು ಹಿಂದೆ ಧರ್ಮಸ್ಥಾನದಲ್ಲಿ ಭೂತಚೇಷ್ಟೆಗಳೆಂದು ಪರಿಗಣಿಸಿ, ಪರಿಹಾರದ ಉಪಾಯಗಳನ್ನು ಸೂಚಿಸಲಾಗುತ್ತಿತ್ತು. ಧರ್ಮಸ್ಥಾನದ ವಶದಲ್ಲಿದ್ದ ಇಂತಹ ಅನೇಕ ಜೀವನಾವಶ್ಯಕ ಅಂಗಗಳನ್ನು ಆಧುನಿಕ ಜೀವನಪದ್ಧತಿಯು ಕಸಿದುಕೊಂಡು ಸ್ವತಂತ್ರವಾಗಿ

ಕಾರ್ಯಾಚರಣೆಯನ್ನು ನಡೆಸಿರುವುದನ್ನು ಕಣ್ಣಿದ್ದವರು ಕಾಣಬಹುದು. ಈ ಪ್ರತ್ಯೇಕತೆಯ ಆ ಅಂಗಗಳಿಗೆ ಪರಿಶುದ್ಧತೆಯನ್ನು ತಂದು ಕೊಟ್ಟಿರುವುದಾದರೂ ಮಾನವಜೀವನಕ್ಕೆ ಅವಶ್ಯವಿರುವ ಅಂತಃಕರಣದ ಸತ್ವವನ್ನು ಮಾತ್ರ ಅವು ಪಡೆಯದೆ 'ಈಶಾವಾಸ್ಯ'ದ ಪ್ರಸ್ತಾಪ ಮಹಿಮೆಯನ್ನು ಪಡೆಯದೆ ರಕ್ಕಸತನದ ಸೀಮೆಯಲ್ಲಿ ಪ್ರವೇಶಿಸಲು ತುದಿಗಾಲ ಮೇಲೆ ನಿಂತಿದೆ. ಅನಂತ ಕಿರಣಗಳ ಸೂರ್ಯನ ಬೆಳಕು ಪ್ರತ್ಯೇಕವಾಗಿ ಸೃಷ್ಟಿಗೆ ತಟ್ಟಿದರೆ ಚರಾಚರ ವಸ್ತುಗಳು ಮಾನವ ಕುಲವು ಸಹಸ್ರಬಾಣಗಳ ತೀಕ್ಷ್ಣವೇದನೆಯಿಂದ ಕರಗಿ ಹೋಗುತ್ತಿದ್ದವೆಂಬುದು ಶತಃ ಸಿದ್ಧಮಾತು. ಸೂರ್ಯಮಂಡಲದ ಐಕ್ಯಕ್ರಿಯೆಯಿಂದ ಸೃಷ್ಟಿಯೂ ಪರಿಪೋಷಣೆ ಪಡೆಯುತ್ತಿರುವುದರ ಗುಟ್ಟನ್ನೇ ಅರಿತು ಭಾರತೀಯರು ಧರ್ಮಮುಖದಲ್ಲಿ ಶಾಸ್ತ್ರಾಚರಣೆಯನ್ನು ನಡೆಯಿಸಿಕೆಲವು ಕಾಲ ಯಶೋಭಾಗಿಗಳಾಗಿದ್ದರು. ಇಂದು ಪುನಃ ಧರ್ಮವನ್ನು ಲೋಕೋಪಯೋಗಿ ಕಾರ್ಯಸಂಘಟನೆಗೆ ಬಳಸುವ ಅವಶ್ಯಕತೆ ದೇಶದಲ್ಲಿ ಬಂದಿದೆ. ಶಾಸ್ತ್ರೀಯ ದೃಷ್ಟಿಗೆ ಮೆಚ್ಚಿಕೆಯಾಗವು ಸತ್ಯ ತತ್ವಗಳ ಸಂಶೋಧನೆಯನ್ನು ಮಾಡಿ ಅವುಗಳ ಅನುಷ್ಠಾನಕ್ಕೆ ಅವಶ್ಯವಿರುವ ಮಾನಸಿಕ ಹರುಳುತನವನ್ನು ಕೃಷಿ ಮಾಡಿಕೊಳ್ಳುವ ಸಮಯವು ಇಂದು ಬಂದಿದೆ. ಈ ಸಂಗತಿಯನ್ನು ಅಲ್ಲಗಳೆಯುವುದೂ ಒಂದೇ; ಇಂದಿನ ಸ್ವಾತಂತ್ರ್ಯವನ್ನು ಅಲ್ಲಗಳೆಯುವುದೂ ಒಂದೇ.

## ಧರ್ಮದ ವ್ಯವಹಾರ

ಧರ್ಮವು ಉಳಿದೆಲ್ಲ ಅಂಗಗಳನ್ನೂ ಅವುಗಳ ವಿಪರೀತ ಸ್ವತಂತ್ರ ನಡವಳಿಕೆಗಳಿಂದ ಕಳೆದುಕೊಂಡರೂ ಒಂದಿಲ್ಲೊಂದು ದಿನ ತನ್ನ ಬಳಿಗೆ ಆ ಅಂಗಗಳು ಪೂರಕ ಪೋಷಣೆಗೆ ಬರಲೇಬೇಕೆಂಬುದನ್ನು ತಿಳಿದುಕೊಂಡರೆ ಸಾಕು. ಈ ಜ್ಞಾನವೇ ಧರ್ಮದ ಅರ್ಧ ಕಾರ್ಯವನ್ನು ಮಾಡುವುದು. ಉಳಿದರ್ಧ ಕಾರ್ಯವನ್ನೂ ಧರ್ಮವೇ ಮಾಡುವುದು. ಆದರೆ ಇನ್ನರ್ಧ ಕಾರ್ಯದಲ್ಲಿ ಅಂಗಗಳೂ ಸಹಕರಿಸುವುದು ಮಾತ್ರ ಅತ್ಯವಶ್ಯ.

ಇಂದು ಭೌತಿಕವು ಸೃಷ್ಟಿಯಲ್ಲಿ ತನಗೆ ಕಂಡು ಬಂದ ರಹಸ್ಯಗಳ ವಶೀಕರಣದಿಂದ ಮಾನವ ಕುಲದ ಉತ್ಕ್ರಾಂತಿಯ ಕಾರ್ಯದಲ್ಲಿ ಕೆಲವು ಮಟ್ಟಿಗೆ ಯಶಸ್ಸು ಪಡೆದಿದ್ದರೂ, ಸೃಷ್ಟಿಯ ರಹಸ್ಯದ ಪರಿಪೂರ್ಣ ರಚನಾತ್ಮಕ ಅಂಶಗಳನ್ನು, ಸ್ವಯಂಭೂತತ್ವವನ್ನು ಅರಿಯಬೇಕೆನ್ನುವ ನಮ್ಮ ಪೂರ್ವಜರ ಹಂಬಲವನ್ನೇ ಕಡೆಗಣಿಸಿ, ವಿಜಯದ ವಿಪರೀತ ಭೂತಚೇಷ್ಟೆಯಲ್ಲಿ ಮಗ್ನವಾಗಿದೆ. ಮುಂದೆ ಭಗ್ನ ಮನೋರಥವಾಗುವ ಭೌತಿಕವನ್ನು ಉಳಿಸಿಕೊಳ್ಳುವ ಕಾರ್ಯವನ್ನು ಭಾರತದಲ್ಲಿ ಇಂದು ಧರ್ಮವು ಮಾಡಬೇಕಾಗಿದೆ. ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ನಮ್ಮ ಪೂರ್ವಜರು ಸಶಾಸ್ತ್ರೀಯವಾಗಿ ಹಿಂದೊಮ್ಮೆ ನಡೆದುಕೊಂಡು, ಅನೇಕ ಅನುಭವಗಳನ್ನು ಸೂತ್ರರೂಪವಾಗಿ ಧರ್ಮಗ್ರಂಥಗಳಲ್ಲಿ ಸಂಗ್ರಹಿಸಿ ಮರಿಮಕ್ಕಳಿಗ ಬಿಟ್ಟುಕೊಟ್ಟಿದ್ದಾರೆ. ಈ ಅನುಭವಗಳನ್ನು ಕಾಲಕಾಲಕ್ಕೆ ಅವಿಷ್ಕರಿಸಿ, ಸಜೀವ ತತ್ವಾಂಶಗಳನ್ನು ಉಳಿಸಿಕೊಂಡು ಅವುಗಳಿಗೆ ಹೊಸ ಅನುಭವಗಳನ್ನು ಜೋಡಿಸಿ ಅಶರೀರವಾಣಿಯ ದಿವ್ಯತೆಯ ಭದ್ರ ಭವ್ಯ ಕೋಶಾಗಾರದಲ್ಲಿರಿಸಿದ್ದಾರೆ. ಈ

ಅಶರೀರವಾಣಿಯನ್ನು ಭಾಷ್ಯಕಾರರು ಅರ್ಥಪೂರ್ಣವಾಗಿ ಬಿಡಿಸಿ ಹೇಳಿ, ಉತ್ಕ್ರಾಂತಿಯ ಕ್ರಮಕ್ಕೆ ಚಾಲನೆ ಕೊಡಬೇಕಾಗಿದೆ. ನಮ್ಮ ಇಂದಿನ ಧರ್ಮಪೀಠಗಳಲ್ಲಿ ಆಚಾರ್ಯರಿಗೆ ಶ್ರೇಷ್ಠಸ್ಥಾನವನ್ನು ನೀಡಿದ ನಮ್ಮ ಪೂರ್ವಜರ ಜಾಣ್ಮೆಯನ್ನು ಅರ್ಥಮಾಡಿಕೊಳ್ಳುವ ಸೌಭಾಗ್ಯ ನಮಗೆ ಬೇಕಾಗಿದೆ. ಉಚ್ಚ ಕುಲದವರು ಟೀಕಾಚಾರ್ಯರಿಗೆ ಉನ್ನತ ಸ್ಥಾನವನ್ನು ನೀಡುವ ವಿವೇಕವನ್ನು ತೋರಿಸಿದ್ದರಿಂದಲೇ ಅವರಿಗೆ ಸಮಾಜದಲ್ಲಿ ಉಚ್ಚ ಕುಲವು ದೊರೆತಿದೆ. ಅವರೂ ಅವರ ಕೂಡ ಅವರಂತೆಯೇ ಉಚ್ಚ ಕುಲದವರಾಗಬೇಕೆನ್ನುವ ಜಿಜ್ಞಾಸುಗಳೂ ಇಂದು ಪುನಃ ಜೀವನದ ಎಲ್ಲ ಅಂಗಾಂಗಳಿಗೆ ಪೂರಕವಾಗಿರುವ ಧರ್ಮ ಕಾರ್ಯಗಳಿಗೆ ಅತ್ಯಾಧುನಿಕ ಭಾಷ್ಯವನ್ನು ಪಡೆಯುವ ಹಂಬಲದಿಂದ ಕಾರ್ಯತಃ ಮುಂದೆ ಸಾಗಬೇಕು.

## ಲೌಕಿಕತೆ ಅಧರ್ಮವಲ್ಲ

ಧರ್ಮವೆಂದರೆ ಇಂದು ಯಾವುದೋ ಅಲೌಕಿಕ ವಿಷಯ. ಅದು ಕಣ್ಣು ಮುಚ್ಚಿ ಯಾವ ವಿವೇಚನೆ ತರ್ಕಗಳಿಗೂ ಆಸ್ಪದ ಕೊಡದೆ, ವಿಪರೀತ ಭೂತ ಚೇಷ್ಟೆಗೆ ಶರಣಾಗತವಾಗುವ ನಿರ್ವಿಣ್ಣತೆ. ಈ ವ್ಯಾಖ್ಯೆಗೆ ಧರ್ಮವು ಗುರಿಯಾಗಲು ಕಾರಣವೇನು? ಭೌತಿಕವೇ ಅಲ್ಲವೇ? ಶತ–ಶತ ವರ್ಷಗಳ ಕಾಲ ಯಾವುದೇ ಸ್ವಾತಂತ್ರ್ಯವಿಲ್ಲದೆ, ಬಾಳನ್ನು ನೂಕಿಕೊಂಡು ಬಂದ ನಾವು ನಮ್ಮ ಧರ್ಮವು ಹಿಡಿದುಕೊಂಡು ಬಂದ ಎಲ್ಲ ಜೀವನಾಂಗಗಳ ಮೌಲ್ಯವನ್ನು ಹೆರವರು ಅಪಹರಿಸಿಕೊಂಡೊಯ್ದರೂ ಬಾಯಿಗೆ ಬೀಗ ಹಾಕಿಕೊಂಡು ಉಳಿದೆವು. ನಮಗೆ ನಮ್ಮ ಧರ್ಮದ ಅಭಿಮಾನ ಮಾತ್ರ ಉಳಿಯಿತು. ಆ ಅಭಿಮಾನದಿಂದ ನಾವು ಶುಷ್ಕವನ್ನೇ ಸತ್ಯವೆಂದು ಅಪ್ಪಿಕೊಂಡು ಬಂದೆವು. ಹಡೆದ ತಾಯಿ ತನ್ನ ತೀರ ಅಸ್ವಸ್ಥ ಶಿಶುವಿನ ಶರೀರವನ್ನು ತೆಕ್ಕೆಯಲ್ಲಿ ಹಿಡಿದುಕೊಂಡು ಅತಿ ದುಃಖದಿಂದ ಮೌನಿಯಾಗಿರುವಂತೆ, ದೇಶವು ತಾಳ್ಮೆಯಿಂದುಳಿಯಿತು. ಸ್ವಾತಂತ್ರ್ಯವು ಈಗ ಪುನಃ ವಿಚಾರಶೀಲರಿಗೆ ಆಹ್ವಾನವನ್ನಿತ್ತಿದೆ.

ವಿಚಾರಶೀಲರು ಮೇಲೆ ಪ್ರತಿಪಾದಿಸಿದ ಮೂಲವನ್ನೇ ಆಧಾರವಾಗಿಟ್ಟುಕೊಂಡು, ಒಂದೊಂದು ಜೀವನಾಂಗವನ್ನಾಗಲೀ ಕ್ಷೇತ್ರವನ್ನಾಗಲೀ ಆಯ್ಕೆ ಮಾಡಿಕೊಂಡು, ದೀಕ್ಷಾಬದ್ಧರಾಗಿ, ಆ ಕ್ಷೇತ್ರದಲ್ಲಿ ಪರಿಶುದ್ಧತೆಗಾಗಿ ಪರಿಶ್ರಮಿಸಬೇಕು. ಧರ್ಮದ ಪರುಷಹಸ್ತಸ್ಪರ್ಶದ ಲಾಭವನ್ನು ಪಡೆದುಕೊಳ್ಳಬೇಕು. ಈ ಪರುಷಹಸ್ತ ಸ್ಪರ್ಶದ ದೇವತಾಕಾರ್ಯವೇ ಶರಣರು ಸಂತರು ಹೇಳುವ ಅನುಭಾವವೆಂದು ಸಕಲಭಾರತೀಯರಿಗೆ ತಿಳಿಸಿ ಹೇಳಬೇಕು.

## ಅನುಭಾವವೇ ಉತ್ಕ್ರಾಂತಿ

ಅನುಭಾವದ ಅನಂತ ಸಾಗರದಲ್ಲಿ ಈಸುಬೀಳಲು ಶರಣರು ಏಕೆ ಕರೆದರೆಂಬುದರ ಮರ್ಮವನ್ನು ಅರ್ಥಾತ್ ಮಾನವ ಉತ್ಕ್ರಾಂತಿಯ ಪರಿಪೂರ್ಣ ಉದ್ದೇಶವನ್ನು

ವಿಶದೀಕರಿಸಬೇಕು. ಭಾರತದಲ್ಲಿರುವ ಎಲ್ಲ ಧರ್ಮಗಳ ಸಾರ ಸರ್ವಸ್ವವೂ ಈ ಹಾದಿಯಿಂದ ನಡೆಯುವುದೇ ನಿಜವಾದ ಧರ್ಮಾಚರಣೆಯಾಗುವುದೆಂದು ಬೋಧಿಸಿದೆ ಎಂಬುದನ್ನು ಅಭ್ಯಾಸಪೂರ್ಣ ಮನವರಿಕೆಗಳ ಮುಖಾಂತರ ಮಾಡಿಕೊಡಬೇಕು. ವಿಚಾರಶೀಲರಿಗೆ ಈ ರಾಷ್ಟ್ರದಲ್ಲಿ ಭವ್ಯ ಆಹ್ವಾನವಿದೆ. ಕ್ರಿಯೆಯಲ್ಲಿಯೇ ಪರಮಾನಂದವಿದೆಯೆಂಬುದನ್ನರಿತ ಸ್ಥಿತಪ್ರಜ್ಞರಿಗೆ ಕ್ರಿಯೆಯು ಮೇರುಪರ್ವತದಂತೆ ಎದುರು ನಿಂತಿದೆ. ಅಂಗೀಕರಿಸುವ ಧೈರ್ಯವನ್ನು ಸಮಸ್ತ ಭಾರತೀಯರು ಸರ್ವಧರ್ಮಗಳ ಉಪಾಸಕರು ಈಗ ಧೀರರಾಗಿ ಮಾಡಬೇಕು.

ನೆಲದ ಮಕ್ಕಳಾಗಿ ನೆಲದ ಸಂಪತ್ತನ್ನು ಉಪಭೋಗಿಸುವ ಪ್ರತಿಯೊಬ್ಬ ಭಾರತೀಯನು ಈ ಹಾದಿಯಿಂದ ಪರಿಶುದ್ಧ ಧರ್ಮದ ಅರ್ಥಗ್ರಹಣದಿಂದ ಸಮರ್ಥನಾಗಿ ರಾಷ್ಟ್ರ ನಿಷ್ಠೆಗೆ ಬದ್ಧನಾಗಬೇಕು. ಈ ಪ್ರಜ್ಞೆಯ ಅಂಕುರದಿಂದಲೇ ರಾಷ್ಟ್ರ ಪುರುಷನ ಸರ್ವಾಂಗೀಣ ಸಾಮರ್ಥ್ಯವು ವಜ್ರಕಠೋರವಾಗುವುದು. ಈ ವಜ್ರ ಸಿದ್ಧಿಗೆ ಸರ್ವಧರ್ಮಗಳ ಉಪಾಸಕರು ನಮ್ರಾಂಜಲಿಗಳಾಗಿ ನಿಲ್ಲಲಿ. ಸರ್ವಧರ್ಮಗಳಲ್ಲಿರುವ ಸಾರ್ವಭೌಮ ಏಕೈಕ ಸತ್ಯವನ್ನು ಪರಿಗ್ರಹಿಸಲಿ.

– ಎಂ.ಬಿ. ಬೂದಿಹಾಳಮಠ



**[ವಿಶ್ವವಾಣಿ: ತಾ.೨೧–೮–೧೯೬೪]**

# ೨೫. ದೇಶದ ಪ್ರಾರ್ಥನಾವಸರ

ವ್ಯಕ್ತಿತ್ವವನ್ನು ಪೂರ್ಣತೆಗೊಯ್ದು ಮುಟ್ಟಿಸುವುದು ವಿದ್ಯಾಭ್ಯಾಸದ ಹಾಗೂ ಜೀವನದ ಚರಮೋದ್ದೇಶ ಎನ್ನುತ್ತದೆ–ಮನಃಶಾಸ್ತ್ರ. ಪೂರ್ಣ ವ್ಯಕ್ತಿ ಯಾರು ಎಂಬುದನ್ನು ಮಾತ್ರ ನಿಃಸಂದಿಗ್ಧವಾಗಿ ಅದು ಉದಾಹರಣೆಗಾಗಿ ಬೊಟ್ಟು ಮಾಡಿ ತೋರಿಸಿಲ್ಲ. ಅದೊಂದು ಆದರ್ಶವೆಂದೇ ಅದರ ಭಾವನೆ.

ಆದರ್ಶ ಎಂದಾದರೂ ವಾಸ್ತವವೇ? ಎಂದು ಕೇಳುವುದು ಆಧುನಿಕತೆ ಎನ್ನಿಸಿದೆ. ಅದು ಅವ್ಯವಹಾರ್ಯ ಎಂಬುದು ಈಗ ರೂಢಮೂಲ ವಿಚಾರ. ಆದುದರಿಂದ ಭಾರತದಲ್ಲಿ ಆದರ್ಶ ಶ್ರದ್ಧೆ ಅಳಿಯುತ್ತಾ ಹೋದುದನ್ನು ಶಿಕ್ಷಿತರಲ್ಲಿ ಹೆಚ್ಚಾಗಿ ಕಾಣಬಹುದಾಗಿದೆ.

ಬರ್ಟ್ರೆಂಡ್ ರಸೆಲ್ಲನಂತೆ ಸಂಶಯಗಳನ್ನು ಹೊಟ್ಟೆಯಲ್ಲಿ ಇಟ್ಟುಕೊಂಡೇ ಸರ್ವ ಶಕ್ತಿಯನ್ನು ಪ್ರಯೋಗಿಸಿ ಧ್ಯೇಯ ಸಾಧನೆಗಾಗಿ ಹೋರಾಡುವ ಪ್ರಾಮಾಣಿಕತೆ ಭಾರತದಲ್ಲಿ ಅವ್ಯವಹಾರ್ಯ. ಆತನಾದರೂ ಈಗ ಯಾವ ಜಾಗತಿಕ ಧ್ಯೇಯವನ್ನು ಸಾಧಿಸಿದನೋ ಅವನಿಗೇ ಗೊತ್ತು!

ಪೂರ್ಣತೆಯನ್ನು ಕಲ್ಪಿಸಿಕೊಳ್ಳಲು ಹೊರಟವರ ಮಾತುಗಳಲ್ಲಿರುವ ನಿಶ್ಚಯಾತ್ಮಕತೆ ಸಂಶಯಗಳನ್ನು ಹಡೆದದ್ದು ನಿಜ. ಮಾತು, ತರ್ಕ ಮುಂತಾದ ಅಭಿಪ್ರಾಯವಾಹಕಗಳು ಅಷ್ಟು ಸಮರ್ಥವೆನ್ನಿಸದೆ ಹೋದುದರಿಂದ ಇಂಥ ಪಾಡು ಮನುಷ್ಯ ಜಾತಿಗೆ ಬಂತು.

ಒಬ್ಬ ಪಾಶ್ಚಾತ್ಯ(ಫ್ರೆಂಚ್) ವಿದ್ವಾಂಸನಂತೂ ಭಾರತೀಯರು ಹೇಳಿದ ಪೂರ್ಣತೆ ಅಥವಾ ಜೀವನ್ಮುಕ್ತತೆ ಎಂದರೆ ಸಂಪೂರ್ಣ ಪ್ರಜ್ಞಾರಹಿತವಾಗುವುದು ಎಂದು ಬರೆದಿದ್ದಾನೆ. 'ನಿಷ್ ಪ್ರಪಂಚ' ಎಂದರೆ ಅವನಿಗಾದ ಅರ್ಥ ಅದು. ಬ್ರಹ್ಮಜ್ಞಾನಿಗೆ ಲೋಕಜ್ಞಾನ ಇರದು, ಬ್ರಹ್ಮ ಎಂದರೆ ಶೂನ್ಯ–ಎಂದು ಅವನು ಊಹಿಸಿದ.

ಇಂದಿನ ಮಾನಸಶಾಸ್ತ್ರದ ಪರಿಭಾಷೆಯಲ್ಲಿ ವ್ಯಕ್ತಿ ಸ್ವಾರ್ಥದಿಂದ ಮುಕ್ತವಾಗುವುದೇ ಮುಕ್ತಿ ಎನ್ನಬಹುದು. ವ್ಯಕ್ತಿಯು ತನ್ನ ಪ್ರತ್ಯೇಕ ಅಸ್ತಿತ್ವಕ್ಕೆ ಅತಿ ಹೆಚ್ಚು ಪ್ರಾಧಾನ್ಯವನ್ನು ಕೊಟ್ಟುಕೊಂಡಿರುವನು. ಅದರಿಂದಲೇ ಕೆಲ ಮುಕ್ತಿವಾದಿಗಳು ಸತ್ತ ಮೇಲಿನ ಮುಕ್ತಾವಸ್ಥೆಯಲ್ಲೂ ವ್ಯಕ್ತಿಯ ಪ್ರತ್ಯೇಕ ಸತ್ತೆ ಉಳಿಯುತ್ತದೆ–ಎಂದು ಸಾಧಿಸಿದ್ದಾರೆ. ವ್ಯಕ್ತಿ ಸತ್ತಾ ಮೋಹ ಅಷ್ಟು ಗಾಢವಾದದ್ದು.

ಲೋಕವ್ಯಕ್ತಿಯು ಶರೀರ, ಇಂದ್ರಿಯ, ಮನಸ್ಸು ಮತ್ತು ಆವರಣಗಳ ಸಮನ್ವಯದ ಫಲ; ಸತ್ತು ಹೋದ ವ್ಯಕ್ತಿಗೆ ಶರೀರ–ಇಂದ್ರಿಯಗಳಿಲ್ಲ; ಮನಸ್ಸು–ಬುದ್ಧಿ, ಅಹಂಕಾರ, ಚಿತ್ತ, ಇಂದ್ರಿಯಗಳು ಮತ್ತು ಅವಯವಗಳಿಂದ ಕೂಡಿದ ಶರೀರ–ಇವುಗಳ ಮೇಲೆ ಪ್ರಭುತ್ವ ಇದೆಯೆಂದು ಜೀವ ಇದ್ದಾಗ ತಿಳಿದುಕೊಳ್ಳುವದು ಯಜಮಾನತನದ ಸ್ಥಾಯಿಪ್ರಜ್ಞೆ–

ಎಂದು ಇಂದಿನ ಸಾಮಾನ್ಯ ಭಾಷೆಯಲ್ಲಿ ವಿವರಿಸಬಹುದು. ನಿಶಿತ ಬುದ್ಧಿಯುಳ್ಳ ಮನಸ್ಸಿಗೆ ತನ್ನ ಈ ಪ್ರಭುತ್ವದ ಅಲ್ಪತೆ ಬಹುಬೇಗ ಗೊತ್ತಾಗುತ್ತದೆ. ಸತ್ತ ಮೇಲೆ ಸುಖಭೋಹ್ಯ. ಸತ್ತ ಮೇಲೆ ಮನಸ್ಸು ಇರುತ್ತದೆಯೇ? 'ವಾಸನಾ' ರೂಪದಲ್ಲಿ ಇದ್ದೇ ಇರುತ್ತದೆ. ನಮ್ಮ ಮನಸ್ಸು ಕೆಲಸಂಗತಿಗಳನ್ನು ಮರೆತು ಬಿಟ್ಟಾಗ ಅವು ನಮ್ಮ ಮನಸ್ಸಿನಲ್ಲಿ ಇರುವ ಸ್ವರೂಪವೇ ವಾಸನಾ ಸ್ವರೂಪ. ಅದಕ್ಕೆ ವ್ಯಯವೊಂದೇ ನಾಶವಲ್ಲ, ಪರಿತ್ಯಾಗವೂ ನಾಶ; ಇನ್ನೊಂದು ಕಾರಣ ಅದರ ನಾಶಕ್ಕೆ ಇಲ್ಲ. ವ್ಯಯ–ತ್ಯಾಗಗಳಿಗೆ ಕರ್ತ ಬೇಕೇಬೇಕು. ಅದರ ಮೇಲಿನ ಅಭಿಮಾನದ ಪ್ರಜ್ಞೆಯೇ ಅಂಥ ಕರ್ತ. ಅಭಿಮಾನದ ಪ್ರಜ್ಞೆ ಮರೆತುಹೋದೀತು, ನಾಶವಾಗದು. ಆದುದರಿಂದ ಅದನ್ನು ಅದೇ ತ್ಯಾಗ ಮಾಡಬೇಕು; ಅರ್ಥಾತ್ ವ್ಯಕ್ತಿತ್ವದ ದೇಶ–ಕಾಲ ಸೀಮೆಗಳನ್ನದು ಧಿಕ್ಕರಿಸಿ ನಿಲ್ಲಬೇಕು. ಇಂಥ ಮನಃಸ್ಥಿತಿ ಒಂದೇ ಆದರ್ಶ(Scientific Attitude of mind) ವೈಜ್ಞಾನಿಕ ಮನೋಧರ್ಮ ಎಂಬುದು ಬಹಳ ಜನರಿಗರಿಯದು. ಪೂರ್ವಗ್ರಹಗಳೆಲ್ಲವೂ ವ್ಯಕ್ತಿಪ್ರಜ್ಞೆಯ ಕೇಂದ್ರವನ್ನು ಸುತ್ತಿರುವಂಥವುಗಳು. ವ್ಯಕ್ತಿ ಪ್ರಜ್ಞೆ ಜಾಗರಿತವಾಗಿ ಇರುವವರೆಗೆ ಬರ್ಟ್ರೆಂಡ್ ರಸೆಲ್ಲನೂ ಪೂರ್ವಗ್ರಹರಹಿತತೆಯ ಪೂರ್ಣತೆಯನ್ನು ಮುಟ್ಟಲಾರ; ಮುಟ್ಟಿದ್ದೇನೆ ಎಂದರೆ ಅದು ಸುಳ್ಳು. ರಸಿಕರ ರಸಪರವಶತೆಯು ಅಂಥ ಪರವಶತೆಯ ಅವಧಿಯಲ್ಲಿ ವ್ಯಕ್ತಿತ್ವ ಪ್ರಜ್ಞಾರಹಿತತೆಯ ಅತಿ ಹೆಚ್ಚಿನ ಅಂಶವನ್ನು ಹೊಂದಿರುವುದು ಅನುಭವದ ಪ್ರಮಾಣ. ನಿರ್ಗುಣತೆ, ಪೂರ್ವಗ್ರಹ ರಹಿತತೆ, ವೈರಾಗ್ಯ, ನಿಷ್ಪಕ್ಷಪಾತತೆಗಳ ಅಂತಃಸೂತ್ರವಾದ ಭಾವ ಒಂದೇ ಎಂಬುದು ಗಮನಾರ್ಹ; ಈ ಅಂಶವನ್ನು ಮರೆತಾಗ ವೈರಾಗ್ಯವು 'ಲೋಕತುಚ್ಛೀಕರಣ' ಎನ್ನಿಸಿಕೊಂಡಿತು. ನಿರ್ಗುಣತೆ ಶೂನ್ಯತೆಯೆಂದು ಅರ್ಥಯಿಸಲ್ಪಟ್ಟಿತು. ಈ ಅಪಾರ್ಥಗಳಿಗೆ ಕಾರಣ ಅಂಥ ಅರ್ಥಕಾರರಲ್ಲದೆ ಮೂಲ ಕಲ್ಪನಾ ಶಿಲ್ಪಿಯಾದ ಋಷಿಯಲ್ಲ. 'ಮಾಯೆ, ಮಿಥ್ಯೆ'ಗಳನ್ನು ಶೂನ್ಯವೆಂದು ಅರ್ಥಯಿಸಿದವರ ಕಥೆಯೂ ಈ ರೀತಿಯದೇ. 'ಪೂರ್ಣಶೂನ್ಯ' ಎಂಬುದು ಕೇವಲ ಶಬ್ದ ಮಾತ್ರ ಅಸ್ತಿತ್ವವುಳ್ಳದ್ದೆಂಬುದನ್ನು ಹೊಸದಾಗಿ ಹೇಳಬೇಕೇ? ಪೂರ್ಣವಾದ(ಸರ್ವತಂತ್ರ ಸ್ವತಂತ್ರವಾದ) ಸುಳ್ಳನ್ನು ಯಾರೂ ಹೇಳಲಾರರು ಎಂಬುದೂ ತಲೆ ಓಡಿಸಿ ಪರೀಕ್ಷಿಸಬೇಕಾದ ಸಂಗತಿಯಲ್ಲವೇ?

ವ್ಯಕ್ತಿಯು ವಿಕಾಸವನ್ನು ಪೂರ್ಣವಾಗಿ ಹೊಂದಿದರೆ ಅದರ ವ್ಯಕ್ತಿತ್ವದ ಗಡಿಮಿತಿಗಳು ಅಳಿದು ಅದಕ್ಕೆ ವಿಶ್ವತ್ವ ಬರುತ್ತದೆ. ಅದು ವಿಶ್ವಜನೀನವಾಗುತ್ತದೆ; ಜಗದ್ಧಿತವನ್ನು ನಿತ್ಯವೂ ಸಾಧಿಸಲು ಹೊರಟ ಶ್ರೀಕೃಷ್ಣನಾಗುತ್ತದೆ. ಒಂದು ವಿಶ್ವವ್ಯಾಪಕ ಶಕ್ತಿಯಾಗುತ್ತದೆ; ದೈಹಿಕ ನಾಮರೂಪ–ಆವರಣಗಳನ್ನು ಗೌಣಗೊಳಿಸಿಕೊಳ್ಳುತ್ತದೆ. ದೇಹಾಧಿಗಳಿಂದಾದ ಸಂಕುಚಿತತೆಯಿಂದ ಮುಕ್ತವಾಗುವುದೇ ಮುಕ್ತಿ, ಬಿಡುಗಡೆ, ಸ್ವಾತಂತ್ರ್ಯ, ಅನಿರ್ಬಂಧ, ದೇಹಾಭಿಮಾನ, ಮತಾಭಿಮಾನ, ರೂಪಾಭಿಮಾನ, ಉಪಪ್ರದೇಶಾಭಿಮಾನ, ಕುಟುಂಬಾಭಿಮಾನ, ಜಾತ್ಯಭಿಮಾನ, ಶಬ್ದಾಭಿಮಾನ, ಅರ್ಥಾಭಿಮಾನಗಳೆಲ್ಲವೂ ಅಸೀಮವಾದರೆ, ವಿಶ್ವವ್ಯಾಪಕವಾದರೆ, ಅನಂತವಾದರೆ ಸಂಕುಚಿತವೆನ್ನಿಸುವುದಿಲ್ಲ. ಆದರೆ

ದೇಹವು ವಿಶ್ವದ ಚರಾಚರಗಳ ಹಿತವನ್ನು ಒಳಗೊಂಡಿಲ್ಲ, ನಾಮವು ಸರ್ವನಾಮವಾಗಿಲ್ಲ, ರೂಪ ಸರ್ವರೂಪ ಗ್ರಾಹಕವಾಗಿಲ್ಲ. ಪ್ರದೇಶ–ಉಪಪ್ರದೇಶಗಳು ಜಗದಗಲ ಹಬ್ಬಿಲ್ಲ, ಕುಟುಂಬ ವಿಶ್ವಕುಟುಂಬವಾಗಿಲ್ಲ, ಜಾತಿ ಸರ್ವಜಾತಿಗಳನ್ನು ಒಳಗೊಂಡಿಲ್ಲ. ಶಬ್ದ ಸರ್ವ ಶಬ್ದಗಳ ಪ್ರತಿನಿಧಿಯಾಗಿಲ್ಲ, ಅರ್ಥವು ಸರ್ವಾರ್ಥ ಸಂಬಂಧಕ ಸೂತ್ರವಾಗಿಲ್ಲ ಎಂಬಂತಿರುವುದರಿಂದ ಅಂಥ ಅಭಿಮಾನಗಳನ್ನು ಬಂಧಗಳೆಂದು ಗಣಿಸಲಾಗಿದೆ. ಇಂಥ ಬಂಧನಗಳನ್ನು ಹರಿದೊಗೆಯಲು ಪ್ರಯತ್ನವನ್ನು ಮಾಡಲು ಪ್ರೇರಿಸುವ ಧ್ಯೇಯವನ್ನು ಪ್ರಧಾನವನ್ನಾಗಿ ಇಟ್ಟುಕೊಳ್ಳದ ಶಿಕ್ಷಣವು ರಾಷ್ಟ್ರೀಯವಾಗುವುದು ಹೇಗೆ?

ಶಿಕ್ಷಣವು ರಾಷ್ಟ್ರೀಯವಾಗಲು ಶಿಕ್ಷಕರೂ ಅವರನ್ನು ನಿಯಮಿಸುವವರೂ ರಾಷ್ಟ್ರೀಯವಾಗಿರಬೇಕು. ಅವರಿಂದು ಅಂತಾಗಿಲ್ಲ. ರಾಷ್ಟ್ರೀಯತೆ ಎಂದರೆ 'ಸ್ವಾರ್ಥ' ಎಂದು ನೇತೃಗಳನೇಕರು ನಂಬಿದ್ದಾರೆ. ಅವರ ಶಬ್ದಾರಾಧನೆಯನ್ನು ಮಂಕರು 'ಅರ್ಥಾರಾಧನೆ' ಎಂದು ಒಂದು ಅರ್ಥದಲ್ಲಿ ನಂಬಿದ್ದಾರೆ. ಈ ಅರ್ಥದ ನಂಬಿಗೆ ಇರುವವರೆಗೆ ಮತದಾರರಿಂದ ದೇಶ ಹಿತದ ಸಾಧನೆ ಅಸಾಧ್ಯ. ಅವರ ಮತದಾನವು ಶಿವ ಭಸ್ಮಾಸುರನಿಗಿತ್ತ ವರವಾಗದೆ ಉಳಿಯದು.

ಜಗತ್ತಿನ ವಿಶಾಲತೆಯ ಆನುಭವಿಕ ಸಿದ್ಧಿಗೆ ರಾಷ್ಟ್ರೀಯತೆಯ ವಿಶಾಲತೆಯ ಸಿದ್ಧಿಯು ಮೊದಲ ಮೆಟ್ಟಿಲು. ಹಾಗಲ್ಲವಾದರೆ ಅದೊಂದು ಬಂಧನ. ಕುಟುಂಬ–ಜಾತಿಗಳ ಪ್ರೇಮಗಳು ಅಂಥ ಮೆಟ್ಟಿಲುಗಳಾಗದುದರಿಂದ ಅವಿಂದು ಬಹಳ ಜನರಲ್ಲಿ ಅರಾಷ್ಟ್ರೀಯ(Antinational)ವಾಗಿವೆ. ಈ ಬಂಧನಗಳಿಂದ ಮುಕ್ತಗೊಳಿಸದ ವಿದ್ಯೆ ವಿದ್ಯೆಯೇ? 'ಸಾವಿದ್ಯಾಯಾ ವಿಮುಕ್ತಯೇ' ಎಂಬುದು ಸರ್ವತ್ರ ಸತ್ಯವಲ್ಲವೇ? ಇನ್ನು ಬಂಧವನ್ನೇ ಮುಕ್ತಿಯೆಂದು ಆರಾಧಿಸುವವರ ಶಬ್ದಕೋಶವು ದೂರತಃ ವಂದನೀಯ! ಅಂಥ ವಂದ್ಯರನ್ನೇ ಹೆಚ್ಚಾಗಿ ಬೆಳೆಯಿಸುತ್ತಿರುವಾಗ ಅನ್ನ ವಸ್ತ್ರಾದಿಗಳ ಅತಿಮೌಲ್ಯ–ಅಭಾವಗಳು ದೇಶದಲ್ಲಿ ಹೆಚ್ಚುತ್ತ ಹೋಗಿರುವುದು ಆಶ್ಚರ್ಯವೇ? ಈ ಅಜ್ಞಾನ ಅಂಧಕಾರದಿಂದ ಮತದಾರರ ಕಣ್ಣನ್ನು ತೆರೆಯಿಸುವವನೇ ಸದ್ಗುರು. ಅವನೇ ಸಂನ್ಯಸ್ತ, ಮನಃಸಿದ್ಧಿ ಸಂಪನ್ನ. ಅವನ ಗುರುತ್ವಕ್ಕೆ ಜನ ಇಂದು ತಲೆಬಾಗಿದರೆ ಒಳಿತು.

ಗಾಂಧಿ ಜಯಂತಿಯ ಆಚರಣೆಯಂತೆಯೇ ಪರಮಪೂಜನೀಯ ಶ್ರೀಧರ ಸ್ವಾಮಿಗಳ ಜಯಂತಿಯ ಆಚರಣೆಯೂ ಪ್ರದರ್ಶನವಷ್ಟೇ ಆಗುವುದಾದರೆ ಇದೇನೋ ಭಾರತಕ್ಕೆ ಶಾಪಗ್ರಸ್ತ ಕಾಲವೆಂದು ತಿಳಿಯಬೇಕಾದೀತು. ಗಾಂಧಿ ತತ್ವಗಳ ವ್ಯಾಖ್ಯಾನ ಆಚರಣೆಗಳ ಸ್ವರೂಪ ಏನಾಗಿದೆ ಎಂಬುದು ಅನುಭವ ಗೋಚರವಾಗಿದೆ. ಅದಕ್ಕೆ ಸಾರ್ವಜನಿಕ ಸಾಕ್ಷಿ ಇದೆ. ಆದರೂ ಪಕ್ಷಾಂಧರು ಗಾಂಧಿ ನಾಮೋಚ್ಚಾರಣೆಯನ್ನು ಆಗೀಗ ಮಾಡುತ್ತ ಹರಕೆಯ ದೇವರಿಗೆ ಮರದ ಜಾಗಟೆಯ ಸೇವೆಯನ್ನು ಸಲ್ಲಿಸುತ್ತಿರುವುದು ಸರ್ವವಿದಿತ. ಇದು ರಾಷ್ಟ್ರೀಯ ಶಿಕ್ಷಣ ಸಾಂಗೋಪಾಂಗವಾಗದಂತೆ ರಾಜಕೀಯ ನಡೆದುದರ ಫಲ.

ಮಹಾತ್ಮರ ಆತ್ಮಗಳು 'ಮಹಾ' ಆಗಿರುತ್ತವೆ. ಅವುಗಳ ಆಳ–ಅಗಲಗಳತ್ತ ಲಕ್ಷ್ಯ ಹಾಕದ ವೇಷಧಾರಿಗಳು ದಿನಾಚರಣೆ–ಸಪ್ತಾಹಾಚರಣೆಗಳನ್ನು ಹೆಚ್ಚಾಗಿ ಶಾಲಾ ಬಾಲಕರಿಂದ ಮತ್ತು ಪ್ರಾಥಮಿಕ ಶಿಕ್ಷಕರಿಂದ ಬಲಾತ್ಕಾರಪೂರ್ವಕ ಮಾಡಿಸುತ್ತ ಬಂದ ಉದಾಹರಣೆಗಳನ್ನು ಕಂಡರೆ ಸದ್ಗುರು ಬಂದು ಬಾಲಕ್ಕೆ ದಬ್ಬೆ ಕಟ್ಟದ ಹೊರತು ಲೋಕದ ಬಾಲ ನೆಟ್ಟಗಾಗದು ಎಂದು ತೋರುತ್ತದೆ. 'ಎಂದೂ ಓದದವನು ಅಮಾವಾಸ್ಯೆ ಬೂದಿಯ ದಿನ ಓದಿದ' ಎಂಬ ಗಾದೆಯಂತೆ ಇಡಿ ವರ್ಷದಲ್ಲಿ ಒಂದು ದಿನ ನವಿಲುಗಿರಿ ಕಟ್ಟಿಕೊಂಡ ಕಾಗೆಯಂತೆ ಕುಣಿದು ಮುಗ್ಧಸ್ತೋಮವನ್ನು ನಿಷ್ಪ್ರತೀಕಾರ ಸ್ಥಿತಿಗೆ ಇಳಿಸಿ ಹೋಗುತ್ತಿರುವುದು ಅತ್ಯಂತ ಕರುಣಾಜನಕವಾದುದು. ಮಹಾತ್ಮರ ತಪಸ್ಸೊಂದೇ ಇಂಥ ಪ್ರದರ್ಶನ ಜಾಲದಿಂದ ದೇಶವನ್ನು ಪಾರುಮಾಡಬಲ್ಲದು. ಇಂಥ ನಟನೆಯನ್ನೂ ಮಾಡಿದ ಕೆಲ ಸಂಘ–ಸಂಸ್ಥೆಗಳೂ 'ಹತ್ತರ ಕೂಡ ಹನ್ನೊಂದು ಪರಿಶೆಯ ಕೂಡ ಗೋವಿಂದ' ಎಂಬಂತೆ ಆಗೀಗ ಮಹಾತ್ಮರ ಪ್ರಶಂಸಾಕೋಶಕ್ಕೆ ಅದರ ಸೇವೆಯನ್ನು ಸಲ್ಲಿಸುತ್ತಿವೆ.

ಶಕುಂತಲೆ ಭರತಮಾತೆ, ಅವಳಿಗೆ ದುರ್ವಾಸನ ಶಾಪ ತಗುಲಿತ್ತು. ಅದರ ಪರಿಹಾರ ಅವನ ದಯೆಯಿಂದಲೇ ಕೊನೆಗೆ ಲಭಿಸಿತು. ಹಾಗೇ ಈಗ ನಮ್ಮ ದೇಶದ ಮಹಾತ್ಮರು ಯಾರ ಮೂಲಕವಾದರೂ ಉಂಗುರ ಲಭಿಸಿದಂಥ ಸ್ಮರಣ ತಂತ್ರದಿಂದ ಸಮಾಜಧುರೀಣರಲ್ಲಿ ಸ್ಫೂರ್ತಿಯನ್ನೂ ಕರ್ತವ್ಯಜ್ಞಾನವನ್ನೂ ಜಾಗರಿತಗೊಳಿಸಬೇಕು. ಇಲ್ಲವಾದರೆ ದರಗಳಿಗೂ ತುಟ್ಟಿಭತ್ಯೆಗಳಿಗೂ ಪೈಪೋಟಿ ನಡೆಯುತ್ತ ಹೋಗಿರುವಂತೆ ನಮ್ಮ ಸಂರಕ್ಷಣ ಶಕ್ತಿಗೂ ವಿದೇಶೀಯರ ಆಕ್ರಮಣ ಶಕ್ತಿಗೂ ಬೆಳವಣಿಗೆಯಲ್ಲಿ ಪೈಪೋಟಿ ಉಂಟಾಗಿ ಅನರ್ಥ ಉಂಟಾದೀತು. ಆದುದರಿಂದ ಸಕರ್ಮ ಪ್ರಾರ್ಥನೆಯನ್ನು ನಾವೆಲ್ಲ ಮಹಾತ್ಮರಲ್ಲಿ ಮಾಡೋಣ.



**['ಶ್ರೀಧರ ಸಂದೇಶ']**

# ೨೬. ಭಾರತೀಯ ಪುರಾತನ ನಾಗರಿಕತೆ

ಡಾನ್ಯೂಬ್‌ನದಿಯ ದಂಡೆಯಿಂದ, ಯುಕ್ರೇನಿನ ದಕ್ಷಿಣಭಾಗದಿಂದ ಅಥವಾ ಮಧ್ಯ ಏಶಿಯದಿಂದ ಆರ್ಯರು ಹೊರಟು ಸುಮಾರು ಕ್ರಿ.ಪೂ.೪೫೦೦ರ ಹೊತ್ತಿಗೆ ಭಾರತವನ್ನು ತಲುಪಿದರೆಂದು ಇತಿಹಾಸಕಾರರು ನಂಬುತ್ತಾರೆ. ಭಾರತದಲ್ಲಿ ಆಗ ವಾಸಿಸುತ್ತಿದ್ದ ದ್ರಾವಿಡಕುಲದವರೊಡನೆ ಕ್ರಮೇಣ ಅವರು ಬೆರೆತು ದೇಶದ ಆದ್ಯಂತವಾಗಿ ಪಸರಿಸಿದರು. ಅವರ ಇತಿಹಾಸದ ಪ್ರಾರಂಭವೇ ಭಾರತೀಯ ಚರಿತ್ರೆಯ ಆರಂಭವೆಂದು ನಾವು ಇಂದು ತಿಳಿಯಬೇಕಾಗಿದೆ. ಮೊಹೆಂಜೊದಾರೊ ಹರಪ್ಪಗಳಲ್ಲಿ ಕಂಡುಬರುವ ನಾಗರಿಕತೆಯ ಅವಶೇಷಗಳ ಮೇಲೆ ಕೊನೆಯ ತೀರ್ಪಿನ್ನೂ ಹೊರಬಿದ್ದಿಲ್ಲ; ಅವುಗಳ ಪೂರ್ಣಾರ್ಥವಿನ್ನೂ ಸ್ಪಷ್ಟವಾಗಿಲ್ಲ.

ಭಾರತೀಯ ಎಂಬ ಪದ ಆರ್ಯಪದ; ಸಂಸ್ಕೃತಪದ. ಭರತನೆಂಬ ಚಕ್ರವರ್ತಿ ಅತಿ ಪ್ರಾಚೀನಕಾಲದಲ್ಲಿ ಆಳುತ್ತಿದ್ದನೆಂಬ ಕಾರಣದಿಂದ ಈ ದೇಶಕ್ಕೆ ಭಾರತ ಎಂಬ ಹೆಸರು ಬಂದಿತೆಂದು ತಿಳಿಯಲಾಗುತ್ತದೆ. ಆರ್ಯರ ಜೀವನೇತಿಹಾಸದ ಪರಿಚಯ ನಮಗಾಗುವುದು ಚತುರ್ವೇದಗಳಿಂದ. ಪ್ರಾಚೀನತಮವಾದ ಋಗ್ವೇದದ ಕಾಲದಲ್ಲಿ ಒಂದು ವಿಧದ ಪ್ರಾಥಮಿಕ ಸಾಮ್ಯವಾದದ ತಳಹದಿಯನ್ನು ಆರ್ಯಸಮಾಜ ಅವಲಂಬಿಸಿತ್ತೆಂದು ಹೇಳುತ್ತಾರೆ. ಒಂದು ತರಹದ ಪ್ರಜಾರಾಜ್ಯ(ಗಣರಾಜ್ಯ) ಆಗ ರೂಢಿಯಲ್ಲಿತ್ತೆಂದು ನಂಬಲುನಿದರ್ಶನಗಳಿವೆ. ರಾಜನನ್ನು ಅವರದೇ ಆದ ಒಂದು ರೀತಿಯಿಂದ ಆರಿಸುತ್ತಿದ್ದ ಕಾಲವೊಂದಿತ್ತು. 'ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ । ಉತ್ಪಥಪ್ರತಿಪನ್ನಸ್ಯ ನ್ಯಾಯ್ಯಂ ಭವತಿ ಶಾಸನಂ' ಎಂಬ ಮಹಾಭಾರತದ ನ್ಯಾಯದಂತೆ ಧರ್ಮಭ್ರಷ್ಟರಾದ ರಾಜರನ್ನು ಸ್ಥಾನಚ್ಯುತಿಗೊಳಿಸಿದ್ದಕ್ಕೆ ಉದಾಹರಣೆಗಳು ಸಿಕ್ಕುತ್ತವೆ.

ದೇಶದ ಫಲವತ್ತೆ, ಜನಸಂಖ್ಯೆಯ ಪರಿಮಿತಿ ಇವುಗಳ ದೆಸೆಯಿಂದ ಆಸೇತುಹಿಮಾಚಲವಾಗಿ ಬದುಕುತ್ತಿದ್ದ ಭಾರತೀಯರು ಗಾಂಧಿಯವರ ಕನಸಿನ ರಾಮರಾಜ್ಯವನ್ನು ಅನುಭವಿಸುತ್ತಿದ್ದರೆನ್ನಬಹುದು. ಅಲ್ಲಿ ಸರಕಾರದ ಆಡಳತೆಯ ಕ್ಷೇತ್ರ ಬಹಳ ಪರಿಮಿತವಾಗಿತ್ತು. ಸಂರಕ್ಷಣೆ, ವಿದೇಶ ವ್ಯವಹಾರ ಮತ್ತು ಆ ಖರ್ಚಿಗೆ ಬೇಕಾದ ಕಂದಾಯ ವಸೂಲಿ ಇಷ್ಟೇ ರಾಜಕಾರ್ಯವಾಗಿತ್ತು. The government which rules the least rules the best–ಅತ್ಯಲ್ಪ ನಿಯಂತ್ರಣವನ್ನು ಇಟ್ಟು ಆಳುವ ಸರಕಾರ ಅತ್ಯುತ್ತಮ ಎಂಬ ಮಾತು ಆಗ ಸಾರ್ಥಕವಾಗಿತ್ತು.Decentralisation of power and industries(ಅಧಿಕಾರ ಮತ್ತು ಉದ್ಯಮಗಳ ವಿಕೇಂದ್ರೀಕರಣ) ಅಂದಿನ

ಪಾಳೆಯಗಾರಿಕೆಯಲ್ಲಿ ಎಲ್ಲೆಲ್ಲೂ ಕಾಣಬಹುದಾಗಿತ್ತು. ಚಿಕ್ಕಪುಟ್ಟ ಯಂತ್ರೋಪಕರಣಗಳ ನೆರವಿನಿಂದ ಕೈಗಾರಿಕೆ ಬೆಳೆಯುತ್ತಿದ್ದ ಅವಧಿಯದು.

'ಪೌರುಷರಸಃ ಸ್ತ್ರೀಣಾಂ ಕುತಃಸಿಧ್ಯತಿ?' ಎಂಬ ಜಯದೇವನ ಕಾವ್ಯವಾಣಿಯಂತೆ ಮನೆಗೆ ತಂದೆ ಯಜಮಾನ, ಹೆಂಡತಿಗೆ ಅವನ ಜೀವನದಲ್ಲಿ ಸಮಪಾಲು; ಅವಳು ಅರ್ಧಾಂಗಿ, ಗೃಹೇಶ್ವರಿ; ನರಸ್ಯಧರ್ಮ್ಯಾನಾರೀ–ಅವಳಿಗೆ ಗಂಡನ ಧರ್ಮವೇ ಧರ್ಮ, ಅವನ ಸಹಭಾಗಿತ್ವ ಅವಳದು. ಇದು ಆರ್ಯರ ಕುಟುಂಬದ ಲಕ್ಷಣ. ಧರ್ಮ, ಅರ್ಥ, ಕಾಮ, ಮೋಕ್ಷಗಳು ಅವರ ಜೀವನದ ಧ್ಯೇಯಗಳು–ಧರ್ಮ ಮೊದಲನೆಯ ಸಾಧ್ಯ; ಮಿಕ್ಕವು ಧರ್ಮದಿಂದ ಅನಪೇತವಾಗಿಯೇ ಸಾಧಿಸಿಕೊಳ್ಳಲ್ಪಡತಕ್ಕವು. ಅದರಿಂದಲೇ ಭಾರತ ಆಧ್ಯಾತ್ಮಿಕತೆಗೆ ಹೆಸರಾಯಿತು. ಅಂದಿನ ಕಾಲದಲ್ಲಿ ಆರ್ಯ ವಿದ್ವಾಂಸರ(ಋಷಿಗಳ) ವಿಚಾರಶಕ್ತಿ ಬಹಳ ತೀಕ್ಷ್ಣವಾದುದಾಗಿತ್ತು. ಅವರು ಬರೆದ ಪುರುಷಸೂಕ್ತ ಇಂದಿಗೂ ಜಗತ್ತಿನ ಜನನ ಮತ್ತು ಜೀವನದ ವಿಶ್ವವ್ಯಾಪಿಯಾದ ಕಲ್ಪನೆಗೆ ಬೀಜರೂಪವಾಗಿ ಉಳಿದಿದೆ. ಮುಂದೆ ಅರಳಿ ಮಘಮಘಿಸಿದ ಉಪನಿಷತ್ತುಗಳೆಂಬ ಗ್ರಂಥಗಳ Intellectualism ಬೌದ್ಧಿಕ ಸಿದ್ಧಾಂತಕ್ಕೆ ಋಗ್ವೇದದ ಹಲವಾರು ಸೂತ್ರಗಳು ಆಧಾರಗಳಾಗಿವೆ. ಮನುಷ್ಯತ್ವದ ಪ್ರಗತಿಯ ಮುಂದಿನ ಹೆಜ್ಜೆ ದೇವತ್ವ ಎಂಬುದನ್ನು ಉಪನಿಷತ್ತುಗಳು ಸಾರಿದವು. 'ಆತ್ಮವಂತ'ರಾಗುವುದೇ ಮನುಷ್ಯರ ಚರಮಧ್ಯೇಯ ಎಂಬ ಅತಿಪ್ರಾಚೀನವಾದರೂ ಅತಿನವೀನವೆನಿಸುವ ಹಿಮಾಲಯೋತ್ತುಂಗವಾದ ವಿಚಾರ ಅವರ ಮಿದುಳಿಗೆ ಹೊಳೆದಿತ್ತೆಂದರೆ ಇಂದಿನ ಮಹಾವಿಜ್ಞಾನಗಳನ್ನು ಮೀರಿಸಿದ ಜೀವನ ವಿಜ್ಞಾನ, ಜಾಗ್ರತಿಕ ಜೀವನದ ಮೌಲ್ಯ ವಿವೇಕ, ಚರಾಚರಗಳ ಬಾಳಿನ ಆತ್ಯಂತಿಕವಾದ ಬೆಲೆಯ ಜ್ಞಾನ ಅವರಿಗೆ ಗೊತ್ತಿತ್ತೆಂದ ಹಾಗಾಗಲಿಲ್ಲವೆ?

ಆದರೆ ಎಲ್ಲ ಕಾಲದಲ್ಲಿಯೂ ಬುದ್ಧಿವಂತರು ಅಲ್ಪಸಂಖ್ಯರೇ. ಋಷಿತ್ವವನ್ನು ಪಡೆದ ಜ್ಞಾನಿಗಳು ಅರಣ್ಯಜೀವನ ನಡೆಸುತ್ತ ದೂರದಿಂದಲೇ ಲೌಕಿಕರ ಮೇಲೆ ಪ್ರಭಾವವನ್ನು ಬೀರುತ್ತಿದ್ದರು. ಅವರೇ ಇಂದಿನ ಬ್ರಾಹ್ಮಣರ ಮೂಲಪುರುಷರು; ಭಾರತದ ಸನಾತನ ಸತ್ಯದ್ರಷ್ಟಾರರು. ಆಧುನಿಕ ತತ್ವಜ್ಞಾನ, ಸಮಾಜ ವಿಜ್ಞಾನ, ಮನೋವಿಜ್ಞಾನಗಳು ಇನ್ನೂ ಬಿಡಿಸಲಾರದ ಸಮಸ್ಯೆಗಳಿಗೆ ಮೌಲಿಕ ಉತ್ತರಗಳನ್ನು, ಮೂಲಭೂತ ಇತ್ಯರ್ಥಗಳನ್ನು ಕೇವಲ 'ಶ್ರೋತವ್ಯ, ಮಂತವ್ಯ, ನಿಧಿಧ್ಯಾಸಿತವ್ಯ' ಪದ್ಧತಿಯಿಂದ ಕಂಡುಹಿಡಿದ Rational Brain (ವಿಚಾರಪರ ಮಿದುಳು) ಅವರ ಸ್ವತ್ತಾಗಿತ್ತು. ಇಂದಿನ ರಾಮಕೃಷ್ಣ ಪರಮಹಂಸರು, ರಮಣಮಹರ್ಷಿಗಳು, ಜೀವಂತ ವೇದಾಂತಿಗಳಾದ ಅರವಿಂದರು ಅಂಥವರ ಮಹಾವಾಕ್ಯಗಳಿಂದಲೇ ಸ್ಫೂರ್ತಿಪಡೆದವರೆಂದರೆ ಹೆಚ್ಚೇನು ಹೇಳಬೇಕು?

ಸಾಮಾನ್ಯರು ಯಾವ ಕಾಲದಲ್ಲಾದರೂ ಸಾಮಾನ್ಯರೇ. ಅವರ ಗ್ರಾಮ, ಉಪನಗರ, ನಗರಗಳ ಜೀವನ ಕ್ರಮ ಲೌಕಿಕ ರೀತಿಯದೇ ಆಗಿತ್ತು. ಆದರೆ ಪೂರ್ವೋಕ್ತ ಆರಣ್ಯಕರ ಮಹಾಪ್ರಭಾವದ ದೆಸೆಯಿಂದ ಅವರಾದರೂ ವರ್ಣಾಶ್ರಮ ಪದ್ಧತಿಯನ್ನು ಜೀವನ

ವ್ಯವಸ್ಥೆಯನ್ನಾಗಿ ಸ್ವೀಕರಿಸಿದ್ದರು. ಶ್ರಮವಿಭಜನೆ(Division of Labour) ಮತ್ತು ಅನುಭವದ ಆಧಾರದ ಮೇಲಿನ ಆತ್ಮವಿಕಾಸ ಆ ಪದ್ಧತಿಯ ಜೀವಾಳವಾಗಿತ್ತು. ಅವರ ಪಿತೃಪ್ರಧಾನವಾದ ಸಂಯುಕ್ತ ಕುಟುಂಬ ಪದ್ಧತಿಯು(Patriarchical Joint Family System) ಸಣ್ಣ ಪ್ರಮಾಣದ ಸಾಮ್ಯವಾದಿ ಕುಟುಂಬವೇ ಆಗಿತ್ತು.ಕುಟುಂಬದ ಪ್ರತಿಯೊಂದು ವ್ಯಕ್ತಿಯೂ ಯಥಾಶಕ್ತಿ ದುಡಿಯುವುದು, ಯಥಾವಶ್ಯಕತೆ ಪಡೆಯುವುದು, ಗಂಡಸರು ಯೋಗಕರ್ತರು, ಹೆಂಗಸರು ಕ್ಷೇಮಕರ್ತರು ಎಂಬುದು ಅವರ ಜೀವನದ ಕುಟುಂಬಿಕ ಸೂತ್ರವಾಗಿತ್ತು. ರಾಜನು ಧರ್ಮವಿಧೇಯ, ಪ್ರಜೆಗಳು ರಾಜವಿಧೇಯರು.

ಮೂರ್ತಿಪೂಜೆಯಿಲ್ಲದ, ನಾಣ್ಯಗಳ ಬಳಕೆಯರಿಯದ ಪುರಾತನ ಭಾರತೀಯರ ಸರಳ ಜೀವನದಲ್ಲಿ ಹಸುಗಳೇ ಮೊದಲಾದ ಆಸ್ತಿಪಾಸ್ತಿಗಳು ಅವರ ಆರ್ಥಿಕ ವ್ಯವಹಾರದ ವಿನಿಮಯ ಸಾಧನಗಳು. ಒಂದು ವರ್ಷದಲ್ಲಿ ಮೂರು ವರ್ಷಕ್ಕಾಗುವಷ್ಟು ಧಾನ್ಯಾದಿಗಳನ್ನು ಬೆಳೆದವನು ಯಜ್ಞವನ್ನು ಮಾಡಬೇಕೆಂಬುದು ಅವರ ಆರ್ಥಿಕ ವಿತರಣದ ಧರ್ಮಾಧೀನತೆ. ಅದರಿಂದ ಸಮಾಜದಲ್ಲಿ ಅತಿ ಶ್ರೀಮಂತಿಕೆ ತಲೆದೋರದೆ ಒಂದು ವಿಧದ ಅರ್ಥ ಸಾಮ್ಯವೂ ವಿದ್ವತ್ ಪ್ರೋತ್ಸಾಹವೂ ಸಾಧಿಸಿತು. ಇಂದು ಕಾಯದೆಗಳು ಮಾಡಲಾರದ ಕಾರ್ಯವನ್ನು ಅಂದು ಧರ್ಮ ಮಾಡುತ್ತಿತ್ತು. ಧರ್ಮಶಾಸನವು ಮಾನಸ ಶಾಸ್ತ್ರೀಯವಾಗಿ ರಾಜಶಾಸನಕ್ಕೂ ಮಿಗಿಲು. ವ್ಯಕ್ತಿಗಳು ತಮ್ಮ ಸಾಮಾಜಿಕ ಹೊಣೆಗಳನ್ನು ಅನ್ಯರ ಬಲಾತ್ಕಾರವಿಲ್ಲದೆ ಸ್ವಸಂತೋಷದಿಂದ ಮಾಡಲು ಅವರಲ್ಲಿ ಮನೆ ಮಾಡಿಕೊಂಡ ಧರ್ಮನಿಷ್ಠೆಯೇ ದಕ್ಷತಮವಾದ ಸಾಧನವಾಯಿತು. ಇಂದಿನ ಕಮ್ಯುನಿಷ್ಟ್ ರಾಜ್ಯಗಳಲ್ಲಿ ಯಾವುದು ಹೇಗಿದ್ದರೂ ನೀತಿಮತ್ತೆ, ಕರ್ತವ್ಯಪರತೆ ಮತ್ತು ಸಾಮೂಹಿಕ ಕಾರ್ಯಸಾಧನೆ ಅತ್ಯುಚ್ಚ ಮಟ್ಟದಲ್ಲಿವೆ ಎಂಬುದನ್ನು ಕಮ್ಯುನಿಸ್ಟ್ ವಿರೋಧಿಗಳೇ ವರದಿ ಮಾಡುತ್ತಿರುವುದು ಸರ್ವವಿದಿತ. ಈ ಗುಣಗಳಿಗೆ ಅವರ ಕಮ್ಯುನಿಜಂ ಎಂಬ ಧರ್ಮದಲ್ಲಿಯ ಅಚಲ ನಿಷ್ಠೆಯೇ ಕಾರಣ. ಅಂದಿನ ಆರ್ಯರ ಧರ್ಮಶ್ರದ್ಧೆ ಈ ಬಗೆಯದಾಗಿತ್ತು. ಅದು ಅವರಲ್ಲಿಯ ಬಹುಸಂಖ್ಯರು ಮನಃಸಾಕ್ಷಿಗೆ ವಿರುದ್ಧವಾಗಿ, ಶಾಸನವಂಚನೆ ಮಾಡಿ ಮತ್ತು ಸಹಜೀವಿಗಳಿಗೆ ನಷ್ಟಕೊಟ್ಟು ಸ್ವಾರ್ಥವನ್ನು ಸಾಧಿಸಿಕೊಳ್ಳದಂತೆ ತಡೆಹಾಕುತ್ತಿತ್ತು. ಗಾಂಧಿಯವರು ಕನಸು ಕಂಡ ಪೋಲೀಸರಿಲ್ಲದ ರಾಜ್ಯವೆಂದರೆ ಇದೇ.

ಇಂಥ ಸಂಸ್ಕಾರ ಸಂಪನ್ನತೆಯನ್ನು ಅವಿರತವಾಗಿ ಕಾಯ್ದುಕೊಂಡು ಹೋಗುವ ಸಂಸ್ಥೆ ಯಾವುದಾಗಿತ್ತು ಎಂಬುದು ಬಹಳ ಕುತೂಹಲ ಜನಕವಾದ ಪ್ರಶ್ನೆ. ಪ್ರಜಾಪ್ರಭುತ್ವದ ಇಂದಿನ ದಿನಗಳಲ್ಲಿ ಅಕ್ಷರಪ್ರಚಾರ ಮಾಡಲು ಲಕ್ಷಗಟ್ಟಲೆ ಹಣವಿದ್ದರೂ ಸಾಲದಾಗಿದೆ, ಕೋಟಿಗಟ್ಟಲೆ ಗುರುಗಳಿದ್ದರೂ ಕಡಿಮೆಯಾಗಿದೆ. ಇಷ್ಟೆಲ್ಲ ಗುರುಗಳು, ಶಾಲೆಗಳು, ವಿಶ್ವವಿದ್ಯಾನಿಲಯಗಳು ಮುಂತಾದ ಸಾಧನಗಳಿದ್ದರೂ ಶೀಲಭೂಷಣರಾದ ಶಿಷ್ಟರೂ ಸಮರ್ಥರೂ ಪ್ರಾಮಾಣಿಕರೂ ಆದ ಪ್ರಜೆಗಳನ್ನು ತರಬೇತು ಮಾಡಿ ರಾಷ್ಟ್ರಕ್ಕೆ ನೀಡುವುದು ಅಸಾಧ್ಯವಾಗಿ ಹೋಗಿದೆ. ಹೀಗಿರುವಾಗ ಆ ಅನದ್ಯತನ ಕಾಲದಲ್ಲಿ, ಅಬಹುಲ ಶಿಕ್ಷಣ ಸಾಧನಗಳಿದ್ದ ಸಮಯದಲ್ಲಿ ಸಮಾಜನೇತೃಗಳು ಎಲ್ಲ ವರ್ಗದವರಿಗೂ ಅವರವರ

ಕರ್ತವ್ಯ ನಿರ್ವಹಣದಲ್ಲಿ ತಕ್ಕ ಶಿಕ್ಷಣವನ್ನು ಹೇಗೆ ಕೊಡುತ್ತಿದ್ದರು? ಈ ಸಮಸ್ಯೆಗೆ ಉತ್ತರವನ್ನು ಭಾರತೀಯ ಗುರುಕುಲಪದ್ಧತಿ ಕೊಡುತ್ತದೆ. ಆ ಕಾಲಮಾನದ ವಿಶ್ವವಿದ್ಯಾನಿಲಯಗಳೆಂದರೆ ಅರಣ್ಯಗಳು, ಪ್ರಾಧ್ಯಾಪಕರೆಂದರೆ ಋಷಿಗಳು. ವಿದ್ಯಾರ್ಥಿಗಳು ಯಥಾಶಕ್ತಿ ಕೊಟ್ಟ ಗುರುದಕ್ಷಿಣೆಯೇ ಖರ್ಚಿನ ಹಣ, ಗುರುಗಳ ಜೀವನಕ್ಕೆ ರಾಜರಿತ್ತ ಉಂಬಳಿ ಉತ್ತಾರಗಳು. ದಾನ ಮಾಡುತ್ತಿದ್ದ ವಿದ್ಯೆಯಲ್ಲಿ ಶೀಲವಿದ್ಯೆ ಅಗ್ರಗಣ್ಯ. ಮಧುಕರಿ ವಿದ್ಯಾರ್ಥಿ ವಿದ್ಯಾರ್ಥಿನಿಯರ(ಹಾಸ್ಟೆಲ್ಲು) ಭೋಜನ ವ್ಯವಸ್ಥೆ. ಗುರುಗಳು ಸಮಾಜನೇತೃಗಳು; ವಿದ್ಯಾರ್ಥಿಗಳು ಸಮಾಜದ ಮಕ್ಕಳು. ಗುರುಗಳ ತಂದೆತನದಲ್ಲಿ ವಿದ್ಯಾರ್ಥಿವರ್ಗಕ್ಕೆ ಯಾವ ಪಂಕ್ತಿಭೇದದ ಸೋಂಕೂ ತಾಗದು. ಲೌಕಿಕ ಜೀವನದ ಯಾವ ಪ್ರಲೋಭನ ಮತ್ತು ಆಮಿಷಗಳೂ ಇಲ್ಲದ ಪರಿಶುದ್ಧ ವಾತಾವರಣದಲ್ಲಿ ಆಚರಣೀಯ ವರ್ತನೆಯುಳ್ಳ ಆಚಾರ್ಯರ ಅಂತೇವಾಸಿಗಳಾಗಿ ದಿನದ ೨೪ ತಾಸುಗಳನ್ನು ಜ್ಞಾನಾರ್ಜನೆಯಲ್ಲಿ ಕಳೆಯುತ್ತಿದ್ದ ಬ್ರಹ್ಮಚರ್ಯೆಯ ಶಿಸ್ತು ಅದ್ವಿತೀಯ ಪರಿಣಾಮಕಾರಿಯಾಯಿತು. ಹಿಟ್ಲರನು ತನ್ನ ಯುವಕ ಸಂಘವನ್ನು ಕೂಡ ಇಷ್ಟು ಶಿಸ್ತಿನಿಂದ ಕಟ್ಟಿರಲಾರ. ಕಳೆದ ಜಾಗತಿಕ ಯುದ್ಧದ ವೇಳೆಯಲ್ಲಿ ಸೈನಿಕ ಹಸ್ತಪತ್ರಿಕೆಗಳಲ್ಲಿ One who knows to obey knows to command(ವಿಧೇಯನಾಗಿರಬಲ್ಲವನು ವಿಧಿಸಬಲ್ಲನು) ಎಂಬ ದಪ್ಪಕ್ಷರದ ಪ್ರಕಟನೆಯನ್ನು ನಾವು ಕಂಡಿದ್ದೇವೆ. ಇದರ ಮರ್ಮವನ್ನು ನಮ್ಮ ಪೂರ್ವಜರು ಚೆನ್ನಾಗಿ ಅರಿತಿದ್ದರು. ಅಲ್ಲದೆ ಮನುಷ್ಯನ ಜೀವನಕ್ಕೆ ಹಣ ಎಷ್ಟೇ ಅನಿವಾರ್ಯ ಆವಶ್ಯಕತೆಯಾದರೂ ಅದು ವೈಯಕ್ತಿಕ ಸ್ವಾರ್ಥದ ವ್ಯಾಮೋಹ ಹಿಡಿಸಿ ಆ ಮೂಲಕ ಪರಪೀಡೆ ಮಾಡಲು ಪ್ರೋತ್ಸಾಹಿಸಿ ಅಂತ್ಯದಲ್ಲಿ ಉದ್ದೇಶ ಹಾನಿಯನ್ನು ಒಡರಿಸುತ್ತದೆಂಬುದನ್ನು ಬಲ್ಲ ಅವರು ಧನಕ್ಕೆ(ಕಡೆಯಪಕ್ಷ ವಿದ್ಯಾಸಂಸ್ಥೆಗಳಲ್ಲಾದರೂ) ತೊತ್ತಿನ ಸ್ಥಾನವನ್ನು ಕೊಟ್ಟಿದ್ದರಲ್ಲದೆ ರಾಣಿಯಸ್ಥಾನವನ್ನಲ್ಲ. ಆದುದರಿಂದ ರಾಜಪುತ್ರನೇ ಆಗಿದ್ದರೂ ಆತನು ತನ್ನ ದೇಹಬುದ್ಧಿಗಳಿಂದ ಸಾಮಾನ್ಯ ಬಡಹುಡುಗ ಹುಡುಗಿಯರಂತೆಯೇ ಗುರು ಶುಶ್ರೂಷೆಯನ್ನು ಮಾಡಬೇಕಾಗಿತ್ತು. ಅದರಿಂದ ಮುಂದೆ ಆಳಲಿರುವ ಆತನಿಗೆ ಶ್ರಮಜೀವನದ ಗೌರವ(Dignity of Labour) ಮತ್ತು ಸಾಮಾನ್ಯ ಜನರ ಸುಖದುಃಖ ಜ್ಞಾನ ಉಂಟಾಗುತ್ತಿದ್ದವು. ನಿಜವಿದ್ಯೆ ಅಮೂಲ್ಯವಾದುದು. ಬರಿ ರೊಕ್ಕ ಎಷ್ಟಿದ್ದರೂ ಅದರಿಂದ ಅದನ್ನು ಕೊಳ್ಳಲು ಸಾಧ್ಯವಿಲ್ಲ ಎಂಬುದನ್ನು ನಂಬಿದ ವಿದ್ಯಾರ್ಥಿಗಳು ಗುರುವಿಗೆ ಬ್ರಹ್ಮತ್ವವನ್ನು ಕೊಟ್ಟು ಅವನ ಸೇವೆಯನ್ನು ಮಾಡುತ್ತಿದ್ದರು. ಮೊದಲು ಸದ್ಗುರುವನ್ನು, ವಿದ್ಯಾವಿನಯ ಸಂಪನ್ನನಾದ ಸಾಧುಜೀವಿಯಾದ ಋಷಿಯೊಬ್ಬನನ್ನು ಆರಿಸಿಕೊಂಡರೆ ಸರಿ–ಸ್ವಯಂವರದಲ್ಲಿ ಹುಡುಗಿ ಸತ್ಪತಿಯನ್ನು ಆರಿಸಿಕೊಂಡಂತೆ–ಆ ಆಯ್ಕೆ ಮುಗಿದ ಬಳಿಕ ವಿದ್ಯಾರ್ಥಿಗಳು ಆ ಗುರುವಿನ ಭಕ್ತರು, ಪತಿವ್ರತೆಯರಂತೆ ಚರಣಸೇವಾನಿರತರು! ಇದರಿಂದ ಅವರ ಶೀಲ ಸಂಪನ್ನತೆ, ಜ್ಞಾನಾಧಿಗಮನಶಕ್ತಿ ಬಹಳವಾಗಿ ಹೆಚ್ಚುತ್ತಿತ್ತು. ಇಂದಿನಂತೆ ಅಸಮರ್ಪಕ ಶಿಕ್ಷಕರನ್ನು ಸಂಬಳದ ಆಳುಗಳಂತೆ ನೂರೆಂಟು ನಿಯಂತ್ರಣಗಳಿಂದ ಕಟ್ಟಿ ಬಿಗಿದು

ನೂರಾರು ವಿಷಮ ಮಟ್ಟದ ಬುದ್ಧಿಭಾವನೆ ಸಂಸ್ಕಾರಗಳುಳ್ಳ ವಿದ್ಯಾರ್ಥಿಗಳ ದೊಡ್ಡಿಯನ್ನು ಕಾದುಕೊಂಡಿರುವಂತೆ ವ್ಯವಸ್ಥೆ ಮಾಡಿದ್ದರೆ ಆರ್ಯರ ಸಂಸ್ಕೃತಿ ಇಂದಿನವರೆಗೆ ಅವ್ಯಾಹತವಾಗಿ ಉಳಿದುಕೊಂಡು ಬರುವುದು ಖಂಡಿತವಾಗಿಯೂ ಅಶಕ್ಯವಾಗಿತ್ತು.

ಸಾಮಾಜಿಕ ಜೀವಿಯಾದ(Gregarious Animal) ಮಾನವನ ಎಲ್ಲ ಕರ್ತವ್ಯಗಳಲ್ಲಿ ಸಾಮಾಜಿಕ ಕರ್ತವ್ಯ, ಸಾಮೂಹಿಕ ಹಿತಸಂರಕ್ಷಣೆ ಬಹಳ ಹೆಚ್ಚಿನದೆಂದು ಪುರಾತನ ಭಾರತೀಯರ ತಿಳಿವಳಿಕೆ; ಸ್ವಕುಟುಂಬಕ್ಕಿಂತಲೂ ರಾಷ್ಟ್ರಕುಟುಂಬ ಮತ್ತು ವಿಶ್ವಕುಟುಂಬ ಅವರಿಗೆ ಹೆಚ್ಚಿನದಾಗಿತ್ತು. ಆ ಧರ್ಮಸೂಕ್ಷ್ಮವನ್ನೇ ಸರ್ವ ಭಾರತೀಯ ಪ್ರಿಯನಾದ ರಾಮನ ಪಾತ್ರದಲ್ಲಿ ನಾವು ಕಾಣುವುದು. ವ್ಯಕ್ತಿಗಳ ಸುಖಾಸುಖಗಳ ಅಳೆಗೋಲು ಬಹುಜನ ಹಿತವೇ.ರಾಮ ಸೀತೆ ಎಂಬೆರಡು ಅತ್ಯಲ್ಪ ಸಂಖ್ಯೆ ವ್ಯಕ್ತಿಗಳ ಸುಖವು ಅವರಿಬ್ಬರ ಸಹಜೀವನ ವಿರೋಧಿಗಳಾದ ಬಹು ಸಂಖ್ಯರ ಅಥವಾ ಗಣ್ಯ ಅಲ್ಪಸಂಖ್ಯರ ಮನಃಶಾಂತಿಗೆ ಭಂಗ ತಂದುದನ್ನು ತಿಳಿದುದೇ ರಾಮ ಸೀತೆಯನ್ನು ನಿರ್ದೋಷಿಯೆಂದು ಗೊತ್ತಿದ್ದರೂ ಮನಸ್ಸಿಲ್ಲದ ಮನಸ್ಸಿನಿಂದ ದೂರ ಇಟ್ಟುದು. ಈ ಭಾವನೆ ಹಿಂದು ಧರ್ಮದ ತಿರುಳಾಗಿತ್ತು. ಅದನ್ನೇ ವಿದ್ಯಾರ್ಥಿಗಳು ಬಾಲ್ಯದಲ್ಲಿ ಅಳವಡಿಸಿಕೊಳ್ಳುತ್ತಿದ್ದುದು. ಮಧುಕರಿ ವ್ಯವಸ್ಥೆಯಿಂದ ವಿವಿಧ ಮಾತಾಪಿತೃಗಳಿಗೂ ವಿವಿಧ ಮಕ್ಕಳಿಗೂ ವಿಶಾಲ ಹೃದಯದ ಬಾಂಧವ್ಯ, ಮಮತೆ, ಋಣ ಸಂಬಂಧಗಳು ಬೆಳೆಯುತ್ತಿತ್ತು. ಈಗಿನ ಭಾಷೆಯಲ್ಲಿ ಹೇಳಬೇಕಾದರೆ ಆ ಮೂಲಕ ಅವರು ನಾಗರಿಕತ್ವದ ಶಿಕ್ಷಣವನ್ನು (Training in Citizenship) ಪಡೆಯತ್ತಿದ್ದರು; ಭಗವಾನದಾಸರ ಸಿವಿಕ್ಸಿನಂತಹ ಬರಿ ಪುಸ್ತಕಗಳನ್ನು ಓದಿ ನೂರಕ್ಕೆ ಮೂವತ್ತೈದು ಗುಣಗಳನ್ನು ಯೇನ ಕೇನ ಪ್ರಕಾರದಿಂದ ಪಡೆದು ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಕಲಿತುದನ್ನು ಮರೆತು ಲಂಚವಂಚನೆಗಳ ಮೂಲಕ ಉದ್ಯೋಗ ಮಾಡುತ್ತ ಹೊಟ್ಟೆ ಹೊರೆದುಕೊಳ್ಳುವ ನಾಗರಿಕತ್ವದ ಶಿಕ್ಷಣವನ್ನು ಅವರು ಪಡೆಯುತ್ತಿದ್ದಿಲ್ಲ. ಆದುದರಿಂದಲೇ ಅನೇಕ ಪರಕೀಯರ ದಾಳಿಗಳಾದರೂ ಪ್ರಾಚೀನ ಭಾರತೀಯ ನಾಗರಿಕತೆಯ ಒಳತಿರುಳೆನಿಸಿದ ಸಾಮಾಜಿಕ ಜೀವನ ಸಂಸ್ಕೃತಿಗಳು ಇಲ್ಲಿಯವರೆಗೆ ಇಷ್ಟು ಮಟ್ಟಿಗಾದರೂ ಉಳಿದುಕೊಂಡು ಬಂದಿವೆ. ಅಕ್ಷರ ವಿದ್ಯೆಯೆಂದು ಈಗ ಹೇಳುವ ವಿದ್ಯೆ ಅವರಿಗೆ ಗೊತ್ತಿದ್ದಿಲ್ಲ. ಶ್ರವಣ-ದೃಶ್ಯ, ಸಾಧನಗಳನ್ನೇ (Audio-Visual) ಹಿಂದಿನ ವಿದ್ಯಾರ್ಥಿಗಳು ಬಳಸುತ್ತಿದ್ದರಾದ್ದರಿಂದ ಅವರ ವಿದ್ಯೆ ಅಕ್ಷರವಾಯಿತು. ನಿಸರ್ಗ ಅವರೆದುರಿದ್ದ ದೃಶ್ಯ, ಗುರುವಚನ ಅವರ ಶ್ರವ್ಯ ಅಥವಾ ಶ್ರೋತವ್ಯ ಪಾಠ. ಅನುಭವ ಪ್ರಧಾನವಾದ ಆ ನಿಜವಿದ್ಯಾಭ್ಯಾಸ ಪದ್ಧತಿಯಲ್ಲಿ ತೀರ್ಥಯಾತ್ರೆಗೆ ಮಹತ್ವದ ಸ್ಥಾನವಿತ್ತು. ಅದರ ದೆಸೆಯಿಂದ ಭಾರತೀಯ ಇತಿಹಾಸ ಭೂಗೋಲ ಶಾಸ್ತ್ರಗಳ ಪ್ರತ್ಯಕ್ಷ ಜ್ಞಾನ ಅವರಿಗಾಗುತ್ತಿತ್ತು. ಚಲನಚಿತ್ರಾದಿಗಳನ್ನು ನೋಡುವುದು ಪ್ರತ್ಯಕ್ಷಜ್ಞಾನವೆಂದು ಇಂದಿನವರು ತಿಳಿಯುವುದರಿಂದ ಆ ಮೂಲಕ ಶಿಕ್ಷಣ ಪಡೆದವರ ಅನುಭವ ಕಲ್ಪನೆಗಳು ಅಷ್ಟೇ ವಾಸ್ತವಿಕವೆನಿಸಿವೆ. ಅನಕ್ಷರರೆಲ್ಲ ಅವಿದ್ಯಾವಂತರೆಂದು ತಿಳಿಯುವ ಮೂರ್ಖತೆ ಅಂದು ಇದ್ದಿರಲಿಲ್ಲ. ಈ ದೃಢವಾದ 'ಆಚಾರಃ ಪರಮೋಧರ್ಮಃ' ಎಂಬ ಸೂತ್ರದ

ಅನುಸಾರವಾಗಿ ಶಿಕ್ಷಣ ಪಡೆದ ಯುವಕ ಯುವತಿಯರ ಪಡೆಯಿದ್ದುದರಿಂದಲೇ ಅಂದು ಭಾರತೀಯ ಸಮಾಜ ಸುಸಂಘಟಿತವೂ ಸುನೀತವೂ ಸುದೃಢವೂ ಆಗಿ ಸುದೀರ್ಘ ಕಾಲ ಬಾಳಲು ಶಕ್ತವಾಯಿತು.

ಋಗ್ವೇದವು ನಾಟಕದ ಸಾಹಿತ್ಯಕ್ಕೆ, ಯಜುರ್ವೇದವು ಅಭಿನಯಕ್ಕೆ ಮತ್ತು ಸಾಮವೇದವು ಸಂಗೀತಕ್ಕೆ ಸ್ಫೂರ್ತಿಯನ್ನು ಒದಗಿಸಿಕೊಟ್ಟದ್ದು ಸರ್ವಶ್ರುತ. ಇದು ಪ್ರಾಚೀನ ಭಾರತೀಯರ ಧಾರ್ಮಿಕ ಜೀವನ ಅಥವಾ ಈಶ್ವರಾರ್ಪಣಬುದ್ಧಿಯಿಂದ ನಡೆಸುತ್ತಿದ್ದ ಬಾಳು ಅವರ ಲೌಕಿಕವಾದ ಸಾಮಾಜಿಕ(ಆರ್ಥಿಕ, ರಾಜಕೀಯ, ಕಲಾಪರ) ಚಟುವಟಿಕೆಗಳ ಎಲ್ಲ ಅಂಗಗಳಿಗೂ ಅವಕಾಶ ಕೊಟ್ಟಿತ್ತೆಂಬುದನ್ನು ತೋರಿಸುತ್ತದೆ. 'ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಂ' ಎಂಬ ಮಾತಿನಂತೆ ಅವರ ತ್ಯಾಗದಂತೆ ಭೋಗ ಕೂಡ 'ಕೃಷ್ಣಾರ್ಪಣಮಸ್ತು' ಎಂಬ ಭಾವನೆಯಿಂದಲೇ ಸಾಗುತ್ತಿತ್ತು. ದೈವೀ ಅಂಶದ ವಿಶ್ವವ್ಯಾಪಿತ್ವವನ್ನು ಕಂಡ ಅವರು ನಾಟ್ಯ ಸಂಗೀತಾದಿ ಸರ್ವ ಕಲೆಗಳಿಗೂ ಅಧಿದೇವತೆಗಳನ್ನು ಕಲ್ಪಿಸಲು ಹೊರಟದ್ದು ಅವರ ಜೀವನದ ಪ್ರಧಾನ ಪ್ರವೃತ್ತಿ ಆಧ್ಯಾತ್ಮಿಕ ಎಂಬುದನ್ನು ಸೂಚಿಸುತ್ತದೆ. ಅದರಿಂದಲೇ ಮೋಕ್ಷಮೂಲದ ಭಟ್ಟರೇ ಮೊದಲಾದ ಪಾಶ್ಚಾತ್ಯ ವಿದ್ವಾಂಸರು ಮುಕ್ತ ಕಂಠದಿಂದ 'India was a nation of philosophers(ಭಾರತವು ದಾರ್ಶನಿಕರ ರಾಷ್ಟ್ರ)' ಎಂದು ಹೇಳಿದ್ದು. 'ಸಭೂಮಿಂ ವಿಶ್ವತೋವೃತ್ವಾ ಅತ್ಯತಿಷ್ಠದ್ದಶಾಂಗುಲಂ' ಎಂಬ ಪುರುಷ ಸೂಕ್ತೋಕ್ತಿಯಂತೆ ಅವರ ಐಹಿಕ ಜೀವನ ಕೆಸರಿನಲ್ಲಿ ಹುಟ್ಟಿದರೂ ಕಮಲವಾಗಿ ಅರಳಿದಂತೆ ಆಧ್ಯಾತ್ಮಿಕ ದರ್ಶನದಲ್ಲಿ ವಿಕಾಸ ಹೊಂದಿ ಕೊನೆಮುಟ್ಟುವುದಾಗಿತ್ತು. ಕುತ್ತಿಗೆಯವರೆಗೆ ವಿಷಯ ಪ್ರಪಂಚದ ವಿಲಾಸದಲ್ಲಿದ್ದರೂ ತಲೆಯನ್ನು ದೇವಲೋಕದಲ್ಲಿ ಇರಿಸುವುದು ಅವರ ಗುರಿಯಾಗಿದ್ದುದರಿಂದ ಅವರು Plain living and high thinking(ಸರಳ ಜೀವನ, ಉದಾತ್ತ ವಿಚಾರ) ಎಂಬ ಸೂತ್ರಕ್ಕೆ ಆದಿಪುರುಷರಾದರು.

'ನಾಗರಿಕತೆ' ಎಂಬ ಪದದ ಸಂಕುಚಿತಾರ್ಥದಲ್ಲಿ ಸಾಮಾನ್ಯ ಭಾರತೀಯರ ಬಾಹ್ಯವಾದ ಸಾಮಾಜಿಕ ಆಚಾರಗಳೂ ವೇಷಭೂಷಣಗಳೂ 'ಇಂದಿ'ನ ದೃಷ್ಟಿಯಿಂದ ಹಿಂದುಳಿದವೆಂದು ಯಾರಾದರೂ ಎನ್ನಬಹುದು. 'ಸಂಸ್ಕೃತಿ'ಯೆಂಬ ಆತ್ಮವಿಲ್ಲದ 'ನಾಗರಿಕತೆ' ಎಂಬ ದೇಹಕ್ಕೆ ಬೆಲೆಯಾದರೂ ಎಷ್ಟು? ಆದರೆ ಆ ಬಾಹ್ಯ ಆವರಣದಲ್ಲಾದರೂ ಅವರು ಬಹಳ ಹಿಂದಿದ್ದರೆನ್ನಲು ಸಾಧ್ಯವಿಲ್ಲ. ಭಾರತವು ಬಿಸಿಲಿನ ನಾಡಾದುದರಿಂದ ಸಡಿಲವಾಗಿ ಬಟ್ಟೆಯುಟ್ಟುಕೊಳ್ಳುವುದು ರೂಢಿಯಾಗಿತ್ತು. 'ಕೌಪೀನವಂತಃ ಖಲುಭಾಗ್ಯವಂತಃ' ಎಂಬುದು ಅಂದು ಆಧ್ಯಾತ್ಮಿಕ, ಆರ್ಥಿಕ, ಭೌಗೋಲಿಕ ಹವಾಮಾನದ ದೃಷ್ಟಿಗಳಿಂದ ಯುಕ್ತವಾಗಿತ್ತು. ಆದರೆ ಶ್ರೀಮಂತರ ವಸ್ತ್ರ ವೇಷಭೂಷಣಗಳಲ್ಲಿಯ ಕಲೆಗಾರಿಕೆ ಇಂದು ರೂಢಿಯಲ್ಲಿರುವುದಕ್ಕಿಂತ ಹೆಚ್ಚಿನ ಮಟ್ಟದ್ದಾಗಿತ್ತು. 'ವಿದ್ಯಾದದಾತಿ ವಿನಯಂ' ಎಂಬ ಮಾತಿನಂತೆ ವಿನಯ(Politeness) ಪ್ರಧಾನರಾದ ಆ ಜನರು ಪರಸ್ಪರ ವ್ಯವಹಾರಗಳಲ್ಲಿ ಅನುಸರಿಸುತ್ತಿದ್ದ ಶಿಷ್ಟ ಸಂಪ್ರದಾಯವು

ಪ್ರೇಮ, ಗೌರವ, ಆದರಗಳ ಖನಿಯಾಗಿತ್ತು. ಔದಾರ್ಯವೇ ಆ ಧೀರ ಜನತೆಯ ಸೌಂದರ್ಯ!

ಮೇಲೆ ಹೇಳಿದ ಸರ್ವಾಂಗ ಸುಂದರವಾದ ಸಂಸ್ಕೃತಿ ಸಂಪನ್ನ ನಾಗರಿಕತೆ ಇದ್ದುದು ಋಗ್ವೇದದ ಮತ್ತು ಅದರ ನಿಕಟವರ್ತಿಯಾದ ಹಿಂದುಮುಂದಿನ ಕಾಲದಲ್ಲಿ. ಅನಂತರ ಅದರ ಇಳಿಗಾಲ ಆರಂಭವಾಯಿತು. As yet we do not find in the songs of the Rigveda that effeminate, ascetic and pessimistic trait of the Indian character with which we shall meet again and again in later Indian literature-ಅನಂತರದ ಭಾರತೀಯ ವಾಙ್ಮಯದಲ್ಲಿ ಪದೇ ಪದೇ ಕಾಣಸಿಗುವ ಸ್ತ್ರೈಣವೂ, ಕಾರ್ಯಕ್ಲೇಶಪರವೂ, ನಿರಾಶಾನಿಷ್ಠವೂ ಆದ ಭಾರತೀಯ ಸ್ವಭಾವ ಋಗ್ವೇದದ ಸೂಕ್ತಗಳಲ್ಲಿ ಸಿಗುವುದಿಲ್ಲ' ಎಂದು ವಾಟರ್‌ನಿಟ್ಜ್ ಪಂಡಿತರು ಹೇಳಿದ್ದು ಇಲ್ಲಿ ಸ್ಮರಣೀಯವಾಗಿದೆ. ಮೇಲಿಂದ ಮೇಲೆ ಹೊರಗಿನಿಂದ ತಂಡೋಪತಂಡವಾಗಿ ಭಾರತದೊಳಕ್ಕೆ ನುಗ್ಗಿ ಬರುತ್ತಿದ್ದ ಬೇರೆ ಬೇರೆ ವಿದ್ಯೆ, ವಿಚಾರ, ಶೀಲ, ಕಲ್ಪನೆಗಳಿದ್ದ ಜನಾಂಗಗಳ ತುಮುಲದಿಂದಲೂ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ವಿಪ್ಲವಗಳಿಂದಲೂ ಅನಂತರದ ಭಾರತದಲ್ಲಿ ನಾಗರಿಕತೆಯ ಪ್ರಗತಿಯ ಚಿತ್ರರೇಖೆ(Graph) ಏರಿಳಿತಗಳಿಂದ, ತಗ್ಗು ದಿಣ್ಣೆಗಳಿಂದ, ಅಂಕುಡೊಂಕುಗಳಿಂದ ಇಳಿಮುಖವಾಗಿಯೇ ಸಾಗಿ ಬಂದುದು ಸ್ಪಷ್ಟವಾದ ಸಂಗತಿ. ಅಂದಿನ ಆ ಕಾವ್ಯಮಯ ಜೀವನದ ಚಿತ್ರವನ್ನು ಕೊಡುವ ವೇದಗಳನ್ನು ಕುರಿತು ಪಾಶ್ಚಾತ್ಯ ಪಂಡಿತನೊಬ್ಬನು, 'The Veda is like the lark's morning trill of humanity awakening to the consciousness of its greatness–ವೇದವೆಂದರೆ ವಸಂತಕೋಕಿಲದ ಪ್ರಾತಃ ಸಂಗೀತದಂತಿದೆ; ಮನುಕುಲವು ತನ್ನ ಮಾಹಾತ್ಮ್ಯದ ಎಚ್ಚರಕ್ಕೆ ದನಿಗೊಟ್ಟುದನ್ನು ಅದರಲ್ಲಿ ಕಾಣಬಹುದು' ಎಂಬುದನ್ನು ನೆನೆದು ನಾವು ಸ್ವಾತಂತ್ರ್ಯೋದಯವಾದ ಇಂದು ನವಭಾರತದ ನವನಾಗರಿಕತೆಗೆ ತಳಹದಿಯನ್ನು ಹಾಕಬೇಕಾಗಿದೆ.



['ಜೀವನ']

# ೨೭. ಹರಿ-ಹರ-ಬ್ರಹ್ಮರ ಮೂಲ

ವೇದೋಕ್ತವಾದ ಭ್ರಾತೃತ್ಯವರು ಆರ್ಯಪೂರ್ವದ ಭಾರತೀಯ ಅಸುರರೆಂದು ಊಹಿಸಲು ಅವಕಾಶವಿದೆ. ವೇದ ಹೇಳುವ ಭ್ರಾತೃವ್ಯರನ್ನು ಗೆಲ್ಲಲು ಯುದ್ಧ ಮಾಡಿದ ಸುರರ ಕಥೆಗೆ ಸಮುದ್ರಮಥನ ಮತ್ತು ಕುರುಕ್ಷೇತ್ರ ಕವನಗಳು ಉಪಷ್ಟಂಭಕಗಳಾಗಿವೆ. ಈಯೆರಡು ಕಥೆಗಳಲ್ಲಿಯೂ ಪ್ರತಿಪಕ್ಷಿಗಳು ನಿಕೃಷ್ಟರೆನ್ನುವಂತೆ ಚಿತ್ರಿಸಲಾಗಿದೆ; ಒಂದರಲ್ಲಿ ಅಸುರರು, ಇನ್ನೊಂದರಲ್ಲಿ ಕೌರವರು ದಾನವ-ದೇವರ ತಂದೆ ಕಶ್ಯಪನಾಗಿರುವಂತೆ, ಕೌರವ-ಪಾಂಡವರ ಅಜ್ಜ ವೇದವ್ಯಾಸ. ಅನಾರ್ಯ ಆರ್ಯರ ಗೋತ್ರೈಕ್ಯವನ್ನು ಸಾಧಿಸಿದ್ದು ಈರ್ವರಲ್ಲಿ ಅನೇಕ ಕಡೆ ನೆಂಟಸ್ತಿಕೆ ಬೆಳೆದ ಮೇಲೆ ಎಂದು ತೋರುತ್ತದೆ. ಈ ನೆಂಟಸ್ತಿಕೆ ಸುಲಭಸಾಧ್ಯವಾಗಲು ಅವರ ನಾಗರಿಕತೆಯ ಬೆಳವಣಿಗೆಯ ಮಟ್ಟಗಳು ಒಂದೇ ತೆರನಾಗಿದ್ದುದು ಕಾರಣವೆಂದು ತೋರುತ್ತದೆ. ಮಾದರಿಗಳು ಬೇರೆಯಾಗಿದ್ದರೂ, ಈ ವರ್ಗಗಳೆರಡರ ಚಿಹ್ನಾರಾಧನೆಯ ಸಂಸ್ಕೃತಿ ಸದೃಶವಾಗಿದ್ದ ಕಾಲವಾದ ೫೦೦೦-೬೦೦೦ ವರ್ಷಗಳ ಹಿಂದೆ ಅವರಲ್ಲಿಯ ಪ್ರಾಥಮಿಕ ಸಂಘರ್ಷವು ಅಂತ್ಯದಲ್ಲಿ ಅನೇಕಾನೇಕ ಬಾರಿ ಸುಸಂಬಂಧವಾಗಿ ಪರಿಣಮಿಸಿರಬೇಕು.

ಶ್ರೀ ಶಂ. ಬಾ. ಜೋತಿಗಳು ಮಾಡಿದ ಸಂಶೋಧನೆಯ ಪ್ರಕಾರ ಆರ್ಯೇತರರು ಜಲತತ್ತ್ವದ ಉಪಾಸಕರೂ ಆರ್ಯರು ಅಗ್ನಿತತ್ತ್ವದ ಉಪಾಸಕರೂ ಅಂದು ಆಗಿದ್ದರೆಂದು ತಿಳಿದು ಬರುತ್ತದೆ. ಜಲವು ದ್ರವಸೂಚಕವಾಗಿ ಹಾಲಿನ ಪ್ರತೀಕವೆನಿಸಿ, ಶಿವನಿಂದ ವಿಷ್ಣುವಿನ ಕಲ್ಪನೆಯವರೆಗೂ ಹರಿಯಿತು. ಹರಹರಿಗಳಿಬ್ಬರೂ ಆರ್ಯಪೂರ್ವದ ದೇವತೆಗಳೆಂಬುದಕ್ಕೆ ವೇದದಲ್ಲಿ ಅವರಿಬ್ಬರನ್ನುಳಿದು ಇಂದ್ರನೇ ದೇವದೇವನೆಂದು ಪ್ರಸಿದ್ಧವಾಗಿರುವುದು ಪ್ರಮಾಣ. ವೇದಯುಗದ ಪ್ರಭಾವವಳಿದು ವೇದಾಂತಯುಗ ಮುಗಿದ ಕ್ರಿ. ಪೂ. ೫೦೦೦ರಲ್ಲಿ ಪುರಾಣ-ಬೌದ್ಧ-ಜೈನ ಪರಂಪರೆಗಳ ಪುನರುತ್ಥಾನವಾದಾಗ ಹರ-ಹರಿಗಳು ತಾವು ಮೊದಲು ಕಳೆದುಕೊಂಡಿದ್ದ ಸ್ಥಾನವನ್ನು ಈ ಮಿಶ್ರಾರ್ಯ ಜನದ ದೇವಸಮಾಜದಲ್ಲಿ ಮತ್ತೆ ಪಡೆದರೆಂಬುದು ಸ್ಪಷ್ಟ. ಬ್ರಹ್ಮನ ವಿವಿಧ ನಾಮಗಳಲ್ಲಿ ಒಂದಾದರೂ ಆರ್ಯಪೂರ್ವಜನಿರಲೇಬೇಕೆನ್ನಿಸುತ್ತದೆ. ಅಗ್ನಿಸಮಾನ ಪುರೋಹಿತಾಧಿಕಾರವುಳ್ಳ ಬೃಹಸ್ಪತಿಯು ಬ್ರಹ್ಮನ ಅನಾರ್ಯರೂಪದ ಸಂಸ್ಕೃತರೂಪವೆಂದು ಊಹಿಸಬಹುದಾಗಿದೆ. "Brahman was the youngest god in the Vedic pantheon - ವೈದಿಕ ದೇವತೆಗಳಲ್ಲಿ ಬ್ರಹ್ಮ ಅತಿ ಎಳೆಯ" ಎಂದು ಸುಶೀಲಕುಮಾರ ಡೇ ಹೇಳಿರುವುದಿಲ್ಲಿ ಸ್ಮರಣೀಯ. ಸುಮಾರು ನೂರಕ್ಕೂ ಹೆಚ್ಚಾಗಿರುವ ಉಪಪುರಾಣಗಳಲ್ಲಿ ಮತ್ತು ಹದಿನೆಂಟು ಮಹಾಪುರಾಣಗಳಲ್ಲಿ ಆರ್ಯದಿಂದ ದಮನ ಹೊಂದಿದ ಹಲವಾರು ದೇವತೆಗಳ ಪುನರುದಯವಾಗಿರುವುದು ಗಮನಾರ್ಹ.

ಬಾರ್ಹಸ್ಪತ್ಯ ಅಥವಾ ನಾಸ್ತಿಕವೆನಿಸಿದ ಲೋಕಾಯತ ಮತವು ಆರ್ಯಪೂರ್ವದಲ್ಲಿ ಭಾರತದ ಕೆಲವೆಡೆ ಪ್ರಚುರವಾಗಿರಬಹುದು. ಏಕೆಂದರೆ ಆರ್ಯಮುದ್ರೆ ಬಿದ್ದ ಎಲ್ಲ ದರ್ಶನಕಾರರೂ ಚಾರ್ವಾಕ ಮತಖಂಡನವನ್ನು ಮಾಡಿ ಅನಂತರ ಇತರ ಮತಗಳ ಖಂಡನೆಗೆ ಷುರು ಮಾಡಿವೆ. ಬೃಹಸ್ಪತಿ ಒಬ್ಬ ಸ್ಮೃತಿಕಾರನೆಂಬ ಉಲ್ಲೇಖವಿದೆ. ಅವನು ದೇವಗುರುವಾದುದಂತೂ ಪ್ರಸಿದ್ಧ. ಈ ಬೃಹಸ್ಪತಿಗಳು ಭಿನ್ನವ್ಯಕ್ತಿಗಳಾಗಿರಬಹುದು. ಆದರೆ ಈ ಹೆಸರಿನವನಿಗೆ ಜನಸಾಮಾನ್ಯರ ಮೆಚ್ಚಿಗೆಗೆ ಒಂದಲ್ಲ ಒಂದು ಕಾಲದಲ್ಲಿ ಪಾತ್ರವಾದ ಚಾರ್ವಾಕ ದರ್ಶನದ ಗ್ರಂಥಕರ್ತೃತ್ವವನ್ನು ಹೇಳಿರುವುದು ಮತ್ತು ಇದೇ ಹೆಸರಿನವ ದೇವಗುರುವಾಗಿರುವುದು ಆತನ ಆರ್ಯಪೂರ್ವ ಸಂಕೇತವಾಗಿರಲು ಶಕ್ಯ ಎಂಬ ಊಹೆಗೆ ಎಡೆಗೊಡುತ್ತದೆ. ವೇದದಲ್ಲಿ ಬೃಹಸ್ಪತಿಯನ್ನು ಬ್ರಹ್ಮಸ್ಪತಿಯೆಂದೂ ಹೇಳಿದೆ. ಅವನಿಗೆ ಹರಿತವಾದ ಕೋಡುಗಳೂ ನೀಲವಾದ ಬೆನ್ನೂ ಹಳದಿಗೆಂಪು ಬಣ್ಣಗಳ ಮೈಯೂ ಉಂಟೆಂದು ವರ್ಣಿಸಲಾಗಿದೆ. ಬಿಲ್ಲು, ಬಾಣ, ಕೊಡಲಿ, ಈತನ ಆಯುಧಗಳು. ಮ್ಯಾಕ್‌ಡೊನಲ್ಲರು ಈತನು ಶುದ್ಧವಾದ ಭಾರತೀಯ ದೇವತೆ ಎಂದಿದ್ದಾರೆ. ಬೃಹ್ (= ದೊಡ್ಡದಾಗು) ಎಂಬ ಧಾತುವಿನಿಂದಲೇ ಬೃಹಸ್ಪತಿ ಮತ್ತು ಬ್ರಹ್ಮ ಎಂಬೆರಡೂ ಪದಗಳು ರೂಪಿಸಲ್ಪಟ್ಟಿವೆ. ಆದುದರಿಂದ ಆರ್ಯರು ಭಾರತದಲ್ಲಿ ಪ್ರವೇಶಿಸಿ ಕೆಲಕಾಲಾನಂತರ ಇಲ್ಲಿಯ ಬೃಹಸ್ಪತಿ (ಜ್ಞಾನಸಂಕೇತ) ಯನ್ನು ವೇದದಲ್ಲಿ ತೆಗೆದುಕೊಂಡು, ಬಳಿಕ ಉಪನನಿಷತ್ತಿನಲ್ಲಿ ಸರ್ವೋಚ್ಚ ಸ್ಥಾನವನ್ನು ಕೊಟ್ಟಿರುವುದು ಅತ್ಯಂತ ಸಂಭವ. ಹಳ್ಳಿಗಳಲ್ಲಿ ಇಂದು ಪೂಜಿಸಲ್ಪಡುತ್ತಿರುವ "ಬರ್ಮಪ್ಪ"ನು ಆರ್ಯಪೂರ್ವ ಬ್ರಹ್ಮನ ಆರ್ಯಕಾಲೀನ ತಾತ್ವಿಕ ಉನ್ನತಿಗೆ ಎರವಾದ ಬಡಬ್ರಹ್ಮನೆಂದು ತಿಳಿಯಲವಕಾಶವಿದೆ.

ನರ–ನಾರಾಯಣ, ಕೃಷ್ಣವಾಸುದೇವ ಅಥವಾ ಭಗವಾನ್ ಎಂಬೀ ಎರಡು ಉಪಾಸ್ಯ ಯುಗಲ ದೇವತೆಗಳು ಆರ್ಯಪೂರ್ವದವೆಂದೂ ಉಪನಿಷತ್ಕಾಲಾನಂತರ ರಾಮಾಯಣ–ಮಹಾಭಾರತಗಳ ಅವಧಿಯಲ್ಲಿ ಗೌಣ ವೈದಿಕ ದೇವತೆಯಾಗಿದ್ದ ವಿಷ್ಣುವಿನಲ್ಲಿ ಎರಕ ಹೊಯ್ಯಲ್ಪಟ್ಟವೆಂದೂ ವಿದ್ವಾಂಸರ ಮತ. ಅದೇ ಮೇರೆಗೆ ಆರ್ಯಪೂರ್ವದ ಶಿವದೇವತೆಯು ವೇದದಲ್ಲಿ ಗೌಣ ದೇವತೆಯಾಗಿದ್ದ ರುದ್ರನಲ್ಲಿ ಬೆರೆತಿತೆಂದೂ ಸಿದ್ಧಾಂತಿಸಲಾಗಿದೆ. ಕ್ರಿ. ಪೂ. ೫ ನೆಯ ಶತಮಾನದಿಂದ ಅರ್ಥಾತ್ ಪುರಾಣಪರಂಪರೆ ಬೆಳೆಯತೊಡಗಿದಾಗಿನಿಂದ ವೈದಿಕ ದೇವತೆಗಳಾದ ಇಂದ್ರ, ಅಗ್ನಿ, ಯಮ, ಉಷಸ್, ಪರ್ಜನ್ಯ, ಸೂರ್ಯ, ವರುಣ, ಮಿತ್ರ, ಸೋಮ, ಮರುತ್ ಮುಂತಾದ ದೇವತೆಗಳ ಪ್ರಾಶಸ್ತ್ಯ ಕೊನೆಗೊಂಡದ್ದು ಸುವಿದಿತ. ಹಾಗೇ ಬ್ರಹ್ಮ–ವಿಷ್ಣು–ಮಹೇಶ್ವರರ ಖ್ಯಾತಿ ಹೆಚ್ಚಿದ್ದೂ ಸುಪ್ರಸಿದ್ಧ.

ಭಾರತದಲ್ಲಿ ಆರ್ಯರು ಪ್ರವೇಶಿಸುವ ಮೊದಲು ಪ್ರಾಚೀನ ಅಶ್ಮಯುಗದ ನೀಗ್ರೋ ಕುಲೀನರಿದ್ದರೆಂದೂ ಆ ಬಳಿಕ ಹೊಸ ಅಶ್ಮಯುಗದ ಆಸ್ಟ್ರೋ ಏಶಿಯಾಟಿಕ್ ಮಾತಿನ ಕೋಲರು ಬಂದರೆಂದೂ ಆಮೇಲೆ ತಾಮ್ರಾಯುಧೋಪಕರಣಗಳ ಬಳಕೆಯ ಯುಗದ ದ್ರಾವಿಡ ಅಥವಾ ಕಂದಮಿಳ ಕುಲದವರ ನಾಗರಿಕತೆ ಕೋಲರೊಡನೆ

ಪ್ರಸ್ಥಾಪಿತವಾಯ್ತೆಂದೂ ಸಂಶೋಧಕರ ಮತ. ತಪಸ್ಸಿನ ಸಂಕೇತವಾದ ಲಿಂಗವು ಕೋಲಭಾಷೆಯ ಪದವೆಂದೂ ಅದು ಶಿವ ಸಂಕೇತವಾದುದರ ಸ್ಪಷ್ಟ ಉಲ್ಲೇಖ ಮೊದಲ ಬಾರಿಗೆ ಮಹಾಭಾರತದಲ್ಲಿ ಬಂದಿದೆಯೆಂದೂ ಗೊತ್ತಾಗಿದೆ. ಶಿವನು ಪಶುಗಳ ಒಡೆಯನಾಗಿರುವುದೂ ಕೃಷ್ಣನು ಗೋವಳಿಗ ಸಂಸ್ಕೃತಿಯನಾಗಿರುವುದೂ ಆರ್ಯೇತರರೆನಿಸಿದ್ದ ಕ್ಷೀರಾರಾಧಕ ಮತದ ಆರಾಧ್ಯದೇವತೆಗಳವರಾಗಿದ್ದರೆಂದು "ಹಾಲುಮತ ದರ್ಶನ"ದಲ್ಲಿ ಶ್ರೀ ಶಂ. ಬಾ. ಜೋಶಿಯವರು ಪ್ರತಿಪಾದಿಸಲು ಕಾರಣವಾಯ್ತು. ಅವರ ಉಕ್ತಪುಸ್ತಕದ ಸಂಪಾದಕೀಯವನ್ನು ಬರೆದ ಶ್ರೀ ನೆಗಳೂರ ರಂಗನಾಥರು ವೈದಿಕ ಸಂಸ್ಕೃತಿಯನ್ನು "ವೈಷ್ಣವ"ವೆಂದಿರುವುದಕ್ಕೆ ಶ್ರೀ ಸುಶೀಲಕುಮಾರ ಡೇ "Aspects of Sanskrit Literature" ಎಂಬ ತಮ್ಮ ಗ್ರಂಥದಲ್ಲಿ ವಿರುದ್ಧ ಪ್ರಮಾಣಗಳನ್ನು ಕೊಟ್ಟಿರುವುದು ಶ್ರೀ ಶಂ. ಬಾ. ಜೋಶಿಯವರ ಮೂಲ ವಾದವನ್ನು ಎತ್ತಿ ಹಿಡಿಯುತ್ತದೆ, (ಡೇ ಗ್ರಂಥದ ಪುಟಸಂಖ್ಯೆ ೭೫).

ಪ್ರಧಾನತಃ ಆರ್ಯರು (ಸೂರ್ಯನ) ಅಗ್ನಿಯ ಉಪಾಸಕರೆಂಬುದೂ ಆರ್ಯದೇವತೆಗಳೆಲ್ಲ ಹೆಚ್ಚಾಗಿ ಸೂರ್ಯನ ವಿವಿಧ ಶಕ್ತಿಗಳೆಂಬುದೂ ಸುವಿದಿತ. ಅಗ್ನಿ–ಸೂರ್ಯರ ಸಂಕೇತೈಕ್ಯ ಸುಲಭೋಹ್ಯ. ಆದುದರಿಂದ ಅಗ್ನಿಯ ಆರಾಧಕರಾದ ಆರ್ಯಸಂಸ್ಕೃತಿ ಮತ್ತು ಹಾಲಿನ (ಅದರ ಅಪರ ಸಂಕೇತವಾದ ನೀರಿನ) ಆರಾಧಕರಾದ ಕಂದಮಿಳ ಸಂಸ್ಕೃತಿ ಋಗ್ವೇದದ ಕಾಲದಿಂದ ಸಮನ್ವಿತವಾಗುತ್ತ ನಡೆಯಿತು ಎಂಬುದಿಂದಿನ ಹೊಸ ತತ್ಕಾಲಸಿದ್ಧಾಂತ. 'ಪಯಸ್' ಎಂದರೆ ಸಂಸ್ಕೃತದಲ್ಲಿ ಹಾಲೂ ಹೌದು, ನೀರೂ ಹೌದು; ಮತ್ತು 'ದಕ' ಎಂದರೂ 'ಕ' ಎಂದರೂ ನೀರೇ. 'ಕಸ್ಮೈ ದೇವಾಯ ಹವಿಷಾ ವಿಧೇಮ' ಎಂಬ ಬ್ರಹ್ಮ ಮಾಹಾತ್ಮ್ಯವನ್ನು ಹೇಳುವ ವಿರಾಟ್ ಸೂಕ್ತದ ಪಲ್ಲವಿಯಲ್ಲಿಯ ಕಸ್ಮೈ ಶಬ್ದಗತವಾದ 'ಕ' ಎಂದರೆ ಜಲತತ್ವವೆಂದು ಜೋಶಿ ಮತ. ಶ್ರೀ ನೆಗಳೂರರು ಆರ್ಯರು ತತ್ವೋಪಾಸಕರೆಂದು ಚತುರ್ವೇದಗಳಿಂದ ತಿಳಿಯುವುದೆಂದೂ ಕಂದಮಿಳರು ಸತ್ವೋಪಾಸಕರು (Totomists) ಎಂದೂ ವಿಂಗಡಿಸಿದ್ದು ವೈದಿಕ ದೇವತೆಗಳ ರೂಪಗಳು ಪ್ರಾಕೃತಿಕ ಘಟನೆಗಳಿಂದ ರೂಪಿತವಾದವೆಂಬ ಪ್ರಸಿದ್ಧ ಸಿದ್ಧಾಂತವನ್ನು ಮರೆತುದರ ಫಲ. ಯಾವ ಪ್ರತೀಕವೂ 'ಟೋಟೆಂ' ಆಗಬಲ್ಲುದು. ಶಿವ ಅಥವಾ ಜಲ ಇಲ್ಲವೆ ಬ್ರಹ್ಮ ಕಂದಮಿಳರ "ಟೋಟೆಂ" ಅಥವಾ ಗೋತ್ರಮೂಲ ಆಗಿಲ್ಲ. ಹೀಗೇ ಶ್ರೀ ನೆಗಳೂರರು "ದೇಶವು ಭಾಷೆಗೆ ಹೆಸರು ಕೊಡುವುದಿಲ್ಲ" ಎಂದು ಮುಂತಾದ ಹಲವಾರು ಅಸಮರ್ಥನೀಯ ಅಭಿಪ್ರಾಯಗಳಿಂದ ಶ್ರೀ ಜೋಶಿಯವರ ಗ್ರಂಥದ ಶೋಧಕ ವಿಚಾರ ಪ್ರಣಾಲಿಯನ್ನು ಅರಿತುಕೊಳ್ಳಲು ಓದುಗನಿಗೆ ಅನವಶ್ಯಕ ವಿಘ್ನಗಳನ್ನುಂಟುಮಾಡಿದ್ದನ್ನು ಬಿಟ್ಟರೆ, "ಹಾಲುಮತ ದರ್ಶನ"ವು ಕರ್ನಾಟಕ–ಮಹಾರಾಷ್ಟ್ರ–ಗುಜರಾಥಗಳಲ್ಲಿಯ ನಿವಾಸಿಗಳ ಭಾವನಾಸಮನ್ವಯವನ್ನು ಸಾಧಿಸಲು ಅತ್ಯುಪಯುಕ್ತವಾದ ಆಲೋಚನ ಸಾಮಗ್ರಿಯನ್ನು ಐತಿಹಾಸಿಕ ದೃಷ್ಟಿಯಿಂದ ಒದಗಿಸಿದೆ.

ಭಾರತಕ್ಕೆ ಬರುವ ಮೊದಲು ಆರ್ಯರು ಮಧ್ಯ ಅಥವಾ ಪೂರ್ವ ಯುರೋಪಿನ ಏಕ ಅಥವ ಭಿನ್ನ ಜನಾಂಗದವರಾಗಿದ್ದರೆಂದೂ ಗುಂಪುಗೂಡಿ ಪರಿವ್ರಜಿಸುವ ದನಗಾಹಿಗಳಾಗಿದ್ದರೆಂದೂ ಹಿಂದೆಯೇ ಶೋಧಿಸಿದ್ದು ಸರ್ವನೇದ್ಯ. ಆದುದರಿಂದ ಆ ದನಗಾಹಿಗಳಿಗೆ ಭಾರತದಲ್ಲಿಯ ಕಂದಮಿಳ ದನಗಾಹಿ ಕೃಷಿಕರೊಡನೆ ಬೆರೆತುಕೊಳ್ಳುವುದು ಸುಲಭವಾಗಿರಬೇಕು. ಅವರಿವರ ಘರ್ಷಣ ಬಹಳಕಾಲ ಸತತವಾಗಿ ನಡೆದದ್ದು ಅಸಂಭವ. ದ್ರಾವಿಡರು ಅಥವಾ ಕಂದಮಿಳರು ಕ್ರೀಟನ್, ಲೈಸಿಯನ್ ಅಥವಾ ಸುಮೇರಿಯನ್ ಜನಾಂಗಕ್ಕೆ ಮೂಲತಃ ಸೇರಿದವರೆಂದು ಅನೇಕರಿಂದ ವಿವಿಧವಾಗಿ ವಿವರಿಸಲಾಗಿದೆ. ಅದರಲ್ಲಿ ನಿಶ್ಚಯ ದೊರಕದಾದರೂ ವೇದಯುಗವನ್ನು ಗಲಾಟೆ ಮಾಡದೆ ಮುಗಿಸಿ, ಪುರಾಣಯುಗದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರು ಪ್ರತಿಷ್ಠಿತರಾದದ್ದು ಮತ್ತು ಅವರು ಆರ್ಯಪೂರ್ವ ಭಾರತೀಯರ ಜಲತತ್ವ ಅಥವಾ ಕ್ಷೀರತತ್ವ ಇಲ್ಲವೆ ರಸ ದರ್ಶನವನ್ನು ಆಧರಿಸಿದ್ದೂ ಶೋಧ್ಯ ಮತ್ತು ಶೋಧನೀಯ ಎಂಬ ಹೊಸ ದೃಷ್ಟಿಯಿಂದು ಏಕೀಕೃತ ಕರ್ನಾಟಕದ ವಿದ್ವಾಂಸರಲ್ಲಿ ಉದಯಿಸಿದುದು ಎಲ್ಲರ ಗಮನಕ್ಕೂ ಬರಬೇಕಾಗಿದೆ.

"ಆತ್ಮಜ್ಞಾನವಿಹೀನರು ಮೂಢರು" ಎಂಬ ಮಾತು ಒಂದು ಜನಾಂಗ ತನ್ನ ಪೂರ್ವೇತಿಹಾಸ-ಸಂಸ್ಕೃತಿಗಳನ್ನರಿಯದೆ ಉಳಿದಿರುವ ಸನ್ನಿವೇಶಕ್ಕೂ ಅನ್ವಯಿಸುತ್ತದೆ. "ವಿಕ್ರಮಾರ್ಜುನ ವಿಜಯ"ದಲ್ಲಿ ಗಾಂಗೇಯನು ಮಾಡಿದ ಪ್ರತಿಜ್ಞೆಯನ್ನು ಮುರಿದರೆ ಹರಿ-ಹರ-ಹಿರಣ್ಯಗರ್ಭರು ನಕ್ಕಾರೆಂದು ಅಭಿಪ್ರಾಯಪಟ್ಟಂತೆ ಭಾರತದ ಬಹುಸಂಖ್ಯರಿಂದು ಆರಾಧಿಸುತ್ತಿರುವ ತ್ರಿಮೂರ್ತಿಗಳ ಮೂಲವನ್ನು ಅರಿಯದಿದ್ದರೆ ಭಾರತೀಯರನ್ನು ನೋಡಿ ಅವರು ನಗದೆ ಉಳಿದಾರೇನು?



**[ಆಕರ: 'ಕನ್ನಡ ನುಡಿ' – ನವೆಂಬರ್ ೧೯೬೨]**

# ೨೮ ಮಾನವ ದ್ರವ್ಯದ ಸುಧಾರಣೆ

(ಅಧಿಕಾರಾಂಗನೆಯಾಲಿಂಗನದಲಿ
ಹಗಲಿರುಳೂ ಮೈಮರೆದಿರಲು
ಅಮರಾನಂದದ ಚಾಗದ ಯೋಗದ
ಸಗ್ಗದ ಸೊಗ ಬಯಕೆಯು ಬಯಲು
ಸೊಗದಲರರಳುವ ಮಾನವವಿತ್ತದ
ಸೊದೆ ಬಳ್ಳಿಯು ಕಂಗೊಳಿಸಿಹುದು
ಪರೋಪ ದೇಶದ ಬಿಸಿನೀರೆರೆಯಲು
ಬಲು ಕಂದುತ ಕಳೆಗುಂದಿಹುದು) – ಸಂಪಾದಕ.

ವಿಕೃತ (Satyriasis) ಕಾಮೋನ್ಮಾದವು ಇಂದ್ರಿಯ ದಾಸ್ಯದ ಅತ್ಯುಗ್ರ ಸ್ವರೂಪ. (Gluttony) ಹೊಟ್ಟೆಬಾಕತನವು ೨ನೆಯ ಸ್ಥಾನದಲ್ಲಿರುವ ಐಷಾರಾಮ ಪ್ರವೃತ್ತಿ. Visual mania ದರ್ಶನ ವ್ಯಾಮೋಹ ೩ನೆಯ ಸ್ಥಾನದಲ್ಲಿದೆ. Aural mania ಶ್ರವಣ ವ್ಯಾಮೋಹದ ಸ್ಥಾನ ೪ನೆಯದು. Olfactory mania ಘ್ರಾಣ ವ್ಯಾಮೋಹ ೫ನೆಯ ಸ್ಥಾನದಲ್ಲಿದೆ. ವ್ಯಕ್ತಿ ಹಾಗೂ ಸಮಾಜಗಳಿಗೆ ಹಾನಿಯನ್ನು ಒದಗಿಸುವುದರಲ್ಲಿ ಕಂಡುಬರುವ ಗಣ್ಯತೆಯು ಈ ಸ್ಥಾನ ತಾರತಮ್ಯವನ್ನು ನಿಯಂತ್ರಿಸಿದೆ. ಚಾರ್ಮಣ, ರಾಸನ, ಚಾಕ್ಷುಷ, ಶ್ರಾವಣ, ನಾಸತ್ಯರೆಂದು ಭೋಗಲಂಪಟರಲ್ಲಿ ಐದು ವಿಧ. ಸಂಖ್ಯಾಬಲದಲ್ಲಿಯೂ ಈ ಅನುಕ್ರಮವನ್ನು ಹಿಡಿಯಬಹುದು.

Power politics ಅಧಿಕಾರಲಾಲಸೆಯು ಕಾಮಾಂಧತೆಯ ಒಂದು ರೂಪ. ಅಧಿಕಾರಲಂಪಟತೆಗೂ ಕಾಮಲಂಪಟತೆಗೂ ಬಿಡಲಾರದ ಸಂಬಂಧವಿದೆ. ಉಚ್ಚಧಿಕಾರಕ್ಕೆ ಕಾಮರೋಗ ಹಿಡಿಯುವುದು ಹೆಚ್ಚು. ಕಾಮರೋಗವು ಸಾಮಾನ್ಯ ಕಾಮವಶ್ಯತೆಯಲ್ಲ. ಅಧಿಕಾರದಾಹಕ್ಕೆ ಕಾಮತೃಪ್ತಿ ಪರಿಹಾರಾಭಾಸ. ಆಹಾರ ಪಾನೀಯಗಳ ಮೇಲಿನ ಅತ್ಯಾಸೆಯು ಪರಾನುಕಂಪಗುಣವನ್ನು ಕಡಿಮೆ ಮಾಡಿ ದುರಾಭ್ಯಾಸಗಳ ಮೂಲಕ ನಿರ್ಲಜ್ಜ ಸ್ವಾರ್ಥಪರತೆಗೆ ಮನುಷ್ಯನನ್ನು ಇಳಿಸುತ್ತದೆ. ಪಾಶವಿಕತೆಯ ಅಸಹ್ಯ ಸ್ವರೂಪವಾದ ರುಚಿದಾಸ್ಯವು (ಜಿಹ್ವಾದಾಸ್ಯವು) ಸ್ಪರ್ಶದಾಸ್ಯದಂತೆಯೇ ವಿಘಾತಕ ವೈಯಕ್ತಿಕತೆಯನ್ನು ಬೆಳೆಯಿಸಿ ಮಾನವನನ್ನು ಉದರ ಪರಾಯಣನನ್ನಾಗಿ ಪರಿವರ್ತಿಸುತ್ತದೆ; ಮನೆಮಕ್ಕಳಿಗೆ ವಂಚಿಸಿ ಕೂಡ ಸ್ವಭೋಗಕ್ಕೆ ತೆರಕಾರನನ್ನಾಗಿ ಮಾಡುತ್ತದೆ.

ರೂಪದಾಸ್ಯವು ವಿಕೃತವಿಲಾಸಿಯ ಆಭಾಸಿಕ ಕಲಾಪ್ರಿಯತೆಯ ಮುಂದಿನ ಜೀವನಕ್ಕೆ ಎಡೆಗೊಡುತ್ತದೆ; ಮತ್ತು ಅನೇಕ ಸಲ ಮೇಲೆ ಹೇಳಿದ ಉನ್ಮಾದ (ವ್ಯಾಮೋಹ) ಧ್ವಯದಲ್ಲಿ ಫಲಿಸುತ್ತದೆ. ರೂಪಸ್ಪರ್ಶಗಳು ಬಹಳಸಲ ಅವಿನಾಭಾವಿಗಳು, ಪರಸ್ಪರ ಸಹಕಾರಿ ಪ್ರೇರಕಗಳು. ಶ್ರವಣದಾಸ್ಯ ಕೂಡ ರೂಪ್ಯೋನ್ಮಾದದಂತೆಯೇ ಸ್ಪರ್ಶಾಂತವಾಗಿ ಪರಿಣಮಿಸಬಲ್ಲುದು. ಅವಿಕೃತವಾದ ರೂಪನಾದಾಭಿರುಚಿಗಳು ಮಾನವನನ್ನು ಉದಾತ್ತತೆಗೇರಿಸಬಲ್ಲುವು. ಅವುಗಳ ಪವಿತ್ರಾವೇಶ (ಇತರೇಂದ್ರಿಯಾಮಿಷವಿಮುಖವಾದ) ಸ್ಫೂರ್ತಿಯು ನಿಜಮುಗ್ಧರಿಗೇ ಮೀಸಲು. ರೂಪಿ–ರೂಪಾಶಿಗಳೂ ಸ್ವರಕಂಠಿ–ಸ್ವರಾಶಿಗಳೂ ಪಾಪೋನ್ಮುಖ–ಪಾಪ ವಿಮುಖರಾಗುವುದು ಚಾರಿತ್ರ ಮಟ್ಟವನ್ನವಲಂಬಿಸಿದೆ. ಗಂಧದಾಸ್ಯವು ಕಾಮ–ರುಚಿ–ರೂಪದಾಸ್ಯಗಳಿಗೆ ಸಹಕಾರಿ; ಅವಿಕೃತವಾದಾಗ ಅವುಗಳು ದಿವ್ಯತಾ ವಿಧಾಯಕಗಳಾಗುತ್ತವೆ.

ಪರಾರ್ಥಕ್ಕಲ್ಲದ ಅಧಿಕಾರಲಾಲಸೆ, ಕಾಮ ರೋಗ, ಜಿಹ್ವಾದಿ ದಾಸ್ಯಗಳು ಮಾನವ ಹೃದಯದಲ್ಲಿ ದೃಢವಾಗಿ ನೆಲೆಸುವಂತಾದ ಕೂಡಲೇ ಅವನಿಗೆ ಅಧಿಕಾರ ದುರುಪಯೋಗ ಅಂಟಿಕೊಳ್ಳುತ್ತದೆ. ಅದರ ಇನ್ನೊಂದು ಹೆಸರು ದುರಾಚಾರ ಅಥವಾ ಭ್ರಷ್ಟಾಚಾರ. ದುರುಪಯೋಗದಲ್ಲಿ ಅನುಪಯೋಗವೂ ಗೃಹೀತ. ದುರುಪಯೋಜಕರಲ್ಲಿ ಅಹಮುನ್ಮಾದ ಮತ್ತು ಅದರ ಫಲವಾದ ಚಂಡಿತನ (Negativism) ಅಥವಾ ಇನ್ನೊಬ್ಬರು ಹೇಳುವ ನ್ಯಾಯಾಂಶವನ್ನು ಬುದ್ಧಿಪೂರ್ವಕವಾಗಿ ಬಿಡುವ ಪ್ರವೃತ್ತಿ ಬೆಳೆಯುತ್ತದೆ. ಈ ಅಕಾರಣ ವಿರೋಧವು ಅಧಿಕಾರಿಯನ್ನು ಪ್ರಚ್ಛನ್ನ ಅಥವಾ ಪ್ರಕಟ ಸ್ವೈರಕಾರಭಾರಿಯನ್ನಾಗಿ ಮಾಡಿಬಿಡುತ್ತದೆ.

ಒಂದು ವಿಧದ sensationalism ಇಂದ್ರಿಯಾವೇಶ ಪರತೆಯು ಮೂಲಸ್ಥಾಯಿಯಷ್ಟು ಬಲಿಷ್ಠವಾಗಿ ಬೆಳೆದ ಬಳಿಕ ಈ ಪಂಚ ಉನ್ಮಾದ ಗ್ರಹಗಳು ಸಹಜವೆನ್ನಿಸಿ ಯಾವ ಕ್ಷೇತ್ರದಲ್ಲಿ ಕೈ ಹಾಕಿದರೂ ಮಾನವನು ವಿಕಾರಿಯಾಗಿ ಅಲ್ಲದೆ ವಿಚಾರಿಯಾಗಿ ವರ್ತಿಸನು; ಆತನ ವಿಚಾರ, ಉಚ್ಚಾರ, ಆಚಾರಗಳಲ್ಲಿ ಏಕಸೂತ್ರ ಬದ್ಧತೆ ಉಳಿಯಲಾರದು. ಅಂಥವನ ಕೈಯಲ್ಲಿ "ಡೆಮೊಕ್ರಸಿ" "ಮೋಬಾಕ್ರಸಿ"ಯಾಗುತ್ತದೆ. ರಿಲಿಜನ್ "ಹಿಪೊಕ್ರಸಿ"ಯಾಗುತ್ತದೆ; ನೀತಿಯು ಬಾಯ ಬಲವಷ್ಟೇ ಆಗುತ್ತದೆ; ಸಾಹಿತ್ಯವು ಗೋಮುಖವ್ಯಾಘ್ರವಾಗುತ್ತದೆ; ಮಾತಿಗೂ ಮಾಟಕ್ಕೂ ವಿರೋಧ ಉಂಟಾಗುತ್ತದೆ; ಶಕ್ತಿಯಿದ್ದಷ್ಟು ಕಾಲ ಪರಹಿಂಸಾಪರಾಯಣನಾಗಿ ಆ ಮೇಲೆ ನಾರಕ ಅನುಭವವನ್ನು ಪಡೆಯುತ್ತಾನೆ. ಸಂಘಟಿತ ಸಾಮಾಜಿಕ ನ್ಯಾಯ ನಿಷ್ಠುರತೆ ಇಲ್ಲದಿದ್ದಾಗ ಅಂಥವರ ಸಂಖ್ಯೆ ಅಲ್ಪವಿದ್ದರೂ ಸಾಕಷ್ಟು ಗಣ್ಯ ಸಂಖ್ಯಾತನಾಗಿ ಬಹುಜನ ಪೀಡೆ ಹೆಚ್ಚುತ್ತದೆ. ಒಮ್ಮೆ ರಾಷ್ಟ್ರ ನಾಶವಾದರೂ ಆದೀತು! ಅಂಥ ಒಂದು ಸಂದರ್ಭವನ್ನು ವರ್ಣಿಸುವಾಗ ಪ್ರೊ. ಸತ್ಯನಾಥ ಅಯ್ಯರರು, "The Hindus unable to hang together were hanged separately - ಒಟ್ಟಾಗಲಾರದ ಹಿಂದುಗಳು ಪ್ರತ್ಯೇಕವಾಗಿ ಶೂಲಕ್ಕೇರಿಸಲ್ಪಟ್ಟರು"

ಎಂದದ್ದು ಸ್ಮರಣೀಯ. ಅದ್ವೈತದ ಶತ್ರುಗಳೆಲ್ಲರೂ ಭಾರತೇತಿಹಾಸದ ಉಕ್ತ ಅವಧಿಯತ್ತ (ಕ್ರಿ.ಶ. ೯ರಿಂದ ೧೨ನೆಯ ಶತಮಾನ) ಲಕ್ಷ್ಯ ಹಾಕಬೇಕು.

ಮನಸ್ಸಿನಂತೆ ಮಹಾದೇವ; ಮಹಾದೇವನಂತೆ ಮನಸ್ಸು. ಕಾಮಿಗಳಿಗೆ ಮನ್ಮಥ ದೇವರು, ಪ್ರೇಮಿಗಳಿಗೆ ಮನ್ಮದಮ ದೇವರು. ಇಂದ್ರಿಯದಾಸರಿಗೆ ವ್ಯಕ್ತ್ಯರ್ಥವಾದ ಕಾಮ ಕ್ರೋಧಗಳೇ ದೇವರು; ಅವುಗಳಿಗೇ ಒಳ್ಳೆಯ ಹೆಸರುಗಳನ್ನು ವಿವಿಧವಾಗಿ ಇಟ್ಟುಕೊಳ್ಳುತ್ತಾರೆ. ಅವರ ರಾವಣತ್ವ–ರಾವಣ ಸನ್ಯಾಸಿತ್ವಗಳನ್ನು ಬೆಳಯಗೊಡುವ ಸಮಾಜವು ಜ್ವರಗಡ್ಡೆಯಿಂದ ಸಾಯುವ ಮಲೇರಿಯ ರೋಗಿಗೆ ಸದೃಶ. ಅವರಿಂದು ಭಾರತ ರತ್ನರಾಗಿ ಗಣ್ಯರಾದರೂ ಆಶ್ಚರ್ಯವಾಗದು. ಅಂದ ಮೇಲೆ ಇಂದಿನ ಸಮಾಜ ವೀರ್ಯವತ್ತಾದುದೆನ್ನಲು ಸಾಧ್ಯವೇ? ಇದೊಂದು ಸಚಿವಾರಾಧನಾ ಯುಗ. ಸಚಿವರಲ್ಲಿ ಹಲವರು ಇಂದ್ರಿಯ ಸೇವಕರು. ಅಂಥವರಿಗೂ ಅಳಿಗಾಲದ ಹಿಂದು ರಾಜರಿಗೂ ವ್ಯತ್ಯಾಸ ಬಹಳ ಕಡಿಮೆ. ಆಡಿ ಅಳಿಯುವುದೇ ಅಂಥವರಿಗೆ ಆಡಳಿತ – ಎಂಬುದನ್ನು ಜನ ಹೃದ್ಗತ ಮಾಡಿಕೊಂಡಿಲ್ಲ. ಅದರಿಂದ ಅದು ಮೊಬಾಕ್ರೆಸಿಯನ್ನು ಸಾಕಲಾರಂಭಿಸಿದೆ. ಅದರ ಸ್ವರೂಪವಿಂದು Obessional Type ಆವೇಶವಶ್ಯತೆಯ ಮಾದರಿಯಾಗಿದೆ. ಅಪಕಲ್ಪನೆಗಳ ಆವೇಶವು ಆವಿಷ್ಟವಾದಾಗ ಅಪಾಯ ಸಂಭವಿಸದಿರದು. ಭಾರತವೀಗ ಅಪಾಯದ ಹೆಬ್ಬಾಯಿಯಲ್ಲಿ ಸಿಕ್ಕಿಕೊಂಡಿದೆ; ಚೀನ–ಪಾಕಿಸ್ತಾನಗಳ ಅಡಕೊತ್ತಿನಲ್ಲಿ ಸಿಕ್ಕಿಕೊಂಡಿದೆ; ಅಹನ್ಯಹನಿ ಕಾಲ ಕ್ಷೇಪ ಬಹುಜನರದಾಗಿದೆ. ಆದರೂ ರೈಟಿಸ್ಟರ, ಸ್ವತಂತ್ರ ಪಕ್ಷೀಯರ ಮನಃಪ್ರಣಾಲಿಯವರದೇ ಮೇಲುಗೈಯಾಗಿದೆ. ಅಂಥವರದ್ದೇ ಈ ಆಹಾರ ಧೋರಣೆ, ನಿರ್ಯಾತ ಧೋರಣೆ, ಕರಾರೋಪಧೋರಣೆ, ಪ್ರೋಜೆಕ್ಟರುಗಳ ಧೋರಣೆ, ಶಿಕ್ಷಣ ಧೋರಣೆ, ನಿಯೋಜನ ಧೋರಣೆ, ಉದ್ಯಮ ಧೋರಣೆ. ತಾಂತ್ರಿಕ ಉತ್ಪಾದನಾ ಧೋರಣೆ! ಈ ತಾಮಸ ಪ್ರಭುತ್ವ ಹೋಗಲು ವ್ಯಕ್ತಿಗಳ ಸತ್ವಶುದ್ಧೀಕರಣ (Purifiction of character) ಸಮಾಜದಲ್ಲಿ ಬುದ್ಧಿವಂತ ಪ್ರಾಮಾಣಿಕರ ಲಕ್ಷ್ಯವನ್ನು ಸೆಳೆಯಬೇಕು. ಜಾತೀಯ ವೈಷಮ್ಯಕ್ಕೆ ಅದ್ವೈತಾಚಾರವೊಂದೇ ಮದ್ದು. ಜಗತ್ತಿನಲ್ಲಿರುವ ಭೇದರೂಪದ ಮಿಥ್ಯೆಯ ನಾಶವನ್ನೇ ಗುರಿಯಾಗಿ ಇಟ್ಟುಕೊಂಡ ಅದ್ವೈತವು ರಾಷ್ಟ್ರೀಯ ಅದ್ವೈತವನ್ನು ಬೆಳೆಸಲಾರದೇ? ಅನೇಕರಿಗೆ ಅದ್ವೈತವೇ ಮಾಯೆ, ಮಿಥ್ಯೆ – ವಿಚಾರದಲ್ಲಿ ಮತ್ತು ಅಥವಾ ಆಚಾರದಲ್ಲಿ. ಅವರೇ ಇಂದ್ರಿಯ ಪೂಜಕರು (Sensualists) ಇಂದ್ರಿಯವಿಂದು ಇಂದ್ರನಾಗಲು ಬಿಟ್ಟ ಜನರಿಗೆ ಜವಾಬುದಾರಿ ಎಲ್ಲಿ? ಸರಕಾರವೆಲ್ಲಿ? ಇಂದ್ರಿಯವೇ ಸರಕಾರ, ಸರ್ವಕಾರ, ಸರ್ವಾಧಿಕಾರಿ, ನಿರಂಕುಶ ಪ್ರಭು. ಮಿಕ್ಕ ದೇವರ ಹಾಗೂ ಆದರ್ಶಗಳ ಆರಾಧನೆಗಳೆಲ್ಲವೂ ಕುತ್ತಿಗೆಗಿಂತ ಮೇಲಿನವುಗಳು. ಇದು ಡೆಮೊಕ್ರಸಿಯಲ್ಲ, ವೈಯಕ್ತಿಕ "ಇಂದ್ರಿಯೊಕ್ರಸಿ!". "ಜಾತ್ಯೋಕ್ರೆಸಿ" ಅದರ ಸಾಧನ! ಗುಂಪುಗಾರಿಕೆಯ ಸಾಹಿತ್ಯ ಕಾರಣ – ರಾಜಕಾರಣಗಳು ಅದರ ತಂತ್ರಪ್ರಕಾರ!

Oedipus Complex ಪಿತೃದ್ವೇಷ ಗ್ರಹವು ಒಂದು ವಿಧದ ಚಂಡಿತನ. ಅಂಥ ಪೌರಾಣಿಕತೆಯೊಂದು ಸಾಂಸ್ಕೃತಿಕ Necrophilia ಮೃತದೇಹದೊಡನೆ ಆಡುವ

ರಕ್ತಕ್ರೀಡೆ. ಆ ಉತ್ತರ ಧ್ರುವಕ್ಕೂ ಈ ದಕ್ಷಿಣ ಧ್ರುವಕ್ಕೂ ಚುಂಬಕ ಗಾಳಿಯು ಎಂದೆಂದೂ ಬೀಸದು. ಈ ಅತಿಗಜ – ಅಲ್ಪಕೇಸರಿ ಯೋಗದ ಸಾಮಾಜಿಕ ಮನಃಶಾಸ್ತ್ರವು Tribal conflict ಬರ್ಬರ ಯಾದವಿ, ಅಧರ್ಮ ಯುದ್ಧ. Incompatibility is the law of life ಇಜ್ಜೋಡು ದಾಂಪತ್ಯ ಸಾರ್ವತ್ರಿಕವಾಗಿದೆ. ಜಾತಿಕಲಹ, ವರ್ಗಕಲಹ, ಲಿಂಗಕಲಹ, ವಯಃಕಲಹ, ಪದವೀಕಲಹ, ವಿಚಾರಕಲಹ, ವ್ಯವಹಾರಕಲಹ, ಪ್ರಾದೇಶಿಕ ಕಲಹ, ಭಾಷಾಕಲಹ, ಸಾಹಿತ್ಯ ಕಲಹ, ಅಧಿಕಾರಕಲಹಗಳು ನಿರ್ನಾಯಕ ಸಮವಾದ ವಿನಾಯಕತೆ ರೂಪಿತವಾದಾಗ ಇಂದ್ರಿಯದಾಸರ ಅಸಮನ್ವಿತ ರಾಶಿಯಲ್ಲಿ ನಿತ್ಯವೂ ಅನುಭವಕ್ಕೆ ಬಾರದಿರದು. ಸಹಕಾರ, ಒಕ್ಕಟ್ಟು, ವಿಧೇಯತೆ, ಶ್ರದ್ಧೆಗಳೆಲ್ಲವೂ ವೈಯಕ್ತಿಕ ಇಂದ್ರಿಯ ಸಂತರ್ಪಣದ ಸಾಧನಗಳ ಸಂಗ್ರಹಕ್ಕಿಳಿದ ಚಿಲ್ಲರೆ ಗುಂಪುಗಳ ಬಳಕೆಗಷ್ಟೇ ಪರಿಸೀಮಿತ. ಈ ಚಿಲ್ಲರೆ ಅಥವಾ ಕ್ಷುದ್ರ ಭಾರತ (Small India) ನಿರ್ಮಾಣವಾಗಲು ನೆಹರು ಅಂಬೇಡ್ಕರರೆಂಬ ಕ್ಷುದ್ರ ಬ್ರಹ್ಮರು Adult Franchise System ವಯಸ್ಕ ಮತದಾನ ಪದ್ಧತಿಯನ್ನೂ Autonomous States ಸ್ವಾಯತ್ತ ರಾಜ್ಯಗಳನ್ನು Secularism ಲೌಕಿಕತೆಯನ್ನೂ ಜಾರಿಗೆ ತರಲು ವ್ಯವಸ್ಥೆ ಮಾಡಿದ ಶೈಕ್ಷಣಿಕ ಹಾಗೂ ಪ್ರಶಾಸನಾತ್ಮಕ ಸಂಪ್ರದಾಯಗಳೇ ಕಾರಣ. ಈ ಸಂಪ್ರದಾಯಗಳ ಪ್ರಚಾರವನ್ನು ಎದುರಿಸುವಂಥ ನೇತ್ರಬ್ರಹ್ಮರು ಉದಯಿಸಲಿಲ್ಲ. ಅದರಿಂದ "ಉದಯವಾಯಿತು ನಮ್ಮ ಕಲಹ ಕನ್ನಡ ನಾಡು". ರಾಜನ್ಯರ ಅನ್ಯರಾಜ ಸಹಜ ನಡತೆ ಸರ್ವತ್ರ ದ್ವೈತವಿಧಯಕತೆಯನ್ನು, ಪೈಪೋಟಿಯನ್ನು, ಒಳತೋಟಿಯನ್ನು, ಒಳಸಂಚನ್ನು ವ್ಯಕ್ತಗೊಳಿಸಲಾರಂಭಿಸಿದ್ದರಿಂದ ದೇವಶಕ್ತಿಗಿಂತ ದೈತ್ಯಶಕ್ತಿ ಸರ್ವ ಕಾರ್ಯಕ್ಷೇತ್ರಗಳಲ್ಲೂ ಪ್ರಭಾವಿಯಾಗಿ ಎಲ್ಲ Standards ಮಟ್ಟಗಳೂ ನೆಲಸಮವಾಗತೊಡಗಿದವು. ಆದುದರಿಂದ ನಮ್ಮ ಪತ್ರಿಕಾ ವ್ಯವಸಾಯ ಕೂಡ ಅಪೂರ್ಣ ಪ್ರಜ್ಞತೆಯ ಅಂಧಕಾರದಲ್ಲಿ ಸಿಕ್ಕಿ "ಮಹಾಕ್ಷುದ್ರ ಕಾವ್ಯ ಪ್ರಪಂಚ" ವಾಯಿತು; ಪಾಕಿಸ್ತಾನ, ಬ್ರಹ್ಮದೇಶ, ಚೀನಗಳ ಜೀವನ ಚಿತ್ರಗಳು ಕೂಡ ಅಜ್ಞಾತವಾಗಿ ಉಳಿಯುವಂತಾಯಿತು. ಇಸ್ರೇಲ್–ಜಪಾನುಗಳಂತಹ ಪ್ರಗತಿಪರ ನಾಡುಗಳ ಜೀವನ ವ್ಯವಹಾರಗಳು ಅಗಮ್ಯವಾದವು.

Hatred of the past ಹಿಂದಿನ ಸಂಸ್ಕೃತಿಯ ದ್ವೇಷವು ಪಿತೃ ದ್ವೇಷಗ್ರಹದ ಒಂದು ರೂಪ. ವೇದಾಂತ ದ್ವೇಷವು ಅಂಧ ಪೌರಾಣಿಕತೆ Blind adherence to mythology and dogma, ಕೆಲವೊಮ್ಮೆ ಆಭಾಸಿಕ ವೈಜ್ಞಾನಿಕತೆ (Pseudo - scientificism). ಈ ಎರಡರ ಫಲವಾಗಿ the ordinary is honoured as extra ordinary ಸಾಮಾನ್ಯವು ಮಾನ್ಯವಾಯಿತು; ಮಾನ್ಯವು ಮೂಲೆಗುಂಪಾಯಿತು. ಮಾನ್ಯಮಟ್ಟಗಳು ಮೂಲೆ ಗುಂಪಾಗುವುದು ನಾಗರಿಕತೆಯ ಪತನದ ಲಕ್ಷಣ. ಪತಿತರ ರಾಶಿಯು ರಾಷ್ಟ್ರೀಯ ಸಮಾಜವೆನ್ನಿಸಲಾರದು.

"Imperfections in the educational systems are constituting unnecessary drags on development ಶಿಕ್ಷಣ ಪದ್ಧತಿಗಳಲ್ಲಿರುವ ನ್ಯೂನತೆಗಳು ಅಭಿವೃದ್ಧಿ

ಮಾರಕಗಳಾಗಿವೆ" ಎಂಬುದಿಲ್ಲಿ ರಾವಣರ ದೃಷ್ಟಿಯಿಂದಲೂ ಸತ್ಯ, ರಾಮನ ದೃಷ್ಟಿಯಿಂದಲೂ ಸತ್ಯ. ಆಳ್ವ ಮಿರ್ದಲಾರ ಈ ಅಭಿಪ್ರಾಯವು traditions and beliefs inimical to development ಅಭಿವೃದ್ಧಿ ವಿರುದ್ಧವಾದ ಸಂಪ್ರದಾಯ ಹಾಗೂ ನಂಬಿಗೆಗಳ ಬಗೆಗೆ ಎಂದು ಸ್ಪಷ್ಟಪಡಿಸಲಾಗಿದೆ. ಆದರೆ "ಅಭಿವೃದ್ಧಿ"ಯ ಲಕ್ಷಣವನ್ನು ಅವರು ಹೇಳಿಲ್ಲ. "Social justice ಸಾಮಾಜಿಕ ನ್ಯಾಯ"ದ ಬಗ್ಗೆ ಹೇಳುವವರೂ ಹಾಗೆ ಅದರ ಭಿನ್ನ ಲಕ್ಷಣಗಳನ್ನು ಮನಸ್ಸಿನಲ್ಲಿಟ್ಟುಕೊಂಡಿರುತ್ತಾರೆ. ಗಾಂಧೀಯವರೊಬ್ಬರೇ ನೀತಿಬಾಹಿರ ಆರ್ಥಿಕ ಅಭಿವೃದ್ಧಿಯನ್ನು ಖಂಡಿಸಿದವರು. ಭಾರತದ ನೀತಿಯ ಬುನಾದಿ "ಅಹಿಂಸೆ, ಸತ್ಯ, ಅಸ್ತೇಯ, ಶೌಚ, ಇಂದ್ರಿಯ ನಿಗ್ರಹ"ಗಳೆಂಬ ವೈಯಕ್ತಿಕ ಹಾಗೂ ಸಾಮೂಹಿಕ ಆಚಾರ ತತ್ವಗಳು. ಸಮಾಜವಾದೀಯ ಸಮಾಜದ ಮಾನವತಾವಾದ ಈ ತತ್ವಗಳ ಹೊರಗಿನದಲ್ಲ. ಇಂದ್ರಿಯ ದಾಸ್ಯವು ಸರ್ವ ಸಾಮಾಜಿಕ ಉದಾತ್ತ ಆದರ್ಶಗಳಿಗೂ ಪ್ರತಿಕೂಲವಾದುದು. ಶಿಕ್ಷಣ ಪದ್ಧತಿಗಳ ನಿಯಾಮಕರು ಇಂದ್ರಿಯ ದಾಸ್ಯದಿಂದ ಅಮುಕ್ತರಾಗಿರುವವರೆಗೆ ಕಂಸಶೀಲದ ಪ್ರಸಾರ ನಿಲ್ಲದು; ಕೃಷ್ಣಶೀಲೋನ್ಮುಖತೆ ಹುಟ್ಟದು. ಶಿಕ್ಷಣ ಮಂತ್ರಿಗಳೂ ವೈಸ್ ಛಾನ್ಸೆಲರರೂ ಪಬ್ಲಿಕ್ ಸರ್ವಿಸ್ ಕಮಿಶನ್ನಿನವರೂ ಐಷಾರಾಮಜೀವಿಗಳಾಗಿರುವವರೆಗೆ, ಪ್ರೈವೇಟ್ ಮ್ಯಾನೇಜ್‌ಮೆಂಟಿನವರೂ ಇನ್ಸ್‌ಪೆಕ್ಟರರೂ ಡೈರೆಕ್ಟರರೂ ಅಜಿತೇಂದ್ರಿಯರಾಗಿರುವವರೆಗೆ ಶಿಕ್ಷಣ ಪದ್ಧತಿಗಳು ಸುಧಾರಿಸುವುದು ಅತ್ಯಂತ ಅಸಂಭವ. ಕೇವಲ ಬದಲಾವಣೆಗಳನ್ನು ಸುಧಾರಣೆಗಳೆನ್ನಲು ಸಾಧ್ಯವಿಲ್ಲ. ಸದ್ಯದ ಶಿಕ್ಷಣದ ಸಾಮಾನ್ಯ ಫಲ Schizo-phrenia – ಕಲ್ಪನಾರತಿ ಕ್ರೀಡೆ, ಶ್ರಮವಿಮುಖತೆ, ನಿರ್ಲಜ್ಜ ಭೋಗಲಾಲಸೆ. Hallucination ಅಂತರ್ ಭ್ರಮಾವಿಲಾಸ ಕೂಡ ಅದರ ಫಲವೆನ್ನಬಹುದು. ಜಗತ್ತಿನ ಆಗು ಹೋಗುಗಳ ನಿಜವಾದ ಅರ್ಥವನ್ನು ಅರಿತುಕೊಳ್ಳುವ ಶಕ್ತಿಯೇ ಅಂತರ್ ಭ್ರಮಣ ಪ್ರವೃತ್ತಿಯಿಂದ ಕುಂಠಿತವಾಗುತ್ತದೆ. ಅಂಥ ಭ್ರಾಂತ ದೃಷ್ಟಿಗೆ ಕಂಡದ್ದು ವಾಸ್ತವಿಕವೆಂದೂ ಆಗಿರದು. ಆ ದೃಷ್ಟಿಯವರ Euphoria – ಆಶಾವಾದದ ಸುಖೀಮಾನಿತೆಗಳೂ ನಿರಾಶಾವಾದ Hypochondria – ರುಗ್ಣ ಮಾನಿತೆಗಳೂ ಕೇವಲ ಭ್ರಾಂತಿವಿಲಾಸಗಳು. ಮುಖಂಡರು ಭ್ರಮಿಷ್ಠರಾಗುವುದು ಒಂದು ದೇಶದ ದುರಂತ ದೈವಲೀಲೆ; ಅವರನ್ನು ಪದಚ್ಯುತಿಗೊಳಿಸಲಾಗದಿರುವುದು ನರಕ ದೈವ ದುರ್ವಿಪಾಕ. ಉಕ್ತರೋಗಿಗಳ ದೆಸೆಯಿಂದ Abulia ದೋಲಾಯ ಮಾನತೆಯು ಮನುಷ್ಯನಲ್ಲಿ ಚಿರಸ್ಥಾಯಿಯಾಗಿ ನಿಲ್ಲುತ್ತದೆ. ದೋಲಾಯ ಮಾನರಿಗೆ ಬಾವಲಿಗಳ ತ್ರಿಶಂಕು ಸ್ವರ್ಗವು ಕಟ್ಟಿಟ್ಟದ್ದು, ಬೇತಾಳ ಬ್ರಹ್ಮರಾಕ್ಷಸ ಮನೋಧರ್ಮಗಳು ಮೀಸಲು. ಆಗ ಶೈಲಾಧಿರಾಜತನಯಾ ನ, ಯಯೌ, ನ, ತಸ್ಥೌ – ಜೀವನ Stagnant ನಾರಲು ಶುರುವಾಗುತ್ತದೆ.

ಮಾನವ ದ್ರವ್ಯದ ಸುಧಾರಣೆಯನ್ನು ಪರೋಪದೇಶ ಪಂಡಿತರೂ ಮತ್ಸರ ಗ್ರಸ್ತರೂ ದುರಹಂಕಾರಿಗಳೂ ಆತ್ಮೋತ್ತಮ ಭ್ರಮರೂ ಮಾಡಬಲ್ಲರೆಂದು ಆಶಿಸುವುದು ವ್ಯರ್ಥ. ಅಂಥ ಅನಿಯಂತ್ರಿತ ಜೀವಿಗಳ ಆಭಾಸಿಕ ವೀರಾವೇಶದ ಸ್ತುತಿ, ಪ್ರಶಂಸೆ,

ಮೆಚ್ಚಿಗೆ, ಪುರಸ್ಕಾರಗಳು ಸಮಾಜಕ್ಕೆ ಆತ್ಮಗ್ಲಾನಿಕರ. ತಂತ್ರಕ್ಕಾಗಿ ತಂತ್ರ, ಕಲೆಗಾಗಿ ಕಲೆ, ವಿಜ್ಞಾನಕ್ಕಾಗಿ ವಿಜ್ಞಾನ, ರಾಜಕೀಯಕ್ಕಾಗಿ ರಾಜಕೀಯ, ಅರ್ಥಕ್ಕಾಗಿ ಅರ್ಥ, ಪದ್ಯಕ್ಕಾಗಿ ಪದ್ಯ, ಹೆಣ್ಣಿಗಾಗಿ ಹೆಣ್ಣು, ಗಂಡಿಗಾಗಿ ಗಂಡು ಎಂಬಂತಹ ವಾದಗಳು ಈ ಸಾಪೇಕ್ಷ ಜಗತ್ತಿನಲ್ಲಿ ಅನೃತವಾದಗಳು, ಇಂದ್ರಿಯಾರಾಮ ಶುಕಗಳ ಕಪಟೋಪದೇಶಗಳು. ಅಂಥವರ ಆಧುನಿಕತೆ – ಆಂಗ್ಲ ವ್ಯಾಮೋಹಗಳ ಮಾಲಿನ್ಯವನ್ನು ಗೌರವಿಸುವ ಗಾಂಪತನವಿರುವವರೆಗೆ ಪಂಪತನ ಕನಸಾಗಿಯೇ ಉಳಿಯುವುದು; ಮಾಯೆಯ ಅರ್ಥ ಗೊತ್ತಾಗದ ಪೂರ್ಣ ಮಿಥ್ಯಾರ್ಥವಾದಿತ್ವ ನೆಲೆ ನಿಲ್ಲುವುದು – ಅದರ ಅಪೂರ್ಣ ಪ್ರಜ್ಞಾರ್ಥ ಹೊಳೆಯದಾಗುವುದು – ವನಜೀವನ ನವಜೀವನವೆನ್ನಿಸುವುದು.



['ಯುಗಪುರುಷ' – ದಸರಾ ವಿಶೇಷಾಂಕ – ೧೯೬೮]

# ೨೯. ನಡತೆ

ನಡತೆಯ ಬಗ್ಗೆ ನಮ್ಮಲ್ಲಿ ಸಾಹಿತ್ಯಕ್ಕೇನೂ ಕಡಿಮೆಯಿಲ್ಲ. ನೀತಿಶಾಸ್ತ್ರಗಳು ಹೇರಳವಾಗಿವೆ, ಸುಭಾಷಿತಗಳು ಅನರ್ಘವಾಗಿವೆ; ಧರ್ಮಗ್ರಂಥಗಳ ಹೊರೆ ಹೊರೆಯೇ ಇದೆ. ಪರೋಪದೇಶ ಪಾಂಡಿತ್ಯದ ಬಗ್ಗೆ ಟೀಕೆಗಳಿಗೂ ಕಡಿಮೆಯಿಲ್ಲ. Devil quoting scriptures ದೆವ್ವ ಕೂಡ ವೇದಾಂತ ಹೇಳುವುದು ಅಷ್ಟಿಷ್ಟಲ್ಲ. ಹಾಗೆ ಹೇಳುತ್ತದೆಂದು ಮತ್ತೊಂದು ದೆವ್ವ ಉಪಟೀಕೆ ಪ್ರಕಟಮಾಡಿರುವುದೂ ಸ್ವಲ್ಪವಲ್ಲ. ಆದರೆ ವಸ್ತುಸ್ಥಿತಿ ಬೇರೆಯೇ ಆಗಿ ಉಳಿದುಹೋಗಿದೆ. ವಾಕ್ಕಾರ್ಯಗಳಲ್ಲಿ ಸಾಮಂಜಸ್ಯವಿಲ್ಲ. ವಾಕ್ಕಲಹಕ್ಕಿಂತ ಹೆಚ್ಚಿನದೇನೂ ಆಗುತ್ತಿಲ್ಲವೆಂಬುದು ಅರ್ಧ ಸಂತೋಷದ ಸಂಗತಿ. ಶಿಕ್ಷಣ ಕೊಡುವುದು ವಿದ್ಯಾರ್ಥಿಗಳನ್ನು ಸತ್ಪ್ರಜೆಗಳಾಗಿ ಮಾಡುವ ಉದ್ದೇಶದಿಂದ ಎಂದು ಹೇಳುತ್ತೇವೆ. ಈ ಬುದ್ಧಿಯಿಂದ ಸಮನಾದ ಆತ್ಮಶಕ್ತಿಹ್ರಾಸವೆಷ್ಟೆಂಬುದಕ್ಕೆ ವೈಯಕ್ತಿಕ ಜೀವನದಲ್ಲಷ್ಟೇ ಅಲ್ಲದೆ ಸಾಂಘಿಕ ಜೀವನದಲ್ಲೂ ಹಲವು ನಿದರ್ಶನಗಳು ಸಿಕ್ಕಿವೆ.

ನವಖಾಲಿಯಲ್ಲಿ ಗಾಂಧೀಜಿಯವರ ಸೋಲು, ಹಿಂದುಸ್ತಾನದ ರಕ್ಷಣೆಗೆ ಅಹಿಂಸೆ ಅಪ್ರಯೋಜಕವೆನಿಸಿದುದು, ಕಾಂಗ್ರೆಸ್ಸಿನ ಅಖಂಡ ಹಿಂದುಸ್ತಾನದ ಯೋಜನೆ ಬೋರಲುಬಿದ್ದುದು, ಹಿಂದು–ಮುಸ್ಲಿಂ ಐಕ್ಯ ಕೇವಲ ಭಾವಪ್ರಪಂಚದಲ್ಲುಳಿದುದು, ಮಾರಾಮಾರಿಗಳು ಹೆಚ್ಚುತ್ತ ನಡೆದುದು – ಇವೆಲ್ಲ ಜಗತ್ತಿಗೆ ಧರ್ಮದ ಬೆಳಕನ್ನು ತೋರಿದ ಪ್ರಖ್ಯಾತಿಯುಳ್ಳ ಭರತಖಂಡದಲ್ಲೇ ನಡೆದುದು. ಇದನ್ನು ಕಂಡೂ ಕಲಿಯದ ಮುಖಂಡರು ನಮ್ಮಲ್ಲುಳಿದು ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುತ್ತಿರುವುದನ್ನು ಕಣ್ಣಾರೆ ಕಾಣುತ್ತಿದ್ದೇವೆ. ತಾವು ಕರೆದ ಒಂದು ಸಭೆಯನ್ನು ಸರಿಯಾಗಿ ನಡೆಸಿಕೊಂಡು ಹೋಗಲು ನಮ್ಮ ಮುಖಂಡರೇ ಸಮರ್ಥರಾಗದಿರುವಾಗ ಸಾಮಾನ್ಯರನ್ನು ದೂರಿ ಪ್ರಯೋಜನವುಂಟೇ?

ಶಿಕ್ಷಣದಲ್ಲಿ ಕ್ರಾಂತಿಯಾಗಬೇಕೆಂದು ಇಂದು ಭಾರೀ ಕೂಗು ಕೇಳುತ್ತಿದೆ. ಆದರೆ ಒಬ್ಬ ಮಾನ್ಯರೆಂದಂತೆ ಇಂದು ಕಲಿಯಬೇಕಾದುದು ಹುಡುಗರಲ್ಲ, ಅವರ ಅಪ್ಪಂದಿರು ಎಂದು ಹೇಳಬೇಕಾಗುತ್ತದೆ. ಸರ್ವಹಿತದ ದೃಷ್ಟಿಯಿಂದ ಎಷ್ಟು ಹೆಚ್ಚು ಮಾತು ಹೊರಡುವುದೋ ಅಷ್ಟೇ ಆ ಭಾಷಣಕಾರನ ಸ್ವಾರ್ಥಬುದ್ಧಿಯು ಹೆಚ್ಚುತ್ತದೆಂಬುದು ಇಂದಿನ ನಿಯಮ. ಯೋಜ್ಯರು ಎಷ್ಟೇ ಯೋಗ್ಯರಿರಲಿ ಯೋಜಕರು ಅಯೋಗ್ಯರಿರುವುದರಿಂದ ಜೀವನದ ವಿವಿಧ ರಂಗಗಳಲ್ಲಿ ಇಂದು ನಮಗೆ ನಿರಾಶೆಯ ವಾತಾವರಣ ಉಂಟಾಗಿದೆ. ಇಂದಿನ ಯೋಜ್ಯಯೋಜಕರು ಕೆಲಕಾಲದವರೆಗೆ ಪರಸ್ಪರ ಒಪ್ಪಂದದಿಂದ ಪರಸ್ಪರ ಸ್ಥಾನಗಳನ್ನು ಅದಲು ಬದಲು ಮಾಡಿಕೊಂಡರೆ ಉಭಯ ಹಿತವಾಗುವುದರಲ್ಲಿ ಏನೂ ಸಂದೇಹವಿಲ್ಲ. ಕೆಲವೇ ಸಂಸ್ಥೆಗಳಲ್ಲಿ ಹೀಗೆ ಮಾಡಿದರೂ

ಇಡಿಯ ನಾಡಿನಲ್ಲೇ ಅದ್ಭುತ ಪರಿಣಾಮವುಂಟಾಗಬಹುದು. ಇದರಿಂದ ಪರಸ್ಪರರ ಕಷ್ಟಸುಖಗಳು ಚೆನ್ನಾಗಿ ತಿಳಿದು ಐಕ್ಯಮಾರ್ಗದಿಂದ ಸಾಗಿ ಎರಡು ವರ್ಗದವರೂ ಉತ್ತಮ ನಾಗರಿಕರಾಗಿ ಬಾಳಬಹುದು.

ಭಾರತವು ಏಶಿಯಾದ ಹೃದಯ, ಬೆಳಕಿನ ತವರು, ಸಾರಸ್ವತನಿಧಿ, ಧರ್ಮಸಿಂಧು, ದೇವದೂತರ ನಾಡು, ಸ್ವತಂತ್ರ ಹಿಂದುಸ್ತಾನದ ಜನರು ಅತಿಮಾನವರಾಗುವರು – ಎಂದು ಕವಿತೆ ಬರೆದು ಓದಿ ಚಪ್ಪಾಳೆಯನ್ನು ಕೇಳಬಹುದು. ಆದರೆ ಬಂದ ಲಾಭವೇನು? ಇಂದು ನಮ್ಮ ಸಮಾಜದ ಪ್ರತಿಯೊಬ್ಬನೂ ಆತ್ಮನಿರೀಕ್ಷಣೆಯಿಂದ ಚರಿತ್ರಶುದ್ಧಿಯತ್ತ ಗಮನ ಕೊಡದಿದ್ದರೆ ಕೆಲವೇ ಕಾಲದಲ್ಲಿ ಭಾರತವೊಂದು ಅನಾಗರಿಕ ದೇಶವೆನಿಸುವುದು ಖಂಡಿತ. ಒಳ್ಳೆಯುವರಾಗುವುದೆಂದರೆ ಒಳ್ಳೆಯುದಕ್ಕೂ ಕೆಟ್ಟದ್ದಕ್ಕೂ ಬಾರದವರಾಗುವುದೆಂದಲ್ಲ. ಸತ್ವಶಾಲಿಗಳೂ, ಧರ್ಮವೀರರೂ, ಕಾರ್ಯಧುರಂಧರರೂ ಆಗಿ ಬಾಳಲು ಬೇಕಾದ ಶಿಕ್ಷಣ ನಮಗೆ ಸಿಗುವಂತೆ ನಾವು ಯತ್ನಿಸಬೇಕಾಗಿದೆ. ಉಪದೇಶಕನ ಮೇಲೆ ಅವಿಶ್ವಾಸವಿದ್ದರೆ ಉಪದಿಷ್ಟದ ಮೇಲೆ ತಿರಸ್ಕಾರವಿರಬೇಕಾದ ಕಾರಣವಿಲ್ಲ ಎಂಬುದನ್ನು ನಾವಿಂದು ಅರಿಯಬೇಕಾಗಿದೆ.

ಜೀವನದಲ್ಲಿ ಸೌಂದರ್ಯವಿಲ್ಲದೆ ಸಾಹಿತ್ಯದಲ್ಲಾದರೂ ಸೌಂದರ್ಯ ಹೇಗೆ ಕಾಣಿಸೀತು? ದೃಷ್ಟಿದೋಷದಿಂದ ಸೃಷ್ಟಿದೃಷ್ಟವೆನಿಸುವುದು ಸಹಜ. ಹಾಗೇ ಸೃಷ್ಟಿದೋಷದಿಂದ ದೃಷ್ಟಿ ದುಷ್ಟವಾಗುವುದೂ ಸ್ವಾಭಾವಿಕವೇ. ಈ ದ್ವಂದ್ವವನ್ನು ಮೀರಿ ನಿಲ್ಲಲು ಒಂದು ಕ್ಷಣವಾದರೂ ಸಾಧ್ಯವಾಗಬೇಕು; ಆಗ ನಮ್ಮ ರಸ, ರುಚಿ, ಟೀಕೆ, ಟಿಪ್ಪಣಿಗಳಿಗೆಲ್ಲ ನಮ್ಮ ಆಚಾರ ಹೇಗೆ ಅಡಿಗಲ್ಲೆಂಬುದು ಸ್ಪಷ್ಟವಾಗುತ್ತದೆ. ಸಂಸ್ಕೃತಿ ನಾಗರಿಕತೆಗಳ ಹೆಸರಿನಲ್ಲಿ, ಕಲೆ ವಿಜ್ಞಾನಗಳ ಹೆಸರಿನಲ್ಲಿ ಉಪದೇಶ ಉಪನ್ಯಾಸಗಳು ನಡೆದೇ ನಡೆಯುತ್ತವೆ. ಮನೆಗೆ ಹೋದ ಕೂಡಲೆ ಪ್ರತಿಯೊಬ್ಬನ ಪಾಡೂ 'ಅಜ್ಜಿಗೆ ಅರಿವೆಯ ಚಿಂತೆ, ಮೊಮ್ಮಗಳಿಗೆ ಕಜ್ಜಾಯದ ಚಿಂತೆ' ಎಂದೇ ಆಗಿದೆ. ಸರ್ವಾಪರಾಧವನ್ನೂ ತಮ್ಮ ಮೇಲೆ ಹೊತ್ತುಕೊಂಡು ಆತ್ಮನಿಂದೆ ಮಾಡಿಕೊಳ್ಳುವುದನ್ನೇ ಜೀವನದ ಧ್ಯೇಯವಾಗಿಟ್ಟುಕೊಳ್ಳುವ ಜನರೊಂದು ಕಡೆ; ಎಲ್ಲ ತಪ್ಪನ್ನೂ ದೇವರ ತಲೆಗೆ ಕಟ್ಟಿ ತಮ್ಮ ಹೊಣೆಯೇನೂ ಇಲ್ಲವೆಂದು ತಮಗೆ ಬೇಕಾದುದನ್ನು ಯೇನಕೇನ ಪ್ರಕಾರೇಣ ಸಾಧಿಸುವವರು ಮತ್ತೊಂದು ಕಡೆ; ಇವರೀರ್ವರ ನಡುವೆ "ಪರಿಸ್ಥಿತಿ"ಯೆಂಬುದೊಂದನ್ನು ದೂರಿಕೊಂಡು ಅಡ್ಡಗೋಡೆಯ ದೀಪದಂತೆ ಕುಳಿತು ಗೆದ್ದೆತ್ತಿನ ಬಾಲ ಹಿಡಿಯುತ್ತ, ಧ್ಯೇಯವಿಲ್ಲದಿರುವುದೇ ಪರಮಧ್ಯೇಯವೆಂಬ ನೃಶಂಸರ ಗುಂಪೊಂದು. ಹೀಗೆ ನಾನಾ ಚಿಂತನದಿಂದ ನಾನಾ ಮುಖರಾಗಿ – ಆದರೆ ಪ್ರಗತಿಮುಖರಾಗದೆ – ಸಾಗುವ ಜನರಿಂದು ಶಾಂತಿಯನ್ನು ಕಾಣದೆ ಹಂಬಲಿಸುತ್ತಿದ್ದಾರೆ. ಈ ಸಂಕಟದಿಂದ ಪಾರಾಗಬೇಕಾದರೆ ಶ್ರೀ ಬೇಂದ್ರೆಯವರೆನ್ನುವಂತೆ ಕೇವಲ ಗುಣ ನಡತೆ ಮನಸ್ಸುಗಳನ್ನು ತಿದ್ದುವ ಉದ್ದೇಶವುಳ್ಳ ಯೋಗ ಶಾಲೆಗಳ ನಿರ್ಮಾಣಕ್ಕಾಗಿ ಪ್ರಯತ್ನ ನಡೆಯಬೇಕಾಗಿದೆ. ದಿನಕ್ಕೊಂದು ಬಾರಿಯಾದರೂ ಅಲ್ಲಿ ಹೋಗಿ ಅಲ್ಲಿರುವ ವಿಶ್ವಸ್ತವ್ಯಕ್ತಿಯು ಯಾವ

ಪ್ರಶ್ನೆ ಕೇಳಿದರೂ ಸಿಟ್ಟಿಗೇಳದೆ ಸದುತ್ತರಕೊಟ್ಟು ಬರುವ ನಿರ್ಬಂಧವನ್ನು ನಮ್ಮ ಮೇಲೆ ನಾವು ಹಾಕಿಕೊಳ್ಳಬೇಕು. ಇದೆಲ್ಲ ಅವ್ಯವಹಾರ್ಯವೆಂಬ "ನಾಗರಿಕರು" ಯಥಾಜಾತರಾಗಿ ಉಳಿಯದೆ ಗತ್ಯಂತರವಿಲ್ಲ. ಭಾರತದ ನಾಗರಿಕರು ಇಂತಹ ಸಾಧಕರಾಗಿ ಇತಿಹಾಸಪ್ರಸಿದ್ಧವಾದ ಜಗತ್ತಿಗೆ ಧರ್ಮೋಪದೇಶಮಾಡುವ ಪಟ್ಟವನ್ನು ಪುನಃ ಸಂಪಾದಿಸಬೇಕು. ಜೀವನದ ಸರ್ವಾಂಗೀಣ ಉನ್ನತಿಗೆ ನಡತೆಯು ಉಸಿರಿನಂತಿರುವುದೇ ಈ ಮಾತಿಗೆ ಆಧಾರ.



**['ಜೀವನ' – ಸಂಪುಟ ೮, ಪುಟ ೪೭೧]**

# ೩೦. ಶೀಲ ಮತ್ತು ಸಾರ್ವಜನಿಕ ಕಾರ್ಯ

ಸಾಹಿತ್ಯವು ಜೀವನದ ಹೊರಗಿನ ಕರ್ಮಾಂಗವಲ್ಲ. ಜೀವನದ ಇತರ ಕ್ಷೇತ್ರಗಳಲ್ಲಿ ಅಕ್ರಮಾಚಾರವನ್ನಿಟ್ಟುಕೊಂಡವರು ಸಾಹಿತ್ಯ ಕ್ಷೇತ್ರದಲ್ಲಿ ಶುದ್ಧ ಬುದ್ಧ ಸಚ್ಚಿದಾನಂದ ಸ್ವರೂಪರೆನ್ನಿಸಿಕೊಳ್ಳುವುದು ಭಾರತೀಯ ಸಂಸ್ಕೃತಿಯಲ್ಲಿ ಸಾಧ್ಯವೇ? ದೇವಾಲಯದಲ್ಲಿ ಮಾತ್ರ ಮಡಿಯ ಆಚಾರವನ್ನಿಟ್ಟುಕೊಂಡು ಇತರ ಕಡೆಗಳಲ್ಲಿ ಇಂದ್ರಿಯ ಲೋಲುಪರಾಗಿ ಕುತ್ಸಿತಾಚಾರವನ್ನಿಟ್ಟುಕೊಂಡ ಪೂಜಾರಿಗಳನ್ನು ಪೂಜ್ಯರೆಂದು ನಮ್ಮ ಜನ ಗಣಿಸುವುದೇ?

"ದುರ್ಜನಃ ಪರಿಹರ್ತವ್ಯೋ ವಿದ್ಯಯಾಲಂಕೃತೋಽಪಿ ಸನ್

ಮಣಿನಾ ಭೂಷಿತಃ ಸರ್ವಃ ಕಿಮಸೌನ ಭಯಂಕರಃ"

ಎಂಬ ಅನುಭವದ ಮಾತು ಅಪತರ್ಕವೆನ್ನಿಸದು. ಕ್ರೌರ್ಯ-ಸೌಂದರ್ಯಗಳ ಮೇಳದ ಮೆಚ್ಚಿಕೆ ಭಾರತೀಯ ರಸಿಕ ಪರಂಪರೆಯಲ್ಲಿಲ್ಲ. ಉಗ್ರತೆ, ಕ್ರೋಧ ಮುಂತಾದ ಇತರ ಯಾವುದಾದರೂ ಭಾವದಲ್ಲಿ ಸಂದರ್ಭವೈಶಿಷ್ಟ್ಯದಿಂದ ಸೌಂದರ್ಯವನ್ನು ಕಾಣಬಹುದು. ಆದರೆ ಕ್ರೌರ್ಯದ ಕೌಶಲವನ್ನು ಹೃತ್ಪೂರ್ವಕವಾದ ಗಂಭೀರಾಭಿರುಚಿಯಿಂದ ಕಾವ್ಯದಲ್ಲಾದರೂ "ಭೇಷೆಂದು" ಮೆಚ್ಚಲು ಸಾಧ್ಯವೇ? ಕ್ರೌರ್ಯವರ್ಣನೆಯ ಕೌಶಲವನ್ನಲ್ಲದೆ ಕಾರ್ಯವನ್ನು ಅಥವಾ ಕ್ರೂರ ಕರ್ಮವನ್ನು ಇಲ್ಲವೆ ಕ್ರೂರಕರ್ಮಿಯನ್ನು ಮೆಚ್ಚುವ ಶಕ್ತಿ ಸಹೃದಯನಿಗಿರದು.

ಸತ್ವದ ಉದ್ರೇಕದಿಂದಲ್ಲದೇ ರಜಸ್ತಮಸ್ಸುಗಳ ಉದ್ರೇಕದಿಂದ ಮನಸ್ಸನ್ನು ತುಂಬಿಕೊಳ್ಳುವ ಭಾವನೆಗಳಿಗೆ ಅಸ್ವಾದ್ಯತೆ ಬರಲಾರದು, ನಮ್ಮ ರಸಸಿದ್ಧಾಂತದ ಪ್ರಕಾರ. ರೋಮನ್ ಚಕ್ರವರ್ತಿಗಳು ನಡೆಯಿಸುತ್ತಿದ್ದ "ಗ್ಲಾಡಿಯೇಟರುಗಳ ಯುದ್ಧ"ವನ್ನು ಕಲೆಯೆಂದು ಮೆಚ್ಚಿ ಆನಂದಿಸಲು ಯಾರಿಗೆ ಸಾಧ್ಯ? ಬಚ್ಚಲು ನೀರಿನಲ್ಲಿ ಸೂರ್ಯಕಿರಣ ಪ್ರಭಾವದಿಂದ ಕಾಮನ ಬಿಲ್ಲಿನ ಬಣ್ಣಗಳು ಕಂಡುಬಂದರೆ ಒಮ್ಮೆ ಜೀವಹಿಂಸಾರಹಿತವಾಗಿರುವುದರಿಂದ ಒಬ್ಬ ನೋಡಿ ಮೆಚ್ಚಬಹುದು. ಆದರೆ ಯಾಹ್ಯಾಖಾನನು ಛೂಬಿಟ್ಟ ಧೂರ್ತರ ಕೋವಿಗಳು ನಿರಪರಾಧಿಗಳಾದ ಆಬಾಲವೃದ್ಧ ಸ್ತ್ರೀಪುರುಷರನ್ನು ಸಂಹರಿಸುತ್ತಿರುವಾಗ ಅದರ ಕೈಚಳಕವನ್ನು ಮೆಚ್ಚುತ್ತ ನಿಂತಿರಲು ಸಹೃದಯನಿಗೆ ಸಾಧ್ಯವಾದೀತೇ?

ಕಲೆಯೊಂದು ಕರ್ಮ. 'ಕವೇಃ ಕರ್ಮ ಕಾವ್ಯಂ' ಎಂದ ಹಾಗೆ. ಅದು ಕೇವಲ ಹಿಂಸಾದಿ, ಹಿಂಸಾಮಧ್ಯ-ಹಿಂಸಾಂತವಾಗಿರುವುದು. ಅದಕ್ಕೆ ರಸ್ಯಮಾನತೆಯನ್ನು ತಂದುಕೊಡಲಾರದು. ಹಾಗೇ ಪರಹಿಂಸಾಪ್ರಿಯರು ಸಾಹಿತ್ಯದ, ಕಲೆಗಳಿಗೆ ಸಂಬಂಧಿಸಿದ ಚಟುವಟಿಕೆಗಳನ್ನು ನಡೆಸಲು ಅರ್ಹರಾಗರು ಅಥವಾ ಯಾವ ಸಾರ್ವಜನಿಕ ಕಾರ್ಯಗಳನ್ನು

ನಡೆಸಲೂ ಅರ್ಹರೆಂದೆನಿಸರು. ಒಬ್ಬನು ಒಂದು ಕೊಲೆ ಮಾಡಿದರೆ ಕೊಲೆಗಡುಕನೆನ್ನಿಸದೆ ಅನೇಕ ಕೊಲೆಗಳನ್ನು ಮಾಡಿದ ಅನಂತರವೇ ಕೊಲೆಗಡುಕನೆನ್ನಿಸಿಕೊಳ್ಳುವನೇ? ಎಷ್ಟು ಸಾರಿ ಸುಳ್ಳು ಹೇಳಿದ ಮೇಲೆ ಒಬ್ಬನು ಸುಳ್ಳುಗಾರನೆನ್ನಿಸಿಕೊಳ್ಳುತ್ತಾನೆ? ಒಂದು ಸಾರಿ ಹೇಳಿದರೆ ಸಾಕಾಗದೇ? ವರ್ಣನೀಯವಾದ ಒಂದು ವಸ್ತುವು ಜೀವನದಲ್ಲಿ ಸುಂದರವಾಗಿರದೆ ಸಾಹಿತ್ಯದಲ್ಲಿ ಸುಂದರವೆಂದು ವರ್ಣಿಸಲ್ಪಡಲು ಸಾಧ್ಯವೇ? ಹಾಗೆ ವರ್ಣಿಸುವುದಾದರೆ ಆ ವಸ್ತುವಿನ ವರ್ಣನೆ ಅದಾಗದು. ಅದು ಇನ್ನಾವುದೋ ಕಲ್ಪಿತ ಸುಂದರ ವಸ್ತುವಿನ ವರ್ಣನೆಯಾದೀತು ಅಷ್ಟೇ. ರಾವಣನ ವರ್ಣನೆಯು ರಾಮನ ವರ್ಣನೆಯಾಗದು. ರಾಮನ ವರ್ಣನೆ ರಾವಣನ ಪಾತ್ರದ ವರ್ಣನೆಯಾಗದು. "ಸಾಹಿತ್ಯವು ಜೀವನದ ಪ್ರತಿಬಿಂಬ" ಎಂಬುದರ ಅರ್ಥಸಾರ ಇಲ್ಲಿದೆ. ಜೀವನವು ವ್ಯಾಪಕ, ಸಾಹಿತ್ಯವು ವ್ಯಾಪ್ಯ. ಒಂದು ಜನಕ, ಇನ್ನೊಂದು ಜಾತ. ಒಂದು ಆಭಾಸಿಕವಾದಾಗ ಇನ್ನೊಂದು ನಿಜವಾಗದು.

ಜೊತೆಗೆ ಕಾವ್ಯದ ಪರಿಣಾಮಗಳು ಒಂದಲ್ಲ ಆರು. ರಸೇತರವಾದ ಉಳಿದ ಐದು ಪರಿಣಾಮಗಳ ಸ್ವರೂಪವನ್ನು ಸಾಮೂಹಿಕರು ಕೇವಲ ರಸೈಕ ದೃಷ್ಟಿಯಿಂದ ಕಡೆಗಣಿಸುವುದಿಲ್ಲ. ಇದಕ್ಕೆ ದಾಸ, ಶರಣ ಸಾಹಿತ್ಯಗಳು ಉದಾಹರಣೆಗಳು. ರಾಷ್ಟ್ರದ್ರೋಹಕರವಾದ ರಸವತ್ಕೃತಿಯನ್ನು ಸರಕಾರವು ಪ್ರಕಾಶ ಮಾಡಲು ಅಥವಾ ಪ್ರಸಾರ ಮಾಡಲು ಬಿಡದೆ ಇರುವದು ವಿಪಕ್ಷೋದಾಹರಣೆ. ರಾಷ್ಟ್ರದ್ರೋಹಿಗೆ ಒಂದು ಸರಕಾರವು ಅವನ ಕಲಾ ಕೌಶಲ್ಯಕ್ಕಾಗಿ ಬಹುಮಾನ ಕೊಟ್ಟಿದ್ದುಂಟೇ? ಇನ್ನು ಕಲೆಯ ಕೌಶಲವೂ ಅಷ್ಟಕ್ಕಷ್ಟೇ ಆಗಿರುವಲ್ಲಿ ಕೇಳುವುದೇ ಬೇಡ. ಹೀಗಿರುವಾಗ ಸಾರ್ವಜನಿಕ ಕಾರ್ಯಗಳಲ್ಲಿ ಅಸಾಮಾಜಿಕ ವರ್ತನೆಯುಳ್ಳವರನ್ನು ನೇಮಿಸಿಕೊಳ್ಳುವುದು ಮರ್ಯಾದೆ ಗೇಡನ್ನು ಒಂದಲ್ಲ ಒಂದು ದಿನ ಉಂಟುಮಾಡದೇ ಉಳಿಯದು.

"ಪ್ರಕ್ಷಾಲನಾದ್ಧಿ ಪಂಕಸ್ಯ ದೂರಾದಸ್ಪರ್ಶನಂ ವರಂ"

ಎಂಬುದು ಜಾಣರ ಮಾತು. ಚುನಾವಣೆಗಳು ಈಗಾಗಲೇ ಈ ಜಾಣತನವನ್ನು ಬಳಕೆಗೆ ತಂದುಕೊಳ್ಳದೆ ಮಾಡಿದ ಮತದಾನಗಳಾದಲ್ಲೆಲ್ಲಾ ಮೈಕೆಸರು ಮಾಡಿಕೊಂಡ ಅನುಭವವನ್ನು ಮತದಾರರಿಗೆ ಕೆಲವೆಡೆ ತಂದುಕೊಟ್ಟಿವೆ. ಅದರಿಂದಲೇ ರಾಶಿಗಟ್ಟಲೆಯಾಗಿ ಹೊಸ್ತಿಲು ದಾಟಿ ಪಕ್ಷಾಂತರ ಮಾಡುವವರು ಹುರಿಯಾಳುಗಳಾಗಬಾರದೆಂದು ಯುವ ಜನರು ಹಟ ಹಿಡಿಯುತ್ತಿದ್ದಾರೆ.

ಮಧ್ಯಪಾನವನ್ನು ಭಾರತೀಯ ಸಂಸ್ಕೃತಿ ಏಕೆ ಹೀಗಳೆಯುತ್ತದೆ? ಅದು ಇತರ ದುಃಶೀಲಗಳನ್ನು ವ್ಯಕ್ತಿಯಲ್ಲಿ ಪ್ರೇರಿಸುತ್ತ ಹೋಗುವುದೆಂದು. ಹಾಗೇ ಒಂದರಲ್ಲಿ ಹಿಂಸಕನಾದವನು ಅಥವಾ ವಂಚಕನಾದವನು ಇನ್ನೊಂದರಲ್ಲಿ ಬಹುಕಾಲಹಿಂಸಕ ಅಥವಾ ವಂಚಕನಾಗದೆ ಉಳಿಯಲಾರನು ಎಂಬುದನ್ನು ಪ್ರಬುದ್ಧರೆಲ್ಲರೂ ಬಲ್ಲರು. ಕೌಟಿಲ್ಯನ ಅರ್ಥಶಾಸ್ತ್ರವು ಈ ಬಗೆಯ ಸೂಕ್ಷ್ಮ ಮನಃಶಾಸ್ತ್ರಜ್ಞಾನವನ್ನು ಅನೇಕ ಕಡೆಗಳಲ್ಲಿ ಹೊರಗೆಡಹಿದೆ. ಅದರಲ್ಲೂ ಸಚಿವಾದಿ ದೊಡ್ಡ ಹುದ್ದೆದಾರರನ್ನು

ನಿಯಮಿಸಿಕೊಳ್ಳುವಾಗ ಅವರ ಅರ್ಹತಾ ಪರೀಕ್ಷೆಗೆ ಇಂಥ ನಿಕಷಗಳನ್ನು ಗಣ್ಯವಾಗಿ ಹೇಳಿದೆ. ಈ ಅಂಶವನ್ನು ಕಡೆಗಣಿಸಿದ್ದರಿಂದಲೇ ಪ್ರಜೆಗಳಿಗಿಂದು ಸುರಾಜ್ಯಭಾರವು ದುರ್ಲಭವಾಗಿದೆ. ಮುಖಂಡರು ಅರ್ಥಶಾಸ್ತ್ರಜ್ಞರಾಗದಿರುವುದು ದೇಶದ ದೌರ್ಭಾಗ್ಯ. ಕ್ರಿ.ಶ. ೮ನೆಯ ಶತಮಾನದವರೆಗೆ ಭಾರತದಲ್ಲಿ ರಾಜ್ಯಭಾರ ನಡೆಸಿದ ಯಾವ ರಾಜನೂ ಕೌಟಿಲ್ಯನ ಅರ್ಥಶಾಸ್ತ್ರದ ಸೂಕ್ಷ್ಮಜ್ಞತೆಯನ್ನು ಕಡೆಗಣಿಸಿದ್ದಿಲ್ಲ. ಕೌಟಿಲ್ಯನನ್ನು ಮರೆತು ರಾಜ್ಯಭಾರವನ್ನು ನಡೆಸಿದ ಮುಂದಿನ ಅರಸುಮನೆತನಗಳು ಹಿಂದಿನ ಮಟ್ಟದ ಸುರಾಜ್ಯಭಾರವನ್ನು ಪ್ರಜೆಗಳಿಗೆ ದೊರಕಿಸಿಕೊಡಲಾರದಾದರು. ಭಾರತೀಯರ ಅವ್ಯಾವಹಾರಿಕತೆ ಅಲ್ಲಿಂದಲೇ ಪ್ರಾರಂಬವಾಯ್ತೆನ್ನಬಹುದು. ಅಂದಿನಿಂದಲೆ ಪರದೇಶೀಯರ ದಾಳಿಗಳು ಪ್ರಾರಂಭವಾದವು. ಅವು ಇಂದಿನವರೆಗೂ ನಡೆಯುತ್ತ ಬಂದರೂ ನಮ್ಮ ಮುತ್ಸದ್ಧಿಗಳು ಕಣ್ಣು ತೆರೆಯಲಿಲ್ಲ. ಇದೀಗ ನಮ್ಮ ಪ್ರಧಾನಿಗಳು ಕೆಲಮಟ್ಟಿನ ವ್ಯಾವಹಾರಿಕ ವಿದೇಶ ನೀತಿಯನ್ನೂ ಯುದ್ಧ ನೀತಿಯನ್ನೂ ಅರಗಿಸಿಕೊಂಡಂತೆ ತೋರುತ್ತದೆ. ಆದರೂ ಇನ್ನೂ ಕಾದು ನೋಡಬೇಕು.

ಸರ್ವೋದಯ ಧ್ಯೇಯವಾದಿಯೇ ನಿಜವಾದ ರಾಷ್ಟ್ರವಾದಿ. ನಿಜವಾದ ಸಾರ್ವಜನಿಕ ಕಾರ್ಯಕರ್ತ. ಸ್ವಾರ್ಥೋದಯವಾದಿ ಯಾವ ಕಾರ್ಯಕ್ಷೇತ್ರದಲ್ಲಿಯೂ ಸಮಾಜ ಹಿತಕ್ಕೆ ಪ್ರಾಧಾನ್ಯವನ್ನು ಕೊಡಲಾರ. ಸಾರ್ವಜನಿಕ ಸಂಸ್ಥೆಗಳ ಅಧ್ವರ್ಯುಗಳು ದ್ವೇಷಾಸೂಯೆ ಮತ್ತು ಚಿಲ್ಲರೆ ಹಠಸಾಧನಗಳೆಂಬ ಸ್ವಾರ್ಥಮುಖಗಳಿಂದ ವ್ಯವಹರಿಸಿದಾಗ ಅವು ಕುಂಟುತ್ತ ಸಾಗುವಂತಾಗುವುದು ಸುಸ್ಪಷ್ಟ. ಆದುದರಿಂದಲೇ ರಾಷ್ಟ್ರಪಿತ ಗಾಂಧೀಜಿ ಅಹಿಂಸಾಚಾರವನ್ನು ಸರ್ವೋದಯ ಕಾರ್ಯಕರ್ತನ ಮಹಾಲಕ್ಷಣವೆಂದು ಸಾರಿದರು, ಅದನ್ನು ಇಷ್ಟು ಬೇಗ ನಾವು ಮರೆಯಬಹುದೇ?



**[“ಸಿರಸಿ ಸಮಾಚಾರ” ಪ್ರಜಾರಾಜ್ಯೋತ್ಸವದ ವಿಶೇಷಾಂಕ – ೧೯೭೨]**

# ೩೧. ವೈದಿಕ ಸಂಸ್ಕಾರಗಳ ಆಧುನೀಕರಣ

(ಪ್ರಾಚಾರ್ಯ ಶ್ರೀ ಬಿ.ಎಚ್. ಶ್ರೀಧರರು ಸಂಸ್ಕೃತ–ಕನ್ನಡ ಸಾಹಿತ್ಯಗಳಲ್ಲಿ ಪ್ರಕಾಂಡ ಪಂಡಿತರು ವೈದಿಕ ಸಂಸ್ಕಾರಗಳ ಪರಿಚಯದ ಜೊತೆಗೆ ಅವು ಸಮಕಾಲೀನ ಭಾರತದಲ್ಲಿ ಹೇಗೆ ರಾಜಕೀಯ ವಿಷವರ್ತುಲದಲ್ಲಿ ಸಿಲುಕಿ, ಅನೇಕ ಪೂರ್ವಗ್ರಹಗಳಿಗೆ ಒಳಗಾಗಿ, ಭಾವೀ ಭಾರತೀಯ ಪೀಳಿಗೆಗೆ ಸಿಲುಕದಂತಾದ ವಿಷಮಸ್ಥಿತಿಯ ಕಡೆಗೆ ನಮ್ಮ ಗಮನ ಸೆಳೆದಿದ್ದಾರೆ. ಪ್ರಸ್ತುತದಲ್ಲಿ ಅವುಗಳ ಆಧುನೀಕರಣದ ಕುರಿತು ಅವರು ಅಲ್ಲಲ್ಲಿ ಕೆಲವು ಮಾರ್ಗೋಪಾಯಗಳನ್ನು ಸೂಚಿಸಿದ್ದಾರೆ – ಸಂ)

ವೇದವೆಂದರೆ ಜ್ಞಾನ, ಜ್ಞಾನವೆಂದರೆ ಬ್ರಹ್ಮಜ್ಞಾನ, ಬ್ರಹ್ಮವೆಂದರೆ ಪರಮ ಸತ್ಯ. ಇದಕ್ಕೆ ಸಂಸ್ಕಾರಗಳ ಆದಾನ–ಪ್ರದಾನಗಳಿಲ್ಲ, ಸಂಸ್ಕಾರವು ಗುಣಾದಾನ. ಆಕಾರಾಧಿಷ್ಠಿತ ಬ್ರಹ್ಮವಾದ ಅನಿತ್ಯ ಸತ್ಯಗಳೆಲ್ಲವೂ ಸಂಸ್ಕಾರ ಪಾತ್ರಗಳು,

"ವಿದ್ಯಾ ದದಾತಿ ವಿನಯಂ
ವಿನಯಾದ್ಯಾತಿ ಪಾತ್ರತಾಂ
ಪಾತ್ರತ್ವಾದ್ಧನಮಾಪ್ನೋತಿ
ಧನಾದ್ಧರ್ಮ ತತಃ ಸುಖಂ"

ಧರ್ಮಾರ್ಥಕಾಮಮೋಕ್ಷಗಳಲ್ಲಿ ಅನುಕ್ರಮವನ್ನು ಹಿಡಿದವರು ಸಂಸ್ಕಾರಗಳಿಗೆ ಪಾತ್ರರು. ಮನೋವೈಜ್ಞಾನಿಕವಾಗಿ ಕ್ರಮವಿಕಾಸವನ್ನು ಅಪೇಕ್ಷಿಸುವುದು ಸಹಜ, ಈ ಮಾರ್ಗವನ್ನು ಅನುಸರಿಸದ "ಹಿಂದುಳಿದವರ" ಪುನರುದ್ಧಾರವು ಸಾಂಸ್ಕೃತಿಕವಾಗಿ ಅಸಾಧ್ಯ.

ಗರ್ಭಾದಾನಾದಿ ಸಂಸ್ಕಾರಗಳು ವೈದಿಕ. ಈಗ ಅವುಗಳೆಲ್ಲವೂ ಪ್ರಾಚೀನ ವೈದಿಕ ರೀತಿಯಿಂದ ನಡೆದುಬರುತ್ತಿಲ್ಲ. ಅವುಗಳನ್ನು ಬಿಡಲು ಪ್ರೋತ್ಸಾಹಕ ಪ್ರಚಾರವೂ ಅಲ್ಲಲ್ಲಿ ಪ್ರತ್ಯಕ್ಷಾಪ್ರತ್ಯಕ್ಷವಾಗಿ ನಡೆಯುತ್ತಿದೆ.

"ವೇದಃ ಸ್ಮೃತಿಃ ಸದಾಚಾರಃ
ಸ್ವಸ್ಯ ಚ ಪ್ರಿಯಮಾತ್ಮನಃ
ಏತಚ್ಚತುರ್ವಿಧಂ ಪ್ರಾಹುಃ
ಸಾಕ್ಷಾದ್ಧರ್ಮಸ್ಯ ಲಕ್ಷಣಂ"

ಈ ಚತುರ್ವಿಧ ಧರ್ಮ ಲಕ್ಷಣಗಳ ಮೂಲಕ ಪಾತ್ರತೆಯನ್ನು ಪಡೆದು ದ್ವಿಜ (ಸುಸಂಸ್ಕೃತ)ನಾಗಬೇಕೆಂಬುದು ವ್ಯಕ್ತಿಗಳಿಗೆ ಮಾಡಿದ ಉಪದೇಶಸಾರ. ವಿದ್ಯೆ, ತಪಸ್ಸು, ಜ್ಞಾನ, ಪುಣ್ಯಗಳೆಲ್ಲಾ ಧನಗಳು. ಧನದಿಂದ ಧರ್ಮ, ಧರ್ಮದಿಂದ ಧನ ಮತ್ತು ಪ್ರೇಯಃ ಶ್ರೇಯಸ್ಸುಗಳು, ಪ್ರೇಯಸ್ಸು ಮುಕ್ತೀತರ ಸುಖ, ಶ್ರೇಯಸ್ಸು ಮುಕ್ತಿ.

ಮುಕ್ತರ ಧರ್ಮ ಮುಕ್ತರಿಂದ ನಿರ್ಣೇಯ. ಅಮುಕ್ತರ ಧರ್ಮವು ಮಹಾಜನರಿಂದ (ಮಹಾತ್ಮರಿಂದ) ನಿರ್ಣೇಯ. ಕಾಲ ಕಾಲಕ್ಕೆ ಅವತರಿಸುವ ಮಹಾತ್ಮರು ಕಾಲಿಕ ಪರಿಸ್ಥಿತಿಗಳನ್ನು ಬಲ್ಲವರು. ಅವರು ಆಯಾ ಕಾಲಿಕ ಪರಿಸ್ಥಿತಿಗೆ ಸಹಜವಾದ ಸಂಸ್ಕಾರ ರೂಪಗಳನ್ನು ಜನತೆಗೆ ತಿಳಿಸುವರು.

ಗರ್ಭಾದಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ನಿಷ್ಕ್ರಮಣ, ಅನ್ನಪ್ರಾಶನ, ಚೂಡಾಕರ್ಮ, ಕರ್ಣವೇಧ, ಉಪನಯನ, ವೇದಾರಂಭ, ಸಮಾವರ್ತನ, ವಿವಾಹ, ದ್ವಿರಾಗಮನ, ಮೃತಕ, ಔರ್ಧ್ವದೇಹಿಕಗಳು ಷೋಡಶ ಸಂಸ್ಕಾರಗಳು (ಕನ್ನಡ ನಿಘಂಟು ೧೯೫೧, ಪುಟ ೨೯೮).

ಮಾತಾಪಿತೃತ್ವದ ಹೊಣೆ ಗರ್ಭಾದಾನದ ಹಿಂದೆ ಅಡಗಿದೆ, ತಾಯಿ ತಂದೆಗಳು ತಮ್ಮ ಮಕ್ಕಳು ಎಂಥವರಾಗಿರಬೇಕೆಂದು ಆದರ್ಶ ರೀತಿಯಿಂದ ಆಶಿಸಬೇಕು ಎಂಬುದು ಗೃಹೀತ. ಈ Preplanning ಪೂರ್ವ ಯೋಜನೆಯು ಕುಟುಂಬ ಯೋಜನೆಯ ಅಡಿಗಲ್ಲು – ಸಂತಾನಹರಣ ಚಿಕಿತ್ಸೆ ಅಡಿಗಲ್ಲಲ್ಲ. ಇಟಲಿ ದೇಶದಲ್ಲಿ ಒಂದೆಡೆ ಸ್ಥಾಪಿತವಾಗಿರುವುದೆಂದು ತಿಳಿದು ಬಂದಂಥ ವಿವಾಹ ಪೂರ್ವದ ಶಿಕ್ಷಣವನ್ನು ಯುವತಿಯರಿಗೆ ಕೊಡುವ ಶಿಕ್ಷಣ ಸಂಸ್ಥೆಯು ಆಧುನಿಕ, ವಿಶ್ವವಿದ್ಯಾಲಯದ ಪ್ರವೇಶಕ್ಕೆ ಅರ್ಹರನ್ನಾಗಿ ಮಾಡುವ ಪೂರ್ವಶಿಕ್ಷಣದಂತೆ ಗೃಹಸ್ಥ ಧರ್ಮವನ್ನು ಪಾಲಿಸಲು ಬೇಕಾದ ಆಚಾರವಿಚಾರಗಳನ್ನು ವೈಜ್ಞಾನಿಕವಾಗಿ ವಧೂ–ವರರಿಗೆ ಕಲಿಸುವುದು ಬ್ರಹ್ಮಚರ್ಯಾಂತದಲ್ಲಿ ಸರ್ವರಿಗೂ ದೊರಕುವಂತೆ ಮಾಡುವುದು ಆಧುನಿಕ.

ಬ್ರಹ್ಮಚರ್ಯೆಯು ಉಪನಯನದಿಂದ ಆರಂಭವಾಗುತ್ತದೆ. ಗುರುಕುಲವಾಸದ ಅನುಕೂಲವುಳ್ಳ ಶಿಕ್ಷಣಸಂಸ್ಥೆಗಳು (Residential schools and colleges) ಎಲ್ಲ ವಿದ್ಯಾರ್ಥಿಗಳಿಗೂ ಲಭ್ಯವಾಗುವಂತೆ ಮಾಡಬೇಕು.

ವ್ಯವಹಾರತಃ ಗರ್ಭಾದಾನವು ಭಾವಿ ಮಾತಾಪಿತೃಗಳಿಗೆ ಅನ್ವಯಿಸುತ್ತದೆ. ಪುಂಸವನ – ಸೀಮಂತಗಳು ಭಾವಿ ಮಾತೃವಿಗೆ ಅನ್ವಯಿಸುತ್ತವೆ. ಅವುಗಳಿಗೆ ಸಂಬಂಧಿಸಿದ ಮಂತ್ರಗಳೇ ಅವುಗಳಿಂದ ಸಿಕ್ಕುವ ಸಂಸ್ಕಾರವನ್ನು ಸೂಚಿಸುತ್ತವೆ.

ಜಾತಕರ್ಮದಿಂದ ವ್ಯಕ್ತಿಯ (ಜೀವಾತ್ಮನ) ಸಂಸ್ಕರಣವು ಬಾಹ್ಯತಃ ಪ್ರಾರಂಭವಾಗುತ್ತದೆ. ನಾಮಕರ್ಮವು ತದವಿನಾಭಾವಿ. ಮಕ್ಕಳು ಎಂಥವರಾಗಬೇಕಾಗಿದೆ ಎಂಬುದನ್ನರಿತ ಹಿರಿಯರು ಅವರಿಗೆ ತಕ್ಕ ಹೆಸರುಗಳನ್ನು ಇಡಬೇಕು. ಅವು ಅನ್ವರ್ಥನಾಮಗಳಾಗಿ ಪರಿಣಮಿಸುವುದು ಅಥವಾ ಬಿಡುವುದು ಅಧಿಷ್ಠಾನಾದಿ*

(ಕಾರ್ಯವೊಂದರ) ಪಂಚಕಾರಣಗಳನ್ನು ಅವಲಂಬಿಸಿರುತ್ತದೆ. ವ್ಯಕ್ತಿಯ ಜೀವನವು ಆದ್ಯಂತವಾಗಿ ಯೋಜನಾ ಬದ್ಧವಾಗಿರಬೇಕೆಂಬುದೇ ಈ ಸಂಸ್ಕಾರಗಳ ಮೂಲ ಉದ್ದೇಶ. ಯೋಜನೆಯಿಲ್ಲದ್ದು. ಅಯುಕ್ತ. ಅಯೋಗ್ಯ. ಸತ್‌ಪ್ರಜಾತ್ವವು ಯೋಜನೆಗಳ ಸಾಮಾಜಿಕ ಉದ್ದೇಶ; ಪುರುಷಾರ್ಥ ಸಾಧನೆಯು ಅವುಗಳ ವೈಯಕ್ತಿಕ ಉದ್ದೇಶ. ಹಿರಿಯರು ಸಂಸ್ಕಾರ ಕರ್ತರು, ಕಿರಿಯರು ಸಂಸ್ಕಾರ ಸ್ವೀಕರ್ತರು, ಮಂತ್ರಾರ್ಥಗಳನ್ನು ಅರಿಯದ ಕರ್ತರೂ ಸ್ವೀಕರ್ತರೂ ವೈದಿಕ ಸಂಸ್ಕಾರಗಳನ್ನು ಆಚರಿಸುವುದು ನೀರಲ್ಲಿ ಹೋಮ ಮಾಡಿದಂತೆ. ಮಂತ್ರಾರ್ಥಗಳ ಸಾಂದರ್ಭಿಕ ತಾತ್ಪರ್ಯಾನ್ವಯವೇ ಆಧುನೀಕರಣ, ಮೀಮಾಂಸಕರ ಅಕ್ಷರಾರ್ಥಾನ್ವಯ ಪ್ರಯತ್ನವೆಲ್ಲ ತ್ಯಾಜ್ಯ.

ಉಪನಯನ ವೇದಾರಂಭಗಳು ಅವಿನಾಭಾವಿಗಳು, ವೇದವು ವಿದ್ಯೆ, ಉಪನಯನವು Admission to schools ಶಾಲೆಗೆ ಸೇರಿಸುವುದು. ಶಾಲೆಗಳು, ಗುರುಕುಲಗಳು (ಗುರುಗೃಹಗಳು) ಆಗಬೇಕಾದುದು ಆಧುನೀಕರಣ. ಗುರುಗಳು ಶೀಲದಲ್ಲೂ ಶಾಸ್ತ್ರ ಜ್ಞಾನದಲ್ಲೂ ಅನ್ವರ್ಥರಾಗಬೇಕಾದದ್ದೂ ಆಧುನೀಕರಣ. ಗುರು ನಿಯಾಮಕರಿಗಿದು ಗೊತ್ತಿರಬೇಕು. Department of public instruction ಸಾರ್ವಜನಿಕ ಶಿಕ್ಷಣದ ಶಾಖೆಯು ಸುಸಂಸ್ಕೃತರಿಂದ ತುಂಬಿದ್ದರೆ ಮಾತ್ರ ಇದು ಸಾಧ್ಯ. ಸುಸಂಸ್ಕೃತರು ಯಾರು? ಶೀಲವಿದ್ಯಾದಿ ಸಂಪನ್ನರು. ಶೀಲ ಯಾವುದು? ದುಃಶೀಲ ಯಾವುದು? ವಿದ್ಯೆ ಯಾವುದು? ದುರ್ವಿದ್ಯೆ ಯಾವುದು? ವರ್ತಮಾನ ಭಾರತದಲ್ಲಿ ಸರಕಾರಗಳು ಸರ್ವಜ್ಞರಂತೆ ವರ್ತಿಸುತ್ತಿರುವುದು ಈ ವಿಷಯಗಳಲ್ಲಿ ಸತ್ಯ. ಅವು ಸರ್ವಜ್ಞವಾಗಿಲ್ಲ. ಅವು ಜ್ಞಾನಿ ಅಜ್ಞಾನಿಗಳನ್ನು ವಿಂಗಡಿಸಿ ನಿಯಮಿಸುವ ಅಧಿಕಾರವನ್ನು ಸತ್‌ಫಲದಾಯಕವಾಗಿ ಬಳಸುವುದರಲ್ಲಿ ಕೃತಕೃತ್ಯವಾಗಿಲ್ಲ; ಶೀಲ–ವಿದ್ಯೆಗಳ ಆದರ್ಶ ಸ್ವರೂಪಗಳನ್ನು ಇದಮಿತ್ಥಂ ಎಂದು ಸರ್ವಾದರಣೀಯವಾಗಿ ನಿರ್ಧರಿಸಲಿಲ್ಲ – ಇಂದಿನ ಅವುಗಳ ಸ್ವರೂಪವು ಅವುಗಳಿಗೆ ಆ ಸಾಮರ್ಥ್ಯವನ್ನು ಕೊಟ್ಟಿಲ್ಲ. ಆದುದರಿಂದ ನಿಯಾಮಕತ್ವವು ಶಿಕ್ಷಣದಲ್ಲಿ "ಮಹಾಜನರೆಂದು" ಜನತೆ ಪುರಸ್ಕರಿಸಿದವರಲ್ಲಿ ಮಾತ್ರ ಇರುವಂತಾಗಬೇಕು. ಈ "ಜನತೆ" ಯಾವುದು? ಭರತನು ನಾಟ್ಯಶಾಸ್ತ್ರದಲ್ಲಿ ಹೇಳಿದ ನಾಟಕ ಪರೀಕ್ಷೆಯ ಹಕ್ಕುಳ್ಳ ವಿವಿಧ ವ್ಯಕ್ತಿಸ್ಥರಾದ ಸ್ಥಳೀಯ ತಜ್ಞರು, ವಿಮರ್ಶಕರು, ಪೂಜ್ಯರು. ನಾಗರಿಕ ಜಗತ್ತಿನಲ್ಲಿಂದು ಯೋಜಕರನ್ನು ಗುರುತಿಸುವಲ್ಲಿ ಇದಕ್ಕಿಂತ ಹೆಚ್ಚು ವೈಜ್ಞಾನಿಕವೂ ವ್ಯಾವಹಾರಿಕವೂ ಆದ ವ್ಯವಸ್ಥೆ ಇಲ್ಲ.

ಬ್ರಹ್ಮಚರ್ಯ ಅಥವಾ ವಿದ್ಯಾರ್ಥಿತ್ವ ಎಂಬುದು ಮಾನವನ ಜೀವನ ಯೋಜನೆಯ ತಳಪಾಯ. ಅಲ್ಲಿ ಪಡೆಯಲಾಗದ ವ್ಯಕ್ತಿತ್ವ ರೂಪಣವನ್ನು ಇನ್ನೆಲ್ಲಿಯೂ ಪಡೆಯಲು ಸಾಧ್ಯವಿಲ್ಲ. ಆದರೆ ಆ ೭ರಿಂದ ೨೧ನೆಯ ವರ್ಷ ವಯಸ್ಸಿನ ಅವಧಿಯಲ್ಲಿ ನಮ್ಮ ವಿದ್ಯಾರ್ಥಿಗಳೀಗ ಅಪೇಕ್ಷಿತ ಮಟ್ಟದ ಶಾಸ್ತ್ರಜ್ಞಾನವನ್ನೂ, ಆಚಾರ ಸಂಪನ್ನತೆಯನ್ನೂ, ಗುಣಾಢ್ಯತೆಯನ್ನೂ ಪಡೆಯುತ್ತಿಲ್ಲವೆಂಬುದು ಬಹಳ ಶೋಚನೀಯ. ಜಾತೀಯ, ಪ್ರಾದೇಶಿಕ ರಾಜಕೀಯ ಆವೇಶಗಳನ್ನು ಹಬ್ಬಿಸುವ ಶಿಕ್ಷಣ ಯೋಜಕ, ಶಿಕ್ಷಣ ಪ್ರಶಾಸಕ,

ಶಿಕ್ಷಕ, ಪಾಲಕರ ಪ್ರಭಾವಕ್ಕೆ ತುತ್ತಾಗಿ ಅನೇಕ ವಿದ್ಯಾರ್ಥಿಗಳು ಸ್ಫೂರ್ತಿಗೆ ಆಕರವಾದ ಯಾವ ಮಹಾಧ್ಯೇಯಗಳಲ್ಲೂ ಶ್ರದ್ಧೆಯನ್ನು ಬೆಳೆಸಿಕೊಳ್ಳಲಾರದೆ ಚಂಚಲರೂ ಇಂದ್ರಿಯಾರಾಧಕರೂ ಸಂಕುಚಿತ ಸ್ವಾರ್ಥ ಪರಾಯಣರೂ ಆಗಿ ಪರಿವರ್ತಿತರಾಗುತ್ತಿದ್ದಾರೆ. ಇದನ್ನು ತಪ್ಪಿಸಲು ಪ್ರತಿಯೊಂದು ಶಾಲೆಯೂ ಕಾಲೇಜೂ ವಿಶ್ವವಿದ್ಯಾಲಯವೂ ಒಂದೊಂದು ಆದರ್ಶ ಗುರುಕುಲವಾಗುವಂತೆಯೇ ಪುನರ್ಘಟಿತವಾಗಬೇಕು. ಸಾರ್ವಜನಿಕ ಸಂಸ್ಥೆಗಳಲ್ಲಿ ಇಂದು ವೈದಿಕವಾದ ಧಾರ್ಮಿಕ ಔಪಚಾರಿಕತೆ ಕಂಡುಬರುತ್ತಿಲ್ಲ ಅಂಥ ಔಪಚಾರಿಕ ವಿಧಿ–ವಿಧಾನಗಳಲ್ಲಿ ಉಪನಿಷದೃಷಿಗಳ ಮತ್ತು ಅವರ ಶಿಷ್ಯರ ನಡುವೆ ಇರುತ್ತಿದ್ದ ಸಂಬಂಧಗಳನ್ನು ಪುನರುತ್ಥಾನಗೊಳಿಸುವ ನಿಯಮಗಳನ್ನು ಪುನಃ ಜಾರಿಗೆ ತರಬೇಕು. ಅಂಥ ಗುರುಗಳಿಂದ ಮತ್ತು ಅಂಥ ಶಿಷ್ಯರಿಂದ ಮಾತ್ರ ಭಾರತವು ನಿಜವಾದ ಏಳಿಗೆಯನ್ನು ನೂರು ವರ್ಷಗಳ ಮೇಲೆ ಆದರೂ ಹೊಂದೀತು. ಇಲ್ಲವಾದರೆ –

> ಇದಮಂಧಂ ತಮಃ ಕೃತ್ಸ್ನಂ
> ಜಾಯೇತ ನವಂ ಭಾರತಂ

ಇಡೀ ದೇಶವೇ ಕತ್ತಲಲ್ಲಿ ಮುಳುಗಿ ಪತಿತವಾಗಿ ಪರಾಧೀನ ಜೀವನವನ್ನು ನಡೆಯಿಸುವ ದೌರ್ಭಾಗ್ಯವು ಮರುಕಳಿಸೀತು. ಗೃಹಸ್ಥ ಜೀವನಕ್ಕೆ, ಸತ್‌ಪ್ರಜಾಚರ್ಯೆಗೆ, ಮಹಾಧ್ಯೇಯಗಳ ಸಾಧನೆಗೆ, ವಿಶಿಷ್ಟ ಕೌಶಲಗಳ ಸಂವರ್ಧನೆಗೆ ಭಾರತಕ್ಕೆ ಬೇಕಾದ ಜನಬಲವನ್ನು ಸುಸ್ಥಿರವಾಗಿ ನೆಲೆನಿಲ್ಲಿಸಲು ಔಪನಿಷದಿಕ ಬ್ರಹ್ಮ, ಕ್ಷಾತ್ರ, ವಾಣಿಜ್ಯ, ಶೌದ್ರ ಶಕ್ತಿಗಳು ನಮ್ಮ ವಿದ್ಯಾರ್ಥಿಗಳಲ್ಲಿ ಬೆಳೆದು ನಿಲ್ಲುವಂಥ ಆವರಣವನ್ನು ನಿರ್ಮಿಸುವುದು ಅಗತ್ಯ. ಕಾರ್ಯ ಶಕ್ತಿಗಳ ಈ ನಾಲ್ಕು ವಿಭಾಗಗಳಿಗೆ ಜಾತಿಜನ್ಮವು ಅನಪವಾದಾತ್ಮಕವಾದ ನಿಯಮವೆಂದೂ ಅಲ್ಲವೇ ಅಲ್ಲ. ಜಾತಿಜನ್ಮ ಸಿದ್ಧಾಂತದಲ್ಲಿ ನೂರಕ್ಕೆ ಐವತ್ತರಷ್ಟು ಅಪವಾದಗಳಿಂದು ಇರುವಂತಾಗಿದೆ.

ಭಾರತದ ಭಾಗಗಳಲ್ಲಿ ಎಲ್ಲೂ ಸಮಗ್ರಸ್ವರೂಪದ ದ್ರಾವಿಡ ಸಾಂಸ್ಕೃತಿಕ ಕಲೆಕಟ್ಟಿಲ್ಲದಿರುವ ವರ್ತಮಾನದ ಇತಿಹಾಸದಲ್ಲಿ ಕೆಲ ಅವಿವೇಕಯುಕ್ತ ರಾಜಕೀಯ ಹಾಗೂ ಸಾಮಾಜಿಕ ಮತ್ತು ಸಾಹಿತ್ಯಿಕ ಧುರೀಣಂ ಮನುಷ್ಯ ಎಬ್ಬಿಸಿದ ಗೊಂದಲಗಳ ದೆಸೆಯಿಂದ ವಿಕೃತ ಪಾಶ್ಚಾತ್ಯ ದಿನಚರ್ಯಗಳು ವಿದ್ಯಾರ್ಥಿ ಜೀವನ ಆಟಪಾಟ ಮತ್ತು ಇತರ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತಲೆ ಹಾಕಲು ಬಿಟ್ಟಿದ್ದರಿಂದಲೇ ದಾವಣಗೆರೆಯ (ಎಂಜಿನಿಯರಿಂಗ್) ಅಭಿಯಂತೃಗಳ ಕಾಲೇಜಿನಲ್ಲಿ "ರ್‍ಯಾಗಿಂಗ್" ಎಂಬ ಅಸುರೀವೃತ್ತಿಯ ವಿದ್ಯಾರ್ಥಿಗಳು ತಯಾರಾದರು. ಆರ್ಯದ್ವೇಷಕ್ಕೆ ತಮಿಳುನಾಡು ತವರೂರಾಯಿತು. ಕರ್ನಾಟಕದ ಕೆಲ ಹಿಂಸಕರು ಅದರ ಅನುಕರಣ ಮಾಡತೊಡಗಿದರು. ಬ್ರಾಹ್ಮಣರಷ್ಟೇ ಆರ್ಯರೆಂದೂ ಸಂಸ್ಕೃತ ಆರ್ಯಭಾಷೆಯೆಂದೂ ಬ್ರಾಹ್ಮಣೇತರರಲ್ಲಿ ಕೆಲವರು ವಾದಿಸಿ, ಬ್ರಾಹ್ಮಣರು ಶೋಧಕರು, ಮುಂಬರಿದವರು – ಎಂಬ ಪ್ರಚಾರ ಮಾಡಿ, ಸಾಂಸ್ಕೃತಿಕ

ಅಪಘಾತವನ್ನು ತಮ್ಮ ಪೀಳಿಗೆಗಳ ಮೇಲೇ ಮಾಡಿಕೊಳ್ಳಹೋದ ರಾಜಕೀಯವು ವಿದ್ಯಾರ್ಥಿಗಳಲ್ಲಿ ಮುಗ್ಧರಾದವರ ತಲೆಯಲ್ಲಿ ಗೊಂದಲವನ್ನು ಉಂಟು ಮಾಡಿತು. ಅಲ್ಪಸಂಖ್ಯಾತರು, ಪರಿಶಿಷ್ಟ ಜಾತಿ ಹಾಗೂ ವರ್ಗಗಳವರು ಹಿಂದುಳಿದವರು ಎಂದು ಮುಂತಾಗಿ ಭಾರತೀಯರನ್ನು ಹೋಳು ಹೋಳು ಮಾಡುವ ಪ್ರಯತ್ನವನ್ನು ಸಂವಿಧಾನದ ತಿದ್ದುಪಡಿಗಳ ಮೂಲಕ ೧೯೫೭೦ರ ಅನಂತರ ಈ ದೇಶದಲ್ಲಿ ಮುಂದುವರಿಸಿಕೊಂಡು ಹೋದದ್ದು ಅವೈದಿಕ, ಅಭಾರತೀಯ, ಅರಾಷ್ಟ್ರೀಯ. ಇಂಥ ಆವರಣದಲ್ಲಿ ವೈದಿಕ ಸಂಸ್ಕಾರಗಳನ್ನು ಆಧುನೀಕರಿಸಲು ಯಾರು ಪ್ರಯತ್ನಿಸಿ ಜಯ ಪಡೆದಾರು? ವೈದಿಕ, ಹಿಂದು, ಸಂಸ್ಕೃತ, ಬ್ರಾಹ್ಮಣ ಮುಂತಾದ ಪದಗಳೇ ಅಸ್ಪೃಶ್ಯ ಎಂಬಂತೆ ವರ್ತಿಸುವವರ ಕೈಗೊಂಬೆಗಳಾಗಲು ರಾಜಕೀಯ ಪಕ್ಷಗಳು ಹೊರಟಾಗ ಏನಾದೀತು? ಭಾರತ ಕೂಡಾ ನಾಳೆ ಬ್ರಾಹ್ಮಣರ (ಆರ್ಯರ) ಸಂಸ್ಕೃತ ಪದ ಎಂದು ರಾಮಸ್ವಾಮಿ ನಾಯಕರಂಥವರು ಕೇಂದ್ರ ಪ್ರಕಾಶಕರನ್ನು ಒತ್ತಾಯಿಸಿ ಗೆದ್ದರೆ ಈ ರಾಷ್ಟ್ರದ ಹೆಸರು ಕೂಡಾ ಬದಲಾಗಿ ಹೋದೀತು! ದೇವರ ದಯೆಯಿಂದ ಮತ್ತು ಭಾರತದ ಪೂರ್ವಜರ ಪುಣ್ಯದಿಂದ ಅಂಥ ವಿಕಟ ಪರಿಸ್ಥಿತಿ ಬರಲಾರದೆಂದು ನಂಬೋಣ.

ಉಪನಯನದ ಅನಂತರ ವಿವಾಹವು ಒಂದು ದೊಡ್ಡ ಸಂಸ್ಕಾರ. ಅದರ ಮೂಲಕ ಯುವಕ–ಯುವತಿಯರು ಗೃಹಸ್ಥಾಶ್ರಮದಲ್ಲಿ ಕಾಲಿಡುತ್ತಾರೆ. ಗೃಹಸ್ಥಾಶ್ರಮದ ಧರ್ಮಗಳು ಸಾರತಃ ಈಗ ಆಧುನೀಕೃತವಾಗಿಯೇ ಇವೆ. ನೊಂದಾವಣೆಯ ಮದುವೆಯೊಂದು ಅಪವಾದ. ವಿವಾಹದ ಸಪ್ತಪದಿಯ ಮಂತ್ರದ ಅರ್ಥವನ್ನು ಬದಲಾಯಿಸುವ ಅಗತ್ಯವಿಲ್ಲ. ವರದಕ್ಷಿಣೆ ವಧೂದಕ್ಷಿಣೆಗಳ ಪಿಡುಗು ಅನಾರ್ಯಜುಷ್ಟ, ಅಸ್ವರ್ಗ್ಯ, ಅಕೀರ್ತಿಕರ ಎಂಬುದನ್ನು ಒಪ್ಪದ ಆಧುನಿಕ ವಿದ್ವಾಂಸರು ಭಾರತದಲ್ಲಿ ಬಹುಶಃ ಯಾರೂ ಇಲ್ಲ. "ನಸ್ತ್ರೀ ಸ್ವಾತಂತ್ರ್ಯ ಮರ್ಹತಿ" ಎಂಬುದಕ್ಕೆ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರೊಮ್ಮೆ ಅವರ "ಜೀವನ" ಪತ್ರಿಕೆಯಲ್ಲಿ ಬರೆದಂತೆ ದೇಹತಃ ಸದಾ ರಕ್ಷಣೀಯಳು ಎಂದಿಷ್ಟೇ ಮನುವಿನ ಅರ್ಥ. ಈ ಅರ್ಥವು ಜೀವಶಾಸ್ತ್ರೀಯವಾಗಿ (ಪರೇಚ್ಛಾಕೃತ ಗರ್ಭಧಾರಣೆ ಸ್ತ್ರೀಯರಲ್ಲಿ ಕೆಲವೊಮ್ಮೆ ಅನಿವಾರ್ಯ ಎಂದು ಅನುಭವತಃ ಕಂಡು ಬಂದಿರುವುದರಿಂದ) ಸಮರ್ಥನೀಯ. ಸ್ತ್ರೀ ಮಾನಭಂಗದ, ಅತ್ಯಾಚಾರದ ಆಧುನಿಕ ಪಿಡುಗುಗಳೇ ಸಾಕು, ಸ್ತ್ರೀ ಮಾನವು ದೇಹ ಮೂಲವಾಗಿ ಮಾನಸತಃ ರಕ್ಷಣೀಯ ಎಂದು ಸಾರಲು. ಪತಿ–ಪತ್ನಿತ್ವಗಳು ಅವರವರ ಸ್ವಸುಖಕ್ಕೆ ಪ್ರಾಧಾನ್ಯವನ್ನು ಕೊಡದೆ ಸಂತತಿಯ ಯೋಗಕ್ಷೇಮಕ್ಕೆ ಪ್ರಾಧಾನ್ಯವನ್ನು ಕೊಡಬೇಕೆಂಬ ಭಾರತೀಯತೆಯನ್ನು ಆಧುನೀಕರಿಸುವ ಅಗತ್ಯವಿಲ್ಲ. ಏಕಪುತ್ರ ವತ್ತೆಯನ್ನು ಧರ್ಮಶಾಸ್ತ್ರಗಳು ಒತ್ತಿ ಹೇಳಿವೆ. ಅನೇಕ ಪುತ್ರವತ್ತೆಯು ಸ್ವೇಚ್ಛಾಕೃತವಾಗಿದೆ.

ವಿವಾಹ ಪೂರ್ವದಲ್ಲಿ ಅಥವಾ ವಿವಾಹೋತ್ತರ ಕಾಲದಲ್ಲೂ ಉದ್ಯೋಗದ ಪ್ರಶ್ನೆ ಇಂದು ಎದುರಾಗುತ್ತದೆ. ಕುಲಕಸುಬಿನ ಪರಂಪರೆಯನ್ನು ಬಿಟ್ಟು ಬಿಡುತ್ತಾ ಬರಲಾಗಿದೆ. ಯಥಾನುಕೂಲ ಕುಲಕಸುಬುಗಳನ್ನು ಇಟ್ಟುಕೊಂಡೇ ಹೋಗುವುದು

ಇಂದು ಕ್ಷೇಮಕರ. ಅದು ಸಾಧ್ಯವಾಗದಿದ್ದಲ್ಲಿ ಕೈಯಲ್ಲಾದ ಅಥವಾ ದೊರಕಿದ ಉದ್ಯೋಗವನ್ನು ಹಿಡಿಯ ಬೇಕಾಗುತ್ತದೆ. ಇಲ್ಲಿ ವೈದಿಕ–ಅವೈದಿಕ ಎಂಬ ಭೇದ ಉಳಿದಿಲ್ಲ, ಉಳಿಸುವುದಿಂದು ಕಷ್ಟ ಸಾಧ್ಯವಾಗುವ ಪರಿಸ್ಥಿತಿಯು ಬೆಳೆದಂತಿದೆ. ಅಧ್ಯಯನ, ಅಧ್ಯಾಪನ, ಯಜನ, ಯಾಜನ ದಾನ, ಪ್ರತಿಗ್ರಹಗಳು ಬ್ರಾಹ್ಮ; ಅಧ್ಯಯನ, ಯಜನದಾನಗಳು ಕ್ಷಾತ್ರ, ಕೃಷಿಗಳ ರಕ್ಷೆ, ವಾಣಿಜ್ಯಗಳು ವೈಶ್ಯ ಮತ್ತು ಸೇವೆ (service) ಶೌದ್ರ ಎಂದು ಪರಿಗಣಿತವಾದದ್ದು ವೈದಿಕ. ಹುಟ್ಟಿಗೂ ವಿದ್ಯೆಗೂ ಕಸಬಿಗೂ ಅವಿನಾಭಾವಿಯಾದ ಸಂಬಂಧವನ್ನು ಕಲ್ಪಿಸುವುದು ಪೂರ್ಣ ವೈಜ್ಞಾನಿಕವೂ ಅಲ್ಲ. ವ್ಯಾವಹಾರಿಕವೂ ಅಲ್ಲ. ಉದ್ಯೋಗದಿಂದ ಪ್ರತಿವ್ಯಕ್ತಿಗೂ ಸಂಸ್ಕಾರ ಉಂಟಾಗುತ್ತದೆ. ಉದ್ಯೋಗದ ಆವರಣವೂ ಸಂಸ್ಕಾರ ಹೇತು. ವಿದ್ಯಾಭ್ಯಾಸದ ಪರಿಸರದಂತೆಯೇ ಉದ್ಯೋಗದ ಪರಿಸರವೂ ವ್ಯಕ್ತಿಯ ಮನದ ಮೇಲೆ ತನ್ನ ಪರಿಣಾಮವನ್ನು ಬೀರುತ್ತದೆ. "ಅಗೃಧ್ನುರಾದದೇ ಸೋಽರ್ಥಂ" ಎಂಬುದಿಂದು ಹುಸಿಯಾಗಿದೆ. ಲೋಭ ಎಂಬುದು ಸಾಕಷ್ಟು ಬಲವಾಗಿ ನಿಂದ್ಯವೆನ್ನಿಸಿಲ್ಲ. ಆದುದರಿಂದ ಕ್ಷಾತ್ರದಂತೆಯೇ ವಾಣಿಜ್ಯವೂ ಶೌದ್ರವೂ ಉದ್ಯೋಗ ರೂಪಗಳಲ್ಲಿ ಸಾಕಷ್ಟು ಪರಪ್ರತಾರಗಳೆನ್ನಿಸುತ್ತಿವೆ, ಇದಕ್ಕೆ "ಕಾಲಸ್ಯ ಕಾರಣಂ ರಾಜಾ" ಎಂಬುದಿಲ್ಲಿ ಅಸ್ತಿತ್ವ. ರಾಜತ್ವಕ್ಕೆ ಕಾಲವು ಕಾರಣವಲ್ಲ, ರಾಜಪದದಿಂದ ಸರಕಾರಗಳು ಸೂಚಿತವಾಗುತ್ತವೆ, ಸರಕಾರಗಳು ಪ್ರತಿನಿಧಿಗಳಿಂದ ರಚಿತ, ಪ್ರತಿನಿಧಿಗಳು ಚುನಾಯಿತರು, ಚುನಾವಣೆ ಭ್ರಷ್ಟಾಚಾರಕ್ಕೆ ಅನೇಕ ಕಡೆಗಳಲ್ಲಿ ಆಕರ.

ಭ್ರಷ್ಟಮೂಲಮಿದಂ ಕ್ಷಾತ್ರಂ
ದುರ್ಮೂಲಂ ವಾಽಭವತ್ತತಃ।
ಧರ್ಮಗ್ಲಾನಿರ್ದುರ್ನಿವಾರ್ಯಾ
ಶಿಷ್ಯೈಃ ಸಾಮಾನ್ಯ ಗೇಹಿಭಿಃ॥

ಶಿಷ್ಟಾಶಿಷ್ಟತೆಗಳನ್ನು ವೈದಿಕವಾಗಿ ಗುರುತಿಸುವ ಶಕ್ತಿಯನ್ನೇ ಜನರು ಕಳೆದುಕೊಳ್ಳುತ್ತಾ ಹೋಗುವಂತಹ ಸರಕಾರಿ ನಾಗರಿಕತಾ ಪ್ರವಾಹವು ಈ ೩೫ ವರ್ಷಗಳಿಂದ ಹರಿದು ಬಂದಿದೆ.

(೧) ಮಠಾಧಿಪತಯಃ ಸಂತಿ
ವೇದ ವೇದಾಂಗ ಪಾರಗಾಃ।
(೨) ಸರ್ವಾಧಿ ಕಾರಿಣಃ ಸಂತಿ
ನಿರ್ವೇದಾ ನಿರಪತ್ರಪಾಃ॥

ಪ್ರಜಾಪ್ರಭುತ್ವದ ಸರ್ವಾಧಿಕಾರಿಗಳು ಇಲ್ಲಿರುವ ತನಕ ವೈದಿಕ ಚಿಂತನ ಕೂಡಾ ಉಪಯೋಗಕ್ಕೆ (ಸಾಮಾಜಿಕವಾಗಿ) ಬರಲಾರದು. ಮಠಾಧಿಪತಿಗಳು ಅದರಿಂದ ಮಠಬದ್ಧರಾಗಿ ಕುಳಿತುಕೊಳ್ಳುವಂತಾದದ್ದು ಸುವಿದಿತ. "ಅರ್ಥಸ್ಯ ಪುರುಷೋ ದಾಸಃ" ಎಂಬುದನ್ನು ಅತಿಶಯ ಸತ್ಯವನ್ನಾಗಿ ತೋರಿಸಲು ಕಂಕಣಬದ್ಧವಾದ ಕ್ಷಾತ್ರ ತೇಜಸ್ಸು

ಭಾರತವನ್ನು ಅರ್ಥದಾಸ್ಯದಲ್ಲಿ ನೂಕಿರುವಾಗ ಸದ್ಯಃ ಪರಶುರಾಮ ಹುಟ್ಟಿ ಬರುವ ನಂಬಿಗೆ ಯಾರಿಗಾದರೂ ಇದೆಯೇ?

ಹಿಂದೆ ವೇದವು ಇಲ್ಲಿ ಜೀವನದ ಸರ್ವ ಚಟುವಟಿಕೆಗಳನ್ನೂ ನಿಯಂತ್ರಿಸುವ ಶಾಸ್ತ್ರವಾಗಿತ್ತು. ಈಗ ವೇದಕ್ಕೆ LAW ವಿಧಿ ಎಂಬ ಸ್ಥಾನ ಇಲ್ಲ. ಅಲ್ಲದೆ ಅದರಿಂದ ಏನನ್ನೂ ಕಲಿತುಕೊಳ್ಳುವುದು ಅಗತ್ಯವಿಲ್ಲ ಎಂಬ ನಂಬಿಗೆಯನ್ನಾಧರಿಸಿದ ಶಿಕ್ಷಣವೂ ಸಾಂವಿಧಾನಿಕ ವಿಧಿಗಳೂ ಜಾರಿಯಲ್ಲಿವೆ. ಈ ಪ್ರತ್ಯಕ್ಷ ಸತ್ಯದ (Secularism) ಅಪಲೌಕಿಕತೆಗೆ ಕಾರಣವಾದ ಚಟುವಟಿಕೆಗಳಿಗೆ ಆಸ್ಪದ ಕೊಡುತ್ತಿರುವಾಗ ಜೀವೋತ್ತಮನು ಪುನಃ ಅವತರಿಸಿ ಬಂದು ಗಾಂಧಿಯಂತೆಯೋ ಸುಭಾಸಚಂದ್ರನಂತೆಯೋ ಹೋರಾಡಿ ವೈದಿಕ ಸಂಸ್ಕಾರಗಳು ಸದಂಶಗಳು ಮತ್ತೆ ಭಾರತೀಯರಿಗೆ ದೊರಕುವಂತೆ ಮಾಡಬೇಕಾಗಿದೆ. ಅಲ್ಲಿಯವರೆಗೆ ಪ್ರವಾಹಪತಿತ ನ್ಯಾಯದಿಂದ ಜನಜೀವನವು ಇಲ್ಲಿ ಸಾಗಬೇಕಾಗಿದೆ. ವೈಯಕ್ತಿಕವೂ ಖಾಸಗಿಯದೂ ಗೃಹಸೀಮಿತವೂ ಆದ ದೈವ ಸಂಬಂಧಿ ಕರ್ಮಗಳ ವೈದಿಕತೆ (ನ್ಯಾಯವಾಗಿರಲಿ, ಅನ್ಯಾಯವಾಗಿರಲಿ) "ಪೂರ್ಣ" ಸ್ವರೂಪದಲ್ಲಿ ಆಚರಿತವಾಗಲು ಇಂದಿನ ವಿಧಿ ನಮಗೆ ಬಿಡುವುದಿಲ್ಲ. ಬಿಟ್ಟಿರುವ ಉಪನಯನ, ವಿವಾಹಗಳ ಜೊತೆಗೆ ಉತ್ತರಕ್ರಿಯೆ ಅಥವಾ ಔರ್ಧ್ವದೇಹಿಕ ಕರ್ಮಗಳನ್ನು ಸೇರಿಸಬಹುದು. "ಸತ್ತವರಿಗೆ" ಎಂದು ನೆನೆದು ಅವರ ವಾರಸುದಾರರು ಮಾಡುವ ಈ ಕರ್ಮವು ವಾರಸುದಾರರ ಸಂಸ್ಕೃತಿಗೆ ಒರೆಗಲ್ಲಾಗುತ್ತದೆ. ಅವರ ಕೃತಜ್ಞತೆಗೆ ಸೂಚಕವಾಗಿದೆ. ಕೃತಘ್ನನು ಭಾರತದಲ್ಲಿ ಶಿಷ್ಟನಲ್ಲವೇ ಅಲ್ಲ. ಕೃತಘ್ನೋನಾಸ್ತಿ ನಿಷ್ಕೃತಿಃ! ಆದುದರಿಂದ ಸತ್ತವರ ಸ್ಮರಣೆಗಾಗಿ ಮಾಡುವ ಕರ್ಮವಿಧಿಗಳಲ್ಲಿ ಇದ್ದವರಿಗೆ ಸಂಸ್ಕಾರ ಕೊಡಬಲ್ಲ ಮಂತ್ರಗಳಿಗೇ ಇಂದು ಪ್ರಾಮುಖ್ಯ ಕೊಡಬೇಕಾಗಿದೆ.

ಬಳಕೆಯಲ್ಲಿರುವ ವೇದ ಮಂತ್ರಗಳೆಲ್ಲವನ್ನೂ ಕನ್ನಡ ಭಾಷೆಗೆ ಭಾಷಾಂತರಿಸುವುದೂ ಅಂಥ ಭಾಷಾಂತರ ಕೃತಿಗಳು ಎಲ್ಲರ ಕೈಗೂ ಸುಲಭವಾಗಿ ಸಿಗುವಂತಾಗುವುದೂ ಇಂದು ನಮ್ಮ ನಾಗರಿಕತೆಯ ಪುನರುತ್ಥಾನವನ್ನು ಬಯಸುವ ಸಮರ್ಥ ದೇಶಭಕ್ತರೆಲ್ಲರ ಮುಂದಿರುವ ಪ್ರಥಮ ಕರ್ತವ್ಯವಾಗಿದೆ. ಕ್ರೈಸ್ತರು ಉಚಿತವಾಗಿ ಸರ್ವಮತೀಯರಿಗೂ ಬೈಬಲನ್ನು ಅವರವರಿಗೆ ತಿಳಿಯುವ ಭಾಷೆಯಲ್ಲಿ ಅನುವಾದಿಸಿ ಹಂಚುತ್ತಾ ಬಂದದ್ದುಂಟು. ಆಕಾಶವಾಣಿಯಿಂದ ಕ್ರೈಸ್ತ ಸಂದೇಶ ಕೇಳಿ ಬರುವಷ್ಟು ಚೆನ್ನಾಗಿ, ಸರಳವಾಗಿ, ಸತತವಾಗಿ ನಮ್ಮ ವೈದಿಕ ಸಂದೇಶಗಳು ದಿನದ ೨೪ ತಾಸುಗಳಲ್ಲೂ ಕೇಳಿ ಬರುವಂತೆ ಮಾಡುವ ಕೇಂದ್ರವಿಲ್ಲವೇ ಇಲ್ಲ. ಎಲ್ಲಿ? ಬಹುಸಂಖ್ಯಾತ ಹಿಂದುಗಳಿದ್ದ ಭಾರತದಲ್ಲಿ! ಕುಟುಂಬ ಯೋಜನಾ ಮುಕ್ತತೆಯು ತದಿತರರಿಗಿರುವುದರಿಂದ ಅವರೇ ಬಹು ಸಂಖ್ಯಾತರಾಗುವುದು ಬಹಳ ದೂರದಲ್ಲಿಲ್ಲ! ಆದರೂ ಆಗಲಿ – ಎಂಬುದೇ ಉದಾಸೀನ ಅರ್ಥದಾಸರ ಸ್ವರ! ಯದ್ಭವಿಷ್ಯವಾಣಿ!

ಉದಾಸೀನತೆಯೇ ವೇದಭ್ಯಾಸ ಜಡತ್ವ. ವೇದ ತಿಳಿದ ಸಮಾಜನೇತೃಗಳು ಆಧುನಿಕ ಜೀವನ ಸಂದರ್ಭಕ್ಕೆ ತಕ್ಕ ವೇದ, ಉಪನಿಷತ್, ಬ್ರಹ್ಮಸೂತ್ರ, ಧರ್ಮಶಾಸ್ತ್ರ,

ಭಗವತ್ ಗೀತೆಗಳ ಭಾಗಗಳನ್ನು ಅನುವಾದ ಸಮರ್ಥನೆಗಳ ಸಮೇತ ದೇಶಭಾಷೆಗಳಲ್ಲಿ ಆಕರ್ಷಕವಾಗಿ ಪ್ರಚಾರಪಡಿಸಲು ಯಾವ ಸಾಂವಿಧಾನಿಕ ಅಥವಾ ವೈದಿಕ ಆಂತಕವಿದೆ? ಅದರಲ್ಲೂ ಡಿ.ವಿ.ಜಿ. ಅವರು "ಜೀವನ ಧರ್ಮಯೋಗ"ವನ್ನು ಬರೆದಂಥ ತರ್ಕಶುದ್ಧವೂ ಪರಮತನಿಂದಾವಿಮುಖವೂ ನಿಷ್ಪಕ್ಷಪಾತ ದೃಷ್ಟಿಪ್ರಧಾನವೂ ಆದ ಗ್ರಂಥಗಳ ಸಂಕ್ಷೇಪನ – ಪುನರ್ಮುದ್ರಣಗಳನ್ನು ಮಾಡಲು ಕರ್ನಾಟಕದ ಯಾವ ಸಾಂಸ್ಕೃತಿಕ ಸಂಸ್ಥೆಯೂ ಪ್ರಯತ್ನಿಸುತ್ತಿಲ್ಲವೇಕೆ? ಅವುಗಳನ್ನು ಆಬಾಲವೃದ್ಧ ಸ್ತ್ರೀ ಪುರುಷರಿಗೆ ಆಕರ್ಷಕವಾಗುವ ರೀತಿಯಿಂದ ಪುನಾರಚಿಸಿ ಹಂಚುವುದಿಲ್ಲವೇಕೆ? ಡಾ. ಶ್ರೀಕಂಠ ಶಾಸ್ತ್ರಿಗಳು ದಿವಂಗತರಾದರು. ಅವರು ಬರೆದ "ಭಾರತೀಯ ಸಂಸ್ಕೃತಿ" ಎಂಬ ಮಹಾಗ್ರಂಥವನ್ನು ಎಲ್ಲರ ಕೈಗೂ ಸುಲಭವಾಗಿ ದೊರಕುವಂತೆ ಯಾವ ಹಿಂದು ಸಂಸ್ಥೆಯೂ ಭಾರತದಲ್ಲಿ ಮುದ್ರಿಸಿ, ಪ್ರಕಟಿಸಿ ಹಂಚುವ ಏರ್ಪಾಟನ್ನೇಕೆ ಮಾಡಲಿಲ್ಲ? ಇದಕ್ಕೆ ಉತ್ತರ ದೊರಕುವವರೆಗೆ ಈ ಲೇಖಕನಿಗೆ, ವೈದಿಕತೆಯ ಬಗೆಗೆ ವಿಸ್ತಾರವಾಗಿ ಬರೆಯಲು ಸ್ಫೂರ್ತಿ ಉಂಟಾಗುವುದಿಲ್ಲ.



**['ಜೀವೋತ್ತಮ' ವಿಶೇಷ ಸಂಚಿಕೆ]**

# ೩೨. ವಿಗ್ರಹಾರಾಧನೆ

**(ಸ್ಪೃಶ್ಯ – ದೃಶ್ಯವಾದ ಪದಾರ್ಥವು ಇದ್ದರೇನೇ ಆ ಪದಾರ್ಥದ ಅದೃಶ್ಯ – ಅಸ್ಪೃಶ್ಯವಾದ ಚಿತ್ರ ಮನೋಭಿತ್ತಿಯಲ್ಲಿ ನಿಲ್ಲುವುದು. ಕಲ್ಪನಾತ್ಮಕವಾಗಿ ವಸ್ತು ಸಾಕ್ಷಾತ್ಕಾರವಾಗುವುದು. ಆದುದರಿಂದ ವಿಗ್ರಹದ ಅವಶ್ಯಕತೆಯುಂಟಾಯಿತು.) – ಸಂಪಾದಕ.**

ದೃಶ್ಯ ಪ್ರಪಂಚದ ಸಾಕಾರಕಲ್ಪನೆ ಇಲ್ಲದೆ ಸ್ಪಷ್ಟವಾದ ಆಲೋಚನೆಯನ್ನು ಮಾಡುವುದು ಅಸಾಧ್ಯವಾದುದರಿಂದಲೇ, ಸಾಕ್ಷಾತ್ ಮೂರ್ತಿಯನ್ನಲ್ಲದಿದ್ದರೂ ಶಿಲುಬೆಯನ್ನು, ಚಂದ್ರನಕ್ಷತ್ರಗಳನ್ನು – ಕ್ರಿಶ್ಚಿಯನ್ನರೂ ಮುಸಲ್ಮಾನರೂ – ಪ್ರತೀಕಗಳನ್ನಾಗಿ ಆರಿಸಿಕೊಂಡಿದ್ದಾರೆ. ಆ ಪ್ರತೀಕಗಳು ಅವರ ಧರ್ಮಸ್ಥಾಪಕರು ಅನುಭವಿಸಿದ ಅಥವಾ ಹೇಳಿದ ತತ್ತ್ವಸಾರವನ್ನುಅವರಿಗೆ ನೆನಪು ಮಾಡಿಕೊಡಲು ಶಕ್ತವಾಗುತ್ತವೆ. ಆದರೆ ಆ ಪ್ರತೀಕಗಳು ವಿಗ್ರಹಕ್ಕಿಂತ ಸೂಕ್ಷ್ಮತರವಾದುವೆಂಬುದನ್ನು ಮಾತ್ರ ಒಪ್ಪಿಕೊಳ್ಳಬೇಕು. ಹಾಗೆಂದ ಮೇಲೆ, ಅವರು ವಿಗ್ರಹಾರಾಧಕರಿಗಿಂತ ಉತ್ತಮರು, ಹೆಚ್ಚು ಕಲ್ಪನಾಶಕ್ತಿವಂತರು ಎನ್ನಲಾದೀತೇ? ಅದೆಂದಿಗೂ ಆಗದು. ಇಂದಿನವರೆಗೆ ಮಾನವನ ಬುದ್ಧಿಗೆ, ಕಲ್ಪನಾಶಕ್ತಿಗೆ, ಇಡೀ ಜಗತ್ತಿನ ಪ್ರಾಣಿಗಳಲ್ಲಿ – ತನ್ನ ರೂಪಕ್ಕಿಂತ ಶರೀರ ರಚನೆಗಿಂತ ಹೆಚ್ಚು ಸುಂದರವೂ ಸುವ್ಯವಸ್ಥಿತವೂ ಆದ ಶರೀರ ಅಥವಾ ಆಕೃತಿ ಗೋಚರವಾಗಿಲ್ಲ. ಆ ಕಾರಣದಿಂದಲೇ ಜಗತ್ತಿನ ಸರ್ವಧರ್ಮದವರೂ ಮಾನವನ ವಿಶಿಷ್ಟ ಗುಣಗಳನ್ನು ಅನಂತ ಸಂಖ್ಯೆಯಿಂದ ಗುಣಿಸಿ, ಅತಿಶಯೋಕ್ತಿ ಅತ್ಯುಕ್ತಿಗಳಿಂದ ವಿಸ್ತರಿಸಿ, ದೇವರೆಂಬ ಅಸ್ಪಷ್ಟ ಕಲ್ಪನೆಯನ್ನು ಮಾಡಿಕೊಂಡು ಆರಾಧಿಸುತ್ತ ಬಂದಿದ್ದಾರೆ. ಇದೇ Anthropomorphism ಮನುಷ್ಯಾಕೃತಿಯ ಆಧಾರದ ಮೇಲೆ ಕಟ್ಟಿದ ದೇವರ ಕಲ್ಪನೆ. ವಿಗ್ರಹಾರಾಧನೆಗೆ ವಿರೋಧಿಗಳಾದ ಕ್ರೈಸ್ತ ಮತ್ತು ಮಹಮ್ಮದೀಯ ಧರ್ಮದವರು ಕೂಡ ವಿಗ್ರಹವನ್ನು ಸ್ಥೂಲರೂಪದಿಂದ ಪೂಜಿಸದಿದ್ದರೂ, ಮಾನಸಿಕ ಕಲ್ಪನೆಯಲ್ಲಿ ಅಡಕವಾದ ಸೂಕ್ಷ್ಮ ರೂಪದಲ್ಲಿ ಅಥವಾ ಮನೋಭಿತ್ತಿ ಚಿತ್ರರೂಪದಲ್ಲಿ ಪೂಜಿಸದೆ ಇರಲಾರದು. ಮಹಮ್ಮದ್ ಮತ್ತು ಕ್ರಿಸ್ತರಂತೂ ಮನುಷ್ಯರೆಂದು ಎಲ್ಲರಿಗೂ ಗೊತ್ತಿದೆ. ಅವರ ಮಾನವ್ಯ ಕಲ್ಪನೆ ಅಷ್ಟೇನೂ ಆಶ್ಚರ್ಯದ ಸಂಗತಿಯಲ್ಲ. ಅವರನ್ನು (ಅವರ ಚಿತ್ರವನ್ನು ಕೂಡ) ಕಾಣದವರೂ ಮಾನವ ಮೂರ್ತಿಯ ಲಕ್ಷಣಗಳನ್ನು ಬಳಸಿಕೊಂಡು, ತಮ್ಮದೇ ಆದ ಅವರ ಮನೋಮಯ ಮೂರ್ತಿಗಳನ್ನು ರಚಿಸಿಕೊಳ್ಳುತ್ತಾರೆ. ಇಲ್ಲದಿದ್ದರೆ ಅವರಿಗೆ ಮಹಮ್ಮದ್ ಅಥವಾ ಕ್ರಿಸ್ತ ಶಬ್ದಕ್ಕೆ ಅರ್ಥವಾಗುವುದು ಅಸಾಧ್ಯ; ಮಹಮ್ಮದ್ – ಕ್ರಿಸ್ತರು ಅವರಿಗೆ ಅರ್ಥವಿಲ್ಲದವರಾದಾರು, ಕಲ್ಪನಾತೀತರಾದಾರು! ಅದೇ ಮೇರೆಗೆ ಅವರು ದೇವರೆಂದರೂ ಮಾನವನ ಆಕೃತಿಯನ್ನು ತಳೆದ ಅಮಿತ ಶಕ್ತಿಸಂಪನ್ನನಾದ ಒಬ್ಬ ಪುಲ್ಲಿಂಗಾವಚ್ಛಿನ್ನನೆಂದೇ ಭಾವಿಸುತ್ತಾರೆ. ಇದೇ ಸಾಮಾನ್ಯ ಜನರಿಗಾಗುವ ದೇವರ ಕಲ್ಪನೆ, ವಾದ ಮಾಡಲು

ಹೋದರೆ, ಹಾಗಲ್ಲವೆಂದು ಅವರು ಏಳು ಹಗಲು ಏಳು ರಾತ್ರಿಗಳವರೆಗೆ ಕಂಠಶೋಷಣ ಮಾಡಬಹುದು; ಆದರೆ ಮನಃಶಾಸ್ತ್ರವನ್ನು ಬಲ್ಲವರು, ಮನಸ್ಸಿನ ಸ್ವಭಾವವನ್ನೂ ಇತಿಮಿತಿಗಳನ್ನೂ ಅರಿತವರು, ಸಾಮಾನ್ಯಜನರು (ಅವರು ಯಾವ ಜಾತಿ, ಧರ್ಮ, ಪಂಥಗಳಿಗೇ ಸೇರಿರಲಿ) ವಿಗ್ರಹಾರಾಧಕರಿದ್ದರೂ ಸರಿ, ವಿಗ್ರಹಭೇದಕರಿದ್ದರೂ ಸರಿ – ದೇವರಲ್ಲಿ ನಂಬಿಗೆಯುಳ್ಳವರಾಗಿದ್ದೇ ಆದರೆ, ಅವರೆಲ್ಲರೂ ಸಗುಣಬ್ರಹ್ಮೋಪಾಸಕರು, ವಿಗ್ರಹಾರಾಧಕರು, ಅಮೂರ್ತ ಸ್ವರೂಪವನ್ನು ಗ್ರಹಿಸಲಾರದವರು, ವಿಭುತ್ವವನ್ನು ಅರ್ಥಮಾಡಿಕೊಳ್ಳಲಾರದವರು ಎಂಬುದು ಖಂಡಿತ!

ಪಂಚೇಂದ್ರಿಯಗಳಿಂದ ಉಂಟಾಗುವ ಪ್ರತ್ಯಕ್ಷ ಜ್ಞಾನಗಳಲ್ಲಿ, ಮನದಲ್ಲಿ ಚಿರಸ್ಥಾಯಿಯಾದ – ಹೆಚ್ಚು ಸ್ಪಷ್ಟವೆನಿಸುವ – ವಸ್ತು ಕಲ್ಪನೆಯನ್ನು ಮಾಡಿಕೊಡುವುದು ಕಣ್ಣು. ಅದರಿಂದ ಅದು ಸರ್ವೇಂದ್ರಿಯಗಳಲ್ಲಿ ಅಗ್ರಗಣ್ಯವೆನಿಸಿದೆ. ಆದ್ದರಿಂದ 'ಚಕ್ಷುರ್ಮಾತ್ರಗ್ರಾಹ್ಯೋ ಗುಣೋ ರೂಪಂ' ಎಂಬುದು ಮುಂದೆ ತಾನಾಗಿಯೇ ಬಂದುಬಿಡುತ್ತದೆ. ರೂಪ ಅಥವಾ ಆಕಾರಜ್ಞಾನವನ್ನು ಮನಸ್ಸಿಗೆ ಕಣ್ಣು ಕೊಡುತ್ತದೆ. ಸ್ಪೃಶ್ಯ–ದೃಶ್ಯವಾದ ಪದಾರ್ಥವು ಇದ್ದರೇನೇ ಆ ಪದಾರ್ಥದ ಅದೃಶ್ಯ–ಅಸ್ಪೃಶ್ಯವಾದ ಚಿತ್ರ ಮನೋಭಿತ್ತಿಯಲ್ಲಿ ನಿಲ್ಲುವುದು; ಕಲ್ಪನಾತ್ಮಕವಾಗಿ ವಸ್ತು ಸಾಕ್ಷಾತ್ಕಾರವಾಗುವುದು, ಆದುದರಿಂದ ವಿಗ್ರಹದ ಅವಶ್ಯಕತೆಯುಂಟಾಯಿತು. ಸೃಷ್ಟಿಯಲ್ಲಿ ಮಾನವ ವಿಗ್ರಹವೇ ಅತ್ಯಂತ ಸುಧಾರಿಸಿದ ಮಾದರಿಯೆಂದು ಮಾನವನು ತಿಳಿದುದರಿಂದ, ದೇವರ ಕಲ್ಪನೆಯನ್ನೂ ಅವನು ತನ್ನ ಮಾನವ ತಳಹದಿಯ ಮೇಲೆ ರೂಪಿಸಿಕೊಳ್ಳಬೇಕಾಯಿತು. ಅಲ್ಲಲ್ಲಿ ಅಲ್ಪಸ್ವಲ್ಪ ಬದಲಾವಣೆಗಳನ್ನು ಮಾಡಿದರೂ ಮೂಲ ಸ್ಥೂಲ ಮಾನವ್ಯ ಮಾನದಂಡದ ಅಳತೆಯನ್ನು ದೇವರ ಯಾವ ವಿಗ್ರಹವೂ ಮೀರಿಲ್ಲ. ವಿಷ್ಣುವು ದಶಾವತಾರ ಮಾಡಿದನೆಂದರೂ ಮೂಲರೂಪದಲ್ಲಿ ಅವನು (ಚತುರ್ಭುಜನಿದ್ದರೂ) ಮನುಷ್ಯಾಕಾರವುಳ್ಳವನೇ! ಮನುಷ್ಯಶರೀರದ ಸುಧಾರಿಸಿದ ಆವೃತ್ತಿಯನ್ನು ಕಲ್ಪಿಸಹೋದ ಮಾನವರು, ಮನುಷ್ಯನ ಕೆಲ ಅಂಗಗಳ ಸಂಖ್ಯೆಯನ್ನು ಬದಲಾಯಿಸಿ ನೋಡಿದರು (ಉದಾ : ಶಿವನಲ್ಲಿ ಕಣ್ಣು, ಬ್ರಹ್ಮನಲ್ಲಿ ತಲೆ, ವಿಷ್ಣುವಿನಲ್ಲಿ ಕೈ); ಆದರೆ ಎಂಥ ವಿಕಟ ಕಲ್ಪನೆ ಮಾಡಿದರೂ ಸತ್ತ್ವ ರಜಸ್ತಮೋಮಯವಾದ ಮಾನವ ಪ್ರವೃತ್ತಿಗಳಿಂದ ಮುಕ್ತವಾದ, ಮಾನವನ ಮಾನವತೆಯ ಆಕಾರ–ಗುಣಾದಿಗಳಿಗೆ ಸಂಬಂಧಿಸದ ಒಂದು ವಿಗ್ರಹವನ್ನು ಕಲ್ಪಿಸಲು ಎಂಥ ಭಕ್ತರಿಗೂ ಸಾಧ್ಯವಾಗಿಲ್ಲ.

ಲಿಪಿಶಾಸ್ತ್ರದತ್ತ ಗಮನಿಸಿದರೆ, ವಿಗ್ರಹಗಳ ಪ್ರತೀಕ ಪ್ರಕಾರಗಳು ಹುಟ್ಟಿದ ಬಗೆಯ ಮೇಲೆ ಬೆಳಕು ಬೀಳುತ್ತದೆ. ಈಜಿಪ್ಟ್ ಮೊದಲಾದ ದೇಶಗಳ ಹಳೆಯ ನಾಗರಿಕತೆಯಲ್ಲಿ, ಮಾನವ ಮೊದಲು ಕಂಡ ಲಿಪಿ Pictography – ಚಿತ್ರಲಿಪಿ. ಆನೆಯೆಂದು ಬರೆಯಬೇಕಾದರೆ, ಮೊದಲು ಆನೆಯ ಇಡಿ ಚಿತ್ರವನ್ನು ಬರೆಯಬೇಕಾಯಿತು. ಅನಂತರ ಸೊಂಡಿಲೊಂದನ್ನು ಬರೆದರೆ 'ಆನೆ' ಎಂದು ಓದುವುದು ಜನರಿಗೆ ಗೊತ್ತಾಯಿತು. ಇದಕ್ಕೆ Symbolism ಪ್ರತೀಕತತ್ವ ಎನ್ನಲಾಗುವುದು. ರೋಮನ್ ಅಕ್ಷರಗಳ

ಬೆಳವಣಿಗೆಯಲ್ಲಿ ಈ ತತ್ತ್ವ ಅಡಗಿದೆಯೆಂದು ಹೇಳುತ್ತಾರೆ. ಚೀನೀ ಭಾಷೆಯಲ್ಲಿ ಈಗಲೂ ಇದರ ನಿರ್ದರ್ಶನಗಳನ್ನು ಆ ಅಕ್ಷರಗಳಲ್ಲಿ ಕಾಣಬಹುದು. ಅರ್ಧಚಂದ್ರ ಚಿಹ್ನ, ಶಿಲುಬೆ, ಲಿಂಗ ಮುಂತಾದವುಗಳನ್ನು ದೇವರ ಪ್ರತೀಕಗಳೆಂದು ತಿಳಿದು ಪೂಜಿಸುವ ಪ್ರವೃತ್ತಿ ಬೆಳೆದುಬರಲು, ಮಾನವನ ಕಲ್ಪನಾಶಕ್ತಿ ಹರಿತವಾಗುತ್ತ, ಸೂಕ್ಷ್ಮತರವಾಗುತ್ತ ಹೋದುದೇ ಕಾರಣ. ನಿರ್ಗುಣ ನಿರಾಕಾರ ಬ್ರಹ್ಮನ ಕಲ್ಪನೆಯಲ್ಲಿ ಸ್ಥೂಲಬುದ್ಧಿಗೆ ಸಹಾಯಕವಾಗಿ ನಿರ್ಮಿತವಾದ ಸಂಪೂರ್ಣವಿಗ್ರಹ ಕ್ರಮೇಣ ಕಡಿಮೆಯಾಗುತ್ತ ಹೋಗಿ, ಅತಿ ಸೂಕ್ಷ್ಮರೂಪದ ವಿವಿಧ ಪ್ರತೀಕ, ಚಿಹ್ನೆ, ಗುರುತು ಎನಿಸಿಕೊಂಡಿತು. ಈ ಪ್ರತೀಕತತ್ತ್ವ ವಿಗ್ರಹಾರಾಧನೆಯದೇ ಸೂಕ್ಷ್ಮವಾದ, ಸುಧಾರಿಸಿದ ಬಗೆ. ಇದು ಚಿತ್ರಕಲೆಯಲ್ಲಿ ರೇಖಾದಿರೂಪದಲ್ಲಿ, ನಾಟ್ಯದಲ್ಲಿ ಮುದ್ರಾದಿರೂಪದಲ್ಲಿ, ಸಂಗೀತದಲ್ಲಿ ಸ್ವರವ್ಯವಸ್ಥೆಯ ರೂಪದಲ್ಲಿ, ಸಾಹಿತ್ಯದಲ್ಲಿ ಶಬ್ದಾರ್ಥ ರೂಪದಲ್ಲಿ – ಎಲ್ಲೆಲ್ಲೂ ಇಂದಿಗೂ ಪ್ರಚುರವಾಗಿದೆ.

ಯಾವ ಪದಾರ್ಥವೂ ಮೂಲತಃ ವಂದ್ಯವೂ ಅಲ್ಲ, ನಿಂದ್ಯವೂ ಅಲ್ಲ; ಸಾಧಕವೂ ಅಲ್ಲ, ಬಾಧಕವೂ ಅಲ್ಲ. ನಾವು ಅದನ್ನು ಹೇಗೆ ಬಳಸಿಕೊಳ್ಳುವೆವೋ ಅದು ಹಾಗೇ ಫಲ ಕೊಡುತ್ತದೆ. ವಿಗ್ರಹವಾದರೂ ಈ ನಿಯಮಕ್ಕೆ ಅಪವಾದವಾಗಿಲ್ಲ. ಮೊದಲು ವಿಗ್ರಹಾರಾಧನೆಗೆ ಪುರಸ್ಕಾರ ಸಿಕ್ಕಿದುದು, ಮಾನವನಿಗೆ ಅದು ದೇವರ ಕಲ್ಪನೆಯನ್ನು ಮಾಡಿಕೊಳ್ಳಲು ಸಹಕಾರಿಯಾಗುವುದೆಂದು ಕಂಡು ಬಂದುದರಿಂದ. ಅದರಿಂದಲೇ 'ಮಾನಸಾರ' ಶಿಲ್ಪದಲ್ಲಿ 'ಸಾಧಕನ ಹಿತಾರ್ಥವಾಗಿ, ಅವನ ಸುಖಬೋಧಕ್ಕಾಗಿ ವಿಗ್ರಹರಚನೆಯನ್ನು ಹೇಳಲಾಗುವುದು' ಎಂದಿದೆ. ಆದರೆ ಐರೋಪ್ಯರಲ್ಲಿ ಮತ್ತು ಮಹಮ್ಮದೀಯರಲ್ಲಿ ವಿಗ್ರಹಾರಾಧನೆ ನಿಂದ್ಯವಾದ ಕಾಲದಲ್ಲಿ, ಅವರ ಕಲ್ಪನೆ ವಿಗ್ರಹದ ಸ್ಥೂಲತ್ವದ ಕೀಳ್ಮೆಯನ್ನು ಅಥವಾ ದೇವರ ವಿಶ್ವವ್ಯಾಪಿತ್ವದ ಬಗ್ಗೆ ಇರುವ ಅಲ್ಪಜ್ಞತೆಯನ್ನು ಆಧರಿಸಿತು. ಆದುದರಿಂದ ಕ್ರೈಸ್ತರೂ ಮಹಮ್ಮದೀಯರೂ ವಿಗ್ರಹಾರಾಧನೆಯನ್ನು ಹೀಗಳೆದರು ; ಎಂದರೆ ಸ್ಥೂಲ ವಿಗ್ರಹವನ್ನು ಬಿಟ್ಟು ಪ್ರತೀಕಗಳನ್ನು ಮೊರೆಹೊಕ್ಕರು. ಮಾನವ್ಯ ವ್ಯವಹಾರದಲ್ಲಿ ವಸ್ತುಗಳ ಸಾಪೇಕ್ಷ ತಾರತಮ್ಯಜ್ಞಾನ ಪ್ರಧಾನವಾಗಿರುವುದರಿಂದ, ವಿಶಿಷ್ಟಾರ್ಥ ಸೂಚಕತ್ವ ಮೌಲಿಕವಾಗಿರುವುದರಿಂದ, ಆಯ್ದ ವಿಶಿಷ್ಟಾಕೃತಿಗಳು ಮಾತ್ರ ದೇವರ ಪ್ರತೀಕಗಳಾದುವಲ್ಲದೆ, ಜಗತ್ತಿನ ಎಲ್ಲ ವಸ್ತುಗಳೂ ಪ್ರತೀಕಗಳಾಗಲಿಲ್ಲ; ಪೂಜ್ಯವಸ್ತುಗಳಾಗಲಿಲ್ಲ.

ದೇಶ–ಕಾಲ–ಕಾರ್ಯವ್ಯಪೇಕ್ಷೆಯಿಂದ ಪರಿವರ್ತನಶೀಲವುಳ್ಳ ಮಾನವ್ಯ ಬುದ್ಧಿಗೆ ಮೊದಲು ಸಹಕಾರಿಯೆನಿಸಿದ ವಿಗ್ರಹ, ಕೆಲವೆಡೆ ವಿಘ್ನಕಾರಿಯಾಗಿ ಕಂಡಿತು; ಆಗ ಅದು ತ್ಯಾಜ್ಯವಾಯಿತು. ಪ್ರತಿಯೊಂದು ತತ್ತ್ವ ಅಥವಾ ಪದಾರ್ಥವೂ ದುರ್ಬಲ ಮನಸ್ಕರ, ಅಸೂಕ್ಷ್ಮಮತಿಗಳ ಕೈಯಲ್ಲಿ ಸಿಕ್ಕಾಗ ಮೂಲಾರ್ಥವನ್ನು, ಮೂಲ ಪ್ರಯೋಜನವನ್ನು ಕಳೆದುಕೊಳ್ಳುತ್ತದೆ. ಅದೇ ಮೇರೆಗೆ ಸ್ಥೂಲವಿಗ್ರಹವೇ ಸಾಕ್ಷಾತ್ ದೇವರೆಂದು ಕೆಲವರು ಭಾವಿಸಿದುದೂ ವಿಗ್ರಹಾರಾಧನೆಯ ಕೀಳ್ಮೆಗೆ ಕಾರಣವಾಯಿತು. ಬುದ್ಧಿ ಭಾವನೆಗಳ ಸಂಯುಕ್ತ ಪ್ರಯತ್ನದ ಫಲವಾದ ಕಲ್ಪನೆಯು ಮಾತ್ರ ಸಹಜವೂ

ಪ್ರಯೋಜಕವೂ ಸುಂದರವೂ ಆಗುವುದಲ್ಲದೆ ಯಾವ ಒಂದೇ ಒಂದನ್ನು ಅವಲಂಬಿಸಿದ ಕಲ್ಪನೆಯೂ ಸಂಸ್ಕೃತ, ಹಿತಕರ ಎನಿಸದು. ವಿಗ್ರಹವೇ ದೇವರೆಂಬುದು ಕುರುಡುಭಾವನೆಯಿಂದ ಬಂದ ಕಲ್ಪನೆ. ದೇವರಿಗೆ ಕಲ್ಪನೀಯ ಆಕಾರವಿಲ್ಲವೆಂಬುದನ್ನು ಹೃದಯದಲ್ಲಿ ಅರಗಿಸಿಕೊಳ್ಳದೆ, ವಿಗ್ರಹಪೂಜಾ ತ್ಯಾಗ ಮಾಡುವುದು ಕೇವಲ ಬುದ್ಧಿಜನ್ಯ ಕಲ್ಪನೆಯ ವೈತಂಡಿಕ ಪ್ರವೃತ್ತಿ. ಅತಿಯಾದ ಭಾವಿಕತೆಯಿಂದ ಭಕ್ತಿಯೋಗ ಅಧಃಪತಿತವಾದಂತೆ, ಅತಿಬೌದ್ಧಿಕತೆಯಿಂದ ಜ್ಞಾನಯೋಗ ಕೆಲವೊಮ್ಮೆ ಅಧಃಪಾತ ಹೊಂದಿತು; ಚಾರ್ವಾಕತೆ ಅಥವಾ ವಂಚಕ ಪಾರಮಾರ್ಥಿಕತೆಗೆ ಇಳಿದಿತು; ಭೌತವಾದಕ್ಕೆ ಬಂದು ಮುಟ್ಟಿತು. ಹಾಗೇ ವಿಗ್ರಹಾರಾಧನೆಯಲ್ಲಿಯೂ ಇಂಥ ವಿಪರೀತ ದೃಷ್ಟಿಗಳು ತಲೆದೋರಿದಾಗ, ವ್ಯವಹಾರ ಯೋಗ್ಯವಲ್ಲದ ಅತ್ಯಾರಾಧನೆ, ಅನಾರಾಧನೆಗಳು ತಲೆದೋರಿ, ಮಾನವನ ಆತ್ಮೋನ್ನತಿಯ ಹಾದಿಯಲ್ಲಿ ಕಂಟಕಗಳಾಗಿ ನಿಂತುವು. ಒಂದು ಕಡೆ Hero worship ವ್ಯಕ್ತಿ ಪೂಜೆಯಿಂದ ಇಂದು ಕೆಲವೆಡೆ ಹಾನಿಯಾದರೆ, ಅಪೂಜ್ಯ ಪೂಜೆಯಿಂದ ಕೇಡೊದವಿದರೆ, ಮತ್ತೊಂದೆಡೆ ವ್ಯಕ್ತಿ ತಿರಸ್ಕಾರದಿಂದ, ಪೂಜ್ಯಪೂಜಾವ್ಯತಿಕ್ರಮದಿಂದ ಸಮಾಜ ಕಷ್ಟ–ನಷ್ಟಗಳಿಗೊಳಗಾಗುವಂತಾಗಿದೆ. ಇವೆಲ್ಲ ವಿಗ್ರಹಾರಾಧನೆಯನ್ನು ಅವಲಂಬಿಸಿ ಬೆಳೆದು ಬಂದ ಮಾನವಬುದ್ಧಿಯ ವಿಕಾರಗಳು.

ಹಿಂದುಸ್ತಾನದಲ್ಲಿ ಬಹುಸಂಖ್ಯ ವಿಗ್ರಹಾರಾಧಕರಿರುವುದರಿಂದ, ಆ ವಿಗ್ರಹಾರಾಧನೆಗೆ ಸಂಬಂಧಿಸಿದ ವಿವಿಧ ಶೈಕ್ಷಣಿಕ, ವ್ಯಾಯಾಮಿಕ, ರಾಸಾಯನಿಕ, ಭೈಷಜ್ಯಕ, ಭೌತಶಾಸ್ತ್ರೀಯ ಸತ್ಫಲವನ್ನು ಕಳೆದುಕೊಂಡು, ಮುಂದುವರಿದ ನಾಗರಿಕರೆನಿಸಿಕೊಳ್ಳಲು ಹವಣಿಸಿ, ವಿಗ್ರಹಾರಾಧನೆಯನ್ನು ಬಿಡುವುದು ಲಾಭಕರವಲ್ಲ. ನಿಜವಾಗಿ ಮುಂದುವರಿದ ನಾಗರಿಕ 'ದೇವರು ಎಲ್ಲೆಲ್ಲೂ ಇದ್ದಾನೆ, ವಿಗ್ರಹದಲ್ಲಿಯೂ ಇದ್ದಾನೆ' ಎಂಬ ಅರಿವಿನ ಮೂಲಕ ವಿಗ್ರಹವನ್ನು ಕಾಣಬಹುದು. ಅಲ್ಲದೆ ವಿಗ್ರಹ ಇಡುವ ಸ್ಥಳ, ಅದರ ಆರಾಧನೆಯ ಕ್ರಮ ಇವುಗಳು ವ್ಯವಹಾರನಿರತನಾದ ಮಾನವನಿಗೆ, ಸ್ಮೃತಿ ಶಕ್ತಿಯ ನ್ಯೂನತೆಯಿಂದ ಸದಾ ದಿವ್ಯತ್ವವನ್ನು ನೆನೆದು ಕಾರ್ಯಾಸಕ್ತನಾಗಲು ಬರದ ಮಾನವನಿಗೆ, ವ್ಯವಹಾರಗತ ದೋಷದಿಂದ ಮೇಲೆ ತಲೆಯೆತ್ತಿನಿಲ್ಲುವ ದಿವ್ಯತ್ವದ ಆದರ್ಶವನ್ನು ನೆನಪಿಗೆ ತಂದುಕೊಡಲು ಕಾಲಕಾಲಕ್ಕೆ, ದೈನಂದಿನ ಅವಧಿಗಳಲ್ಲಿ ವಿಗ್ರಹಾದಿ ವಿಶಿಷ್ಟ ಪ್ರತೀಕಗಳು ನೆರವಾಗಬಲ್ಲವು. ಆರಾಧನೆಯ ವಾತಾವರಣವು ನೈರ್ಮಲ್ಯ, ಪಾವಿತ್ರ್ಯಗಳನ್ನು ಅವನಲ್ಲಿ ಉಂಟುಮಾಡುವುವು, ಜಾಗೃತಗೊಳಿಸುವುವು. ಅದರ ಬಳಕೆಯ ಸಾಮಗ್ರಿಗಳು, ಯಮ–ನಿಯಮಾದಿಗಳು, ಉಪವಾಸ ವ್ರತಾದಿಗಳು ದೈಹಿಕ ಮತ್ತು ಮಾನಸಿಕ ಪುಷ್ಟಿ–ತುಷ್ಟಿಗಳಿಗೆ, ಶಾಂತಿ–ಸಮಾಧಾನಗಳಿಗೆ ಕಾರಣವಾಗುವುದು. ದೇವತ್ವದ ಆರಾಧನೆ ಅಂಜಿಕೆಯ ದೆಸೆಯಿಂದ ಅಜ್ಞರಿಗೆ ಅಗತ್ಯವೆನಿಸಿದರೆ, ಶಾಂತಿ ಸಮಾಧಾನಗಳಿಗಾಗಿ ಸುಜ್ಞರಿಗೆ ಅವಶ್ಯಕವೆನಿಸಿದ್ದು ಅನುಭವ ವೇದ್ಯವಾಗಿದೆ. ಮಾನವನ ಮೂಲಗುಣಗಳು ಮೂಲಶಕ್ತಿಗಳು, ಶರೀರ ಮತ್ತು ಮನಸ್ಸಿನ ವಿವಿಧ ಧರ್ಮಗಳು ಸ್ವಭಾವತಃ ಕೆಟ್ಟವೂ ಅಲ್ಲ, ಒಳ್ಳೆಯವೂ ಅಲ್ಲ; ಬುದ್ಧಿ ಸಂಸ್ಕಾರಗಳು ಸಾಮಾಜಿಕ ದೃಷ್ಟಿಯಿಂದ ಅವನ್ನು, ಕಾರಣಸಾಮಗ್ರಿಭೇದದಿಂದ

ಒಳ್ಳೆಯವನ್ನಾಗಿ ಇಲ್ಲವೆ ಕೆಟ್ಟವನ್ನಾಗಿ ಮಾಡುವುದು. ಆದುದರಿಂದ ಹುಟ್ಟಿದ ಮನುಷ್ಯನಿಗೆ ಬುದ್ಧಿ ಸಂಸ್ಕಾರ ಅಗತ್ಯ. ಇದಕ್ಕೆ ವಿಗ್ರಹ ಪ್ರತೀಕಾದಿಸಾಧನಗಳ ಮೂಲಕ ಉದಾತ್ತತೆಯತ್ತ ಪ್ರವೃತ್ತಿಯುಂಟಾಗುವಂತೆ, ದಿವ್ಯತೆಯತ್ತ ಒಲವುಂಟಾಗುವಂತೆ ಪ್ರೇರಣೆ ಪಡೆಯಲು ಅನುಕೂಲವಾಗುವ ದೇವತಾರಾಧನೆ ಅವಶ್ಯಕವಲ್ಲವೆ? ಅವಶ್ಯಕವೆಂಬುದನ್ನು ಇಲ್ಲಿಯ ವರೆಗೆ ಆಗಿಹೋದ, ಈಗಲೂ ಬದುಕಿರುವ ಎಷ್ಟೋ ಜನಾದರಣೀಯ ಮಹಾತ್ಮರು ತಮ್ಮ ಜೀವನದಿಂದ ನಿದರ್ಶನಕ್ಕೆ ತಂದುಕೊಟ್ಟಿದ್ದಾರೆ. ದೈಹಿಕಪಶುತ್ವದ ಎಳೆತ–ಸೆಳೆತಗಳನ್ನು ಹಿಡಿತದಲ್ಲಿಟ್ಟು ಸುಖವಾಗಿರಬಯಸುವ ಪ್ರತಿಯೊಬ್ಬ ಮಾನವನಿಗೂ ಕಾಲಗತಿಯನ್ನು ಜ್ಞಾಪಿಸಿ ಎಚ್ಚರಿಸುವ 'ಅಲಾರಂ' ಗಡಿಯಾರದಂತೆ ದೇವತಾರಾಧನೆ ಕಾರ್ಯಾಕಾರ್ಯ ವಿವೇಕವನ್ನು ಸೂಚಿಸಲು ಸಹಕಾರಿಯಾಗುವುದು ಎಂಬ ತಿಳಿವಳಿಕೆ ಅವಶ್ಯಕ.

ಇನ್ನು ಕಾಪಟ್ಯ, ದಂಭಗಳ ವಿಚಾರ : ಮೂರ್ತಿಪೂಜೆಯಲ್ಲಿ ಮಾತ್ರ ಕಾಪಟ್ಯ, ದಂಭಾಚಾರಗಳು ಹುಟ್ಟಿವೆಯೆಂಬುದು ಸುಳ್ಳು; ಮಾನವ್ಯವೆನಿಸುವ ಎಲ್ಲ ವ್ಯವಹಾರದಲ್ಲೂ ಆಯಾ ವರ್ಗದ ಮನುಷ್ಯರ ಹೃದಯಧರ್ಮಾನುಸಾರವಾಗಿ ವಂಚಕತೆ ತಲೆದೋರಿದ್ದುಂಟು. ಅಂಥ ವಂಚಕತೆ ಕೆಲ ದೇವತಾರಾಧಕರಲ್ಲಿ ಉಂಟಾಗಿದ್ದರೆ ಅದಕ್ಕೆ ಮೂರ್ತಿ ಹೊಣೆಯಲ್ಲ; ದೇವತಾರ್ಚನವಿಧಿ ಹೊಣೆಯಲ್ಲ; ಆ ಜೀವಿಗಳ ಮನೋದೌರ್ಬಲ್ಯವಷ್ಟೇ ಕಾರಣ. ಈ ಕಾರಣದಿಂದ ಎಂದರೆ ಕೆಲ ಮೂರ್ತಿಪೂಜಕರ ಅಜ್ಞಾನ, ಕುಜ್ಞಾನ, ದಂಭ ದುರ್ವೃತ್ತಗಳಿಂದ ಮೂರ್ತಿಪೂಜೆಯನ್ನು ತ್ಯಾಜ್ಯವೆನ್ನಲಾಗದು. ಆದರೆ ಇಷ್ಟು ಮಾತ್ರವನ್ನು ಹೇಳಬಹುದು: ದೇವತಾ ಸ್ಥಲಗಳು ಸಾರ್ವಜನಿಕವಾಗಿರುವಲ್ಲಿ, ಸಮಾಜದ ಮಾನಸಿಕ ಆರೋಗ್ಯವನ್ನು ಸುಸ್ಥಿತಿಯಲ್ಲಿಡಲು ಆ ಸ್ಥಲಾಧಿಕಾರಿಗಳು ಸಾಕಷ್ಟು ಯೋಗತ್ಯಾ ಸಂಪನ್ನರಿರಬೇಕು ಮತ್ತು ಸಮಾಜವಾದರೂ ಅಂಥ ಯೋಗ್ಯತಾ ಸಂಪನ್ನರಿಗೆ ಮಾತ್ರ ಅಲ್ಲಿ ಸ್ಥಾನ ಕೊಡಬೇಕು. ಈ ಜಾಗ್ರತೆಯನ್ನು ಸಮಾಜನೇತೃಗಳು ವಹಿಸದಿದ್ದಲ್ಲಿ, ಅಲ್ಲಿ ಪೂಜ್ಯಗುಣ ಪ್ರತೀಕಗಳ ಆರಾಧನೆ ನಡೆಯದೆ – ಇತರ ಸ್ಥಳಗಳಲ್ಲಿ ಒಮ್ಮೊಮ್ಮೆ ಆಗುವಂತೆ – ಅಪೂಜ್ಯಗುಣ ಪ್ರತೀಕಗಳ ಪೂಜೆ ನಡೆದು, ಸಮಾಜ ಹೀನಸ್ಥಿತಿಗೆ ಅಜ್ಞಾನಾಂಧಕಾರಕ್ಕೆ ಬೀಳುವಂತಾಗುವುದು. ಪೂಜ್ಯಪೂಜಾವ್ಯತಿಕ್ರಮ, ಅಪೂಜ್ಯಪೂಜೆ ಮತ್ತು ಅಪೂಜೆ. ಈ ಮೂರೂ ಸಮಾಜ ಕಂಟಕಗಳು, ಮಾನವನನ್ನು ಇದ್ದ ಸ್ಥಿತಿಯಿಂದ ಮೇಲಕ್ಕೆ ಎತ್ತದ, ಕೆಳಕ್ಕೆ ಬೀಳಿಸುವ ಶತ್ರುಗಳು. ಈ ಶತ್ರುಗಳಿಂದ ತಪ್ಪಿಸಿಕೊಳ್ಳಲು ದೇವಸ್ಥಾನಗಳು ಸಹಕಾರಿಯಾದಾಗ ಮಾತ್ರ ಅವು ಸಾರ್ಥಕವೆನಿಸುವುವು.



['ಜಯಂತಿ' – ಸಂಪುಟ ೧೨, ಪುಟ ೨೮೮]

# ೩೩. ವಿಚಾರಕ್ಕೆ ಬಹಿಷ್ಕಾರ!

**ಹಿಂದಿನ ಕಾಲದಲ್ಲಿ ಅಂಧಶ್ರದ್ಧೆಯು ಮಾನವ ಸಮಾಜದಲ್ಲಿ ಹಾವಳಿಯನ್ನು ನಡೆಸಿದ್ದರೆ, ಇಂದಿನ ಕಾಲದಲ್ಲಿ ವಿಚಾರಾಂಧತೆಯು ಮಾನವ ಜೀವನವನ್ನು ಕ್ಷಣ ಕ್ಷಣಕ್ಕೂ ಬಾಧಿಸುತ್ತಲಿದೆ. ಕುಶ್ರದ್ಧೆಯಿಂದ ಹಾಳಾಗುವುದೂ ಒಂದೇ, ಕುವಿಚಾರದಾಸ್ಯದಿಂದ ಹಾಳಾಗುವುದೂ ಒಂದೇ! ಅಹಂಕಾರಿಗಳಿರುವಲ್ಲಿ ಯಾವುದೂ ಶುದ್ಧ ಸ್ವರೂಪದಲ್ಲಿ ಉಳಿಯದು. – ಸಂಪಾದಕ.**

ನಿತ್ಯವೂ ನಾವಿಂದು ಬುದ್ಧಿವಂತರ ಬಾಯಿಂದ, ವಿಚಾರ ಮಾಡುವುದಕ್ಕೆ ಅನುಕೂಲವಾದ ಪ್ರಚಾರವನ್ನು ಕೇಳುತ್ತಿದ್ದೇವೆ. ನಿಜ – ಅದರ ಅನುಕೂಲಾರ್ಥವನ್ನು ತಿಳಿದುಕೊಂಡವ ಸುವಿಚಾರಿ, ಆ ವಿಚಾರದಂತೆ ಅವನ ಕೆಲಸವಾಗದಾಗಲೂ ಅವನಿಗೆ ನಿರಾಶೆಯ ಹಿಂಸೆ ಬಹಳವಾಗುವುದು – ಆದರೂ ತಡೆದುಕೊಂಬ ಶಕ್ತಿಯುಂಟಾಗುವುದು. ಇದು ಪ್ರಸಿದ್ಧ ವಿಚಾರಪ್ರಣಾಲಿ. ಆದರೆ ಈ ಸರಣಿಯನ್ನು ಆದರ್ಶ ರೀತಿಯಿಂದ ಅನುಸರಿಸಿದರೆ ಶಾಂತಿ ಲಭ್ಯವೆಂಬಂತೆ ವಿಚಾರವನ್ನು ಮನದಿಂದ ಓಡಿಸುವುದು ಸ್ಥಿರಶಾಂತಿದಾಯಕ ಎಂಬುದು ಪ್ರಸಿದ್ಧ ತತ್ತ್ವಜ್ಞಾನಿ ಜೆ. ಕೃಷ್ಣಮೂರ್ತಿಯವರ ವಿಚಾರ.

ವಿಚಾರವು ಅನೈಕಾಂತಿಕ, ಅನಂತ, ಅವಿರತ ಎಂಬ ಅರಿವಿನಿಂದ ವಿಚಾರಬಹಿಷ್ಕಾರವನ್ನು ಹೇಳಲಾಗಿದೆ. ಆದರೆ ಶಾಂತಿ–ಲಾಭಕ್ಕೆ ಯಾವ ಪ್ರಮುಖ ಸ್ಥಾಯಿಯಿದ್ದರೂ ಅದಕ್ಕೆ ಅಂತವಾಗಬೇಕು. 'ಅಂತವೇ ಶಾಂತಿ, ಅನಂತವೇ ಭ್ರಾಂತಿ; ಏಕವೇ ಸುಖ ಅನೇಕವೇ ದುಃಖ' ಎಂಬ ಪ್ರತಿವಾದವೂ ವಿಚಾರಾರ್ಹ. ವ್ಯಾವಹಾರಿಕವಾಗಿ ವಿಚಾರಿಸಿದರೆ, ವಿಚಾರದಲ್ಲಿ ಸುವಿಚಾರ ದುರ್ವಿಚಾರಗಳೆಂಬುದು ನಮಗೆ ಚಿರಪರಿಚಿತ. ಮೆಚ್ಚಿದವನಿಗೆ ಮರಣ ಸುಖವೆಂಬುದೂ ಜಗತ್ತಿನ ಎಲ್ಲವೂ ಸಾಪೇಕ್ಷ, ಅಪೂರ್ಣ ಎಂಬುದೂ ವಿಚಾರವೆಂಬುದು ಊಹನೆಯ ರೂಪದ್ದೆಂಬುದೂ ಎಲ್ಲ ಜ್ಞಾನವೂ ಅಂತ್ಯದಲ್ಲಿ ವೈಯಕ್ತಿಕ ಮಾನಸದಿಂದ ಪರಿಮಿತ – ಅದರ ದರ್ಶನದಿಂದ ಪರಿಚ್ಛಿನ್ನ ಎಂಬುದೂ ಸತ್ಯವಾದರೆ, ಸತ್ಯವೆನಿಸಿದರೆ, ಅನುಭವಕ್ಕೆ ಬಂದರೆ 'ತರ್ಕೋಽಪ್ರತಿಷ್ಠಃ' ಎಂಬ ಉದ್ಗಾರಕ್ಕೆ ಮನ್ನಣೆಯಿತ್ತು ಯಾವನಾದರೂ ಆತ್ಯಂತಿಕ ಸತ್ಯ, ಶಾಂತಿ, ಸುಖಗಳ ಶೋಧನೆಗೆ ಹೊರಟಾಗ, ವಿಚಾರತ್ಯಾಗ ಮಾಡಿ ಮೌನಧಾರಣೆ ಮಾಡಬೇಕಾಗುತ್ತದೆ. ಅದೂ ಕೇವಲ ಬಾಯಿಮುಚ್ಚಿಕೊಂಬ ಮೌನವನ್ನಲ್ಲ ಹಿಡಿಯುವುದು; ಮನಸ್ಸನ್ನು ವಿವಿಧವಾಗಿ ಚರಿಸದಂತೆ ನಿಷ್ಪಂದಗೊಳಿಸುವುದನ್ನು ಅನುಸರಿಸುವುದು. ಮನಸ್ಸು ಹೀಗೆ ಅಚಲ, ಸ್ಥಿರ, ಸ್ತಬ್ಧ ಆದಾಗಲೇ ಶಾಂತವಾಗುತ್ತದೆ. ಅಂಥ ಸ್ಥಿಮಿತ ಮನಸ್ಸೊಂದೇ ನಿರ್ಮಲ, ನಿಷ್ಪಕ್ಷಪಾತ, ನಿರ್ಗ್ರಹ ಮತ್ತು ನಿರ್ವಿಕಾರ; ಅಂಥ ಮನಸ್ಸಿಗೆ ಮಾತ್ರ ಪರಮಾರ್ಥ ಅಥವಾ ಕೊನೆಯ ಸತ್ಯ ಗೋಚರವಾಗಬಲ್ಲುದು – ಎಂದು

ಹೇಳಿದರೆ, ಯಾರಾದರೂ ಒಪ್ಪಬೇಕಲ್ಲವೆ? ವಿಶ್ವಪ್ರೇಮ, ಸತ್ಯಪ್ರೇಮ ಅಚಲಪ್ರೇಮ ಮುಂತಾದುವು ಅಂಥ ಮನಸ್ಸಿಗಲ್ಲದೆ ಇನ್ಯಾವ ಮನಸ್ಸಿಗೆ ಜೀರ್ಣವಾದಾವು? ಅಂಥದಲ್ಲದ ಮನಸ್ಸಿನ ವಿಚಾರಗಳೆಲ್ಲ :

"ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸ" ಎಂಬ ಬಗೆಯ ಮಿಂಚಿ ಮಾಯವಾಗುವ ಕ್ಷಣಿಕ ಕಲ್ಪನೆಗಳಲ್ಲದೆ ಮತ್ತೇನು? ಆಗ ವಾಸ್ತವವಾದಿ ಯಾರೇ ಆದರೂ "ಸರ್ವಂ ಕ್ಷಣಿಕಂ, ಕ್ಷಣಿಕಂ, ಸರ್ವಂ ದುಃಖಂ, ದುಃಖಂ, ಸರ್ವಂ ಸ್ವಲಕ್ಷಣಂ, ಸ್ವಲಕ್ಷಣಂ" ಎಂದು ಸಿದ್ಧಾಂತಿಸದೆ ಉಳಿಯಲಾದೀತೇ? ಚಂಚಲಮನದ ಸದಸದ್ ವಿಚಾರ ಹಾಗೂ ಭಾವನೆಗಳೆಲ್ಲವೂ ಚಂಚಲ, ಅನವಲಂಬನೀಯ, ಅನಾದೇಯ ಎನಿಸದಿರುವುವೇ? ಸರ್ವಕ್ರಿಯೆಯೂ ಚಂಚಲ, ಕಾಲಿಕ ದೇಶಿಕ ಪರಿಮಿತಿಗಳಿಂದ ಬದ್ಧ. ಆದುದರಿಂದ ಮಾನಸ ನಿಷ್ಕ್ರಿಯದಿಂದಲೇ ಸ್ಥಿರಶಾಂತಿ, ಸತ್ಯ, ಪ್ರೇಮಗಳು ಸಾಧ್ಯವೆಂದೆನಿಸುವುದು ಸಹಜ. ಆದುದರಿಂದ ಶಾಂತಿಯ ಭಾವನೆಯ ಚಂದ್ರಿಕೆ ಮಾನಸ ಆಕಾಶದಲ್ಲಿ ಉದಯಿಸಿ ಆತ್ಮತೃಪ್ತಿ ಹೊಂದಬೇಕಾದರೆ, ವಿಚಾರದ ಮೋಡಗಳನ್ನು ಓಡಿಸಬೇಕೆಂದು ಹೇಳಲಾಗಿದೆ.

ನಮ್ಮ ಜೀವನವು ಇಡಿಯಾಗಿ ಸದಾ ಕ್ರಿಯಾತ್ಮಕವಾದ ಅಂಥ ಕ್ರಿಯೆಗೆ ಭಾವನೆಯೇ ಕಾರಣ. ಭಾವನೆಗೆ ಬುದ್ಧಿ ಪ್ರೇರಕ. ಆ ಪ್ರೇರಕವನ್ನು ಸ್ಥಗಿತಗೊಳಿಸಿದರೆ ಭಾವನಾಸಮತ್ವ ಸಿದ್ಧಿಸುತ್ತದೆ. ಭಾವನಾಸಮತ್ವವೇ ಶಾಂತಿ, ಭಾವನೆಯ ಕ್ಷೋಭವೇ ಅಶಾಂತಿ. ವಾಸ್ತವಿಕ ಅನುಭವವೆಂದರೇ ಭಾವನೆ; ಬುದ್ಧಿಯ ಕಾರ್ಯಗಳೆಲ್ಲ ವಿಚಾರಾತ್ಮಕ, ಅನೇಕ, ಚಂಚಲ, ಊಹಾತ್ಮಕ, ಕಾಲ್ಪನಿಕ, ಅವನುಭವಾತ್ಮಕ. ಸುಖ–ದುಃಖ, ಶಾಂತಿ–ಅಶಾಂತಿ, ಆನಂದ–ಅಸಂತೋಷ ಎಂಬಿವು ಭಾವನಾರೂಪದವಲ್ಲದೆ, ಬುದ್ಧಿ–ವಿಚಾರಗಳ ರೂಪದವಲ್ಲ. ಭಾವನೆಯ ಏಕೀಕರಣವೇ ಸಮತ್ವ; ಬುದ್ಧಿ ಅದನ್ನು ಅನೇಕೀಕರಿಸಿ ಕ್ಷುಬ್ಧಗೊಳಿಸುವಂಥದು. ಬುದ್ಧಿಯು ಏಕೀಕೃತವಾಗುವುದೆಂದರೆ ತಟಸ್ಥವಾಗುವುದೆಂದರ್ಥ; ಅದು ಭಾವನೆಯ ಏಕೀಕರಣವನ್ನು ಬೆಂಬಲಿಸುವುದೆಂದರೆ ಸಂನ್ಯಾಸ ತೆಗೆದುಕೊಂಡುವೆಂದರ್ಥ. The liberating process must begin with the choiceless awareness of what you will and of your reactions to the symbol system which tells you or ought not, to milk it – ನೀವು ಬಯಸುವ ಮತ್ತು ನೀವು ಬಯಸಬೇಕು ಅಥವಾ ಬಾರದು ಎಂದು ಹೇಳಿದ ಸಂಕೇತಜಾಲರೂಪದ ವಿಚಾರಕ್ಕೆ ನಿಮ್ಮಲ್ಲಾಗುವ ಪ್ರತಿಕ್ರಿಯೆಯ ರಾಗದ್ವೇಷರಹಿತ ಪ್ರಜ್ಞೆಯಿಂದಲೇ ಮುಕ್ತಿ ಸಾಧನೆಯನ್ನು ಆರಂಭಿಸಬೇಕು" ಎಂಬ ಜೆ.ಕೆ. ಅವರ ವಾಕ್ಯ ಮೇಲಿನ ಮಾತಿಗೆ ಉಪಷ್ಟಂಭಕವಾಗಿದೆ. ಎಲ್ಲ ವಿಚಾರವೂ ಒಂದು ಅಭ್ಯಸ್ತವಾದ ಸಾಂಪ್ರದಾಯಿಕ ಅರ್ಥವಾಹಕ (ಪ್ರತೀಕ, ಚಿಹ್ನೆ ಅಥವಾ ಸಂಕೇತಗಳ) ವ್ಯವಸ್ಥಿತ ಸಮೂಹ. ವಿಚಾರಬೋಧೆಯೆಲ್ಲವೂ ಸಂಕೇತಜನ್ಯಜ್ಞಾನ ಅದು. ಅನುಭವೇತರ ಭಾವನಾತ್ಮಕ ಹಾಗೂ ಬೌದ್ಧಿಕ ಬೇಕು–ಬೇಡಗಳಿಂದ ಮುಕ್ತವಾಗಿ ಉಳಿಯಬಲ್ಲ ಮನಸ್ಸೊಂದೇ ಮೋಕ್ಷಾರ್ಹ, ಶಾಂತ್ಯರ್ಹ, ಸತ್ಯಜ್ಞಾನಾರ್ಹ. ಹಳೆಯ ಮಾತಿನಲ್ಲಿ ಈ

ತರಬೇತಿಗೆ ನಿತ್ಯಾನಿತ್ಯವಸ್ತುವಿವೇಕ, ಇಹಾಮುತ್ರಭೋಗವಿರಾಗ, ಶಮದಮಾದಿ ಸಾಧನಸಂಪತ್ತಿ ಮತ್ತು ಮುಮುಕ್ಷುತ್ವ ಎಂಬ ಮಾನಸ ಸಂಸ್ಕಾರ ಎನ್ನಲಾಗುತ್ತದೆ. ಮುಕ್ತಿಯೆಂದರೆ Inner freedom of creative reality - ರಚನಾತ್ಮಕ ಸತ್ಯ ಸ್ವರೂಪದ ಆಂತರಿಕ ಅನಿರ್ಬಂಧ ಎನ್ನುತ್ತಾರೆ ಶ್ರೀ ಜೆ.ಕೆ. ಈ ಅನಿರ್ಬಂಧವೆಂಬುದೇ ಆತ್ಯಂತಿಕ ಅಭಯ ಅಥವಾ ಶಾಂತಿ ಇಲ್ಲವೆ ಸಚ್ಚಿದಾನಂದ.

ಇಂದಿನ ಹೊಸ ಪ್ರಗತಿಯ ನಮ್ಮ ಚಿಕ್ಕ ಇತಿಹಾಸದ ಪುಟಗಳನ್ನು ತೆರೆದರೆ, ಅವಿಚಾರ–ಕುವಿಚಾರಗಳಿಂದಾದ ಹಾನಿಗಳನ್ನು ಲೆಕ್ಕಿಸಿದರೆ, ವಿಚಾರವೆಂಬುದು ಅಧಿಕಾರ–ಪ್ರಭಾವಗಳ ದಾಸರ ಗುತ್ತಿಗೆಯಾಗಿರುವುದನ್ನು ಅವಲೋಕಿಸಿದರೆ, ಅನಧಿಕಾರಿಗಳಿಗೆ ಅಧಿಕಾರ–ಪ್ರಭಾವಗಳನ್ನು ನಡೆಸುವ ಅವಕಾಶವನ್ನು ಕೊಟ್ಟ ನಮ್ಮ ಜನತಾಜನಾರ್ದನನ ಮುಗ್ಧತೆಯನ್ನು ಪರಾಮರ್ಶಿಸಿದರೆ, ವಿಚಾರವಂತರೆಂದು ಅಹಮಹಮಿಸುವ ಅತಿರಥ – ಮಹಾರಥಿಗಳನ್ನು ನೋಡಿದರೆ, ಒಮ್ಮೆ ಆತ್ಮಸಾಕ್ಷಿಗೆ ಸರಿಯಾಗಿ ಬಾಳುವವನು ಜೆ.ಕೆ. ಅವರಂತೆ ವಿಚಾರ ಬಹಿಷ್ಕಾರವನ್ನು ಆಚರಣೆಗೆ ತರಲು ಸಿದ್ಧನಾಗುವುದು ಅಸ್ವಾಭಾವಿಕವಾಗಿ ಕಾಣಲಾರದು. All knowledge is interpretational – ಎಲ್ಲ ಜ್ಞಾನವೂ ವ್ಯಾಖ್ಯಾನಾವಲಂಬಿಯಾಗಿರುವುದೂ As long as there are Lawyers no law is perfect - ವಕೀಲರಿರುವವರೆಗೆ ಯಾವ ಕಾಯಿದೆಯೂ ಪರಿಪೂರ್ಣವಲ್ಲ ಎಂಬುದೂ ಉಗ್ರವಾಗಿ ನಮ್ಮ ಅನುಭವಕ್ಕೆ ಬರುತ್ತಿರುವಾಗ, ಅದೃಷ್ಟರೇಖೆ ಚೆನ್ನಾಗಿರುವವ ಕಟ್ಟಿದ ಗುಂಪೇ ಸರ್ವಾಧಿಕಾರಿಯಾಗುತ್ತಿರುವಾಗ, ವಿಚಾರದ ದೇವತ್ವವನ್ನು ಒಪ್ಪುವುದು ಕಷ್ಟವಾಗುತ್ತದೆ. ಅದರಿಂದಲೇ ಗಾಂಧಿಯವರು "Rationalists are admirable beings; rationalism is a hideous monster when it claims for itself omnipotence" – ವಿಚಾರವಾದಿಗಳು ಪ್ರಶಂಸಾರ್ಹರು; ಆದರೆ ತಾನೇ ಸರ್ವಶಕ್ತನೆಂದುಕೊಂಡಾಗ ವಿಚಾರವಾದವೊಂದು ಭಯಂಕರ ವಿರೂಪಭೂತ" ಎಂದಿದ್ದಾರೆ. ಪೂರ್ವದಲ್ಲಿ ಅಂಧಶ್ರದ್ಧೆ ಹಾವಳಿಯನ್ನು ನಡೆಸಿದ್ದರೆ ಇಂದು ವಿಚಾರಾಂಧತೆ ಜೀವನವನ್ನು ಬಾಧಿಸುತ್ತಿದೆ. ಕುಶ್ರದ್ಧೆಯಿಂದ ಹಾಳಾಗುವುದೂ ಒಂದೇ, ಕುವಿಚಾರದಾಸ್ಯದಿಂದ ಹಾಳಾಗುವುದೂ ಒಂದೇ. ಅಹಂಕಾರಿಗಳಿರುವಲ್ಲಿ ಯಾವುದೂ ಸ್ವಸ್ವರೂಪದಲ್ಲಿ ಶುದ್ಧವಾಗಿ ಉಳಿಯದು, ಅದರ ಬಣ್ಣ ಎಲ್ಲ ತತ್ತ್ವಕ್ಕೂ ಅಂಟಿ ಅದನ್ನು ಮನುಷ್ಯರ ಆಚಾರದಲ್ಲಿ ಕಲುಷಿತಗೊಳಿಸದಿರದು. ಶ್ರೀರಮಣರ ಪ್ರಕಾರ ಈ ಅಹಂಕಾರವೇ ಮಾಯೆ, ಮನ. ಇದೇ ಎಲ್ಲ ಹಾನಿಗೂ ಹೇತು. ಆದುದರಿಂದ ಮನದಿಂದ ಎಲ್ಲ ವಿಚಾರಗಳನ್ನೂ ಹೊರಹಾಕಬೇಕಾಯಿತು. ಹಾಗಲ್ಲದೆ ಅದು ಹಲ್ಲು ಮುರಿದ ಹಾವಾಗದು. ಆ ಹಲ್ಲು ಮುರಿಯುವ ಕಾರ್ಯವಾದರೋ –

"ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್‌ದೃಢಂ<br>
ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಂ"

ಎಂದು ಅರ್ಜುನ ಹೇಳಿದಂತೆ ಅತ್ಯಂತ ಕಠಿಣ. ಆದರೆ ವಿಚಾರದ ವಿಕಟ ಫಲಗಳಿಂದ ಬೇಸತ್ತ ಜೀವಕ್ಕದು ಕಠಿಣವಾಗದು. ಅಭ್ಯಾಸದಿಂದಲೂ ವೈರಾಗ್ಯದಿಂದಲೂ ವಿಚಾರ ಬಹಿಷ್ಕಾರ ಸಾಧ್ಯವಾದೀತು. ಸುಖದ ಅನಂತರ ದುಃಖ ಬರುವಂತೆ ಸುವಿಚಾರದ ಅನಂತರ ದುರ್ವಿಚಾರ ಬರುವ ಅವಕಾಶ ಪ್ರಾಪಂಚಿಕರಿಗೆ ತಪ್ಪಿದ್ದಲ್ಲ. ಕೆಲವೊಮ್ಮೆ ವಿಚಾರದ ಸುಷ್ಠುತ್ವ – ದುಷ್ಟತ್ವಗಳು ಅನಿರ್ಣೇಯಗಳಾಗಿಬಿಡುತ್ತವೆ. ಏಕೆಂದರೆ ವಿಚಾರಕ್ಕೆ ವ್ಯಕ್ತಿಹಿತ, ಸಮಾಜಹಿತ, ರಾಷ್ಟ್ರಹಿತ, ವರ್ಗಹಿತ, ಕುಟುಂಬಹಿತ, ಜಾತಿಹಿತ ಮುಂತಾದ ಅನೇಕ ಸರ್ಪಗಳು ಪರಿಬಂಧಗಳಾಗುತ್ತವೆ. ವ್ಯಕ್ತಿಯಲ್ಲೇ ಪ್ರಿಯ ಮತ್ತು ಹಿತಗಳಲ್ಲಿ ವಿರೋಧವುಂಟಾಗುವುದುಂಟು. ಈ ಹಿತಪ್ರಿಯಗಳ ವೈಯಕ್ತಿಕ, ಸಾಮೂಹಿಕ, ಐಹಿಕ, ಆಮುಷ್ಮಿಕ ವಿರೋಧಗಳ ತಾಂಡವದಿಂದ ಭ್ರಾಂತಿಯೆದ್ದಿರುವುದನ್ನೆ ಮಾನವೇತಿಹಾಸ ತೋರಿಸುತ್ತದೆ. ಇತಿಹಾಸ, ಪುರಾಣ, ಕಾವ್ಯ, ಶಾಸನಗಳ ಸತ್ಯಗಳೂ ವಿಜ್ಞಾನ ಸಂಶೋಧಗಳೂ ನಿರ್ವಿಕಾರ, ನಿರ್ಲಿಪ್ತ, ವಸ್ತುನಿಷ್ಠ ಎನಿಸುವುದು ದುರ್ಲಭ; ಏಕೆಂದರವೆಲ್ಲಾ ಅರ್ಥಕಾಮಾಸಕ್ತ ಮನಸ್ಸಿನ ಕಾರ್ಯಗಳು. ವೇದವಾದಿಗಳಿಂದ ಹಿಡಿದು ವ್ಯಾಪಾರಿಗಳವರೆಗೆ ತಮ್ಮ ತಮ್ಮ ಹಿತಸಂರಕ್ಷಕ ತತ್ತ್ವ. ಧ್ಯೇಯ ಆದರ್ಶಗಳ ಆರಾಧನೆ ಅಂತಃಸತ್ಯವಾಗಿದೆ, ಬಹಿಃಸತ್ಯವಾಗಿಯೂ ಪ್ರಕಟವಾಗಿದೆ. ಆಚಾರ, ವಿಚಾರ, ಉಚ್ಚಾರ, ಪ್ರಚಾರ, ಅಪಚಾರ, ಉಪಚಾರಗಳೆಲ್ಲವೂ ಒಂದಲ್ಲ ಒಂದು ಸ್ವಪ್ರಿಯ ವಿಚಾರದಿಂದ ಸಮರ್ಥಿಸಲ್ಪಡುವುದು, ಪ್ರತಿಯೊಂದು ವ್ಯಕ್ತಿ ಹಾಗೂ ಗುಂಪಿಗೆ ರೂಢಿಯಾಗಿದೆ. ಅದದರ ನ್ಯಾಯ ಅದದಕ್ಕೇ ಸರಿ. ವಿಚಾರವೊಂದರ ವಿಶ್ವವ್ಯಾಪಕತೆಯೊಮ್ಮೆ ನಿರಪವಾದವಾದರೂ ಆಚಾರದಲ್ಲಿ ಸದಾ ಅಪಚಾರ ಹೊಂದುವುದು ಬಹುಸಂಖ್ಯ ಅನುಭವಗಳಲ್ಲಿ ಕಾಣಬಂದಿದೆ. ಈ ದುರ್ವಿಪಾಕವನ್ನು ಕಂಡೇ "Thought is slave of life – ವಿಚಾರ ಅಥವಾ ಆಲೋಚನೆ ಎಂಬುದು ಜೀವಿತದ ದಾಸ" ಎಂದು ಹೇಳಲಾಗಿದೆ. ಇದು ಒಂದು ದೃಷ್ಟಿಯಿಂದ ವರ್ಣಹೀನವಾದ ಯಾವುದಾದರೊಂದು ಸತ್ತ ಭಾವನೆ; ನಮ್ಮ ಬೇಕು–ಬೇಡಗಳನ್ನುಸಿರುವ ಬಾಯಿ. ಕಾಮ ಅಥವಾ ಇಚ್ಛೆ ಇಲ್ಲವೆ ರಾಗ ಎಂಬುದು ಮನೋಜಾತ, ಅಂಗಜ; ಎಲ್ಲ ವಿಚಾರವೂ ಆ ಅಂಗಜನಿಂದ ನಿಯಂತ್ರಿತ – ಜಾಗೃತ ಚೈತನ್ಯದಿಂದಲೋ ಸುಪ್ತ ಅಥವಾ ಗುಪ್ತ ಚೈತನ್ಯದಿಂದಲೋ ಅಥವಾ ಪಾತಾಳ ಇಲ್ಲವೆ ಅಚೈತನ್ಯದಿಂದಲೋ, ಯಾವುದಾದರೊಂದರಿಂದ – ಪ್ರತ್ಯಕ್ಷವಾಗಿ ಅಲ್ಲವಾದರೆ ಅಪ್ರತ್ಯಕ್ಷವಾಗಿ – ನೇರವಾಗಿ ಅಲ್ಲವಾದರೆ ವಕ್ರವಾಗಿ! ಆದುದರಿಂದ ಸರ್ವರೂ ಸರ್ವದೇಶ ಕಾಲ ಸಂದರ್ಭಗಳಲ್ಲೂ ಆಚರಣೀಯವೆಂಬಂಥ ಒಂದೇ ಒಂದು ಪರಿಶುದ್ಧವಿಚಾರವೂ ಆತ್ಮಸಾಕ್ಷಿಯಾಗಿ ಸಿಕ್ಕದು. ಪ್ರಪಂಚ ಪ್ರಜ್ಞೆಯುಳ್ಳ ಮನದ ವಿಚಾರ ವ್ಯಂಜಿಸುವ ಸತ್ಯ ಸರ್ವಥಾ ನ್ಯೂನ, ಅವ್ಯಾಪಕ, ಅಸಾರ್ವತ್ರಿಕ ಎಂದು ತಿಳಿದ ಮನ "ನಧರ್ಮೋನ ಚಾರ್ಥೋ ನ ಕಾಮೋ ನ ಮೋಕ್ಷಃ ಚಿದಾನಂದ ರೂಪಃ ಶಿವೋsಹಂ ಶಿವೋsಹಂ" ಎಂಬ (chiceless) ಅವಧೂತ ಸ್ಥಿತಿಯನ್ನಲ್ಲದೆ ಮತ್ತೇನನ್ನು ಹಿಡಿದೀತು?

ವಿಚಾರದ ವ್ಯಭಿಚಾರ ಅನಾಚಾರವಾಗಿ ರೂಪುಗೊಳ್ಳುತ್ತಿರುವುದನ್ನು ಕಂಡೇ ಯುಗಸಹಜವಾದ ವಾಣಿಯಿಂದ ಜೆ.ಕೆ. ಅವರು ವಿಚಾರವನ್ನು ಮನದಿಂದ ಉನ್ಮೂಲನಗೊಳಿಸಲು ಉಪದೇಶಿಸಿದ್ದಾರೆ : "collective thinking may produce individual action but it will be in a field of conditional thought and therefore there is no freedom - ಸಾಮೂಹಿಕ ವಿಚಾರ ವೈಯಕ್ತಿಕ ಆಚಾರಕ್ಕೆ ಕಾರಣವಾದೀತು; ಆದರೆ ಅದು ಸೋಪಾಧಿಕ ವಿಚಾರಕ್ಷೇತ್ರದಲ್ಲಿ ಆದ್ದರಿಂದ ಅಲ್ಲಿ ಬಿಡುಗಡೆ ಇಲ್ಲ" ಎಂದೂ ಜಾಗೃತ ಅಥವಾ ಸುಪ್ತ ಯಾವ ಅವಸ್ಥೆಯದೇ ಆಗಲಿ – ಎಲ್ಲ ವಿಚಾರವೂ ಸಾಮೂಹಿಕ ಎಂದೂ ಅವರ ಪ್ರತಿಪಾದನೆ. "There is no thought which is independent, because thought is the outcome of a conditional mind, thought is the symbol of the reaction to memory – ಸ್ವತಂತ್ರವಾದ ವಿಚಾರ ಎಂಬುದೊಂದೂ ಇಲ್ಲ; ಏಕೆಂದರೆ ವಿಚಾರವೆಂಬುದು ಉಪಾಧಿಬದ್ಧ ಮನದ ಮಗು, ಸ್ಮೃತಿಗೆ ನಮ್ಮಲ್ಲುಂಟಾಗುವ ಪ್ರತಿ ಕ್ರಿಯೆಯ ಸಂಕೇತ!" ಜಾತಿಸಂಕರಕ್ಕಿಂತ ವಿಚಾರಸಂಕರ ಈ ಯುಗದಲ್ಲಿ, ವ್ಯಾಹತಿಯ ಅಂಶ ಕಂಸನಂತೆ ಉಕ್ಕುತ್ತಿರುವ ಈ ಅವಧಿಯಲ್ಲಿ ವಿಚಾರ ಮಾಡುವುದೇ ಪ್ರಮಾದವೆಂದು ವಿಶ್ವವ್ಯಾಪಕ ಚೈತನ್ಯಕ್ಕೆನಿಸಿದರೆ, ಖಂಡಿತ ತಪ್ಪಾಗಲಾರದಲ್ಲವೆ?



['ಜಯಂತಿ' – ಸಂಪುಟ ೧೮, ಪುಟ ೧೭೬]

# ೩೪. ಶ್ರೀ ಅರವಿಂದರ 'ಸಾವಿತ್ರಿ'ಯ ಹಿನ್ನೆಲೆ

'ಸಾವಿತ್ರಿ' ಎಂದರೆ ಬೆಳಕಿನೊಂದು ಕಿರಣ, ಸವಿತೃದೇವತಾ ವಿಷಯಕವಾದ ಒಂದು ಸುಪ್ರಸಿದ್ಧ ಋಗ್ವೇದಸೂಕ್ತ, ಗಾಯತ್ರಿ, ಉಪನಯನ ವ್ರತ, ಬ್ರಹ್ಮಪತ್ನಿ, ಪಾರ್ವತಿ, ಕಶ್ಯಪಪತ್ನಿ, ತಂದೆಗೆ ವಿಶೇಷಣವಾಗಿರುವ ಸೂರ್ಯಸುತೆ ಅಥವಾ ಸಾಲ್ವದೇಶದ ದೊರೆಯಾದ ಸತ್ಯವಂತನ ಹೆಂಡತಿ. ಅನುಪನೀತನಾದ ದ್ವಿಜವರ್ಣೀಯನು ಸಾವಿತ್ರೀಪತಿತ ಅಥವಾ ಸಾವಿತ್ರೀ ಪರಿಭ್ರಷ್ಟ. ಜ್ಯೇಷ್ಠಮಾಸದ ಶುಕ್ಲಪಕ್ಷದಲ್ಲಿ ಕೊನೆಯ ಮೂರು ದಿನ ವಿಧವಾತ್ವ ಬಾರದಿರಲೆಂದು ಆರ್ಯ ಸ್ತ್ರೀಯರು ಆಚರಿಸುವ ಉಪವಾಸ ವ್ರತದ ಹೆಸರು ಸಾವಿತ್ರೀ ವ್ರತ. ಸಾವಿತ್ರಿಯ ಸತೀತ್ವವು ಸರ್ವಪೂಜ್ಯ. ಅವಳ ಪಾತ್ರಿವ್ರತ್ಯದ ಮೃತ್ಯುಂಜಯ ಶಕ್ತಿಯು ಪುರಾಣ ಪ್ರಸಿದ್ಧ!

'ಸವಿತೃ' ಜನಕ, ಸೂರ್ಯ, ಶಿವ ಅಥವಾ ಇಂದ್ರ. ಅವನು ಮಾಡುವುದು ಸವನ, ಸೋಮರಸ ಹಿಂಡುವುದು, ಯಜ್ಞಮಾಡುವುದು, ಅಗ್ನಿಗಾಹುತಿ ಹಾಕುವುದು ಅಥವಾ ಮಕ್ಕಳನ್ನು ಪಡೆದು ಸಾಕುವುದು, ಸೋಮವು ಅಮೃತ, ರಾಧಸ್ ಅಥವಾ ಸಚ್ಚಿದಾನಂದ. ಸವಿತಾರನ ಧರ್ಮವು ಸಾವಿತ್ರಿ ಅಥವಾ ಅಮೃತಿಯ ಅರ್ಪಣ– ಆನಂದಮಯಕೋಶದ ಪ್ರಸನ್ನತೆಯನ್ನು ಆತ್ಮವು ಬ್ರಹ್ಮನಿಗೆ ಅರ್ಪಿಸುವುದು. ಸಾವಿತ್ರಿಯು ಅಂಥ ಬ್ರಹ್ಮಯಜ್ಞದ ಸಂಕೇತ, ಬ್ರಹ್ಮಕರ್ಮದ ಪ್ರತೀಕ.

ಶ್ರೀ ಅರವಿಂದರ ಪ್ರಕಾರ ಆದಿಕವಿ ವಾಲ್ಮೀಕಿ ರಚಿಸಿದ ರಾಮಾಯಣವು ಜಗತ್ತಿನಲ್ಲಿ ಅತ್ಯಂತ ಶ್ರೇಷ್ಠವಾದ ಬ್ರಹ್ಮಕಾವ್ಯ. ಅದರಲ್ಲಿ ಇರುವುದು ರಾಮನ ಅಯನ ಅಥವಾ ಧರ್ಮ. ಅಂಥ ಧರ್ಮದ ಸ್ವರೂಪವು ಜಗದ್ಧಿತ, ಸರ್ವೋದಯ, ಲೋಕಸಂಗ್ರಹ, ಪರಹಿತದ ಸಾಧನೆಯಲ್ಲಿ ಆತ್ಮತೃಪ್ತಿಯನ್ನು ಕಾಣುವುದು, ಮಮಕಾರಸಹಿತವಾದ ಅಹಂಕಾರವನ್ನು ಯಜ್ಞೇಶ್ವರನಿಗರ್ಪಿಸಿ ಸ್ವಾರ್ಥ ತ್ಯಾಗ ಮಾಡುವುದು. ಈ ಪರಮ ಪ್ರೇಮ ಧರ್ಮದ ಇನ್ನೊಂದು ಹೆಸರು ಸಾವಿತ್ರಿ. ಸಾವಿತ್ರಿಯ ಪ್ರೇಮವೊಂದೇ ದಿವ್ಯ ಪ್ರೇಮ! ಅವಳ ಪತಿಪಾರಮಾತ್ಮ್ಯಕ್ಕೆ ಮೃತ್ಯು ಮಣಿದ!

ಸಾವಿತ್ರಿಯ ತಂದೆ ಅಶ್ವಪತಿ. ಅಶ್ವವೆಂದರೆ ಏಳೆಂಬ ಸಂಖ್ಯೆ. ಸಪ್ತಾರ್ಚಿಸ್ಸೆಂದರೆ ಅಗ್ನಿ ಅಥವಾ ತೇಜಸ್ಸು. ಆತ್ಮವು ಬ್ರಹ್ಮದಲ್ಲಿ ಲೀನವಾಗುವ ನಿದಿಧ್ಯಾಸವೇ ಸಾವಿತ್ರಿ. ದ್ಯುಮತ್ಸೇನನು ಸಾವಿತ್ರಿಯ ಮಾವ. ದ್ಯುಮತ್ಸೇನನೆಂದರೆ ಪ್ರಕಾಶಮಾನವಾದ ಸೇನೆಯನ್ನುಳ್ಳವನು. ಅವನದು ಬೆಳಕಿನ(ಪರಮಾರ್ಥ ಜ್ಞಾನದ) ಸೈನ್ಯ. ಅವನ ಮಗ ಸತ್ಯವಂತನು ಪರಮಾರ್ಥ ಅಥವಾ ನಿತ್ಯಸತ್ಯದ ಸಂಕೇತ. ನಿತ್ಯಸತ್ಯವು ಸತ್ಯ, ಜ್ಞಾನ, ಅನಂತ. ಸತ್ ಎಂದರೆ ಸೂಕ್ಷ್ಮ ಚೈತನ್ಯ, ತ್ಯತ್ ಎಂದರೆ ಸ್ಥೂಲಚೈತನ್ಯ. ಚೈತನ್ಯವು

ಜ್ಞಾನಶಕ್ತಿ–ಜೀವಶಕ್ತಿಗಳ ಆಕರ. ಜ್ಞಾನವು ಬುದ್ಧ್ಯತೀತವಾದ ಬ್ರಹ್ಮಜ್ಞಾನ. ಅಥವಾ ಶುದ್ಧ ಚಿತ್. ಚಿನ್ಮಯನು ಜೀವನ್ಮುಕ್ತ. ತ್ಯತ್ತು ಅಥವಾ ಅಶುದ್ಧ ಚೈತನ್ಯವು ತುಚ್ಛ, ಆರ್ತ, ಬ್ರಹ್ಮವಿವರ್ತ ಅಥವಾ ಛಾಯಾಸತ್ಯ.

ಸಾವಿತ್ರಿಯು ಚತುರ್ದಶ ಲೋಕವೆಂಬ ಪ್ರಜ್ಞಾಸ್ತರ ಮಂಡಲದಲ್ಲಿ ಬ್ರಹ್ಮನಿಗೆ ಮಾತ್ರ ಕೆಳಗಿನವಳು. 'ಓಂಕಾರದ ಶಂಖನಾದಕ್ಕಿಂತ ಕಿಂಚಿದೂನ'. ಅವಳ ಗಂಡನಾದ ಸತ್ಯವಂತನು ಬ್ರಹ್ಮ. ಅವನಲ್ಲಿ ಅವಳಿಗಿರುವುದು ಆತ್ಮನಿವೇದನೆಯ ಮಧುರ ಭಕ್ತಿ, ಇದು ಏಕತ್ವವಲ್ಲ, ವಿಶಿಷ್ಟೈಕತ್ವವಲ್ಲ, ಶೂನ್ಯೀಕರಣವಲ್ಲ. ದ್ವೈತವಲ್ಲ–ಕೇವಲಾದ್ವೈತ. ಈ ಸಮುದ್ರ–ಸಾಮುದ್ರಿಕ ನ್ಯಾಯಸೂಚ್ಯವಾದ(ವಾಚ್ಯವಾದ ಅಲ್ಲ) ಸ್ನೇಹವೇ ಮಹಾಧರ್ಮ; ಸಂದರ್ಭ ಭೇದದಿಂದ ಅದರ ಸ್ಥಾಯಿಸ್ವರೂಪ ಬದಲಾಗದು; ಅಸ್ಥಾಯಿಸ್ವರೂಪ ಬದಲಾಗುತ್ತದೆ. ಅಸ್ಥಾಯಿತ್ವದ ಅನೈಕಾಂತಿಕತೆ ಸಾವಿತ್ರಿಯ ಅಪರಮುಖವಾದ 'ಶಾವಿತ್ರಿ'– ಶಾಂತಿಯ ಮಲತಂಗಿಯಾದ 'ಸಾಂತಿ'ಯಂತೆ, ಜ್ಞಾನದ ಮಲತಮ್ಮನಾದ 'ಗ್ನಾನ'ದಂತೆ ಸರಸ್ವತಿಯ ಸವತಿಯಾದ ಅನೃತವತಿಯಂತೆ!

ಜ್ಞಾನ(Awareness) ಗಮ್ಯವಾಗದ ಯಾವುದರ ಇರವೂ ಸಾರ್ಥಕವಾಗದು. ಆತ್ಮಜ್ಞಾನವು Intuitive Awareness ಪ್ರಾತಿಭ ಪ್ರತ್ಯಕ್ಷ. ನಚಿಕೇತನು ಯಮ(ಮೃತ್ಯು) ದೇವತೆಯಿಂದ ಆತ್ಮಜ್ಞಾನ(ಬ್ರಹ್ಮಜ್ಞಾನ)ಪಡೆದಂತೆ, ಮಾರ್ಕಂಡೇಯನು ಹರಪ್ರಸಾದದಿಂದ ಮೃತ್ಯು(ಮರಣ)ವನ್ನು ಗೆದ್ದಂತೆ, ಸಾವಿತ್ರಿಯೂ ಮೃತ್ಯುವಿನಿಂದಲೇ ಪತಿಯನ್ನು ಬಿಡಿಸಿಕೊಂಡು ಬರುತ್ತಾಳೆ ಎಂಬುದು ಪೌರಾಣಿಕ ಅರ್ಥವಾದ. ಪ್ರಕೃತಿ–ಪುರುಷರ ಆತ್ಮೈಕವನ್ನು ಮೃತ್ಯುವಿಗೆ ತೋರಿಸಿಕೊಟ್ಟ ಎದೆಗಾರಿಕೆ ಸಾವಿತ್ರಿಯದು.

ನವರಸಗಳಲ್ಲಿ ಶಾಂತವು ಸರ್ವಗ್ರಾಸಿ. ಶಾಂತಿ, ದಾಂತಿ, ಉಪರತಿ, ತಿತಿಕ್ಷೆಗಳನ್ನು ಅಳವಡಿಸಿಕೊಂಡವರು ಶಾಂತರಸ ಪ್ರಧಾನವಾದ ಮಹಾಕಾವ್ಯದ ನಾಯಕ–ನಾಯಿಕೆಯರಾಗಿರುತ್ತಾರೆ. ಶಮವು Restraint of passions–ಭಾವೋದ್ರೇಕಗಳ ನಿಯಂತ್ರಣ, ಭಾವನಾಕ್ಷೋಭೆಯಿಂದ ಮುಕ್ತಿ. ಶಮಪ್ರಧಾನರಿಗಿದು ಗುರಿ. ಪ್ರಾಪಂಚಿಕ ಪದಾರ್ಥಗಳ ಪ್ರೇರಣೆಗಳಿಂದ ಅವಿಚಲಿತರಾಗುವುದನ್ನು ಅವರು ಅಭ್ಯಸಿಸುತ್ತಿರುವ ಸಾಧಕರು; ಅವುಗಳಿಗವರ ದೇಹಾತ್ಮಭಾವದ ಅನುಕ್ರಿಯೆ–ಪ್ರತಿಕ್ರಿಯೆಗಳು ಮಂದ. ಕೇವಲ ದೇಹ–ದೇಹಗಳ ಪರಸ್ಪರ ಪ್ರೀತಿ ಅಥವಾ ದ್ವೇಷ ಅವರಿಗೆ ರುಚಿಸದು. ಹಾಗೇ ಮನ–ಮನಗಳ ಬುದ್ಧಿ–ಬುದ್ಧಿಗಳ ಸಾಮರಸ್ಯ–ವೈರಸ್ಯಗಳೂ ಅವರಿಗೆ ಗೌಣ. ಅವುಗಳ ಪ್ರವೃತ್ತಿ–ನಿವೃತ್ತಿಗಳೆಲ್ಲವೂ ಆತ್ಮಪ್ರೀತಿಗಧೀನ. 'ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ' ಎಂಬುದರಲ್ಲಿರುವ 'ಆತ್ಮ' ಆಧ್ಯಾತ್ಮಿಕ, ವಿಚಾರೋತ್ತರ, ಪ್ರಾತಿಭ, ಅತೀಂದ್ರಿಯ, ಅತಿಮಾನಸ. ಯಾವ ಪರಮಾದರ್ಶ ಅಥವಾ ಚರಮಮೌಲ್ಯವೂ ಬುದ್ಧಿಜನ್ಯವಲ್ಲ; ಪುರುಷಾರ್ಥಗಳು ಪರಮಾರ್ಥ ದಶೆಯಲ್ಲಿ ಅತಾರ್ಕಿಕವಾದ ಸ್ವಯಂಭುಗಳು(Self born). ಕಲೆಗಾಗಿ ಕಲೆ ಎಂಬುದನ್ನು ಸರ್ವತ್ರ ಸಮರ್ಥಿಸಲಾಗದೆ ಹೋದರೂ ಆತ್ಮಕ್ಕಾಗಿ ಆತ್ಮ ಎಂಬುದು ಆತ್ಮಸ್ವಭಾವದ ಪ್ರಕಾರ ಸ್ವಯಂ ಸಮರ್ಥಿತ.

ಮನುಷ್ಯಬುದ್ಧಿಗೆ ಗೊತ್ತಾದ ಎಲ್ಲ ಶಕ್ತಿಗಳ ಮೂಲ ಇರುವುದು ಆತ್ಮದಲ್ಲಿ. ಆತ್ಮಜ್ಞಾನವು ಮೂಲಜ್ಞಾನ, ಪ್ರಪಂಚಜ್ಞಾನವು ಶಾಖಾಜ್ಞಾನ. 'ಪಶ್ಯತ್ಯಾತ್ಮಾನಮಾತ್ಮನಿ' ಎಂಬಂತೆ ಆತ್ಮವು ಆತ್ಮಪ್ರಿಯ, ಪರಪ್ರಿಯವಲ್ಲ. ಸ್ವ–ಪರಭೇದಗಳು ಬೌದ್ಧಿಕವಲ್ಲದೆ ಆಧ್ಯಾತ್ಮಿಕವಲ್ಲ. ಆಧ್ಯಾತ್ಮಿಕವಲ್ಲದುದೆಲ್ಲವೂ ನಶ್ವರ, ಅನವಲಂಬನೀಯ. ಶಮಪ್ರಧಾನರ ಆಲೋಚನೆ ಈ ಬಗೆಯದು. ಪತಿಯನ್ನು ಆತ್ಮೀಕರಿಸಿಕೊಂಡ ಸಾವಿತ್ರಿ ಪತೀತರೆಯಲ್ಲ. ಅವಳ ಪ್ರಜ್ಞೆ ಸತ್ಯವಂತನಲ್ಲಿ ಸ್ಥಿತ. ಅದನ್ನು ಮೃತ್ಯು ಕದಲಿಸಲಾರದಾಯ್ತು!

ಪ್ರಪಂಚವಲ್ಲದುದು ವಿವಿಧವಲ್ಲ, ವಿವಿಧವಲ್ಲದುದು ಪ್ರಪಂಚವಲ್ಲ. ಆದುದರಿಂದ ಸತ್ಯವಂತ ಸಾವಿತ್ರಿಯರು ನಾಮತಃ, ರೂಪತಃ ಭಿನ್ನ. ಮೃತ್ಯುವೂ ಹಾಗೇ. ಭಾವನೆಗಳು ನಾಮರೂಪಾವಲಂಬಿಗಳು. ಪಾತಿವ್ರತ್ಯವು Emotional Sablimation ಭಾವನೆಗಳ ಉದಾತ್ತೀಕರಣ; ಆತ್ಮಸಮುದ್ರದಲ್ಲಿ ಅವುಗಳ ಲೀನೀಕರಣವಾದರೆ ಸ್ಥಿರಶಾಂತಿ. ತೃಪ್ತಿಯು ತಾತ್ಕಾಲಿಕ ಶಾಂತಿ ಅಥವಾ ಪ್ರೇಯಸ್ಸು; ಸ್ಥಿರಶಾಂತಿಯು ಶ್ರೇಯಸ್ಸು, ನಿಶ್ರೇಯಸ, ನಿತ್ಯಾವಿನಾಶಿ. Eternal awareness of the self–ಪ್ರತ್ಯಗಾತ್ಮದ ಅಕ್ಷರಪ್ರಜ್ಞೆಯೇ ಪತಿ. ಅದಕ್ಕೆ ಮೃತ್ಯುವಿನೊಡನೆ(ವಿನಾಶಿಕೆಯೊಡನೆ) ಹೋರಾಡಿ ಗೆಲ್ಲಬೇಕು; ಇಲ್ಲವಾದರದು ಲಭಿಸದು. ಮೃತ್ಯುವು ಪ್ರಪಂಚದ ಅನವಲಂಬನೀಯತೆಯ ಅತಿ ದೊಡ್ಡ ಚಿಹ್ನ. ಅದು ಲೋಕಕ್ಷಯಕಾರಕ. ಆ ಕ್ಷಯ ಭಯವೇ ಬಂಧ. ಅಭಯಕ್ಕೆ ಪೂರ್ಣತೆ ಜಗತ್ತಿನಲ್ಲಿಲ್ಲ. ಹಿನ್ನಡೆ–ಮುನ್ನಡೆಗಳಿಂದಕೂಡಿದ ಗತಿಶೀಲ ಜಗತ್ತಿನದು. ನಿತ್ಯ ಸತ್ಯವತಿಯಾಗಬಯಸಿದ ಸಾವಿತ್ರಿಗೆ ಗತಿಶೀಲ ಸಹಿಸಲಿಲ್ಲ. ಮೃತ್ಯುವು ಗತಿಶೀಲನಾದುದರಿಂದ ಅವಳು ಅವನನ್ನು ಹಿಂದಕ್ಕಟ್ಟಿದಳು. ಪ್ರಗತಿ–ಅಧೋಗತಿಗಳ ನಡುವೆ ಸಿಕ್ಕಿಕೊಳ್ಳದಿರುವುದೇ ನಿಜವಾದ ಸದ್ಗತಿ; ಅದೇ ಪುರ–ಅದರಲ್ಲಿ ಸ್ಥಿರವಾಗಿರುವವ ಪುರುಷ.

ಜೀವವು ಸತಿ, ಆತ್ಮವು ಪತಿ. ಜೀವಕ್ಕೆ ಅಹಂಕಾರದ ವೃತ್ತವಿದೆ; ಆತ್ಮಕ್ಕಿಲ್ಲ. ಪತಿಪರತೆಯ ಪರಮನಿಷ್ಠೆ ಸಾವಿತ್ರಿಯನ್ನು ಅಹಂಕಾರ ಮುಕ್ತೆಯನ್ನಾಗಿಮಾಡಿತು. ಅಹಂಕಾರವು(ದೇಹಾತ್ಮ ಭಾವ, ಇಂದ್ರಿಯಾತ್ಮಭಾವ ಅಥವಾ ಮಾನಸಾತ್ಮಭಾವ) ಮೂಲ ಪಾಪ. ಅದರ ಆದಿಯು ಸರ್ವಾಜ್ಞಾತ; ಅದರ ಅಂತ್ಯವು ಜೀವನ್ಮುಕ್ತ ಜ್ಞಾತ. ಮಾತಾಪಿತೃ ಸೇವಾಸಕ್ತನಾಗಿದ್ದ ಸತ್ಯವಂತನು ಬ್ರಹ್ಮೋಪಾಸಕ. 'ಜನ್ಮಾದ್ಯಸ್ಯಯತಃ' ಎಂದು ಬಾದರಾಯಣನು ಬ್ರಹ್ಮನಿಗೆ ಸರ್ವಜನಕತ್ವವನ್ನು ಅನ್ವಯಿಸಿದ್ದಾನೆ. ಜನ್ಮಜರಾಮೃತಿಗಳೆಂಬ ವಿಕಾರಗಳೆಲ್ಲವೂ ಬ್ರಹ್ಮಜ. ಮಾತಾಪಿತೃಗಳು ಬ್ರಹ್ಮಪ್ರತೀಕರು. ಅವರ ಉಪಾಸನೆಯಿಂದ ಸತ್ಯವಂತನು ಸಿದ್ಧಜೀವಿಯಾಗಿದ್ದನು. ಅವನಿಗೆ ಅವನ ಮೃತ್ಯುವಿನ ಭಯವಿರಲಿಲ್ಲ. ಅವನ ಸಾವಿನಿಂದ ಬ್ರಹ್ಮೋಪಾಸನೆ ವಿಘ್ನಿತವಾಯ್ತೆಂಬುದನ್ನು ಸಾವಿತ್ರಿ ಮೃತ್ಯುವಿಗೆ ತಾನಾಗಿಯೇ ತಿಳಿಯುವಂತೆ ಮಾಡಿದಳು. ಮೃತ್ಯುವಿಗೂ ಬ್ರಹ್ಮವೇ ಆಧಾರ. ಅದರ ಅಸ್ತಿತ್ವವು ಬ್ರಹ್ಮಾಧೀನ. ಆದುದರಿಂದ ಅದು ಬ್ರಹ್ಮೋಪಾಸನೆಗೆ ಭಂಗ ತರಲಾರದು; ಸಾವಿತ್ರಿಯ ಉಪದೇಶದಿಂದ ಆ ಎಚ್ಚರ ಅದಕ್ಕುಂಟಾದ ಕೂಡಲೇ ಅದು ಸತ್ಯವಂತನನ್ನು ಬಿಟ್ಟುಕೊಟ್ಟಿತು! ಸಾವಿತ್ರೀ ಸತ್ಯವಂತರಿಗೆ ತಮ್ಮ ಶತಾಯು ಮುಗಿದ ಮೇಲೆ(ಅಷ್ಟುಹೊತ್ತಿಗೆ

ದ್ಯುಮತ್ಸೇನನೂ ಅವನ ರಾಣಿಯೂ ತೀರಿಹೋಗಿದ್ದುದರಿಂದ) ನಾಮ–ರೂಪ ಭೇದವನ್ನು ಧರಿಸಿ ಪ್ರಪಂಚದಲ್ಲಿ ಉಳಿಯುವ ಅವಶ್ಯಕತೆ ಉಳಿಯಲಿಲ್ಲ. ಆದುದರಿಂದ ಅವರು ಎಂದಾದರೂ ಒಂದು ದಿನ ಮೃತ್ಯುವಶರಾದರಲ್ಲವೇ! ಎಂಬ ಪ್ರಶ್ನೆಗಿಲ್ಲಿ ಸಾಫಲ್ಯವಿಲ್ಲ.

'ಸವಿತೃ'ಎಂದರೆ ಜನಕ, ಸೂರ್ಯ, ಶಿವ, ಇಂದ್ರ. 'ಸವಿತ್ರಿ' ಎಂದರೆ ತಾಯಿ, ಹಸು. 'ಸವ' ಎಂದರೆ ಸೋಮರಸವನ್ನು ಬಳ್ಳಿಯಿಂದ ಹಿಂಡುವುದು, ಯಜ್ಞ ಅಥವಾ ಯಜ್ಞಾಹುತಿ, ಸೂರ್ಯ, ಚಂದ್ರ, ನೀರು, ಜೇನುತುಪ್ಪ. 'ಸವನ'ವೆಂದರೆ 'ಸ್ನಾನ'ವೂ ಆಗುತ್ತದೆ. ಮಕ್ಕಳನ್ನು ಹೆರುವುದೆಂದೂ ಆಗುತ್ತದೆ. 'ಸಾವಿತ್ರ' ಎಂದರೆ ಸೂರ್ಯಜ, ಗಾಯತ್ರೀಸಹಿತ, ಸೂರ್ಯ, ಗರ್ಭ, ಬ್ರಾಹ್ಮಣ, ಶಿವ, ಕರ್ಣ, ಯಜ್ಞೋಪವೀತ ಎಂಬ ಅರ್ಥಗಳಾಗುತ್ತವೆ. ಆದುದರಿಂದ ಸಾವಿತ್ರಿಯು ಸಗುಣಬ್ರಹ್ಮನಾದ ಸೂರ್ಯನ ಜನಕಶಕ್ತಿ(Creative Power) ಅಥವಾ ಮಾತೃಶಕ್ತಿ, ಯೋಗಮಾಯೆ(Supermind ಅತಿಮಾನಸ ಶಕ್ತಿ). ಆದರ್ಶಸತಿಯ ಅಂತಃಸಾರ ಮಾತೃತ್ವ. ಮಾತೃತ್ವವು ಸರ್ವೋದಯ ಪ್ರಣಾಲಿಕೆಯದು. ಅಭ್ಯುದಯವು ಪ್ರಾಪಂಚಿಕ, ನಿಶ್ರೇಯಸವು ಆಧ್ಯಾತ್ಮಿಕ. ಸೋಮವು ಆನಂದ, ಆತ್ಮ, ಸುಕೃತ, ಸ್ವರ್ಗ. ಸತ್ಯವಂತನು ಭರ್ಗ ಅಥವಾ ಸಾವಿತ್ರಿಯಿಂದ ಕೂಡಿದ ಸೂರ್ಯ. ಸಾವಿತ್ರಿಯು ಹಡೆಯುವುದು ಅಥವಾ ಪ್ರೇರಿಸುವುದು ಸೋಮವನ್ನು ಅಥವಾ ಸಚ್ಚಿದಾನಂದವನ್ನು. ಸತ್ಯವಂತನ ಪ್ರಾಣವನ್ನು ಉಳಿಸಿಕೊಳ್ಳುವುದೆಂದರೆ ಸಚ್ಚಿದಾನಂದವನ್ನು ತನ್ನ ಅತ್ತೆ ಮಾವಂದಿರಿಗೂ, ತಂದೆ–ತಾಯ್ಗಳಿಗೂ ತೋರಿಸುವುದು. ಚಂದ್ರನು ಸಚ್ಚಿದಾನಂದದ ಪ್ರತಿಮೆ. ಸಜ್ಜನರಿಗೆ ಸಚ್ಚಿದಾನಂದ ಹೊಳೆಯುವಂತೆ ಮಾಡುವುದು ಸಾವಿತ್ರೀ ಧರ್ಮ. ಸತ್ಯಕ್ಕೆ ಮೃತ್ಯುವಿಲ್ಲ. ಮೃತ್ಯುವಿಗೆ ಸತ್ಯವಿಲ್ಲ. ಮರ್ತ್ಯವು ಅಸತ್ಯ, ಅಲ್ಪಸತ್ಯ. ಸತ್ಯದಲ್ಲಿ ನಿಷ್ಠೆ ದೃಢವಾಗಿಯೂ, ಸತತವಾಗಿಯೂ ಇದ್ದರೆ ಸಾವಿತ್ರೀತ್ವ ಅಥವಾ ಅಮರತ್ವವು ಸಿದ್ಧಿಸುವುದು. ಸತ್ಯಕ್ಕೆ ಸಾವಿಲ್ಲದುದರಿಂದ ತಲ್ಲೀನೆಯಾದ ಸಾವಿತ್ರಿಗೂ ಸಾವಿಲ್ಲ. ಸತ್ಯವು Truth, Reality, Honesty, Truthfulness, Faithfulness, Fulfilment, Realisation, Virtue, Uprightness ಸತ್ಯ, ನಿಜ, ಪ್ರಾಮಾಣಿಕತೆ, ಸತ್ಯವಂತಿಕೆ, ವಿಶ್ವಾಸಾರ್ಹತೆ, ಸಾಫಲ್ಯ, ಆತ್ಮಸಾತ್ಕರಣ, ಧರ್ಮ, ಆರ್ಜವ ಎಂಬ ೯ ಮುಖಗಳನ್ನುಳ್ಳದ್ದು. ನಿತ್ಯತೆ ಅಥವಾ ಸಾತತ್ಯವು ಅದರ ಮೂಲಾಧಾರ. ಸತ್ಯದಲ್ಲಿರುವ 'ಸತ್' ಇರುವಿಕೆ; ಅದರ ಜ್ಞಾನ(ಸರ್ವಾತ್ಮಾನುಭವ) ಆ ಇರವಿನ ಅರಿವು; ಆ ಅರಿವಿನಿಂದುಂಟಾದ ನಿತ್ಯಸುಖವು ಆನಂದ. ಆತ್ಮವು ನಿತ್ಯಸತ್, ಅದರ ಜ್ಞಾನವು ಸತ್‌ಚಿತ್. ಅದರ ಅನುಭವವು ಸಚ್ಚಿದಾನಂದ– Supreme, Pure bliss of eternal Self-Consciousness ಅಥವಾ ಮುಕ್ತಿ. ಜ್ಞಾನಯುಕ್ತವಾದ ಆತ್ಮ(ಪರಮಾತ್ಮ) ಶಕ್ತಿಯನ್ನು (ಉಪಾಸನೆಯನ್ನು, ಧ್ಯಾನತಲ್ಲೀನತೆಯನ್ನು) ಸಾವಿತ್ರಿ ಪ್ರತಿನಿಧಿಸುತ್ತಾಳೆ. ಅದು ಜೀವಾತ್ಮನ ಸಾಧಕತಮ ಸ್ಥಿತಿ. ಪತಿ, ಸತ್ಯ, ಆತ್ಮ, ಪರಮಾತ್ಮ, ನಿತ್ಯಸತ್ಯ, ಸ್ವಸ್ವರೂಪಗಳೆಂದರಿಲ್ಲಿ ಒಂದೇ. ಜೀವಾತ್ಮ– ಪರಮಾತ್ಮರ ಐಕಾತ್ಮ್ಯವನ್ನು ಮೃತ್ಯು(ಯಮ) ಅಲ್ಲಗಳೆಯಲಾರದು. ಮೃತ್ಯುವಿಗೆ

ಸೋಲಾಗುವುದೆಂದರೆ ಅದನ್ನು ಕಃಪದಾರ್ಥವೆಂದು ತಿಳಿಯುವುದು. ಆಗ ಅದರ ಆಗಮನ–ನಿರ್ಗಮನಗಳಿಗೆ ಅರ್ಥ ಉಳಿಯದು. ಅದಕ್ಕೆ ತುತ್ತಾಗುವುದು ಮರ್ತ್ಯಶರೀರ, ಆತ್ಮವಲ್ಲ. ಸತ್ತ ಶರೀರದಲ್ಲಿ ಜೀವವಿಲ್ಲದಿದ್ದರೂ ಆತ್ಮವಿರುತ್ತದೆ–ತನ್ನ ವಿಶ್ವವ್ಯಾಪಿತ್ವದ ದೆಸೆಯಿಂದ. ಜೀವವು ಆತ್ಮವನ್ನು ಆಧರಿಸಿದ ಭೌತಿಕ ಅಹಂಕಾರ, ಮನಃಸಾರ. ಆತ್ಮದ ಆಧಾರ ಎಲ್ಲವುದಕ್ಕೂ ಯಾವಾಗಲೂ ಇದ್ದರೂ ಅದರ ವಿಶೇಷೇಚ್ಛೆಯಿಂದ ಆಯುರ್ವೃದ್ಧಿಯಾದದ್ದು ಮೃತ್ಯು ಒಪ್ಪುವಂತೆ ಆತ್ಮ(ಪರಮಾತ್ಮ) ಅನುಗ್ರಹಿಸಿದ್ದರಿಂದಲೇ.Grace of Godದೈವಕೃಪೆ ಎಂದರಿದು. ಮಹಾಧ್ಯೇಯ ನಿಷ್ಠರಿಗಿದು ಲಭ್ಯ. ಸಜ್ಜನರಾದ ಹಿರಿಯರ ಸೇವೆಯು ಭಾರತದಲ್ಲಿ ಒಂದು ಮಹಾಧ್ಯೇಯ. ಅದನ್ನು ಹೆಚ್ಚುಕಾಲ ಬಯಸುವುದು ಭಾರತೀಯ ಮಾನವಧರ್ಮ. ಆದುದರಿಂದ ಸಾವಿತ್ರಿಗೆ ಮೃತ್ಯುಗತ ಪರಮಾತ್ಮನು ಪತಿಜೀವವನ್ನು ಅನುಗ್ರಹಿಸಿದನೆಂಬುದು ಪವಾಡ. ಮಾನವ ಜೀವನದಲ್ಲಿ ಪವಾಡಗಳ ಇಂಥ ಉದಾಹರಣೆಗಳು ವಿರಳ, ಆದರೆ ಶೂನ್ಯವಲ್ಲ. ಇವುಗಳಿಂದ ಆತ್ಮನಿಷ್ಠೆಯ ದಾರ್ಢ್ಯ ಹೆಚ್ಚುವುದೆಂದು ಭಗವಾನ್ ಸತ್ಯಸಾಯಿಬಾಬಾರ ಅಭಿಪ್ರಾಯ.

Light, love, laughter, lotus, life–ಬೆಳಕು, ಒಲವು, ನಗೆ, ಕಮಲ, ಬಾಳು ಎಂಬ ಐದು ಪಂಚರತ್ನಗಳಿಂದ ಸಮೆದ ಪಾತ್ರ ಸಾವಿತ್ರಿಯದು. ಅಶ್ವಪತಿಯ ತಪಃಕನ್ಯೆಯಾಕೆ. ಅವಳಿಗೆ ಅವಳಪ್ಪನ ರಾಜ್ಯಭಾರವು ಇಂದಿನಂಥ 'ಎಜುಕೇಶನ್' ಅಧಿಕಾರಿಗಳ ಮೂಲಕ ವಿದ್ಯಾಭ್ಯಾಸ ಮಾಡಿಸಿದ್ದಿಲ್ಲ; 'ಮೆಥೆಡ್ ಮಾಸ್ಟರ್ಸ್' ಅಂದು ಆಡಳಿತ ನಡೆಸುತ್ತಿದ್ದಿಲ್ಲ. ನೈತಿಕ ಷಂಡರ ತಂಡ ಅಂದು 'ಜೆಂಟ್ಲಮೆನ್ನ'ರಾಗಿದ್ದಿಲ್ಲ ಎಂಬುದು ಐತಿಹಾಸಿಕ ಸತ್ಯ. ಶಿಕ್ಷಣವಂದು ಪುಸ್ತಕೀಯ ಶುಕಪಾಠ ಹೇಳುವ 'ಹಾಬಿ'ಯಾಗಿದ್ದಿಲ್ಲ. ಲೋಕಕಲ್ಯಾಣೈಕ ದೃಷ್ಟಿಯ ಭಾರತೀಯ ಮಹಾತ್ಮರಾದ ರಿಸಿಮುನಿಗಳು ರಾಜಪುತ್ರ–ರಾಜಪುತ್ರಿಯರಿಗಂದು ಗುರುಗಳಾಗಿರುತ್ತಿದ್ದರು. ಮುಖಮುರಲೀಧರರ ರಾಗಮಾಲಿಕೆಯಂದು ಗುರುಕುಲದಲ್ಲಿ ಕೇಳಿಸುತ್ತಿದ್ದಿಲ್ಲ. ಕೆಬೆರ ನೃತ್ಯಗಳನ್ನು ಕಲೆಯೆಂದು ಅವಳಪ್ಪ ಪ್ರೋತ್ಸಾಹಿಸುತ್ತಿರಲಿಲ್ಲ. ಮದ್ಯವು ಪೆಯವಾಗಿದ್ದಿಲ್ಲ. ಪ್ರೂಢನು ದ್ರೋಣಾಚಾರ್ಯ ಪಟ್ಟದಲ್ಲಿರಲಿಲ್ಲ. ನಾಟಕದ ವೇಷಗಳನ್ನು ಶಿಕ್ಷಕತ್ವದಲ್ಲಿ ಜೀವನದ ಗಂಭೀರ ಭಾವನೆಗಳನ್ನು ಪ್ರೇರಿಸಲು ನಿಯಮಿಸುತ್ತಿದ್ದಿಲ್ಲ. 'There is an evolution of our outward nature, the nature of mental being in the life and body, and there is within it, pressing forward for self-revelation because with the emergence of mind that revelation is becoming possible, a preparation at least, even the beginning of an evolution of our inner being, our occult subliminal and spiritual nature–ನಮ್ಮ ದೇಹ–ಮನಗಳಲ್ಲಿ ನಮ್ಮ ಬಾಹ್ಯಮನದ ಸ್ವಭಾವವು ವಿಕಾಸಗೊಳ್ಳುತ್ತಿರುವಾಗ–ಅದರೊಳಗೆ ನಮ್ಮ ಅಂತಶ್ಚೇತನೆ ಅಥವಾ ಅತೀಂದ್ರಿಯವಾದ ಉದಾತ್ತ ಆಧ್ಯಾತ್ಮಿಕ ಸ್ವಭಾವವು ಮನದ ಅಭಿವ್ಯಕ್ತಿಯ ಜೊತೆ–ಜೊತೆಗೇ–ಅಂಥ ಅಭಿವ್ಯಕ್ತಿಯ ಸಾಧ್ಯತೆ ಅಥವಾ ಅದರ ಸಿದ್ಧತೆ ಸಾಧ್ಯವಾದದ್ದರಿಂದ–ಅದರ ಸಿದ್ದತೆಯಾಗಿಯಾದರೂ

ವಿಕಸಿಸಲಾರಂಭಿಸಿ ಹೊರಬೀಳಲು ಒತ್ತಡ ಉಂಟುಮಾಡುತ್ತದೆ.' (The Divine Life-P.763) ಎಂಬ ನಂಬಿಗೆ ದೃಢವಾಗಿದ್ದ ಮನಃಶಾಸ್ತ್ರವಿಶಾರದರ ಗುರುತ್ವದಲ್ಲಿ ಸಾವಿತ್ರಿ ತರಬೇತ್ಯ ಹೊಂದಿದ್ದಳು. ಜಡೋಪಾಸನೆಯು ಜೀವನಾದರ್ಶವೆಂಬುದು ಅಂದು ವೈಜ್ಞಾನಿಕವಾಗಿ ಅಸಿದ್ಧವಾಗಿತ್ತು. ವಿಜ್ಞಾನಾಭಾಸಗಳ ಕಲ್ಪನಾವಿಲಾಸಿಗಳು ಅಂದು ಅರಮನೆಯ ಆತಿಥ್ಯಕ್ಕೆ ಪಾತ್ರರಾಗಿದ್ದಿಲ್ಲ. ಆದುದರಿಂದ ಸಾವಿತ್ರಿಯ ಸಾಧಕತ್ವವು ಅವಳ ಬ್ರಹ್ಮಚರ್ಯಾಶ್ರಮದಲ್ಲಿ ರೂಢಮೂಲವಾಗಿತ್ತು. ಅದರ ಫಲವಾಗಿಯೇ ವಾನಪ್ರಸ್ಥಾಶ್ರಮದಲ್ಲಿದ್ದ ತನ್ನ ಭಾವಿ ಅತ್ತೆ–ಮಾವಂದಿರ ಸೇವೆ ಮಾಡುತ್ತಿದ್ದ ಮಗನಾದ ಬಡ ಕ್ಷತ್ರಿಯಕುಮಾರನಾದ ಸತ್ಯವಂತನನ್ನು ವರಿಸುವ ಧೈರ್ಯನಿರ್ಧಾರಗಳು ಅವಳಲ್ಲಿ ಹುಟ್ಟಿದವು. ಬೆಳೆಯ ಗುಣ ಮೊಳಕೆಯಲ್ಲೇ ಕಂಡಿತೆಂಬಂತೆ ಅವಳ ಆದರ್ಶವಾದಿತ್ವದ ಕೆಚ್ಚು ವಿವಾಹ ಸಂದರ್ಭದಲ್ಲಿಯೇ ಪ್ರಕಟವಾಗಿ ಹೋಗಿತ್ತು. ಆ ಕೆಚ್ಚಿನ ಸ್ಪಷ್ಟವಾದ ಅಭಿವ್ಯಕ್ತಿಗೆ ಸತ್ಯವಂತನ ಮರಣವು ಅವಕಾಶವನ್ನು ಒದಗಿಸಿಕೊಟ್ಟಿತು; ಮರಣ ಹಿಂಜರಿದು ಅಮರವಾಯ್ತು.

ಸತ್ಯ ಅಥವಾ ಸತ್ ಪದಾರ್ಥದ ಶಕ್ತಿಗಳು ಶ್ರೀ ಅರವಿಂದರ ಪ್ರಕಾರ ಅನಂತ. ಒಂದೊಂದು ಶಕ್ತಿ ಪ್ರದರ್ಶಿಸುವ ದೃಶ್ಯ ಒಂದೊಂದು. ಏಕಕಾಲ, ಏಕ ದೇಶಗಳಲ್ಲದು ವಿರೋಧಾಭಾಸದ ವಿವಿಧ ಮಾದರಿಗಳನ್ನು ಪ್ರದರ್ಶಿಸಬಲ್ಲದು. ಆತ್ಯಂತಿಕ ವಿರೋಧವೆಂಬುದು ಇಲ್ಲವೇ ಇಲ್ಲ. ಆತ್ಯಂತಿಕ ದೌರ್ಜನ್ಯ–ವಿನಾಶಗಳೂ ಅದೇ ಪ್ರಕಾರ ಇರುವವುಗಳಲ್ಲ. ಆತ್ಯಂತಿಕತೆ ಇರುವುದು ಸತ್‌ಪದಾರ್ಥಕ್ಕೆ ಮಾತ್ರ. ಉಳಿದ ಸತ್ಯಗಳ ವಿವಿಧತೆ, ವಿರೋಧ, ಪರಿವರ್ತನ, ವಿಕಾಸ, ವಿನಾಶಗಳು ಕಾಲದೇಶ ಸೀಮಿತ. ಸತ್ತಿನ ಸ್ವರೂಪಾರ್ಥ ಸಚ್ಚಿದಾನಂದ. ಅಸತ್, ಅಚಿತ್, ಅನಾನಂದಗಳು ತಾತ್ಕಾಲಿಕ. ಈ ಸಾಪೇಕ್ಷ ಸ್ಥಿತಿಗಳು ಸಚ್ಚಿದಾನಂದನ ಅಪೇಕ್ಷೆಯನ್ನು ಆಧರಿಸಿವೆ. ಆತನು Existence, Consciousness, Power ಅಸ್ತಿತ್ವ, ಜ್ಞಾನ, ಶಕ್ತಿಗಳಿಂದ ಕೂಡಿದ ಏಕಾತ್ಮಕ ಸಾರಭೂತ ಚೈತನ್ಯ ಕೇಂದ್ರ. ಶರೀರದ ಜೀವನ–ಮರಣಗಳು ಪರಿವರ್ತನಗಳು. ಮನಸ್ಸು ಒಳ–ಹೊರಗಳೆಂಬ ಎರಡು ಮುಖಗಳನ್ನುಳ್ಳದ್ದು. ಅದರ ಒಳಮೊಗದ ವಿಕಾಸವೇ ಆಧ್ಯಾತ್ಮಿಕ ವಿಕಾಸ. ಸಚ್ಚಿದಾನಂದನನ್ನು ಸೇರುವುದು ಅದರ ಕೊನೆಯ ಗುರಿ. ಅವನ ವಿವಿಧ ಶಕ್ತಿಗಳಲ್ಲಿ ಆನಂದದ ಕಲ್ಯಾಣೀಕರಣ ಬಲ ಅಪ್ರತಿಹತ. ಅದನ್ನೊಲಿಸಿಕೊಳ್ಳಲು ಜೀವಾತ್ಮನು ತನ್ನ ಮನದ ಒಳಮೊಗವನ್ನು(ಅಂತರ್‌ಮುಖತೆಯನ್ನು) ಜಾಗ್ರತಗೊಳಿಸಿಕೊಳ್ಳಬೇಕು. ಅಂಥ ಪ್ರಾಮಾಣಿಕ ಪ್ರಯತ್ನವು ಜೀವಾತ್ಮನ ಪಾತ್ರತೆಗೆ ನಿಕಷ. ಜೀವಾತ್ಮನ ಆತ್ಮಮಯತೆ ಮೇಲೇರಿದಂತೆ ಪರಮಾತ್ಮನ(ಸಚ್ಚಿದಾನಂದನ) ಅನುಗ್ರಹವು ಕೆಳಗಿಳಿದು ಬಂದು ಅದನ್ನು ಕೈಹಿಡಿದು ಕರೆದೊಯ್ದು ಗುರಿಯನ್ನು ಮುಟ್ಟಿಸುತ್ತದೆ. ಸಮರ್ಪಣಭಾವವೆಂದು ಸಾಧಕನ ಭಕ್ತಿಯ ಹೆಸರು. ಸಾವಿತ್ರಿಯ ಸಾಧಕತ್ವದ ಸಮರ್ಪಣಭಾವವು ಪತಿನಿಷ್ಠತೆಯಲ್ಲಿ ಪರಿಪೂರ್ಣವಾದುದನ್ನರಿತ ಮೃತ್ಯುದೇವತೆ ಕೊನೆಯಲ್ಲಿ ಅವಾಕ್ಕಾಗಬೇಕಾಯ್ತು. ಪತಿಯಲ್ಲಿ ತನ್ನ ಆತ್ಮನನ್ನು(ಸಚ್ಚಿದಾನಂದನನ್ನು) ಗುರುತಿಸಿ ಆರಾಧಿಸಿದ ಅವಳ ಪಾತಿವ್ರತ್ಯ ಅನುಪಮ.

ಪತಿಯ ಶರೀರ–ಮನ–ಪ್ರಾಣ–ಪಂಚೇಂದ್ರಿಯಗಳನ್ನು ಮೀರಿ ಅವುಗಳಿಗಾಧಾರವಾದ ಆತ್ಮ ಅವಳಿಗೆ ಆರಾಧ್ಯವಾಗಿತ್ತು. ಇದು ಪಾತಿವ್ರತ್ಯದ ಸಾರ. 'ಶರಣ ಸತಿ, ಲಿಂಗ ಪತಿ' ಎಂಬುದು ವೀರಶೈವ ಪರಿಭಾಷೆ.

ಅರವಿಂದರ 'ಸಾವಿತ್ರಿ'ಯ ಹೃದಯಾಂಶಗಳನ್ನು ಪೌರಾಣಿಕ ಹಿನ್ನಲೆಯಲ್ಲಿ ನೋಡಿದರೆ ಮೇಲಿನಂತೆನ್ನಿಸುತ್ತದೆ; ಅದೊಂದು ಮಹಾವಿಚಾರ(Great Idea) ಎಂಬುದು ಬುದ್ಧಿಗತವಾಗುತ್ತದೆ. ಅದನ್ನು ಹೃದ್ಗತ ಮಾಡಿಕೊಡುವ ಶಕ್ತಿ 'ಸಾವಿತ್ರಿ' ಎಂಬ ಅವರ ಮಹಾಕಾವ್ಯಕ್ಕಿದೆ. 'ಸಾವಿತ್ರಿ'ಯನ್ನು ವಿಮರ್ಶಿಸುವವನಿಗೆ ಎಂಟೆದೆ ಬೇಕು. ಆದುದರಿಂದ ಆ ಕೆಲಸವನ್ನು ಮಾಡಲು ಜಗತ್ತಿನಲ್ಲಿ ಸಮರ್ಥರು ಸಿಗುವುದು ದುರ್ಲಭ. ಉಪನಿಷತ್ತುಗಳಿಗೆ ಅರ್ಥಬರೆಯಹೋದವರಲ್ಲಿ ಹೇಗೋ ಹಾಗೇ ಅದರ ಅರ್ಥ ಹೇಳಹೊರಟವರಲ್ಲಿ ಅನೇಕರು ಅಯಶಸ್ವಿಗಳಾಗಿದ್ದಾರೆ. 'ನಾನು ಹೇಳಿದ್ದು ನನ್ನ ಅರ್ಥ; ಅದರ ಅರ್ಥ ಅದಕ್ಕೇ ಗೊತ್ತು' ಎಂಬುದು ಪ್ರತಿಯೊಬ್ಬನ ಲೌಕಿಕನ ಆತ್ಮಸಾಕ್ಷಿಯ ಅಭಿಪ್ರಾಯ. ಶಬ್ದಕಾಠಿನ್ಯ ಕಾಠಿನ್ಯವಲ್ಲವೇ ಅಲ್ಲ ಎಂದು 'ಕಾವ್ಯಸೂತ್ರ' ಹೇಳಿದೆ. ಹಾಗಾದರೆ ಕಾಠಿನ್ಯವಿರುವುದೆಲ್ಲಿ? 'ಗುರೋಸ್ತುಮೌನಂ ವ್ಯಾಖ್ಯಾನಂ' ಎಂಬ ಪ್ರಸಿದ್ಧಿಯಂತೆ 'ಸಾವಿತ್ರಿ'ಯ ವ್ಯಾಖ್ಯಾನದ ಪ್ರಸಿದ್ಧಿ. ಅದು 'ಸೌಂದರ್ಯವೆಂಬುದು ಕಣ್ಣಿನ ತುತ್ತಲ್ಲ, ಕಣ್ಣಿಗೂ ಕಣ್ಣಾಗಿ ಒಳಗಿಹುದು' ಎಂದ ವರಕವಿ ಕೆಲಮಟ್ಟಿಗೆ ಬಲ್ಲ. ಹಾಗೇ ಆತನೆಂದ 'ನಿನನಲ್ಲ ಎಲ್ಲರಗ ಬಂದ, ಒಂದ ನೂರೊಂದ ಅದರ ಸವಿ ಮುಂದ ಕಾಣುವರ ಎಂದೋಂ ಸಚ್ಚಿದಾನಂದ' ಎಂದವ ಅದರ ಸವಿಯನ್ನು ಸವಿಯಬಲ್ಲ. ಮಿಕ್ಕವರಿಗದು ಮಕ್ಕಳ ಪದ.

ಮಕ್ಕಳಂಥ ದೊಡ್ಡವರು ಅರವಿಂದರ 'ಸಾವಿತ್ರಿ'ಯ ಅರ್ಥ ಬರೆಯಿಸಲು ಹೆಣಗಿದ್ದುಂಟು. ಅದೆಲ್ಲ 'ಹರಕೆಯ ದೇವರಿಗೆ ಮರದ ಜಾಗಟೆ'ಯಾಯಿತು. 'ನಾನು ಹೊಡೆದಂತೆ ಮಾಡುತ್ತೇನೆ, ನೀನು ಅತ್ತಂತೆ ಮಾಡು' ಎಂದ ಉಪದೇಶ ಅದಕ್ಕೆ ಸರಿದೊರೆಯಾಯ್ತು. ಏಕೆಂದರೆ, ಅವರಿಗೆ ಅರವಿಂದರೂ ಬರಿಯ ಹೆಸರು, ಸಾವಿತ್ರಿಯೂ ಬರಿಯ ಹೆಸರು, ಬರೆಯುವವರೂ ಬರಿಯ ಹೆಸರುಗಳು, ಅಂಥ ಸಾವಿತ್ರಿಯು ಅದ್ಭುತ ಸಾವಿತ್ರಿ. ಅವಳ ತೇಜಸ್ಸು ಸೂರ್ಯನಷ್ಟು ಪ್ರಖರ. 'ದೇವತೆಗಳೂ, ಸತ್ಪುರುಷರೂ, ದ್ವಿಜರೂ ಸದ್ಭಾವ ತೋರುವುದರಿಂದಲೂ ವಿದ್ವಾಂಸರು ಮಾನದಾನಗಳಿಂದಲೂ ಇತರರು ತಿಂಡಿ–ತೀರ್ಥಗಳಿಂದಲೂ ಸಂತುಷ್ಟರಾಗುತ್ತಾರೆ' ಎಂದ ಸೂಕ್ಷ್ಮದರ್ಶಿಯ ಮಾತಿಲ್ಲಿ ಸ್ಮರಣೀಯ. ವಿಷದಿಂದ ಕೂಡ ಅಮೃತವನ್ನು ತೆಗೆದುಕೊಳ್ಳಬೇಕು; ಚಿಕ್ಕ ಹುಡುಗನಿಂದ ಕೂಡ ವಿವೇಕದ ಮಾತನ್ನು ಸ್ವೀಕರಿಸಬೇಕು; ಶತ್ರುವಿನಿಂದ ಕೂಡ ಒಳ್ಳೆಯ ನಡತೆಯನ್ನು ಕಲಿಯಬೇಕು; ಅಮೇಧ್ಯದಿಂದ ಕೂಡ ಬಂಗಾರವನ್ನು ಎತ್ತಿಕೊಳ್ಳಬೇಕು–ಎಂದದ್ದು ಬುದ್ಧಿವಂತರು. ಈ ಬುದ್ಧಿವಂತಿಕೆ ಅತಿಯಾದವರಿಗೆ ಸಾವಿತ್ರಿಯು ಯಮನನ್ನು ತೋರಿಸಿದ್ದಾಳೆ. ಏಕೆಂದರೆ ಕೆಲ ಯಜಮಾನರು ಇರುಳಲ್ಲಿ ಹೆಂಡಿರ ಅಧೀನರಾಗಿಯೂ, ಹಗಲಲ್ಲಿ ಗುಮಾಸ್ತರ ಅಧೀನರಾಗಿಯೂ

ನಡೆದುಕೊಳ್ಳುತ್ತಾರೆ. ಅವರ ಭ್ರಮೆ ಅವರಿಗೆ ವಿದ್ವತ್ತೆ, ಬುದ್ಧಿವಂತಿಕೆ, ವ್ಯವಹಾರಜ್ಞಾನ. (ಸುಖದ) ಮೋಹವೆಂಬುದು ಎಚ್ಚತ್ತಿರುವವನಲ್ಲಿ ನಿದ್ದೆಯಾಗಿರುತ್ತದೆ; ನೋಡುತ್ತಿರುವವನಲ್ಲಿ ಕುರುಡತನವಾಗಿರುತ್ತದೆ; ಶಾಸ್ತ್ರಜ್ಞನಲ್ಲಿ ಮಂದಮತಿತ್ವವಾಗಿರುತ್ತದೆ ಮತ್ತು ಪ್ರಕಟವಾದ ಅರ್ಥದಲ್ಲಿಯೂ ಅದನ್ನು ತಿಳಿಯಗೊಡದಂತೆ ಮಾಡುವ ಪ್ರತಿಬಂಧಕವಾಗಿರುತ್ತದೆ. ಸಾವಿತ್ರಿಯ ವೀರಸಾಧನೆಯನ್ನು ಅರವಿಂದರಲ್ಲದೆ ಇನ್ನಾರು ಅರಿತಾರು? ಅವರ ಭಾವ ಅರಿತಾನೇ? ನೆಂಟ ಅರಿತಾನೇ?

ಸದ್ಗುರು ಪಾದಕ್ಕೆ ನಮಿಸಿ ಶುಶ್ರೂಷೆ ಮಾಡಿದಾಗ ಮಾತ್ರ ಸಾವಿತ್ರೀ ರಹಸ್ಯವು ತಿಳಿದುಬರುತ್ತದೆ. ಮಿಕ್ಕವುಗಳು ಶಬ್ದವ್ಯಾಖ್ಯೆ. ಸಹಸ್ರಾರ ಚಕ್ರವೆಂಬ ಸೂರ್ಯಮಂಡಲದಲ್ಲಿ ಅರವಿಂದವಾಗಿ ಅರಳುವವಳು ಸಾವಿತ್ರಿ. ಸಾವಿತ್ರಿಯು ಕುಂಡಲಿನಿ, ಯೋಗಮಾಯೆ, Supermind ಸವಿತೃಭರ್ಗ. ಕಾವ್ಯದ ಲಕ್ಷಣಕ್ಕೆ ಲಕ್ಷಣವಾದ ಧ್ವನಿ ಸಾವಿತ್ರಿ. ದೇವತೆಗಳು ಮಹಾಸಮುದ್ರದಲ್ಲಿ ಸಿಕ್ಕಿದ ಬೆಲೆ ಬಾಳುವ ರತ್ನಗಳಿಂದ ತೃಪ್ತರಾಗಲಿಲ್ಲ; ಭಯಂಕರವಾದ ವಿಷದಿಂದ ಅವರು ಹೆದರಲಿಲ್ಲ; ಅಮೃತ ಸಿಗುವವರೆಗೆ ಪ್ರಯತ್ನವನ್ನವರು ನಿಲ್ಲಿಸಲಿಲ್ಲ. ಹೀಗೆ ಧೀರರು ತಮ್ಮ ನಿಶ್ಚಿತವಾದ ಗುರಿಯನ್ನು ಮುಟ್ಟದೆ ನಿಲ್ಲುವುದಿಲ್ಲ. ಸಾವಿತ್ರಿಗಿಂತ ಧೀರರು ಭೂಲೋಕದಲ್ಲಿ ಇಲ್ಲ. ಆದರೆ ಇತರ ಪಾತ್ರಗಳೋ? 'ಮಡಿವಂತನು ಬ್ರಹ್ಮಲೋಕದಲ್ಲಿ ಕೂಡ ಇನ್ನೊಬ್ಬ ತನ್ನನ್ನು ಮುಟ್ಟಿಯಾನೆಂದು ಕಾಯ್ದುಕೊಳ್ಳುತ್ತಾನೆ' ಎಂದಹಾಗೆ ಟೊಳ್ಳುಗಟ್ಟಿಗಳು. ಮಾತಿನಲ್ಲಿ ಪಂಜಾಬಿಗಳೂ, ವ್ರತನಿಯಮಗಳ ಆಚರಣೆಯಲ್ಲಿ ದಕ್ಷಿಣಭಾರತೀಯರೂ, ಅಧಿಕಾರದಲ್ಲಿ ಕಾಶ್ಮೀರಿಗಳೂ, ಎಲ್ಲವುಗಳಲ್ಲೂ ಬಂಗಾಳಿಗಳೂ ಅಂಥ ಪಾತ್ರಗಳೆಂಬುದು ಸುಪ್ರಸಿದ್ಧ. ಶೌರ್ಯ, ವಿದ್ಯಾವತ್ತೆ, ಸೇವೆಗಳೆಂಬ ಮೂರೂ ಶಕ್ತಿಗಳು ಸಾವಿತ್ರಿಯಲ್ಲಿದ್ದವು. ಅವಳ ಗಾಯತ್ರೀರೂಪದ ೨೪ ಅಕ್ಷರಗಳು ೨೪ ಸಾಂಖ್ಯತತ್ವಗಳನ್ನು ಸೂಚಿಸುತ್ತವೆ. ಸತ್ಯವಂತನು ಪುರುಷ, ಅವಳು ಪ್ರಕೃತಿ. 'ಪ್ರಕೃತಿ ಪುರುಷಗೆ ಸೋತು ಪ್ರಾಣಧ್ವಂಜಿಯ ನೂತು ಅನುಭವದ ಸವಿಮಾತು ಆಧಂಗ' ಎಂದುದು ಸಾವಿತ್ರೀ ಸಂದರ್ಭದ ಅರ್ಥ. ಪುರುಷನು ೨೫ನೆಯ ತತ್ವವಾದ ಸಚ್ಚಿದಾನಂದ. ಪ್ರಕೃತಿಗೆ ಅವಳಂತೆಯೇ ಮೂರು ಅಕ್ಷರಗಳ ಸಂಕೇತ. ಸೃಷ್ಟಿ, ಸ್ಥಿತಿ, ಲಯ. ಪುರುಷನ ಮೂರು ಅಕ್ಷರಗಳು ಸತ್, ಚಿತ್, ಆನಂದ. ಅದೊಂದು ತ್ರ್ಯಕ್ಷರ ಸಮಾಮ್ನಾಯ. ಜಗತ್ತಿನಲ್ಲಿ–ನಿದ್ರಿಸುವವರೂ, ನಿರ್ವಿಕಲ್ಪ ಸಮಾಧಿಯಲ್ಲಿರುವವರೂ ಸುಲಭವಾಗಿ ಬ್ರಹ್ಮತ್ವನ್ನು ಪಡೆಯುತ್ತಾರೆ; ಈ ಯೆರಡರ ನಡುವಿನವರು ನರಳುತ್ತಾರೆ– ಯೋಗ ರತೋ ವಾ ಭೋಗರತೋ ವಾ ಸಂಗರತೋ ವಾ ಸಂಗವೀಹೀನಃ! ಯಮಮಯ; ಮಯವು ಮಾಯಾಭಾವ. ನಾಶವು ಮಾಯೆ. ಆದುದರಿಂದ ಸಾವಿತ್ರಿಯು ಸತ್ಯವಂತನಲ್ಲಿ ಮುಕ್ತಿಯನ್ನು ಪಡೆಯಲು ಯೋಚಿಸಿದಳು.

ಯೋಗವನ್ನು ಹಿಡಿದು ತತ್ವವನ್ನು ಸಾಕ್ಷಾತ್ಕರಿಸಿಕೊಂಡವರಿಗೆ ಮರಣಭಯವಿಲ್ಲ; ಸಶಸ್ತ್ರರಿಗೆ ಶತ್ರುಭಯವಿಲ್ಲ; ಸಾವಿತ್ರಿಗೆ ತಲ್ಲಳವಿಲ್ಲ. ಮಾನವನಲ್ಲಿ ಉಂಟಾಗುವ ತಲ್ಲಳಕ್ಕೆ ಸಾವಿತ್ರಿ ಮದ್ದಾದಳು. ಅವಳು ಸೇದೆಯಿಲ್ಲದ ಮಹಾಶಕ್ತಿಯಾದಳು. ಅವಳಿಗಿದ್ದುದು

ಕಿತ್ತಡಿಯ ಗುಂಡಿಗೆ; ಹೃದಯದ ನಿಷ್ಠೆಯೇ ಕಮಂಡಲು ಜಲ. ಸಮರ್ಪಣ ಅದರ ಜಯಲಾಂಛನ, Man's consciousness can be nothing other than a form of Nature's consciousness–ಮಾನವ ಚೇತನೆಯು ಪ್ರಕೃತಿಯ ಚೇತನೆ. ಮಾನವ ಪ್ರಕೃತಿ; ಪ್ರಕೃತಿಯು ಚೇತನೆಯಲ್ಲದಂತೆ ತೋರುತ್ತದೆ–ಪ್ರತ್ಯೇಕೀಕೃತ ದೃಷ್ಟಿಗೆ. ಪ್ರಾಕೃತ ಮಾನವತೆ ಸಂಸ್ಕೃತವಾಗುವುದು ಸಾವಿತ್ರೀತ್ವದಿಂದ. ಸಂಸ್ಕೃತವು ಮೂಲ ಪ್ರಾಕೃತವು ಅದರ ವಿಕಾರವೆಂಬುದು ಸೋಜಿಗ ಈ ಶತಮಾನಕ್ಕೆ!

ಅರವಿಂದ ಶತಮಾನೋತ್ಸವದ ಪ್ರಾಕೃತತೆಯನ್ನು ಸಾವಿತ್ರೀ ಶಕ್ತಿಯು ಸಂಸ್ಕರಿಸಲಿ–ಎಂಬುದು ಸತ್ಯವಂತರ ಹಾರೈಕೆ. ಜಗತ್ತಿಂದು ಪ್ರಾಕೃತ ಪ್ರಾಕೃತತರವಾಗುತ್ತ ಹೋಗುತ್ತಿದೆ. ಭಾರತವು ಡಾರ್ವಿನೀಯ ನಾಗರಿಕತೆಗಿಳಿದವರ ಅಂಕೆಯಲ್ಲಿದೆ. ಆದುದರಿಂದ **'ಶಿವಾಸ್ತೇಪಂಥಾನಃ ಸಂತು'** ಎಂದು ಈ ಸರಸ್ವತಿಯನ್ನು ಸಾವಿತ್ರಿಗೆ ಮುಡಿಪಿಡಲಾಗಿದೆ, ಅರವಿಂದರ ಸತ್ಯಕ್ಕೆ ಸಮರ್ಪಿಸಲಾಗಿದೆ.



# ೩೫. ಸ್ವಾತಂತ್ರ್ಯ ಮತ್ತು ಭ್ರಮೆ

ಏಶಿಯೇತರ ರಾಷ್ಟ್ರಗಳ ಸಂಪರ್ಕದಿಂದ 'ಸ್ವಾತಂತ್ರ್ಯ' ಎಂಬ ಪದವೀಗ ಭಾರತದ ವಿದ್ಯಾವಂತರಲ್ಲಿ ಜನಪ್ರಿಯತೆ ಗಳಿಸಿದೆ. ಅವಿದ್ಯಾವಂತ–ಅರ್ಧವಿದ್ಯಾವಂತರೂ ಬಹಳ ಕಡೆ ಅದರ ಗಾಳಿಗೆ ಸಿಕ್ಕಿದ್ದಾರೆ. (೧) ಕಂದಾಯ ಹಾಗೂ ಕರಗಳನ್ನು ಕೊಡದಿರುವುದು ಸ್ವಾತಂತ್ರ್ಯ, (೨) ಬಾಡಿಗೆ ಕೊಡದಿರುವುದು ಸ್ವಾತಂತ್ರ್ಯ, (೩) ನಿರುದ್ಯೋಗ ನಿವಾರಣೆಯೇ ಸ್ವಾತಂತ್ರ್ಯ, (೪) ಕೆಲಸ ಮಾಡದೆ ಹಣ ಗಳಿಸಬಲ್ಲ ಅವಕಾಶ ಲಾಭವೇ ಸ್ವಾತಂತ್ರ್ಯ, (೫) ನಮಗೆ ಇಷ್ಟವಾದ ಕೆಲಸ ಸಿಗುವುದೇ ಸ್ವಾತಂತ್ರ್ಯ, (೬) ಮಿಕ್ಕವರು ನಾವು ಹೇಳಿದ ಹಾಗೆ ಕೇಳುವಂತಾಗುವುದೇ ನಮಗೆ ಸ್ವಾತಂತ್ರ್ಯ, (೭) ಸುಖಸಾಧನಗಳೆಲ್ಲವೂ ನಿತ್ಯವಿರಾಮದೊಡನೆ ಸಿಗುವಂತಾಗುವುದೇ ಸ್ವಾತಂತ್ರ್ಯ, (೮) ಅಲ್ಪಶ್ರಮದಿಂದ ಮಹದ್ಧನ ಯಾವಾಗಲೂ ದೊರೆಕುವ ಸೌಲಭ್ಯವೇ ಸ್ವಾತಂತ್ರ್ಯ, (೯) ಬಾಯಿಗೆ ಬಂದದ್ದನ್ನು ಆಡಲು ಅವಕಾಶವಿರುವುದೇ ಸ್ವಾತಂತ್ರ್ಯ, (೧೦) ಮನಸ್ಸಿಗೆ ಬಂದಂತೆ ಮಾಡಲು ಅವಕಾಶ ಇರುವುದೇ ಸ್ವಾತಂತ್ರ್ಯ, (೧೧) ಸರ್ವರ ಆರ್ಥಿಕ ಸಮತೆಯೇ ಸ್ವಾತಂತ್ರ್ಯ, (೧೨) ಪಾತ್ರತೆಗೆ ತಕ್ಕ ಪುರಸ್ಕಾರ ದೊರಕುವುದೇ ಸ್ವಾತಂತ್ರ್ಯ–ಎಂಬುದಾಗಿ ಸ್ವಾತಂತ್ರ್ಯದ ಅರ್ಥಗಳು ವಿವಿಧ ವ್ಯಕ್ತಿಗಳಲ್ಲಿ ವಿವಿಧವಾಗಿರುವುದರಿಂದ ಭಾರತದಲ್ಲಿ ಸಾರ್ವಜನಿಕ ವ್ಯವಹಾರಗಳೆಲ್ಲವೂ ಬಹಳ ಅಸ್ತವ್ಯಸ್ತವಾಗುತ್ತ ಹೋಗಿವೆ.

ನ್ಯಾಯದ ಜರಡಿಯಲ್ಲಿ ಶೋಧಿಸಿದಾಗ ಉಳಿಯುವುದು ಮಾತ್ರ ಸ್ವಾತಂತ್ರ್ಯ. ನ್ಯಾಯವು ಪಾತ್ರತ್ವ ನಿರ್ಣಾಯಕ. ಪಾತ್ರತ್ವವು ಸಾರ್ವಜನಿಕ ಮತ್ತು ವೈಯಕ್ತಿಕ ಎಂಬ ಎರಡು ಮುಖಗಳನ್ನುಳ್ಳದ್ದು. ಅಹಿಂಸಾತ್ಮಕವಾದ ಸಾಮಾಜಿಕ ಸಾಮಾನ್ಯತೆ ಮತ್ತು ವೈಯಕ್ತಿಕ ವಿಶಿಷ್ಟತೆಗಳೆರಡಕ್ಕೂ ಸಮನ್ಯಾಯ (ಪುರಸ್ಕಾರ) ಕಾರ್ಯರೂಪದಲ್ಲಿ ದೊರಕುವ ವ್ಯವಸ್ಥೆ ಮಾತ್ರ ಸ್ವಾತಂತ್ರ್ಯದ ನಿಜವಾದ ಅನುಭವವನ್ನು ಉಂಟುಮಾಡಬಲ್ಲದು. ಸ್ಥಿರವೂ ಸಾಮೂಹಿಕವೂ ಆಗದ ವ್ಯವಸ್ಥೆಗಳಲ್ಲಿ ಎಲ್ಲಿಯೂ ಪೂರ್ಣನ್ಯಾಯವಿಲ್ಲ. ಸ್ಥಿರತೆಯು ಶತಮಾನ ಅವಧಿಯದು; ಸಾಮೂಹಿಕತೆಯು ರಾಷ್ಟ್ರ ಪರಿಚ್ಛಿನ್ನ. ಬಂಡವಾಳದ ಸಮತೆಯು ವ್ಯಕ್ತಿಯ ಸಾಮೂಹಿಕ ನ್ಯಾಯಕ್ಕೆ ನಿಕಷ; ಆತನ ದುಡಿಮೆಯ ಗುಣ–ಪರಿಮಾಣಗಳಿಗೆ ತಕ್ಕ ಪ್ರತಿಫಲ ದೊರಕುವುದು ಅವನ ವೈಯಕ್ತಿಕ ನ್ಯಾಯಲಾಭಕ್ಕೆ ನಿಕಷ. ಈ ೨ ತತ್ವಗಳನ್ನು ಪ್ರತಿ ಪ್ರಜೆಗೆ ಆತನ ಸಾಮೂಹಿಕ ಸದಸ್ಯತ್ವದ ಸ್ಥಾನಕ್ಕೆ ಹೊಂದುವಂತೆ ಅನ್ವಯಿಸುವುದೇ ಮಹಾನ್ಯಾಯ. ಮಹಾನ್ಯಾಯದ ಒರೆಗಲ್ಲಿಗೆ ಹತ್ತದ ಸ್ವಾತಂತ್ರ್ಯವು ಕೇವಲ ಭ್ರಮೆ.

ಭಾರತದಲ್ಲೀಗ ಸಿಕ್ಕಾಪಟ್ಟೆ ಹರಿಯುವ ರೈತಜಮೀನುದಾರಿಕೆ, ಬಂಡವಾಳಶಾಹಿ, ಉದ್ಯಮಯಾಜಮಾನ್ಯ ಮತ್ತು ಗುತ್ತಿಗೆದಾರಿಕೆಯ ವ್ಯಾಪಾರಗಳು ಹರಡಿವೆ. ಇವು

ಮಹಾನ್ಯಾಯದಿಂದ ನಿಷ್ಕೃಷ್ಟವಾದ ಪರಿಮಿತಿಗಳಿಗೆ ಒಳಪಟ್ಟಿಲ್ಲ. ಆದುದರಿಂದ ಇವಿಷ್ಟು ಬಹುಸಂಖ್ಯರನ್ನು ಶೋಷಿಸುವ ಸಾಧನಗಳಾಗಿ ಪರಿಣಮಿಸಿವೆ. ಶೋಷಣೆಗೆ ಭರತ ಬಂದಾಗ ಸ್ವಾತಂತ್ರ್ಯಕ್ಕೆ ಇಳಿತ ಬರುತ್ತದೆ. ಅವೆರಡಕ್ಕು ಇರುವುದು ಎಣ್ಣೆ–ಸೀಗೆಗಳ ಸಂಬಂಧ–ಧನವೊಂದೇ ಸರ್ವಗೌರವಗಳಿಗೂ ಪಾತ್ರತೆಯನ್ನು ನಿರ್ಣಯಿಸಿ ಕೊಡುವಂತಾಗುವುದು ಶೋಷಣಭರಿತ ರಾಜ್ಯದಲ್ಲಿ ಮಾತ್ರ. ವ್ಯಕ್ತಿ ಗೌರವವು ಧನದ ಅಳತೆಗೆ ಒಳಪಡುವುದು ರಾಷ್ಟ್ರಗೌರವವು ಸಾಲಗಾರಿಕೆಯ ಅಳತೆಗೆ ಒಳಪಟ್ಟಾಗ ಅತ್ಯಂತ ಹೆಚ್ಚಾಗುತ್ತದೆ ಎಂಬುದಕ್ಕೆ ಭಾರತವೇ ನಿದರ್ಶನ. ಆದುದರಿಂದ ಭಾರತವು ಹಿಂದುಳಿದ ರಾಷ್ಟ್ರವಾಗಿದೆ–ಅಂದರೆ ಸಮಾಜವಾದಿ ಸಮಾಜ ಸ್ಥಾಪನೆ ಇನ್ನೂ ಆಗದಿರುವ ರಾಷ್ಟ್ರವಾಗಿ ಉಳಿದಿದೆ. ಇಂಥ ರಾಷ್ಟ್ರದ ಬಹುಸಂಖ್ಯ ಪ್ರಜೆಗಳ ಸ್ವಾತಂತ್ರ್ಯವು ಕೇವಲ ಭ್ರಮೆ. ಕೇವಲ ಮಾತಾಡುವ ಸ್ವಾತಂತ್ರ್ಯವಿರುವುದು ಸ್ವಾತಂತ್ರ್ಯದ ಆಭಾಸ. ಅದು ತೀರ ನಿರುಪಯೋಗಿ–ಕಣ್ಣಿಗೆ ಮಣ್ಣೆರಚುವ ಮಾಯೆ. ಭಾರತದ ರಾಜ್ಯಘಟನೆಯು(ಸಂವಿಧಾನವು) ಸಮಾಜವಾದೀಯ ಸಮಾಜರಚನೆಯನ್ನು ಸಾರುವಂತೆ ತಿದ್ದುಪಡಿಗೆ ಒಳಗಾದ ಹೊರತು ರಾಜ್ಯಭಾರವು ನಿಜವಾದ ಸ್ವಾತಂತ್ರ್ಯವನ್ನು ಎಲ್ಲರಿಗೂ ದೊರಕಿಸಿಕೊಡಲು ಸಮರ್ಥವಾಗದು. ಇಂದಿನ ಆರ್ಥಿಕ ಧೋರಣ ಮತ್ತು ಅವುಗಳನ್ನು ಕಾರ್ಯರೂಪಕ್ಕೆ ತರುವ ಕಾಯದೆ–ಆಡಳಿತಗಳಲ್ಲಿ ತಾಳಮೇಳವಿಲ್ಲ. ಭ್ರಷ್ಟಾಚಾರ ಅದರ ಫಲ. ಭ್ರಷ್ಟಾಚಾರದ ಅಂತ್ಯದಶೆ ಜನಾಂದೋಲನ, ಕ್ರಾಂತಿ!

ಮಹಾನ್ಯಾಯಕ್ಕೆ ಸಲ್ಲಿಸಲಾಗುತ್ತಿರುವ ಅನಿಷ್ಠೆಯಿಂದ ಅನಿಷ್ಟ, ಸ್ವಾತಂತ್ರ್ಯದ ಆಧಾರವಾದ ಸಾಮೂಹಿಕ ಸಾಮ್ಯನ್ಯಾಯದ ಆರ್ಥಿಕ ಅರ್ಥದ ಮಾನವೀಯ ನೀತಿಯಲ್ಲಿ ನಿಷ್ಠೆ ಬೆಳೆಯದಿರುವಾಗ ಕೊಲೆ, ಸುಲಿಗೆ, ಲಂಚ, ವಂಚನೆ, ದರೋಡೆ, ಸಂಪು, ಘೇರಾವೋಗಳೆದ್ದು ಪೋಲೀಸು–ಮಿಲಿಟರಿಗಳನ್ನು ನಿರ್ವೀರ್ಯತೆ–ಭ್ರಷ್ಟತೆಗಳಿಗಿಳಿಸಿ ಪರದೇಶದ ವೈಶ್ಯರಿಗೂ ಕ್ಷತ್ರಿಯರಿಗೂ ತಲೆ ಹಾಕಲು ಅವಕಾಶ ಉಂಟು ಮಾಡಿದ್ದಕ್ಕೆ ಏಶಿಯ, ಆಫ್ರಿಕ, ದಕ್ಷಿಣೋತ್ತರ ಅಮೆರಿಕೆಗಳ ಇತಿಹಾಸವು ನಿದರ್ಶನಗಳನ್ನು ಕೊಡುತ್ತದೆ. ವಿಯಟ್ನಾಮಿನ ಅಂತರ್ಯುದ್ಧ ಇನ್ನೊಂದು ಅಂಧಕಾರಕ ಪರಿಣಾಮಕ್ಕೆ ಉದಾಹರಣೆಯಾಗಿದೆ.

ಸ್ವಾತಂತ್ರ್ಯವೆಂಬುದೊಂದು ಸಾಮಾಜಿಕ ನ್ಯಾಯ ಸಾಮ್ಯದ ತತ್ವ ಎಂಬುದನ್ನು ಅರಿಯದೆ ಅದೊಂದು ಅರಾಜಕತೆಯ ಸ್ವಾಚ್ಛಂದ್ಯವೆಂಬ ನಂಬಿಗೆ ದೃಢವಾಗಿರುವುದು ಶಿಕ್ಷಿತರಲ್ಲಿಯೂ ಉಳಿದಿರುವವರೆಗೆ ಒಂದು ದೇಶವು ಸ್ವತಂತ್ರವಾಗಿದೆ ಎಂದು ತಿಳಿದುಕೊಳ್ಳುವುದು ಒಂದು ಮಹಾಭ್ರಮೆ. ಅಂಥ ಭ್ರಮೆಯನ್ನು ಪರಿಹರಿಸುವ ಧೋರಣ ರಾಷ್ಟ್ರದ ಶಿಕ್ಷಣಪದ್ಧತಿಯಲ್ಲಿಯೂ ವ್ಯವಹಾರ ನೀತಿಯಲ್ಲಿಯೂ ಆಡಳಿತ ಸಂಪ್ರದಾಯದಲ್ಲಿಯೂ ಕಂಡು ಬಾರದಿರುವಾಗ ಆಧ್ಯಾತ್ಮಿಕತೆಯ ಮಾತಾಡುವುದೊಂದು ಪುರಾಣದೊಳಗಿನ ಬದನೆಯಕಾಯಿ; ಅದೊಂದು ಸನಾತನಿತ್ವದ ವ್ಯಾಮೋಹ; ಹಳತಿನ ಕಾಲದ ಹುಚ್ಚು; ಸಂಸ್ಕೃತ, ಸಂಸ್ಕೃತಿ, ಆಧ್ಯಾತ್ಮ, ನೀತಿ, ನ್ಯಾಯಗಳ ಮಾತೆತ್ತುವುದು

ಮಾರ್ಜಾಲಸನ್ಯಾಸ ಅಥವಾ ಅರಣ್ಯರೋದನ. ಆಡಳಿತ–ಶಿಕ್ಷಣಗಳಲ್ಲಿ ಕದ್ದು ನಡೆದುಕೊಳ್ಳುವ ಪ್ರವೃತ್ತಿಯ ಜನರು ಹೆಚ್ಚಾದಾಗ ಒಂದು ದೇಶದಲ್ಲಿ ಸರಕಾರಿ ಕಳ್ಳ, ಸಾವಕಾರಿ ಕಳ್ಳ ಮತ್ತು ವಿದೇಶೀಯ ಕಳ್ಳ ಎಂಬ ಮೂರು ವರ್ಗಗಳ ಶೋಷಕರು ತಲೆದೋರುತ್ತಾರೆ. ಇವರೇ ಸಾರ್ವಜನಿಕವಾಗಿ ಗೌರವಾರ್ಹತೆಯ ಕಾರ್ಯಕಾರಿ ಮಟ್ಟಕ್ಕೇರಿದಾಗ ಜನರು ಕೆಟ್ಟುಹೋಗಿದ್ದಾರೆ ಎಂಬ ಒಣದೂರನ್ನು ಇವರು ಎಬ್ಬಿಸುತ್ತಾರೆ. ದಾನಶೀಲ ಅಳಿದುಹೋದ ಪ್ರಾಚೀನ ಸಮಾಜಗಳೆಲ್ಲವುಗಳಲ್ಲೂ ಇಂಥ ಸಂಧಿ ಅನೇಕ ಸಲ ಬಂದುಹೋಗಿದೆ. ಲುಬ್ಧತೆಯು ಮರ್ಯಾದಸ್ಥಿಕೆ ಎನ್ನಿಸಿದಾಗಲೆಲ್ಲಾ ಒಂದು ನಾಡಿನ ಸ್ವಾತಂತ್ರ್ಯವನ್ನು ಯಾರಾದರೂ ಕಸಿದುಕೊಂಡೇ ಹೋಗಿರುವುದು ಇತಿಹಾಸದಲ್ಲಿ ಕಂಡಬರುತ್ತದೆ. ಹಿಂದುಸ್ಥಾನದಲ್ಲಿ ಮುಸಲ್ಮಾನರೂ ಆಂಗ್ಲರೂ ಪ್ರವೇಶಿಸಿದ್ದು ಲುಬ್ಧರ ಸಂಖ್ಯೆ ಭಾರತದಲ್ಲಿ ಬಹಳ ಹೆಚ್ಚಾದಾಗ. ಲುಬ್ಧತೆಯು ಸಾಮಾಜಿಕ ನ್ಯಾಯದ ಆಜನ್ಮಶತ್ರು, ಮಾನವೀಯತೆಯ ಪರಮವೈರಿ, ಐಷಾರಾಮಜೀವನದ ಅಹಂಕಾರದ ತಂದೆ. ಅಲ್ಪಸಂಖ್ಯರ ಐಷಾರಾಮಕ್ಕೆ 'ಪೋಷಣೆ ಸಿಕ್ಕ ಸಮಾಜಗಳಲ್ಲೂ ರಾಜ್ಯಗಳಲ್ಲೂ ಸ್ವಾತಂತ್ರ್ಯವೆಂಬುದು ಬಹುಜನರಿಗೆ ಬಿಸಿಲುಗುದುರೆ. ಒಬ್ಬರೆಂದರು; 'ಪಾನನಿರೋಧ ತ್ಯಾಗವು ಅಲ್ಪರ ಐಷಾರಾಮಕ್ಕೆ ಹೆಚ್ಚು ಪುಟಕೊಟ್ಟಿದೆ, ಅಧಿಕಾರ ದುರುಪಯೋಗವನ್ನು ಅಧಿಕಗೊಳಿಸಿದೆ; ದರಿದ್ರರಲ್ಲಿ ಉದ್ವೇಗವನ್ನು ಹೆಚ್ಚಿಸಿದೆ; ಶಿಸ್ತಿನಲ್ಲಿ ಅನಿಷ್ಠೆ ಸರ್ವತ್ರ ವ್ಯಾಪಕವಾಗುತ್ತ ಹೋಗುವಂತೆಸಗಿದೆ; ಭ್ರಷ್ಟಾಚಾರ ಪ್ರವೃತ್ತಿಗೆ ಪೋಷಣೆ ಕೊಟ್ಟಿದೆ; ಸೋಮಾರಿತನಕ್ಕೆ ನೀರೆರೆದಿದೆ, ನಿಯಮೋಲ್ಲಂಘನವನ್ನು ಜನಪ್ರಿಯಗೊಳಿಸಿದೆ. ಪಾನನಿರೋಧದ ಆಲಸ ಅಮಲುಜಾರಿ ಈ ಪರಿಣಾಮಗಳಿಗೆ ಮೊದಲೇ ನಾಂದಿ ಮಾಡಿದೆ. ಅಮಲುಜಾರಿ ಮಾಡಲಾರದ ಆಡಳಿತಗಾರಿಕೆ ಕಾಯದೆಬದ್ಧ ಸರಕಾರದ ಶೀಲವನ್ನು ಮೊದಲು ಭ್ರಷ್ಟಗೊಳಿಸುತ್ತದೆ;. ಭಾರತಕ್ಕೆ ಬಂದಿರುವ ರಾಜಕೀಯ ಕ್ಷಯರೋಗವೆಂದರೆ ಶಿಥಿಲ ಪ್ರಶಾಸನವೊಂದೇ. ಅದರಿಂದ ರಾಜಕೀಯ ಪಕ್ಷಗಳ ಸದಸ್ಯರ ನಿಷ್ಠೆ ಕೂಡ ಶಿಥಿಲವಾಗುವಂಥ ಪ್ರಭಾವ ಉಂಟಾಗಿದೆ. ಎಷ್ಟು ಚುನಾವಣೆಗಳು ನಡೆದರೂ ಅದು ಪರಿಹಾರವಾಗುವಂಥ ಸರಕಾರ ರಚಿತವಾಗದು. ಏಕೆಂದರೆ ಅವುಗಳ ಯಶಸ್ಸು ಭ್ರಷ್ಟಾಚಾರವನ್ನೇ ಆಧರಿಸಿದೆ. ಲುಬ್ಧರಿಂದ ಲುಬ್ಧ ಸಂತಾನ ಬೆಳೆಯುವುದೆಂಬ ಮಹೋಕ್ತಿಯಂತೆ ಶಿಥಿಲರ ಕೈಯಲ್ಲಿ ತರಬೇತು ಪಡೆದವರು ಶಿಥಿಲರೇ ಆಗುತ್ತಾರೆ. ಶಿಥಿಲತೆಯು ಸ್ವಾತಂತ್ರ್ಯಕ್ಕೆ ಹಿಡಿದ ಗೆದ್ದಲು. ಅದು ಸ್ವಾತಂತ್ರ್ಯಕ್ಕೆ ಯಮ, ಅಂತಕ, ಹಂತಕ. ಭ್ರಷ್ಟತೆ, ಅನಿಷ್ಠೆ, ಶಿಥಿಲತೆಗಳು ಪರ್ಯಾಯಾರ್ಥಕ ಪದಗಳು. ಸ್ವಾತಂತ್ರ್ಯದ ಮಾರ್ಗವು ಬಹಳ ಬಿಗಿಯಾದದ್ದು; ಅದೆಂದೂ ವಿದೂಷಕನ ಅಂಗಿಯಂತೆ ತೇಪೆಗಳಿಂದ ತಯಾರು ಮಾಡಲು ಬರುವಂಥದಲ್ಲ. ಧ್ವಜವಂದನೆ, ರಾಷ್ಟ್ರಗೀತೆ, ಸ್ವಾತಂತ್ರ್ಯೋತ್ಸವಗಳೆಲ್ಲವೂ ಸ್ವಾತಂತ್ರ್ಯಧರ್ಮವನ್ನು ಆಚರಿಸಿದ ದೇಶದಲ್ಲಿ ನಕಲಿಪಾರ್ಟಿಗಳ ಆಟ!

If a person is not free from hunger and poverty, if he hasn't got a roof over his head and if he has to depend on the will of another, then all

the other freedoms have no meaning–'ಒಬ್ಬ ಮನುಷ್ಯನು ಹಸಿವು–ದಾರಿದ್ರ್ಯಗಳಿಂದ ಮುಕ್ತನಾಗದೆ ಹೋದಾಗ, ಬದುಕಲು(ಸ್ವಂತದ) ಮನೆ ಅವನಿಗೆ ಇಲ್ಲದಿರುವಾಗ ಮತ್ತು ಅವನು ಪರೇಚ್ಛೆಯನ್ನು ಅವಲಂಬಿಸಿ ಬದುಕಬೇಕಾದಾಗ ಉಳಿದ ಎಲ್ಲ ಸ್ವಾತಂತ್ರ್ಯಗಳೂ ಅವನಿಗೆ ಹೀನವಾಗುತ್ತವೆ.' ಎಡ್ವರ್ಡ್ ರೋಸೆಂಟಾಲ್ ಹೇಳಿದ ಈ ಮಾತು ಆಗಸ್ಟ್ ೧೫ ರ ದಿನ ಭಾರತೀಯ ಮುಖಂಡರು ಧ್ಯಾನಿಸಬೇಕಾದ ಗಾಯತ್ರಿ. ೧೯೬೨ರಲ್ಲಿ ಅಮೆರಿಕದಂಥ ದೇಶದಲ್ಲಿ ೭ ಲಕ್ಷ ತರುಣ–ತರುಣಿಯರು ಕೆಲಸವಿಲ್ಲದೆ ಅಲೆಯುತ್ತಿದ್ದರಂತೆ. ಆಧುನಿಕ ಯುಗದಲ್ಲಿ ನಿರುದ್ಯೋಗವು ಮರಣಕ್ಕಿಂತ ಕ್ರೂರವಾದುದು. ಭಾರತದಲ್ಲಿಯ ಅಸಂಖ್ಯ ನಿರುದ್ಯೋಗಿಗಳ ಜೀವನವೋ? ಮನೆಯಿಲ್ಲದವರ ಪಾಡೋ? ಪ್ರಭಾವಿಗಳ ಇಚ್ಛೆಯಂತೆ ಬಾಳಬೇಕಾದ ಪರಿಸ್ಥಿತಿಯೋ? ಅಲ್ಪವೇತನ ಪಡೆದ ಮಹಾಕುಟುಂಬಸ್ಥರ ಗತಿಯೋ?

ಕಾಯಕವು ಕೈಲಾಸವೆಂಬುದು ಹಿಂದಿನ ಮಾತು. ಇಂದು ಕಾಯಕವೇ ಜೀವನ. ಶ್ರಮಸಂಘಟನೆ, ಶ್ರಮವಿತರಣ, ಶ್ರಮಗುಣ ಪರಿಮಾಣಗಳಿಗೆ ತಕ್ಕ ಪ್ರತಿಫಲ ಸುವ್ಯವಸ್ಥಿತವಾಗುವವರೆಗೆ ಇಲ್ಲಿ ನಮಗಿರುವ ಸ್ವಾತಂತ್ರ್ಯ ಅರ್ಥವತ್ತಾಗಲಾರದು. ಅಸತ್ಯ, ಅಪ್ರಾಮಾಣಿಕತೆ ಮತ್ತು ಅನ್ಯಾಯಬದ್ಧ ಹಕ್ಕುದಾರಿಕೆಗಳು ಚಲಾವಣೆಯಲ್ಲಿರುವವರೆಗೆ ಶ್ರಮಗೌರವಕ್ಕೆ ನಾವು ಸಲ್ಲಿಸುವುದು ಬರಿ ಬಾಯಿಸೇವೆ. ಸ್ಥಳ, ಜಾತಿ, ಬಂಧುತ್ವಗಳು ಪಾತ್ರತ್ವವನ್ನು ನಿರ್ಣಯಿಸುವಲ್ಲಿ ಮೇಲುಗೈಯಾದಾಗ ಕಾಯಕಕ್ಕೆ ತಕ್ಕ ಸ್ಥಾನಗೌರವ ದೊರಕಿದೆ ಎಂದು ಹೇಳಲು ಸಾಧ್ಯವಿಲ್ಲ. ದೇಹಶ್ರಮ–ಬುದ್ಧಿಶ್ರಮಗಳೆರಡಕ್ಕೂ ತಕ್ಕ ಪುರಸ್ಕಾರ ದೊರೆಯದಂತಾಗಿರುವುದು ನೌಕರರ ಅತೃಪ್ತಿ, ಕರ್ತವ್ಯವಿಮುಖತೆ ಅಥವಾ ಅಸಮರ್ಪಕತೆ ಹೆಚ್ಚುವಂತೆ ಮಾಡಿದೆ; ಅವರ ಆಯ್ಕೆಯಲ್ಲಿ ಉಕ್ತ ಅಪನಿರ್ಣಯ ನಿಯಮಗಳಿರುವುದೂ ಇಲ್ಲಿ ಉಲ್ಲೇಖನೀಯ. ಅರಾಷ್ಟ್ರೀಯವಾದದ್ದು ಆಭಾಸಿಕನ್ಯಾಯ. ಉಕ್ತ ನಿಯಮಗಳು ಅರಾಷ್ಟ್ರೀಯವಾಗಿವೆ. ಅಪನಿಯಮಗಳ ಕಟ್ಟಿಗೆ ಸಿಲುಕಿದ ಸ್ವಾತಂತ್ರ್ಯವು ಸ್ವಾತಂತ್ರ್ಯವಲ್ಲ. ಜನಪ್ರತಿನಿಧಿತ್ವವು ಸರ್ವಜ್ಞತ್ವವೆನ್ನಿಸುವುದು ಹಿಂದುಳಿದ ಪ್ರಜಾಪ್ರಭುತ್ವದಲ್ಲಿ ಮಾತ್ರ.

ಸಮತೋಲನವಿಲ್ಲದ ಆಸ್ತಿವಂತಿಕೆಯುಳ್ಳ ಪ್ರಜೆಗಳಿಗೆ ಸಮಾನಾವಕಾಶ ಒದಗಿಸಿದ್ದರಿಂದ ಆಗಬೇಕಾದ ಒಳಿತು ಆಗದು. ಕುಂಟನನ್ನೂ ಕಾಲಿದ್ದವನನ್ನೂ ಏಕಕಾಲದಲ್ಲಿ ಓಡಿ ಬಂದುಸ್ಥಳವನ್ನು ಮುಟ್ಟಬೇಕೆಂದಷ್ಟೇ ನ್ಯಾಯ ಅದರಲ್ಲಿದೆ. ಕುಂಟನು ತನಗೆ ದೊರೆತ ಓಡುವ ಸ್ವಾತಂತ್ರ್ಯವನ್ನು ಸಮಸ್ಥಿತಿಯಿಂದ ಬಳಸಲಾರ. ಆದುದರಿಂದ ರಾಷ್ಟ್ರೀಕರಣವೊಂದೇ ರಾಷ್ಟ್ರೀಯ ಸಮಾಜದ ಆರ್ಥಿಕ ನ್ಯಾಯವನ್ನು ಸಾಧಿಸಿಕೊಡಬಲ್ಲುದಾಗಿದೆ. ಅರ್ಥವು ಮಾನವಕೃತವಾದುದು. ಅದು ನಾಗರಿಕತೆ ಗಣನೆಗೆ ತೆಗೆದುಕೊಂಡು ನಿರ್ಧರಿಸುತ್ತಿರುವ ಮೂಲ್ಯ. ದೇಹ ಇಂದ್ರಿಯ, ಮಿದುಳುಗಳು ದೈವಕೃತ(ನಿಸರ್ಗಕೃತ). ಮಾನವೀಯತೆ ಎಂದರೆ ದಯೆಯೇ ಆಗಿರುವುದರಿಂದ ಮನುಷ್ಯಕೃತ ಭೇದಗಳನ್ನು ಆದಷ್ಟು ಕಡಿಮೆಮಾಡಿ ಮನುಷ್ಯ ಮರ್ಯಾದೆಯನ್ನಿಟ್ಟುಕೊಂಡು

ಬದುಕುವ ಸೌಕರ್ಯದ ಕನಿಷ್ಠ ಪ್ರಮಾಣ ಸರ್ವಪ್ರಜೆಗಳಿಗೂ ದೊರಕಿದಾಗ ಮಾತ್ರ ಇಡೀ ರಾಷ್ಟ್ರದಲ್ಲಿ ಸ್ವಾತಂತ್ರ್ಯವು ಕಾರ್ಯಕಾರಿಯಾಗಿ ಇದೆಎಂದು ನಂಬಬಹುದು. ಸೌಕರ್ಯದ ಕನಿಷ್ಠ ಪ್ರಮಾಣವನ್ನು ರೋಸೆಂಟಾಲ್ ಹೇಳಿದ್ದಾರೆ. ಶಕ್ತರು ಅಶಕ್ತರನ್ನುಪಾಲಿಸುವುದೇ ಸಂಸ್ಕೃತಿಯ ಹೆಗ್ಗುರುತು. ಈ ಪಾಲನಶಕ್ತಿ ರಾಷ್ಟ್ರಾಧೀನವಾಗುವುದೇ ಸ್ವಾತಂತ್ರ್ಯವು ಪಾಲಿತರಿಗೆ ಅನುಭವಸತ್ಯವನ್ನಾಗಿ ಮಾಡಿಕೊಡಬಲ್ಲುದಾಗಿದೆ; ವ್ಯಕ್ತ್ಯಧೀನವಾದಾಗ ಅದು ಪರಾಧೀನತೆ, ದಾಸ್ಯ ಎನ್ನಿಸುತ್ತದೆ. ನಮ್ಮ ರಾಷ್ಟ್ರವಿಂದು ಪ್ರತಿಯೊಬ್ಬ ಪ್ರಜೆಗೂ ಉದ್ಯೋಗದ ಗ್ಯಾರಂಟಿಯನ್ನು ಕೊಡುವ ರಾಜಕೀಯ ಶಕ್ತಿಯನ್ನು ವಹಿಸಿಕೊಳ್ಳಲಿಲ್ಲ; ಆಪತ್ತಿನಲ್ಲಿ ಚಿಕಿತ್ಸೆ ಕೊಡಬಲ್ಲವ್ಯವಸ್ಥೆಯನ್ನು ಮಾಡುವ ಹೊಣೆಯನ್ನು ಹೊತ್ತಿಲ್ಲ; ಹೊತ್ತಂಥ ವಿತ್ತ-ಜೀವಿತ ರಕ್ಷಣೆಯ ಹಾಗೂ ವಿದ್ಯಾದಾನದ ಹೊಣೆಯನ್ನು ಸಮರ್ಪಕವಾಗಿ ಪಾಲಿಸಲು ಯೋಚಿಸಿಕೊಂಡಿಲ್ಲ. ಆದುದರಿಂದ ಸ್ವಾತಂತ್ರ್ಯದ ಭ್ರಮೆಯನ್ನು ಪ್ರಮೆ(a reality)ಯನ್ನಾಗಿ ಮಾಡಬೇಕಾದರೆ ಮಾನವೀಯತೆಯು ವಿದ್ಯೆ, ಅಧಿಕಾರ, ಧನ ಉಳ್ಳವರಲ್ಲಿ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಉಕ್ಕಿ ಏರುವಂತೆ ಸರ್ವರೂ ಸರ್ವತ್ರ ಪ್ರಯತ್ನಿಸಬೇಕಾಗಿದೆ. ಅಂಥ ಪ್ರಯತ್ನವು ವಿಧಿಬದ್ಧವಾಗಿ ಸಂವಿಧಾನದ ಮೂಲಕ ಆಡಳಿತ ವ್ಯವಸ್ಥೆಯ ರೂಪವನ್ನು ತಾಳಿದ ದಿನ ಭಾರತದ ಸಾಮಾನ್ಯರಿಗೆ ನಿಜವಾಗಿ ಸ್ವಾತಂತ್ರ್ಯ ಬಂತೆಂದು ತಿಳಿಯಬಹುದು. ಅಲ್ಲಿಯವರೆಗಿನ ಕತೆ-ಆಂಗ್ಲನೊಬ್ಬ ತನ್ನ ಮನೆಯ ಕಿಟಕಿಯ ಎದುರು ನಗರಸಭೆಯು ದೀಪದ ಕಂಬವನ್ನು ನೆಡಬಾರದೆಂದು ಮಾಡಿದ ಸತ್ಯಾಗ್ರಹ ಫಲದಷ್ಟೇ ಫಲ ದೊರಕುತ್ತದೆ. ಅವನು ಒಂದು ಕುರ್ಚಿಯನ್ನು ತೆಗೆದುಕೊಂಡು ಹೋಗಿ ಬೀದಿಯಲ್ಲಿಟ್ಟು ಪ್ರತಿಭಟನಾರ್ಥವಾಗಿ ಅದರ ಮೇಲೆ ಕುಳಿತುಕೊಂಡನು. ಮತ್ತು ಅಲ್ಲೇ ನಿದ್ರೆ ಮಾಡಿದನು. ೨ ದಿನಗಳ ಅನಂತರ ಅವನು ಎಚ್ಚತ್ತು ನೋಡುವಾಗ ನಗರಸಭೆಯ ಕೆಲಸಗಾರರು ಕಂಬವನ್ನು ಅವನ ಹತ್ತಿರದಲ್ಲೇ ನೆಟ್ಟು ಹೋಗಿಬಿಟ್ಟಿದ್ದರು-ಎಂಬಂತಾಗುತ್ತದೆ. ಪತ್ರಿಕೆಗಳಲ್ಲಿ ಬರುವ ವಾಚಕರ ದೂರುಗಳಿಗೇನಾದರೂ ಬೆಲೆ ಇದೆಯೇ ಭಾರತದಲ್ಲಿ? ಬಹಳ ಬೆಲೆ ಇದ್ದಂತೆ ಕಾಣದು; ಹಾಗೇ ಮತಪ್ರದರ್ಶನಕ್ಕೂ. ಸಿಟ್ಟು ಬಂದರೆ ಒಂದು ಸರಕಾರ ಅದಕ್ಕೆ ವಿರುದ್ಧವಾದ ಮತಪ್ರದರ್ಶನವನ್ನು ಮಾಡಿಸಬಲ್ಲ ರಾಜಕಾರಣಿಗಳನ್ನು ಪಡೆದಿದೆ. There is no humaneness in the fight for money-ದುಡ್ಡಿದಾಗಿ ಮಾಡುವ ಹೋರಾಟದಲ್ಲಿ ದಯೆ ಗಿಯೆ ಇಲ್ಲ. ದುಡ್ಡು ಹಡೆಯುವ ಸ್ಥಾನವನ್ನು ಉಳಿಸಿಕೊಳ್ಳುವಾಗ ದುಡ್ಡಿನ ಮಿತವ್ಯಯಕ್ಕೆ ಅವಕಾಶವಿಲ್ಲ. ದುಡ್ಡು ಮತಗಳನ್ನು ಕೊಳ್ಳಬಲ್ಲುದು. ಆದುದರಿಂದ ಧನ-ಸ್ಥಾನಗಳಿಲ್ಲದ ಪ್ರಜೆಗೆ ಸ್ವಾತಂತ್ರ್ಯ ರೂಪದ ಪ್ರಭುತ್ವ-ಇಲ್ಲಿಲ್ಲ. ತನಗೆ ಎಲ್ಲರಿಗಿಂತ ಹೆಚ್ಚಿನ ಗಂಟು ಬರುವಂತೆ ಮಾಡುವಾಗ ಇತರ ಯಾವನು ಬಲಿಯಾದರೂ ಕನಿಕರಿಸುವ ಬಹಳ ಮುಖಂಡರು ಇಲ್ಲಿಲ್ಲ. ಬಲಿಷ್ಠರ ಸಾಲಿಗೆ ತಾನು ಸೇರಬೇಕೆಂದು ಧನಭಕ್ಷಕನಿಲ್ಲಿ ಮಾಡಬಾರದ್ದನ್ನು ಮಾಡಿ ತನ್ನ ವ್ಯಕ್ತಿತ್ವವನ್ನು ಸಾಮಾನ್ಯರು ಹೆದರಿ ಗೌರವಿಸುವಂತೆ ನಡೆದುಕೊಳ್ಳುತ್ತಾನೆ. ಪರರಿಗೆ ಹಾನಿಯಾದರೂ ಆಗಲೆಂದು ಸ್ವಂತಕ್ಕೆ ಲಾಭ ಮಾಡಿಕೊಳ್ಳುವ ಮೂಲಪ್ರವೃತ್ತಿಯ ಕಾಡುತನವನ್ನು ಸಮರ್ಥಿಸುವವರೆಲ್ಲರೂ ಮಾನವತ್ವದಿಂದ ಹತ್ತು

ಅಡಿ ಕೆಳಗಿನ ಮಟ್ಟದವರು. ಅವರ ತತ್ತ್ವಜ್ಞಾನ, ಸಂಸ್ಕೃತಿ, ಕಲೆ, ವಿಲಾಸಗಳೆಲ್ಲವೂ ಮಾನವೀಯತೆಯನ್ನು ಮೆಟ್ಟಿ ತುಳಿಯುವ ಮಾಯಾಶೂರ್ಪಣಖಿಯಂಥವುಗಳು.

ನಿಜವಾದ ಸ್ವತಂತ್ರರಾಷ್ಟ್ರದಲ್ಲಿ ಎಲ್ಲರಿಗಾಗಿ ಒಬ್ಬ ಬದುಕುತ್ತಾನೆ ಮತ್ತು ಎಲ್ಲರೂ ಆ ಒಬ್ಬನಿಗಾಗಿ ಬದುಕುತ್ತಾರೆ; ಅನ್ಯಾಯ, ಪರೋಪಜೀವನ, ಅಪ್ರಾಮಾಣಿಕತೆ, ನೀತಿಗೀತೆಯನ್ನು ಲಕ್ಷಿಸದ ವೈಯಕ್ತಿಕ ಲಾಭಾನ್ವೇಷಣ, ಪರರಾಷ್ಟ್ರ–ಪರಕುಲಗಳ ಬಗ್ಗೆ ಅಸಹಿಷ್ಣುತೆ–ಇವುಗಳನ್ನು ದ್ವೇಷಿಸಲಾಗುತ್ತದೆ. ಅನ್ಯಾಯವನ್ನು ದ್ವೇಷಿಸದ ತಟಸ್ಥರು ಅನ್ಯಾಯಿಗಳು; ಅವರು ನ್ಯಾಯಕ್ಕೂ ಹಾಗೇ ವಿಶೇಷ ಗಮನ ಕೊಡುವವರಲ್ಲ. ಇಂಥ ನಿರ್ಗುಣಜನರು ಜಗತ್ತಿನಲ್ಲಿ ಏನನ್ನೂ ಸಾಧಿಸಲಾರರು; ಮೊದಲು ಪರಹಾನಿಯನ್ನೂ ಆಮೇಲೆ ಸ್ವಹಾನಿಯನ್ನೂ ಇವರು ಅನುಭವಿಸಯೇ ತೀರುತ್ತಾರೆ!

ಸ್ವಾತಂತ್ರ್ಯದ ಭ್ರಮೆಯನ್ನು, ಬಿಸಿಲುಗುದುರೆಯನ್ನು, ನೆಳಲನ್ನು, ಮಾಯೆಯನ್ನು ಜನರಲ್ಲಿ ಪ್ರಚಾರ ಮಾಡುತ್ತ ಹೋಗುವ ಮಾತುಗಾರನು ಸಮಾಜದ್ರೋಹಿ. ನಿಜವಾದ ಸ್ವಾತಂತ್ರ್ಯದ ತಿಳುವಳಿಕೆಯನ್ನು ಹಬ್ಬಿಸಿ ಆಂತರಿಕ ಸ್ವಾತಂತ್ರ್ಯವನ್ನು ದೇಶಕ್ಕೆ ದೊರಕಿಸಿಕೊಡುವವರೇ ನಿಜವಾದ ನಾಯಕರು. ಅಂಥ ನಾಯಕರನ್ನು ಜನರಿಂದು ಗುರುತಿಸಿ ಬೆಂಬಲಿಸಬೇಕು.



**['ಜೀವನ']**

# ೩೬. ವಿಜ್ಞಾನ ಮತ್ತು ಜೀವನ ಮೌಲ್ಯಗಳು

ವೇದದ ಕಾಲದಿಂದ ಇಂದಿನವರೆಗೆ ಭಾರತದಲ್ಲಿ ಎಲ್ಲರೂ ಪೌರಾಣಿಕರಾಗಿರಲಿಲ್ಲ. ನ್ಯೂಟನ್ ಮಹಾಶಯ ಹುಟ್ಟುವವರೆಗೆ ಇಡಿ ಪಾಶ್ಚಾತ್ಯ ಲೋಕವು ಪುರಾಣ ಪರಿಕಥಾಲೋಲವಾಗಿತ್ತು. ೨೦ನೆಯ ಶತಮಾನ ಭಾರತೀಯ ವೇದಾಂತ ತತ್ವಜ್ಞಾನವು ವೇದೋಕ್ತವೆಂದು ಪ್ರಸಿದ್ಧವಾಗಿದೆ. ಉಪನಿಷತ್ತು – ಮಹಾಭಾರತಗಳನ್ನು ಓದಿದವರಿಗೆ Scientific Reasoning ವಿಜ್ಞಾನ ಶುದ್ಧ ತರ್ಕ ಪ್ರಕಾರವು ಅಂದಿನ ವಿದ್ವಾಂಸರಿಗೆ ಗೊತ್ತಿತ್ತೇ ಇಲ್ಲವೇ ಎಂಬುದು ಸ್ಪಷ್ಟವಾಗುತ್ತದೆ. ಸಾಮಾನ್ಯ ಜನರು ಎಲ್ಲ ದೇಶಗಳಲ್ಲೂ ಈಗಲೂ ಸಾಕಷ್ಟು ಪೌರಾಣಿಕ (Mythological) ನಂಬಿಕೆಗಳನ್ನು ಇಟ್ಟುಕೊಂಡೇ ಇದ್ದಾರೆ – ಇನ್ನು ಮುಂದೆಯೂ ಇಟ್ಟುಕೊಂಡೇ ಇದ್ದಾರು.

ಇಂಗ್ಲೆಂಡಿನಲ್ಲಿ ವಿಕ್ಟೋರಿಯಾ ಯುಗದ ಜನರು ಡಾರ್ವಿನ್–ಫ್ರೊಡ್ ಮುಂತಾದವರ ಸಂಶೋಧನೆಗಳ ದೆಸೆಯಿಂದ ಗಾಬರಿಗೆಡುವಷ್ಟು ಜಗತ್ತಿನ ಬಗ್ಗೆ ಅಭಿಪ್ರಾಯ ಬದಲಿಸುವ ಪ್ರಸಂಗ ಬಂತೆಂದು ಕೆಲ ಪಾಶ್ಚಾತ್ಯರು ನಂಬಿದ್ದಾರೆ. ಅದರಿಂದ ಭಾರತದಲ್ಲಿ ಕೂಡ ಈಗ ಪಾಶ್ಚಾತ್ಯ ಸಂಪರ್ಕದಿಂದ ಹೊಸ ಹೊಸ ವಿಜ್ಞಾನ ಸಿದ್ಧಾಂತಗಳು ಗೊತ್ತಾಗಿ ವಿದ್ವಾಂಸರು ಜಗತ್ತಿನ ಬಗ್ಗೆ ಅಭಿಪ್ರಾಯಾಂತರವನ್ನು ಹೊಂದಬೇಕು ಎಂಬುದು ಕೆಲ ಭಾರತೀಯ ವಿಮರ್ಶಕರ ಆಗ್ರಹ. ಇದೂ ವಿಮರ್ಶನೀಯ ಅಂಶ.

ಪ್ಲೇಗು, ಕಾಲರ, ಮಲೇರಿಯ ಮುಂತಾದವುಗಳ ಕಾರಣಗಳನ್ನೂ ಪರಿಹಾರೋಪಾಯಗಳನ್ನೂ ವಿಜ್ಞಾನದಿಂದ ಭಾರತೀಯ ಕಲಿತಿರಬಹುದು; ಹಾಗೇ ರೈಲು, ಮೋಟಾರು, ಕಾರಖಾನೆಗಳ ಯಂತ್ರ ವಿಜ್ಞಾನವನ್ನೂ ತಿಳಿದುಕೊಂಡಿರಬಹುದು; ಡಾರ್ವಿನ್, ಐನ್‌ಸ್ಟೀನ್, ಜೇನ್ಸ್, ಹಕ್ಸ್ಲಿ, ಲೋಕೇ, ಹಾಬ್ಸ್, ರಸಲ್, ಫ್ರೊಡ್, ಯುಂಗ್, ಆ್ಯಡ್ಲರ್ ಮುಂತಾದವರ ಸಂಶೋಧನೆಗಳನ್ನು ಓದಿರಬಹುದು. ಆದರೆ ಜಗತ್ತಿನ ಬಗ್ಗೆ ಹಾಗೂ ಜೀವನದ ಪುರುಷಾರ್ಥಗಳ ಬಗ್ಗೆ ಅಭಿಪ್ರಾಯವನ್ನು ಬದಲು ಮಾಡಿಕೊಳ್ಳುವ ಅಗತ್ಯ ಅನೇಕ ವಿದ್ವಾಂಸರಿಗಿಲ್ಲಿ ಉಂಟಾಗಿಲ್ಲ. ಈ ಯಾವ ಸಂಶೋಧಕರ ಶೋಧವಿವರಗಳೂ ಜಗತ್ತಿನ ಸಾರಭೂತವಾದ ಸಾಮಾನ್ಯ ಸತ್ಯದ ಬಗೆಗೆ ಭಾರತೀಯ ವೇದಾಂತಿ ಒಪ್ಪಬಹುದಾದ ಸಿದ್ಧಾಂತಗಳನ್ನು ಮಂಡಿಸಿಲ್ಲ. ಏಕೆಂದರೆ ತತ್ಸಂಬಂಧಿಯಾದ ಶೋಧಗಳು ವೈಜ್ಞಾನಿಕ ಪ್ರಮಾಣ ಬದ್ಧತೆಯಲ್ಲಿ ಅನ್ಯೋನ್ಯವಾಗಿಲ್ಲ. ಡಾರ್ವಿನ್ನಿನ ವಿಕಾಸವಾದವೂ ಇತರ ವಿಜ್ಞಾನಿಗಳ ಸೂರ್ಯ–ಭೂಮ್ಯಾದಿಗಳ ಉತ್ಪತ್ತಿ ವಿವರಣಗಳೂ ಅಬಾಧಿತ ಪ್ರಮಾಣಗಳನ್ನು ಆಧರಿಸಿಲ್ಲ. ಹಾಗೆ ಎಲ್ಲ ಮನಃಶಾಸ್ತ್ರಕಾರರ ಸಿದ್ಧಾಂತಗಳೂ ಪೂರ್ಣಗ್ರಾಹ್ಯವಾಗುವಷ್ಟು ಪ್ರಮಾಣಬದ್ಧವಾಗಿಲ್ಲ. ಈ ಸಂಶಯ ಸಾಗರದ ಸಂಪುಟವನ್ನು ನಂಬಿ ಜೀವನದ ವ್ಯವಹಾರಗಳಲ್ಲಿ ಮಾನವನ, ಅವನ ಸಮಾಜದ, ಸಹಜೀವಿಗಳ

ಸಂಬಂಧಗಳ, ಕರ್ತವ್ಯಾಕರ್ತವ್ಯಗಳ ವೈಯುಕ್ತಿಕ–ಸಾಮೂಹಿಕ ಧ್ಯೇಯಗಳ ಬಗ್ಗೆ ಭಾರತೀಯ ವಿದ್ವಾಂಸ ಹೊಸ ನಿರ್ಣಯಗಳಿಗೆ ಬರಬೇಕಾದ ಸಂದರ್ಭ ಉಂಟಾಗಿಲ್ಲ. ಧರ್ಮಾರ್ಥ ಕಾಮಮೋಕ್ಷ (Ethics, Economics, Comforts of life and Freedom of personality)ಗಳಿಗೆ ಸಂಬಂಧಿಸಿದ ಭಾರತೀಯ ಶಾಸ್ತ್ರಗಳು ಇನ್ನೂ ಅಖಂಡಿತವಾಗಿವೆ, ಅಭೇದ್ಯವಾಗಿವೆ.

'ಸತ್ಯ, ನಿಜ' ಎಂಬುದರ ಬಗ್ಗೆ ವಿಜ್ಞಾನದಿಂದ ಕಲಿಯಬೇಕಾದದು ಇಲ್ಲಿಲ್ಲ. Absolutism and Relativism ಕೇವಲಾದ್ವೈತ ಮತ್ತು ಅನಿರ್ವಚನೀಯ ಖ್ಯಾತಿಗಳು ಬ್ರಹ್ಮ ಮತ್ತು ಜಗತ್ತುಗಳ ಸತ್ಯತಾಭೇದವನ್ನು ಎಂದೋ ನಿರ್ಣಯಿಸಿ ಹೇಳಿಬಿಟ್ಟಿವೆ. ಅವುಗಳನ್ನು ಯಾವ ವಿಜ್ಞಾನವೂ ಇಂದು ಅಲ್ಲಗಳೆಯಲಾರದು. Truth ವಿಶ್ವವ್ಯಾಪಕವಾದ ಬ್ರಹ್ಮ ಸತ್ಯವೆಂಬುದು ಕೇವಲ ನಿರಪೇಕ್ಷ. ಪೂರ್ಣ, ನಿತ್ಯ, ಅನಾದ್ಯನಂತ; ವಿಶ್ವವೂ ಅದರ ಒಳಗಿನ ಪದಾರ್ಥಗಳೂ ಅವುಗಳ ಸತ್ಯಗಳೂ ಸಾಪೇಕ್ಷ, ಅಪೂರ್ಣ, ಅನಿತ್ಯ, ಆದಿ ಮಧ್ಯಾಂತಯುಕ್ತ – ಎಂಬುದನ್ನು ವೇದಾಂತ ಅಬಾಧಿತವಾಗಿ ನಿರ್ಣಯಿಸಿ ಕೊಟ್ಟುಬಿಟ್ಟಿದೆ. ಪಾರಮಾರ್ಥಿಕ ಸ್ವರೂಪ ಮೊದಲನೆಯದಕ್ಕಿದೆ; ಎರಡನೆಯದರ ಸ್ವರೂಪ ಅಪಾರಮಾರ್ಥಿಕ (ಪ್ರಾತಿಭಾಸಿಕ ಮತ್ತು ವ್ಯಾವಹಾರಿಕ).

ಸೌಂದರ್ಯವೆಂಬುದು ತಾತ್ಕಾಲಿಕ ಆನಂದ ಪ್ರೇರಕವಾದ ರಸ. ಅದು ರಚನಾ ವಿಧಾನ ಸಂಪನ್ನವಾದ ಜಗದ್ವಸ್ತುಗಳ ಸಂಯೋಜನಾ ರೀತಿಗಳಿಗೆ, ಸಂಬಂಧಿಸಿದ್ದಾದ್ದರಿಂದ ಅದು ಪಾರಮಾರ್ಥಿಕವಲ್ಲ. ಆದುದರಿಂದ ಅದು ಲೌಕಿಕ ಕಾಮ್ಯ ಭಾವವರ್ಗಕ್ಕೇ ಸೇರಿಹೋಗುತ್ತದೆ. ನಿರ್ಮಲ ಸೌಂದರ್ಯದ (ನೀತಿಯ ಜರಡಿಯಲ್ಲಿ ಸೋಸಿ ಶುದ್ಧ ಮಾಡಿದ ಸೌಂದರ್ಯದ) ಆರಾಧನೆ ಪರಮಾರ್ಥ ಪ್ರಿಯತೆಗೆ ಕೆಲವೊಮ್ಮೆ ಸಾಧನವಾದೀತು – ಅಷ್ಟೆ ಎಂಬುದು ಭಾರತೀಯ ಮತ. ಈ ಮತವನ್ನು ಬಿಡಲು ಸಬಲ ಪ್ರಮಾಣಗಳಿಲ್ಲ; ನೀತಿಯ ಕೆಲ ಸೂತ್ರಗಳು ಶಾಶ್ವತ ಮತ್ತು ವಿಜ್ಞಾನದಿಂದ ಅಸ್ಪೃಶ್ಯ. ಆದುದರಿಂದ ಲೋಕ ಜೀವನದ ಗ್ರಾಹ್ಯಾಗ್ರಾಹ್ಯತೆಗಳಿಗೆ ಅವೇ ನಿಕಷಗಳು – ವಿಜ್ಞಾನದ ಮೂರ್ತವಾದ ಗುಣಗಳ ಗುಂಪುಗಳ ಮೂಲ್ಯರೂಪದ ಬಾಹ್ಯವಸ್ತು ಸತ್ಯಗಳ ಶೋಧವು ನಿಕಷವಾಗುವುದಿಲ್ಲ. ಲೋಕೋತ್ತರರ ಜೀವನವು ಭಾವನಾತೀತ ಅದು Mystic ಯೋಗಾರೂಢ ಜೀವನ; ಬಾಹ್ಯ ಜಗತ್ತಿನ ಮೌಲ್ಯಗಳನ್ನು ಮೀರಿದ ಕೇವಲಾದ್ವೈತ ಮೌಲ್ಯದ ಅನುಭವ ಅಥವಾ ಪೂರ್ಣ ಸ್ವಾತಂತ್ರ್ಯ (ಮೋಕ್ಷ).

'ಒಳಿತು, ಹಿತ' ಎಂಬ ಚರಮಾರ್ಥವು ಪುರುಷಾರ್ಥವಾದರೂ ಇಲ್ಲಿ "ಪರಮಾರ್ಥ"ವಾಗಿಲ್ಲ. ಏಕೆಂದರೆ ಹಿತಾಹಿತಗಳು ದ್ವಂದ್ವಗಳು; ಅವು ಜಾಗತಿಕ. ಆದರೆ ಹಿತವು ಅಥವಾ ಒಳಿತು ಧರ್ಮವೆಂಬ ಪುರುಷಾರ್ಥದಲ್ಲಿ ಅಂತರ್ಗತವಾಗಿದೆ. ಶಾಶ್ವತ ನೀತಿಗಳ ಗುರಿಯೇ ಅದು. ಆದುದರಿಂದ ವಿಜ್ಞಾನ ಏನನ್ನು ಸಂಶೋಧಿಸಿದರೂ ಅದು ಧರ್ಮ ನಿರ್ಣಾಯಕವಾಗದು; ಧರ್ಮವು ಸಂಸ್ಕೃತಿಯನ್ನು ಕಡೆದು ತೆಗೆದ ಬೆಣ್ಣೆ. ಭಾರತೀಯ ಆರ್ಯ ಸಂಸ್ಕೃತಿಯ ತಾಯಿಬೇರುಗಳನ್ನು ಯಾವ ಶಕ್ತಿಯೂ

ಮತಾಂತರಿಸಲಾರದು – ಇತಿಹಾಸ – ಭೂಗೋಲ ಶಾಸ್ತ್ರಗಳು ಅಂಥ ಅಭೇದ್ಯ ಕೋಟೆಗಳಾಗಿ ಅವುಗಳನ್ನು ಕಾದುಕೊಂಡಿದೆ.

ಪ್ರಯೋಜನವು (utility) ಅರ್ಥಾಂತರ್ಗತ ಸೌಂದರ್ಯವು ಕಾಮಾಂತರ್ಗತವಾದಂತೆ. ಈ ಅರ್ಥಕಾಮಗಳು ಶಾಶ್ವತ ಧರ್ಮಗಳಿಗೆ ಅವಿರುದ್ಧವಾಗಿಯೇ ಇರಬೇಕು. ಹೀಗಿರುವಾಗ ವಿಜ್ಞಾನ ಅದರಲ್ಲಿ ಕೈಹಾಕಲಾರದು. ವಿಜ್ಞಾನವು ಶುದ್ಧ ಲೌಕಿಕ ಬುದ್ಧಿಯ ವಸ್ತುನಿಷ್ಠ ವ್ಯವಹಾರದ ಫಲ. ವಸ್ತುವು ವ್ಯಕ್ತೀತರ; ವಿಜ್ಞಾತಾರನಿಂದ ಭಿನ್ನ, ಅವನಿಗೆ ಬಾಹ್ಯ. ಶಾಶ್ವತ ನೀತಿಯ ಮೂಲ ಸೆಲೆ ಇರುವುದು ಪ್ರತಿಭೆಯಲ್ಲಿ (intuition). ಪ್ರತಿಭೆ (ಪ್ರಾತಿಭಪ್ರಜ್ಞೆ) ಆತ್ಮಕೇಂದ್ರದಿಂದ (Soul centre of the unconscious) ಹೇಳಿದ್ದು ಅನುಲ್ಲಂಘನೀಯವೆಂಬುದು ಮಾನವೇತಿಹಾಸದಲ್ಲಿ ಪ್ರಸಿದ್ಧ; ಅದಕ್ಕೆ ಯಾವ ಬೌದ್ಧಿಕವೂ ಪ್ರತಿ ಆಡಲಾರದು, ಅದರ ಸತ್ಯಾಭಿವ್ಯಕ್ತಿಯನ್ನು ಖಂಡಿಸಿ ಜೀವನವನ್ನು ಆರೋಗ್ಯಕರವನ್ನಾಗಿ ಇಡಲಾರದು. ಅಹಿಂಸಾದಿ ಪಂಚಮಹಾ ಧರ್ಮಗಳು ಹಾಗೆ ಪ್ರಾತಿಭ ಸಾಕ್ಷಾತ್ಕಾರ ಜನ್ಯವಾದವುಗಳು. ವಿಜ್ಞಾನದ ಕ್ಷೇತ್ರವು ಅರ್ಥಕ್ಕಷ್ಟೇ ಪರಿಸೀಮಿತ; ಅರ್ಥವು ಧರ್ಮನಿಯಂತ್ರಿತವಾದ ಗ್ರಾಹ್ಯತೆಯನ್ನು ಉಳ್ಳದ್ದು. ಪರಿವರ್ತಿ, ಪರಿಣಾಮ, ವಿಕಾಸಿ ಎಂಬುದು ಭಾರತದ ಸಾಂಖ್ಯದರ್ಶನಲ್ಲಿ ಪಾಶ್ಚಾತ್ಯನು ವಿಜ್ಞಾನವನ್ನು ಕಲಿಯುವುದಕ್ಕೆ ಬಹಳ ಶತಮಾನಗಳ ಹಿಂದೆಯೇ ಹೇಳಲಾಗಿದೆ. ಆದರೆ ಅದರ ಪರಿವರ್ತನ ಡಾರ್ವಿನೀಯವೆಂಬ ಅಪಸಿದ್ಧಾಂತವನ್ನು ಹೇಳಿಲ್ಲ. ಡಾರ್ವಿನ್ನನ ವಿಕಾಸವಾದವನ್ನಿಲ್ಲಿ ನಂಬಿ ಅಥವಾ ನಂಬದೆ ಯಾವ ಮಾನಸಿಕ ಸ್ಥಿತ್ಯಂತರವೂ ಉಂಟಾಗಲು ಕಾರಣವಿಲ್ಲ. ನಮ್ಮ ವೇದಾಂತದ ಸೃಷ್ಟಿಕ್ರಮ ಮತ್ತು ಪುನರ್ಜನ್ಮ ಸಿದ್ಧಾಂತಗಳು ಮನುಷ್ಯರಲ್ಲಿ ಮನುಷ್ಯತ್ವದ ಹೆಚ್ಚುಗಾರಿಕೆಗಾಗಿ ಜಂಭ ಪಡುವುದಕ್ಕೆ ಅವಕಾಶವಿಲ್ಲ ಎಂಬುದನ್ನು ತೋರಿಸಿಕೊಟ್ಟಿವೆ. ವೇದಾಂತವು ಶಾರೀರಿಕ ಅಹಂಕಾರ–ಮದಗಳಿಗೆ ಶತ್ರು ಎಂಬುದು ಪ್ರಸಿದ್ಧ. ಪರಮಾಣುವಾದವನ್ನು ವೈಶೇಷಕರೂ ಬೌದ್ಧರೂ ಎಂದೋ ಹೇಳಿರುವುದರಿಂದ ಅದರ ಸಾಮಾನ್ಯ ಸತ್ಯ ನಮಗೆ ತೀರ ಹೊಸದಲ್ಲ; ಅದರ ವಿವರಗಳಷ್ಟೇ ಹೊಸದಾಗಿವೆ. ಭೌತಶಾಸ್ತ್ರದ "ರಿಲೇಟಿವಿಟಿ" (ಸಾಪೇಕ್ಷತಾವಾದ) ಮತ್ತು "ಇಂಡಿಟರ್‌ಮಿನೆಸಿ" (ಅನಿಷ್ಕೃಷ್ಟ ಊಹ್ಯತಾವಾದ)ಗಳು ವೇದಾಂತದ (ಮಾಯಾ) ವಿವರ್ತವಾದದಲ್ಲಿ ಸಾರತಃ ಅಡಕವಾಗಿವೆ. ಪ್ರಪಂಚವು dependent or relative truth ಅಧೀನ ಅಥವಾ ಪರಸ್ಪರಾವಲಂಬಿ ಪದಾರ್ಥಗಳಿಂದ ಕೂಡಿದ್ದು – ಎಂಬ ತತ್ವಾರ್ಥ, ಹಾಗೇ ಕಾಲ ದೇಶಗಳು ವ್ಯವಹಾರಿಕ ಸತ್ಯಗಳು – ಎಂಬ ತತ್ವಾರ್ಥ ನ್ಯಾಯ ವೈಶೇಷಿಕಕ್ಕೂ ವೇದಾಂತಕ್ಕೂ ಸಾಧಾರಣ. ಆದರೆ ಕಾಲವು ದೇಶದ ಉದ್ದ, ಅಗಲ, ಎತ್ತರಗಳ ಜೊತೆಗೆ ನಾಲ್ಕನೆಯ ಅಳತೆ ಎಂಬುದನ್ನು ಹೇಳಿದ್ದಿಲ್ಲ. ಜಗತ್ತಿನಲ್ಲಿರುವುವೆಲ್ಲಾ Events ಆದಿಮಧ್ಯಾಂತಗಳನ್ನುಳ್ಳ ದೇಶಕಾಲಾವಚ್ಛಿನ್ನ ಘಟನೆಗಳು ಎಂಬುದು ನಮಗೆ ಹೊಸ ಸತ್ಯವಲ್ಲ. ಬೌದ್ಧರ ಕ್ಷಣಭಂಗವಾದವೂ ವೇದಾಂತವೂ ಈ ಸತ್ಯವನ್ನು ಆಗಲೇ ಸಾರಿವೆ. ಅಣು–ರೇಣು–ತೃಣ ಕಾಷ್ಠಗಳೆಲ್ಲವೂ ಪ್ರತಿಕ್ಷಣ

ಬದಲಾಗತಕ್ಕಂಥ ನಶ್ವರ ಪದಾರ್ಥಗಳೆಂಬುದು ಭಾರತದಲ್ಲಿ ಸುಪ್ರಸಿದ್ಧ. ಐನ್‌ಸ್ಟೀನನ ಸಾಪೇಕ್ಷತಾವಾದವು ಕಾಲದ ಬಗ್ಗೆ ಹೊಸ ಕಲ್ಪನೆಯನ್ನು ಕೊಟ್ಟು ಜೀವನದ ದೃಷ್ಟಿಕೋನವನ್ನು ಜಗತ್ತಿನ ಜನರಲ್ಲಿ ಬದಲಾಯಿಸಿತೆಂಬ ವಿಮರ್ಶಕನ ಅಭಿಪ್ರಾಯ ಅವಾಸ್ತವಿಕವಾದುದು.

ಸಾಂಸ್ಕೃತಿಕ ದೃಷ್ಟಿಯಿಂದ ವಿಜ್ಞಾನದ ಹೆಸರಿನಲ್ಲಿ ಮಾಡಿದ ಪ್ರಚಾರದಿಂದ ಪಾಶ್ಚಾತ್ಯರಲ್ಲಿ ಕೆಲವರು (೧) ದೇವರಿಲ್ಲ, (೨) ಆತ್ಯಂತಿಕ ಸತ್ಯವಿಲ್ಲ, (೩) ಮತಧರ್ಮಾಚಾರಕ್ಕೆ ಬೆಲೆ ಇಲ್ಲ, (೪) ಬಾಹ್ಯ ಪ್ರಪಂಚವೆಲ್ಲವೂ ಭೌತದ ಜಡಶಕ್ತಿಯ ಯಾಂತ್ರಿಕ ನಿಯಮಗಳಿಗೊಳಪಟ್ಟದ್ದು, (೫) ಜಗತ್ತಿನ ಮೂಲದ್ರವ್ಯ ಎಂದೋ ಒಂದು ದಿನ ಅಕಸ್ಮಾತ್ತಾಗಿ ಹುಟ್ಟಿತು – ಎಲ್ಲಿಂದಲೋ ಗೊತ್ತಿಲ್ಲ – ಆಮೇಲೆ ಇಂದಿನ ರೂಪಕ್ಕೆ ಕ್ರಮೇಣ ವಿಕಾಸ ಹೊಂದಿತು, (೬) ಜೀವಶಕ್ತಿ – ಜ್ಞಾನಶಕ್ತಿಗಳು ಸಹ ಈ ಜಡಶಕ್ತಿಯ ಮೂಲ, (೯) ಈ ಪದಾರ್ಥಗಳೆಲ್ಲವೂ "ಬಲಿಷ್ಠನಿಗೆ ಮಾತ್ರ ಬದುಕುವ ಹಕ್ಕು", ಎಂಬ ನ್ಯಾಯಕ್ಕೆ ಒಳಪಟ್ಟಿವೆ, (೧೦) ನಮ್ಮ ನೀತಿ ನಡತೆಗಳು ಮನುಷ್ಯಕೃತ ಸಂಪ್ರದಾಯಗಳಿಂದ ಬದಲಾಗುತ್ತ ಸದ್ಯದ ರೂಪಕ್ಕೆ ಬಂದಂಥವು, ಅವುಗಳೇನು ಸ್ಥಿರ ಸತ್ಯಗಳಲ್ಲ, ಅವೆಲ್ಲವೂ Irrational ವಿಚಾರಗಳಿಗೆ ಅಸಂಬದ್ಧವಾದಂಥವುಗಳು, ಆದರೂ ಸಮಾಜಹಿತ ದೃಷ್ಟಿ – ವ್ಯಕ್ತಿಹಿತದೃಷ್ಟಿಗಳಿಂದ ಅವುಗಳಂತೆ ನಾವು ವರ್ತಿಸಲು ನಿರ್ಧರಿಸುವುದು ಅಗತ್ಯವಲ್ಲವೆಂದು ಹೇಳಲು ಸಾಧ್ಯವಿಲ್ಲ, ಅದು ದೇಶಕಾಲಾನುಗುಣವಾಗಿ ಬದಲಾಗುವಂಥವು, (೧೧) ವಿಜ್ಞಾನವು ಜೀವನದ ಮೌಲ್ಯಗಳನ್ನು ಬದಲಾಯಿಸಬಲ್ಲುದು – ವಿಜ್ಞಾನ ಭಕ್ತರು ಹೀಗೆ ಏನೇನೋ ಹೊಸ ರೂಪಗಳನ್ನು ತಾಳುತ್ತಾ ಹೋಗಬಹುದು, (೧೨) ಹಳೆಯ ಮೌಲ್ಯಗಳು ಯಾವಾಗಲೂ ಉಳಿಯವು, (೧೩) ಕೆಲವೊಮ್ಮೆ ಕವಿಗಳು ವ್ಯಕ್ತಿನಿಷ್ಠ (ಸ್ವನಿಷ್ಠ subjective) ಎನ್ನಿಸಬಹುದಾದರೂ ಕೆಲ ಅಸಾಧಾರಣ ಸತ್ಯಗಳನ್ನು ಕಂಡು ಅಪರ್ಯಾಪ್ತ ಭಾಷೆಯಿಂದ ಹೇಳಬಹುದು, (೧೪) ಅಂಥವುಗಳನ್ನು ಮೆಚ್ಚಿದ್ದೇವೆಂದುಕೊಳ್ಳುವುದು ರಸಿಕತೆ, ಸಂಸ್ಕೃತಿಯ ಉನ್ನತಿ, (೧೫) ಸತ್ತಮೇಲೆ ಏನೂ ಇಲ್ಲ – ಎಂದು ಮುಂತಾಗಿ ನಂಬಿಕೊಂಡು ಕಲಹ – ಕೋಲಾಹಲಗಿಳಿಯುವಷ್ಟು ಕಾರ್ಯ ಸಾಧಿಸಲ್ಪಟ್ಟಿದೆ. ಈ ಮೂಢ ನಂಬಿಗೆಗಳನ್ನು ಸ್ವೀಕರಿಸಿದ ಕೆಲ ಭಾರತೀಯರೂ ತಾವು ಮಿಕ್ಕವರಿಗಿಂತ ಮುಂದುವರಿದ್ದೇವೆ – ಎಂದು ಆತ್ಮವಂಚನೆ ಮಾಡಿಕೊಂಡು ಜಂಭಕೊಚ್ಚಲು ಕಲಿತಿದ್ದಾರೆ. ಇದಕ್ಕಿಂತ ಹೆಚ್ಚಿನ ಪ್ರಯೋಜನ ಪಾಶ್ಚಾತ್ಯರು ವ್ಯಾವಹಾರಿಕವಾಗಿ ವಿಜ್ಞಾನದಿಂದ ಪಡೆದಿದ್ದಾರೆ; ನಮ್ಮಲ್ಲಿ ಪಡೆದುಕೊಂಡ ಪ್ರಯೋಜನ ಮಾತ್ರ ಇಷ್ಟೇ! ಇಷ್ಟರಿಂದ "ನವ್ಯಕಾವ್ಯ – ನವ್ಯದೃಷ್ಟಿ" ಪ್ರಚಾರ ಯೋಗ್ಯವಾಗ ಬಹುದೇ ಹೇಗೆಂಬುದನ್ನು ವಿದ್ವಾಂಸರು ಆಳವಾಗಿ ಚಿಂತನ ಮಾಡಿ ಹೇಳಲಿ.

ವಿದೇಶಗಳಲ್ಲಿ ಕೆಲವು ವಿಜ್ಞಾನದಲ್ಲಿ ಮುಂದುವರಿದದ್ದೆಂದರೆ – ಅತಿಕ್ರೂರ ಮಾರಕಾಸ್ತ್ರಗಳನ್ನು ಹೆಚ್ಚಿಸಿಕೊಂಡದ್ದು, ಭೌತಿಕ ಸುಖ ಸಾಧನಗಳನ್ನು ಹೆಚ್ಚು ಮಾಡಿಕೊಂಡದ್ದು, ಅವುಗಳನ್ನು ಬೇಕಾದ ದರಕ್ಕೆ ಪರದೇಶಗಳಿಗೆ ಮಾರಿ ಐಶ್ವರ್ಯವನ್ನು

ವೃದ್ಧಿ ಮಾಡಿಕೊಂಡದ್ದು ಮತ್ತು ತಮ್ಮ ಮನಸ್ಸಿಗೆ ಬಂದ ವಿಚಾರ ವಿಲಾಸಗಳನ್ನು ಯಥೇಷ್ಟವಾಗಿ ಮುದ್ರಿಸಿ ಪರದೇಶಗಳಿಗೆ ಮಾರಿದ್ದು – ಇಷ್ಟೇ. ಅವುಗಳ ಆಂತರಿಕ ಸಾಮಾಜಿಕ ಸಂಘಟಿತತೆಯು ವಿಜ್ಞಾನದಿಂದಾದದ್ದಲ್ಲ – ಮತಧರ್ಮದ ಅಭಿಮಾನದಿಂದ ಮತ್ತು ದೇಶಾಭಿಮಾನ – ಸ್ವಾಭಿಮಾನಗಳಿಂದ ಆದದ್ದು. ಯಾವ Christian Virtue ಕ್ರೈಸ್ತ ನೀತಿ ಅಥವಾ Mahammadan Virtue ಮಹಾಮದೀಯ ನೀತಿಯೂ ವಿಜ್ಞಾನದಿಂದ ಹುಟ್ಟಿಯೇ ಅವರಲ್ಲಿ ಸಹಕಾರ, ಸಂಘಟನೆ, ಸಾಹಸಿಕತೆ, ಅಂತರ್ದೇಶೀಯ ಪ್ರಾಮಾಣಿಕತೆ, ಸಂಶೋಧಕತೆ, ಉದ್ಯಮಶೀಲತೆ, ವ್ಯವಹಾರ ನೈಪುಣ್ಯ, ಆಡಳಿತ ಜಾಣ್ಮೆ ಬೆಳೆಯುವಂತೆ ಮಾಡಿಲ್ಲ. ಹೀಗಿರುವಾಗ Hindu virtue ಹಿಂದು ನೀತಿಯು ವಿಜ್ಞಾನದಲ್ಲಿ ಪುನಃ ಹುಟ್ಟಿ ದ್ವಿಜತ್ವವನ್ನು ಪಡೆಯಬೇಕು, ಹಾಗೆ ಪಡೆದರೆ ಮಾತ್ರ ಅಂಥ ಸುಸಂಘಟಿತತೆಯನ್ನು ಬೆಳೆಯಿಸೀತು – ಎಂದು ನಂಬುವುದು ಮೂಢತನದ ಪರಮಾವಧಿ. ಮೂಲಭೂತ ಹಿಂದು (ಆರ್ಯ) ನೀತಿಯ ಬೆಳವಣಿಗೆಯು ವಿಜ್ಞಾನದ ಬೆಳವಣಿಗೆಗೆ ಅಲ್ಲಿ ಹೇಗೋ ಹಾಗೇ ಇಲ್ಲಿಯೂ ವಿರುದ್ಧವಲ್ಲ. ಮಂದಾಧಿಕಾರಿಗಳಾದ ಹಿಂದುಗಳ ಆ ಈ ಮೂಢನಂಬಿಕೆಗಳು ಹೇಗೋ ಹಾಗೇ ಕ್ರೈಸ್ತರ ಅಥವಾ ಮಹಾಮದೀಯರ ಆ ಈ ಮೂಢನಂಬಿಕೆಗಳು ವಿಜ್ಞಾನಕ್ಕೂ ವೇದಾಂತಕ್ಕೂ ವಿರುದ್ಧವಾದವುಗಳು. ಅವುಗಳ ನಾಶವನ್ನು ವಿಜ್ಞಾನವೂ ಮಾಡಬಹುದು, ವೇದಾಂತವೂ ಮಾಡಬಹುದು.

ಭಾರತದ ಇಂದಿನ ರಾಜಕೀಯ ಪತನದಲ್ಲಿ ಈ ಎರಡೂ ಹಳೆಯ ಕೆಲ ಮಾರಕ ಮೂಢ ನಂಬಿಕೆಗಳೂ ಜೊತೆಗೇ ಕೆಲ ಹೊಸ ಮಾರಕ ಮೂಢನಂಬಿಗೆಗಳನ್ನೂ ಪ್ರಚಾರಕ್ಕೆ ಬಂದಿವೆ. ವಿಜ್ಞಾನಾಭಾಸ, ವೇದಾಂತಾಭಾಸಗಳೆರಡೂ ಸಂಸ್ಕೃತಿ ಮಾರಕಗಳು. ಅವುಗಳು ಸಾಹಿತ್ಯಕ್ಕೆ ಆಹಾರವಾದರೆ ಅಂಥ ಸಾಹಿತ್ಯವೂ ಹಾಗೇ ಮಾರಕ. ಪ್ರತ್ಯಕ್ಷ ಪ್ರಧಾನವಾದ ವೇದಾಂತಗಳು ಪರಸ್ಪರವಾಗಿ ಬೌದ್ಧಿಕ ಮಟ್ಟದಲ್ಲಿ ಶುದ್ಧಿಕಾರಕಗಳಾಗಬಲ್ಲವು. ಆ ಪರಸ್ಪರ ಪೂರಕತೆಯನ್ನು ಶ್ರೀ ಅರವಿಂದರಂಥ ಭಾರತೀಯ ವೇದಾಂತಿಗಳು ಕಂಡುಕೊಂಡಿದ್ದಾರೆ. ಅದು ನಿಜವಾದ ಮುನ್ನಡೆ, ಆಧುನಿಕತೆ, ನವ್ಯತೆ. ಮಾಯೆಗೆ ಅವರು ಕೊಟ್ಟ ವೈಜ್ಞಾನಿಕ ಪರ್ಯಾಯವು ಆಚಾರ್ಯ ಶಂಕರರನ್ನು ಖಂಡಿಸುವುದರ ಬದಲು ಅವರಿಗೆ ಹೊಸ ವಿವರಣೆ ಕೊಟ್ಟಿದೆ ಎಂಬುದು ವಿದಗ್ಧವೇದ್ಯ. ಸರ್.ಎಸ್. ರಾಧಾಕೃಷ್ಣನ್ನರ ವಿಚಾರವನ್ನು ಅರವಿಂದರ ಕೆಲ ವಿಚಾರಗಳಿಗೆ ತಿದ್ದುಪಡಿಯನ್ನಾಗಿ ಜೋಡಿಸುವುದು ಸಾಂಸ್ಕೃತಿಕ ಪೂರ್ಣತೆಯನ್ನು ಸಾಧಿಸಿ ಕೊಡುತ್ತದೆ. ಅರವಿಂದರ ಮಾಯಾರ್ಥವು ಮಧ್ವಾಚಾರ್ಯರ ಮಾಯಾರ್ಥದಿಂದ ಬಹಳ ಭಿನ್ನವಲ್ಲ ಎಂಬುದೂ ಗಮನಾರ್ಹ. ವಿದ್ವಾಂಸರು ಈ ನಾಲ್ಕು ಜನರ ಗ್ರಂಥಗಳಲ್ಲಿ ಯತ್ನಿಸಿದರೆ ದೋಷತ್ಯಾಗದಿಂದ ಗುಣ ಸಮನ್ವಯವನ್ನು ಕಾಣಬಲ್ಲರು.

ಕವಿಗಳಾಗಲಿ, ವಿಮರ್ಶಕರಾಗಲಿ ಚಿಂತಕರಾಗಲಿ, ವಿಜ್ಞಾನಿಗಳಾಗಲಿ, ವೇದಾಂತಿಗಳಾಗಲಿ – ಭಾರತದಲ್ಲಿ ಇಲ್ಲಿಯೂ ಸಾಂಸ್ಕೃತಿಕ ಮುನ್ನಡೆಗೆ ಬೇಕಾದ

ತತ್ವಬೀಜಗಳಿವೆ – ಎಂಬುದನ್ನು ಆಳವಾಗಿ ನೋಡಿದರೆ ಕಂಡೇ ಕಾಣುತ್ತಾರೆ. ಅವುಗಳತ್ತ ಲಕ್ಷ್ಯ ಹಾಕದೆ, ವಿಜ್ಞಾನವನ್ನಲ್ಲ – ಅದರ ಹೆಸರಿನಲ್ಲಿ ಮಾಡಲಾದ ಅಪಪ್ರಚಾರವನ್ನು ನಮ್ಮಲ್ಲಿ ಪ್ರಚುರ ಮಾಡಲು ತೊಡಗುವುದು ಸ್ವಪರ ಹಾನಿಕರ. ಹಾಗೇ ವೇದಾಂತವನ್ನು ಬುದ್ಧಿಬಲದಿಂದ ಮತ್ತು ಭೌತ–ಮನೋ ವಿಜ್ಞಾನಗಳ ಬಲದಿಂದ ಆತ್ಮ ಸಮಾಧಾನಕ್ಕಾಗಿ ತಿಳಿದುಕೊಳ್ಳ ಹೊರಡದೆ ಮತಾಂಧತೆಯಿಂದ ನಂಬಿ ವಿಮರ್ಶಕರನ್ನು ಹೀಗಳೆಯುವುದು ಸ್ವಪರ ಹಾನಿಕರ.

ಆತ್ಯಂತಿಕ ಧ್ಯೇಯ ಎಂದರೆ ಪುರುಷಾರ್ಥಗಳು ಅಥವಾ ಸಿದ್ಧಿಗಳು – ಅವುಗಳಲ್ಲೂ ಪಾರಮಾರ್ಥವು ಯಾವುದಕ್ಕೂ ಸಾಧನವಾಗದು; ಅದು ಶುದ್ಧ (ಪೂರ್ಣ) ಸಿದ್ಧಿ, ವ್ಯಕ್ತಿತ್ವದ ಪೂರ್ಣತೆ, ಪರಮ ಸ್ವಾತಂತ್ರ್ಯ. ಅದಕ್ಕನುಗುಣವಾಗಿಯೇ ಉಳಿದ ಸಿದ್ಧಿಗಳ ಸಾಧನಾಯೋಜನೆ ಇರಬೇಕೆಂಬುದು ಭಾರತೀಯ ವಿಚಾರ. ಅದನ್ನು ಖಂಡಿಸುವ ಶಕ್ತಿ ವಿಜ್ಞಾನಕ್ಕಿಲ್ಲ, ಖಂಡಿಸ ಹೋಗುವುದು ಅದರ ಕೆಲಸವಲ್ಲ. ಪೂರ್ಣ ವ್ಯಕ್ತಿತ್ವವು ವಿಶ್ವಮಾನವ ಭಾವವನ್ನು ಆಧರಿಸಿದೆ ಅಥವಾ ಅದು ವಿಶ್ವಾತ್ಮಕತೆ. ಏಕೆಂದರೆ "ನಾಲ್ಪೇ ಸುಖಮಸ್ತಿ".



# ೩೭. ವಿಜ್ಞಾನ ಮತ್ತು ವೇದಾಂತ

ವಿಜ್ಞಾನವೆಂದರೆ ಯಂತ್ರೋಪಕರಣಗಳು, ಪ್ರಕೃತಿಯೆಂದರೆ ಮರಗಿಡಬಳ್ಳಿಗಳು, ಜೀವನವೆಂದರೆ ಹೇಗಾದರೂ ಷೋಕಿ ಮಾಡಿಕೊಂಡಿರುವುದು ವೇದಾಂತವೆಂದರೆ ಕಾವಿಶಾಠಿ ಧರಿಸಿ ಸನ್ಯಾಸಿಯಾಗಿ ಮನೆಬಿಟ್ಟು ಹೋಗುವದು ಎಂದು ಹಲವರು ಭಾವಿಸಿದಂತೆ ತೋರುತ್ತದೆ.

ವಿಜ್ಞಾನವು ಹೊರಜಗತ್ತಿನ ಒಳವರ್ಮದ ಸೂತ್ರಗಳನ್ನು ಶೋಧಿಸುತ್ತದೆ, ಐಹಿಕ ಜೀವನವನ್ನು ಚೆನ್ನಾಗಿ ನಡೆಸಲು ಸೌಕರ್ಯವನ್ನು ಒದಗಿಸಿಕೊಡುತ್ತದೆ. ವೇದಾಂತವು ಐಹಿಕ ಜೀವನಕ್ಕೆ ಆಧಾರಭೂತವಾದ ವಿಶ್ವ ಮಾನವ ಸೂತ್ರವನ್ನು ಮಾರ್ಮಿಕವಾಗಿ ಮನುಷ್ಯನು ತನ್ನಲ್ಲಿಯೇ ತಾನು ಕಂಡುಕೊಳ್ಳುವ ಧ್ಯೇಯವನ್ನೂ ಧ್ಯೇಯ ಸಾಧನ ವಿಧಾನವನ್ನೂ ನಮ್ಮ ಮುಂದಿಡುತ್ತದೆ. ಇವೆರಡೂ ಪರಸ್ಪರ ಪೂರಕಗಳು. ಐನ್‌ಸ್ಟೀನ್ ಹೇಳಿದ ವಿಜ್ಞಾನವಿಲ್ಲದ ಧರ್ಮವು ಕುರುಡು. ಧರ್ಮವಿಲ್ಲದ ವಿಜ್ಞಾನವು ಕುಂಟು ಎಂದು. ವಿಜ್ಞಾನ ವೇದಾಂತಗಳ್ಲಲಿ ಸಕಲ ಶಾಸ್ತ್ರಗಳೂ ಅಡಕವಾಗುತ್ತವೆ. ವಿಜ್ಞಾನವು ವ್ಯವಹಾರಿಕ, ವೇದಾಂತವು ಪಾರಮಾರ್ಥಿಕ. ವ್ಯವಹಾರದ ಧ್ಯೇಯಗಳು ತಾತ್ಕಾಲಿಕ, ಪಾರಮಾರ್ಥಿಕ ಧ್ಯೇಯವು ಸಾರ್ವಕಾಲಿಕ. ಇವು Variables ಬದಲುವ ಅಂಶಗಳಿಂದ ಮತ್ತು ಬದಲದ ಅಂಶದಿಂದ ಅನುಕ್ರಮವಾಗಿ ಕೂಡಿವೆ. ಬದಲದ (constant) ಅಂಶವು ಬದಲಾಗುವವುಗಳಿಗೆ ಆಧಾರ. ಒಂದು ಅವ್ಯಕ್ತ, ಇನ್ನೊಂದು ವ್ಯಕ್ತ.

ವ್ಯಕ್ತವೆಲ್ಲವೂ ಅಪೂರ್ಣ; ಅವ್ಯಕ್ತವು ಪೂರ್ಣ. ಮನುಷ್ಯನು ನಿಸರ್ಗಾಂತರ್ಗತ. ನಿತ್ಯಸತ್ಯದ ಸ್ವಭಾವ, ಇಚ್ಛೆ ವ್ಯವಹಾರದ ಗುರಿ ನೂರಾದರೆ, ವೇದಾಂತದ ಗುರಿ ಸಾವಿರ. ನಾವು ಸೂರ್ಯಾಧೀನ ಜೀವಿಗಳಾದರೆ ಸೂರ್ಯನು ಅವ್ಯಕ್ತ ಸೂರ್ಯನಿಗಧೀನ. ವಿಜ್ಞಾನದ ಪ್ರಕಾರ ಬಾಹ್ಯ ಪದಾರ್ಥಗಳೆಲ್ಲವುಗಳ ತಂದೆ ಎನರ್ಜಿಭೌತ (ವಿದ್ಯುತ್ಸಮ) ಶಕ್ತಿ. ವೇದಾಂತದ ಪ್ರಕಾರ ಪರಮ ಸತ್ಯವು ಅದರ ತಂದೆ. ಆ ತಂದೆಗೆ ತಂದೆಯಿಲ್ಲ. ಅವನು ಸ್ವಯಂಭು. ಅವನು Amorphous. ನಿರಾಕಾರನಾಗಿದ್ದು ಬೇಕಾದಾಗ ಬೇಕಾದ ಆಕೃತಿಯನ್ನು ತಾಳಬಲ್ಲವನು. ಮಾಯಾವಿ, ಪರಮಾನಂದ. ೧೦ರಲ್ಲಿ ೮ ಸಲ ಮುಂದಾಗುವುದೇನೆಂಬುದನ್ನು ವಿಜ್ಞಾನವು ಹೇಳಬಲ್ಲುದು. ಉಳಿದೆರಡು ಸಲದ ಭವಿಷ್ಯವು ವೇದಾಂತಾಧೀನ. ವೇದಾಂತ ಕೇಸರಿಯು ಸ್ವೇಚ್ಛಾಕೇಸರಿ. ಆದುದರಿಂದ ಕಾರ್ಯ ಕಾರಣ ನಿಯಮಗಳ ಕರ್ತನಾದರೂ ಅದರಿಂದ ಅವನು ಬದ್ಧನಲ್ಲ.

ಈ ಪರಮಸತ್ಯದ ಹೆದರಿಕೆ ಇಲ್ಲವಾದರೆ ವಿಜ್ಞಾನಿಗಳು ಖುಷಿ ಬಂದಂತೆ ಮಾಡ ಹೊರಟು ರಚನಾತ್ಮಕತೆಯನ್ನು ಬಿಟ್ಟು ರಾಜಕೀಯ ಆಮಿಷಗಳಿಗೆ ಬಲಿಯಾಗಿ ವಿಧ್ವಂಸಕ

ಕಾರ್ಯಗಳಿಗೆ ಕಾರಣರಾಗುತ್ತಾರೆ – ಆಗುತ್ತಿದ್ದಾರೆ. ಪರಮಾಣು ಶಸ್ತ್ರಾಸ್ತ್ರಗಳ ಉತ್ಪಾದನೆ ಸಂಗ್ರಹ ಮತ್ತು ಮಾರಾಟ ಹಾಗೂ ಪ್ರಯೋಗಗಳು ರಾಜಕೀಯ ರಾವಣರ ಮಂತ್ರಿಗಳಿಗೊಳಗಾದ ವಿಜ್ಞಾನಿಗಳಿಂದಲೇ ಆಗಿದೆ. ಅಂಥ ಐಷಾರಾಮಪ್ರಿಯರು ಅಲ್ಪಸಂಖ್ಯಾತರಾದ ರಾಜಕೀಯ ವ್ಯಾಪಾರಿಗಳ ಆಳಾಗಿ ಜಗತ್ತಿನ ಅಶಾಂತಿಪರ್ವವನ್ನು ಬರೆಯುತ್ತಾರೆ. ಅಂಥವರು ಅಸಾಮಾಜಿಕರು Anti Social. ಅವರು ಗಾಂಧಿಯವರು out of date ಸದ್ಯದ ಕಾಲಕ್ಕೆ ಬೇಕಾದವರಲ್ಲ ಎಂದು ಸಾರುತ್ತಾರೆ. ಗಾಂಧಿಯವರ ಅನುಯಾಯಿಗಳು ತಾಮಸ ರಾಜಕೀಯ ವಿಜ್ಞಾನಿಗಳನ್ನು ಮಾನವ ಶತ್ರುಗಳೆನ್ನುತ್ತಾರೆ.

ವಿಜ್ಞಾನಿಗಳಿಗೆ Nature ನಿಸರ್ಗ ಎಂದರೆ ತರ್ಕಶುದ್ಧವಾಗಿ ಗೊತ್ತಿಲ್ಲ ತರ್ಕದ ಮೂಲಸೂತ್ರಕ್ಕೆ objective proofs ಪರತಃ ಪ್ರಾಮಾಣ್ಯಗಳಿಲ್ಲವೆಂಬುದು ಗೊತ್ತಿದೆ. ಆದ್ದರಿಂದ ಘೋಷವಾರೆಯಿಂದ Historical Forces, Natural Geographical Forces ಐತಿಹಾಸಿಕದ ಶಕ್ತಿಗಳು ಪ್ರಾಕೃತಿಕ ಶಕ್ತಿಗಳು ಯಾ ಭೌಗೋಳಿಕ ಶಕ್ತಿಗಳು ಎಂದು ಆಕಸ್ಮಿಕಗಳೆಲ್ಲವುಗಳಿಗೂ ವಿವರಣೆ ನೀಡುತ್ತಾರೆ. ಈ ಮೂರು ಶಬ್ದಗಳಿಗೂ ಒಂದೇ ಅರ್ಥ chance ಕಾಕತಾಳೀಯ ಎಂದು ಆದುದರಿಂದ ಮನುಷ್ಯ ಪ್ರಯತ್ನಗಳಿಗೆ ಅಜ್ಞಾತ ಶಕ್ತಿ (ದೇವರು, ಪರಮ ಸತ್ಯ ನೆರವಿತ್ತರೆ ಮಾತ್ರ ಅವು ಯಶಸ್ವಿಯಾಗುತ್ತವೆ. ಅದು ಅಬಾಧಿತ ಸತ್ಯ, ಅಪವಾದವಿಲ್ಲದ ಉತ್ಸರ್ಗ.

ಈ ಸತ್ಯವನ್ನು ಗೌರವಿಸದವರು ಹೆಚ್ಚಾಗಿ ಅನೀತಿವಂತರಾಗುತ್ತಾರೆ. ಅನೀತಿವಂತರು ಸಮಾಜಕಂಟಕರು; ಸ್ವೈರವೃತ್ತಿಗಿಳಿದು ಪರರಿಗೆ ಅಸಂತೋಷವನ್ನು ಉಂಟು ಮಾಡುವವರು. ಅವರ ಶಿಕ್ಷಣಕ್ಕೆ ವೇದಾಂತ ನೀತಿಪರತೆಯು ಅವಿಭಾಜ್ಯ ಅಂಗವಾಗಿರಬೇಕು. ಹಾಗಿರದುದರಿಂದಲೇ ಪ್ರಕಟ ಅಥವಾ ಪಚ್ಛನ್ನನೀತಿರಹಿತರು. ಶಾಲೆ, ಕಾಲೇಜು, ಮನೆ, ಮಠ, ಆಫೀಸು, ಅಂಗಡಿ, ಸಂತೆ, ಬಜಾರ, ಸಂಘ, ಸಂಸ್ಥೆಗಲ್ಲಿ ಸ್ವಾರ್ಥಕ್ಕಾಗಿ ಅನ್ಯಾಯ ಮಾಡುತ್ತಾರೆ. ಆಷಾಢಭೂತಿ ವೇದಾಂತಿಗಳಿಗಿಂತ ಈ ನೀಚರು ಉತ್ತಮರು. ಆದರೆ ಅಂತ್ಯದಲ್ಲಿ ಇವರೂ ಅವರಂತೆಯೇ ಸಮಾಜ ಘಾತಕರಾಗುವರು.

ಮನಸ್ಸು ಮರ್ಕಟ, ಅದನ್ನು ವಿಜ್ಞಾನದ ಹಗ್ಗವು ಸಭ್ಯ ಶಿಸ್ತಿಗೊಳಪಡಿಸಲಾರದು. ವಿಜ್ಞಾನವು ಬುದ್ಧಿಯನ್ನು ಬೆಳೆಯಿಸೀತು. ಮನಸ್ಸನ್ನು ಪರಹಿಂಸಾವಿಮುಖವನ್ನಾಗಿ ಮಾಡಲು ವೇದಾಂತ ನೀತಿಯ ಗುರ್ವಾಜ್ಞೆಯೇ ಬೇಕು. ಯಾವುದು, ಯಾವಾಗ, ಹೇಗೆ, ಎಷ್ಟು ಯಾರಿಗೆ ಹಿಂಸಾಕರ? ಎಂಬುದನ್ನು ವಿಜ್ಞಾನ ತರ್ಕದಿಂದ ತಿಳಿಯಬಹುದಾದರೂ ಆ ತಿಳಿವಳಿಕೆಯನ್ನು ಆಚರಣೆಗೆ ತರುವಾಗ ಬೇಕಾದ ಮನಃಸಂಕಲ್ಪವನ್ನು ಸುಭದ್ರವಾಗಿ ನೆಲೆ ನಿಲ್ಲಿಸಲು ವಿಜ್ಞಾನ ಬುದ್ಧಿಯ ಶಕ್ತಿ ಸಾಲದು. ಅದಕ್ಕೆ ವೇದಾಂತ ಸಂಸ್ಕಾರವೇ ಬೇಕು. ಅರ್ಥ–ಕಾಮಗಳು ವಿಜ್ಞಾನದ ಕಕ್ಷೆಗೆ ಸೇರಿದ ಪುರುಷಾರ್ಥಗಳು; ಧರ್ಮ–ಮೋಕ್ಷಗಳು ವೇದಾಂತದ ಕಕ್ಷೆಗೆ ಸೇರಿದ ಪುರುಷಾರ್ಥಗಳು. ಆದುದರಿಂದ ಜಗತ್ತಿನ ಸಂಸ್ಕೃತಿ–ನಾಗರಿಕತೆ ಆಳವನ್ನರಿತವರಲ್ಲಿ ಅಗ್ರೇಸರರಾದ ವ್ಯಾಸ

ಮಹರ್ಷಿಗಳು ಅರ್ಥ–ಕಾಮಗಳನ್ನು ಧರ್ಮಾಧೀನರಾಗಿಯೇ ಜನರು ಸಾಧಿಸಿಕೊಳ್ಳಬೇಕು ಎಂದಿದ್ದಾರೆ. ಅವರ ಮಾತನ್ನು ಕೇಳದೆ ಹಿಂದುಸ್ತಾನವು ಹಿಂದುಳಿದಿದೆ: "ಥರ್ಡ್‌ವರ್ಲ್ಡ್" ಎನ್ನಿಸಿಕೊಂಡಿದೆ.

ಎಲ್ಲವುದರಲ್ಲೂ ನಮಗಿಂತ ಬುದ್ಧಿವಂತರು ಹಿಂದೆ ಯಾರೂ ಇರಲಿಲ್ಲ ಎಂದು ತಿಳಿದುಕೊಂಡವರು ಅತ್ಯಂತ ಬುದ್ಧಿಹೀನರು. ಅವರು ಸ್ವ–ಪರಹಾನಿಕಾರಕರು ಮಾನವ ಕುಲವನ್ನು ಕೆಡಿಸಿ ಹಾಳು ಮಾಡುವ ಮೂಢ, ಮೂರ್ಖ, ಗಾರ್ದಭರು. ಅಂಥವರನ್ನು ಸಾಕುವ ದೇಶವು ಅತ್ಯಂತ ಹೀನವಾದುದು. ರೋನಾಲ್ಡ್ ರೀಗನ್ನನನ್ನು ಪಟ್ಟಕೇರಿಸಿದ ಅಮೇರಿಕ ಅಂಥ ಹೀನ ದೇಶ. ಹಾಗೇ ಜಿಯಾವುಲ್ ಹಕ್ಕನನ್ನು ಹತ್ತಿಕ್ಕಲಾರದ ಜನತೆ ಅತ್ಯಂತ ಹೀನ.

ವಿಜ್ಞಾನವಾಗಲಿ, ವೇದಾಂತವಾಗಲಿ ಕೇವಲ ಬಾಯಿಪಾಠದ ಮೂಲಕ ಯಾವ ಉಪಕಾರವನ್ನೂ ಮಾಡದು, ಆಡಿದಂತೆ ಮಾಡಿದ ಮೇಲೆಯೇ ಅವುಗಳ ನಿಜವಾದ ಪ್ರಯೋಜನವು ಮನುಷ್ಯರಿಗೆ ಸಿಕ್ಕುತ್ತದೆ. ತನಗೆ ಮಾತ್ರ ಪ್ರಯೋಜನ ಸಿಗಬೇಕು, ಪರರಿಗೆ ಸಿಗಬಾರದು – ಎಂಬವನು ಗೌರವಾರ್ಹ ವಿಜ್ಞಾನಿಯೂ ಅಲ್ಲ ವೇದಾಂತಿಯೂ ಅಲ್ಲ – ನಾಗರಿಕ ಮನುಷ್ಯನೇ ಅಲ್ಲ ಅಂಥವನನ್ನು ನಾವು ಬಹಿಷ್ಕರಿಸಬೇಕು, ಅದರಿಂದಲೇ ನಮಗೆ ಸ್ವಾಸ್ಥ್ಯವು ಲಭ್ಯ.



**['ಕಡಲ ಧ್ವನಿ' – ನವೆಂಬರ್ ೧೯೮೩, ಪುಟ ೫]**

# ೩೮. ಭಾರತೀಯ ಸಂಸ್ಕೃತಿಯಲ್ಲಿ "ಯೋಗ"

ಭಾರತೀಯ ವಾಙ್ಮಯದಲ್ಲಿ ಯೋಗಶಾಸ್ತ್ರದ ಸ್ಥಾನವು ದೊಡ್ಡದು. ನೊಗ ಕಟ್ಟುವುದು, ಅಸಾಧಿತವನ್ನು ಸಾಧಿಸುವುದು, ಸಂಬಂಧಿಸುವುದು ಮುಂತಾದ ವಿವಿಧ ಅರ್ಥಗಳಲ್ಲಿ 'ಯೋಗ' ಎಂಬ ಪದವನ್ನು ಋಗ್ವೇದದಲ್ಲಿ ಬಳಸಲಾಗಿದೆ. ಭಾರತದ ಒಕ್ಕೂಟವಿಂದು ಒಂದು ಯೋಗ(ಯೂನಿಯನ್). 'ಯುಜಿರ್' ಎಂಬ ಧಾತುವಿಗೆ ಕೂಡು, ಒಂದಾಗು, ಐಕ್ಯ ಸಂಬಂಧ ಹೊಂದು ಎಂಬ ಅರ್ಥ ಇರುವುದು ಒಕ್ಕೂಟವನ್ನು ಸಮರ್ಥಿಸುತ್ತದೆ. ಇದರಿಂದ 'ಯುಜ್' ಎಂಬ ಧಾತುವಿಗೆ ಸಮಾಧಿ ಹೊಂದು ಎಂಬ ಅರ್ಥವಿರುವುದು ಸಮಾಧಾನಕರವಾಗುತ್ತದೆ. ಭಾರತದ ಐಕ್ಯವು ನಮಗಿಂದು ಸಮಾಧಾನಕರ. ರಾಜಕೀಯವಾದ ಈ ಐಕ್ಯವನ್ನಿಂದು ಹಾರ್ದಿಕ ಐಕ್ಯದ ಮಟ್ಟಕ್ಕೇರಿಸಬೇಕಾಗಿದೆ. ಇದೇ ಇಂದು ನಮ್ಮ ಮುಂದಿರುವ ಭಾವನೈಕ್ಯದ (Emotional Integration) ಪ್ರಶ್ನೆ.

ವಿಶ್ವಾತ್ಮನಲ್ಲಿ ಭಕ್ತಾತ್ಮ ಐಕ್ಯ ಹೊಂದಲು ಅಗತ್ಯವಾದ ಸಮಾಧಿ ಪಡೆಯುವ ವಿಧಾನವೆಂಬ ಪಾರಿಭಾಷಿಕ ಅರ್ಥವು 'ಯೋಗ' ಪದಕ್ಕೆ ಕ್ರಿ.ಪೂ. ೪ನೆಯ ಅಥವಾ ೫ನೆಯ ಶತಮಾನದಲ್ಲೇ ಪ್ರಾಪ್ತವಾಗಿತ್ತು. ಇದಕ್ಕೂ ಹಿಂದೆ ಇಂಥ ಯೋಗದ ಯೋಕ್ತಾರನು 'ಪ್ರಜಾಪತಿ' ಎಂದು ಶತಪಥ ಬ್ರಾಹ್ಮಣ ಹೇಳಿದೆ.

ಭಗವದ್ಗೀತೆಯು ಯೋಗಿಯನ್ನು ಅತಿಯಾಗಿ ಹೊಗಳುವಲ್ಲಿ ಸಮಾಧಿಯಲ್ಲಿ ಮೈಮರೆತವನೆಂಬ ಅರ್ಥವನ್ನು 'ಯೋಗಿ' ಪದಕ್ಕೆ ಕೊಟ್ಟಿದೆ. ಆದರೆ ಅಂಥ ಯೋಗಿಯು ನಿಷ್ಕಾಮಕರ್ಮಿಯಾಗಬಹುದೆಂದೂ ಉಲ್ಲೇಖಿಸಿದೆ. ಈ ಯೋಗಿತ್ವದಲ್ಲಿ ನಿವೃತ್ತಿಪರವಾದ (ಪಾತಂಜಲ ಯೋಗಸಹಜವಾದ) ಅಷ್ಟಾಂಗ ಯೋಗದ ಮಾನಸಿಕ ಸಿದ್ಧಿಯೂ, ಪ್ರವೃತ್ತಿ ಪರವಾದ ವೈದಿಕ ಕರ್ಮಯೋಗದ ವ್ಯಾವಹಾರಿಕ ಸಿದ್ಧಿಯೂ ಕೂಡಿದೆ. ಕರ್ತವ್ಯಗಳನ್ನು ಬಿಡದೆ, ಬಯಕೆಗಳಿಗೆ ಸಂಬಂಧಿಸಿದ ಎಲ್ಲ ಸ್ವಾರ್ಥಪರ ಗುರಿಗಳಿಂದಲೂ ದೂರ ಉಳಿದಿರುವುದು ಗೀತಾಯೋಗಿಯ ಲಕ್ಷಣ.

## ಅತಿ ಪ್ರಾಚೀನ

ಆತ್ಮನಿಷ್ಠವಾದ ಧ್ಯಾನದ ಮೂಲಕ ಯೋಗಸಮಾಧಿ ಹೊಂದುವ ಅಥವಾ ಅನುಭಾವಲೀನವಾಗುವ ವಿಚಾರವು ಬುದ್ಧನ ಕಾಲಕ್ಕಿಂತಲೂ ಹಿಂದೆ ಇತ್ತೆಂದು ಕಂಡುಬರುತ್ತದೆ. ಸತಿ ಪಟ್ಠಾನ ಸುತ್ತವೆಂಬ ಅತ್ಯಂತ ಪ್ರಾಚೀನವಾದ ಬೌದ್ಧ ಸೂತ್ರವು ಯೋಗಶಾಸ್ತ್ರವನ್ನು ಉಲ್ಲೇಖಿಸುತ್ತದೆ. ಮೈತ್ರಾಯಣಿ, ಶ್ವೇತಾಶ್ವತಕ ಮತ್ತು ಕಾಠಕ ಉಪನಿಷತ್ತುಗಳಲ್ಲಿ ಯೋಗಾಭ್ಯಾಸದ ವಿಚಾರ ಬಂದಿದೆ. ಶಾಂಡಿಲ್ಯ, ಯೋಗತತ್ವ,

ಧ್ಯಾನಬಿಂದುಹಂಸ, ಅಮೃತನಾದ, ವರಾಹ, ಮಂಡಲ, ಬ್ರಾಹ್ಮಣ, ನಾದಬಿಂದು ಮತ್ತು ಯೋಗಕುಂಡಲಿ ಎಂಬ ಉಪನಿಷತ್ತುಗಳಲ್ಲಿ ಯೋಗಾಭ್ಯಾಸದ ವಿವಿಧ ಪದ್ಧತಿಗಳನ್ನು ಕಾಣಬಹುದು.

ಯೋಗತತ್ತ್ವೋಪನಿಷತ್ತಿನ ಪ್ರಕಾರ – ಮಂತ್ರಯೋಗ, ಲಯಯೋಗ, ಹಠಯೋಗ ಮತ್ತು ರಾಜಯೋಗ ಎಂದು ಯೋಗವು ನಾಲ್ಕು ವಿಧ. ಯೋಗ ಶಬ್ದದ ಜನಪ್ರಿಯತೆ ಹೆಚ್ಚಾಗಿ ಕೊನೆಗೆ ಕರ್ಮಯೋಗ, ಭಕ್ತಿಯೋಗ, ರಾಜಯೋಗ ಮತ್ತು ಜ್ಞಾನಯೋಗಗಳೆಂಬ ಮತ್ತೊಂದು ಯೋಗ ಚತುಷ್ಟಯವೂ ಜನಪ್ರಸಿದ್ಧವಾದುದು ಎಲ್ಲರಿಗೂ ತಿಳಿದ ಸಂಗತಿ.

ಭಾರತದ ಷಡ್ದರ್ಶನಗಳಲ್ಲಿ ಒಂದಾದ ಯೋಗದ ಮೊದಲ ಮೂರು ಅಧ್ಯಾಯಗಳು ಕ್ರಿ.ಪೂ. ೨ನೆಯ ಶತಮಾನದಲ್ಲಿ ರಚಿತವೆಂದು ನಂಬಲಾಗಿದೆ. ಅದರಿಂದ ಮತ್ತು ಇತರ ಸಾಮ್ಯಾಂಶಗಳಿಂದ ಪಾಣಿನಿಯ ಅಷ್ಟಾಧ್ಯಾಯಿಗೆ ಮಹಾಭಾಷ್ಯವನ್ನು ಬರೆದ ಪತಂಜಲಿಯೂ, ಯೋಗಶಾಸ್ತ್ರಕಾರನಾದ ಪತಂಜಲಿಯೂ ಒಬ್ಬನೇ ಎಂದೂ ತರ್ಕಿಸಲಾಗಿದೆ.

## ಯೋಗದ ವಿವರಣೆ

ಚಿತ್ತದ ವೃತ್ತಿಯನ್ನು ನಿರೋಧಿಸುವುದು ಯೋಗವೆಂದು ಪತಂಜಲಿಯು ಸೂತ್ರಿಸಿದ್ದಾನೆ. ಚಿತ್ತವೆಂದರೆ ಸಾಂಖ್ಯಶಾಸ್ತ್ರದಲ್ಲಿ ಹೇಳಲಾದ ಬುದ್ಧಿ. ಅದರಲ್ಲಿ ಸತ್ವಾಂಶವು ಅಧಿಕ. ನಮ್ಮ ಭಾವನಾತ್ಮಕ ಅಥವಾ ಸಂಕಲ್ಪಾತ್ಮಕ ಮಾನಸ ವ್ಯಾಪಾರಗಳೂ ಎಲ್ಲ ವಿಚಾರಗಳೂ ಅದರ ರೂಪಾಂತರಗಳು. ವ್ಯಕ್ತಿನಿಷ್ಠವಾಗಿ ಚಿತ್ತವು ಇಂದ್ರಿಯ ಶಕ್ತಿಗಳಾಗಿಯೂ, ವಸ್ತುನಿಷ್ಠವಾಗಿ ಇಂದ್ರಿಯಗಾಹ್ಯವಾದ ಪದಾರ್ಥಗಳಾಗಿಯೂ ಇದೆ. ಅದು ಸ್ವರೂಪತಃ ಪ್ರಜ್ಞಾಭಿನ್ನ (Non-intelligent). ಅದರ ವೃತ್ತಿ ಅಥವಾ ವರ್ತನೆಯನ್ನು ತಡೆದುಬಿಡುವುದೇ ಯೋಗಾಭ್ಯಾಸ. ಸತ್ವ, ರಜಸ್, ತಮಸ್ಸುಗಳು ಜೀವನದ ಸಾರಭೂತವಾದ ಭಾವನಾಂಶದ ಮಾದರಿಗಳು (Feeling entities). ಯೋಗ ತತ್ವಜ್ಞಾನದ ಆದಿಮೂಲವನ್ನು ಮೈತ್ರಾಯಣಿ ಉಪನಿಷತ್ತಿನಲ್ಲಿ ಕಾಣಬಹುದು:

ಪ್ರಕೃತಿಯ ಭೇದಗಳ ಮೂಲಕ ಗುಣವು ಸಂಕಲ್ಪದ (will) ಆಳಾಗುತ್ತದೆ. ಪುರುಷನು ಮನದ ಮೂಲಕ ನೋಡುತ್ತಾನೆ. ಸಂಕಲ್ಪದ ದೋಷವನ್ನು ಪರಿಹರಿಸಿದೊಡನೆಯೇ ಅವನು ಮುಕ್ತನಾಗುತ್ತಾನೆ. ಬಯಕೆ, ಕಲ್ಪನೆ, ಸಂಶಯ, ನಂಬಿಗೆ, ಅಪನಂಬಿಗೆ, ನಿಶ್ಚಯ, ಅನಿಶ್ಚಯ, ಅವಮಾನ, ವಿಚಾರ, ಭಯ ಎಂಬೀ ಎಲ್ಲವೂ ಮನಸ್ಸೇ. ಕಲ್ಪನೆಯಲ್ಲಿ ತಪ್ಪಾಗಿ ಪರಿಣತವಾದ ಗುಣತರಂಗಗಳಲ್ಲಿ ತೇಲಿ ಹೋಗಿ ಪುರುಷನು ಅಸ್ತಿಮಿತನೂ, ಚಂಚಲನೂ, ಕುಂಠಿತನೂ, ಬಯಕೆಗಳಿಂದ ತುಂಬಿದವನೂ, ಸಂಶಯಾತ್ಮನೂ ಆಗಿ, ತಾನೇ ಇವೆಂದೂ, ಇವೆಲ್ಲಾ ತನ್ನವೆಂದೂ ನಂಬಿ ಬಲೆಯಿಂದ ಹಕ್ಕಿಯು ಬದ್ಧವಾಗುವಂತೆ ತನ್ನಿಂದಲೇ ತಾನು ಬದ್ಧನಾಗುತ್ತಾನೆ.

ಆದುದರಿಂದ ಸಂಕಲ್ಪ, ಕಲ್ಪನೆ, ನಂಬಿಗೆಗಳುಳ್ಳವನು ಗುಲಾಮನು; ಅವುಗಳಿಲ್ಲದವನು ಸ್ವತಂತ್ರನು. ಈ ಕಾರಣದಿಂದ ಮನುಷ್ಯನು ಸಂಕಲ್ಪ, ಕಲ್ಪನೆ, ನಂಬಿಕೆಗಳಿಂದ ಮುಕ್ತನಾಗಿ ನಿಲ್ಲಲಿ. ಏಕೆಂದರೆ ಅದೇ ಸ್ವಾತಂತ್ರ್ಯದ ಕುರುಹು; ಅದೇ ಅವನನ್ನು ಬ್ರಹ್ಮನೆಡೆಗೊಯ್ಯುತ್ತದೆ – ಅದೇ ಬ್ರಹ್ಮದ್ವಾರ; ಅದರ ಮೂಲಕವಾಗಿಯೇ ಅವನು ಅಂಧಕಾ ಸಮುದ್ರದ ಮತ್ತೊಂದು ತೀರಕ್ಕೆ ಹೋಗುವನು. ಅಲ್ಲಿ ಎಲ್ಲ ಬಯಕೆಗಳೂ ಪೂರ್ಣವಾಗುವುವು. ಅದೇ ಅತ್ಯುನ್ನತ ಸ್ಥಾನ.

**ಜ್ಞಾನೇಂದ್ರಿಯಾಣಿ ಸರ್ವಾಣಿ ನಿರುಧ್ಯ ಮನಸಾ ಸಹ।**
**ಏಕತ್ವ ಭಾವನಾ ಯೋಗಃ ಕ್ಷೇತ್ರಜ್ಞ ಪರಮಾತ್ಮನೋಃ॥**

ಈ ಅತ್ಯುನ್ನತ ಸ್ಥಿತಿಯಲ್ಲಿ ಪಂಚೇಂದ್ರಿಯ–ಮನಸ್–ಬುದ್ಧಿಗಳು ಅಚಲವಾಗಿರುತ್ತವೆ, ನಿಷ್ಪಂದವಾಗಿರುತ್ತವೆ, ಶಾಂತವಾಗಿರುತ್ತವೆ. ಪೂರ್ಣಗೊಂಡ ಯೋಗಶಾಸ್ತ್ರದಲ್ಲಿ ವೇದಾಂತ ಅಥವಾ ಉಪನಿಷತ್ತುಗಳು ಹೇಳುವ ಏಕಾತ್ಮಕತೆಯ ಬದಲು ಪುರುಷರ ಬ್ರಹ್ಮಾತ್ಮಕತೆಯೂ, ಬ್ರಹ್ಮದ ಬದಲು ಈಶ್ವರನು ಬಂದಿರುವುದೂ ಕಂಡುಬರುತ್ತದೆ.

## ಗೀತೆಯಲ್ಲಿ

ಭಗವದ್ಗೀತೆಯ ಪುರುಷೋತ್ತಮನ ಕಲ್ಪನೆಯೂ ಪತಂಜಲಿಯ ಈಶ್ವರನ ಅಥವಾ ಪರಮೇಶ್ವರನ ಕಲ್ಪನೆಯೂ ಒಂದೇ ಆಗಿರುವುದು ಗಮನಾರ್ಹ. ಪುರುಷರ ಅಥವಾ ಜೀವಾತ್ಮಗಳ ಬಹುತ್ವವನ್ನು ಭವಗದ್ಗೀತೆಯುಲ್ಲಿ ಅನುಗ್ರಹ ಬುದ್ಧಿಯಿಂದ ಒಪ್ಪಲಾಗಿರುವುದನ್ನು ಅದರ ೯ನೆಯ ಅಧ್ಯಾಯದ ೧೫ನೆಯ ಶ್ಲೋಕದಿಂದ ೨೬ನೆಯ ಶ್ಲೋಕದವರೆಗಿನ ಭಾಗವು ಸ್ಪಷ್ಟಪಡಿಸುತ್ತದೆ. ಅದರ ೧೦ನೆಯ ಅಧ್ಯಾಯ ಹೇಳಿರುವ "ಬುದ್ಧಿಯೋಗ"ವು ಬುದ್ಧಿಯನ್ನು ಅಥವಾ ಮನಸ್ಸನ್ನು ಈಶ್ವರನಲ್ಲಿ ಯೋಜಿಸುವುದು, ಅರ್ಪಿಸುವುದು, ಸ್ಥಿರವಾಗಿ ನಿಲ್ಲಿಸುವುದು ಎಂಬ ಅರ್ಥದಲ್ಲಿ ಯೋಗಶಾಸ್ತ್ರದ ಮುಕ್ತಿಯೇ ಆಗಿದೆ. ಮುಕ್ತನನ್ನು ಅದು "ಸನ್ಯಾಸಯೋಗ ಯುಕ್ತಾತ್ಮ"ನೆಂದು ಹೇಳುವುದೂ ಈ ಅರ್ಥದಲ್ಲಿಯೇ, ಅರ್ಥಾತ್ ಅದು ಈಶ್ವರನಲ್ಲಿ ಮನಸ್ಸನ್ನು ಲಯಗೊಳಿಸುವ ಯೋಗ. ಈ ಯೋಗದ ಮುಂದಿನ ಹೆಜ್ಜೆ ಮೈತ್ರಾಯಣಿ ಹೇಳುವ ಆತ್ಮದ ಈಶ್ವರಾಂತರ್‌ಲೀನತೆ; "ಮಯಿ ತೇ ತೇಷು ಚಾಪ್ಯಹಂ" ಎಂಬ ಗೀತೋಕ್ತವಾದ ಬ್ರಹ್ಮಪದದ ಎಚ್ಚರ.

## ವೈವಿಧ್ಯ :

'ಯುಜ್' ಧಾತುವಿನಿಂದ ಯೋಗವಲ್ಲದೆ (೧) ಯುಕ್ತ, ಯುಕ್ತಿ, ಯೋಜನೆ, ಯುಗ, ಯೋಜಕ, ಯೋಗ್ಯ, ಯೋಜ್ಯ ಎಂಬ ಪದಗಳೂ (೨) ನಿಯೋಗ, ವಿಯೋಗ, ಪ್ರಯೋಗ, ಸಂಯೋಗ, ಸುಯೋಗ, ಉಪಯೋಗ ಮುಂತಾದ ಪದಗಳೂ ಸಿದ್ಧವಾಗಿ ಬಳಕೆಯಲ್ಲಿವೆ. ಇವುಗಳಲ್ಲಿ 'ವಿಯೋಗ' ಒಂದನ್ನುಳಿದರೆ ಮತ್ತೆಲ್ಲವುಗಳಲ್ಲೂ

(ಎರಡು) ಪದಾರ್ಥಗಳು **ಕೂಡುವ** ಅರ್ಥದ ಅಂತರ್ಧಾರೆಯಿರುವುದು ಸುಲಭಗ್ರಾಹ್ಯ. ಯೋಗವೆಂಬ ಪದಕ್ಕಿರುವ ೩೭ ಅರ್ಥಗಳಲ್ಲಿ ಮುಖ್ಯವಾಗಿ ಬಳಕೆಯಲ್ಲಿರುವ ಸಂಗಮ, ಸಂಘಟನ, ವಾಹನ, ಉಪಯೋಗ, ಉದ್ಯಮ, ಸಮಾಧಿ, ನಿಯಮ, ಪರಿಣಾಮಗಳೆಂಬ ಎಂಟು ಅರ್ಥಗಳಲ್ಲಿಯೂ ಈ ಅರ್ಥಧಾರೆ ಹಿನ್ನೆಲೆಯಲ್ಲಿರುವುದನ್ನು ಗಮನಿಸಬಹುದು. ಯೋಜಿಸುವ 'ಯೋಕ್ತ್ರ'ಕ್ಕೆ ಹಗ್ಗ, ಕುರಿ, ಕಡಿವಾಣ ಎಂಬ ಅರ್ಥಗಳಿರುವುದೂ ಎರಡು ವಸ್ತುಗಳು ಅಥವಾ ಬಿಂದುಗಳಿದ್ದರೆ ಅದನ್ನು ಕೂಡಿಸುವ, ಕಟ್ಟುವ, ಕಟ್ಟಿ ನಿಯಂತ್ರಿಸುವ ಯೋಗಾರ್ಥಕ್ಕೆ ಪೋಷಕವಾಗಿದೆ.

ಈ ಯೋಗವೆಂಬುದೊಂದು ದರ್ಶನ; ಒಂದು ಪ್ರೇಕ್ಷಣ, ಅವಬೊಧ, ದೃಷ್ಟಿ, ನೇತ್ರ, ಪರೀಕ್ಷೆ, ಪ್ರಖ್ಯಾಪನ, ಆವಿಷ್ಕಾರ, ಅಭ್ಯಾಗಮ, ಉದಯ, ನಿರೀಕ್ಷಣ, ತತ್ವ ಅಥವಾ ಮತ. "ಯೋಗಸ್ಥ: ಕುರು ಕರ್ಮಾಣಿ" ಎಂಬ ಗೀತಾ ಸಂದೇಶವನ್ನು ಪಾಲಿಸುವುದೇ ಭಾರತದ ಸ್ವಧರ್ಮ. ಯೋಗಸ್ಥಿತಿಯನ್ನು **ಭಾರತೀಯತೆಯ ಭಾವ**ವೆಂದು ಗ್ರಹಿಸಬಹುದು. ಅದನ್ನಿಂದು ಅರಗಿಸಿಕೊಳ್ಳದೆ ನಾವು ಯಾವ ಕರ್ಮವನ್ನು ಮಾಡಿದರೂ ಅದು ಭಾರತದ ಹಿತಕ್ಕೆ ಮಾರಕವಾಗುತ್ತದೆ. ಭಾರತವೆಂದರೆ 'ಅಗ್ನಿ' ಎಂಬ ಅರ್ಥವೂ ಇದೆ. ಏಕೆಂದರೆ ಅಗ್ನಿಯೂ ಹವಿರ್ಭಾಗವನ್ನಿತ್ತು ದೇವತೆಗಳನ್ನು ಭರಣ ಮಾಡುತ್ತಾನೆ ಅಥವಾ ಹೊರೆಯುತ್ತಾನೆ. ಭಾರತ ಅಥವಾ ಭಾರತೀಯನು ದೇವಮುಖನೂ, ದೇವಗುಣನೂ ಆಗಿ ವರ್ತಿಸುವ ಭಾವವು ಯೋಗಸ್ಥಿತಿಯಲ್ಲಿ ಅಡಕವಾಗಿದೆ. ಯೋಗದ ಕೌಶಲ್ಯದಿಂದ ಅದರ ಸಮತ್ವದ ತೂಕ ಲಭ್ಯ. ಯೋಗಿಯ ಮುಖ್ಯ ಗುಣ ಮೈತ್ರಿ. ಏಕೆಂದರೆ ಅದರಲ್ಲಿರುವಷ್ಟು ಸಮತಾಭಾವ ಇನ್ನಾವ ಸಂಬಂಧದಲ್ಲೂ ಇಲ್ಲ. ಭವಭೂತಿ ರಾಮಸೀತೆಯರಲ್ಲಿ ಇರುವುದೆಂದು ಹೇಳಿದ ಸುಖದುಃಖಾದ್ವೈತ ಭಾವವು ಇದಕ್ಕೆ ಸಮ. ಭಾರತೀಯರ ಏಕಾತ್ಮ ಪ್ರತ್ಯಯದ ಸಿದ್ಧಿಯನ್ನು ಲೌಕಿಕವಾದ ಅವರ ಮುಕ್ತಿಯೆಂದು ಕರೆಯಬಹುದಾದ ಸ್ವತಂತ್ರ ಸ್ಥಿತಿಗೆ ಆಧಾರವೆಂದು ಧಾರಾಳವಾಗಿ ಹೇಳಬಹುದು. ಆದುದರಿಂದ ಅಲೌಕಿಕವಾದ ಪರಮಾರ್ಥ ಸ್ವರೂಪದ ಮೋಕ್ಷಕ್ಕೆ (ಪೂರ್ಣ ಸ್ವಾತಂತ್ರ್ಯಕ್ಕೆ) ಯೋಗದ ಪೂರ್ಣ ಶಕ್ತಿಯು ಸಾಧನವಾದರೆ, ಅದಕ್ಕಿಂತ ಕೆಳಮಟ್ಟದ ಲೌಕಿಕ ಸ್ವಾತಂತ್ರ್ಯದ ಸ್ಥಿತಿಯನ್ನು ಸ್ಥಿರವಾಗಿ ಅನುಭವಿಸಲು ಯೋಗಬಲ ಬೇಕೇ ಬೇಕಲ್ಲವೇ?

ಭಗವಾನ್ ಕೃಷ್ಣನ "ತಸ್ಮಾದ್ಯೋಗೀ ಭವಾರ್ಜುನ" ಎಂಬ ಸಂದೇಶದಂತೆ ಅರ್ಜುನನು ಹೋರಾಡಿ ಜಯಿಸಿ, ಧರ್ಮಸಂಸ್ಥಾಪನೆಗೆ ನೆರವಾದುದು ನಿವೃತ್ತಿ, ಪ್ರವೃತ್ತಿಗಳನ್ನು ಕೂಡಿಸಿದ ಸಮನ್ವಯ ಮಟ್ಟದ ಯೋಗ ಸಿದ್ಧಾಂತದಂತೆಯೇ ಎಂಬುದು ಸುಸ್ಪಷ್ಟ. ಅರ್ಜುನನ ವರ್ತನೆ ಅಂಥ ಯೋಗಿಯ ಆಚಾರಕ್ಕೆ ಉದಾಹರಣೆ.



# ೩೯. ಪರಮಪೂಜ್ಯ ಶ್ರೀ ಶ್ರೀಧರಸ್ವಾಮಿಗಳು

**[ಇತ್ತೀಚೆಗೆ ದೈವಾಧೀನರಾದ ಶ್ರೀ ಶ್ರೀಧರ ಸ್ವಾಮಿಗಳು ಲೋಕಕಲ್ಯಾಣಕ್ಕಾಗಿ ತಮ್ಮ ಇಡೀ ತಪಸ್ಸನ್ನು ಮೀಸಲಾಗಿಟ್ಟ ಮಹಾನ್ ವ್ಯಕ್ತಿ.]**

ನಮ್ಮ ಹಲವಾರು ಮಠಾಧೀಶರು ತಮ್ಮ ಆದಿಗುರುವಿಗಿದ್ದ 'ಪರಮಹಂಸ' ಎಂಬ ಪದವನ್ನು ಬಿರುದನ್ನಾಗಿ ಸ್ವೀಕರಿಸುವುದು ರೂಢಿ. ಮಠಸ್ಥ ಸಂನ್ಯಾಸಿಗಳಲ್ಲಿ ಹಲವರು ತಮ್ಮದು ರಾಜಸಂನ್ಯಾಸವೆಂದು ಗ್ರಹಿಸಿ ರಾಜೋಪಚಾರ ಪೂಜೆಯನ್ನು ಸ್ವೀಕರಿಸುವುದುಂಟು. ಮಠಸ್ಥ ಸಂನ್ಯಾಸಿಗೂ ಪರಿವ್ರಾಜಕ ಸಂನ್ಯಾಸಿಗೂ ಭೇದವಿದೆ. ಮಠಸ್ಥನು ಶ್ರೀ ಶಂಕರಾಚಾರ್ಯರು ಹಾಕಿಕೊಟ್ಟ 'ಮಠಾಮ್ನಾಯ'ದ ಆಚಾರವನ್ನು ಇಟ್ಟುಕೊಂಡಿರಬೇಕು. ಮಠವೊಂದು ಸಾಮಾಜಿಕ ಸಂಸ್ಥೆ. ಸಮಾಜದ ನೀತಿ ನಡತೆಗಳಿಗೆ ನಡೆದು ನುಡಿದು ಗುರುವಾಗುವುದು ಮಠಸ್ಥ ಸಂನ್ಯಾಸಿಯ ಕರ್ತವ್ಯ. ಅವರು ಅಜ್ಞಕರ್ಮಸಂಗಿಗಳಲ್ಲಿ 'ಬುದ್ಧಿ' ಭೇದವನ್ನುಂಟು ಮಾಡದೇ, ಪಾತ್ರಾಪಾತ್ರ ವಿವೇಕದಿದ ಆಚಾರನಿಷ್ಠರನ್ನಾಗಿ ತರಬೇತು ಗೊಳಿಸಬೇಕು. ಮಠದ ಪೀಠ ಕೇವಲ ವಿಚಾರ ಕೇಂದ್ರವೆಂಬುದಕ್ಕಿಂತ ಹೆಚ್ಚಾಗಿ, ಆಚಾರ ಕೇಂದ್ರವೆಂದೇ ಸಂಪ್ರದಾಯವು ರೂಪಿಸಿರುವುದರಿಂದ ಇದು ಸಮಾಜದ ನಿರೀಕ್ಷಿತ.

## ಪ್ರವೃತ್ತಿ ನಿವೃತ್ತಿಗಳ ಸಂಗಮ

ಏಪ್ರಿಲ್ ೧೯ರಂದು ದೇಹತ್ಯಾಗ ಮಾಡಿದ ಶ್ರೀ ಶ್ರೀಧರ ಸ್ವಾಮಿಗಳು ಮೊದಲು ಮಠಾಧೀಶರಾಗಿ, ಮೇಲಿನ ಧರ್ಮಸೂಕ್ಷ್ಮವನ್ನು ಪರಿಪಾಲಿಸಿ, ಮಾರ್ಗದರ್ಶಿಸಿ ನಂತರ ಮಠತ್ಯಾಗ ಮಾಡಿ ಪರಮಹಂಸ ಪರಿವ್ರಾಜಕ ಆಚಾರ್ಯರೆನ್ನಿಸಿಕೊಂಡವರು. ಸಮಾಜ ಹಿತಕ್ಕಾಗಿ ಮೊದಲೂ ದುಡಿದರು; ಕಡೆಗೂ ದುಡಿದರು. ಮೊದಲಿನಲ್ಲಿಮಠಪತಿಯಾಗಿ ಸಮಾಜದಲ್ಲಿ ನೀತಿಮತ್ತೆಯನ್ನು ನೆಲೆನಿಲ್ಲಿಸಲು ಮತ್ತು ಜನರ ಸಂಕಷ್ಟಗಳನ್ನು ಪರಿಹರಿಸಲು ಶ್ರಮಿಸಿದರು. ಪರಮಹಂಸತ್ವವು ಅವರ ಬಿರುದಲ್ಲ; ಮಠತ್ಯಾಗ ಮಾಡಿದ ಅವರು ಸಹಜ ಸಮಾಧಿ ಶಕ್ತಿಯನ್ನು ಗಳಿಸಿ ಜೀವನ್ಮುಕ್ತರಾಗಿ ನಿವೃತ್ತಿ ಧರ್ಮವನ್ನು ಹಿಡಿದರೂ ದೇವ ಪೂಜಾದಿ ಪ್ರವೃತ್ತಿ ಧರ್ಮವನ್ನು ಅಜ್ಞಕರ್ಮಸಂಗಿಗಳಿಗಾಗಿ ಬಿಡದೆಯೇ ಅವತಾರ ಪುರುಷರಂತೆ ಸಾಗರದ ಹತ್ತಿರದ ವರದಹಳ್ಳಿಯಲ್ಲಿ ಸದೇಹರಾಗಿ ತಪಸ್ಸಿನಲ್ಲಿ ಮೌನವಾಗಿ ಲೋಕಕಲ್ಯಾಣವನ್ನು ಪ್ರೇರಿಸುತ್ತಿದ್ದರು. ಇದೇ ದಿವ್ಯ ಜೀವನದ ನಿಜವಾದ ಅರ್ಥ. ಕೆಲವರು ಅವರ ಯೋಗಸಿದ್ಧಿಗಳ ದೆಸೆಯಿಂದ ಅವರನ್ನು ಸಿದ್ಧಪುರುಷರೆಂದು ಕರೆದರು; ಇನ್ನಿತರರು ಪರೀಕ್ಷೆಯ ಮೂಲಕ ಅವರನ್ನು ಜೀವನ್ಮುಕ್ತರೆಂದೂ, ಪರಮಹಂಸರೆಂದೂ ಕರೆದರು.

ಜಗತ್ತೊಂದು 'ಈಶ ಕಲ್ಪನೆ' ಎಂದೂ ಜೀವನದಲ್ಲಿ ಬ್ರಹ್ಮಾರ್ಪಿತ ಮನಸ್ಕರಾಗಿ ಬ್ರಹ್ಮಕರಗತವಾದ ನಿಮಿತ್ತ ಕಾರಣನಾಗಿ ವರ್ತಿಸಬೇಕೆಂದು ಗೀತೆ ಹೇಳಿರುವುದೂ ಶ್ರೀ ಭಗವಂತ ಶ್ರೀಧರರ ಜೀವನದಲ್ಲಿ ಜೀವಂತ ನಡತೆಯಾಗಿ ಕಾಣುತ್ತಿದ್ದವು. ಆ ಸಾಧನೆಯಿಂದ ಸಿದ್ಧಿ ಹೊಂದಿನ ಮೇಲೂ ಅವರು ಲೋಕ ಕಲ್ಯಾಣಕ್ಕಾಗಿ ಲೋಕ ಸಂಪರ್ಕ ಇಟ್ಟುಕೊಂಡಿದ್ದರು.

ಯೋಗಶಕ್ತಿಯೂ ತಪಃಶಕ್ತಿಯೂ ಮೊದಲು ಸಾಧಕನಿಗೆ ತನ್ನ ಸಾಧನಬಲ ಸಂವರ್ಧನೆಗೆ ಕಾಣವಾದರೆ, ಅವನು ಸಿದ್ಧ ಅಥವಾ ಮುಕ್ತನಾದ ಮೇಲೆ ಅವು ಲೋಕಸಂಗ್ರಹಕ್ಕಾಗಿ ಬಳಸಲ್ಪಡುತ್ತವೆ. ಶ್ರೀ ಪರಮಹಂಸ ಶ್ರೀಧರರು ವರದಹಳ್ಳಿಯಲ್ಲಿ ತಪೋನಿರತರಾಗಿ ಮೌನಧಾರಣ ಮಾಡಿ ಕುಳಿತದ್ದು ಲೋಕೋದ್ಧಾರಕ್ಕಾಗಿ. ಮೊದಲು ಆತ್ಮೋದ್ಧಾರ, ಅನಂತರ ಲೋಕೋದ್ಧಾರ.

## ಲೋಕಕಲ್ಯಾಣಕ್ಕಾಗಿ

ದೀನರ ಹಾಗೂ ಬಡಬಗ್ಗರ ಬಗ್ಗೆ ಕರುಣೆ ಸ್ವಾಮಿಗಳನ್ನು ಉತ್ತರ-ದಕ್ಷಿಣಕನ್ನಡ ಜಿಲ್ಲೆಗಳಲ್ಲಿ ಹೆಚ್ಚು ಜನಪ್ರಿಯರನ್ನಾಗಿಸಿತ್ತು. ಈ ಹಿಂದಿನ ೫-೬ ವರ್ಷಗಳಲ್ಲಿ ಮಾತ್ರ ಅವರು ಲೋಕಸಂಚಾರವನ್ನು ಬಿಟ್ಟಿದ್ದರು. ಅದಕ್ಕೆ ಮೊದಲು ಹಳ್ಳಿ ಹಳ್ಳಿಗಳನ್ನು ತಿರುಗಿ ಸಂತ್ರಸ್ತರ ದುಃಖಗಳನ್ನು ಪರಿಹರಿಸುತ್ತಿದ್ದರು. ಈ ಮೌನ ತಪಸ್ಸು ಅಧಿಕ ಮಹತ್ವವುಳ್ಳದ್ದು. ಶ್ರೀ ಅರವಿಂದರು ಹೇಳಿದ 'ಸುಪ್ರಮಾನಸ' ಶಕ್ತಿಯನ್ನು ಲೋಕೋದ್ಧಾರಕ್ಕಾಗಿ ಕರೆತರುವುದು ಎಂಬ ರೀತಿಯ ಪ್ರಯತ್ನವದು.

ವರದಹಸ್ತ, ಅಭಯಹಸ್ತಗಳಿಂದ ಪರಮಹಂಸ ಶ್ರೀಧರಸ್ವಾಮಿಗಳು ಶಿಷ್ಯರನ್ನು ಸ್ವಾಗತಿಸುತ್ತಿದ್ದುದರಿಂದ ಅವರಲ್ಲಿ ಮಾತಾಪಿತೃಭಾವನೆ ಭಕ್ತರಿಗೆ ಉಂಟಾಗುತ್ತಿತ್ತು. ಅದರಿಂದಲೇ ಅವರ ಬಗೆಗೆ ಅನೇಕರು ನಿಜವಾದ ಗೌರವಾದರ ಭಕ್ತಿಗಳನ್ನು ತಾಳಿದ್ದರು. ಹೈದರಾಬಾದು, ಸಜ್ಜನಗಡ, ಪುಣೆ, ಶೀಗೆಹಳ್ಳಿ, ವರದಹಳ್ಳಿಗಳ ಕೇಂದ್ರಗಳಲ್ಲಿ ಸಂಚರಿಸುತ್ತಿದ್ದ ಅವರ ಇಡೀ ಜೀವನದ ಚರಿತ್ರೆಯನ್ನು ಈಗ ನಿಂತುಹೋಗಿರುವ 'ಶ್ರೀಧರ ಸಂದೇಶ' ಎಂಬ ಪತ್ರಿಕೆಯಲ್ಲಿಯೂ, ಸ್ವಾಮಿಗಳು ಬರೆದ 'ದತ್ತಸ್ತವರಾಜ' ಎಂಬ ಸಂಸ್ಕೃತ ಗ್ರಂಥದ ಮುನ್ನುಡಿಯಲ್ಲಿಯೂ ಕಾಣಬಹುದು. ಶ್ರೀ ಶ್ರೀಧರಸ್ವಾಮಿಗಳು ದೇಹವನ್ನು ತ್ಯಜಿಸಿದ್ದರೂ, ಬುದ್ಧಿವಂತರು ತಿಳಿಯುವಂತೆ ಅವರು ಅಮರರೇ ಆಗಿದ್ದಾರೆ!



# ೪೦. ಮುನ್ನುಡಿ

**ಶ್ರೀ ಎಮ್.ಟಿ.ಸೂರ್ಯನಾರಾಯಣರಾಯರ ಶ್ರೀ ಶ್ರೀಧರಸ್ವಾಮಿಗಳ 'ಗುರುಚರಿತ್ರೆ' ಗ್ರಂಥಕ್ಕೆ ಮುನ್ನುಡಿ**

ಮಂಜಾಲೆಯ ಶ್ರೀ ಸೂರ್ಯನಾರಾಯಣರಾಯರು ವರದಹಳ್ಳಿಯಲ್ಲಿದ್ದ ಪರಮಹಂಸ ಪರಿವ್ರಾಜಕಾಚಾರ್ಯ ಬ್ರಹ್ಮ ಚೈತನ್ಯ ಶ್ರೀ ಶ್ರೀಧರಸ್ವಾಮಿಗಳ ಪರಮಶಿಷ್ಯರು. ಅವರು ಸಾಗರದ ಶ್ರೀಧರ ಮಹಾಮಂಡಲದ ಕಾರ್ಯದರ್ಶಿಗಳಾಗಿ ಸುಮಾರು ೨೨ ವರ್ಷಗಳವರೆಗೆ ಕೆಲಸ ಮಾಡಿದವರು. ದತ್ತಾತ್ರೇಯ ಅವತಾರವೆನ್ನಿಸಿದ್ದ ಶ್ರೀ ಶ್ರೀಧರ ಸ್ವಾಮಿಗಳ ಅಂತೇ ವಾಸಿಗಳಾಗಿದ್ದ ಪುಣ್ಯದ ಬಲದಿಂದ ಸೂರ್ಯನಾರಾಯಣರಾಯರು, ಗುರು ಪ್ರೇರಣೆಯ ಪ್ರಕಾರ ಶ್ರೀ ಗುರುಗಳ ಚರಿತ್ರೆಯನ್ನು ಬರೆದಿದ್ದಾರೆ.

ಶ್ರೀ ಸಮರ್ಥ ರಾಮದಾಸ ಸ್ವಾಮಿಗಳ ಶಿಷ್ಯರು ಸಜ್ಜನಗಡ ನಿವಾಸಿಗಳೂ, ಅನಂತರ ಶೀಗೇಹಳ್ಳಿಯ ಮಠಾಧಿಪತಿ ಶ್ರೀ ಶಿವಾನಂದರ ಶಿಷ್ಯರೂ, ವರದಹಳ್ಳಿಯ ಪರಮಹಂಸ ಪರಿವ್ರಾಜಕಾಚಾರ್ಯರೂ ಆಗಿದ್ದಲ್ಲದೆ, ಪರಮಪೂಜ್ಯ ಶ್ರೀಧರ ಸ್ವಾಮಿಗಳು ಶ್ರೀ ರಮಣ ಮಹರ್ಷಿಗಳಂತೆ, ಬಾಲ ಬ್ರಹ್ಮಚಾರಿಗಳೂ ಜೀವನ್ಮುಕ್ತರೂ ಆಗಿದ್ದರು. ಅವರು ಭಕ್ತಿ–ಜ್ಞಾನ–ವೈರಾಗ್ಯಗಳ ಮೂರ್ತಿಗಳೆಂದು ತೋರುತ್ತಿದ್ದರು. ಆ ಮಹಾ ಯೋಗಿಗಳ ದೈವಿಕ ಶಕ್ತಿ ಅಪಾರವಾದದ್ದು. ಅವರ ಭಕ್ತ ವಾತ್ಸಲ್ಯವು ಅಕ್ಷರಶಃ ಅನುಪಮ. ಅದ್ವೈತ ಸಹಜ ಸಮಾಧಿಸ್ಥರ ನಾಮ–ರೂಪಗಳು ಮುಮುಕ್ಷುಗಳಿಗೆ ಮಾತ್ರ ಅಗತ್ಯ; ಸ್ವತಃ ಅವರಿಗೆ ಅವಾವುವೂ ಇಲ್ಲ. ಅಧಿಕಾರ ಭೇದದ ಪ್ರಕಾರ ಭಕ್ತಿಯೋಗ ಸಾಧಕರಿಗೆ ಗುರುಚರಿತ್ರೆ ಅವಶ್ಯಕ. ಅಂಥ ಅವಶ್ಯಕತೆಯನ್ನು ಪೂರೈಯಿಸಿ ಕೊಡಲು ಶ್ರೀಸೂರ್ಯನಾರಾಯಣರಾಯರು ಹೃತ್‌ಪೂರ್ವಕವಾದ ಪ್ರಯತ್ನವನ್ನಿಲ್ಲಿ ಮಾಡಿದ್ದಾರೆ. ಶ್ರೀ ಗುರುಗಳ ಭೌತಿಕ ದೇಹದ ಚರಿತ್ರೆ ಇಲ್ಲಿ ವೈಜ್ಞಾನಿಕವಾಗಿ ಬಂದಿದೆ. ಅವರು ಇಲ್ಲಿ ಮಾಡಿದ ಮಹಾತ್ಕಾರ್ಯಗಳನ್ನು ವಿವರ ಪೂರ್ವಕವಾಗಿ ಕೊಡಲಾಗಿದೆ. ಅವರ ವ್ಯಕ್ತಿತ್ವದಲ್ಲಿ ಎದ್ದು ಕಾಣುತ್ತಿದ್ದ ಪರಮ ಕಾರುಣ್ಯಮಯತೆಯ ಚಕ್ರಕ್ಕೆ ಈ ಗ್ರಂಥವು ಅನೇಕ ನಿದರ್ಶನಗಳನ್ನು ಕೊಟ್ಟಿದೆ.

'ಸತ್' ಎಂಬ ಪರಮಾತ್ಮನಿಗಿಂತ ದೊಡ್ಡ ಪವಾಡ ಇನ್ನೊಂದಿಲ್ಲ. ಆತನು ಶ್ರೀಧರ ಸಂಕೇತಿತನಾದಾಗ ಭಕ್ತಿಯೋಗಿಯು ಶ್ರೀಧರಸ್ವಾಮಿಗಳನ್ನು 'ಶ್ರೀಧರಃ ಶ್ರೀಕರಃ ಶ್ರೇಯಃ ಶ್ರೀಮಾನ್ ಲೋಕತ್ರಯಾಶ್ರಯಾಃ' ಎಂದು ಬಗೆಯುವುದು.ಸ್ವಾಭಾವಿಕ ಸರ್ವ ಸಮರ್ಪಣ ಭಾವವೇ ಭಕ್ತಿಯ ಸಾರ. ವಾಕ್ಕೊಂದು ಶಕ್ತಿ. ಅದು ಮನಸ್ಸಿಗಧೀನ. ಮನಸ್ಸು ಬಂಧ ಮೋಕ್ಷಗಳಿಗೆ ಕಾರಣವಾದ ಮಾಯೋಪಾಧಿ. ಪರಮಾತ್ಮನ ಯಾ

ಪರಬ್ರಹ್ಮನ ಯಾ ಸದ್ಗುರುವಿನ ಆ ಮಾಯೆ ದುರತ್ಯಯ. ದುರತ್ಯಯವಾದ ಮಾಯೆಯ(ಅವಿದ್ಯದ) ನಿವಾರಣೆಯಾಗದೆ ಬ್ರಹ್ಮ(ಮೋಕ್ಷ) ಜ್ಞಾನ ಉದಯಿಸದು. ಆದುದರಿಂದ–

**ನಾಹಂ ದೇಹೋ ನೇಂದ್ರಿಯಾಣ್ಯಂತರಂಗಂನಾಹಂಕಾರಃ ಪ್ರಾಣವರ್ಗೋನ ಬುದ್ಧಿಃ**
**ದಾರಾಪತ್ಯ ಕ್ಷೇತ್ರವಿತ್ತಾದಿ ದೂರಃಸಾಕ್ಷೀಭೂತಃ ಪ್ರತ್ಯಗಾತ್ಮಾ ಶಿವೋಹಂ ॥**

ಎಂಬ ಅನುಭವ ತನ್ನಲ್ಲಿ ಉದಯಿಸಲಿ ಎಂದು ಭಕ್ತನು ಅವಿಭಕ್ತತೆಯ ಸಿದ್ಧಿಗಾಗಿ ಪ್ರಾರ್ಥಿಸುವುದರ ಅಂಗವಾಗಿ ಗುರು ಚರಿತ್ರಾಭ್ಯಾಸ ಮಾಡಲು ಗುರುಚರಿತ್ರೆಯ ಪಠನ ಪಾಠನಗಳು ಸಾಧನಗಳು. ಗುರುವು ಲಘುವಲ್ಲ, ಆರ್ತವಲ್ಲ, ತುಚ್ಛವಲ್ಲ, ಕ್ಷುದ್ರವಲ್ಲ, ತದಿತರ ಪದಾರ್ಥಗಳೆಲ್ಲಾ ಆರ್ತ, ತುಚ್ಛ, ಲಘು, ಕ್ಷುದ್ರ–ಆದ್ದರಿಂದ ತ್ಯಾಜ್ಯ. ಗುರುವಿನ ಗುರುತ್ವಾಕರ್ಷಣೆಗೆ ಒಳಗಾದ ಗ್ರಂಥಕರ್ತರ ಪ್ರಾಮಾಣಿಕತೆ, ಸತ್ಯಸಂಧತೆ ಮತ್ತು ದೈನ್ಯ ಭಾವಗಳು ಸಭ್ಯತೆಯ ಪರಮೋಚ್ಚ ನೆಲೆ. ಇವು ಇಲ್ಲಿ ಪ್ರತಿವಾಕ್ಯದಲ್ಲೂ ಅಭಿವ್ಯಕ್ತವಾಗುತ್ತವೆ. ಈ ವಾಕ್ಯಗಳ ಅನುಸ್ಮರಣೆಯನ್ನು ಸಾಧಿಸಿಕೊಳ್ಳಲು ಈ ಗ್ರಂಥವು ಉತ್ತಮವಾದ ಸಾಧನ ಎಂದು ಯಾರೂ ಹೇಳದಿರಲಾರರು. ಅನುಸ್ಮೃತಿಯೇ ದರ್ಶನಾನುದರ್ಶನಗಳ ಮೂಲ. ಮೋಕ್ಷವೊಂದುಮಾಯಾಜಾಲವೇ ಎಂದು ಯಾರಾದರೂ ವಾದಿಸಿದರೂ, ಅದರ ಅವಿಕಾರಿತ್ವ ಪ್ರಜ್ಞೆಯ ದೆಸೆಯಿಂದ ಜಗನ್ಮಾಯೆಗಿಂತ ಅದೇ ಲೇಸು ಎಂದು ತಿಳಿಯಬಲ್ಲ ಧೀಮಂತರಾದ ಭಕ್ತರು ಗುರೂಪಾಸನೆಯನ್ನು ಈ ಕಥನೋದ್ಯಾನದಲ್ಲಿ ಕುಳಿತು ಬಹು ಸುಲಭವಾಗಿ ಮಾಡಬಹುದು. ಅನಿತ್ಯ ಪದಾರ್ಥಗಳ ವಿಕಾರಿತ್ವವನ್ನು ಮೆಚ್ಚದವರೆಲ್ಲರೂ, ಈ ಗ್ರಂಥವನ್ನು ಓದಲು ಪಾತ್ರರು. ಅಂಥ ಸತ್ ಪಾತ್ರರಿಗಾಗಿಯೇ ಈ ಗ್ರಂಥವು ಹೊರ ಬಿದ್ದಿರುವುದರಿಂದ, ಇದಕ್ಕವರು ಸದಾ ಸ್ವಾಗತವನ್ನು ನೀಡದಿರಲಾರರು ಎಂದು ಈ ಮೊದಲ ಮಾತುಗಾರನ ದೃಢವಾದ ನಂಬಿಗೆ.

ನಿಂದಕರಿಲ್ಲದ ಕಾಲವಿಲ್ಲ, ಸ್ಥಳವಿಲ್ಲ ಆದರೆ ಯುಕ್ತಾಽಯುಕ್ತ ವಿವೇಕದಿಂದ ನಿಂದಾ ಸಾಧನವನ್ನು ಬಳಸುವ ಶಾಂತರತೆ ವಿರಳ. 'ಮಾತಾಡಿದರೆ ಹೋಯಿತು, ಮುತ್ತು ಒಡೆದರೆ ಹೋಯಿತು' ಎಂಬ ಗಾದೆಯಂತೆ ಸದಕ್ಷರ(ಗುರ್ವಕ್ಷರ) ಸಂಕೇತವನ್ನು ಬಿಟ್ಟರೆ ಯಾವ ಮಾತಾಡಿದರೂ ಅದು ಅಪೂರ್ಣತ್ವದ ಮೂಲಕವೇ ಆಗಿಬಿಡುತ್ತದೆ. ಅವಾಙ್ಮನಸ ಗೋಚರತ್ವವನ್ನು–ವಾಙ್ಮನಸಗಳ ಮೂಲಕ ತಲುಪುವುದು ಅಸಾಧ್ಯವಾದರೂ ಗುರುಕೃಪೆ ಎಂಬ ವಿಭೂತಿ ಹೇಗೋ ಏನೋ ಅದನ್ನು ಸಾಧಿಸುವ ಶಕ್ತಿಯನ್ನು ಭಕ್ತನಿಗೆ(ಶಿಷ್ಯನಿಗೆ) ಕೊಡಬಲ್ಲದು ಎಂದು ಸಾವಿರಾರು ವರ್ಷಗಳಿಂದ ನಮಗೆ ಪೂಜ್ಯರೆಂದೆನಿಸುತ್ತಾ ಬಂದ ಋಷಿ ಮುನಿಗಳು ಸಾರಿ ಸಾರಿ ಹೇಳುತ್ತ ಬಂದಿರುವುದರಿಂದ 'ನಾನ್ಯಃ ಪಂಥಾ ವಿದ್ಯತೇಽಯ ನಾಯ' ಎನ್ನಿಸುತ್ತದೆ. ಸಾಧಕನಿಗೆ ಸಾಧ್ಯ, ಸಾಧನ, ಸಾಧಕ, ಸಿದ್ಧಿ ಎಂಬ ಭೇದ ಜ್ಞಾನವಿರುವುದು ಸಹಜ. ಮೊದಲಿನ ಮೂರೂ ನಾಶ ಹೊಂದಿದ ಅನುಭವ ಸಿದ್ಧನಿಗಿರುವುದಂತೆ, ಆ ಸಿದ್ಧರೂ(ಅಪೂರ್ಣ ಸಿದ್ಧರು ಯಾ ಬದ್ಧರು) ಭಕ್ತ ಪಾತ್ರವನ್ನು

ಉದ್ದೇಶ ಸಾಧಕವಾಗುವಂತೆ ನಿರ್ವಹಿಸಲು ಪ್ರಸ್ತುತ ಗ್ರಂಥವು ಸಹಕಾರಿಯಾಗದಿರದು ಎಂದು ಈ ಭಕ್ತನು ನಂಬಿದ್ದಾನೆ.

**ಶ್ರೀರಿತ್ಯೇಕಾಕ್ಷರಃ ಶ್ರೇಯಃ ಪ್ರಣವಾದೇಶ ಸಂಭವಃ ।**
**ಅಸಂಸ್ಕೃತಿಹರಾ ಭೂತಿರ್ಜಿಹ್ವಾಜ್ವಾಲೋತ್ತಮಾ ಸತಾಂ ॥**
**ಶ್ರೀಧರಃ ಪ್ರಣವಾಕಾರೋ ನಿರಾಕಾರೋತ್ಥಿತೋ ಗುರುಃ ।**
**ಅತ್ರೇಯತ್ರ್ಯಕ್ಷರೋದ್ಭೂತೋ ರಾಮದಾಸ ಬಲಾನ್ವಿತಃ ॥**
**ಸಶಿವಃ ಸಗುರುಃ ಪಾತು ಪಾತು ಕೈವಲ್ಯ ಪಾದಪಃ ।**
**ಅಜ್ಞಾನ ಸೂರ್ಯ ಸಂತಾಪಾಚ್ಛಿಷ್ಯಾನ್ ಚಾರಿತ್ರಪಾತಕಾನ್ ॥**

॥ ಇತ್ಯೋಂ ತತ್ ಸತ್ ॥



# ೪೧. ಸಹಕಾರಿ ತತ್ವ ಮತ್ತು ವ್ಯವಹಾರ

ಚಾರಿತ್ರದ ಮುಖ್ಯಾಂಶಗಳಾದ ಪ್ರಾಮಾಣಿಕತೆ ಮತ್ತು ನ್ಯಾಯಬುದ್ಧಿಗಳು ಸಹಕಾರಿಗಳಲ್ಲಿ ಇರುವುದು ಅನಿವಾರ್ಯ. ಸಹಕಾರಿ ಸಂಘದ ಸದಸ್ಯರೂ ಪದಾಧಿಕಾರಿಗಳೂ ಇಲಾಖೆಯ ಆಫೀಸರರೂ ದಕ್ಷರೂ ಪ್ರಾಮಾಣಿಕರೂ ಆಗಿರದೆ ಹೋದರೆ ಸಂಘದ ವ್ಯವಹಾರಗಳು ಅನಾಚಾರಗಳಿಗೆಡೆಗೊಟ್ಟು ಶೋಷಣೆಗೆ ಅವಕಾಶ ಮಾಡಿಕೊಡಬಹುದು. ವ್ಯಕ್ತಿಗೆ ಹೇಗೋ ಹಾಗೇ ಸಂಘಕ್ಕೂ Character is destiny ಚಾರಿತ್ರ್ಯವೇ ಅಂತ್ಯ ಪರಿಣಾಮವನ್ನು ನಿರ್ಣಯಿಸುತ್ತದೆ. ಅಸಾಮಾಜಿಕ, ಅನ್ಯಾಯ ಇದನ್ನು ಖಂಡಿಸುವ ಮತ್ತು ಹತೋಟಿಯಲ್ಲಿರುವ 'ಸಜ್ಜನರ' ಸಹಕಾರವೇ ನಿಜವಾದ ಸಹಕಾರ, ಪ್ರೋತ್ಸಾಹಾರ್ಹ ಸಹಕಾರ. ಸಮಷ್ಟಿ ಹಿತಸಾಧನೆಯ ಉದ್ದೇಶದಿಂದ ಒಟ್ಟಾಗಿ ಕೆಲಸಮಾಡುವ ದುಷ್ಟಸಮಷ್ಟಿಯ (ದುಷ್ಟರ ಗುಂಪಿನ) ಸಹಕಾರವು ಅಪಸಹಕಾರ, ಅಸದಾಚಾರ.

ಸದಸದ್ವಿವೇಕವು ಸರ್ವ ವ್ಯವಹಾರಗಳಿಗೂ ಮುಖ್ಯವಾದ ಸಾಂಸ್ಕೃತಿಕ ಆಧಾರ. ಅವಿವೇಕದ ರಾಜಪೌರೋಹಿತ್ಯದ ದೆಸೆಯಿಂದ ಜನರಲ್ಲಿ ಅನೀತಿ ವಿಮುಖತೆ ಕಡಿಮೆಯಾಗುತ್ತಿರುವುದು ಶೋಚನೀಯ. ಇಡಿ ರಾಷ್ಟ್ರವೇ ಧ್ಯೇಯವಾದಕ್ಕೆ ತಲೆಬಾಗದ ಪಕ್ಷಾಂತರಿಗಳಿಂದ ಈಗ ತತ್ತರಿಸುತ್ತಿದೆ. ಪ್ರಧಾನಿ ಚರಣಸಿಂಗರೇ ಇತ್ತೀಚೆಗೆ ದೇಶಕ್ಕೆ ಧ್ಯೇಯನಿಷ್ಠ ನೇತೃಗಳ ಅಭಾವ ಒದಗಿದೆ ಎಂದು ಉದ್ಗರಿಸಿದ್ದುಂಟು. ಇಂಥ ಆವರಣದಲ್ಲಿಯೂ ತಲೆಯೆತ್ತಿ ಧ್ಯೇಯನಿಷ್ಠೆಯಿಂದ ಜಯಗಳಿಸುತ್ತಿರುವ ಸಹಕಾರಿ ಸಂಘಗಳ ಪಾತ್ರವು ಸರ್ವವಂದ್ಯ. ಶಿರಸಿಯ 'ಟಿ.ಎಸ್.ಎಸ್.' ಅಂಥ ಒಂದು ಸಂಘ. ಅದರ ಶಾಖೆಗಳಿಗೂ ಆ ಮರ್ಯಾದೆ ಸಲ್ಲುತ್ತದೆ.

ವ್ಯಕ್ತಿಗಳಲ್ಲಿರುವಂತೆಯೇ ಸಂಘ, ರಾಷ್ಟ್ರ ಮುಂತಾದ ಮಾನವ ಸಮುದಾಯಗಳಲ್ಲಿಯೂ ರಾಮ ರಾವಣರಿರಬಹುದು. ಕಾವ್ಯದ ಕಾಂತಾ ಸಮ್ಮಿತಿಯ ಉಪದೇಶವಾದ 'ರಾಮಾದಿವತ್ ಪ್ರವರ್ತಿತವ್ಯಂ ನತು ರಾವಣಾದಿವತ್' ಎಂಬುದು ಸಾಂಘಿಕ ಜೀವನಕ್ಕೂ ಅನ್ವಯಿಸುತ್ತದೆ. ಅಕ್ರಾಮಕ ರಾಷ್ಟ್ರವನ್ನು ನಾವು ಮೆಚ್ಚಲಾರೆವು. ಅದೇ ಮೇರೆಗೆ, ಪರಶೋಷಣೆಗಾಗಿ ಒಟ್ಟು ಕೂಡಿದ ಮಾನವರ ಸಮಷ್ಟಿ ಕರ್ಮಗಳನ್ನೂ ನಾವು ಮೆಚ್ಚಲಾರೆವು. ಅಂಥ ಸಂಘಟನೆಗಳಿದ್ದರೆ ಅವುಗಳನ್ನು ಹತ್ತಿಕ್ಕಲು ಸಹಕರಿಸುವ ಸತ್‌ಪ್ರವೃತ್ತಿಯು ಸಹಕಾರಿಗಳಲ್ಲಿರಬೇಕು. ಇಂದು ರಾಮ ಸುಗ್ರೀವರ ಸಹಕಾರಕ್ಕಿಂತ ರಾವಣ ಕುಂಭಕರ್ಣ ಮುಂತಾದ ಅಸುರರ ಸಹಕಾರ ಅಧಿಕ ಬಲಯುತವಾಗಲು ಬಿಟ್ಟಿರುವುದರಿಂದಲೇ ದೇಶದಲ್ಲಿ ಗಾಂಧಿಯವರ ಕನಸು ನನಸಾಗದಂತಾಗಿದೆ. ಗಾಂಧಿಯವರ ಹೆಸರನ್ನು ಹೇಳುತ್ತ ಅವರ ತತ್ವಗಳನ್ನು ಉದ್ಗರಿಸುತ್ತ, ಕುದುರೆಜೂಜು,

ಮದ್ಯಪಾನ, ಲಾಟರಿ, ಗೋವಧೆ, ಗೃಹೋದ್ಯಮಗಳ ದಮನ, ಗ್ರಾಮೋದ್ಯೋಗಗಳ ಪತನ, ಐಷಾರಾಮೀಯ ಜೀವನ, ಕೆಲಸಗಳ್ಳತನ, ಅಶಿಸ್ತು, ಅಶಾಂತಿ, ಸಾರ್ವಜನಿಕ ವಿತ್ತನಾಶ, ಸಾಮಾಜಿಕರ ಮನೆಗಳಿಂದ ವಿತ್ತಾಪಹಾರ, ಲಂಚ, ವಂಚನೆ, ಕಳ್ಳವ್ಯಾಪಾರ, ಯೋಗ್ಯತಾ ತಿರಸ್ಕಾರ ಎಂಬ ಷೋಡಶ ಅಪಕೃತ್ಯಗಳು ನಡೆಯುತ್ತಿರುವಂತೆ ವ್ಯವಹರಿಸುವ ಅಧಿಕಾರಿಗಳನ್ನು ಸಹಿಸಿಕೊಂಡಿರುವುದು ರಾಷ್ಟ್ರೀಯ ಷಂಡತನ. ವ್ಯಾಪಾರವು ವ್ಯವಹಾರಗಳಲ್ಲೊಂದು. ಅದರಲ್ಲಿ ಒಳ್ಳೆಯ ಪಾತ್ರವನ್ನು ವಹಿಸಿದ ಸಹಕಾರಿ ಸಂಘಗಳೇ ಅತಿ ಕಡಿಮೆ. ಇನ್ನು ಇತರ ಸಾರ್ವಜನಿಕ ವ್ಯವಹಾರಗಳನ್ನು ನ್ಯಾಯಮಾರ್ಗಕ್ಕೆ ತರಬಲ್ಲ ಸಹಕಾರ ಜನರಲ್ಲಿ ಎಲ್ಲಿಂದ ಬರಬೇಕು?

ಬೆಳಗಾಂವಿಯಲ್ಲಿ(ಸಂಘದ ೧೯೭೯ ನೆಯ ನವಂಬರ್ ೨೬ರ ಸಂಚಿಕೆಯಲ್ಲಿ ಕೊಟ್ಟಿರುವಂತೆ) ದಿನವೂ ೧೧೦೦೦ ಲೀಟರ್ ಹಾಲು ಚರಂಡಿಯಲ್ಲಿ ಹರಿಯಲು ನಾಲ್ಕು ತಿಂಗಳಿಂದ ಅವಕಾಶ ಮಾಡಿಕೊಟ್ಟದ್ದು ನಿಜವೇ ಆದರೆ, ಸಹಕಾರ ಬಲದಂತೆಯೇ ಅಂಥ ಅನ್ಯಾಯಗಳನ್ನು ಪ್ರತಿಭಟಿಸುವ ಅಸಹಕಾರ ಬಲವೂ ನಮ್ಮಲ್ಲಿ ಹೆಚ್ಚಾಗಬೇಕಾಗಿದೆ ಎನ್ನಬಹುದು. ಹಾಗೇ ಮುಸ್ಲಿಂಲೀಗ್, ಕ್ರಿಶ್ಚಿಯನ್ ಲೀಗುಗಳು ಜಾತೀಯವಲ್ಲ; ಹಿಂದು ಲೀಗುಗಳು ಜಾತೀಯ ಎಂದು ಭಾವಿಸುವಂತೆ ವ್ಯವಹರಿಸುವ ಭಾರತೀಯರ ಮಾನಗೇಡಿತನವೂ ಅಸಹನೀಯ. ಹಿಂದುಳಿದವರನ್ನು ಯೋಗ್ಯತೆಯಲ್ಲಿ ಹಿಂದೇ ಇಟ್ಟು ಅವರನ್ನು ರೊಚ್ಚಿಗೆಬ್ಬಿಸಿ ಅವರ ಮತಗಳ ದಲಾಲಗಿರಿಯನು ನಿರ್ವಹಿಸುವ ಮುಖಂಡರೂ ಪಕ್ಷಗಳೂ ಹಾಗೇ ದಂಡನೀಯರು. ದಂಡನೀಯರನ್ನು ಸಹಿಸಿಕೊಂಡಿರುವ ಆವರಣದಲ್ಲಿ ಸಹಕಾರಿ ಸಂಘಗಳು ಬಹಳ ಕಾಲ ತಮ್ಮ ಸುಶೀಲವನ್ನು ಉಳಿಸಿಕೊಂಡಿರಲಾರವು. ಇಡೀ ಕೇರಿ ವಾರಾಂಗನೆಯರದಾದಾಗ, ಅದರಲ್ಲಿರುವ ಒಂದು ಮನೆಯಾಕೆ ಪತಿವ್ರತೆಯಾಗಿ ಉಳಿಯಲು ಇತರರು ಬಿಡರು. ದುಷ್ಟ ನೇತ್ರಗಳು ಸಂಖ್ಯಾಬಲದಲ್ಲಿಲ್ಲದಿದ್ದರೂ ಅಧಿಕಾರಾದಿಗಳು ಬಲದಿಂದ ಬಹುಸಂಖ್ಯಾತರನ್ನು ಆ ಒಂದೇ ಮನೆಯಾಕೆಯ ಸ್ಥಿತಿಗೆ ಇಳಿಸಬಹುದು. ಇಂಥ ಭಯಕ್ಕೆ ಇಂದು ಬಹಳ ಅವಕಾಶ ಉಂಟಾಗಿದೆ.

ನಾವು ವಿವೇಕಾನಂದರನ್ನೂ, ಗಾಂಧಿಯವರನ್ನೂ, ಲೋಕಮಾನ್ಯರನ್ನೂ, ಲೋಕನಾಯಕರನ್ನೂ ಮೆಚ್ಚಿಕೊಂಡಿರುವುದು ನಿಜವಾದರೆ ಅವರು ಮೆಚ್ಚದಂಥ ವ್ಯವಹಾರಗಳಲ್ಲಿ ತೊಡಗುವ ಜನರನ್ನು ನಾವು ಸಹಿಸಿಕೊಂಡಿರುವುದು ಅಪರಾಧ; ಅವರನ್ನು ಮೇಲುಗೈಯಾಗಲು ಬಿಡುವುದಂತೂ ಮಹಾಪರಾಧ. ಈ ಅಪರಾಧಗಳು ಪಾಪಗಳು. ಇಂಥ ತಾಟಸ್ಥ್ಯ ರೂಪದ, ಅಪ್ರತ್ಯಕ್ಷವಾದ, ಅಸಹನಾರಹಿತತೆಯ ಜೀವನವು ಪಾಪಕಾರಿ ಎಂಬುದನ್ನು ಸಂಘತತ್ವಾನುಯಾಯಿಗಳು ಅರಿತಿರಬೇಕು. ಅಸಹಕಾರವು ಅನುಷೇಧಾತ್ಮಕ (Positive) ಎಂಬುದನ್ನು ಗಾಂಧಿಯವರು ತೋರಿಸಿಕೊಟ್ಟಿದ್ದಾರೆ; ಅದು (Negative) ನಿಷೇಧಾತ್ಮಕವಾದಾಗ ಅಸ್ಪೃಶ್ಯತಾಚಾರಣೆಗಿಂತಲೂ ಕೀಳು. ಅದರಿಂದ ಅಪಸಹಕಾರಿಗಳ ಬಲವನ್ನು ಬೆಳೆಯಗೊಟ್ಟ ದೋಷ ಉಂಟಾಗುತ್ತದೆ.

ಏಕಸ್ವಾಮ್ಯದ ಸರ್ವಾಧಿಕಾರಿ ಆಡಳಿತದಂತೆಯೇ ವಿವಿಧಸ್ವಾಮ್ಯದ ಶಿಥಿಲ ಆಡಳಿತವೂ ಶೋಷಣಹೇತು. ಈ ಉಭಯ ಅತಿ ಪರಿಸ್ಥಿತಿಗಳಿಗೆ ರಾಷ್ಟ್ರದಂತೆಯೇ ಸಹಕಾರ ಅಥವಾ ಸಹಕಾರೇತರ ಸಂಸ್ಥೆಯೂ ಅವಕಾಶ ಕೊಟ್ಟೀತು. ಹಾಗೆ ಕೊಡದಂತೆ ಸಮತೋಲವನ್ನು ಕಾಯ್ದುಕೊಂಡು ಹೋಗುವ ಸಹಕಾರಿ ಸಂಘದ ಸದಸ್ಯರೂ ಅವರೊಡನೆ ಸಹಕರಿಸುವ ಇಲಾಖಾಧಿಕಾರಿಗಳೂ ಸ್ತುತ್ಯರು. ಸಂಘಗಳೂ ಇಲಾಖೆಗಳೂ ಒಂದು ಗಾಡಿಯ ಎರಡು ಎತ್ತುಗಳಂತಿದ್ದಾರೆ. ಈ ಎತ್ತುಗಳೆರಡೂ ನ್ಯಾಯಕಾಗಿ ಸಹಕರಿಸುತ್ತಿರುವುದು ನ್ಯೂನ್ಯವಾದಾಗ ಸಹಕಾರದ ವ್ಯವಹಾರಗಳು ಕ್ರಮ ತಪ್ಪುವವು. ಎರಡರಲ್ಲಿ ಯಾವ ಎತ್ತು ಕರ್ತವ್ಯವಿಮುಖವಾದರೂ ಸಹಕಾರಿ ವ್ಯವಹಾರವು ತೃಪ್ತಿಕರವಾಗಿ ಸಾಗದು. ಅಲಕ್ಷ್ಯ, ವಿಲಂಬ, ಅಪತಾಟಸ್ಥ್ಯ, ಅಪ್ರಾಮಾಣಿಕತೆ, ಅಕಾಲಿಕ ಅಥವಾ ಅಸಾಂದರ್ಭಿಕ ಎನ್ನಿಸುವ ವ್ಯವಹಾರಗಳಿಂದ ಸಂಘ–ಸಂಸ್ಥೆಗಳು ದೂಷಿತವಾಗಿ ಕೊನೆಗೆ ಒಮ್ಮೆ ದುರ್ಬಲಗೊಳ್ಳುತ್ತವೆ. ಸರಕಾರವೂ ಒಂದು ಸಹಕಾರಿ ಸಂಸ್ಥೆ–ಆದರ್ಶ ಪ್ರಜಾಪ್ರಭುತ್ವದಲ್ಲಿ. 'ಸರಕಾರ–ಸರ್ವಾಧಿಕಾರ' ಎಂಬತ್ತ ಹೊರಳುತ್ತಿರುವ ಉಚ್ಚಾವಚ ಅಧಿಕಾರಿಗಳ ಹಾಗೂ ಮಂತ್ರೀಶ್ವರರ ಉಗ್ರದಂಡ ಅಥವಾ ಶಿಥಿಲ ದಂಡಗಳಿಂದ ಪ್ರಜಾಪ್ರಭುತ್ವವೆಂಬ ಮಹಾಸಂಘದ ಕೀರ್ತಿಯು ಕಲಂಕಿತವಾಗುವುದು. ಆಗ 'ಯಥಾ ರಾಜಾ ತಥಾ ಪ್ರಜಾಃ' ಎಂಬಂತಾಗುವುದು. ಕಾಡಿನ ಕಾಯ್ದೆಯ ಮೂಲಕ ವ್ಯಕ್ತವಾಗುವುದು. ಈLaw of the Jungle ಕಾಡಾಡಳಿತದಲ್ಲಿ Might is right ಭೌತಬಲಕ್ಕೆ ಎಲ್ಲರೂ ಹೆದರಿ ನಡೆದುಕೊಳ್ಳಬೇಕಾಗುತ್ತದೆ.ನ್ಯಾಯದೇವತೆ ಊರನ್ನು ಬಿಟ್ಟು ಓಡುತ್ತಾಳೆ.

'ಬುದ್ಧಿರ್ಯಸ್ಯ ಬಲಂ ತಸ್ಯ' ಮತ್ತು 'ಉಪಾಯೇನ ಹಿ ಯಚ್ಛಕ್ಯಂ ನ ತಚ್ಛಕ್ಯಂ ಪರಾಕ್ರಮೈಃ' ಎಂಬ ನೀತಿಗಳು ಸಹಕಾರಿಗಳಾದ ನಮ್ಮನ್ನು ಆಪತ್ಕಾಲದಲ್ಲಿ ಎಚ್ಚರಿಸಬೇಕು. ಈ ನೀತಿಗಳನ್ನು ಅನುಸರಿಸದೆ ಹೋದರೆ ಸಹಕಾರದ ಸತ್‌ಪರಿಣಾಮಕತೆ ಬಹಳ ಕಾಲ ಉಳಿಯದು ಎಂಬುದನ್ನು ಕೆಲ ಒಳ್ಳೆಯ ಸಹಕಾರಿ ಸಂಘಗಳು ತೋರಿಸಿಕೊಟ್ಟಿವೆ. ಹಾಗೆ ಅನುಸರಿಸಿ ಚೆನ್ನಾಗಿ ಬದುಕಿ ಮೇಲೆದ್ದ ಸಂಘಗಳ ಸಂಖ್ಯೆ ಅಲ್ಪವಾದರೂ ಅವು ಒಳ್ಳೆಯ ಉದಾಹರಣೆಗಳಾಗಿವೆ.

ದೇವರು ಮನುಷ್ಯನನ್ನು ತನ್ನಂತೆಯೇ ಮಾರ್ಪಡಿಸಲು ಉಪಕ್ರಮಿಸಿದಾಗ, ಮನುಷ್ಯನು ದೇವರನ್ನು ತನ್ನ ಹಾಗೇ ಇರುವನೆಂದು ಕಲ್ಪಿಸಿ ಉಳಿಯಬೇಕಾಯಿತಂತೆ. ಹೇಗೆ ಎಂದರೆ ತಾಮಸಿಕ ರಾಜಸಿಕ ಗುಣಗಳ ಪ್ರವಾಹದಲ್ಲಿ ಮುಳುಗಿರಬೇಕಾದ ಸ್ಥಿತಿ. ಅದರಲ್ಲೂ ತಮಸ್ಸು ಅಧಿಕ ಪ್ರಭಾವಿ. ಅದೇ Evil ಕೇಡು. ಈ ಕೇಡಿಗತನದ ಅಜ್ಞಾನಾಂಧಕಾರದೊಡನೆ ಸಾತ್ವಿಕರು ಹೋರಾಡಬೇಕಾಯಿತು. ಇದೇ ದೇವಾಸುರ ಯುದ್ಧ. ಆದುದರಿಂದ ಜಿಂಕೆಗಳು, ಸಜ್ಜನರು ಮತ್ತು ಮೀನುಗಳು ತಾಮಸ–ರಾಜಸ ವಿರೋಧಿಗಳಿಂದ ಸುರಕ್ಷಿತವಾಗಿರಲು ಸಂಘಟಿತ ಪ್ರಯತ್ನವನ್ನು ಮಾಡುತ್ತಲೇ ಇರಬೇಕು. ಸುಮ್ಮನಿದ್ದರೆ ಅಪಾಯ ಕಾದಿರುತ್ತದೆ.

ನಮ್ಮ ದೇಶದಲ್ಲಿ ಬೂರ್ಜ್ವರೂ ಒಂದೇ, ಕಮ್ಯುನಿಷ್ಟರೂ ಒಂದೇ. ಏಕೆಂದರೆ ಎರಡು ಬಣ್ಣಗಳಲ್ಲೂ ಧ್ಯೇಯದಂತೆ ನಡೆದುಕೊಳ್ಳುವವರು ತೀರ ಕಡಿಮೆ. ಇತ್ತ ಧನಿಕರು ನಡೆಸುವ ಯೋಗ ಕ್ಷೇಮ ಸರಕಾರವೂ ಇಲ್ಲ, ಅತ್ತ ಬಡಜನರ ಸ್ವಾವಲಂಬನದ ಸಮೃದ್ಧಿಯ ಸರಕಾರವೂ ಇಲ್ಲ. ಗುಣದಲ್ಲಿ ಇತ್ತಂಡದವರೂ ದರಿದ್ರರು. ಇಂಥ ಆವರಣದಲ್ಲಿ ಸದುದ್ದೇಶವನ್ನು ಪಾಲಿಸಿಕೊಂಡು ಬರುತ್ತಿರುವ ಅಧಿಕೃತ ಸಂಘ–ಸಂಸ್ಥೆಗಳು ಎಷ್ಟು ಜಾಗರೂಕತೆಯಿಂದಿದ್ದರೂ ಕಡಿಮೆಯೇ. ಹಣವೆಂದರೆ ಹೆಣವೂ ಬಾಯ್ಬಿಡುವಂತಾಗಿರುವಾಗ ಧಾನ್ಯಾದಿಗಳ ಯೋಗ್ಯ ದರದ ಸೀದಾ ಅಂಗಡಿಗಳ ಸಹಕಾರ ಚಟುವಟಿಕೆಗಳೂ ಅಳುತ್ತ ಸಾಗುವಂತಾಗಿದೆ. ಕೊಲೆ, ಸುಲಿಗೆ, ದರೋಡೆ, ದುರ್ವ್ಯಯಗಳ ವೃತ್ತಾಂತಗಳನ್ನು ನಾವು ದಿನವೂ ಪತ್ರಿಕೆಗಳಲ್ಲಿ ಓದುತ್ತಿದ್ದೇವೆ. ಒಂದಲ್ಲ ಒಂದೆಡೆ ಅಂಥ ಕೃತ್ಯಗಳು ನಡೆಯದ ದಿನಗಳೇ ಇಲ್ಲವೆಂಬಂತಾಗಿದೆ. ಈ ಆವರಣದ ಪ್ರಭಾವಕ್ಕೆ ತುತ್ತಾಗದೆ ಧೈರ್ಯದಿಂದ ಮುನ್ನಡೆ ಇಡುವ ಸಹಕಾರಿ ವ್ಯವಹಾರ ಕೂಟಗಳನ್ನು 'ಭೇಷ್' ಎಂದು ಬೆನ್ನು ತಟ್ಟಬೇಕು.

ಮಲೆನಾಡಿನ ಮಣ್ಣು, ನೀರು, ವನಸ್ಪತಿ ಕುಲಗಳಿಗೆ ಅನುಗುಣವಾದ ಅಭಿವೃದ್ಧಿ ಯೋಜನೆಗಳನ್ನು ಆಯಾ ಸಹಕಾರಿ ಸಂಘಗಳು ತಮ್ಮ ತಮ್ಮ ಕ್ಷೇತ್ರಗಳಿಗೆ ಪರಿಸೀಮಿತವಾಗಿ ತಯಾರಿಸಿಕೊಳ್ಳುವುದೊಂದು, ಹಾಗೇ ಆ ಸಂಘಗಳೆಲ್ಲ ಸೇರಿ ಇಡಿ ಮಲೆನಾಡಿನ ಅಭಿವೃದ್ಧಿಯ ಸರ್ವಸಾಧಾರಣ ಯೋಜನೆಗಳನ್ನು ತಯಾರಿಸಿಕೊಂಡು ಮೊದಲಿನವುಗಳನ್ನು ಎರಡನೆಯವುಗಳೊಳಗೆ ಅಳವಡಿಸಿಕೊಳ್ಳುವುದು ಇನ್ನೊಂದು. ಸಹಕಾರಿ ಪದ್ಧತಿಯ ಅಭಿವೃದ್ಧಿ ಯೋಜನೆಗಳಿಗೆ ಯಾವ ರಾಜಕೀಯ ಪಕ್ಷದ ಯಾವ ತತ್ವಗಳೂ ಅಡ್ಡಬರಲಾರವು; ಅಡ್ಡಬರುವುದು ವೈಯಕ್ತಿಕ ಸ್ವಾರ್ಥಪರಾಯಣತೆಯ ನೇತೃತ್ವವೊಂದೇ. ಹಿಂದೆ ಶಿರಸಿಯಲ್ಲಿ ಮಲೆನಾಡು ಅಭಿವೃದ್ಧಿಯ ಬಗ್ಗೆ ನಡೆದ ಪರಿಷತ್ತು ೪೨ ಠರಾವುಗಳನ್ನು ಪಾಸು ಮಾಡಿದ್ದಂತೆ ನೆನಪು. ಅಲ್ಲಿಂದ ಇಲ್ಲಿಯವರೆಗೂ 'ಮಲೆನಾಡು ಡೆವಲಪ್‌ಮೆಂಟ್ ಬೋರ್ಡ್' ಹುಟ್ಟಲಿಲ್ಲ. ಏಕೋ ಇಡಿ ಮಲೆನಾಡಿನ ಜನರ ಮುಂದಾಳುಗಳ ಬಲವಾದ ಐಕಮತ್ಯ ಉಂಟಾಗಲಿಲ್ಲ. ಕೇರಳದಲ್ಲಿರುವಷ್ಟು ಒಕ್ಕಟ್ಟೂ ಕರ್ನಾಟಕದಲ್ಲಿಲ್ಲವೆಂದು ತೋರುತ್ತದೆ. ಚುನಾವಣೆಯ ಕ್ಷೇತ್ರಗಳ, ಚುನಾಯಿಸಲ್ಪಡುವ ವ್ಯಕ್ತಿಗಳ ಹಾಗೂ 'ಸೀಟು'ಗಳ ಕಾಯ್ದಿಡುವಿಕೆ(Reservation) ಪ್ರತ್ಯಕ್ಷಾ ಪ್ರತ್ಯಕ್ಷವಾಗಿ ನಡೆದೇ ಇದೆ. ಮತದಾರರ ಜಾತಿ ಪ್ರಧಾನವಾದ ಗುಂಪುಗಳ ಹಾಗೂ ದೋಚುವ ಪ್ರವರ್ತಿಯ ಚುನಾಯಿತರ ಕ್ರೀಡಾಂಗಣಗಳೇ ಹೆಚ್ಚುತ್ತ ಹೋಗಿರುವುದರಿಂದ ನಮ್ಮ ಪ್ರಜಾಪ್ರಭುತ್ವವೆಂಬ ಸಾಂಗಿಕ ಜೀವನ ವ್ಯವಹಾರಕ್ಕೆಗೆದ್ದಲು ಹಿಡಿದಂತಾಗಿದೆ.

**'ಸೂತೋವಾ ಸೂತಪುತ್ರೋವಾ ದುಷ್ಪಾತ್ರತ್ವೇನ ಶೋಭತೇ**

**ತದಾಯತ್ತಂ ಕುಲೇ ಜನ್ಮ ದೈವಾಯತ್ತಂ ತು ಪೌರುಷಂ'**

ಎಂಬುದು ಹಿಂದಕ್ಕೆ ತಳ್ಳಲ್ಪಡುತ್ತಿರುವ 'ಮುಂದುಳಿದವರು' ಎತ್ತಿ ತೋರಿಸುವ ಸೂತ್ರ. ಅದರಿಂದ ಕರ್ತವ್ಯದಕ್ಷತೆ ಹಾಗೂ ಪ್ರಾಮಾಣಿಕತೆಗಳು ಸಾರ್ವಜನಿಕ ಜೀವನದಲ್ಲಿ

ನಿವೃತ್ತವಾದವು. ಶಿಸ್ತು–ಸಂಯಮಗಳು ಗೈರು ಹಾಜರಾದವು. ಚುನಾವಣೆಗೆ ಹೇಳುವುದು ಒಂದು ಲಕ್ಷ, ವೆಚ್ಚ ಮಾಡುವುದು ಮತ್ತು ಅದಕ್ಕಾಗಿ ಸುಲಿಯುವುದು ೪–೫ ಲಕ್ಷ– ಎಂಬ ಇಂದಿನ ದಿನಮಾನದಲ್ಲಿ–

**ಯಾರಿಗ್ ಬೇಕಾಗೇತಿ ನಿನ್ ಕವಿತಾ**

**ಚಹಾ ಚೂಡಾ ತಾ**

ಎಂದು ಅಂಬಿಕಾದತ್ತರೆಂದುದಕ್ಕೆ ಬದಲಾಗಿ–

**ಯಾರಿಗ್ ಬೇಕಾಗೇತಿ ನಿನ್**

**ಸತ್ಯ, ಸಾಧುತ್ವ?**

**ಮಟನ್ ಶರಾಬ್ ತಾ**

ಎಂದು ಅಣಕವಾಡಬೇಕಾಗಿದೆ.

ಆದುದರಿಂದ–ಸತ್ಯವೀರ ಸಹಕಾರಿಗಳು ಜಾಗರಿತರಾಗಬೇಕು. ಈ ಆವರಣದ ದಾಳಿಯಿಂದ ವಿಚಲಿತರಾಗದೆ ತಮ್ಮ ಐಕ್ಯವನ್ನೂ ಸಹಕಾರವನ್ನೂ ಯೋಜನಾಬದ್ಧ ವ್ಯವಹಾರಗಳನ್ನೂ ನಿಷ್ಠೆಯಿಂದ ಮುನ್ನಡೆಸಿಕೊಂಡು ಹೋಗಬೇಕು.

‘ಜೈ ಮುಂದ್’



# ೪೨. ಕಾಲೇಜು–ವಿಶ್ವವಿದ್ಯಾನಿಲಯಗಳಲ್ಲಿ ಶಿಕ್ಷಣ ಮಾಧ್ಯಮ

ಮಾತೃಭಾಷೆಯ ಮೂಲಕ ಶಿಕ್ಷಣ ದೊರಕಬೇಕೆಂಬುದು ಸಾಮಾನ್ಯ ನಿಯಮ. ಇಡೀ ದೇಶದ ದೃಷ್ಟಿಯಿಂದ ಇಲ್ಲಿರುವ ಭಾಷೆ–ಉಪಭಾಷೆಗಳನ್ನು ಗಣನೆಗೆ ತೆಗೆದುಕೊಂಡರೆ ಉಕ್ತ ನಿಯಮದ ವ್ಯಾಪ್ತಿ ಕೆಲವೆಡೆ ಬಾಲವಾಡಿಗಳಿಗೆ ಮತ್ತು ಕೆಲವೆಡೆ ಪ್ರಾಥಮಿಕ ಶಾಲೆಗಳಿಗೆ ಮಾತ್ರ ಪರಿಸೀಮಿತವಾಗಿರುವುದು ಅನಿವಾರ್ಯವಾಗಿದೆ.

ಪ್ರಾದೇಶಿಕ ಭಾಷೆಗಳು ಆಯಾ ಪ್ರದೇಶದ ಬಹುಸಂಖ್ಯಾತ ಪ್ರಜೆಗಳ ಭಾಷೆಗಳು. ಅವುಗಳನ್ನು 'ಶಿಕ್ಷಣ ಮಾಧ್ಯಮ'ಗಳನ್ನಾಗಿ ಮಾಡುತ್ತ ಬರಲಾಗಿದೆ. ಅಲ್ಪಸಂಖ್ಯಾತರು ದ್ವಿಭಾಷಿಗಳಾಗಿರುವುದರಿಂದ ಡಾ.ದ.ರಾ.ಬೇಂದ್ರೆಯವರಂದಂತೆ ಅವರಿಗೆ ಮನೆಮಾತು 'ಮನೆಮಾತು', ಪ್ರಾದೇಶಿಕ ಭಾಷೆಯು 'ಮನದ ಮಾತು'. ಹಿಂದುಸ್ತಾನದಲ್ಲೀಗ ೧೪ ಮನದ ಮಾತುಗಳಿವೆ. ೧೫ನೆಯ ಮನದ ಮಾತಾಗಲು ಆ ಈ ಮನೆಮಾತುಗಳು ಪ್ರಯತ್ನಿಸಿದರೂ ಜಯಶಾಲಿಗಳಾಗಲಿಲ್ಲ. ಆಗಬೇಕೇ?

೧೬ನೆಯ ವರ್ಷ ವಯಸ್ಸಿನವರು 'ಪ್ರೀಯೂನಿವರ್ಸಿಟಿ' ವರ್ಗಗಳಿಗೆ ಬರುವ ಪ್ರೌಢರು. ಅದರೆ ಅನಂತರ ಅವರು ಕನ್ನಡ ಎಂ.ಎ. ಮುಗಿಸಿದರೂ ಅವರ ಕನ್ನಡ ಭಾಷಾವ್ಯುತ್ಪತ್ತಿಯಿಂದು ಸಂಪೂರ್ಣ ತೃಪ್ತಿಕರವಾಗಿರುವುದು ವಿರಳ. ಸಂಸ್ಕೃತದ ಪೂರಕಾಭ್ಯಾಸ ಸಾಕಷ್ಟಿಲ್ಲದ ಪ್ರತಿಯೊಬ್ಬ ಪ್ರಾದೇಶಿಕ 'ಭಾಷಾ ದ್ವಿಪದವೀಧರ'ನ ಮಟ್ಟವೂ ಇದೇ ತರಹದ್ದಾಗಿರುತ್ತದೆ. ಅವನೊಬ್ಬ ಹೋದಲ್ಲಿ ಎಡವಿ ಬೀಳುವ 'ಅಲ್ಪಪ್ರಾಣಿ'. ತತ್ಫಲವಾಗಿಯೇ ಇಂದಿನ ಕರ್ನಾಟಕದಲ್ಲಿ ಅವನಷ್ಟೂ ಕನ್ನಡ ಪಾಂಡಿತ್ಯವಿಲ್ಲದ ಆಂಗ್ಲಭಾಷಾವಿದರಲ್ಲಿ ಕೆಲವರು ಬರೆದ 'ಬಟ್ಲರ್ ಕನ್ನಡ'ಕ್ಕೆ ಬಹುಮಾನ ದೊರಕಲಾರಂಭಿಸಿದೆ!

ವಿದೇಶಗಳಲ್ಲಿ ಆಯಾ ರಾಷ್ಟ್ರದ ಭಾಷೆ–ಸಂಸ್ಕೃತಿಗಳಲ್ಲಿ ವಿಶೇಷ ಯಾ ಸಾಮಾನ್ಯ ಪಾಂಡಿತ್ಯವನ್ನು ಪಡೆದ ಬಳಿಕವೇ ಪರಭಾಷೆ, ಪರ–ಸಂಸ್ಕೃತಿಗಳ ಅಭ್ಯಾಸವನ್ನು ಆರಂಭಿಸುವುದು ಸಹಜ ರೂಢಿ. ಆಂಗ್ಲ ಪ್ರಭುತ್ವದ ಪರಿಣಾಮವಾಗಿ ಈ ದೇಶದಲ್ಲಿ ಅಂಥ ರೂಢಿ ಇಲ್ಲ. ಆದರೂ ಆಂಗ್ಲ–ಭಾಷಾ ಪ್ರಭುತ್ವವೀಗ ಪದವೀಧರರಲ್ಲಿ ಬಹಳ ಕೆಳಮಟ್ಟಕ್ಕಿಳಿದಿರುವುದು ಕಂಡು ಬಂದಿದೆ.

ಭಾಷಾಜ್ಞಾನ ಹೀಗಾದರೆ ವಿಜ್ಞಾನಾಭ್ಯಾಸ ಏನಾಗಿದೆ? ಅದೂ ಅರ್ಧ ಹಾಗೆ ಅರ್ಧ ಹೀಗೆ ಎಂಬಂತೆ ಸಾಗಿದೆ. ವಿಜ್ಞಾನ ಪದವೀಧರರ ಸಾಮಾನ್ಯ ಭಾಷಾಜ್ಞಾನ ಇನ್ನಷ್ಟು ದುರ್ಬಲ. ತನ್ನ ಒಲವಿನ ಪರೀಕ್ಷೆಯಲ್ಲಿ ಉತ್ತೀರ್ಣರಾಗದ ವಿದ್ಯಾರ್ಥಿಗಳಿಗೆ–

ಒಲವರಿಯದ ಶಿಷ್ಯರಿಗೆ–ಅವರ ಉದ್ಯೋಗ–ಮಾರುಕಟ್ಟೆಯ ಅಂದಾಜಿನ ಪ್ರಕಾರ ಬೇಕಾದ ವಿಷಯದ ವರ್ಗಗಳಿಗೆ ಸೇರಿಸಿಕೊಂಡು, ಹೇಗಾದರೂ ಪಾಠ ಹೇಳಿ, ಹೇಗಾದರೂ ಉತ್ತೀರ್ಣರನ್ನಾಗಿ ಮಾಡುವ ದುರುದ್ಯೋಗವು 'ಜ್ಞಾನಲವದುರ್ವಿದಗ್ಧ'ರ ಸಂಖ್ಯೆಯನ್ನು ಬೆಳೆಸಲು ಕಾರಣವಾಗಿದೆ.

ವಾಗ್ವಧದ ಇಂದಿನ ಪರಿಸರದಲ್ಲಿ ಪ್ರಾದೇಶಿಕ ಭಾಷಾಮಾಧ್ಯಮದಿಂದ ತಾಂತ್ರಿಕ–ವೈಜ್ಞಾನಿಕ ವಿಷಯಗಳನ್ನು ಬೋಧಿಸುವುದು ಹಾಸ್ಯಾಸ್ಪದ. ಮಹಾ ದಿನಪತ್ರಿಕೆಗಳು ಕೂಡ 'ಒಟ್ಟಾಭಿಪ್ರಾಯ', 'ವಿಶ್ವಸ್ಥ ಸಂಸ್ಥೆ', 'ಷಷ್ಟ್ಯಬ್ದಿ', 'ನೆಹರೂರವರು', 'ಮಾಡಲೆತ್ನಿಸು' ಎಂಬಂತಹ ಅಪಾರಿಭಾಷಿಕ ಪದಗಳನ್ನೂ–ಪಠ್ಯಪುಸ್ತಕಗಳೂ ಕೂಡ 'ಧ್ವನಿಮಾಗಳು', 'ಸೀತಾಳು', 'ಅಕ್ಕಳು' ಮುಂತಾದ ಅವ್ಯಾಕರಣರೂಪಗಳನ್ನೂ ನಿರ್ಲಜ್ಜವಾಗಿ ಬಳಸಲಾರಂಭಿಸಿದಾಗಲೂ–ಹೊಸ ಕನ್ನಡ ಶಬ್ದಕೋಶಗಳೂ ವಿಶ್ವಕೋಶಗಳೂ ವಿಮರ್ಶಗ್ರಂಥಗಳೂ ಎಷ್ಟೋ ವೇಳೆ ಭಾಷಾಶುದ್ಧಿಯನ್ನು, 'ಬೆಳೆಯುವ ಭಾಷೆ' ಎಂದು ಒಗ್ಗರಿಸಿ, ಬಿಟ್ಟು ಕೊಡಲಾರಂಭಿಸಿದಾಗಲೂ ಕನ್ನಡ ಮಾಧ್ಯಮವನ್ನು ತಂದದ್ದರಿಂದ ಸಾಂಸ್ಕೃತಿಕ ಮೇಲ್ಮೆ ಹೆಚ್ಚುವುದೆಂದು ಹೇಳಲು ನನಗೆ ಧೈರ್ಯವಿಲ್ಲ. 'ಸಂಸ್ಕೃತಭೂಯಿಷ್ಠ' ಎಂದು ಬಯ್ಯಲಾರಂಭಿಸಿ, ಅನವಶ್ಯಕವಾಗಿ ಇಂಗ್ಲಿಷ್ ಪದಗಳನ್ನೂ ಕನ್ನಡ ಗ್ರಾಮ್ಯಗಳನ್ನೂ ಅಪತತ್ಸಮಪದಗಳನ್ನೂ, ಬೇಕಾದ ಹಾಗೆ, ವಿಶ್ವವಿದ್ಯಾನಿಲಯಗಳು ಸಹ, ಕೆಲಸಲ, ಬಳಸಲಾರಂಭಿಸಿರುವಾಗ, ಕನ್ನಡವು 'ಕತ್ತುರಿ'ಯಾಗದೆ ಉಳಿದೀತೇ? ಕತ್ತಿಗೆ (ಕೊರಳಿಗೆ) ಉರಿ ಯಾ ತುರಿ ಉಂಟುಮಾಡುವ ಪದಾರ್ಥ ಕತ್ತುರಿ! ಕನ್ನಡ ಭಾಷೆಯ 'ಜಾಯಮಾನ'ದ ಬಗೆಗೆ ಅಭಿಮಾನ ತಾಳುವವರ ಹಾಗೆ ಮಾತಾಡುವ ಅನೇಕರು 'ಆ ನಾಡವರ್ಗಳ್ ಕುರಿ' ಎಂಬ ವಿ.ಜಿ.ಭಟ್ಟರ ಉದ್ಧೃತ ವಾಕ್ಯದಂತೆ ಎಷ್ಟೋ ಸಲ ಟೊಳ್ಳುಗಟ್ಟಿಗಳಾದದ್ದುಂಟು. ಮನಃಶುದ್ಧಿ–ವಾಕ್‌ಶುದ್ಧಿಗಳು ಪರಸ್ಪರ ಪ್ರಭಾವಿಗಳು. ಇದನ್ನರಿಯದ ಮಹಾಲೇಖಕರು ಸಹ ಈಗ ಕನ್ನಡ ರಾಜ್ಯದಲ್ಲಿ ಆಗಿಹೋಗಿದ್ದಾರೆ!

ಕಾಲೇಜುಗಳಲ್ಲಿ ಪ್ರದೇಶಭಾಷಾಮಾಧ್ಯಮದಿಂದ ಪಾಸಾದವರಿಗೆ ಅಖಿಲ ಭಾರತೀಯ ವ್ಯಾಪಾರ, ವ್ಯವಹಾರ, ಉದ್ಯೋಗಗಳಲ್ಲಿ ಸ್ವಾಗತ ಸಿಗುವುದು ದುರ್ಲಭವಾಗುತ್ತದೆ. ಪ್ರದೇಶ ಭಾಷೆಗಳ ಅತ್ಯಲ್ಪಸಂಖ್ಯಾತ ಮಹಾಗ್ರಂಥಗಳ ಅಪಭಾಷಾಂತರಗಳನ್ನೋ ಅಪಸಾರಸಂಗ್ರಹಗಳನ್ನೋ ಓದಿದ್ದರಿಂದ ಜ್ಞಾನದ ಮಟ್ಟವೂ ಬಹಳ ಕೆಳಗಿರುತ್ತದೆ. ಈ ಪರಿಸ್ಥಿತಿಯಲ್ಲಂತೂ ಇಲ್ಲಿಯ ಪ್ರಜೆ ಕೇವಲ ಕನ್ನಡವನ್ನವಲಂಬಿಸಿ ತನ್ಮೂಲಕ ಉನ್ನತ ಮಟ್ಟದ ಸುಸಂಸ್ಕೃತ ವ್ಯಕ್ತಿತ್ವವನ್ನು ಬೆಳೆಯಿಸಿಕೊಳ್ಳುವುದು ಅಸಾಧ್ಯ. ಇಂಗ್ಲಿಷ್ ಕಲಿತ, ಕನ್ನಡ ಮಾತಾಡಲು ಬರುವ ಮಹನೀಯರ ಸಾಹಿತ್ಯ ವಿಮರ್ಶೆಗಳಿಗೆ ಅಗ್ರಸ್ಥಾನ ಕೊಡುತ್ತಿರುವ ಕನ್ನಡ 'ರಸಿಕರ' ಹಾರಾಟ ನಗರ–ಪಟ್ಟಣಗಳಲ್ಲಿ ಹೆಚ್ಚಿರುವುದಿದಕ್ಕೆ ಸಾಕ್ಷಿ. ಇಂಗ್ಲಿಷಿನಲ್ಲಿ 'Standard, colloquy and slang' ಎಂಬ ಭೇದವಿರುವುದನ್ನು ಕೂಡ ಕಂಡರಿಯದ ಶಬ್ದಕೋಶಕಾರರೂ ಕನ್ನಡದಲ್ಲೀಗ ಕಂಡುಬಂದಿದ್ದಾರೆ. ತಮ್ಮ ತಪ್ಪೆಲ್ಲವೂ ಬೆಳೆಯುತ್ತಿರುವ ಕನ್ನಡದ ರೂಢಿ ಎಂದು ಆಗ್ರಹಿಸುವವರ

ಯಾಜಮಾನ್ಯವಿರುವವರೆಗೆ ಕನ್ನಡ ಮಾಧ್ಯಮವು ನಮ್ಮಲ್ಲಿ ವ್ಯಕ್ತಿತ್ವ–ಸಚ್ಚಾರಿತ್ರಗಳ ಹಾಗೂ ಜ್ಞಾನಗಾಂಭೀರ್ಯದ ಬೆಳವಣಿಗೆಗೆ ಕಾರಣವಾಗಲಾರದು. ಕನ್ನಡ ಪಂಡಿತ ಪರೀಕ್ಷೆ ಮೂಲೆಗುಂಪಾಗಿ ಹೋದದ್ದು ಕನ್ನಡವನ್ನು ಪಸರಿಸುವ ಹೊಸ ಹುಮ್ಮಸ್ಸಿನ ಬಣ್ಣವನ್ನು ಹೊರಗೆಡಹುತ್ತದೆ. ಕನ್ನಡದ ಕಾವ, ಜಾಣ, ರತ್ನ ಪರೀಕ್ಷೆಗಳಿಗೆ ದೊರೆತ ಸರಕಾರಿ ಅನಭಿಜ್ಞಾನ ಅವುಗಳ ಮಟ್ಟಗಳಿಗೆ ಸಾಕ್ಷಿಯಾಗಿದೆ.ಪಾಂಡಿತ್ಯನಿಂದೆಯನ್ನು ಹೆಮ್ಮೆಯ ವಿಷಯವೆಂದು ಗಣಿಸುವ 'ಸುದ್ದಗನ್ನಡಿಗರ' ಪ್ರಾಧಿಕಾರವು ಕನ್ನಡದ ಅಭಿಮಾನಿಗಳ ಉತ್ಸಾಹವನ್ನು ಕುಗ್ಗಿಸಿದೆ.

ಭಾಷೆಯ ತಪ್ಪು ಮಾಡದೆ ಕನ್ನಡದಲ್ಲಿ ಸಾಮಾನ್ಯ ವಿಷಯಗಳನ್ನು ಕುರಿತು ಬರೆಯುವ ಶಕ್ತಿ ಪ್ರೌಢಶಾಲಾಂತ ಪರೀಕ್ಷೆಯೊಳಗೆ ಬಂದಿರಬೇಕು. ಕನ್ನಡ ಶಿಕ್ಷಕರಲ್ಲೇ, ಕಾಲೇಜುಗಳಲ್ಲಿ, ಅಂಥ ಶಕ್ತರು ವಿರಳವಾಗುತ್ತ ಹೋಗಿದ್ದಾರೆ. ಹೀಗಿರುವಾಗ ವಿಷಯಗಳಿಗೆ ಗಮನ ಕೊಡುವುದು ಯಾವಾಗ? ಕಾಲೇಜುಗಳ ಅಭ್ಯಾಸಕ್ರಮ ಇರತಕ್ಕದ್ದು(ಭಾಷೆಯೇ ವಿಷಯವಾಗಿದ್ದಾಗ ಸಹ) ವಿಷಯಗಾಂಭೀರ್ಯಕ್ಕಾಗಿಯೇ. ವಿಷಯ ಗಾಂಭೀರ್ಯಕ್ಕಲ್ಲಿ ಪ್ರಥಮ ಸ್ಥಾನ. ವಿಷಯಾಸಕ್ತಿಯ ಪ್ರಾಧಾನ್ಯ ಅತಿಯಾಗುತ್ತ ಹೋಗಿರುವುದರಿಂದ ವಿಷಯಾಭಿಜ್ಞತೆ ಅಲ್ಲೀಗ ಇರಬೇಕಾದಷ್ಟಿಲ್ಲ. 'ಮಾಧ್ಯಮ' ಪ್ರಾಧಾನ್ಯವು ಪ್ರೌಢಶಾಲೆಗಳಲ್ಲಿ ಗಣ್ಯ. ಭಾರತದ ರಾಷ್ಟ್ರಭಾಷೆಗಳಲ್ಲೆ ಹಿಂದಿ ಪ್ರಮುಖವಾಗಿರುವುದರಿಂದ ಅದು ಪದವೀ ವರ್ಗಗಳ ಶಿಕ್ಷಣ ಮಾಧ್ಯಮವಾಗತಕ್ಕದ್ದು ಸ್ವಾಭಾವಿಕ. ಆದರೆ ಹಿಂದಿ ವಿದ್ವಾಂಸರಲ್ಲಿ ಅನೇಕ ಯಜಮಾನರು ಹೊಸಗನ್ನಡದಲ್ಲಿಯ ಹಲವರಂತೆ ಸಂಸ್ಕೃತ ಭಾಷಾಭಿರುಚಿಯಲ್ಲಿ ಪಳಗದವರು. ಈಗ ಅದನ್ನು ಕಾಲೇಜು–ವಿಶ್ವವಿದ್ಯಾಲಯಗಳ ಉಪನ್ಯಾಸ 'ಮಾಧ್ಯಮ'ವನ್ನಾಗಿ ಸ್ವೀಕರಿಸುವುದು ಹಾನಿಕರ. ಅಲ್ಲದೆ, ಹಿಂದಿಯ ಲಿಂಗಭೇದ ಮೊದಲಾದ ಅಪೂರ್ವ ವ್ಯಾಕರಣ ನಿಯಮಗಳನ್ನು ಬದಲಾಯಿಸಬೇಕು. ಭಾರತಕ್ಕೆ(ಎಲ್ಲ ಭಾಷೆಗಳಿಗೂ) ಕನ್ನಡ ಅಥವಾ ಬಾಲಯೋಧ ಲಿಪಿ 'ಅಕ್ಷರಮಾಧ್ಯಮ'ವಾಗಬೇಕು. 'ಹಿಂದಿ–ಆಗ್ರಹ' ಕಡಿಮೆಯಾಗಬೇಕು. ಹಿಂದಿಯಲ್ಲಿ ಅತ್ಯಾಧುನಿಕ ಶಾಸ್ತ್ರಗ್ರಂಥಗಳು ಇನ್ನೂ ಹೆಚ್ಚಾಗಿ ರಚಿತವಾಗಬೇಕು–ಉಚಿತ ತತ್ಸಮಗಳನ್ನು ಬಳಸಿ ಅನುಚಿತ ತತ್ಸಮಗಳನ್ನು ದೂರಕ್ಕೆ ಅಟ್ಟಬೇಕು. ವಿದೇಶೀಯ ಉದ್ಗ್ರಂಥಗಳ ಹಿಂದ್ಯನುವಾದಗಳು ಹೆಚ್ಚಾಗಿ, ಚೆನ್ನಾಗಿ ಆಗಬೇಕು. ಅನಂತರ ಅದು ಕಾಲೇಜು–ವಿಶ್ವವಿದ್ಯಾಲಯಗಳಲ್ಲಿ ಶಿಕ್ಷಣಮಾಧ್ಯಮವಾಗುವುದು ಕ್ರಮಪ್ರಾಪ್ತ. ಈಗಿನ ಅಪ್ರಬುದ್ಧತೆಯ ದೆಸೆಯಿಂದ ಹಿಂದಿ(ಅಥವಾ ಕನ್ನಡ) ಈ ಹಿಂದೀಯೇತರ ರಾಜ್ಯಗಳಲ್ಲಿ ಈಗ ಉಪನ್ಯಾಸ 'ಮಾಧ್ಯಮ'ವಾಗಲು ಅರ್ಹವಾಗಿಲ್ಲ. ಆದುದರಿಂದ ಆಂಗ್ಲಭಾಷಾ ಪ್ರಭುತ್ವದ ಮಟ್ಟವನ್ನು ಪ್ರೌಢ(ಮಾಧ್ಯಮಿಕ) ಶಾಲೆಗಳಲ್ಲಿ ಹೆಚ್ಚಿಸಿ, ಅದನ್ನೇ ಕೆಲಕಾಲ ಕಾಲೇಜು–ವಿಶ್ವವಿದ್ಯಾಲಯಗಳಲ್ಲಿ ಮುಂಬರಿಸಿಕೊಂಡು ಹೋಗುವುದುತ್ತಮ.

ಭಾಷೆಯಅಪ್ರಬುದ್ಧತೆಯು ನಾಗರಿಕತೆಯ ಅಪ್ರಬುದ್ಧತೆಯ ಕುರುಹು. ವ್ಯಕ್ತಿತ್ವದ ಅಭಿವ್ಯಕ್ತಿ 'ಮಾಧ್ಯಮ'ಗಳಲ್ಲಿ ಭಾಷೆ ಬಹಳ ಗಣ್ಯ. 'ಮಾಧ್ಯಮ' ಎಂದು ಬಳಸುವುದು

ಅಪ್ರಬುದ್ಧತೆಯ ಅಥವಾ ದಾಸ್ಯದ ಕುರುಹು. 'ಬೋಧಕ' 'ವಾಹಕ'(ವ್ಯಂಜಕ) 'ವಾಚಕ' ಮುಂತಾದ ಪದಗಳೇಕೆ ಬೇಡವಾದವು? 'ಮಧುಚಂದ್ರ'ದ ಭ್ರಮೆಯಿಂದ; ಆಧುನಿಕತೆಯೆಂದರೆ ಆಂಗ್ಲತೆಯೆಂದು ಭ್ರಮಿಸಿದ್ದರಿಂದ; ಆಧುನಿಕತೆಯೆಂದರೆ ಯೂರೋಪೀಯತೆಯಲ್ಲ ಎಂದು ರವೀಂದ್ರರು ಎಚ್ಚರಿಕೆ ಕೊಟ್ಟದ್ದನ್ನು ಮರೆತದ್ದರಿಂದ; ರವೀಂದ್ರರು ಕವಿಯೇ ಅಲ್ಲವೆಂದು 'ನವ್ಯಕವಿಗಳು' ಘೋಷಿಸಿದ್ದರಿಂದ! ಅಂಥ ಘೋಷಕರಿಗೇ ಸರಕಾರಿ ಪುರಸ್ಕಾರ ದೊರೆತುದರಿಂದ!

ಒಟ್ಟಿನಲ್ಲಿ ತಾತ್ಪರ್ಯವೇನೆಂದರೆ. 'ಹಲಗೆ ಬಳಪವ ಹಿಡಿಯದಗ್ಗಳಿಕೆ'ಯ ಬರಹಗಾರಿಕೆ ಸದ್ಯ ಕನ್ನಡವನ್ನು ಬೋಧನ ಭಾಷೆಯನ್ನಾಗಿ ಕಾಲೇಜಿನ ಪ್ರಥಮ ಪದವೀ ಪರೀಕ್ಷೆಗಳಿಗಾಗಿ ಓದುವವರ ವರ್ಗಗಳಿಗೂ ಬಳಸಲಾರದಂತೆ ಮಾಡಿದೆ. ಕುಮಾರವ್ಯಾಸನ ಅನುವಾದವನ್ನು ಅನುಸರಿಸಿ ಅಪ–ವಾದಗಳಿಗೆಡೆಗೊಟ್ಟಿರುವುದು ಅಯುಕ್ತ. ಸಮರ್ಥ ಕನ್ನಡದ ಉದಯಕ್ಕೆ ಅವಕಾಶ ದೊರೆತರೆ, ನಮ್ಮ ಕಾಲೇಜುಗಳಲ್ಲಿ ಕನ್ನಡವನ್ನು ಬೋಧನ ಭಾಷೆಯನ್ನಾಗಿ ತೆಗೆದುಕೊಳ್ಳಬಹುದು. ಆಮೇಲೆ ಹಿಂದಿ(ಅಂತಃಪ್ರಾಂತೀಯ ಭಾಷೆ) ಬೋಧನ ಭಾಷೆಯಾಗುವುದು ಸರಿ.

ಭಾಷಾದಾರ್ಢ್ಯಕ್ಕೂ ಜ್ಞಾನಗಾಂಭೀರ್ಯಕ್ಕೂ ಆಳವಾದ ಸಂಬಂಧವಿದೆ. ತಿಳಿದು ಓದುವ ಉತ್ತಮಾಭ್ಯಾಸವನ್ನು ಬಿಟ್ಟರೆ ಮಾತ್ರ ಈ ಮಾತು ಸುಳ್ಳು. ಭಾಷಾವ್ಯುತ್ಪತ್ತಿ ಚೆನ್ನಾಗಿಲ್ಲದಲ್ಲಿ 'ಸಸ್ಯಸಂಪದ' ಎಂಬುದು ಪತ್ರದ ಶೀರ್ಷಿಕೆಯಾಗುತ್ತದೆ; 'ಪುನರಾವತಾರ'ವು ಕಾದಂಬರಿಯ ಹೆಸರಾಗುತ್ತದೆ. 'ಅಂಧಃಕಾರ'ವು ದೊಡ್ಡ ಕವಿಗಳ ಬರೆಹದಲ್ಲಿ ಕೂಡ ತಲೆಹಾಕುತ್ತದೆ. ಪ್ರಾಧಾನ್ಯತೆ, ಪ್ರಾಮುಖ್ಯತೆ, ಪ್ರಾವೀಣ್ಯತೆಗಳಿಗಂತೂ ಲೆಕ್ಕ ಸಂಖ್ಯೆಯಿರದು. ಶಾಸ್ತ್ರದಲ್ಲಿ 'ಫಿಲ್ಟರ್' ಮಾಡಿ ಸೋಸುವುದಕ್ಕೆ ಕೊನೆಮೊದಲಿರದು. ಜೊತೆಗೆ ಒಂದೆಡೆಯ 'ಆಮ್ಲ'ವು ಇನ್ನೊಂದೆಡೆ 'ದ್ರಾವಣ'ವಾಗುತ್ತದೆ; ಧ್ವನಿವರ್ಧಕವೆಂಬುದು 'ಪ್ರಬಲವಾಚಿ'ಯಾಗುತ್ತದೆ. Excretary System 'ಮಲಸಂಸ್ಥೆ'ಯಾಗುತ್ತದೆ. 'ವಿಶ್ವಸ್ಥ'ನು ವಿಶಸ್ತ್ರನಾಗುತ್ತಾನೆ. 'ಕನ್ನಡ ಮಾತಿಗೆ ಹನ್ನೆರಡರ್ಥ' ಎಂಬುದು ಹೋಗಿ 'ಕನ್ನಡ ಮಾತು ವ್ಯಾಕರಣದ ತೂತು' ಆಗಿಹೋಗುತ್ತದೆ! ಈ ಹುರಿಗನ್ನಡಾವಸ್ಥೆಯಲ್ಲಿ 'ಮಧ್ಯಂತರ ಕಾರ್ಯಾಲಯ'ಗಳು (Sub offices) ಕನ್ನಡವನ್ನು ಬೋಧನಭಾಷೆಯನ್ನಾಗಿ ಬಳಸಲು ಅರ್ಹವೇ? ಇತರ ಪ್ರಾಂತಭಾಷೆಗಳು ಪಕ್ವದೆಶೆಯನ್ನು ಮುಟ್ಟಲು ಹೊರಟಿದ್ದರೆ ಅವು ಪದವೀವರ್ಗಗಳ ಭಾಷೇತರ ವಿಷಯಗಳಿಗೆ ಬೋಧನ ಭಾಷೆಯಾಗಬಹುದು–ಆಯಾ ಪ್ರಾಂತಗಳಲ್ಲಿ. ಪ್ರಸ್ತುತ ಲೇಖಕನ 'ಕಾವ್ಯಸೂತ್ರ'ವು ಎಲ್ಲಿಯವರೆಗೆ ಕನ್ನಡ ಪದವೀಧರರಿಗೂ ಕಬ್ಬಿಣದ ಕಡಲೆಯಾಗಿಯೇ ಉಳಿಯುತ್ತದೆಯೋ ಅಲ್ಲಿಯವರೆಗೆ ಕಾಲೇಜು–ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡವು ಬೋಧನ ಭಾಷೆಯಾಗಲಾರದು. ಒಮ್ಮೆ ಆದರೆ ಅದರಿಂದ ಆಗುವ ಸಾಂಸ್ಕೃತಿಕ ಹಾನಿ ಅಪಾರ. ಹಳ–ನಡುಗನ್ನಡ ಕಾವ್ಯಗಳ ಸರಳಾನುವಾದ ಯೋಜನೆಯನ್ನು ಮಾಡಿ ಕನ್ನಡ ಸಾಹಿತ್ಯ ಪರಿಷತ್ತು ಪ್ರಾರಂಭಿಸಲು ತತ್ಸಮೀಪಸ್ಥರನ್ನು ಬಿನ್ನವಿಸಿಕೊಂಡಿರುವುದು ಸಾಮಾನ್ಯರ ಕನ್ನಡದ ಅಭ್ಯಾಸದ ಮಟ್ಟ

ಎತ್ತ ಸಾಗಿದೆ? ಎಂಬುದನ್ನು ಬೊಟ್ಟು ಮಾಡಿ ತೋರಿಸುತ್ತದೆ. ಅಸಾಮಾನ್ಯರಲ್ಲಿ ಅನೇಕರು ಅವರಿಗಿಂತ ಉತ್ತಮರೆಂದು ಹೇಳುವುದು ಸಹ ಕಷ್ಟ. ಕನ್ನಡ ಅಭಿಜಾತ ಸಾಹಿತ್ಯ ಕೃತಿಗಳಿಗೆ ವಿಮುಖರಾಗಿರುವ ಸ್ಥಿತಿಯನ್ನು ಇಂದಿನ ಕನ್ನಡ ನಮ್ಮ ಮ್ಕಕಳಿಗೆ ತಂದುಕೊಟ್ಟಿರುವಾಗ, ಅದನ್ನು ಪಾಂಡವ ಮಧ್ಯಮನ ಬಲವುಳ್ಳ 'ಮಾಧ್ಯಮ' ಎಂದು ಗ್ರಹಿಸಿ, ಕಾಲೇಜು-ವಿಶ್ವವಿದ್ಯಾನಿಲಯುಗಳ ವರ್ಗಗಳಲ್ಲಿ ಬೋಧನಕ್ಕೆ ಬಳಸಲು(ಬಳಿಸಲು?!) ಸಾಧ್ಯವೇ?

ಮೇಲಿನ ಅಂಶಗಳನ್ನು ಗಮನಿಸಿದರೆ, ರಾಜಕೀಯ ಕ್ಷೇತ್ರದಲ್ಲಿ ಆಮೂಲಾಗ್ರ ಕ್ರಾಂತಿಯಾಗಬೇಕೆಂದು ಶ್ರೀ ಜಯಪ್ರಕಾಶ ನಾರಾಯಣರೆಂದಂತೆ ಪ್ರಸ್ತುತ ಲೇಖಕನಾದರೂ ಪ್ರಾಥಮಿಕ ಶಾಲೆಯಿಂದ 'ಮೆಟ್ರಿಕ್' ಪರೀಕ್ಷೆಯವರೆಗೆ ಕನ್ನಡಾಭ್ಯಾಸದಲ್ಲಿ ಆಮೂಲಾಗ್ರ ಉತ್ತಮ ಪರಿವರ್ತನವಾಗಬೇಕು-ಆಮೇಲೂ ಆಗಬೇಕು-ಎನ್ನುವುದು ಸಹಜ. ಹಾಗಾಗಿ, ಪ್ರೌಢಗನ್ನಡ ನಮ್ಮ ಸವಿದ್ಯರಲ್ಲಿ ನೆಲೆನಿಲ್ಲುವಂತಾದರೆ, ಉಚ್ಚ(ಉಚ್ಚ?!) ವಿದ್ಯಾಭ್ಯಾಸವನ್ನು ಕನ್ನಡದ ಮೂಲಕ ಕೊಡಹೊರಡುವುದು ಸೂಕ್ತ ಕ್ರಮವಾದೀತು.

ಶ್ರೀ ಅರವಿಂದರ 'Life Divine' ಮುಂತಾದ ಉಪಯುಕ್ತ ಮಹಾಗ್ರಂಥಗಳನ್ನು ಕನ್ನಡಿಸಲಾರದಾಗಿರುವಾಗ, ವೈಜ್ಞಾನಿಕ(ಆಂಗ್ಲ) ಗ್ರಂಥಗಳನ್ನು ಚೆನ್ನಾಗಿ(ಉಚ್ಚತರಗತಿಯವರ ಓದಿಗಾಗಿ) ಯಾರು ವಿಶ್ವವಿದ್ಯಾನಿಲಯದಲ್ಲಿ ಭಾಷಾಂತರ ಮಾಡಿಯಾರು? ಮಾಡಿ ಗೆದ್ದಾರು? ಷೇಕ್ಸ್‌ಪಿಯರನ ದುರಂತ ನಾಟಕಗಳನ್ನು ಯಾರು ಸಮರ್ಥವಾಗಿ ಕನ್ನಡಿಸಿದ್ದಾರೆ? ಶುಷ್ಕಾಭಿಮಾನದ 'ಬರಿ ಗುಲ್ಲು-ನಿದ್ದೆಗೇಡು' ಎಂಬ ಸಂದರ್ಭಗಳಿಂದ ಆಧುನಿಕ ಕನ್ನಡ ವಿದ್ಯಾಭ್ಯಾಸವನ್ನು ಯಾರು ಸಮರ್ಥವೆಂದು ಸಮರ್ಥಿಸಬಲ್ಲರು? 'ಅಪ್ರಿಯಸ್ಯ ಚ ಸತ್ಯಸ್ಯ ವಕ್ತಾ ಶ್ರೋತಾ ಚ ದುರ್ಲಭಃ' ಅಲ್ಲವೇ?

ಬ್ರಾಹ್ಮಣಸಾಹಿತ್ಯ, ಶೂದ್ರಸಾಹಿತ್ಯ, ವೀರಶೈವ ಸಾಹಿತ್ಯ. ಜೈನಸಾಹಿತ್ಯ, ವೈಷ್ಣವ ಸಾಹಿತ್ಯ-ಎಂದು ವಾಙ್ಮಯವನ್ನು ವರ್ಗೀಕರಿಸುವ 'ಜಾತ್ಯಾತೀತ'ವಾದವನ್ನು 'ಜಸ್ಟೀಸರು' ಎನ್ನಿಸಬಹುದಾದಂಥವರೂ ಕನ್ನಡನಾಡಿನಲ್ಲಿ ಎತ್ತಿ ಹಿಡಿಯುತ್ತಿದ್ದಾರೆ! ಮತಾಂಧತೆಯೇ ಇಲ್ಲಿಂದು ಕುರುಡು ನಂಬಿಕೆಗಳನ್ನು ಓಡಿಸಲು ಹೊರಟಿದೆ! ಆಂಗ್ಲಾಕ್ಷ-ಗ್ರಾಮ್ಯಾಕ್ಷರಿಂದ ವಾಙ್ಮಯ ನಿಯಂತ್ರಣವಿಲ್ಲಿ ವಿಕೃತವಾಗಿದೆ. 'ಅರ್ಥರಾಜನೀತಿ' ಅತಿ ಪ್ರಮುಖವಾಗಿರುವ ಇಂದು ಕನ್ನಡಕ್ಕೆ ಆರೋಗ್ಯವರ್ಧಕ ಯೋಜನೆ ಲಭಿಸುವುದು ವಿರಳ. ಆದುದರಿಂದ ಇಲ್ಲಿ ಈಗ ಉಚ್ಚ ಶಿಕ್ಷಣಾಲಯಗಳ ಬೋಧನವೆಲ್ಲ ಕನ್ನಡದ ಮೂಲಕ ತೃಪ್ತಿಕರವಾಗಿ ನಡೆಯದೆಂದು ತೋರುತ್ತದೆ.

ಉತ್ಸರ್ಗ ದೃಷ್ಟಿಯ ಪ್ರಕಾರ, ಆರೋಗ್ಯಕರ ಹವಾಮಾನದಲ್ಲಿ ಶಿಕ್ಷಣ ಶಾಸ್ತ್ರೀಯ ತತ್ವದ ಪ್ರಕಾರ-ಮನೆಮಾತು ಅತಿ ಯೋಗ್ಯವಾದರೂ, ಅತ್ಯಲ್ಪ ಸಂಖ್ಯಾಕರ ಮಾತಾದುದರಿಂದ ಅದನ್ನುಳಿದು-'ಮನದ ಮಾತಾದ' ಪ್ರಾಂತಭಾಷೆಗಳನ್ನು ಆಯಾ ಪ್ರಾಂತ ರಾಜ್ಯಗಳು ಪದವೀ ವರ್ಗಗಳವರೆಗೆ ಬೋಧನಕ್ಕೆ ಬಳಸುವುದು ಬಹುವಿದ್ವಾಂಸರಿಂದ ಸ್ವೀಕೃತವಾಗಿದೆ. ಪದವ್ಯುತ್ತರ ವರ್ಗಗಳಲ್ಲಿ ಅಖಿಲ

ಭಾರತ(ಸಾಮಾನ್ಯ) ಭಾಷೆ ಉಪಯುಕ್ತವಾಗುವುದು ಕ್ರಮಪ್ರಾಪ್ತ. ಹಿಂದಿಗಿಂತ ಮೂಲ ಸಂಸ್ಕೃತ ಯಾ ಸರಳ ಸಂಸ್ಕೃತ(Basic Sanskrit) ಆ ಸ್ಥಾನವನ್ನು ಇನ್ನೂ ಹೆಚ್ಚಾಗಿ ತುಂಬೀತೆಂದು ತೋರುತ್ತದೆ.



**[‘ಸುದರ್ಶನ’ – ಪುಟ ೪೧]**

# ೪೩. ಭಾರತೀಯ ಸಂಸ್ಕೃತಿಯಲ್ಲಿ ಅಡಿಕೆ

'ಕೌಂಗು' ಎಂದರೆ ಅಡಿಕೆ ಮರ. ಅದರ ಪೂಂಗು (ಹೂಗು) ಎಂದರೆ ಸಿಂಗಾರ ಹೂವು. ಭಾಷಾಶಾಸ್ತ್ರಿಗಳು ಪೂಂಗು ಎಂಬುದರಿಂದ **'ಪೂಗ'** ಎಂಬ ಸಂಸ್ಕೃತ ರೂಪ ಹುಟ್ಟಿತೆನ್ನುತ್ತಾರೆ. **'ಪುಷ್ಪ'**ವು ಅದರ ವಿಕಾರವೆಂದು ಕೆಲವರ ನಂಬಿಕೆ. **'ಪೂಜೆ'** ಕೂಡ ಈ ಭಾಷಾಕುಲದ್ದೇ ಎಂಬವರುಂಟು.

ಗಟ್ಟದ ಕೆಳಗಿನ ಗ್ರಾಮದೇವತೆ ಜಟ್ಟಿಗ. ಅವನು ಇಂದ್ರನ ಪ್ರತಿನಿಧಿ ಎಂಬವರೂ ಇದ್ದಾರೆ. ಹಾಗೇ ಸ್ಕಂದನ ಪ್ರತಿನಿಧಿ ಎಂಬವರೂ ಇದ್ದಾರೆ. ಜಟ್ಟಿಗ, ಜಟ್ಟಿ, ಷಷ್ಠ, ಷಣ್ಮುಖ ಎಂಬ ಪದಗಳು ಸಕುಟುಂಬಿಗಳು. ಇಂದ್ರನು ಜೆಂದಗ, ಜೆಂದ, ಜೆಂಡ, ಜೆಟ್ಟಿ ಆಗಬಹುದಂತೆ; ಜಟಿಂಗನೂ ಆಗಬಲ್ಲ!

ಜಟ್ಟಿಗನ (ಜಟ್ಟುಗನ) ಪ್ರಧಾನ ಆಯುಧವು ಕೊರಡು. ಜಟ್ಟಿಗನು ದೈವ, ಅವನ ಪೂಜೆಗೆ ಸಿಂಗಾರ ಹೂವು ಅತ್ಯಗತ್ಯ. ಅವನು ಯಾರ ಮೈಮೇಲೆ ಆಳಿ ಬರುವನೋ ಅವನು ದೈವದ ಪಾತ್ರಿ. ಸಿಂಗಾರ ಹೂವನ್ನು ಮುಖಕ್ಕೆ ನುರಿದುಕೊಂಡಾಗ ಅವನ ಮೈಮೇಲೆ ದೈವ ಆಳಿ ಬರುತ್ತದೆ. ಆಳಿ ಬಂದು ಭಕ್ತರ ಅಹವಾಲುಗಳಿಗೆ ಉತ್ತರ ಕೊಡುತ್ತದೆ. ಯಾವ ಉಪದೈವ ಆಳಿ ಬರಬೇಕಾದರೂ ಸಿಂಗಾರ ಹೂವಿನ ಪ್ರಯೋಗ ನಡೆಯಲೇಬೇಕು. ಹೆಂಗಸರು (ಹಿಂದೆ ಗಂಡಸರು ಸಹ) ಸಿಂಗಾರ ಹೂವನ್ನು ಮುಡಿದುಕೊಳ್ಳುತ್ತಾರೆ. ಅದಕ್ಕಿಂತ ಹೆಚ್ಚಿನ ಶೃಂಗಾರವಿಲ್ಲ! ಎಲ್ಲ ದೇವರಿಗೂ ಅದು ಪೂಜೆಗೆ ಬೇಕಾದ ಪುಷ್ಪ!

**ಅಡಿಕೆ ಮರದ ತೋರಣಗಂಬಗಳು ಚಪ್ಪರ–ಚಾವಡಿಗಳಲ್ಲಿ ಸಾಮಾನ್ಯ. ಉದ್ದನೆಯ ಮನುಷ್ಯನಿಗೆ ಅಡಿಕೆ ಮರವು ಉಪಮಾನ. ನೇರ್ನಡೆಗದು ಉದಾಹರಣೆ. ಅದರ ದಬ್ಬೆಗಳ ಬೇಲಿ, ಕಿಟಕಿ, ಚಪ್ಪರಗಳು ಹಳ್ಳಿಗಳಲ್ಲಿ ಸರಳ ಸುಂದರ ಜೀವನದ** ಕುರುಹುಗಳಾಗಿವೆ. ಅಡಿಕೆದಬ್ಬೆ ಹುರಿ ಹಗ್ಗಗಳಿಂದ ಮಂಚಗಳೂ ತಯಾರಾಗುತ್ತವೆ. ಅಡಿಕೆ ಹೂವಿನ ಮೇಲಿನ ಹಾಳೆಯನ್ನು ಟೋಪಿಗಳನ್ನಾಗಿ ಕಟ್ಟಿ ಧರಿಸುವುದು ಕೆಲಸಗಾರರಿಗೆ ಸಹಜ. ಸಾರಿಸಲು ಅಡಿಕೆ ಹಾಳೆಯ ತುಂಡುಗಳನ್ನು ಬಳಸುವುದು ನಿತ್ಯ ರೂಢಿ. ಸೆಗಣಿಯಿಂದ ನೆಲವನ್ನು ಸಾರಿಸಲು ಅದಕ್ಕಿಂತ ಉತ್ತಮವಾದ ಸಾಧನ ಇನ್ನೊಂದಿಲ್ಲ. ಸಾರಣೆಯು ನೆಲದ ಪವಿತ್ರೀಕರಣ, ಆದ್ದರಿಂದ ಸುಂದರೀಕರಣ. ಸಾರಿಸಿದ ನೆಲದ ಮೇಲೆ ರಂಗವಲ್ಲೀ ಕಲೆಯು ಮೆರೆಯುತ್ತದೆ.

ಮನೆ ಕಟ್ಟಲು ಅಡಿಕೆಯ ಕಂಬಗಳೂ ದಬ್ಬೆಗಳೂ ಬಳಸಲ್ಪಡುತ್ತವೆ. ಹವಾಮಾನದ ದೃಷ್ಟಿಯಿಂದ ಅಂಥ ಮನೆಗಳು ಸರ್ವ ಋತುಗಳಲ್ಲೂ ಹಿತಕರ. ವರುವರುಷ ಕಟ್ಟಿ

ಬಿಚ್ಚುವ ಬಳಿಮಾಡುಗಳೆಲ್ಲವೂ ಅಡಿಕೆ ದಬ್ಬೆಯವುಗಳೇ. ತೋಡು ದಾಟಲು ಅಡಿಕೆ ಮರಗಳ ದಬ್ಬೆಗಳೂ ಸಂಕಗಳಾಗುತ್ತವೆ. ನಿಸರ್ಗ ಸಹಜ ಜೀವನ ಸೌಂದರ್ಯಕ್ಕೆ ಅವು ಅತ್ಯುತ್ತಮ ನಿದರ್ಶನಗಳು. ಕನ್ನಡದ ಕಡಲ ತುದಿಯ ಈ ವೈಶಿಷ್ಟ್ಯವು ಅನುಪಮ. ಮಂಗಳೂರು ಹಂಚು ಮತ್ತು ಸಿಮೆಂಟುಗಳು ಈ ವೈಶಿಷ್ಟ್ಯವನ್ನೀಗ ಕಸಿದುಕೊಂಡು ಹೋಗಲಾರಂಭಿಸಿವೆ. ಸಿರಿವಂತಿಕೆಯ ಡೌಲಿಗೂ ಅನಾರೋಗ್ಯಕ್ಕೂ ಅವು ಈ ಆವರಣದಲ್ಲಿ ಕಾರಣಗಳು ಎಂದು ಹೇಳುವುದುಂಟು.

"ಪೂಗೀಫಲ, ಕ್ರಮುಕ" ಎಂದರೆ ಅಡಿಕೆ ಫಲ. ಭಾರತದಾದ್ಯಂತವಾಗಿ ಅದನ್ನು ತಾಂಬೂಲಕ್ಕೆ ಬಳಸುತ್ತಾರೆ. ದೇವರ ನೈವೇದ್ಯ ಅದಿಲ್ಲದೆ ಆಗದು. ದಕ್ಷಿಣೆ–ದಾನಗಳಿಗೆ ತಾಂಬೂಲವು ಅಧಿಕೃತ ದಾನಪತ್ರವಿದ್ದ ಹಾಗೆ. ದೇವರಿಗೂ ಪುರೋಹಿತರಿಗೂ ಮಾಡುವ ತಾಂಬೂಲ ಸಮರ್ಪಣೆ ಸರ್ವಧರ್ಮಕರ್ಮಗಳ ಅಂಗ; ದೊಡ್ಡವರಿಗದು ಗೌರವದಾನ. ಯುದ್ಧವೀರರಿಗದು ವೀಳೆಯ ಅಥವಾ ಆಜ್ಞಾಪತ್ರ. "ಧುರವೀಳೆಯ"ವೆಂಬುದು ಯಕ್ಷಗಾನ ಪ್ರಸಿದ್ಧ. ರಾಜದರ್ಬಾರಿನಲ್ಲಿಯೂ ಅದು ಅಧಿಕಾರಪತ್ರದ ಸ್ಥಾನವನ್ನು ಪಡೆದಿತ್ತು. ಕದಂಬರ ಕಾಲದಲ್ಲಿ ಕ್ರಮುಕಾಧಿಪತಿಯು ಆಸ್ಥಾನದಲ್ಲಿ ದೊಡ್ಡ ಶಾಖಾಧಿಪತಿ. ಅದಕ್ಕೇ ಪ್ರತ್ಯೇಕವಾದ ಶಾಖೆ ಇದ್ದುದು ಅದರ ಪ್ರಾಧಾನ್ಯವನ್ನು ಎತ್ತಿ ಹೇಳುತ್ತದೆ. ಅಡಿಕೆ ಸುಂಕವು ರಾಜರಿಗೆ ದೊಡ್ಡ ಆದಾಯದ ಆಕರವಾಗಿತ್ತು.

ವೀಳೆಯವು "ವೀಟೀ". ವೀಟೀದಾತ್ರಿಯು "ವಿಟೀ" (ರಸಿಕ ಸ್ತ್ರೀ); ಅದಿಂದು "ಬೀಡಾ". ವಿಟಿಯು ವೇಶ್ಯೆ!

> ವೀಟೀಕರಾಗ್ರಾ ವಿರಹಾತುರಾಂಗೀ
> ಚೇಟೀಮವಾದೀತಿಹ ಚಿತ್ತಜನ್ಮಾ!
> ಪ್ರಾಣೇಶ್ವರೋ ಜೀವಿತಮರ್ಧರಾತ್ರಂ
> ಮಾಯಾತಿ ನಾಯಾತಿ ನ ಯಾತಿ ಯಾತಿ॥

ಎಂಬ ರಸಿಕತನದ ಶ್ಲೋಕವು ವೀಳೆಯದ ಮಾಹಾತ್ಮ್ಯವನ್ನು ಹೇಳುತ್ತದೆ. "ಬೀಡಿ" ಅದರದೇ ತದ್ಭವವಾಗಿರುವುದು ಸಹಜವಾದರೂ ಅನಪೇಕ್ಷಿತ. "ವಿಡಾಯ" ದೊಡ್ಡಸ್ತಿಕೆ ಎನ್ನಿಸಿದ್ದು ವೀಳೆಯದ ಪ್ರತಿಷ್ಠೆಯಿಂದಲೇ. ವೀಡು, ಬೀಡು, ಮನೆ; ಅದಿದ್ದಲ್ಲಿ ವೀಳೆಯವಿರುವುದು (ತಾಂಬೂಲ ವ್ಯವಸ್ಥೆ ಇರುವುದು) ಮಲೆನಾಡ ಸಂಪ್ರದಾಯ.

> ಪೂಗೀಫಲಸಮಾಯುಕ್ತಂ
> ನಾಗವಲ್ಲೀದಲೈರ್ಯುತಂ।
> ಕರ್ಪೂರಚೂರ್ಣಸಂಯುಕ್ತಂ
> ತಾಂಬೂಲಂಪ್ರತಿಗೃಹ್ಯತಾಂ॥

ಎಂಬುದು ಪುರೋಹಿತರಿಗೆ ಬಾಯಿಪಾಠದಲ್ಲಿರುವ ಶ್ಲೋಕ. ಜಗಿದ ತಾಂಬೂಲವು ತಂಬುಲ. ಕಾಳಿದಾಸನು ವೇಷಾಂತರದಿಂದ ರಾಜಪುತ್ರಿಯ ಮನವೊಲಿಸಲು ಹೇಳಿದ ೧೩ ಶ್ಲೋಕಗಳಲ್ಲಿ ಪ್ರತಿಯೊಂದರ ಕೊನೆಯ ಸಾಲಿನಲ್ಲೂ ತಾಂಬೂಲದ ಉಲ್ಲೇಖವಿದೆ:

ತಾಲಾಕಾರಪಯೋಧರೇ
ತನುಭುವಸ್ತಂತ್ರಾಧಿಕಾರಕ್ರಿಯೇ
ತಾಮ್ಯನ್ಮಧ್ಯಲತೇ ತಟಿತ್ಸಮರುಚೀ
ತಂತ್ರೀ ಸಮಾಲಾಪಿನಿ।
ತಾಟಂಕಾಂತತರಂಗಿತಾಕ್ಷಿಯುಗಲೇ
ತನ್ವಂಗಿ ತಾಮ್ರಾಧರೇ
ತಾರಾನಾಥನಿಭಾನನೇ ತವ ಕರಾತ್
ತಾಂಬೂಲಮಾನೀಯತಾಂ॥

ಎಂಬುದು ಒಂದು ಉದಾಹರಣೆ. ಇಂಥ ಶ್ಲೋಕಗಳಿಗೆ ಮರುಳಾಗಿ ಆ ರಾಜಪುತ್ರಿಯು ರಾಜಪುತ್ರ ವೇಷಧಾರಿಯಾಗಿದ್ದ ಕಾಳಿದಾಸನನ್ನು ಮದುವೆಯಾಲು ಒಪ್ಪಿದಳಂತೆ!

"ಲಿಪ್‌ಸ್ಟಿಕ್ಕಿ"ಗಿಂತ ಖಂಡಿತವಾಗಿಯೂ ತಾಂಬೂಲವು ಹೆಚ್ಚು ಆರೋಗ್ಯಕರ ಮತ್ತು ಅಧರಸುಂದರೀಕರಣ ಸಾಧನ. ಆಯುರ್ವೇದದ ಪ್ರಕಾರ –

ತಾಂಬೂಲಂ ಕಟುತಿಕ್ತರೂಕ್ಷಮಧುರಂ
ಕ್ಷಾರಂ ಕಷಾಯಾನ್ವಿತಂ
ವಾತಘ್ನಂ ಕಫನಾಶನಂ ಕ್ರಿಮಿಹರಂ
ದೌರ್ಗಂಧ್ಯದೋಷಾಪಹಂ।
ವಕ್ತ್ರಸ್ಯಾಭರಣಂ ಮಲಾಪಹರಣಂ
ಕಾಮಾಗ್ನಿಸಂದೀಪನಂ
ತಾಂಬೂಲಸ್ಯ ಸಖೇ ತ್ರಯೋದಶಗುಣಾಃ
ಸ್ವರ್ಗೇಪ್ಯಮೀ ದುರ್ಲಭಾಃ ॥

ಯುದ್ಧ ಕಾಲದಲ್ಲಿ ಎಲೆಯಡಿಕೆ ಇಲ್ಲದೆ ಪಾಕಿಸ್ತಾನಿಗಳು ಹುಣಿಸೆಯೆಲೆ, ಹುಣಿಸೆ ಬೀಜಗಳನ್ನು ಜಗಿಯುತ್ತಿದ್ದ ಸುದ್ದಿಯನ್ನು ಇತ್ತೀಚೆಗೆ ಓದಿದವರು ಮರೆಯದಿರಬಹುದು. ಪದೇ ಪದೇ ಹಲ್ಲುನೋವು ಎಂದೂ "ಕವಳ"ದ ಭಕ್ತರಿಗೆ ಬಾರದು."ಚ್ಯೂಯಿಂಗ್‌ಗಮ್" ಗಿಂತ ಅಡಿಕೆ ಜಗಿಯುವುದು ಉತ್ತಮ. ಸಂಶೋಧನೆ ಮಾಡಲು ಸೋಮಾರಿತನ

ಬಿಡದೆ ಇರುವವರು ಮಾತ್ರ ವಿದೇಶೀಯವಾದುದೆಲ್ಲವೂ ವಿಜ್ಞಾನಶುದ್ಧವೆಂದು ನಂಬುತ್ತಾರೆ. ಅನುಭವ ವಿಶ್ಲೇಷಣೆಯನ್ನು ಕೂಡ ಮಾಡದ ವಿಚಾರಹೀನರ ಆಧುನಿಕತೆ ಕನ್ನಾಡಿಗೆ ಭೂಷವೇ?

**ವೇದದ "ಯಜ್" ಧಾತುವಿಗೆ "ಪೂಜ್" ಎಂಬ ಅರ್ಥವಿರುವುದನ್ನು ನೋಡಿದಾಗ ಪೂಜೆಗೆ ತಾಂಬೂಲ ಅಂಟಿಕೊಂಡಿರುವುದರಿಂದ ಅದರ ಹಳಮೆಯ ಅರಿವಾಗುತ್ತದೆ. ಕಾಶೀಯಾತ್ರೆಗೆ ಹೋದವರಿಗೆ ವ್ಯಾಸಕಾಶಿಗೆ ಹೋಗಿಬಾರದಿದ್ದರೆ ಸಂಪೂರ್ಣ ಪುಣ್ಯ ಬರುವುದಿಲ್ಲವಂತೆ. ಹಾಗೇ "ಸಮಸ್ತ ರಾಜೋಪಚಾರ ಪೂಜೆ"ಗೆ ಸಂಪೂರ್ಣ ಫಲಾವ್ಯಾಪ್ತಿಯಾಗಲು ತಾಂಬೂಲವಿದ್ದೇ ತೀರಬೇಕು. ಅಡಿಕೆಯಿಲ್ಲದಲ್ಲಿ ತಾಂಬೂಲವಿಲ್ಲ. ಆದುದರಿಂದ ಧರ್ಮ ಅಥವಾ ಸಂಸ್ಕೃತಿ ಭಾರತದಲ್ಲಿ ಕ್ರಮುಕವಿಶಿಷ್ಟ.** ವೇದದ ಯಜ್ಞವು ಮೂಲತಃ "ಪಶುಮಾರಣ ಕರ್ಮದಾರುಣ"ವಲ್ಲವೆಂಬುದನ್ನೂ ಮ್ಯಾಕ್ಸ್‌ಮುಲ್ಲರನೂ ವ್ಯಾಸರೂ ಹೇಳಿದ್ದಾರೆ. ಆದುದರಿಂದ "ಬ್ರಹ್ಮ ಯಜ್ಞ"ಕ್ಕೆ "ಔಷಧಿ" ವರ್ಗಕ್ಕೆ ಸೇರಿದ ತಾಂಬೂಲವು ಅನಿವಾರ್ಯವಾಯ್ತು. "ಅಧ್ವರ" (ಯಜ್ಞ, ಪೂಜೆ) ಅಹಿಂಸಾತ್ಮಕವೆಂಬುದು ಸಾಯಣಮತ. ಸಸ್ಯಾರ್ಪಣವನ್ನೂ (ಹಿಂಸೆಯೆಂದರಿತು) ಮನಸ್ಸಿಲ್ಲದ ಮನಸ್ಸಿನಿಂದ ದೇವರಿಗೆ ಮಾಡಲಾಗುತ್ತಿತ್ತೆಂಬುದು ರಾಜವಾಡೆಯವರು ನಿದರ್ಶಿಸಿದ ವೇದವಾಕ್ಯಗಳಿಂದ ಗೊತ್ತಾಗುತ್ತದೆ. ಚಂದ್ರನು ಓಷಧೀಶನು. ಸಿಂಗಾರವು ಚಂದ್ರವರ್ಣವುಳ್ಳದ್ದು. ಅಡಿಕೆಯು ಬಾಯಿಗೆ ಅಡಕವಾದದ್ದು. ಅದರ ರುಚಿಯು ತುವರ ಅಥವಾ ಚೊಗರು. "ಕಷಾಯ" ಎಂದರೂ ಚೊಗರು. ಚೊಗರಾಗಿರುವುದು ಸರ್ವ ಔಷಧಿಗಳ ಮೂಲ. ಕಹಿ ಕಷಾಯಗಳನ್ನೇ ಕಡಿದವರಿಗಿದು ಗೊತ್ತಿಲ್ಲ! ಷೋಡಶೋಪಚಾರದಲ್ಲಿ ೧೩ನೆಯದು ತಾಂಬೂಲ. ಅದು ಖಾರ, ಕಹಿ, ಉಪ್ಪು, ಸಿಹಿ, ಚೊಗರುಗಳ ಸಂಮಿಶ್ರಣದಿಂದ ಆರ್ದ್ರತಾನಿವಾರಕ ಗುಣವುಳ್ಳದ್ದು.

"ಅಡಿಕೆ"ಯಿಂದಲೇ "ಅಡಕ" (ಕೂಡಿಸುವಿಕೆ, ಒಟ್ಟು ಮಾಡುವಿಕೆ, ತುಂಬಿಸುವಿಕೆ) ಬಂದದ್ದು. "ಅಡಕಿಲ್" ಎಂದರೆ ಒಂದರ ಮೇಲೊಂದು ಇಡುವಿಕೆ. "ಅಡಕು" ಎಂದರೆ ರಾಶಿ ಹಾಕು, ತುಂಬಿಸು ಎಂದರ್ಥ. "ಅಡಪ" ಎಂದರೆ ತಾಂಬೂಲದ ಚೀಲ, ಸಂಚಿ, ಹಾಂಚಿ. ಹಿಂದಿನ ರಾಜರು ಸಂಚಿಯನ್ನು ಹೊರುವ ಆಳನ್ನು ಇಟ್ಟುಕೊಂಡಿರುತ್ತಿದ್ದುದು "ಸಂಚಿಯ ಹೊನ್ನಮ್ಮ"ನಿಂದ ಮತ್ತು "ಅಡಪಿಗ" (ಹಡಪಿಗ)ರಿಂದ ಪ್ರಸಿದ್ಧ. "ಅಡವೆ"ಂದರೆ ಅಡವಿಡುವುದು ಒತ್ತೆಯಿಡುವುದು. ಅಡಿಕೆಯನ್ನು ಒತ್ತೆಯಿಟ್ಟು ಸಾಲ ತರುವುದು ಯಾರಿಗೆ ಗೊತ್ತಿಲ್ಲ? "ಅಡಮಾನ ಬ್ಯಾಂಕೀ"ಗ ಪ್ರಸಿದ್ಧ. ಅಡಕೆಯು ಎಷ್ಟು ಕಡೆ ಸಾಂಸ್ಕೃತಿಕವಾಗಿ ಅಡಗಿದೆ ಎಂಬುದು ಇದರಿಂದ ಗೊತ್ತಾಗುತ್ತದೆ. ಆದ್ದರಿಂದ ತೆಂಗು ಹೇಗೆ ಸಾಂಸ್ಕೃತಿಕ ಕಲ್ಪವೃಕ್ಷವೋ ಹಾಗೇ ಅಡಿಕೆಯೂ ಸಾಂಸ್ಕೃತಿಕ ಕಲ್ಪವೃಕ್ಷ. ಈಯೆರಡು ಬಗೆಯ ವೃಕ್ಷಗಳು ಒಂದೇ ಹವಾಮಾನದಲ್ಲಿ ಒಟ್ಟಿಗೆ ಬೆಳೆಯುತ್ತವೆ. ಅಡಿಕೆಯ ಮರದಿಂದ ಒಳ್ಳೆಯ ಹೆಂಡವನ್ನು ಯಾರಾದರೂ ತಯಾರಿಸುವುದನ್ನು ಕಂಡುಹಿಡಿದರೆ ತೆಂಗಿನ ಬೆಲೆಗೇ ಅದೂ ಏರುತ್ತದೆ! ಅಡಿಕೆ ಕಾಫಿಯಿಂದ ಅಂಥ ಸಿದ್ಧಿಯುಂಟಾಗಲಿಲ್ಲ. ಶ್ರೀ

ರಾಮಚಂದ್ರನು ಪಟ್ಟಾಭಿಷೇಕಾನಂತರ ಅಯೋಧ್ಯೆಯ ಉಪವನದಲ್ಲಿ ಸೀತೆಗೆ ಕುಡಿಸಿದ "ಮೈರೇಯಕ"ವೆಂಬ ಸ್ವಾದುತಮ (ಮದ್ಯ) ಪಾನೀಯವು ಅಡಿಕೆ ಮರದ್ದೇ ಆಗಿರಬೇಕೆಂದು ಈ ಲೇಖಕನಿಗೆ ಬಲವಾದ ಸಂಶಯವಿದೆ. ಅದರ ಮಾದಕತೆ ಬಹುಶಃ ಆರೋಗ್ಯದಾಯಕತೆಯುಳ್ಳದ್ದಾಗಿರಬೇಕು. "ಮೀರ" ಎಂದರೆ ಸಮುದ್ರ. ಮೈರೇಯಕವು ಸಮುದ್ರತೀರದ ಸಸ್ಯದಿಂದಾದ ಮದ್ಯವೆಂಬುದು ಸ್ಪಷ್ಟ. ಮದ್ಯ ಸಂಶೋಧಕರಿಗಿದೊಂದು ಛಾಲೇಂಜು. ಅಡಿಕೆಯ ಮರದ ವಿವಿಧ ಅಂಗಗಳನ್ನು ಅವರು ಪರಿಶೀಲಿಸಬಹುದು. ಅದರಿಂದ ಪೌಷ್ಟಿಕ ರಸಾಯನವೊಂದು ಸಿದ್ಧವಾದರೆ ಕೇಳುವುದೇ ಬೇಡ! ಮದ್ಯದ ನಿಂದ್ಯತೆ ಅದರಿಂದ ತೊಲಗೀತು!



**[ಆಕರ: ಅಡಿಕೆ ಮಾರಾಟ ಸಹಕಾರಿ ಸಂಘ ನಿಯಮಿತ, ಕುಮಟಾ ಸುವರ್ಣ ಮಹೋತ್ಸವ ಸಂಸ್ಮರಣ ಸಂಚಿಕೆ – ೧೯೭೩]**

# ೪೪. ಅಪ್ಟುಡೇಟ್ ಆಕಾಶಪುರಾಣ

ಪುರಾಣ ಪರಮಾಚಾರ್ಯರು ವೇಸ್ಟ್ ಮಾಸ್ಟರ್ ಜನರಲ್ಲರಾಗಿ ದೀಪಾವಳಿಯಲ್ಲಿ ನೇಮಕ ಹೊಂದಿದ್ದು ರಾಷ್ಟ್ರೀಯ ಆಪತ್ಕಾಲದ ದೆಸೆಯಿಂದಲೇ ಎಂಬುದು ಎಷ್ಟು ಜನರಿಗೆ ಗೊತ್ತಾಗಿದೆ? ಅವರು ಪೂರ್ವಜನ್ಮದಲ್ಲಿ ಪರಮಾಚಾರ್ಯರಾಗಿದ್ದುದೂ ಇನ್ನೂ ಏನೇನೋ ಆಗಿದ್ದುದೂ, ಹಾಗೇ ಬೇರೆ ಬೇರೆ ಪರಿಸ್ಥಿತಿಗಳ ಒತ್ತಡದಿಂದ ಎಂಬುದನ್ನು ಏಕೆ ತಿಳಿದುಕೊಳ್ಳಬೇಕು? ಅವರೇ ಏಕೆ ಅವರ ಪುರಾಣವನ್ನು ಬರೆಯಬೇಕು? ಅದರಿಂದ ರಾಷ್ಟ್ರೀಯ ಆಪತ್ತು ಹೇಗೆ ಪರಿಹಾರವಾದೀತು? ಯುದ್ಧವೆಂದರೆ ಹರಟೆಯೇ? ಹಾಸ್ಯವೆ?

ಬಾಂಬನ್ನು ಬಾಂಬಟ್ಟಿ ಬರುವಂತೆ ಓದುಗರಿಗೆ ಸಂಶಯಗಳು ಮೂಡಿ ಬರುತ್ತಿರುವುದೀಗ ತಿಳಿದುಬಂದಿದೆ. ಸಂಶಯಪುರಾಣದ ೧೬ನೆಯ ಖಂಡದಲ್ಲಿ ನಿರ್ಣಯ ಸಾಗರ ಮಥನವೊಂದರ ಉಲ್ಲೇಖನವೊಂದಿದೆ. Waste ಅಥವಾ ನಷ್ಟಬ್ರಹ್ಮನು ನಿರ್ಮಿಸಿದ ಈ ವಿಶ್ವದಲ್ಲಿ ಲಾಭಬ್ರಹ್ಮರು ಸಾಹಿತ್ಯ, ಸಂಸ್ಕೃತಿ, ನೌಕರಿ, ಶಿಕ್ಷಣ, ವಿಶ್ವಕೋಶ, ಕಾಂಟ್ರಾಕ್ಟು, ಉದ್ಯಮ ಮುಂತಾದ ಅನೇಕ ವೃತ್ತಗಳನ್ನು ಹಾಕಿಕೊಂಡು ಲೋಭೋಪಾಸನೆ ಮಾಡಲಾರಂಭಿಸಿದರು. ಆಗ ಲೋಭಕ್ಕೆ ಅಸಂಖ್ಯ ಮುಖಗಳುಂಟಾದವು. ಸ್ಥಾನಾಂಧತೆ, ಮಾನಾಂಧತೆ, ಅಧಿಕಾರಾಂಧತೆ, ಧನಾಂಧತೆ ಎಂಬ ನಾಲ್ಕು ಅತಿ ಪ್ರಮುಖವೆನ್ನಿಸಿದವು. ಈ ಚತುರ್ಮುಖ ಬ್ರಹ್ಮನಿಗೆ ಸರ್ವಾಲ್ಪಜ್ಞೆಯು ಧರ್ಮಪತ್ನಿ.

ಸವಾಲ್ಪಜ್ಞೆಗೆ ತಾನು ಅತ್ಯಂತ ಗಂಭೀರ ಸ್ವಭಾವದವಳೆಂಬ ನಂಬಿಕೆ. ಅವಳ ಗಂಡನು ಹಾಗೆಂದೇ ತಿಳಿದು ಅವಳ ಸಲಹೆಯ ಮೇರೆಗೆ ನಡೆದುಕೊಳ್ಳುತ್ತಿದ್ದ ನಷ್ಟಬ್ರಹ್ಮ, ಅವನನ್ನು ನಡೆಸಲು ಅನೇಕ ಲಾಭಬ್ರಹ್ಮರು, ಅವರನ್ನೆತ್ತಿ ಹಿಡಿಯುವ ಅಸಂಖ್ಯ ಲೋಭಬ್ರಹ್ಮರು – ಎಂಬೀ ಸೂತ್ರ ಆರಂಭವಾದದ್ದು ೧೯೪೭ನೆಯ ಇಸವಿಯಲ್ಲಿ ನಷ್ಟಬ್ರಹ್ಮನ ಅಪ್ಪನಾದ ಕಷ್ಟಬ್ರಹ್ಮನು (= ಪರಬ್ರಹ್ಮನು) ಸಂಪೂರ್ಣ ನಿದ್ರೆಯಲ್ಲಿದ್ದಾಗ!

ನಿದ್ರಿತರಿಗೂ ಎಚ್ಚೆತ್ತವರಿಗೂ ಸಂವಾದ ಮಾಡಿಸಲು ಸಾಧ್ಯವೇ? ಅಂಥ ಶಕ್ತಿ ಯಾರಿಗಿದೆ? ಈವರೆಗೆ ಯಾರಿಗೂ ಇದ್ದಂತೆ ಕಂಡುಬಂದಿಲ್ಲ. ಕನ್ನಡ ದೇಶದಲ್ಲಿ ಕನ್ನಡ ವಿದ್ವಾಂಸರಿಬ್ಬರು ಸಂವಾದ ಪತ್ರಗಳನ್ನಾರಂಭಿಸಿದಾಗ ಈ ಸತ್ಯ ಹೊರಬಿದ್ದಿತು. ಒಬ್ಬರದು ಪಾಶ್ಚಾತ್ಯ ಕನ್ನಡ, ಇನ್ನೊಬ್ಬರದು ಪೌರಸ್ತ್ಯ ಕನ್ನಡ–ಹಿಂದೀ ಚೀನೀ ಭಾಯಿ ಭಾಯಿ ಹೋಗಿ ಬಾಯಿಬಾಯಿ ಕೈ ಕೈ ಆಯಿತು! ಕರ್ನಾಟಕ ಕನ್ನಡ–ಮೈಸೂರು ಕನ್ನಡಗಳಲ್ಲಿ ಈ ಪ್ರಕಾರ ಲಟಾಪಟಿಯಾದುದೇ ರಾಷ್ಟ್ರೀಯ ಗಂಡಾಂತರಕ್ಕೆ ಕಾರಣ!

ಇದು ಹೇಗಪ್ಪಾ ಅಂದರೆ ಒಂದು ಹಳದಿ ಕನ್ನಡಕದಿಂದ ನೋಡುವ ಎಂ.ಏ. – ಇನ್ನೊಂದು ಅಭಾಸ್ವರ ಶುಕ್ಲವರ್ಣದ ಕನ್ನಡಕದಿಂದ ನೋಡುವ ಎಂ.ಏ. ಹಳದಿಯು ಚೀನೀಗುಂಬಳ, ಹೊಳೆಯದ ಬಿಳುಪು ಭಾರತೀಯ ಲೋಳೆಸರ; ಒಂದು ಗಟ್ಟದ (ಹಿಮಾಲಯದ) ಮೇಲಿನದು, ಇನ್ನೊಂದು ಕೆಳಗಿನದು! ಒಂದರ ಕಣ್ಣು ಸವತೆಯ ಬೀಜದಷ್ಟು ಸಣ್ಣ (ಆನೆಗಣ್ಣು) ಇನ್ನೊಂದರದು ಗುಂಬಳದಷ್ಟು ವಿಶಾಲ! ಒಂದು ನೆಹರುಗಾಜು, ಇನ್ನೊಂದು ರಾಜಾಜಿಗಾಜು!

ನೆಹರುಗಾಜಿಗೆ ಹಳದಿಯವರು ಗೌರವ ವರ್ಣದವರಾಗಿ ಕಂಡರು; ರಾಜಾಜಿಗಾಜಿಗೆ ಹಳದಿಯವರು ಹಳದಿಯವರಾಗಿಯೇ ತೋರಿದರು. ಆದುದರಿಂದ ಒಬ್ಬರ ಯೋಜನೆಗೆ ಇನ್ನೊಬ್ಬರ ಯೋಚನೆ ಸರಿಹೊಂದಲಿಲ್ಲ. ಚೀನ–ಭಾರತ, ಕರ್ನಾಟಕ–ಮೈಸೂರು, ಆಪತ್ತು–ಸಂಪತ್ತು, ಬೇವಕೂಫಗಿರಿ–ಬುದ್ಧಿವಂತಿಕೆ ಇವುಗಳಲ್ಲಿ ಒಂದನ್ನು ಇನ್ನೊಂದನ್ನಾಗಿ ತಿಳಿಯುವುದು ಆಧುನಿಕ ಭಾರತದ ಬಡಾಯಿ ಪ್ರಜೆಯ ಲಕ್ಷಣ! ಅವಲಕ್ಷಣ–ಲಕ್ಷಣಗಳಲ್ಲೀಗ ಸ್ಥಾನವಿನಿಮಯ; ವಿದೇಶ್ಯ ಸ್ವದೇಶ್ಯಗಳಲ್ಲಿ ಅರ್ಥವಿನಿಮಯ, ಕಾಮವಿನಿಮಯ! ಮಂತ್ರಿಗಳಲ್ಲಿ ಅಧಿಕಾರ ವಿನಿಮಯ! Change is not the law-but exchange is the law of life.

ಮೈಸೂರು ಅಕರ್ನಾಟಕವಾಗುವುದು ಗುಂಡಪ್ಪಗಿರಿಗೆ ಸಮಾಧಾನ ಕೊಡಬಹುದಾದರೆ ಮೈಸೂರು ಕರ್ನಾಟಕವಾಗುವುದೇಕೆ ಅಸಮಾಧಾನಕರ? ಹಾಗೇ ಒಬ್ಬ ಸಂಪಾದಕರು ವೇಸ್ಟ್ ಮಾಸ್ಟರ್ ಜನರಲ್ಲರಿಗೆ ೨೫ ರೂಪಾಯಿಗಳ ಪುರಸ್ಕಾರ ಕೊಟ್ಟಾಗ ಸಮಾಧಾನವೇಕಾಗಬೇಕು? ೮ ರೂಪಾಯಿ ಕೊಟ್ಟಾಗ ಏಕೆ ಅಸಮಾಧಾನವಾಗಬೇಕು? ಮೆನನ್ನರು ರಾಜೀನಾಮೆ ಕೊಟ್ಟರೆಂದು ನಮ್ಮ ಮಂತ್ರಿಗಳೂ ಚೇರ್ಮನ್ನರೂ ರಾಜೀನಾಮೆ ಕೊಡಬೇಕೇನು?

Ministers, Chairman and Presidents ಎಂಬೀ ಮೂರು ಪದಗಳ ಪದಗಳೂ ಒಂದೇ ರಾಗದವೇಕಾಗಬೇಕು? No sir – ಏಕಾಗಬಾರದು? ಪದಗಳಿಗೆ ಅರ್ಥಗಳಿಲ್ಲ ಭಾರತದಲ್ಲಿ. ಅದನ್ನು ವಿದೇಶಗಳಿಂದ ತರಿಸಿಕೊಳ್ಳಬೇಕು. ಅದಕ್ಕೀಗ ಹೊಸ ಮುರಾರಜಿಯನ್ನು ತರಲು ಕನ್ನಡದ ಚೇರ್ಮನ್ನರೂ ಡೈರೆಕ್ಟರರೂ ಪ್ರೆಸಿಡೆಂಟರೂ ಪ್ರಯತ್ನಿಸುತ್ತಿದ್ದಾರೆಂದು ಅರಿತ ವೃತ್ತಗಳಿಂದ ತಿಳಿದುಬಂದಿದೆ. ಅದೋ? ಪ್ರಜಾಮತ ವೃತ್ತ! ಅದರ ಅರಿವಿಗೆ ಮರ್ಯಾದೆಯೇ ಇಲ್ಲವೆಂದುದಿತ್ತೀಚೆಗೆ ತಿಳಿದುಬಂದಿದೆ ಎಂಬುದನ್ನು ಪೀಕಿಂಗ್ ಆಕಾಶವಾಣಿ ಹೊರಗೆಡಹಿದೆ – ನಗುವನಂದ ಟ್ರಂಕ್ ಟೆಲಿಫೋನ್ ಕಂಪನಿಯ ಕಚೇರಿಯಿಂದ!

ಪದಾರ್ಥವೆಂದರೆ ಮೇಲೋಗರವಂತೆ. ಅಂದಮೇಲೆ ಮಿಕ್ಕವನ್ನು ಪದಾರ್ಥಗಳೆಂದು ಕರೆಯಲು ಹೇಗೆ ಸಾಧ್ಯ? ಮಿಕ್ಕವು ಓಗರವಲ್ಲವೇ? ನಮ್ಮ ೪೪ ಕೋಟಿಗಳೆಲ್ಲವೂ ವೀರ–ಧೀರ–ಉದಾತ್ತರಾಗಿರುವಂತೆ! ರಣಧೀರ ಕಂಠೀರವ ನರಸರಾಜ ಒಡೆಯರಾಗಿರುವಂತೆ! ಕನ್ನಡಶಾಸ್ತ್ರ ಸಾಹಿತ್ಯದಲ್ಲಿಂದು ಪದಕ್ಕೂ ಅರ್ಥಕ್ಕೂ

ಸಂಬಂಧವಿರಬೇಕಾಗಿಲ್ಲ – ರಣಕ್ಕೂ ಧೈರ್ಯಕ್ಕೂ ಸಂಬಂಧವಿರಬೇಕಾಗಿಲ್ಲವೆಂಬಂತೆ! ಹರಿಗೂ ಕುರಿಗೂ ಏಕಪ್ಪಾ ಬಳ್ಳಾರಿ ಚೀಟಿ ಸಂಬಂಧ ಕಲ್ಪಿಸಿದ್ದು – ಉಡುಪಿ ಸಾಹಿತ್ಯ ಸಂಮೇಳನೋತ್ತರ ಕಾಲದಲ್ಲಿ? ಗದುಗಿನಲ್ಲೇಕೆ ಕುರಿತೋದಿಯೂ ಕುರಿ 'ಟರ್ ಬ್ಯಾ' ಎನ್ನಬೇಕು?

ನೂರು ರೂಪಾಯಿ ಕಾಳಿದಾಸ ಜಯಂತಿ ಒಂದು ವರ್ಷ. ಇನ್ನೊಂದು ವರ್ಷ ೫೦ ರೂಪಾಯಿಗಳದು; ಮತ್ತೊಮ್ಮೆ ೨೫ ರದ್ದು; – ಅನಂತರ ರದ್ದು! ಕಡಿಮೆ ಹಣ ವೇಸ್ಟ್ ಮಾಡುವುದು ಹೆಚ್ಚು ಬುದ್ಧಿಯನ್ನು ವೇಸ್ಟ್ ಮಾಡಿದಂತಲ್ಲವೇ? ಓದುಗರ ಮೇಲೆ ದಯೆತೋರಿ ತಿಳಿಯಾಗಿ ಬರೆಯಬೇಕೆಂಬ ಪ್ರಚಂಡ ಪ್ರಚಾರವಿರುವ ಸುಲಭ ಆದರೆ ಸಂದಿಗ್ಧ ಬರೆಹಗಾರಿಕೆಯ ನಾಗರೀಕತೆಯಲ್ಲಿ ಕಾಳಿದಾಸ ಜಯಂತಿಯ ವಿಲಾಸಕ್ಕೆ ಸ್ಥಾನವಿದೆಯೇ? ಅದಕ್ಕೇ ಹೇಳಿರಬೇಕು ವರಕವಿ ನೀಟ್ಷೆಯ ಧ್ವನಿಯಲ್ಲಿ –

**ಒಂದು ಷೋಕು ಬರಿಯ ಜೋಕು**
**ಬದುಕಿನೊಂದು ಜಂಭವು**
**ಒಲವೆ ಮೂಲಬಿಂಬವು**
**ಬಲವೆಂಬುದು ಆಕ್ರಾಮಕ ಆಕಾಂಕ್ಷಾ**
**ಸ್ತಂಭವು! ಕಲಿಕಾಲಾರಂಭವು!**
**ಹುಲುನರರೀ ಯಜಮಾನಿಕೆ**
**ಕಟ್ಟುವ ಇತಿಹಾಸವು**
**ಆತ್ಮಘಾತ ಮೋಸವು!**

ಮಧ್ಯಮವರ್ಗವೆಂಬ ಅನಿರ್ದಿಷ್ಟ ಅವರ್ಣನೀಯ ಜನರಾಶಿ ನಾಗರಿಕತೆಯ ಶಿಲ್ಪಿ ಎಂದು ನಂಬಿರುವ ಮಧ್ಯಕಾಲೀನ ವ್ಯವಹಾರಗಳಲ್ಲಿ ಎಲ್ಲಿ ನೋಡಿದರೂ Middle men ಅಥವಾ Go between ತಲೆ ಹಾಕುಗಳು! ಪ್ರಕಾಶಕರಿಗೂ ಲೇಖಕರಿಗೂ ನಡುವೆ ಸಂಪಾದಕ, ಬಳಸುವವನಿಗೂ ಬೆಳೆಯುವವನಿಗೂ ನಡುವೆ ಬೇಪಾರಿ, ನ್ಯಾಯಾಧೀಶರಿಗೂ ನ್ಯಾಯಾರ್ಥಿಗೂ ನಡುವೆ ವಕೀಲ, ಸಾಹೇಬರಿಗೂ ಜವಾನನಿಗೂ ನಡುವೆ ಅವಮ್ಮಾ ಅವರು, ಡಾಕ್ಟರರಿಗೂ ರೋಗಿಗೂ ನಡುವೆ ಕೆಮಿಸ್ಟ್ ಕಾಂಪೌಂಡರಾದಿಗಳು, ದೇವರಿಗೂ ಭಕ್ತರಿಗೂ ನಡುವೆ ಸೈತಾನ ಸಂತಾನ, ಮಂತ್ರಿಗಳಿಗೂ ಜನರಿಗೂ ನಡುವೆ ಕೆಲ ಎ.ಎಲ್.ಏ.ಗಳು. ಸ್ವಾಮಿ ನಾರದರು 'ಪರ್ಯಟನ್ ವಿವಿಧಾನ್ ಲೋಕಾನ್ ಮರ್ತ್ಯ ಲೋಕಮುಪಾಗತಃ' – ಆಗ ಈ ನಡುಗೀಲುಗಳ, ಅಡ್ಡ ಬೆಣೆಗಳ, ಕಡ್ಡಿ ಹಾಕುಗಳ ಪರೋಪಜೀವಿ ಪರಂಪರೆಯನ್ನು ಕಂಡು Democratic Socialism ಪ್ರಜಾಸತ್ತಾ ಸಮತ ಭಾವೈಕ್ಯಕ್ಕಂಜಿ ಒಮ್ಮೆ ಓಡಿಯೇ ಹೋಗಬೇಕಾಯಿತಂತೆ!

ಐಕ್ಯತೆ, ಪ್ರಾಮುಖ್ಯತೆ, ಪ್ರಾಧಾನ್ಯತೆ, ವೈಶಿಷ್ಟ್ಯತೆಗಳಿಂದ ತುಂಬಿದ ಸುಲಭ ಕನ್ನಡದ ಆಂಗ್ಲಾಕ್ಷ ವೃದ್ಧರ ಕಟಿಬದ್ಧ ಪ್ರಯತ್ನದಿಂದ ಕಾಳಿದಾಸನೇ ಏಕೆ? ಪಂಪಾದಿ ಕವಿಗಳು ಕೂಡ ಕನ್ನಡ ಹೃದಯದಲ್ಲೀಗ ಆಶ್ರಯ ಪಡೆಯದಾಗಿದ್ದಾರೆ. ಆದರೂ ಈ ಉದ್ಧಾರತಜ್ಞರು ಕನ್ನಡದ ಪೇಟ್ರಿಯಟ್ಟುಗಳು! ಕಂದಾಚಾರವನ್ನು ಹಳಿಯುವ ವಾಮಾಚಾರವಿಶಾರದರು! ಆಧುನಿಕ ವಿಮರ್ಶ ವಿಚಕ್ಷಣರು – ಅಕಾದಮಿ ಅಡ್ವೈಸರರೂ ಮತ್ತೂ ಏನೇನೋ!

ಯಾಕಾಗಬಾರದು? ಹೊಟ್ಟೆಕಿಚ್ಚೇಕೆ? ಕನ್ನಡದ ಸೊಂಟವನ್ನು ಮುರಿದು ಅನಂತರ ಪ್ಲಾಸ್ಟರ್ ಹಚ್ಚಿ ಕೂಡಿಸಿ ಆನಂದ ಪಡುವ ವಿಜ್ಞಾನ ಯುಗದ ಹೊಸತನಕ್ಕೇ ಲೋಕಮತ ಬೀಳುತ್ತಿರುವುದು ಕಾಣುವುದಿಲ್ಲವೇ? ಲೋಕ ಮತದಾನದ ಜೊತೆಗೆ ಮತಿದಾನವನ್ನೂ ಮಾಡುತ್ತಾ ಬಂದುದರ ಫಲವನ್ನೀಗ ಉಣ್ಣುತ್ತಿದೆ. ದುಃಖ ಹೆತ್ತ ಸುಖಗಳಂತೆ ಅದರಲ್ಲೂ ಒಂದು ರಸವಿದೆ. "ಸುಖ ದುಃಖ ಸಂಗಮವಾದ ಹೃದ್ರಂಗವು ಪಾವನವೆಂಬೆನು ಯಾವಾಗಲೂ" ಎಂದು ವರಕವಿ ಹಾಡಿಲ್ಲವೆ? Every Tradegy is an introduction to a new comedy ಎಂಬುದು Optimismನ ಕರೆಯಲ್ಲವೇ? "ಆಶಾಹಿ ಪರಮಂ ದುಃಖಂ" ಎಂದ ಬುದ್ಧನದೇ ಇಂದು ಅಶೋಕಚಕ್ರನಾಗರಿಕತೆಗೆ ನಾಂದಿಯಾಗಲಿಲ್ಲವೇ? ಪ್ರತಿಯೊಂದು Ageಗೂ ಒಂದೊಂದು Comedy of Errors ಇರುತ್ತದೆ. One man's tragedy is another woman's Comedy!

ಕೈಲಾಸಂ ಕನ್ನಡಕ್ಕೊಬ್ಬನೇ? Good cometh out of evil; so sow the seeds of evil to get good! ಅಂತೂ ಸಮಾಧಾನವಿಲ್ಲದ ತತ್ವಜ್ಞಾನ ಇದೆಯೇ? ಸಾಯುವುದಕ್ಕೂ ಸಮಾಧಾನವಿದೆ, ಬದುಕುವುದಕ್ಕೂ ಸಮಾಧಾನವಿದೆ – ಭಾವಕ್ಕೂ ಇದೆ, ಭಾವನೆಗೂ ಇದೆ – ಸೋತವರಿಗೂ ಇದೆ – ಗೆದ್ದವರಿಗೂ ಇದೆ! ಕೈಲಾಸಂ ಶೈಲಿ ಅನುಕರಣೀಯವಾದಾಗ ಅದೊಂದು ಒಳ್ಳೆಯ ಆದರ್ಶವೆಂಬ ಸಮಾಧಾನ; out of fashion ಆದಾಗ ಅದು originality ಉಳ್ಳದ್ದು ಎಂದುಕೊಳ್ಳುವುದು ಸಮಧಾನ! ಕೈಲಾಸಂ ಉದ್ದೇಶ ವಿಡಂಬನೆಯಾಗಿದ್ದರೆ ಅದು ವ್ಯಂಗವೂ ಹೌದು, ಅನುಕರಣೀಯವೂ ಹೌದು (Ironical and banal)! ಅನನ್ಯವೂ ಹೌದು, ಸರ್ವ ಸಾಧಾರಣವೂ ಹೌದು – ಕೆಲವರಿಗೆ ಹಾಗೆ ಕೆಲವರಿಗೆ ಹೀಗೆ!

ಜೀವನವೆಂದರೆ ಹೋರಾಟ ಅಥವಾ ಏಳಾಟ + ಬೀಳಾಟ = ಉರುಳಾಟ. A rolling stone gathers no moss-also no miss! ಇದು ಆಧುನಿಕ ಭಾರತೀಯ ಸಮಯಸಾಧಕತಾ ವಿಜ್ಞಾನದ ಹೃದಯ. ವಿಜ್ಞಾನ ಅಂದರೆ 'ಸೈನ್ಸು – ಸೈನ್ಸೆಂದರೆ– ಯುದ್ಧ ಕಾಲೇ ಶಸ್ತ್ರಾಭ್ಯಾಸಃ' ಎಂದು. ಏಕೆಂದರೆ ಅದು ಆಧರಿಸುವುದು Necessity is the mother of invention ಎಂಬ ನೀತಿಯನ್ನು. ಗರ್ಜುಬಾರದೆ ಯಾರಾದರೂ ಏನನ್ನಾದರೂ ಯಾತಕ್ಕಾಗಿ ಮಾಡಬೇಕು? ಯುದ್ಧ ಕಾಲದಲ್ಲಲ್ಲದೆ ಮತ್ತಾವಾಗ ಯುದ್ಧಾಭ್ಯಾಸ ಉಚಿತ?

Clarity ಗೋಸ್ಕರ Precision ನನ್ನು ಬಲಿಗೊಡಬೇಕೆಂಬ ಕನ್ನಡ ಭಾರತೀಯ ವೃದ್ಧರ ಉಪದೇಶ, ವರ್ತಮಾನದ ವರ್ತನೆಯನ್ನು ನಿಯಂತ್ರಿಸಿದೆ. ಏಕೆಂದರ Art lies in exposing art – ಕಲೆಯಿರುವುದು ಕಲೆಯನ್ನು ಬಯಲಿಗೆಳೆಯುವುದರಲ್ಲಿ. Open Air Theatre ನಲ್ಲೆ Dark room experiment ಮಾಡಿದರೆ ಸಮನ್ವಯ ತತ್ವ ಸಾಧಿಸಿದ ಹಾಗೆ. ಈ Rope Trick ಅಲ್ಲವೆ ಇಂಡಿಯದತ್ತ ವಿದೇಶೀಯರ ದೃಷ್ಟಿ ಬೀಳಲು ಕಾರಣ? ಒಂದು ಪ್ರಾಚೀನ ಪಾಕಿಸ್ತಾನಿ ಪದವಿದೆ. ಅದರ ಕುರಾಣ ಹೇಗಿದೆ ಗೊತ್ತೇ?

ಮನೆಗೆ ಬೆಂಕಿ ಬಿದ್ದಾಗಲೆ
ಬೀಡಿ ಹಚ್ಚಬೇಕು
ಮನೆಯೆಂದರೆ ನೆರೆಮನೆ
ಎಂದರಿತೇ ಇರಬೇಕು
ಸಮಯ ಸಾಧಿಸುವುದರಲ್ಲೆ
ಗೆಲುವಿರುವುದ ನೋಡು
ಎಲುವಿಲ್ಲದ ಪಂಡಿತರಿಗೆ
ಸೋಲೆ ಹೆಮ್ಮೆ ಹಾಡು
ಮೂರ್ತಿಪೂಜಕರ ಸಮಾಧಿ
ನಮಗೆ ಸಮಾಧಾನ
ನಮ್ಮ ಶಾಂತಿಕಾರ್ಯ ಅವರ
ಯುದ್ಧಕ್ಕೆ ಸಮಾನ!

ಒಬ್ಬನ ಪಾಂಡಿತ್ಯ ಇನ್ನೊಬ್ಬನಿಗೆ ಹುಚ್ಚಾಗಿ ತೋರಿದರೆ ಮತ್ತೊಬ್ಬನ ಹುಚ್ಚು ಮಗುದೊಬ್ಬನಿಗೆ ಪಾಂಡಿತ್ಯವೆಂದು ತೋರುವುದಿಲ್ಲವೆ? ಗಂಡಿಗೆ ಹೆಣ್ಣು ಮಾಯೆ, ಹೆಣ್ಣಿಗೆ ಗಂಡು ಮಾಯೆ (= ಮೋಸ) ಎಂದು ಅಕ್ಕಮಹಾದೇವಿ ಹೇಳಿಲ್ಲವೆ? ಅಪ್ಟುಡೇಟ್ ಆಕಾಶಪುರಾಣವು ಸನಾತನ ಶೃಂಗಾರಕಾವ್ಯ, ಸನಾತನಹಾಸ್ಯ, ವಿನೂತನ ಗಂಭೀರವಾದ ಅಥವಾ ವಿನೂತನ ವ್ಯಂಗ್ಯಹಾಸ್ಯ ಎಂದು ಮುಂತಾಗಿ ಬೇರೆ ಬೇರೆಯವರಿಗೆ ಬೇರೆ ಬೇರೆಯಾಗಿ ಕಾಣಿಸುವ ಹಾಗೆ, ಒಬ್ಬನ ವೃದ್ಧಿಯು ಇನ್ನೊಬ್ಬನಿಗೆ ಕ್ಷಯವಾಗಿ ಕಂಡರೆ ಮಾತ್ರ ಸಮಾಧಾನ, ಇನ್ನೊಬ್ಬನ ಕ್ಷಯವು ಇವನಿಗೆ ವೃದ್ಧಿಯೆಂದು ತೋರಿದರೆ ಅಸಮಾಧಾನ; ವೃದ್ಧಿಯು ವೃದ್ಧಿಯಾಗಿ ತೋರಿದರೆ ಅತೃಪ್ತಿ, ಕ್ಷಯವು ಕ್ಷಯವಾಗಿ ತೋರಿದರೆ ಅಸುಖ (ಅವರವರಲ್ಲಿ ಅವರವರಿಗೆ)! ಆದುದರಿಂದ ಇನ್ನೊಬ್ಬರ ಸಮಾಧಾನವನ್ನು ಸಮಾಧಿ ಮಾಡಿದರೆ ಮಾತ್ರ ಕೆಲ ಅಧಿಕಾರಸ್ಥರಿಗೆ ಸಮಾಧಾನ– ಕಸಿದುಕೊಂಡವರಿಗೆ ಅಧಿಕಾರ ಇಸಿದುಕೊಳ್ಳ ಹೋಗುವವರಿಗೆ ಇನ್ನಾಕರ!

ಅಯ್ಯಾ, ಆಡುಮುಟ್ಟದ ಸೊಪ್ಪಿಲ್ಲ ಅಂತ ಅವನೂ ಹೇಳಿಸಿಕೊಂಡ, ಇವನೂ ಹೇಳಿಸಿಕೊಂಡ. ಆದರೆ ಅವನು ಆಡು, ಇವನು ಬ್ರಹ್ಮ – ಇಬ್ಬರೂ ಅಜರು! ಅರ್ಥಶಾಸ್ತ್ರವೆಂದರೆ ದುಡ್ಡಿನ ಶಾಸ್ತ್ರ, ಪದಗಳ ಅರ್ಥವನ್ನು ಹೇಳುವ ಶಾಸ್ತ್ರ, ಪ್ರಯೋಜನವನ್ನು ಹೇಳುವ ತತ್ವಾಖ್ಯಾನ, ಆಶೆಯನ್ನು ತೃಪ್ತಿಪಡಿಸಿಕೊಳ್ಳುವ ಸಾಧನ. ಸರಕಾರ ಹೊಸಕರ ಹೇರಿದರೆ ಕೆಲ ಶ್ರೀಮಂತರು, ಬಡವರ ಹೆಸರಿನಲ್ಲಿ ಕೂಗಿಕೊಳ್ಳುತ್ತಾರೆ; ಅಕ್ರಮಾರ್ಜಿತವನ್ನು ನಿಧಿಸಂಗ್ರಹಕ್ಕಾಗಿ ಬೇಡಿದಾಗ ತ್ಯಾಗವೆಂದು ಹೆಮ್ಮೆಯಿಂದ ಕೊಡುತ್ತಾರೆ – ಅಂಥ ಅಕ್ರಮ ಸಂಪಾದನೆಯ ಮಾರ್ಗಕ್ಕೆ ಅವಕಾಶಕೊಡುವ ರಾಜಕೀಯ ಯೋಜನೆ ಮುಂದೆ ಉಳಿದುಕೊಂಡಿರಲೆಂದು! ಅದೂ ಒಂದು ಪೇಟ್ರಿಯಾಟಿಜಮ್ಮೇ! ಆದುದರಿಂದ Patriotism ನಲ್ಲಿ ಅನೇಕ ಮಾದರಿಗಳಿವೆ.

೧. Political Patriotism– ಪಕ್ಷದಾಸ ವೀರತನ

೨. Economic Patriotism– ಧನದಾಸ ವೀರತನ

೩. Speicalistic Patriotism – ತಜ್ಞತಾದಾಸ ವೀರತನ

೪. Commercial Patriotism – ವ್ಯಾಪಾರದಾಸ ವೀರತನ

೫. Modernistic Patriotism – ಆಧುನಿಕತಾದಾಸ ವೀರತನ

೬. Sanatanistic Patriotism – ಸನಾತನತಾದಾಸ ವೀರತನ

ಒಬ್ಬನ ವೀರತನ ಇನ್ನೊಬ್ಬರಿಗೆ ಹುಂಬತನವೆನ್ನಿಸುತ್ತದೆ; ಒಬ್ಬನ ಹೇಡಿತನ ಇನ್ನೊಬ್ಬನಿಗೆ ಧೂರ್ತತನವಾಗಿ ತೋರುತ್ತದೆ; ತೋರಿದ್ದನ್ನು ಒಬ್ಬ ನಂಬಿದರೆ, ತೋರದುದನ್ನೇ ಇನ್ನೊಬ್ಬ ನಂಬುತ್ತ ಹೋಗುತ್ತಾನೆ. ಆದುದರಿಂದ Man is the most mischievous creation of God = ಮನುಷ್ಯನೆಂದರೆ ದೇವರು ಹುಟ್ಟಿಸಿದ ಅತ್ಯಂತ ತಂಟಲು ಮಾರಿ ಪ್ರಾಣಿ, ಕಿತಾಪತಿಯ ಸೃಷ್ಟಿ, ವಿಕಟ ಪ್ರತಾಪದ ಆಫೀಸು!



['ಸುಹಾಸ' – ಪುಟ ೬೪೧]

# ೪೫. ಹಕ್ಕೀ ಅರಸಾ ಹೇಳಿದ ಮಾತು

ಅಪ್ಪಗಳಿರಾ, ಅಮ್ಮಗಳಿರಾ, ಪರೀಕ್ಷೆಯ ಬೇಸಿಗೆ ನಡೆಯುತ್ತಿದೆ ಈಗ. ನಿಮ್ಮ ಕಂದಪ್ಪ–ಕಂದಮ್ಮಗಳನ್ನು ಎಷ್ಟೋ ಕಡೆ ಅವ–ಉಪ–ಪ್ರ–ಪರಾ ಪರೀಕ್ಷಕರು ಲಿಖಿತ ಮೂಲಕ ಪರೀಕ್ಷಿಸಲಾಯಿತು.

ಮದುವೆ, ನೌಕರಿ, ಧನಾರ್ಜನೆ ಎಂಬ ಮೂರು ಮಹತ್ವಾಕಾಂಕ್ಷೆಗಳುಳ್ಳ ಬಡಮಾನವ ಕೋಟಿಗಳ ಅದೃಷ್ಟದೇವತೆಯನ್ನು ಟೀಕಿಸಿ ಸಿನಿಕ್ ಎನಿಸಿಕೊಳ್ಳಬೇಕು? ದುಡ್ಡಿದ್ದರೂ ಬಡವರೆಂದುಕೊಂಬುವರು ಹಾಗೇ ಅನ್ನುತ್ತಾರೆ – ಆದರ್ಶದ ಮಾತನ್ನೆತ್ತಿದ ಕೂಡಲೇ. ಆದುದರಿಂದ ಹಕ್ಕಿಯರಸ ಆಶೀರ್ವದಿಸುತ್ತಾನೆ. ಪರೀಕ್ಷೆಯಲ್ಲಿ ಚೆನ್ನಾಗಿ ಮಾಡಿದವರೂ ಮಾಡದವರೂ ಎಲ್ಲರೂ ಪಾಸಾಗಲಿ, ಎಲ್ಲರೂ ನವಕರರಾಗಿ, ಲಗ್ನರಾಗಿ, ಧನಿಕರಾಗಿ ದೀರ್ಘಾಯುಗಳಾಗಲಿ. ಆದರೆ ಎಂದೆಂದಿಗೂ ಬಯಲು ಸೀಮೆಯಲ್ಲಿ ಹೇಳುವಂತೆ 'ದೀಡ್ ಶಾಣ್ಯಾ'ರಾಗದಿರಲಿ!

ದೀಡ್‌ಶಾಣ್ಯಾತನ ಒಂದು ವಿಧದ "ಉಪಸಂಪಾದಕ" ಮಾದರಿಯದು; ಅಥವಾ ಉಪಸಂಪಾದನೆಯ ಪ್ರವೃತ್ತಿ ಎನ್ನುವುದು ಇನ್ನೂ ಶುದ್ಧ. ಸಂಪಾದಿಸಬೇಕಾದದ್ದು ಎಲ್ಲರಿಗೂ ತಿಳಿದಿರುವಂತೆ ಎರಡು; ಹಣ, ಹೊಗಳಿಕೆ ಅಥವಾ (ಆತ್ಮೋತ್ತಮ) ಉಚ್ಚೋಹಂಭಾವ. ನಮ್ಮ ಪ್ರಾಚೀನ–ಅರ್ವಾಚೀನ ಪದ್ಧತಿಯ ಶಾಲೆಗಳೆರಡೂ ಇಂದು ಇಂಥ ಎಷ್ಟೋ 'ದೀಡ್‌ಶಾಣ್ಯಾ'ರನ್ನು ಹಡೆದದ್ದುಂಟು. ದೀಡ್‌ಶಾಣ್ಯಾನ ವಿದ್ವತ್ತೆಯ ಮಾದರಿಯೊಂದನ್ನು ನೋಡಿ;

"ನೀನು ತುಂಬ ಬುದ್ಧಿವಂತ

– ಅಲ್ಲವೇ ಅಲ್ಲ, ಜಗತ್ತಿನಲ್ಲಿ ಯಾರೂ ಬುದ್ಧಿವಂತರಿಲ್ಲ

ನೀನು ದಡ್ಡ

– ನಿಮ್ಮಂಥ ಬೃಹಸ್ಪತಿಗಳಿಗೂ ನನಗೂ ಸಂಬಂಧವಿಲ್ಲ

ನೀನು ಸರ್ವಜ್ಞನೇ ಸರಿ, ಕುಲವ ಮರೆತಿರುವ!

– ನಿಮ್ಮ ವ್ಯಂಗ್ಯೋಕ್ತಿಯೆಂದೂ ಕವಿತೆಯಾಗಲಾರದು

ನೀನು ಹುಚ್ಚ

– ನಾನು ನಿಮ್ಮೊಡನೆ ಯಾವ ಸಂಬಂಧವನ್ನೂ ಇಟ್ಟುಕೊಳ್ಳುವುದಿಲ್ಲ"

ಇಂಥ ಪುರುಷರೂಪದ ಮೃಗ – ದೀಡ್‌ಶಾಣ್ಯಾ ಎಂದರೆ ಸಾಹಿತ್ಯ ಕೃತಿಗಳನ್ನು ವಿಮರ್ಶಿಸಲು ಇವು ಕೂತರೆ – ಇದು ನಿರಾಶಾವಾದಿ, ಇದು ಸಿನಿಕಲ್, ಇದು

ಬೀಭತ್ಸ, ಇದು ಕಮ್ಯೂನಿಸ್ಟ್, ಇದು ಬೂರ್ಜ್ವಾ, ಇದು ಸನಾತನಿ ಎಂದು ಮೊದಲಾಗಿ ಕೃತಿಗಳನ್ನು ನಿಂದಿಸುವುದು ಈ ಮಂಡೆಯ ಲಕ್ಷಣ. ಅಲ್ಲಿ ಇಲ್ಲಿ ಇಂದು ಕರ್ನಾಟಕದಲ್ಲಿ 'ದೀಡ್‌ಶಾಣ್ಯಾ' ಮಂದಿ ಸಂದರ್ಭ ಜ್ಞಾನವಿಲ್ಲದೆ ವಾಕ್ಸೇವೆ ಸಲ್ಲಿಸುತ್ತಿರುವುದರಿಂದ ಇದನ್ನು 'ದೀಡ್ ಶಾಣ್ಯಾಯುಗ' ಎನ್ನಬಹುದಲ್ಲವೇ?

ಇತ್ತೀಚೆಗೆ ನವ್ಯ ಕವಿಯೊಬ್ಬರು ತಮ್ಮ ಜೀವನದ ಬಗ್ಗೆ ಒಂದು ಪದ್ಯ ಬರೆದದ್ದುಂಟು. ಅದರಲ್ಲಿ ಕಂಡುಬರುವ ವ್ಯಕ್ತಿ ಚಿತ್ರವನ್ನು ಮೇಲಿನದರೊಡನೆ ಹೋಲಿಸಬಹುದು.

## ಖಾಲಿ ಸತ್ಯ (Blank Truth) :

**ಗಾಳಿಯಿಂದ ಹಾರಿಬಿದ್ದ ತರಗೆಲೆವೊಲು ಹುಟ್ಟಿದೆ –**
**ಯಾರ ಯಾರ ಕಾಮಪಂಕ ಫಲವ ಮೊದಲು ಮುಟ್ಟಿದೆ**
**ಎಂಬ ಲೆಕ್ಕ ಹೇಳಲರಿಯ ಚಿತ್ರಗುಪ್ತ ಕೂಡ;**
**ಪ್ರಾಯಬಂತೊ ಜೋಲುಗಿವಿಯ ನಾಯಿ ಬಂತೊ ಏನೋ**
**ಗೌಗಪ್ಪಿಸುತ್ತಿರುವೆ ನಿತ್ಯ ಜನ್ಮಸಿದ್ಧ ಹಕ್ಕು ಎಂದು**
**ಪ್ರಾಯವೆ ಸರ್ವಜ್ಞಸಿದ್ಧಿ ಎಂದು ತಿಳಿದು ಬಾಳಿನ**
**ಗಾಯವೊ ಎನೆ ನಿಂತಿರುವೆನು ನಿಮ್ಮ ಮುಂದೆ ನೋಡಿ**
**ಬಾಯತೆಗೆಯೆ ಕೀಟಬುದ್ಧಿ ಪ್ರಕಟವಾಗುತಿಹುದಯ್ಯಾ**
**ನಾನು ಖಾಲಿ, ನನ್ನ ಸತ್ಯ ಖಾಲಿ, ಇದೇ ಹೊಸತನ;**
**ನನ್ನ ಮುಂದೆ ನೀವೆಲ್ಲಾ ಹಕ್ಕಿಪಕ್ಷಿಗಳ ಕುಲ**
**ಎನ್ನುತಿರುವ ಎದೆಯ ಕೌರವ ಸ್ವರೂಪ ಹಾಡಿದೆ**
**ಹಪ್ಪು ಕಳ್ಳ ಗೀತವನ್ನು ಪತ್ರ–ಪತ್ರಿಕೆಗಳಲಿ!**

ಈ ದೀಡ್ ಶಾಣ್ಯನ ವಿಚಾರವನ್ನು ನಮ್ಮ ಪಂಡಿತರ ಮುಂದೆ ಎತ್ತಿದ ಕೂಡಲೇ ಅವರು ಆತನನ್ನು ಚೆನ್ನಾಗಿ ಎತ್ತಿ ಹಿಡಿದದ್ದು ಹೀಗಿದೆ ;

ಸತ್ತ ಮೇಲೆಯೇ ನಮ್ಮ ಪಾಪ–ಪುಣ್ಯಗಳ ತೀರ್ಮಾನ. ಅದೇ ಮೇರೆಗೆ ಸಾಹಿತ್ಯ ಹಾಗೂ ರಾಜಕೀಯ ಕೃತಿಗಳ ತೀರ್ಮಾನವಾದರೂ ಸತ್ತ ಮೇಲೆಯೇ. ಆದುದರಿಂದ ಸುತ್ತಲೂ ಲತ್ತೆ ಕೊಡುವ ಅತ್ತೆಯನ್ನೆದುರಿಸಲು ಮೇಲೂ ಕೆಳಗೂ ಒದೆಯುವ ಅಭ್ಯಾಸವನ್ನೂ ಕೆಲ ಕತ್ತೆಗಳೇಕೆ ಮಾಡಬಾರದು? ಆಹಾರಕ್ಕೆ ಕಂಟ್ರೋಲಿದೆಯೆಂದು ತಿನ್ನುವುದಕ್ಕಿದೆಯೇ? ತಿಂದು ಅಜೀರ್ಣದ ತೇಗುಗಳನ್ನು ಬಿಡಲು ನಿಯಂತ್ರಣವಿದೆಯೇ?

ಸುಸ್ತಾದ ನಾನು ಹಕ್ಕಿಯರಸನಿಗೆ ಅಪೀಲು ಮಾಡಿದೆ. ಹಕ್ಕಿಯರಸ ನಿಂತೆಂದ.

**ಹಕ್ಕೀ ಅರಸs ಹೇಳಿದ ಮಾತು**
**ಹತ್ತಕ್ಕೊಂದುs ನಿಜವಾಗ್‌ತೈತೆ;**
**ಅಕ್ಕೀ ತಿನ್ನುವ ಮನುಜನ ಮಾತು**
**ಹತ್ತೂ ಕೂಡ ಸುಳ್ಳಾಗ್‌ತೈತೆ!**
**ಅದೇ ವಿಮರ್ಶೆ, ಅದೇ ಪ್ರಚಾರ**
**ಸುಳ್ಳಿನ ಬುರುಡೆಯೆ ವಿದ್ವಾಂಸ**
**ಕಂಟ್ರೋಲಿಲ್ಲದ ಕುರಿಕಂಸ!**
**ಶಾಲೆಯ ಕಲಿತಿಲ್ಲವೆ ಅವನು?**
**ನಿನ್ನಂತೆಯೆ ಅವಗಿಲ್ಲವೆ ಗುಲ್ಮ**
**ಪಿತ್ತದ ಬಲ ಉಂಡೊರಗಿರಲು?**
**ಕಾಳಿದಾಸನೆಂದೂ ಕವಿಯೆನಿಸನು**
**ಹೋಳಿಗೆದಾಸನು ಬದುಕಿರಲು!**
**ಸಮಕಾಲೀನತೆ ಯಮಬಲ ಬಲ್ಲೆಯ?**
**ಕಾಲ ಹೋದಮೇಲವನವನಿವನಿವ!**
**ಕೋಗಿಲೆ ಕೋಗಿಲೆ, ಕಾಗೆ ಕಾಗೆ ಕಣೊ**
**ಕಾಯಿಸಿಕೊಳ್ಳುವುದೇಕೆ ತಲೆ?**
**ಹಕ್ಕಿಗೆ ಹಾಡಲು ಹಕ್ಕಿದ್ದರೆ, ಹುಳು**
**ಕಿರುಗುಟ್ಟಲು ಹಕ್ಕಿಗನಲ್ತೆ?**

ಮೇಲಿನ ಮಾತಿನಿಂದ ದೀಡ್‌ಶಾಣ್ಯಾ ಜನರಿಗಿಂದು ಪ್ರಜಾಪ್ರಭುತ್ವದಲ್ಲಿ ಕಿರಿಚುವ ಹಕ್ಕಿದೆ ಎಂದಾಯ್ತು. ಆದುದರಿಂದ ಪಾಲಕರೇ, ನಿಮ್ಮ ಬಾಲಕರು ಕಿರುಚುವಂತಾಗದಿರಲಿ, ಹಾಡುವಂತಾಗಲಿ ಎಂದು ಪರೀಕ್ಷಾ ಫಲಶ್ರುತಿಯು ಪೂರ್ವಮೇಘ ಸಂದೇಶವನ್ನೀಯುತ್ತೇನೆ.

ಎರಡನೆಯದಾಗಿ, ಬೆಂಗಳೂರ ಹವೆಯನ್ನು ಮಾತ್ರ ಕರ್ನಾಟಕದಲ್ಲಿ ಸದಾ ಸುಖಕರವನ್ನಾಗಿ ಇಟ್ಟ ಪರಮಾತ್ಮನ ಪಂಕ್ತಿಭೇದವನ್ನು ಕಡಲ ತೀರದ ಮಂದಿ ಕಮ್ಯೂನಿಸ್ಟ್ ಕಂಠದಿಂದ ಟೀಕಿಸಿದ್ದು ಗಮನಾರ್ಹ. ದೇವರು ಬೂರ್ಜ್ವಾ! ಅದರಿಂದಲೇ ಇತ್ತೀಚೆಗೆ ಕ್ರುಶ್ಚೇವರು ಅವನ ಅಸ್ತಿತ್ವವನ್ನು ಅಲ್ಲಗಳೆದಿದ್ದಾರೆ! ಆದರೆ ಹೋಗೆಂದ ಕೂಡಲೇ ದೇವರು ಹೊರಟು ಹೋಗುತ್ತಾನೆ – ಅವನಾದರೂ ಎಷ್ಟೋ ಪಾಲಿಗೆ ಬೇಕು.

ಅವನು ಕೊಟ್ಟ ಸೆಕೆಯಾದರೋ ಹೋಗೆಂದರೂ ಹೋಗದು! ಜನಮತಗಣನೆ ಮಾಡಿ ಸಹಿ ಪಟ್ಟಿಯನ್ನಿಟ್ಟರೂ ಬೇಸಿಗೆ ಹಿಂಜರಿಯದು! ಎಂಥ ನಿರ್ಲಜ್ಜ ಈ ನಿಸರ್ಗ! ಆದುದರಿಂದ ಹೆಚ್ಚು ಬೇಸಿಗೆ, ಕಡಿಮೆ ಬೇಸಿಗೆಗಳನ್ನು ಬೆರಸಿ ಅರೆ ಸುಖಮಾಡಿ ಸಮಾಜವಾದಿ ಸಮಾಜದಲ್ಲಿ ಹಂಚುವುದೊಂದೇ ಕ್ರಮ ಪ್ರಾಪ್ತ; ಕೆಲವೆಡೆ ಜನರ ಬುದ್ಧಿಗಳೂ ಹೀಗೇ ಸಮಬೆರಕೆಯಾಗಿದೆ ಎಂಬುದು ಅಂಥ ಪ್ರಯತ್ನದ ಯಶಸ್ಸಿಗೆ ಸಾಕ್ಷಿ. ಪಂಡಿತರ ಮಾತಿನಲ್ಲಿ ಹೇಳುವುದಾದರೆ:

ಓತಪ್ರೋತಕಟಿ ಪ್ರಮಾಣ ನ್ಯಾಯಾತ್!

ಸರಾಸರಿ, ಕಲುಬೆರಕೆ, ಸಂಮಿಶ್ರ, ಜಟಿಲ, ಸಮರಸ, ನಾನಾತ್ವ ಎಂಬ ತತ್ವಗಳಿಗೆಲ್ಲಾ ದೇವರಿದ್ದರೆ ತೊಂದರೆ. ಏಕೆ? ಅವನು ತಾರತಮ್ಯ ಮಾಡಿಬಿಡುತ್ತಾನೆ! ಆದರೆ ಇದರಲ್ಲಿ ಒಂದೇ ಒಂದು ಸಂಶಯ – ದೇವರ ತಾರತಮ್ಯಕ್ಕೆ ಹತ್ತು ನೂರರಿಂದ ಮನುಷ್ಯ ಗುಣಿಸಿಬಿಟ್ಟಿದ್ದು! ಹೀಗೆಂದೇ ಕ್ರುಶ್ಚೇವರು ದೇವರ ಮೇಲೆ ಹರಿಹಾಯಲು ಕಾರಣ! ದೇವರ ಮೇಲೆ ಅವರು ಈ ಪ್ರಕಾರ ಬಿಟ್ಟ ವಾಗ್ರೂಪದ ಅಟಂಬಾಂಬಿನಿಂದ ಸಿಟ್ಟಿಗೆದ್ದಾದರೂ ಭಾರತದಲ್ಲಿ ಅವತರಿಸಿ ನಾಸ್ತಿಕತೆಯನ್ನು ಜಗತ್ತಿನಿಂದ ಓಡಿಸಲಾರನೇ! ಎಂದು ಪಂಡಿತರು ಹಾರೈಸಿದರು. ಅದೂ ನಿಜ ಎನ್ನಿಸಿತು. ಆದರೆ ದಿಲ್ಲಿ–ಬೆಂಗಳೂರುಗಳ ಹವೆಯಲ್ಲಿ ಒಮ್ಮೆ ಅವನು ಅವತರಿಸಿದರೆ ಅಲ್ಲಿಯ ಸುಖವಾದ ಹವೆಯುಂಡು ಮಿಕ್ಕ ಬಡ ಜನರ ಸುಖದುಃಖವನ್ನು ಮರೆತುಬಿಟ್ಟರೆ ಹೇಗೆ? ಎಂಬುದೂ ವಿಚಾರಣೀಯ. ಇಂದ್ರ ಉಪೇಂದ್ರರೊಕ್ಕಟ್ಟಿನಂತೆ ದಿಲ್ಲೀಶ್ವರ–ಜಗದೀಶ್ವರ–ಕಲ್ಯಾಣ ನಗರೇಶ್ವರಗಳಲ್ಲಿ ಒಂದಾಗಿ ಶೇಷಶಾಯಿಗಳಾಗಿ ಬಿಟ್ಟರೆ! ಮೈಸೂರಿಂದು ಶೇಷವಾದ ಅಥವಾ ಬ್ರಾಹ್ಮಣೇತರೋದ್ಧಾರ ವಾದವನ್ನು ಸ್ವಘಾತಕವೆಂಬುದನ್ನರಿಯದೆ ದಿಲ್ಲಿಯ ಅವತಾರಿಗಳನ್ನು ಕೂಡ ಪ್ರತಿಭಟಿಸಿ ಹಿಡಿದು ಸಾಗಬೇಕೆಂದು ವೆಂಕಟ ಮುಖದಿಂದ ವಿದ್ಯಾಲಯಗಳಲ್ಲಿ ದನಿಗೂಡ ಹತ್ತಿರುವುದರ ಮರ್ಮ ಅಂಥ ಸಂಶಯವನ್ನು ಸಮರ್ಥಿಸುತ್ತಿದೆ! ಹಕ್ಕಿಯ ಅರಸನೀ ವರ್ಗಕಲಹವನ್ನೇನು ನೋಡಿಲ್ಲವೆ? ಅವನೆನ್ನುತ್ತಾನೆ:

**ಮಾರ್ಕ್ಸನ ವರ್ಗವು ಪಶ್ಚಿಮದಲ್ಲೇ;**
**ಅಹಂ ವರ್ಗಗಳು ಭಾರತದಲ್ಲೇ!**
**ಬ್ರಾಹ್ಮಣರಲ್ಲಿ ಅನೇಕಾಹಂಗಳು;**
**ಮಿಕ್ಕವರಲಿ ಇನ್ನಷ್ಟು ಅಹಂಗಳು!**
**ಒಂದೊಂದಹಮಿಗೆ ಒಂದೊಂದು ಇಜಂ**
**ಇಸಮ್ಮಿಗೊಂದೊಂದಿಜಮ್ಮು ಇಲ್ಲಿ!**
**ಪೂರ್ವದೇಶವಿದು, ಪೂರ್ವಪಕ್ಷಗಳ**
**ಹಿಡಿದು ವಾದಿಸುವ ಪೂರ್ವದೇವರುಗ**

ಳಿಡಿದ ನಾಡು, ಕಾರ್‌ನಾಡು ನೋಡು ಮಗು
ಹಿಂದೆ ಮಾಡಿದಂತುತ್ತರ ಕ್ರಿಯೆಗಳ
ನಾಳೆ ಕೂಡ ಪಶ್ಚಿಮ ಮಾಡೀತೀ
ಅಷ್ಟೋತ್ತರ ಮದಮೂರ್ತಿಗಳುದಯಿಸಿ
ಕೊಟ್ಟಿಗೆ ಕಾರ್ಭಾರ್ ನಡೆಯಿಸತೊಡಗಲು!
ಕಮಾನು, ಕುಡುಗೋಲ್, ಹುಣಿಸೆ ಕಾಯಿಗಳ
ತರಹದ ನೇರ್ನಡೆ ಹಬ್ಬಲು ಜನರಲಿ
ಜೋಳದ ತೋಳಗಳೂ ಕೂಡ
ಅಕ್ಕಿಯ ಹಕ್ಕಿಗಳಾದಾವು!
ರಾಗಿಯ ಮುದ್ದೆಯ ಬಿಟ್ಟಕೂಡಲೇ
ಸೊಕ್ಕಿನ ಮುದ್ದೆಗಳಾದಾರು
ಅಕ್ಷರವನ್ನೇ ಲಕ್ಷಬಾರಿ ಈ
ಕುಕ್ಷಿಗಾಗಿ ತಾವ್ ಬಳಸ್ಯಾರು!
ಹಕ್ಕಿಯ ಅರಸನ ಹತ್ತಿರ ಬಂದು
ನೌಕರಿ ಭವಿಷ್ಯ ಕೇಳ್ಯಾರು!

ಹಮ್ಮಿನುಂಡೆಗಳು ಹಪ್ಪು ನಾರುತಿವೆ
ಎಲ್ಲ ಜಾತಿಯಲ್ಲೂ
ಜಾತಿ–ಧರ್ಮ–ಅಧಿಕಾರ–ವಿದ್ಯೆಗಳ
ನಿತ್ಯ ನೀತಿಯಲ್ಲೂ!

ಸರ್ವಜ್ಞನು ಹಿಂದೆಯೇ ಹೇಳಿಹನು
ಗರ್ವದ ಗತಿಯನ್ನು,
ಸರ್ವರೋದಲದ ನೂರುನೂರುಸಲ
ಸರ್ವಧರ್ಮವನ್ನು!

(ಏಕತಾಲೀಯ)

ಹಕ್ಕೀ ಅರಸ ಹೇಳಿದ ಮಾತು
ಹತ್ತಕ್ಕೊಂದು ನಿಜವಾಗತೈತೆ ॥ಪ॥

(ತ್ರಿಪುಟೀಯ)

**ಆಕಾಶವಾಣಿಯಲಿ ರಾಮರಾಜ್ಯದ**

**ಹಾಡು ಹರಿದೀತು ನಿಮ್ಮ ಕಡೆಗೆ**

**ಆಕಾಶ ಸದೃಶೋದರರು ಬರೆದ**

**ನಾಟಕವು ಕಿವಿಗೆ ಕಂಡೀತು;**

**ವಡೆಗೆ ಬೇಕಾದ ತುಪ್ಪಕ್ಕೆ ಬಾಗಲೇ**

**ಬೇಕಯ್ಯ ಬೆಣ್ಣೆ ಗೋವಿಂದನಡಿಗೆ**

**ಧೋಕಾಧಿಕಾರಿಗಳ ಪಾದಸೇವೆಯು**

**ಕೊಟ್ಟ ಕಾಸುಗಳ ಚೆಲ್ಲಿ ಉಡಿಗೆ॥೧॥**

ಯಾಕೆ ಗೊತ್ತೆ? ನೆಹ್ರು ಬೆನ್ನು ತಿರುಗಿಸಿದ ಅಧಿಕಾರಕ್ಕೆ; ಆದರೆ ಅದೇ ಮರು ನಿಮಿಷದಲ್ಲಿ ಪಾರ್ಟಿ ವಿಧೇಯನಾಗಿ ಇದ್ದ ಹಾಗೇ ಇರುವೆ ಎಂದು ಬಿಟ್ಟ! ನೆಹ್ರು ಪುನಃ ಗದ್ದಿಗೆಯೆಡೆಗೆಯ್ತಂದ; ರಾಮರಾಜ್ಯದ ಕವಿಗಳು ಮಂಗಲದ ಶೋಬಾನೆಗಳನ್ನು ಹಾಡಿದರು. ನೆಹರುಗೆ ಮಂಗಲ, ಭಕ್ಷೀಸ್ ಪಡೆದ ಕವಿಗೆ ಮಂಗಲ; ಆಮೇಲೆ ನೆಹರು ಕೊಟ್ಟ ಹಿರಿ ಹುದ್ದೆಯಲ್ಲಿ ಅಧಿಕ ಫಲ ಬೆಳೆದುಂಡ ಹೆನ್ನೌಕರ ಕಿರಿ ಹೆನ್ನೌಕರರಿಗೆ ಮಂಗಲ. ಮಿಕ್ಕ ಸತ್ಯ ಸಂಬಳಿಗರಿಗೆ?

ಸಪ್ಪೆ ಬಾಳುವೆಗಿಂತ ಉಪ್ಪು ನೀರೂ ಲೇಸು! ಮಕ್ಕಳ ಪುಣ್ಯದಿಂದ ಸಿಕ್ಕಿದ್ದಷ್ಟಾದರೂ ಇದೆಯಲ್ಲ – ಎಂದರೆ, ಮಕ್ಕಳಿಗಿನ್ನು ಹುಟ್ಟುವ ಪುಣ್ಯ ಕಡಿಮೆಯಾಗುವುದು ಚಾಚಾ ನೆಹರು ದರಬಾರಿನಲ್ಲಿ! ಹೊಸ ಋಷಿಯಾಗಿ ಸೂಕ್ತ ಬರೆಯುತ್ತಿದ್ದಾನೆ. ಅಂಥ ಹೊಸ ಸಾಮದ ಸ್ಯಾಂಪಲ್ ಹೇಗಿದೆ ಗೊತ್ತೆ?

**(ಅನುಷ್ಟುಭ್)**

**ಅಕ್ಷರಾಽ ಪುರುಷಾಽ ಮೂರುಽ ನಡುವಿಂಽ ದದ್ವಿತೀಯವು॥**

**ತೃತೀಯೇ ಪ್ರಥಮೇ ಸಾಮ್ಯಂ ಸ್ಥಾನದಿಂದಷ್ಟೇ ಭೇದವು॥ ॥೧॥**

**(ಇಂದ್ರವಜ್ರ)**

**ಸ್ವಸ್ಥಾನಭದ್ರಂ ಕರಣೇ ನಿಮಗ್ನಂ। ಸ್ವಪುತ್ರ ಸಂವರ್ಧನ ಸಂಪ್ರಲೀನಂ।**

**ಮುಖಂಡಕಂ ಮಿಕ್ಕ ಜನಂಗಳೆಲ್ಲಾ। ವಂಧ್ಯಾಪತಿತ್ವಂ ಬಡೆದಾಳ ತೆಂದಾ॥ ॥೨॥**

**(ಅನುಷ್ಟುಭ್)**

**ತ್ರ್ಯಕ್ಷರಂ ಪುರುಷಂ ಗೂಢಂ ಅವನಾಸ್ವಾದ ಸಿಕ್ಕಲು।**

**ದ್ವ್ಯಕ್ಷರಾತ್ಮನ ಹಿಂದಿರ್ದ ಸೋಮನನ್ನಿಂದ್ರಗಿಕ್ಕಿರಿ॥**

ಅರ್ಥ : ಮೂರಕ್ಷರದ ಒಂದು ಹೆಸರು. ಆ ಅಕ್ಷರಗಳಲ್ಲಿ ನಡುವಿನದು ಒಂದೇ ಒಂದು. ಅದರಂಥದಿನ್ನೊಂದು ಆ ಹೆಸರಿನಲ್ಲಿಲ್ಲ. ಮೊದಲಿನ ಅಕ್ಷರವೂ ಮೂರನೆಯ

ಅಕ್ಷರವೂ ಸದೃಶ – ಅವುಗಳ ಸ್ಥಾನದಲ್ಲಿ ಮಾತ್ರ ವ್ಯತ್ಯಾಸವಿದೆ. ಅದೆಂದರೆ "ಟೀಪಾರ್ಟೀ" ಅಥವಾ ಟೀ–ಪಾರ್–ಟೀ!

ಎರಡನೆಯದಾಗಿ, ಪಾರ್ಟಿಯ ಮುಖಂಡನೇ ಇಂದ್ರ. ಅವನು ಯಾವಾಗಲು ತನ್ನ ಇಂದ್ರಪದವಿಯನ್ನು ಸಂರಕ್ಷಿಸಿಕೊಳ್ಳುವುದರಲ್ಲೇ ಮಗ್ನನಾಗಿರುತ್ತಾನೆ; ಅಲ್ಲದೆ, ತನ್ನ ಹಾಗೂ ತನ್ನವರ ಪುತ್ರ–ಪೌತ್ರಾದಿಗಳ ಸಂವರ್ಧನದಲ್ಲೇ ಲೀನನಾಗಿರುತ್ತಾನೆ. ಮಿಕ್ಕ ಜನರಿಗೆ ವಂಧ್ಯಾಪತಿಗಳಾಗಿ ಅರ್ಥಾತ್ ಮಕ್ಕಳಿಲ್ಲದವರಾಗಿ ಅಥವಾ ಅಲ್ಪ ಮಕ್ಕಳಿಗರಾಗಿ ಆಳಿರಿ ಎಂದು ಉಪದೇಶಿಸುತ್ತಾನೆ.

ಮೂರನೆಯದಾಗಿ, ಮೂರಕ್ಷರಗಳಿಂದ ವಾಚ್ಯನಾದ ಪುರುಷನು (ಟೀ–ಪಾರ್–ಟೀ) ಗೂಢವಾಗಿದ್ದಾನೆ. ಅವನನ್ನು ಅರ್ಥಾತ್ ಟೀಪಾರ್ಟಿಯನ್ನು ಅನುಭವಿಸಬೇಕಾದರೆ (ಮುಖಂಡನೊಡನೆ ಹೆಗಲಿಗೆ ಹೆಗಲು ಹಾಕಿ ವೈಭವದಿಂದ ಸವಿಯಬೇಕಾದರೆ) ಎಡರಕ್ಷರದ ಪುರುಷ ಎನಿಸಿದ 'ಪಾರ್ಟಿ'ಯ ಹಿಂದಿರುವ ಸೋಮ ಅಥವಾ ಟೀಯನ್ನು ಇಂದ್ರನಿಗೆ (ಪಾರ್ಟಿಯ ಮುಖಂಡನಿಗೆ) ಅರ್ಪಿಸಿರಿ!

ಇಂದ್ರನು ಪಾರ್ಟಿಯನ್ನೇ ದೇವನನ್ನಾಗಿ ಉಳ್ಳವ. ಆದುದರಿಂದ ನೀನೂ "ಪಾರ್ಟಿ ದೇವೋಭವ" ಎನ್ನುತ್ತಾನವ. ಅದರಿಂದ ಕೂಡಲ ಸಂಗಮ ಹಕ್ಕಿಯಿಂತೆಂದಿತು –

**(ಝಾಂಪೇಯ)**

**ಪಾರ್ಟಿಯೇ ಪರದೈವ, ಮಠವೇ ಮಹಾದೇವ,**

**ವರ್ಗವೇ ವೈಭವದ ನಿಃಶ್ರೇಣಿ ಗೌಡಾ!**

**ಜಾತಿಯೇ ಸುಪ್ರಭ**

**ಪರಂಜ್ಯೋತಿ, ಭಾರತದ ಹೋತ ಹಿಂಡಿರದಾತ –**

**ಪಂಚವಾರ್ಷಿಕ ಯಜ್ಞ –**

**ಕಾತನೇ ಬಲಿಯೆಂದು ತಿಳಿಯಯ್ಯ ಗೂಢಾ!**

**ಇದನರಿತು ಆಚರಿಸದವ ನಿತ್ಯ ಮೂಢಾ!**

**(ತ್ರಿಪದಿ)**

**ಪಾರ್ಟಿಯಲ್ಲಿರುವಂಥ ಕಳ್ಳನೊಳ್ಳಿದನಕ್ಕು**

**ಪಾರ್ಟಿ ಬಿಟ್ಟಾಗಲೊಳ್ಳಿದನು ಕಳ್ಳನೇ ಪಾರ್ಟಿ–ಕೂಡಲಿಗೆ ಶರಣೆನ್ನು॥**

**(ತ್ರಿಪುಟೀಯ)**

ಭಾ.ಷ. ಪಾರ್ಟಿಯಿಲ್ಲದ ಪಾರ್ಟುದಾರನ ಪಾರ್ಟಿಗಿಹುದೇ ಬೆಲೆಯು?

ಅವ ಸ್ವೀಟ್ –

ಹಾರ್ಟೆನಿಸುವನೆ ಜನತೆಗೆಂದೂ ರಾಮ ರಾಜ್ಯದಲಿ?

ಪಾರ್ಟಿಯೇ ಹರಿ, ಪಾರ್ಟಿಯೇ ಹರ ಪಾರ್ಟಿ ಪರಮಬ್ರಹ್ಮ ವಿದ್ಯುತ್ –

ಕಾರ್ಟಿನೇಜಿನೊಳಿಂದು ಸಂಗಮ ಸಂಘ ನೀತಿಯಲಿ!

ಅರಿತೆನೆಂದರೆ ಅರಿತಷ್ಟೇ ಗುಣ, ಅರಿಯೆ ನೆಂದರೆ ಅರುವತ್ತು ಗುಣ;

ಅರಿಯದೆಯೂ ಅರಿತಿದ್ದೇನೆಂದರೆ ಅರಿತೂ ಅರಿಯೆನೆಂದವಗಿಂತ ಆರುನೂರು ಗುಣ ಹೆಚ್ಚಯ್ಯ ಕೂಡಲಲ್ಲಿ ಕೂಡಿದ ದೇವ!

ಅರಿಯದೆಯೂ ಅರಿತಿದ್ದೇನೆಂಬವನು ಹಿಂದುಳಿದವರ ಅಗ್ರೇಸರ. ಯಾವುದರ ಹಿಂದೆಯೇ ಉಳಿಯಬೇಕು ಹಿಂದುಳಿದವನಾಗಬೇಕಾದರೆ? ಎಂದು ನೀವು ಕೇಳಿರಿ.

ಅಮ್ಮಯ್ಯಾ! ಅದಕ್ಕೆ ಹಕ್ಕೀ ಅರಸಾ ಹೇಳ್ತಾನ್ ಕೇಳಿ –

**(ರೂಪಕೀಯ)**

**ಕೋಲ ಹಿಂದೆ ಕುರುಡ ಹೋಗಿ ಗೆದ್ದನಮ್ಮಾ**

**ಪತಿಯ ಹಿಂದೆ ಸತಿಯು ಹೋಗಿ ಗೆದ್ದಳಮ್ಮಾ**

**ಧನದ ಹಿಂದೆ ಕಳ್ಳ ಹೋಗಿ ಗೆದ್ದನಮ್ಮಾ**

**ಜಾತಿ ಹಿಂದೆ ನೀತಿ ಹೋಗಿ ಗೆದ್ದಿತಮ್ಮಾ!**

ಹಿಂದುಳಿದವರ ಹೆಸರಲ್ಲಿ ಹಿಂದುಳಿದಿದ್ದೇನೆಂಬವನೇ ಅವರ ಪೂಜಾರಿ. ಬೆಳೆಗಾರನಿಗಿಲ್ಲದ ಹಣದ ಬೆಳೆ ದಲ್ಲಾಲಗಲ್ಲವೇ? ಅವನ ಪಠಾನ ಬಡ್ಡಿಯ ಬಾಕಿ ವಸೂಲಿಗೆ ಉಪಮೆಯೆಲ್ಲಾದರೂ ಉಂಟೆ? ಆದುದರಿಂದ –

**(ರೂಪಕೀಯ)**

**ಹಿಂದೆ ಉಳಿದ ಜನರ ಹಿಂದೆ ಸಾಗಬೇಕು**

**ಅವರಿಗಾಗಿ ಹೊಡೆವೆನೆಂದು ಸಾರಬೇಕು**

**ಮೆಲ್ಲ ಮೆಲ್ಲನವರೆ ನಾವು ಎನ್ನಬೇಕು ಪಾರ್ಟಿ ಪರದೆ ಹಿಂದೆ**

**ನಿಂತು ತಿನ್ನಬೇಕು!**

**ಇಂಥ ಪಾರ್ಟಿಯನ್ನೇ ಕನಕಪುರಂದರ ಹಕ್ಕಿಯೂ ಎತ್ತಿ ಹಿಡಿದಿದೆ:**

**(ಝಂಪೇಯ)**

**ಇಂಥ ಪಾರ್ಟಿಯೆ ಪಾರ್ಟಿ ಮೂಲೋಕದೊಳಗೆ ॥ಪ॥**

**ಕಂತುಪಿತ ಹಿಡಿದಾಯುಧದ ಶಕ್ತಿಯಿದಕೆ ॥ಅ.ಪ॥**

**ಪಾನದ ಪ್ರತಿಬಂಧದಾಣೆ ಹಾಕಿದ ಪಾರ್ಟಿ**

**ಗೋಣು ಬಗ್ಗಿಸುವವರ ಹೊರೆವ ಪಾರ್ಟಿ।**

**ಕಾಣಿಸದೆ ತಿಂಬಂಥ ಜಾಣರೇಳ್ಗೆಯ ಪಾರ್ಟಿ**

**ವಾಣಿ ವೈಭವವೆಸೆವ ಕೋಣಪಾರ್ಟಿ ॥೧॥**

**ಭಕ್ಷಣಾದಕ್ಷರಾಧಾರವಾಗಿಹ ಪಾರ್ಟಿ।**

**ದಕ್ಷಿಣಾಸೌಭಾಗ್ಯವೀವ ಪಾರ್ಟಿ।**

**ಕುಕ್ಷಿದೇವರ ಕುಲವನುದ್ಧರಿಸುತಿಹ ಪಾರ್ಟಿ**

**ಭಿಕ್ಷುಕರ ಹೆಚ್ಚಿಸುವ ಭೀಮಪಾರ್ಟಿ ॥೨॥**

**ಅನ್ಯಥಾ ನಾಸ್ತಿ ಶರಣೆನ್ನುತಿಹ ಹಿರಿಪಾರ್ಟಿ**

**ಕನ್ಯಾರ್ಥಗಳಿಗಾಗಿ ಕಾಲ್ ಹಿಡಿವ ಪಾರ್ಟಿ।**

**ಹಣ್ಣು ಮುದುಕರ ಗುರಾಣಿಯ ಮಾಡಿಕೊಂಡಿರುವ**

**ಬಣ್ಣಬಾಜಿಯ ಪಾರ್ಟಿ ಧನ್ಯ ಪಾರ್ಟಿ ॥೩॥**

ಈಗ ನೀವಿರುವುದು ಪಾರ್ಟಿ ವೈಭವ ಪುರಾಣ ಯುಗದಲ್ಲಿ; ಕೇಳಬೇಕಾದದ್ದು ಪುರಾಣಪ್ರವಚನವನ್ನಲ್ಲ – ಪಾರ್ಟಿ ಪ್ರವಚನವನ್ನು. ಪಾರ್ಟಿ ಪೂಜಕನೇ ಪರಮ ಪುಢಾರಿ, ವಿನಾಯಕ, ಮಹಾನಾಯಕ. ಪುಢಾರಿಯು ನರ, ಪಾರ್ಟಿ ನಾರಾಯಣ. ಸನಾತನ ಪಾರ್ಟಿಯೇ ನಾರಾಯಣನ ದಶಮಾವತಾರ! ದಂಗು ಬಡಿಯದಿರಿ ಹಳ್ಳಿಯ ಹುಂಬರೇ, "ದತ್ತದಯಧ್ವಂ, ದಾಮ್ಯತ" ಎಂಬುದನ್ನಾಶ್ರಯಿಸಿರಿ ಚುನಾವಣೆಯಲ್ಲಿ. ಜತ್ತಿಯವರ ಮಂತ್ರಿಮಂಡಲ ಪಾರ್ಟಿ ಹೈಕಮ್ಯಾಂಡಿನ ಅಧಿಕಾರವಾಣಿಯ ಫಲ!

**(ಏಕತಾಲೀಯ)**

**ಲಾವಣಿ ಹಕ್ಕಿ ಏನಂತೈತೆ ಗೊತ್ತೇನರಿ?**

**ಚಾವಣಿಮ್ಯಾಲೆ ಕುಂತ್ರೆ ನಿಮ್ಗೆ ಕೇಳ್ಸ್ತೈತರಿ –**

**ನಾಡ ಕಟ್ಟೋ ಹಾಡು ಹಿಂದಿನ್ಮಾತಾಯ್ತರಿ**

**ಪಾರ್ಟೀ ಕಟ್ಟೋ ಹಾಡ ಹಾಡ್ರಿ ಸರಾಸರಿ**

**ಜೋಡು ಕಾರು ಹೊಡಿಕೊಂಡು ಹೋಗ್ಬೇಕರಿ**

**ದೌಡಾಯ್ಸಿ ದಿಲ್ಲೀ ಕಡೆ ಸಾಗ್ ಬೇಕರಿ ತಿಂಗ್ಳೀಗೊಮ್ಮೆ ಒಡೆಯರ್**

**ಕಂಡ್‌ಕೊಂಡ್ ಬರ್‌ಬೇಕರಿ ಮಂಗ್ಳಾರ್ತಿಯೆತ್ತಿಹಾಡಿ ಹರಸ್ ಬೇಕರಿ!**

**ವರದೀಯೆಂಬೋ ನವ್ಯಕಾವ್ಯ ಬರಿಬೇಕರಿ**

**ಸರಿಯೇ ತಪ್ಪು ಎಂಬೋದನ್ನ ಕಲಿಬೇಕರಿ**

**ಸರದಿಗೊಮ್ಮೆ ಚಹಾಪಾರ್ಟಿ ಕೊಡ್‌ಬೇಕರಿ**

**ಕರೆದು ಕಾಡ್ಸಿ ಅಧಿಕಾರ ಹಿಡಿಬೇಕರಿ!**

**ಸುಳ್ಳು ಹೇಳೋಕೆಂದೂ ನೀವು ನಾಚ್‌ಬಾರದ್ರಿ**

ಹೇಳದಿದ್ರೆ ಬಾಳ್ವೆ ಮಾಡಾಕಾಗಾಕಿಲ್ರಿ
ಮೊನ್ನೆ ಮುನ್ಸಿಫ್ ಸಾಯೇಬ್ರೀಂಗೆ ಹೇಳ್ಬಿಟ್ರಲ್ರಿ
ಅನ್ಯಾಯಕ್ಕೆ ನ್ಯಾಯಯೆಂಬೋದ್ ನ್ಯಾಯಾಕಣ್ರಿ!
ಪ್ಯಾಟೀ ಶಾರಯೇರಿ ಕುಂತು ಹೇಳ್‌ಬೇಕರಿ
ಮಂತ್ರಿ ಬಂದ್ರೆ ಚಹಾ ಪಾರ್ಟಿ ಕೊಡ್ಸಬೇಕರಿ
ಹಾಂಗ್ ಮಾಡ್ಸ್‌ತೇನ್ ಹೀಂಗ್ ಮಾಡ್ಸ್‌ತೇನನ್ಬೇಕರಿ
ಪೇಪರ್ ತುಂಬಾ ಫೋಟೋ ಕಳ್ಸಿ ಮೆರಿಬೇಕರಿ!
ಹಳ್ಳೀ ಮಂದೀಗ್ ಗುಂಬಳ್ಕಾಯಿ ಹೇಳ್‌ಬೇಕರಿ
ಚಂದಾಯೆತ್ತಿಕೊಂಡು ಹೋಗಿ ತಿನ್‌ಬೇಕರಿ
ಸಂಘ ಕಟ್ತೇನೆಂದು ಹೇಳಿ ಹಾರ್ಯಾಡ್ ಬೇಕ್ರಿ
ಮಂಗನ್‌ಮಾಡಿ ಮಂದೀನೆಲ್ಲಾ ನಡಿಬೇಕರಿ!
ಲೀಡರ್ ಮಂದಿ ಹೊಗ್ಳಿ ಬಾಸಣ್ ಮಾಡಬೇಕರಿ
ಪಾರ್ಟಿ ಫೌಜುದಾರ ನಾನೇ ಎನ್‌ಬೇಕರಿ
ಗ್ರಾಂಟು ಗೀಂಟು ಕೊಡಿಸ್ತೇನೆಂದು ಸಾರ್‌ಬೇಕರಿ
ಯಾರನ್ನಾದ್ರೂ ದೂರಿಬಿಟ್ರೆ ಮುಗ್ಧ್ಹೋಯ್ತರಿ!
ಲಾಯರ್ ಗೀಯರ್ ನೀವಾಗಿದ್ರೆ ಚಂದಾಗ್ಹೋಯ್ತು
ಕಾಯ್ದೆ ಕಣ್ಣೀಗ್ ಮಣ್ಹಾಕ್ಲಿಕ್ಕೆ ಅನುಕೂಲ್ವಾಯ್ತು
ಮೆಂಬರ್‍ರಾಗೋ ಯಿದ್ಯ ಹಿಡಿದು ಸಾಗಿದ್ರಾಯ್ತು
ಪಾರ್ಟಿ ದೇವ್ರು ಕೊಡಿಸ್ತಾನೆ ಎಲ್ಲಾ ಸಂಪತ್ತು!



['ನಗೆನಂದನ' – ಪುಟ ೨೯೬]

# ೪೬. ಆಶ್ಚರ್ಯ ಚೂಡಾಮಣಿ
# (ನಾಟಕ ಕಥೆ)

ಮರಗಿಡಬಳ್ಳಿಗಳಿಂದ ನಿಬಿಡವಾದ ಒಂದು ದೊಡ್ಡ ಅಡವಿ. ಅಲ್ಲಿ ತರತರವಾದ ಕ್ರೂರಮೃಗಗಳ ಗರ್ಜನೆ ಕೇಳಿಬರುತ್ತಿತ್ತು. ತಂದೆಯ ಸತ್ಯವನ್ನು ಉಳಿಸುವುದರ ಸಲುವಾಗಿ ರಾಮಚಂದ್ರನು ಸೀತಾಲಕ್ಷ್ಮಣರೊಡನೆ ಈ ಕಾಡಿನಲ್ಲಿ ಇರಲು ಬಂದಿದ್ದನು. ಅಣ್ಣ ಅತ್ತಿಗೆಯರಂತೆ ಆರಣ್ಯಕವೇಷವನ್ನು ಧರಿಸಿದ್ದ ಲಕ್ಷ್ಮಣನು ವಾಸಕ್ಕೆ ಯೋಗ್ಯವಾದ ಒಂದು ಆಶ್ರಮವನ್ನು ರಚಿಸುವುದಕ್ಕಾಗಿ ಅಲ್ಲಿ ಸಂಚರಿಸುತ್ತಿದ್ದ ಮೃಗಗಳನ್ನು ತನ್ನ ಧನುಷ್ಟಂಕಾರಮಾತ್ರದಿಂದಲೇ ಚದರಿಸುತ್ತಿದ್ದನು. ಬಳಿಕ ಆ ಸ್ಥಳದಲ್ಲಿ ಹತ್ತಿರದ ಮರಗಳಿಂದ ತಳಿರುತೊಂಗಲುಗಳನ್ನಾಯ್ದು ತಂದು ಎಲೆವನೆಯೊಂದನ್ನು ನಿರ್ಮಿಸಿ, ಗೋದಾವರಿ ತೀರದಲ್ಲಿ ಸುಳಿವ ತಂಗಾಳಿಯಿಂದ ಮಾರ್ಗಾಯಾಸವನ್ನು ಕಳೆಯಲೆಂದು ಹೋಗಿದ್ದ ರಾಮ ಸೀತೆಯರಿಗೆ ತಾನು ಅಣಿಮಾಡಿದುದನ್ನು ತಿಳಿಸಲು ಹೋದನು.

ಲಕ್ಷ್ಮಣನು ಹಾಗೆ ಅಣ್ಣನ ಬಳಿಗೆ ಹೋಗುತ್ತಿರುವಾಗ ಹಠಾತ್ತಾಗಿ ಒಂದು ದೃಶ್ಯವನ್ನು ಕಂಡನು. ಅಗಲವಾದ ಕಣ್ಣು, ಬಾಗಿದ ಹುಬ್ಬು, ತುಂಬಿದ ಎದೆ ಇವುಗಳಿಂದ ಶೋಭಿಸುವ ಒಂದು ಸ್ತ್ರೀಮೂರ್ತಿಯು ಇದಿರಿಗೆ ನಿಂತಿದ್ದಿತು. ಆಗತಾನೆ ಹೀಗೆ ಲಲಿತಸುಕುಮಾರ ವೇಷವನ್ನು ಧರಿಸಿ ಬಂದ ಶೂರ್ಪಣಖೆ ಲಕ್ಷ್ಮಣನ ತಿರಸ್ಕಾರ ದೃಷ್ಟಿಯನ್ನು ಲೆಕ್ಕಿಸದೆ ನಸುನಾಚಿಕೆಯನ್ನು ತೋರಿ, ಮುಗ್ಧೆಯಂತೆ ನಟಿಸಿ, ದುಂಬಿಗಳಿಂದಾವೃತವಾದ ಹೂಮುಡಿಯನ್ನು ಬಾಗಿಸಿ – 'ನಾನು ಶರಣಾಗತಳಾಗಿ ಬಂದಿರುವೆ, ನನ್ನನ್ನು ಉಪೇಕ್ಷಿಸಬೇಡಿ; ಶ್ರೀರಾಮರು ನನ್ನನ್ನು ನಿಮ್ಮ ಸಹಚರಿಯಾಗಿಟ್ಟುಕೊಳ್ಳಬೇಕೆಂದು ಅಪ್ಪಣೆ ಕೊಟ್ಟಿರುವರು' ಎಂದು ಬಿನ್ನವಿಸಿದಳು. ಅದನ್ನು ಕೇಳಿದ ಲಕ್ಷ್ಮಣನು 'ನಾರುಡೆಯುಟ್ಟ ನಮಗೂ ಸಿರಿಯುಡುಗೆಯ ಮನ್ಮಥನಿಗೂ ಏನು ಸಂಬಂಧ?' ಎಂದು ಕೇಳಿದನು. 'ರಾಮನೊಡನೆ ಸೀತೆಯಿಲ್ಲವೆ? ಹಾಗೆಯೇ ನಿಮ್ಮೊಡನೆ ನಾನೇಕಿರಬಾರದು?' ಎಂದು ಶೂರ್ಪಣಖೆ ಮರುನುಡಿದಳು. ಇದರಿಂದ ಏನು ಮಾಡಲೂ ತೋರದೆ ಲಕ್ಷ್ಮಣನು ಅವಳಿಂದ ತಪ್ಪಿಸಿಕೊಳ್ಳುವ ಹಂಚಿಕೆಯಿಂದ ಅವಳನ್ನು ಅಲ್ಲೇ ಕಾದಿರಹೇಳಿ ರಾಮನ ಸಮೀಪಕ್ಕೆ ಹೋದನು.

ದಾರಿಯಲ್ಲಿ ಹೋಗುವಾಗ, ಇಂತಹ ರತಿದೇವಿಯಂತಹ ಹೆಣ್ಣು ಈ ಗೊಂಡಾರಣ್ಯದಲ್ಲಿ ಹೇಗೆ ಬಂದಳು? ಎಂದು ಲೆಕ್ಕ ಹಾಕುತ್ತಾ ಲಕ್ಷ್ಮಣನು ಸಾಗಿದ್ದನು. ಅತ್ತ ರಾಮಸೀತೆಯರು ನದಿಯ ತೀರದಲ್ಲಿ ಎಡಬಲದ ಬೆಟ್ಟಗುಡ್ಡ ತರುಲತೆ ನೀರುನೆಳಲುಗಳ ಸೊಬಗುಬೆಡಗುಗಳನ್ನು ಕೊಂಡಾಡುತ್ತಾ ತಿರುಗುತ್ತಿದ್ದರು. ಲಕ್ಷ್ಮಣನು

ಅಲ್ಲಿಗೆ ಬಂದು ಅಣ್ಣನನ್ನು ಕಂಡು ಅಂತಹ ದುರ್ಗಮವಾದ ಕಾಡಿನಲ್ಲಿ ಸಂಚರಿಸಿ ಬಳಲುವಂತಾದುದು ಆ ಕೈಕೆಯ ದುರ್ನಯದಿಂದಲೇ ಎಂದು ಪರಿತಪಿಸಿ ನುಡಿದನು. ಅದಕ್ಕೆ ಪ್ರಶಾಂತಮನಸ್ಕನಾದ ರಾಮಭದ್ರನು ಮುಗುಳುನಗೆ ನಕ್ಕು ಮುನಿಸೇವೆ, ಕ್ಷೇತ್ರವಾಸ, ತೀರ್ಥಸ್ನಾನ ಮೊದಲಾದ ದುರ್ಲಭಪುಣ್ಯಕರ್ಮಗಳನ್ನು ತಾವು ಮಾಡುವಂತಾದುದು ಆ ಮಹಾಭಾಗೆಯಾದ ಕೈಕೆಯ ದಯದಿಂದ ಎಂದೂ ಮಾತೃದೂಣಷ ಬೇಡವೆಂದೂ ಹೇಳಿ ತಮ್ಮನನ್ನು ಸಮಾಧಾನಪಡಿಸಿದನು. ಅನಂತರ ಪರ್ಣಕುಟಿಯನ್ನು ಹೊಕ್ಕು ಸೀತೆಯೊಡನೆ ವಿಶ್ರಮಿಸಿದನು.

ಇತ್ತ ಕಪಟವೇಷಧಾರಿಣಿಯಾದ ಶೂರ್ಪಣಖೆಯು ಕಾದು ಕಾದು ಬೇಸತ್ತು ರಾಮವಚನದಂತೆ ತಾನು ಲಕ್ಷ್ಮಣನೆಡೆಗೆ ಬಂದುದು ತಪ್ಪಾಯ್ತೆಂದು ತನ್ನೊಳಗೆ ತಾನೇ ಕುದಿಯುತ್ತಾ ಆದದ್ದಾಗಲೆಂದು ನೇರವಾಗಿ ರಾಮನ ಬಳಿಗೇ ನಡೆದಳು. ಅವಳು ಅಲ್ಲಿಗೆ ಹೋದಾಗ ರಾಮನು ತನ್ನ ಸಖಿಗೆ – 'ನರಭಕ್ಷಕರಾದ ರಕ್ಕಸರಿಂದ ಈ ಪಂಚವಟಿಯು ತುಂಬಿರುವುದೆಂದು ಕೇಳಿದ್ದೆ. ಆದರೆ ಈಗ ನೋಡಿದರೆ ಇಲ್ಲಿ ಅಂತಹ ಭಯಂಕರವಾದುದು ಯಾವುದೂ ಇಲ್ಲ, ಎಲ್ಲೆಲ್ಲೂ ಈ ಕಾಡು ಸುಂದರ ಉದ್ಯಾನದಂತೆ ಕಂಗೊಳಿಸುವುದು' ಎಂದು ಹರುಷದಿಂದ ಹೇಳುತ್ತಿದ್ದನು. ಶೂರ್ಪಣಖೆಯು ರಾಮನ ಬಳಿ ಲಕ್ಷ್ಮಣನ ತಿರಸ್ಕಾರವನ್ನು ಒಂದಕ್ಕೆ ನೂರು ಮಾಡಿ ಬಣ್ಣಿಸಿ, 'ನೀನೇ ನನ್ನನ್ನು ಸ್ವೀಕರಿಸು' ಎಂದು ಹಟಹಿಡಿದು ಅಳುಮೋರೆ ಮಾಡಿನಿಂತಳು; ಸ್ವೀಕರಿಸದಿದ್ದರೆ ಆತ್ಮಹತ್ಯೆ ಮಾಡಿಕೊಳ್ಳುವುದಾಗಿಯೂ ಬೆದರಿಸಿದಳು. ಸೀತೆಗೆ ಅವಳನ್ನು ನೋಡಿ ಕನಿಕರಹುಟ್ಟಿ ಸ್ವೀಕರಿಸೆಂದು ಪತಿಯನ್ನು ಪ್ರಾರ್ಥಿಸಿದಳು. ರಾಮನು ಉಪಾಯವಾಗಿ ಮಾತನ್ನು ಬದಲಾಯಿಸಿ 'ನಿರಾಭರಣಳಾದರೂ ನೀನು ಹೇಗೆ ಸುಂದರಿಯಾಗಿಯೇ ತೋರುವೆ!' ಎಂದು ಸೀತೆಯನ್ನು ನೋಡಿ ಸಂತೋಷ ಸೂಚಿಸಿದನು. ಸೀತೆಯು 'ಪತಿದರ್ಶನದಿಂದ ನಿನಗೆ ಎಲ್ಲ ಅಲಂಕಾರವೂ ಒದಗಲಿ, ಎಂದು ಅನಸೂಯೆಯಿತ್ತ ವರವನ್ನು ಆರ್ಯಪುತ್ರನು ಬಹುಶಃ ಮರೆತಿರಬಹುದು' ಎಂದು ಮನಸ್ಸಿನಲ್ಲೇ ಎಂದುಕೊಂಡಳು.

ಆ ಸಮಯದಲ್ಲಿ, 'ಎಲಾ ಪಿಶಿತಾಶನೇ ನಿಲ್ಲು!' ಎಂಬ ಲಕ್ಷ್ಮಣನ ಗುಡುಗು ರಾಮಸೀತೆಯರಿಗೆ ಕೇಳಿಸಿತು. ಎಲ್ಲೆಂದು ಚಕಿತರಾಗಿ ಅವರು ನೋಡುವಲ್ಲಿ ಎದುರಿಗೇ ಕೆಂಗೂದಲಿನ ಕರಿಯ ಮೈಯ ಭಯಂಕರವಾದ ಒಂದು ಬೃಹದ್ರೂಪವು ನಿಂತಿದ್ದಿತು. ಸೀತೆ ಬೆದರಿ ಕೂಗಿಕೊಂಡಳು. ಥಟ್ಟನೆ ರಕ್ಕಸಿಯಾದ ಶೂರ್ಪಣಖೆ ಲಕ್ಷ್ಮಣನನ್ನು ಎತ್ತಿಕೊಂಡು ಆಗಸಕ್ಕೆ ಹಾರಿದಳು. ಆದರೆ ತಮ್ಮನ ಗತಿಯೇನಾಗುವುದೋ ಎಂದು ಹೆದರುತ್ತಿದ್ದ ರಾಮನೆದುರು ರಕ್ಕಸಿಯ ಕೆನ್ನೆತ್ತರು ಧಾರೆಧಾರೆಯಾಗಿ ಬೀಳತೊಡಗಿತು. ಕೆಲಹೊತ್ತಿನಲ್ಲಿ ಕರಿಮೈಯ ದುರುದುಂಬಿಯ ಕಿವಿ ಮೂಗುಗಳನ್ನು ಕತ್ತರಿಸಿ ಅವಮಾನಗೊಳಿಸಿ ಲಕ್ಷ್ಮಣನು ಕೆಳಗೆ ಬಂದು ಅಣ್ಣನ ಸಂತಸಕ್ಕೀಡಾದನು. ರಕ್ಕಸಿಯಾದರೋ 'ಅಯ್ಯೋ ಅಣ್ಣಾ, ರಾವಣಾ, ಕುಂಭಕರ್ಣಾ, ವಿಭೀಷಣಾ! ಈ

ತಪಸ್ವಿಗಳ ಅವಿನಯದಿಂದ ನನ್ನನ್ನು ಕಾಪಾಡಿರಿ' ಎಂದು ಅರಚುತ್ತಾ ರಾಮ ಲಕ್ಷ್ಮಣರಿದ್ದೆಡೆ ಬಂದು 'ಎಲಾ ಮನುಷ್ಯಜಂತುಗಳೇ, ನಿಮ್ಮ ಅವಿನಯವನ್ನು ನೆನಪಿನಲ್ಲಿಡಿ; ಇದಕ್ಕೆ ತಕ್ಕ ಬಹುಮಾನವನ್ನು ನನ್ನ ಅಣ್ಣಂದಿರಿಂದ ಕೊಡಿಸುವೆನು' ಎಂದು ಮಾಯವಾದಳು. ಆ ಬಳಿಕ ರಾಮನು – 'ಇರಲಿ, ಇದೇ ಮೊದಲಾಗಿ ಇವಳ ದೆಸೆಯಿಂದ ಇಡೀ ರಾಕ್ಷಸಕುಲವೇ ನಾಶವಾದೀತು! ನಡೆ, ಲಕ್ಷ್ಮಣ, ಸಂಜೆಯ ವಿಧಿಯನ್ನು ಮುಗಿಸೋಣ' ಎಂದು ಹೇಳಿ ಹಾಗೆ ಮಾಡಲು ಹೊರಟು ಹೋದನು.

ಹೀಗಿರಲು ಕೆಲದಿನಗಳ ಬಳಿಕ ರಾಮಚಂದ್ರನು ಜನಸ್ಥಾನವಾಸಿಗಳಾದ ಋಷಿಗಳನ್ನು ಖರದೂಷಣಾದಿಗಳ ಸಂಹಾರದಿಂದ ಸಂತೋಷಗೊಳಿಸಿದನು. ಅವರು ಅತ್ಯಧಿಕ ಪ್ರೀತಿಯಿಂದ ರಾಕ್ಷಸ ಮಾಯಾಭೇದಕಗಳಾದ ಒಂದು ಉಂಗುರ, ಕವಚ ಮತ್ತು ಚೂಡಾಮಣಿ ಇವುಗಳನ್ನು ರಾಮಲಕ್ಷ್ಮಣ ಸೀತೆಯರಿಗೆ ಬಹುಮಾನವಾಗಿ ಕೊಟ್ಟರು. ಒಂದು ದಿನ ಅಕಸ್ಮಾತ್ತಾಗಿ ಆಶ್ರಮದೆದುರು ಝುಗ್ಗನೆ ಮಿಂಚಿದಂತಾಗಿ ಮುಗಿಲಿನಂತೆ ಓಡುವ ಒಂದು ಸುವರ್ಣಮೃಗವು ಅವರ ಕಣ್ಣಿಡೆಯಲ್ಲಿ ಬಿದ್ದಿತು! ಸೀತೆಯ ಬಯಕೆಯ ಮೇರೆಗೆ ರಾಮನು ಅದನ್ನು ಹಿಡಿತರಲು ಧನುರ್ಧಾರಿಯಾಗಿ ನಡೆದನು.

ಆ ರೀತಿಯಲ್ಲಿ ಸ್ವರ್ಣಮೃಗವಾಗಿ ರಾಮನನ್ನು ಮೋಸಗೊಳಿಸಲು ಮಾರೀಚನನ್ನು ಗೊತ್ತು ಮಾಡಿ ಲಂಕೇಶ್ವರನು ತಂಗಿಯೊಡನೆ ವಿಮಾನಾರೂಢನಾಗಿ ರಾಮ ಕುಟೀರದ ಸನಿಹದ ಅಂತರಾಳದಲ್ಲಿ ನಿಂತನು. ಕುಟಿಲೆಯಾದ ಶೂರ್ಪಣಖೆಯು ಸೀತಾಲಕ್ಷ್ಮಣರನ್ನು ಅಣ್ಣನಿಗೆ ತೋರಿಸಿದಳು. ಸೀತೆಯ ಸೌಂದರ್ಯಕ್ಕೆ ಮನಸೋತು ಎಚ್ಚರಗೊಂಡ ಬಳಿಕ ಲಕ್ಷ್ಮಣನನ್ನು ನೋಡಿ, 'ಇವನೇ, ಆ ಮುದುಕಿಯಾದ ತಾಟಕೆಯನ್ನು ಕೊಂದ ರಾಮನ ತಮ್ಮನೇ?' ಎಂದು ಹಾಸ್ಯ ಮಾಡಿದನು.

ಅತ್ತ ರಾಮನ ತೀಕ್ಷ್ಣವಾದ ಶರಪಾತಕ್ಕೊಳಗಾದ ಮಾರೀಚನು ರಾಮನ ದನಿಯಿಂದ 'ಹಾ ಲಕ್ಷ್ಮಣ' ಎಂದು ಕೂಗಿ ಸತ್ತನು. ಚಂಚಲೆಯಾದ ಸೀತೆಯು ಲಕ್ಷ್ಮಣನನ್ನು ಬೈದು ರಾಮನ ಸಹಾಯಕ್ಕೆಂದು ಅಟ್ಟಿದಳು. ಅವನಾದರೋ ರಾಮನಿಗೆ ಸಹಾಯದ ಅವಶ್ಯಕತೆಯಿಲ್ಲವೆಂದರಿತದ್ದರೂ ಅತ್ತಿಗೆಯ ಬೈಗುಳವನ್ನು ಸಹಿಸಲಾರದೇ ಆಶ್ರಮವನ್ನು ಬಿಟ್ಟು ಹೊರಟನು.

ಸಮಯವನ್ನು ಕಾಯುತ್ತಿದ್ದ ರಾಮರೂಪಧರನಾದ ರಾವಣನು ಬರಲು ಸೀತೆಯು ಅವನನ್ನು ಸತ್ಕರಿಸಿದಳು. ತಂತ್ರಗಾರನಾದ ರಕ್ಕಸರೊಡೆಯನು, ಶತ್ರುಗಳು ಭರತನಾಳುತ್ತಿರುವ ಕೋಸಲವನ್ನು ಮುತ್ತಿರುವರೆಂದು ತಮ್ಮ ದಿವ್ಯದೃಷ್ಟಿಯಿಂದ ತಿಳಿದು ನಮ್ಮನ್ನಲ್ಲಿಗೆ ಬೇಗ ಕಳುಹಲು ಋಷಿಗಳು ಒಂದು ದಿವ್ಯರಥವನ್ನು ಕೊಟ್ಟಿರುವರೆಂದು ಸೀತೆಗೆ ಹೇಳಿ ಲಕ್ಷ್ಮಣರೂಪಿಯಾದ ಸೂತನೊಡನೆ ಸೀತೆಯನ್ನು ರಥದ ಮೇಲೆ ಕುಳ್ಳಿರಿಸಿ ಆಕಾಶಕ್ಕೆ ಹಾರಿದನು!

ಆಕಡೆ ರಾಮನ ಬರವನ್ನು ವಿಳಂಬಿಸಲು ಶೂರ್ಪಣಖೆಯು ಸೀತೆಯ ಅವತಾರ ತಾಳಿ ನಡೆದಿದ್ದಳು. ಅವಳು ರಾಮನನ್ನು ಸಂಧಿಸಿದ ಕೆಲವು ನಿಮಿಷಗಳಲ್ಲಿ ಆಕಾಶದಿಂದ ಸೀತೆಯ ಸ್ವರವು ಕೇಳಬಂದಿತು! ಅದರಿಂದ ಚಮಕಿತನಾದ ರಾಮನನ್ನು ಮಾಯಾಸೀತೆಯು – 'ಆರ್ಯಪುತ್ರ, ಅಲ್ಲಿ ನೋಡು, ನಿನ್ನಂತೆ ತೋರುವ ಗಂಡಸೊಬ್ಬನೂ, ನನ್ನನ್ನು ಹೋಲುವ ಹೆಂಗಸೊಬ್ಬಳೂ ಆಗಸದಲ್ಲಿ ಹೋಗುತ್ತಿರುವರು!' ಎಂದಳು.

ರಾಮ– 'ನಿಜವಾಗಿಯೂ ಸೀತೆಯು ಪರಪುರುಷನ ದೃಷ್ಟಿಗೆ ಬೀಳುವವಳಲ್ಲ, ನಿಶ್ಚಯವಾಗಿಯೂ ವಂಚನಾಸೀತೆಯು ಅಲ್ಲಿ ಮಾಯಾರಾಮನೊಂದಿಗಿರುವಳು; ಹೇಗೆ ನಾನು ಅವನಲ್ಲವೋ ಹಾಗೆ ಅವಳು ನೀನಲ್ಲ' ಎಂದನು.

ಅತ್ತ ಆಕಾಶದಲ್ಲಿ ಸೀತೆ ಬಗ್ಗಿ ನೋಡಿ – 'ಆಹಾ, ಇದೇನು? ಕೆಳಗೆ ಒಬ್ಬನು ಆರ್ಯಪುತ್ರನಂತಹ ಮನುಷ್ಯನು ಕಾಣುವನಲ್ಲಾ!' ಎಂದಳು.

ರಾವಣ – 'ಮುಗ್ಧೇ, ಋಷಿಗಳನ್ನು ಮೋಸಗೊಳಿಸಲು ದಾನವರು ನನ್ನ ರೂಪದಿಂದ ತಿರುಗುತ್ತಾರೆ; ಅದೂ ಅಲ್ಲದೆ ಅಲ್ಲಿ ನೋಡು, ನಿನ್ನಂತೆಯೇ ತೋರುವ ರಮಣಿಯೊಬ್ಬಳು ನನ್ನಂತಹವನೊಡನೆ ಹೋಗುತ್ತಿದ್ದಾಳೆ! ಎಲ್ಲಾ ರಾಕ್ಷಸ ಮಾಯೆ!' ಎಂದು ಸಂತೈಸಿದನು.

ಸೀತೆಯು 'ನಿಜ, ನಿಜ, ಆರ್ಯಪುತ್ರನಿಗೆ ಬೇರೆಯ ಹೆಣ್ಣಿನ ನೆಂಟು ಹೇಗಾದೀತು? ಹೇಗೆ ನಾನು ಅವಳಲ್ಲವೋ ಹಾಗೇ ಅವನೂ ಆರ್ಯಪುತ್ರನಲ್ಲ' ಎಂದು ಸಮಾಧಾನ ಮಾಡಿಕೊಂಡಳು. ಅನಂತರ ಪುಷ್ಪಕವು ವಾಯುವೇಗದಿಂದ ಲಂಕೆಗೆ ಹಾರಿತು.

ಕೆಳಗೆ ರಾಮನ ಜೊತೆಯಲ್ಲಿದ್ದ ಶೂರ್ಪಣಖೆಗೆ ಅವನಿಂದ ತಪ್ಪಿಸಿಕೊಂಡು ಹೋಗಲು ಸಂಚು ತಿಳಿಯದೆ ಪೇಚಾಡತೊಡಗಿದಳು. ಅಷ್ಟರಲ್ಲಿ ಅಣ್ಣನನ್ನೆದುರಾದ ಲಕ್ಷ್ಮಣನು ಅವನು ಮಾಯಾರಾಮನೆಂದು ಶಂಕಿಸಿ ಅವನನ್ನು ಹೊಡೆಯಲಿಕ್ಕೆ ಬಂದನು. ಆಗ ರಾಮನು ತನ್ನ ಉಂಗುರವನ್ನು ತೋರಿಸಿ ತಮ್ಮನನ್ನು ವಿಶ್ವಸ್ತನನ್ನಾಗಿ ಮಾಡಿ ತನ್ನ ರೂಪವನ್ನು ತಾಳಿ ಸತ್ತಿದ್ದ ಮಾರೀಚನನ್ನು ತುಳಿದು ಮೊದಲಿನ ರೂಪ ಬರುವಂತೆ ಮಾಡಿದನು. ಅದಾದ ಕೂಡಲೇ ತನ್ನ ಮಾವನಾದ ಮಾರೀಚನ ಮರಣದಿಂದ ಕಣ್ಣೀರಿಡುತ್ತಿದ್ದ ಶೂರ್ಪಣಖೆಯ ಕಣ್ಣುಗಳನ್ನು ರಾಮನು ಮುಟ್ಟಿದೊಡನೆಯೇ ಅವಳಿಗೂ ನಿಜರೂಪ ಬಂದುಬಿಟ್ಟಿತು! ಕೂಡಲೇ ಲಕ್ಷ್ಮಣನು ಕೆರಳಿ ಕತ್ತಿಯನ್ನೆತ್ತಿದನು; ರಕ್ಕಸಿಯು ರಾಮನಿಗೆ ಮೊರೆಹೊಕ್ಕಳು. ಆಗ ರಾಮನು ತಮ್ಮನನ್ನು ತಡೆದು ಅವಳನ್ನು ಕುರಿತು – 'ಶೂರ್ಪಣಖೇ, ಸತ್ಯವನ್ನು ಹೇಳು, ನಿನಗೆ ಅಭಯ ಕೊಟ್ಟಿದ್ದೇನೆ' ಎನ್ನಲು, ಅವಳು ತಾವು ಮಾಡಿದ ಮಾಯಾಜಾಲವನ್ನು ವಿವರಿಸಿದಳು. ಅವಳ ಮುಖಾಂತರ ರಾವಣನಿಗೆ ಯುದ್ಧಸಂದೇಶವನ್ನು ಕಳುಹಿ ರಾಮಲಕ್ಷ್ಮಣರು ಮುಂದಣ ಕಾರ್ಯವನ್ನು ಕುರಿತು ಆಲೋಚಿಸತೊಡಗಿದರು.

ಅತ್ತ ಆಕಾಶಮಾರ್ಗದಲ್ಲಿ ದಶಗ್ರೀವನು ಕಾಮಪರವಶನಾಗಿ ಸೀತೆಯನ್ನು ಮುಟ್ಟಿದ ಕೂಡಲೇ ಸ್ವಸ್ವರೂಪವು ಬಂದೇ ಬಿಟ್ಟಿತು; ಸೂತನೂ ತನ್ನ ಪೂರ್ವದ ವಿಕಟಾಕಾರವನ್ನು

ವ್ಯಕ್ತಪಡಿಸಿದನು! ಅದರಿಂದ ಭೀತಳಾದ ಸೀತೆಯು ಗಟ್ಟಿಯಾಗಿ ಕೂಗಿಕೊಳ್ಳಲು ಅವಳ ರಕ್ಷಣೆಗಾಗಿ ಯುದ್ಧಕ್ಕೆ ಜಟಾಯುವು ಬಂದನು.

ಆ ಗೃಧ್ರನನ್ನು ತ್ರೈಲೋಕ್ಯವಿದ್ರಾವಣನಾದ ರಾವಣನು ನಿಮಿಷಾರ್ಧದಲ್ಲಿ ಸಂಹರಿಸಿ ಲಂಕಾಭಿಮುಖನಾದನು.

ಬಳಿಕ ಲಂಕೆಯಲ್ಲಿ ಅಶೋಕವನದ ಶಿಂಶುಪಾವೃಕ್ಷದಡಿಯಲ್ಲಿ ಬಂಧಿಯಾಗಿರಿಸಿದ ಸೀತೆಯನ್ನು ಪ್ರಲೋಭಗೊಳಿಸಲು ಲಂಕೇಶ್ವರನು ವಿವಿಧ ವಸ್ತ್ರಾಭರಣಭೂಷಿತನಾಗಿ ಹೊರಟಾಗ ಅವನ ಮಂತ್ರಿಯಾದ ಚಿತ್ರಯೋಧಿಯು ಅವನು ಮಾಡುತ್ತಿರುವುದು ಅಕಾರ್ಯವೆಂದು ಎಷ್ಟು ಬೇಡಿಕೊಂಡರೂ ಕೇಳದೆ ತನ್ನ ಹಟವನ್ನೇ ಸಾಧಿಸ ಹೋದನು. ಅಲ್ಲಿ ಸೀತೆಯನ್ನು ಕುರಿತು ತನ್ನ ವಶಳಾಗೆಂದು ಪರಿಪರಿಯಾಗಿ ಬೇಡಿಕೊಂಡು ತನ್ನಲ್ಲಿರುವ ಐಶ್ವರ್ಯವನ್ನು ಅನೇಕ ವಿಧವಾಗಿ ಬಣ್ಣಿಸಿ ನೋಡಿದನು. ಪತಿಪರಾಯಣೆಯಾದ ಸೀತಾದೇವಿಯು ಯಾವುದಕ್ಕೂ ಜಗ್ಗಲಿಲ್ಲ. ಕೂಡಲೆ ರಾವಣನು ಕೋಪಪರವಶನಾಗಿ ಚಂದ್ರಹಾಸವನ್ನೆತ್ತಿ ಸೀತೆಯನ್ನು ಕಡಿಯಹೋದನು. ಇದಕ್ಕೆ ಮುಂಚಿತವಾಗಿಯೇ ಪತಿವ್ರತೆಯಾದ ಸೀತೆಯೊಡನೆ ಕಾಮುಕನಾದ ತನ್ನ ಪತಿಯ ಜಲ್ಪವನ್ನು ಕೇಳಿ, ಬಳಿಕ ಪರಿಹಾಸಮಾಡಬೇಕೆಂದು ಬಳ್ಳಿ ಮಾಡವೊಂದರಲ್ಲಡಗಿದ್ದ ಮಂಡೋದರಿಯು ಥಟ್ಟನೆ ಹೊರಬಂದು ರಾವಣನನ್ನು ತಡೆದಳು. ಅದನ್ನು ಕಂಡು ರಾವಣನು ತನ್ನ ಉದ್ಯಮವನ್ನು ಬಿಟ್ಟು – 'ಈಗ ನೀವು ಅಡ್ಡಿ ಮಾಡಿದಿರೋ, ಆಗಲಿ, ಬೆಳಗ್ಗೆ ನೋಡುತ್ತೇನೆ' ಎಂದು ಪರಿವಾರದೊಡನೆ ಶಯ್ಯಾಗಾರಕ್ಕೆ ಮರಳಿದನು.

ಆಗ ಸೀತೆಯು ಆ ರ್ಯಪುತ್ರನ ಬರವು ಇನ್ನು ನಿರೀಕ್ಷಿಸತಕ್ಕದ್ದಲ್ಲವೆಂದು ರಾಕ್ಷಸರಿಂದ ಸಾಯುವುದಕ್ಕಿಂತ ಆತ್ಮಹತ್ಯೆಯೇ ಲೇಸೆಂದೂ ಹಾಗೆ ಮಾಡುವುದಕ್ಕೆ ಮುಂಚೆ ದೈತ್ಯನ ತಲೆಗೆ ತಾಗಿದ ತನ್ನ ಕಾಲನ್ನು ಹತ್ತಿರದ ಪುಷ್ಕರಿಣಿಯಲ್ಲಿ ತೊಳೆದುಕೊಂಡು ಬರುವೆನೆಂದೂ ಎಂದುಕೊಂಡು ಪುಷ್ಕರಿಣಿಯತ್ತ ಸಾಗಿದಳು.

ಈ ಸಮಯದಲ್ಲಿ ಸುಗ್ರೀವಾಜ್ಞೆಯಂತೆ ಸೀತೆಯನ್ನು ಅರಸುತ್ತಾ ಹೊರಟ ಆಂಜನೇಯನು ತೆಂಕಣ ಕಡಲನ್ನು ಧೀಂಕಿಟ್ಟು ದಾಟಿ ಲಂಕೆಯನ್ನು ಸೇರಿ ಅಲ್ಲಿ ಇಲ್ಲಿ ಸುತ್ತಿ ಸೀತೆಯನ್ನು ಕಾಣದೆ ಅಶೋಕವನದತ್ತ ಬಂದನು; ಹೆಂಗಸಿನ ದನಿಯನ್ನು ಕೇಳಿ ಬೆರಗಾಗಿ ಮರದ ಪೊಟ್ಟರೆಯೊಳಗವಿತು, ಸೀತೆಯು ಅರುಂಧತಿಯನ್ನು ಕುರಿತು, 'ಭಗವತಿ, ನೀನು ಇದೇನು ಮಾಡುತ್ತಿರುವೆ? ಈ ರಕ್ಕಸರ ನಡುವಿಂದ ಪಾರಾಗುವ ಉಪಾಯವನ್ನು ಹೇಳಲೊಲ್ಲೆಯಾ? ನಿನ್ನನ್ನು ನೋಡಿದರೆ ಬರುವ ಫಲವನ್ನು ಈಗ ನಾನು ಸುಳ್ಳು ಮಾಡುತ್ತೇನೆ' ಎಂದು ಆತ್ಮ ತ್ಯಾಗಕ್ಕೆ ಸಿದ್ಧಳಾದುದನ್ನು ಕಂಡನು. ಒಡನೆ ಪೊಟ್ಟರೆಯಿಂದ ಹೊರಬಿದ್ದು, 'ಸ್ವಾಮಿನಿ, ನಾನು ನಿನ್ನನ್ನು ತಡೆಯುತ್ತೇನೆ' ಎಂದು ಮುಂದಕ್ಕಡಿಯಿಟ್ಟನು; ಇದಾದಮೇಲೆ ಮೊದಮೊದಲು ನಂಬದಿದ್ದರೂ ಬಳಿಕ ತನ್ನ ಪೂರ್ವವೃತ್ತಾಂತವೆಲ್ಲವನ್ನೂ ಹೇಳಿ ರಾಮಚಂದ್ರನನ್ನು ಬಣ್ಣಿಸಿ ತಾನು ಅವನ ಸೇವಕನೆಂದು

ಸೀತೆಯನ್ನು ನಂಬಿಸಿದನು. ಅನಂತರ ರಾಮನ ವಿರಹಾವಸ್ಥೆಯನ್ನೂ ತಾನು ಅವನಿಗೆ ಸುಗ್ರೀವನ ಸ್ನೇಹ ಮಾಡಿಸಿದ ಬಗೆಯನ್ನೂ, ಸುಗ್ರೀವನ ರಾಜ್ಯಲಾಭ ಮತ್ತು ಪ್ರತ್ಯುಪಕಾರ ಪ್ರಯತ್ನವನ್ನೂ ವಿವರಿಸಿದನು. ಸೀತೆಯು ಅದರಿಂದ ಸಂತುಷ್ಟಳಾಗಿ ರಾಮದೇವನು ಕಳುಹಿಸಿದ ಅಂಗುಲೀಯಕವನ್ನು ಹನುಮನಿಂದ ಪರಿಗ್ರಹಿಸಿ ಪ್ರತಿಯಾಗಿ ತನ್ನ ಚೂಡಾಮಣಿಯನ್ನು ಅವನ ಕೈಗಿತ್ತಳು. ಸೀತಾಸಂದೇಶವನ್ನು ಒಡೆಯನಿಗೆ ತಲುಪಿಸಲು ದೇವಿಯಿಂದ ಅಪ್ಪಣೆ ಪಡೆದು ಹನುಮಂತನು ಮರಳಿದನು.

ಇದಾದ ಮೇಲೆ ರಾಮಚಂದ್ರನು ಸೇತುವೆ ರಚಿಸಿ ರಾವಣಾದಿಗಳನ್ನು ಸಂಹರಿಸಿ ವಿಭೀಷಣನಿಗೆ ಪಟ್ಟ ಕಟ್ಟಲು ಕೆಲಕಾಲ ಹಿಡಿಯಿತು. ಅನಂತರ ಒಂದು ದಿನ ಅವನು ಗೆಳೆಯನಾದ ಸುಗ್ರೀವನನ್ನು ಕುರಿತು ಅಶೋಕವನಕ್ಕೆ ಹೋಗಿ ಹೆಂಡತಿಯನ್ನು ಕರೆತರಹೇಳಿದನು. ಅವನು ಹಾಗೆಯೇ ಮಾಡಿದನು. ಸೀತೆಯು ಬಂದು ಗಂಡನನ್ನು ಕಂಡು 'ಆರ್ಯಪುತ್ರನಿಗೆ ಜಯವಾಗಲಿ!' ಎನ್ನುವಷ್ಟರಲ್ಲಿ ಅವಳ ವಿರಹಸೂಚಕವಲ್ಲದ ಉಡುಪನ್ನು ಕಂಡು ಶಂಕಿತನಾದ ರಾಮನು ಅವಳನ್ನು ಆದರಿಸುವುದನ್ನು ಬಿಟ್ಟು ಲಕ್ಷ್ಮಣ ಹನುಮರನ್ನು ಕೂಡಲೇ ಕರೆಕಳುಹಿದನು. ಅವರೂ ಬಂದರು; ಆದರೆ ಎಲ್ಲರೂ ಸೀತೆಯನ್ನು ನೋಡಿ ಮೊಗದಿರುಹಿದರು! ಸೀತೆಯು ತನ್ನೊಳಗೇ 'ಅಯ್ಯೋ, ದೇವರೆ ಪತಿದರ್ಶನದಿಂದ ನಿನಗೆ ಸರ್ವ ಅಲಂಕಾರವೂ ಒದಗಲಿ ಎಂಬ ಅನಸೂಯೆಯ ಅನುಗ್ರಹವೇ ಈಗ ಶಾಪವಾಯ್ತಲ್ಲಾ' ಎಂದು ಹಲುಬಿದಳು; ಅನಂತರ ಪತಿಯ ಪರುಷವಾಕ್ಯಗಳನ್ನು ಕೇಳಿ ಸಂತಪ್ತಳಾಗಿ 'ಆರ್ಯಪುತ್ರನೊಪ್ಪಿದರೆ ಅಗ್ನಿ ಪ್ರವೇಶ ಮಾಡುತ್ತೇನೆ' ಎಂದಳು. ರಾಮನನ್ನುಳಿದು ಮಿಕ್ಕವರು ಅಗ್ನಿ ಪ್ರವೇಶವನ್ನು ನೋಡ ಹೋದರು. ಅಲ್ಲಿ ಸೀತಾದೇವಿ ಗುರುಹಿರಿಯರನ್ನೂ ಪತಿಯನ್ನೂ ನೆನೆದು ಅಗ್ನಿಯನ್ನು ಪ್ರಾರ್ಥಿಸಿ ನೀರಿಗಿಳಿವಂತೆ ಅಗ್ನಿ ಕುಂಡದಲ್ಲಿಳಿದಳು. ಒಡನೆಯೆ ಅಗ್ನಿಯು ಮಿಂಚಿನ ಮೈಯಿಂದ ಸೀತೆಯನ್ನು ಎತ್ತಿ ಹಿಡಿದು ದೇವಲೋಕದ ಹೂಮಳೆ ಬಿದ್ದೊಡನೆ ಅವಳನ್ನು ಕೆಳಗಿರಿಸಿ ಅದೃಶ್ಯವಾದನು! ಈ ಸಮಾಚಾರವನ್ನು ಕೇಳಿ ರಾಮದೇವನು ಆನಂದ ಆಶ್ಚರ್ಯಗಳಿಂದ ತುಂಬಿದನು.

ಆ ಕ್ಷಣದಲ್ಲಿ ಅವರೆಲ್ಲರಿಗೂ "ಸೀತೆಯು ಸಾಕ್ಷಾಲ್ಲಕ್ಷ್ಮಿ, ರಾಮನು ಶ್ರೀಮನ್ನಾರಾಯಣ!" ಎಂದು ಗಂಧರ್ವರು ಘೋಷಿಸುತ್ತಿರುವುದೂ ಕೇಳಿಸಿತು. ಅಷ್ಟರಲ್ಲಿ ನಾರದನು ಧರೆಗಿಳಿದು ಬಂದು ಶ್ರೀರಾಮನಿಗೆ ಗಗನಮಾರ್ಗದಲ್ಲಿ ಹೋಗುತ್ತಿದ್ದ ಇಂದ್ರ, ಏಕಾದಶರುದ್ರರು ಮತ್ತು ಪಿತೃಗಳನ್ನು ತೋರಿಸಿ ಪತಿವ್ರತೆಯಾದ ಸೀತೆಯನ್ನು ಸ್ವೀಕರಿಸೆಂದು ಹೇಳಿದರು. ಆಗ ರಾಮಚಂದ್ರನು 'ದಂಡಕದಲ್ಲೇ ಒಂದು ಸಲ ಸೀತೆಯು ಇದೇ ರೀತಿಯಲ್ಲಿ ಅಲಂಕೃತಳಾಗಿದ್ದುದನ್ನು ಕಂಡಿದ್ದೆ; ಆದರೆ ಅದೇಕಾಯ್ತೆಂದು ಗೊತ್ತಾಗಲಿಲ್ಲ; ಈಗ ತಿಳಿದೆ; ಮತ್ತು ಸೀತೆಯ ಅಗ್ನಿ ಪ್ರವೇಶದಿಂದ ಲೋಕಾಪವಾದ ತಪ್ಪಿದಂತಾಯ್ತು' ಎಂದು ಲಕ್ಷ್ಮಣನನ್ನು ಕರೆದು ಸೀತೆಯನ್ನು ಬರಮಾಡಿಕೊಂಡನು; ಸೀತೆಯನ್ನು ಕುರಿತು – 'ಧರ್ಮಶೀಲೆಯಾದರೂ ನಿನ್ನಲ್ಲಿ ನಾನು ಸಂದೇಹಪಟ್ಟೆನು; ಅದು ಬೇರೆ

ಯಾವ ಕಾರಣದಿಂದಲೂ ಅಲ್ಲ; ನಿನ್ನಂತೆಯೇ ಪತಿವಿರಹಿತರಾದ ಇತರ ಯುವತಿಯರೂ ಸಹ ಪತಿಗಳಿಗೆ ವಿಶ್ವಾಸಾರ್ಹರಾಗಲಿ ಎಂಬ ಉದ್ದೇಶದಿಂದ ಮಾಡಿದುದು' ಎಂದು ಸಂತೈಸಿದನು. ಆ ಬಳಿಕ ವಿಭೀಷಣನಿತ್ತ ಪುಷ್ಪಕವನ್ನೇರಿ ಸೀತೆಯನ್ನು ಕುರಿತು – 'ನಾನು ನಿಜವಾದ ರಾಮನು, ಸೂತನು ಸತ್ಯವಾಗಿಯೂ ಲಕ್ಷ್ಮಣನೇ; ಬೇಕಾದರೆ ಆಶ್ಚರ್ಯಚೂಡಾಮಣಿಯಿಂದ ಪರೀಕ್ಷಿಸಿ ನೋಡು' ಎಂದು ಉಪಹಾಸ ಮಾಡಿದನು. ಆಗ ಸೀತಾದೇವಿ 'ಆಶ್ಚರ್ಯರತ್ನಗಳಿಗೆ ನಮಸ್ಕಾರ!' ಎಂದಳು. ಅನಂತರ ಅವಳು ಲಕ್ಷ್ಮಣನನ್ನು ಸಂಭಾವಿಸುತ್ತಿರುವಲ್ಲಿ ಪುಷ್ಪಕವು ಅಯೋಧ್ಯೆಗೆ ಹಾರಿತು!



[**'ಪ್ರಬುದ್ಧ ಕರ್ನಾಟಕ' – ಸಂಪುಟ ೨೨–೪, ಪುಟ ೫೯**]

# ೪೭. ಎರಡನೆಯ ರಿಚರ್ಡ್ : ಪದಚ್ಯುತಿಯ ದೃಶ್ಯ*

ಗ್ಲೌಸೆಸ್ಟರನನ್ನು ಕೊಂದನೆಂಬ ಸುಳ್ಳು ಆರೋಪದ ಮೇಲೆ ಎರಡನೆಯ ರಿಚರ್ಡ್ ದೊರೆಯಿಂದ ಆರು ವರ್ಷಗಳ ಕಾಲ ದೇಶಭ್ರಷ್ಟನಾಗಿದ್ದ ಅವನ ದಾಯಾದಿ ಬೋಲಿಂಗ್ ಬ್ರೋಕ್ ಏಕಾಏಕಿ ಹಿಂದಿರುಗಿ ಬಂದು, ರಿಚರ್ಡ್ ರಾಜಧಾನಿಯಲ್ಲಿಲ್ಲದ ಹೊತ್ತಿನಲ್ಲಿ ದಂಗೆಯೆದ್ದು ರಾಜ್ಯವನ್ನು ಆಕ್ರಮಿಸಿಕೊಳ್ಳುತ್ತಾನೆ. ರಿಚರ್ಡನ ಕೈಸೆರೆಯಾಗುತ್ತದೆ. ಕೊಲೆಯ ವಿಚಾರಣೆಯಿಂದ ಮೊದಲಾಗುವ ಈ ದೃಶ್ಯದಲ್ಲಿ ಬೋಲಿಂಗ್‌ಬ್ರೋಕ್ ರಿಚರ್ಡ್‌ನನ್ನು ಪದಚ್ಯುತಗೊಳಿಸಿ ಅವನ ದಂಡಮಕುಟಗಳನ್ನು ಕಸಿದುಕೊಳ್ಳುವ ಚಿತ್ರಣವಿದೆ. ಒಂದು ದೃಷ್ಟಿಯಲ್ಲಿ ಈ ದೃಶ್ಯ ಸಾಂಕೇತಿಕ. ಎಲ್ಲ ಕಾಲಗಳ, ಎಲ್ಲ ದೇಶಗಳ ರಾಜಕೀಯ ಚರಿತ್ರೆಯ ಜೀವಾಳವೇ ಇದರಲ್ಲಿ ಅಡಗಿದೆ.

ಸ್ಥಾನ : ವೆಸ್ಟ್ ಮಿನಿಸ್ಟರ್ ಹಜಾರ

ಪ್ರವೇಶ : ಬೋಲಿಂಗ್‌ಬ್ರೋಕ್, ಆಮುರ್ಲಿ, ನಾರ್ದಂಬರ್ ಲ್ಯಾಂಡ್, ಪರ್ಸಿ, ಫಿಟ್ಸ್‌ವಾಟರ್, ಸರ್ರಿ, ಪಾದ್ರಿ ಕಾರ್ಲಿಸ್ಲಿ, ಅಧಿಪಾದ್ರಿ ವೆಸ್ಟ್ ಮಿನಿಸ್ಟರ್, ಒಬ್ಬ ಪ್ರಭು, ದೂತ, ಅಧಿಕಾರಿಗಳು ಮತ್ತು ಬೇಗಟ್.

ಬೋಲಿಂಗ್‌ಬ್ರೋಕ್ : ಯಾರಯ್ಯ ಯಾರಲ್ಲಿ? ಕರೆ ಬೇಗಟನನಿತ್ತ.
ಅಳುಕದುಸಿರೊಳವಗೆಯನೀಗ, ಬೇಗಟ್, ಬೇಗ –
ಧೀರ ಗ್ಲೌಸೆಸ್ಟರನ ಸಾವಿನೊಳಮೆಯು ಗೊತ್ತೆ?
ರಾಜಕೈಂಕರ್ಯದಿಂದೊಡರಿಸಿದನದನಾವನ್?
ಅವನಕಾಲಿಕ ನಿಧನವನ್ನೊಡರಿಸಿದರಾರು?

ಬೇಗಟ್ : ಹಾಗಾದರಾಮುರ್ಲಿ ಪ್ರಭುವನೀ ಕಡೆ ಕರೆಸು.

ಬೋಲಿಂಗ್‌ಬ್ರೋಕ್ : ಬಂದು ನಿಲ್ಲಿವನೆದುರು ತಮ್ಮ ಅಮುರ್ಲಿ ನೀನ್.

ಬೇಗಟ್ : ಒಮ್ಮೆ ಉಸಿರಿದುದನಂತಲ್ಲವೆಂಬುದ ನಿನ್ನ
ವೀರ ನಾಲಗೆ ಧಿಕ್ಕರಿಸದಿರದು ಬಲ್ಲೆ ನಾ.
ಗ್ಲೌಸೆಸ್ಟರನ ಕೊಲುವ ಸಂಚು ನಡೆಯುತ್ತಿದ್ದ
ಭೀಕರಾವಧಿಯಲ್ಲಿ – 'ಆಂಗ್ಲ ರಾಜಾಸ್ಥಾನ–

---

* 'ಕಿಂಗ್ ರಿಚರ್ಡ್ ದಿ ಸೆಕೆಂಡ್' ಅಂಕ IV, ದೃಶ್ಯ (i)

ದಿಂದ ಕೆಲೆ ಪಟ್ಟಣದ ಗಡಿಯವರೆಗಿನ ನೆಲವನ್
ಅಳೆದೆನ್ನ ನೀಳ್ಗೈಪಿತೃವ್ಯಶಿರ ಮುಟ್ಟುವುದೆ?'–
ಎಂದು ನೀನೊರೆದುದನು ಕೇಳಿದ್ದೆ ನಾನ್; ಅಲ್ಲ–
ದಿತರ ಮಾತುಗಳನೆಷ್ಟೋ ಹೇಳಿ ನೀನಂದು–
'ಲಕ್ಷವರಹಗಳ ಮೆಚ್ಚನು ಕೊಡಲು ಬಂದರೂ
ಅದರಾಸೆಗಾಗಿ ಬೋಲಿಂಗ್ ಬ್ರೋಕನೀಯಾಂಗ್ಲ–
ರಾಜ್ಯಕ್ಕೆ ದೊರೆಯಾಗಿ ಬರುವುದನು ಸಂಮತಿಸೆನ್' –
ಎಂದು ನೀನೆಂದುದನ್ನೂ ನಾನು ಕೇಳಿದ್ದೆ.
ನನ್ನ ದಾಯಾದ ಸೋದರ ಸತ್ತರೀ ನಾಡ–
ದೆಷ್ಟು ಧನ್ಯತೆಯ ಪಡೆದೀತೆಂದು ಕೂಡ ನೀನ್ ಆಡಿದ್ದೆ.

ಆಮುರ್ಲಿ : ರಾಜಪುತ್ರರೆ, ಘನಸ್ಥರೆ, ನಾನ–
ದೇನೆಂದು ಈ ನೀಚಗುತ್ತರವ ಕೊಡಬಹುದು?
ದಂಡಿಸಲು ಸರಿದೊರೆಯೆ ನನಗವನು? ನಾನೀಗ
ದಂಡಿಸಲೆ ಬೇಕಾಯ್ತು. ಇಲ್ಲದೊಡೆ ನನಗಿರುವ
ಮರ್ಯಾದೆ ಮಸುಳಿಸುವುದಪವಾದದೀ ಜಿಹ್ವೆ
ಮಾಡಿದಪಲಾಪಫಲದಿಂದ. ನೋಡಿದೊ ನನ್ನ
ಶಪಥ, ಮರಣದ ಗಂಡು ಮುದ್ರೆ, ನಿನ್ನನ್ನೀಗ
ನರಕಾರ್ಹನೆಂದು ತೆಗೆದಿಟ್ಟಿದೆ. ನರಾಧಮಾ,
ಸುಳ್ಳು ಹೇಳುವೆ ನೀನು; ನೀನು ಹೇಳಿದ್ದೆಲ್ಲ
ಸುಳ್ಳೆಂದು ಸಾಧಿಸುವೆ. ನನ್ನ ವೀರಕೃಪಾಣ–
ದಲಗು ನಿನ್ನೆದೆಯ ತೀರಾ ಹೇಸು ನೆತ್ತರನು
ಮುಟ್ಟಿ ಹೊಲಸಾದೀತು – ಹುಸಿದ ಹೊಲೆಯದರೊಳಿರೆ

ಬೋಲಿಂಗ್‌ಬ್ರೋಕ್ : ಸಹಿಸು, ಬೇಗಟ್, ಸಹಿಸು; ಆ ವಿಷಯವೆತ್ತದಿರು

ಆಮುರ್ಲಿ : ಒಬ್ಬನಿಲ್ಲದೆ ಹೋದರಲ್ಲಿಷ್ಟು ಜನರೆದುದು
ನನ್ನ ಕೆರಳಿಸಿದವನ ನಾ ಬಿಡುತ್ತಿರಲಿಲ್ಲ

ಫಿಟ್ಸ್‌ವಾಟರ್ : ನಿನ್ನಳವು ಕರುಣೆಯನ್ನಾಧರಿಸಿ ಸ್ಥೈರಿಸಿದೆ
ಎನ್ನುವೆಯ? ಹಾಗಾದರೆಲೆ ನಿನ್ನ ಶಪಥಕ್ಕೆ
ಪ್ರತಿಶಪಥ ನನ್ನದಿದೊ – ನೀನಲ್ಲಿ ನಿಂತಿಹುದ

ತೋರಿಸುವ ಈ ರಮ್ಯ ರವಿಯಾಣೆಯಾಗಿಯೂ
ನೀನಂತು ಹೇಳಿದ್ದ ಕೇಳಿದ್ದೆ ನಾನಾಗ;
ಘನವಂತನಾದ ಗ್ಲೌಸೆಸ್ಟರನ ಮರಣಕ್ಕೆ
'ನಾನೆ ಕಾರಣನ್' ಎಂದು ನೀ ಜಂಭ ಕೊಚ್ಚಿದ್ದೆ.
ಇಪ್ಪತ್ತು ಸಲ ನೀನು ಹೇಳಿಲ್ಲವೆಂದರೂ
ನಿನ್ನ ಹೇಳಿಕೆಯೆಲ್ಲ ಹುಸಿಯೆ ಸರಿ; ಈ ನನ್ನ
ಕರವಾಳ ಮೊನೆಯಿಂದ ಅನೃತಕ್ಕೆ ತವರಾದ
ನಿನ್ನೆದೆಯ ಕಡೆಗೆ ನಾ ತಿವಿದದನ್ನಟ್ಟುವೆನು

ಆಮುರ್ಲಿ : ಆ ದಿನವ ನೊಡಲೆಂದೂ ಉಳಿಯಲಾರೆ ನೀನ್;
ಎಲ್ಲಿ ನಿನಗಾ ಧೈರ್ಯ? ಹೆಂಬೇಡಿ, ತೊಲಗಾಚೆ!

ಫಿಟ್ಸ್ ವಾಟರ್ : ನನ್ನಾತ್ಮದಾಣೆ – ಇದೆ ಆಗದೇನಾ ಗಳಿಗೆ?

ಆಮುರ್ಲಿ : ಫಿಟ್ಸ್ ವಾಟರನೆ, ನಿನಗೆ ನರಕ ಕಟ್ಟಿಟ್ಟದ್ದು
ಈ ಮಾತನಾಡಿದ್ದಕೆಲವೊ ಬಾಯ್ಮುಚ್ಚು, ನಡೆ

ಪರ್ಸಿ : ಆಮುರ್ಲಿ, ಹುಸಿವೆ ನೀನೀ ಪ್ರಕರಣದಲ್ಲವನು
ಎಷ್ಟು ಸತ್ಯಾತ್ಮನೋ ನೀನಷ್ಟಸತ್ಯಾತ್ಮ.
ನೀನಷ್ಟರವನೆಂದು ಸಿದ್ಧ ಮಾಡಲು ನಾನು
ಪ್ರಾಣಪಣವಿಟ್ಟಿರುವೆ; ಧೈರ್ಯವಿದ್ದರೆ ನೀನು
ಸ್ವೀಕರಿಸು ನಾನೀಯುವೀ ರಣಾಹ್ವಾನವನು!

ಆಮುರ್ಲಿ : ನಾನು ಸ್ವೀಕರಿಸದಿರೆ ಕೊಳೆತುಹೋಗಲಿ ನನ್ನ
ಕೈಗಳಿನ್ನೆಂದಿಗೂ ನನ್ನ ಹಗೆ ಹೊತ್ತಿರುವ
ಚಮಕಿಪ ಶಿರಸ್ತ್ರಾಣದೆದುರೀ ಪ್ರತೀಕಾರ–
ನಿಷ್ಠ ಖಡ್ಗವ ಝಳಪಿಸಲು ಸಾಧ್ಯವಿರದಂತೆ!

ಮತ್ತೊಬ್ಬ ಪ್ರಭು ; ಹಾಗೆ ಮಾಡಲು ಕೊಡುವೆನಾಣತಿಯ ಭೂಮಿಗೇ–
ಬದ್ಧಪ್ರತಿಜ್ಞನಾದಾಮುರ್ಲಿ, ದಿನವಿಡೀ
ನಿನ್ನ ವಿದ್ರೋಹಿಕರ್ಣಗಳಲ್ಲಿ ಪಡಿನುಡಿವ
ಹಾಗೆ ಗರ್ಜಿಸಿ ತುಂಬಿಸುವೆನು ಸುಳ್ಳುಗಳನ್ನು
ಎಷ್ಟು ಬೇಕಾದರೂ ಛಲಿಸಿ ನಿನ್ನನು; ಇಕೋ

ಪಣವಿಡುವೆನೆನ್ನ ಮಾನವನಿದಕೆ, ಧೈರ್ಯವಿರೆ
ಒರೆಗೆ ಹಚ್ಚಲು ಹೊರಡದದನ್ನು ಮುಟ್ಠಾಳನೇ!

ಆಮುರ್ಲಿ : ಇನ್ನಾರು ಜಿದ್ದುಕಟ್ಟುವರೆನ್ನ ಮೇಲೀಗ?
ಯಾರೇ ಬರಲಿ ಅವರ ಬಡಿದಪ್ಪಳಿಸುವೆನಿದೊ
ದೇವರಾಣೆಯ ಮಾಳ್ಪೆ – ನಿಮ್ಮಂಥ ಇಪ್ಪತ್ತು
ಸಾವಿರ ಮನುಷ್ಯರೆದುರಾದರೂ ಎದುರಿಸಲು
ಸಾವಿರಾಳುಗಳ ಬಲವಿದೆ ನೋಡಿ ನನ್ನೆದೆಗೆ

ಸರ್ರಿ : ಘನವಂತ ಫಿಟ್ಸ್ ವಾಟರ್, ಎನಗೆ ನೆನಪಿದೆ ಸ್ಪಷ್ಟ–
ವಾಗಿ ಅಮುರ್ಲಿ ಮೇಣ್ ನೀನು ಮಾತಾಡಿದ್ದು
ಯಾವ ಹೊತ್ತಿನೊಳೆಂದು, ನಾ ಮರೆಯಲಿಲ್ಲವದ

ಫಿಟ್ಸ್‌ವಾಟರ್ : ನಿಜ ನೀನು ಹೇಳಿದ್ದು, ನೀನಾಗ ಅಲ್ಲಿದ್ದೆ;
ಇದರ ಸತ್ಯತೆಯ ನೀನೆನ್ನೊಡನೆಯೇ ನೋಳ್ಪೆ.

ಸರ್ರಿ : ದೇವರಿರುವುದು ಎಷ್ಟು ಸತ್ಯವೋ ನಿನ್ನ ನುಡಿ
ಅಷ್ಟೇ ಅಸತ್ಯ – ಕುಲದೇವರಾಣೆಯಿದಕ್ಕೆ

ಫಿಟ್ಸ್ ವಾಟರ್ : ಸುಳ್ಳು ಹೇಳುವೆ ಸರ್ರಿ

ಸರ್ರಿ : ಮರ್ಯಾದೆಗೇಡಿಯೇ,
ನೀ ನುಡಿದ ಸುಳ್ಳ ಹೊರೆ ನನ್ನ ಖಡ್ಗಕ್ಕೆಷ್ಟು
ಭಾರವೆನ್ನಿಸಿತೆಂದರದು ಸುಳ್ಳುಗಾರನಾ–
ಗಿರುವ ನಿನ್ನೊಡನೆ ನಿಮ್ಮಪ್ಪನಾ ತಲೆಚಿಪ್ಪು
ಮಿಣ್ಣನೊರಗಿರುವ ನೆಲದಲ್ಲಿ ಮಲಗುವವರೆಗೆ
ಸೇಡುತೀರಿಸಿಕೊಳ್ಳಲೆದ್ದಿಹುದು; ನನ್ನ ಮಾ–
ನವಿದಕ್ಕೆ ಪಣವಾಗಿ ಸಾಕ್ಷಿಗೊಡುತಿದೆ ನೊಡು–
ಧೈರ್ಯವಿದ್ದರೆ ಒರೆಗೆ ಹಚ್ಚು ದುರ್ವಾದಿಯೇ!

ಫಿಟ್ಸ್ ವಾಟರ್ : ಮುನ್ನುಗ್ಗುವಶ್ವವನ್ನೆಷ್ಟು ಮರುಳ್ತನದಿಂದ
ಬೆನ್ನುಚಪ್ಪರಿಸುವೆ! ಇದೋ ನೋಡು ನಾನಿಲ್ಲಿ
ತಿನ್ನುವುದು, ಉಣ್ಣುವುದು, ಉಸಿರಾಡುವುದು ಮೇಣ್
ಬದುಕುವುದು ನಿಜವಿದ್ದ 'ರೆಲೆಲೆ, ಏ ಸರ್ರಿ
ಹುಸಿವೆ, ನೀ ಹುಸಿವೆ, ನೀ ಹುಸಿವೆ' – ಎಂದನ್ನುತ್ತ

ಮುಖದ ಮೇಲುಗುಳುವೆನು ನಿರ್ಜನ ಸ್ಥಳದಲ್ಲಿ
ಕಂಡರೂ, ನಾನು ಸರಿಯೆಂದುದಕೆ ಬಲವಾಗಿ
ನಿನ್ನನ್ನು ಕಟ್ಟುವುದು ನನ್ನ ಧರ್ಮ. ನವೀನ–
ವಾದ ಈ ಜಗದಲ್ಲಿ ವರ್ಧಿಸುವ ಬಯಕೆಯಿಹ
ನನ್ನ ಪ್ರಾಮಾಣಿಕ ಪ್ರಾರ್ಥನೆಯ ಮನ್ನಿಸದ
ಪಾಪಕ್ಕೆ ಆಮುರ್ಲಿ ಪಕ್ಕಾದನಿಂದು ಮೇಣ್
ಘನ ಡ್ಯೂಕನನು ಕೊಲ್ಲಲೆಂದು ಕೆಲೆಯಲ್ಲಿ ನೀನ್
ಆಮುರ್ಲಿ, ನಿನ್ನಿಬ್ಬರಾಳುಗಳ ಕಳಿಸಿದುದ
ಗಡಿಪಾರಿಗೀಡಾದ ನಾರ್‌ಫೋಕ ತಿಳಿಸಿಹನು.

ಆಮುರ್ಲಿ : ನಾರ್‌ಫೋಕ ಹುಸಿದಿರುವನೆಂಬೆನ್ನ ಮಾತನ್ನು
ಶಪಥ ಮೂಲಕ ಹೇಳುತಿರುವೆನಿದ ನಿಮ್ಮಲ್ಲಿ
ನಿಜವಾದ ಕ್ರಿಸ್ತೀಯರಾರಾದರೂ ಇದ್ದ–
ರವರು ನಂಬಲಿ – ಇಕೋ ನಾರ್‌ಫೋಕನಿಗೆ ನಾನು
ಕೊಟ್ಟೆ ಕಾಳೆಗದ ಕರೆಯನ್ನು; ಅವನಿಗೆ ತನ್ನ
ಮಾನವನ್ನುಳಿಸಿಕೊಳಲವಕಾಶ ದೊರಕಿದರೆ
ಬರಲಿ.

ಬೋಲಿಂಗ್‌ಬ್ರೋಕ್ : ನಾರ್‌ಫೋಕ ತಾ ನಾಡೊಳಗೆ ಬರುವಂತೆ
ಗಡಿಪಾರಿನಾಜ್ಞೆಯನು ಹಿಂತೆಗೆದುಕೊಳುವರೆ–
ಗೀ ಭಿನ್ನಮತಗಳೆಲ್ಲಾ ಶಪಥಬಂಧದ–
ಲ್ಲಿರಲಿ. ನಾರ್‌ಫೋಕ ಬಿಡುಗಡೆ ಹೊಂದುವುದು ಖಚಿತ.
ನನ್ನ ಹಗೆಯವನು ದಿಟ – ಆದರೂ ಅವನೆಲ್ಲ
ಭೂಮಿಕಾಣಿಗಳನ್ನು, ಬಿರುದುಬಾವಲಿಗಳನು
ಮತ್ತೆ ಕೊಡಿಸುವೆನವಗೆ. ಅವನು ಮರಳಿದ ಬಳಿಕ
ಆಮುರ್ಲಿಗೆದುರಾಗಿ ತನಿಖೆ ನಡೆಸುವೆನವನ.

ಕಾರ್ಲಿಸ್ಲಿ : ಅಂಥ ಗೌರವದ ದಿನ ಬರಲಾರದಿನ್ನು; ಗಡಿ–
ಪಾರಿಗೊಳಗಾದ ನಾರ್‌ಫೋಕ ಯೇಸುವಿಗಾಗಿ
ಕೀರ್ತಿಕರ ಕ್ರಿಸ್ತೀಯ ರಂಗದಲಿ ಹಲವು ಸಲ
ಕಾಳ ದಸ್ಯುಗಳೊಡನೆ, ತುರಕ–ಸಾರ್ಸೆನರೊಡನೆ

ಕ್ರೂಜೆ ಹಿಡಿದೆತ್ತಿ ಹೋರಾಡಿದನು; ಸಮರದಲಿ
ತೊಳಲಿದನು – ಕೊನೆಗೆ ಇಟಲಿಗೆ ಹೋಗಿ ವಿಶ್ರಮಿಸಿ
ವೆನಿಸು ನಗರದ ನೆಲಕೆ ದೇಹವನು ಮುಡಿಪಿಟ್ಟ:
ಕ್ರಿಸ್ತಧ್ವಜವ ಹಿಡಿದು ಮರಣಪರ್ಯಂತವೂ
ಹೋರಾಡಿ ಸವೆದಂಥ ತನ್ನ ಶುದ್ಧಾತ್ಮವನು
ಕ್ರಿಸ್ತನಾಯಕನಿಗರ್ಪಿಸಿದ.

ಬೋಲಿಂಗ್‌ಬ್ರೋಕ್ : ನಾರ್‌ಫೋಕ ಗುರು ಸತ್ತುಹೋದನೆ?

ಕಾರ್ಲಿಸ್ಲಿ : ನಾನು ಬದುಕಿದಷ್ಟೇ ಸತ್ಯ ಆತ ಸತ್ತದ್ದು.

ಬೋಲಿಂಗ್‌ಬ್ರೋಕ್ : ಆ ಅಬ್ರಹಾಮನ ತೊಡೆಯನ್
ಏರಿಸಲಿ ಅವನ ಮಧುರಾತ್ಮವನು ಮಾಧುರ್ಯ–
ಮಯ ಶಾಂತಿ; ದೂರುಗಳ ಕೊಟ್ಟಿರುವ ಪ್ರಭುಗಳೇ
ತನಿಖೆ ನಡೆಸುವ ದಿನವ ಗೊತ್ತು ಮಾಡುವವರೆಗೆ
ನಿಮ್ಮ ಮತಭೇದಗಳು ಶಪಥದಲ್ಲೇ ಇರಲಿ
(ಯಾರ್ಕನ ಸಪರಿವಾರ ಪ್ರವೇಶ)

ಯಾರ್ಕ್ : ಲ್ಯಾಂಕಾಸ್ಟರಿನ ಡ್ಯೂಕ್ ಮಹಾಶಯನೆ ನನ್ನೆಡೆಗೆ
ಬಂದೆ ತೇಜೋಭಂಗ ಹೊಂದಿದ ರಿಚರ್ಡ್ ನೃಪತಿ–
ಯೆಡೆಯಿಂದ. ನಿನ್ನನ್ನು ತನ್ನುತ್ತರಾಧಿಕಾ–
ರಕ್ಕೆಂದು ತೆಗೆದುಕೊಂಡಿರುವನವ ಮನವೊಲಿದು;
ಅವನೆತ್ತರದ ರಾಜದಂಡ ನಿನ್ನೀ ರಾಜ–
ಹಸ್ತಕ್ಕೆ ವಶ್ಯ; ನೀನೇರವನ ಪೀಳಿಗೆಯ
ಸಿಂಹಾಸನವ – ನಾಲ್ಕನೆಯ ಹೆನ್ರಿಯೆಂದೆನಿಸಿ
ಬಾಳಯ್ಯ ಬಹುಕಾಲ – ಭದ್ರವಾಗಲಿ ನಿನಗೆ!

ಬೋಲಿಂಗ್‌ಬ್ರೋಕ್ : ದೇವರಂಕಿತದೆ ಸಿಂಹಾಸನವನೇರುವೆನು

ಕಾರ್ಲಿಸ್ಲಿ : ಆಯಿತಬ್ರಹ್ಮಣ್ಯ ; ದೇವ ನಿಲ್ಲಿಸಲಿದನು.
ರಾಜಶಕ್ತಿಗೆ ದುರ್ವಚಸ್ಸೆಂದು ಕಂಡರೂ
ಸತ್ಯ ಹೇಳುವುದೀಗ ಶ್ರೇಷ್ಠವೆನ್ನಿಸುತಿಹುದು –
ಘನ ರಿಚರ್ಡನ ಬೆಲೆಯ ಕಟ್ಟಬಲ್ಲಷ್ಟಿಲ್ಲಿ

ಘನವಂತಿಕೆಯದಾರಿಗಿದೆ? ದೇವರೇ ಸಾಕ್ಷಿ!
ಅಂಥ ದುಷ್ಕಾರ್ಯಕ್ಕೆ ಕೈಹಾಕದಿರುವಂತೆ
ನಿಜವಾದ ಘನತೆ ಕೈಯಡ್ಡ ಮಾಡೀತಯ್ಯ.
ಯಾವ ಪ್ರಜೆ ದಂಡ ವಿಧಿಸುವನು ಸ್ವನೃಪಾಲನಿಗೆ?
ಯಾವನಿಲ್ಲಿಹ ರಿಚರ್ಡನಿಗೆ ಪ್ರಜೆಯಲ್ಲದವ?
ಕಳ್ಳರನ್ನೂ ಅವರ ಹೇಳಿಕೆಯ ಕೇಳದೆಯೆ
ಶಿಕ್ಷಿಸನದಾವನೂ ಆಪಾದನೆಯ ನಂಬಿ.
ಇಂತಿರಲು ರೂಢಿ, ದೈವಿಕ ಮಹಾಗಾಂಭೀರ್ಯ–
ಸಂಕೇತನಾಗಿ, ಆತನ ಕಡೆಯ ನಾಯಕೋ–
ತ್ತಮನಾಗಿ, ಯಜಮಾನನಾಗಿ, ಪ್ರತಿನಿಧಿಯಾಗಿ
ಅಭಿಷಿಕ್ತನಾದ, ಮಕುಟವ ಹೊತ್ತು ಬಹುಕಾಲ
ರಾಜ್ಯವಾಳಿದ ರಿಚರ್ಡನನವನಿಗಿಂತ ಕೀ–
ಳಾದ ಯಾವನು ಅವನ ಗೈರುಹಾಜರಿಯಲ್ಲಿ
ತಪ್ಪಿತಸ್ಥನೊ ಅಲ್ಲವೋ ಎಂದು ಹೇಳುವವ?
ದೇವರಿದ ತಪ್ಪಿಸಲಿ; ಕ್ರಿಸ್ತೀಯ ಜಗದಲ್ಲಿ
ಇಂಥ ಹೀನ ಕರಾಳ ಕಾಳ ಕಜ್ಜವ ಮಾಡ
ಲೀ ಸುಧಾರಿಸಿದ ಜನರಿಳಿಯುವುದೆ! ನಾನೀಗ
ಒಬ್ಬ ಪ್ರಜೆಯಾಗಿ ಇತರ ಪ್ರಜೆಗಳಿಗೆ ನುಡಿವೆ
ನನ್ನ ದೊರೆಯಾಗಿ ದಿವ್ಯಕ್ಷೋಭೆಯಿಂದೆದ್ದು:
ನೀವು ದೊರೆಯೆಂದು ಕರೆವೀ ಹಿಯರ್‌ಫರ್ಡ ತಾ
ದುಷ್ಟ ವಿದ್ರೋಹಿ ಹೆಮ್ಮೆಯ ಹಿಯರ್‌ಫರ್ಡ್ – ದೊರೆಗೆ
ಇವನಿಗಭಿಷೇಕ ಮಾಡಿದರೆ – ನುಡಿವೆ ಭವಿಷ್ಯ –
ಆಂಗ್ಲರಕ್ತವು ನೆಲಕ್ಕಭಿಷೇಕ ಮಾಡೀತು ;
ಈ ಕುಕೃತ್ಯಕ್ಕಾಗಿ ಭಾವಿಯುಗದವರೆಲ್ಲ
ಮರುಗದಿರರ್! ಎಯ್ದೀತು ಶಾಂತಿದೇವತೆ ತುರು–
ಷ್ಕರ ಕಡೆಗೆ, ಮಿಕ್ಕ ಧರ್ಮೀಯರೆಡೆ ನಿದ್ರಿಸಲು!
ಶಾಂತಿಪದವಾದಿಲ್ಲಿ ಪ್ರಕ್ಷುಬ್ಧ ಯುದ್ಧಗಳು

ನಡೆದಾವು; ಸೋದರರ, ನೆಂಟರಿಷ್ಟರ ನಡುವೆ
ಘನಘೋರ ಘರ್ಷಣಗಳುಂಟಾಗಿ ಎಲ್ಲೆಲ್ಲು
ತುಂಬಿಹೋದೀತು ನರಕಧ್ವಾನ! ರಣಗಾನ,
ಭಯ, ದಿಗ್‌ಭ್ರಮೆ, ವಿಮರ್ದದಲ್ಲೋಲಕಲ್ಲೋಲ,
ದಂಗೆದಾಳಿಗಳಲ್ಲಿ ನಡೆದಾವು! ಈ ನೆಲವ
ಸತ್ತವರ ತಲೆಬುರುಡೆಗಳ ನಾಡು, ಗೊಲ್ಗೋಥ
ಎಂದು ಕರೆದಾರು! ಈ ರಾಜಮನೆತನವನ್ನು
ಇದರೆದುರು ಎತ್ತಿ ಕಟ್ಟಿದರೆ ಈ ದುರ್ಧರೆಯು
ಈವರೆಗೆ ಕಾಣದಿಹ ದುಃಖಕರ ವಿಭಜನೆಯ
ಕಂಡೀತು – ತಡೆಯಿರಿದನಿಲ್ಲೆ ನಿಲ್ಲಿಸಿರೀ ಅ–
ನರ್ಥ ಸಂಭವಿಸದಿರಲಯ್ಯ – ಸಂಭವಿಸಿದರೆ
ಪುತ್ರಪೌತ್ರರು 'ನಿಮಗೆ ನರಕ ತಪ್ಪದೆ ಇರಲಿ'
ಎಂದು ರೋದಿಸಿ ಜರೆದು ಮೊರೆದು ಶಪಿಸದೆ ಬಿಡರು!

ನಾರ್ದಂಬರ್‌ಲ್ಯಾಂಡ್ : ವಾದವನು ಸರಿಯಾಗಿ ಮಾಡಿರಿದಿ, ಪೂಜ್ಯರೇ,
ತಮ್ಮ ಶ್ರಮಕ್ಕಾಗಿ ರಾಜದ್ರೋಹವನು ಹೊರಿಸಿ
ತಮ್ಮನ್ನು ಬಂಧಿಸಿಹೆವಿಲ್ಲಿ ನಾವೀಗ. ಓ
ವೆಸ್ಟ್‌ಮಿನಿಸ್ಟರ್ ಪ್ರಭುವೆ, ಇವನ ತನಿಖೆಯ ಕಾಲ
ಬರುವವರೆಗಿವನನ್ನು ಕಾದುಕೊಂಡಿರಬೇಕು.
ರಾಜಾಧಿಕಾರಿಗಳೆ, ಸಾರ್ವಜನಿಕರ ದಾವೆ–
ಗವಕಾಶವನ್ನು ಕೊಡಬೇಕೆಂದು ಬೇಡುವೆನು.

ಬೋಲಿಂಗ್‌ಬ್ರೋಕ್ : ಕರೆತನ್ನಿರಾ ರಿಚರ್ಡನನ್ನಿಲ್ಲಿ; ನಿಮ್ಮೆಲ್ಲ–
ರೆದುರಾತ ನಮಗೆ ತನ್ನೆಲ್ಲವನ್ನೊಪ್ಪಿಸಲಿ:
ನಮ್ಮನಡೆ ಸಂದೇಹರಹಿತವಾಗಲಿ ಜನಕೆ.

ಯಾರ್ಕ್ : ನಾನವನ ಕರೆತರುವೆ

(ಯಾರ್ಕ್ ನಿಷ್ಕ್ರಮಿಸುತ್ತಾನೆ)

ಬೋಲಿಂಗ್‌ಬ್ರೋಕ್ : ನೆರೆದಿರುವ ಪ್ರಭುಗಳೇ,
ನೀವೆಲ್ಲ ನಮ್ಮ ಬಂಧನದೊಳಿರುವಿರಿ, ನಿಮ್ಮ

ತನಿಖೆಯವಧಿಯವರೆಗೆ ಮುಕ್ತರಾಗಿರಲು ನೀವ್
ಹೊಣೆಗಾರರನು ಹುಡುಕಿ ತರಬೇಕು: ನಿಮ್ಮೊಲುಮೆ
ನಮಗೆ ಬೇಕಾಗಿಲ್ಲ; ನಿಮ್ಮ ನೆರವನು ನಾವು
ಬಯಸಿಲ್ಲ ಈವರೆಗೆ, ಈಗ ಬಯಸುವುದಿಲ್ಲ.
(ರಾಜಮುದ್ರೆಗಳನ್ನು ಹಿಡಿದ ಅಧಿಕಾರಿಗಳೊಡನೆ ಯಾರ್ಕನು
ದೊರೆ ರಿಚರ್ಡನನ್ನು ಕರೆದುಕೊಂಡು ಪುನಃ ಪ್ರವೇಶಿಸುತ್ತಾನೆ)

ದೊರೆ ರಿಚರ್ಡ್ : ಅಕಟ ನನ್ನೀವರೆಗಿನಾಳಿಕೆಯೊಳಿಟ್ಟುಕೊಂ-
ಡಿದ್ದ ದೊರೆತನದ ಕಲ್ಪನೆಗಳನು ತಲೆಯಿಂದ
ಕೊಡಹಿ ತೂರುವ ಮುನ್ನವೇ ಒಬ್ಬ ರಾಜನಿದಿ-
ರೇಕೆ ನನ್ನನ್ನು ಕರೆತರಲಾಯಿತೋ ಏನೊ!
ನಾನನುಗ್ರಹಕಾಗಿ ನೃಪನನೋಲಯಿಸುವುದ,
ಹೊಗಳುವುದ, ಬಾಗುವುದ, ಮಂಡಿಯೂರುವುದನಿ-
ನ್ನೂ ಕಲಿಯದಿರುವೆನ್; ಈ ಶರಣಾಗತ ಸ್ಥಿತಿಯನ್
ಎನಗರುಹಲೆಂದು ದುಃಖಕ್ಕೆ ಕಾಲಾವಧಿಯ
ನೀಡಿರೆನ್ನುವೆನ್; ಆದರೂ ನೆನೆದುಕೊಂಬೆ ನಾನ್
ಈ ಜನರು ನನಗೆ ತೋರಿದನುಗ್ರಹವನಹಹ!
ಇವರೆಲ್ಲ ನನ್ನವರೆ ಅಲ್ಲವೇ? 'ಭೋ ಪರಾಕ್'
ಎಂದು ಕೆಲಕಾಲ ಅಭಿನಂದಿಸಿಲ್ಲವೆ ನನ್ನ?
ಜೂಡಾಸ ಕ್ರಿಸ್ತನಿಗೆ ಹೀಗೆಯೇ ಮಾಡಿದ್ದ;
ಆದರವ ಹನ್ನೆರಡು ಜನರ ಮಧ್ಯದೊಳೊಬ್ಬ-
ನಲ್ಲಾದರೂ ಸತ್ಯವಂತಿಕೆಯ ಕಂಡ – ನಾ
ಹನ್ನೆರಡು ಸಾವಿರದ ನಡುವೆ ಕಾಣದೆ ಹೋದೆನ್
ಒಬ್ಬನಲ್ಲೂ ಸತ್ಯವಂತಿಕೆಯ – ದೇವರೇ
ದೊರೆಯ ರಕ್ಷಿಸು! – ಯಾವನೂ ಹೇಳಲಾರನೆ 'ತ-
ಥಾಸ್ತು' ಎಂದರರೆ ನಾ ಪಾದ್ರಿಯೂ ಕ್ಲಾರ್ಕನೂ
ಆಗಬೇಕೇನೀಗ? ಆಗಲಿ – ತಥಾಸ್ತು; ದೇ-
ವರು ರಾಜನನು ರಕ್ಷಿಸಲಿ ನಾನವನಲ್ಲ –
ವಾದರು ತಥಾಸ್ತು – ದೇವರು ನನ್ನನವನೆಂದು

ತಿಳಿದಿದ್ದರೊಮ್ಮೆ. ನೀವಾವ ಸೇವೆಯ ನೀಡ
ಲೆಂದೆನ್ನನೀ ಸ್ಥಳಕೆ ಕರೆತಂದು ನಿಲಿಸಿಹಿರಿ?

ಯಾರ್ಕ್ : ನಿನ್ನ ಸುಪರಿಶ್ರಾಂತ ದೊರೆತನದ ದೆಸೆಯಿಂದ
ನಿನ್ನ ಸದ್ಬುದ್ಧಿಗನುಗುಣವಾಗಿ, ನೀ ಹೆನ್ರಿ
ಬೋಲಿಂಗ್‌ಬ್ರೋಕ್‌ನಿಗೆ, ಸತ್ಕೃತ್ಯವೆಂದರಿತು
ನಿನ್ನ ರಾಜ್ಯಕಿರೀಟಗಳನು ತೆಗೆದೊಪ್ಪಿಸಲು

ದೊರೆ ರಿಚರ್ಡ್ : ಮಕುಟವನು ಕೊಡಿರಿತ್ತ. ಇಕೊ ತಮ್ಮ, ನೀನಿದನು
ಕಸಿದುಕೋ; ಇಕೊ ತಮ್ಮ, ಇದರೊಂದು ಬದಿಯಲ್ಲಿ
ನನ್ನ ಕೈ, ಇನ್ನೊಂದು ಬದಿಯಲ್ಲಿ ನಿನ್ನ ಕೈ.
ಈಗಳೀ ಸ್ವರ್ಣಮಯ ಮಕುಟವೊಂದರಿನೊಂದ
ತುಂಬಿಸುವ ಜೋಡುದೊಟ್ಟೆಯ ನೀರ ಕೊಡಲಿರುವ
ಗಂಭೀರ ಕೂಪದಂತಾಯ್ತು; ದೊಟ್ಟೆಗಳಲ್ಲಿ
ಖಾಲಿಯಾದುದು ಗಾಳಿಯಲ್ಲಿ ತೂಗಾಡುವುದು,
ತುಂಬಿದ್ದು ಕೆಳಗೆ ಹೋಹುದು ಕಾಣದಂತಾಗಿ.
ಕಣ್ಣೀರ ತುಂಬಿಕೊಂಡಿರುವ ನಾನಿಳಿದೊಟ್ಟೆ –
ನನ್ನ ದುಃಖಗಳನ್ನು ನಾ ಕುಡಿಯುತಿರುವೆ; ನೀನ್
ಏರುದೊಟ್ಟೆ!

ಬೋಲಿಂಗ್‌ಬ್ರೋಕ್ : ಇದೇನು! ಸಿದ್ಧನಾಗಿಹೆ ನೀನು
ರಾಜ್ಯದರಸೊತ್ತಿಗೆಯ ಬಿಡಲೆಂದು ತಿಳಿದಿದ್ದೆ.

ದೊರೆ ರಿಚರ್ಡ್ : ನನ್ನ ಮಕುಟವ ಬಿಡಲು ಸಿದ್ದನಾಗಿಯೆ ಇರುವೆನ್!
ಆದರೀಯೆನ್ನ ದುಃಖಗಳೆನ್ನವೀಗಳೂ
ನೀ ನನ್ನ ರಾಜ್ಯವೈಭವಗಳನು ಕಳೆದೀಯೆ,
ನನ್ನ ದುಃಖಗಳ ನೀ ಕಳೆಯಲಾರೆ – ಅವಕ್ಕೆ
ನಾನೀಗಳೂ ರಾಜ.

ಬೋಲಿಂಗ್‌ಬ್ರೋಕ್ : ನಿನ್ನರ್ಧ ಚಿಂತೆಗಳ
ನಿನ್ನ ಮಕುಟದ ಜೊತೆಗೆ ಕೊಡು ನನಗೆ – ಆಗದೇ?

ದೊರೆ ರಿಚರ್ಡ್ : ನೀ ಚಿಂತೆ ವಹಿಸಿದರೆ ನನ್ನದೆಯ್ದದು ಕಳೆದು;
ಚಿಂತೆಯನು ಕಳೆದುಕೊಂಡುದರಿಂದ, ಹಳ ಚಿಂತೆ

ಹರಿದುಹೋದುದರಿಂದ ಬಂದುದೆನ್ನೀ ಚಿಂತೆ!
ನಿನ್ನದಾದರೊ ಲಾಭಗಳ ಹೊತ್ತಿರುವ ಚಿಂತೆ
ಹೊಸ ಚಿಂತೆಯನು ಗೆದ್ದುಕೊಂಡದ್ದರಿಂದ ಕೇಳ್;
ಕೊಟ್ಟರೂ ಕೊಟ್ಟಂಥ ಚಿಂತೆಗಳು ಬಿಡವೆನ್ನ;
ಮುಕುಟವನ್ನಿವು ಸಾಕುವುವು – ಆದರೂ ನನ್ನ
ಬಳಿಯಲ್ಲೆ ಉಳಿಯುವುವು.

ಬೋಲಿಂಗ್‌ಬ್ರೋಕ್ : ಮಕುಟವನು ತ್ಯಜಿಸುವುದು
ನಿನಗೆ ತೃಪ್ತಿಯನೊಡರಿಸುವುದೇನು? ಹೇಳು, ಹೇಳ್.

ದೊರೆ ರಿಚರ್ಡ್ : ಅಹುದಿಲ್ಲ; ಇಲ್ಲ ಅಹುದೇಕೆಂದರೀ ನಾನು
ಶೂನ್ಯಾತ್ಮನಾಗಬೇಕಾಗುವುದು ನೋಡೀಗ.
ಅದರಿಂದ ಇಲ್ಲವೆನಬೇಕಾಯ್ತು; ನಿನಗೆ ನಾ
ಶರಣುಹೋಗಬೇಕಾದುದದಕೆ ಕಾರಣ, ಕೇಳು.
ನೋಡೀಗ ನಾ ನನ್ನ ಬರಿದುಮಾಡುವೆನೆಂದು
ಎಂಬುದನು – ನನ್ನ ತಲೆಯಿಂದೆತ್ತಿ ಈ ಭಾರ–
ವಾದ ಹೊರೆಯನು, ಹಿಡಿಯಲಾರದೀ ದಂಡವನು
ನನ್ನ ಕೈಯಿಂದೆತ್ತಿ, ಮತ್ತೀ ನೃಪಪ್ರಭಾ–
ವದ ಮೇಲ್ಮೆಯನ್ನು ನಿನಗೀಯುವೆನು – ಕೊಳ್ಳು ಕೊಳ್.
ನನ್ನ ಗಾಯದ ಮುಲಾಮನು ನನ್ನ ಕಂಬನಿಗ–
ಳಿಂದಲೇ ತೊಳೆಯುವೆನು, ನನ್ನ ಕೈಯಿಂದಲೇ
ನನ್ನ ಮಕುಟವ ಕೊಡುವೆ, ನನ್ನ ನಾಲಿಗೆಯಿಂದ
ನನ್ನ ಸುಪವಿತ್ರ ರಾಜತ್ವ ನನಗಿಲ್ಲವೆಂ–
ದೆಂಬೆ, ಕರ್ತವ್ಯದಾಚಾರಗಳನೆನ್ನುಸಿರಿ–
ನಿಂದ ನಿರ್ಮುಕ್ತಗೊಳಿಸುವೆನಿದೋ ಶಪಥವಿದು–
ನನ್ನೆಲ್ಲ ರಾಜಗಾಂಭೀರ್ಯ – ಮೆರವಣಿಗೆಗಳ,
ಭೂಮಿಗಳ, ಗೇಣಿಗಳ, ಕಂದಾಯಗಳ ಬಿಟ್ಟೆ;
ನನ್ನಾಜ್ಞೆ, ಪರಿನಿಯತಿ, ವಿಧಿಗಳೆಲ್ಲವನಲ್ಲ–
ಗಳೆವೆ. ಮನ್ನಿಸಲಿ ದೇವರು ಈಗ ನನ್ನಿಂದ
ಮುರಿದೊಯ್ದ ನನ್ನ ಪ್ರತಿಜ್ಞೆಗಳ ಮೇಣ್ ಆತ

ನಿನಗೆ ನಾ ವಹಿಸಿದೆಲ್ಲಾ ವ್ರತಗಳನು ನಡೆಸಿ–
ಕೊಡಲಿ, ಶೂನ್ಯಾತ್ಮನಾದೆನ್ನ ಮಾಡೆಲೆ ದುಃಖ–
ಶೂನ್ಯನನ್ನಾಗಿ; ಎಲ್ಲವ ಪಡೆದ ನೀನಿನ್ನು
ಸಂತುಷ್ಟನಾಗೆಲ್ಲರೊಡನೆ – ಹರಸುವೆ ನೀನು
ಈ ರಿಚರ್ಡನ ಪೀಠದಲ್ಲಿ ರಾರಾಜಿಸಲು
ಬದುಕು ಬಹುಕಾಲ; ಬಹು ಬೇಗ ಈತನ ತೆಗೆದು
ಬುವಿಯಾಳದಲ್ಲಿ ಹೂಳ್ – ದೊರೆ ಹೆನ್ರಿಯನು ದೇವ
ಸಲಹಲೆಂದೀ ವಿರಾಜೀಕೃತ ರಿಚರ್ಡ್ ನುಡಿವ –
ಸುಖದ ಬಹುಕಾಲವನು ಕೊಡಲೆಂದು ಪ್ರಾರ್ಥಿಸುವ!
ಉಳಿಯಿತೇನಿನ್ನು?

ನಾರ್ದಂಬರ್‌ಲ್ಯಾಂಡ್: ಏನೂ ಇಲ್ಲ; ಆದರೀ
ಆರೋಪಗಳನು – ನೀನೂ ನಿನ್ನ ಬಂಟರೂ
ರಾಜ್ಯಕ್ಕೆ, ರಾಜ್ಯವಾಸಿಗಳ ಹಿತಗಳಿಗೆ ಕೇ–
ಡಾಗುವಂತೆಸಗಿದುಗ್ರಾಪರಾಧಗಳನ್ನು–
ಓದು! ಇವುಗಳನೊಪ್ಪಿಕೊಂಡೆಯಾದರೆ ನೀನು
ಯೋಗ್ಯಕ್ರಮದೆ ಪದಚ್ಯುತನಾದೆಯೆಂದು ಜನ–
ರಾತ್ಮಗಳು ತಿಳಿದಾವು.

ದೊರೆ ರಿಚರ್ಡ್ : ಹಾಗೆ ಮಾಡಲೆ ಬೇಕೆ?
ನೀವ್ ಕೃತಕದಿಂದ ಸಮೆದ ನನ್ನ ತಪ್ಪಿನ ಸುರುಳಿ–
ಯನ್ನು ಬಿಚ್ಚಲೆಬೇಕೆ ನಾನು? ಕಳಕಳಿಯೆದೆಯ
ನಾರ್ದಂಬರನೆ ಹೇಳು – ನಿನ್ನ ತಪ್ಪುಗಳನ್ನು
ಬರೆದು ಸಭ್ಯರ ಮುಂದೆ ಓದೆಂದರಾಗ ನಿನ–
ಗವಮಾನವಾಗದೇ? ಒಮ್ಮೆ ನೀನೀ ಬರೆಹ
ಓದ ಹೊರಟಾಗ ನೃಪನೊಬ್ಬನ ಪದಚ್ಯುತಿಯ
ಓದುವೆಯ ಅತಿಬಲಾವಿಷ್ಟ ಶಪಥವ ಮುರಿದು?
ಅಂಥಂತಮೋಲಾಂಛನವ ಹೊತ್ತ, ಚಿತ್ರಗು–
ಪ್ತನ ದಫ್ತರದಲಿ ನಿಂದ್ಯವೆನಿಪ್ಪ ಅಂಥ ಲೇ–
ಖನವನೋದುವೆಯ? ಹಾಗಲ್ಲ – ನೀವೆಲ್ಲರೂ

ನಿಂತು ನೋಡುತ್ತಿರಲು ನನ್ನ ಹತಭಾಗ್ಯತ್ವ
ನನ್ನನಣಕಿಸುತಿರಲು ಪೈಲೇಟರೊಡನೆ ನಿ-
ಮ್ಮಲ್ಲಿ ಕೆಲವರು ಕೈಯ ತೊಳೆದುಕೊಳಬಹುದು ಹೊರ-
ಹೊರಗೆ 'ಅಯ್ಯೋ ಪಾಪ' ಎಂದು – ಪೈಲೇಟರೇ,
ನೀವೀಗ ನನ್ನನ್ನು ನನ್ನ ಕಹಿ ಕ್ರೂಜೆಗೆ ಸ.
ಮರ್ಪಿಸಿದ ಈ ನಿಮ್ಮ ಪಾಪ ತೊಲಗದು ತೊಳೆಯೆ

ನಾರ್ದಂಬರ್‌ಲ್ಯಾಂಡ್: ಪ್ರಭುವೆ, ಹಿಡಿದೋದಿದೋ ಈ ಬರಹಗಳ ಮೊದಲು.

ದೊರೆ ರಿಚರ್ಡ್ : ಕಣ್ಣೀರು ತುಂಬಿ ಕಣ್ಣುಗಳಲ್ಲಿ ಕಾಣೆ ನಾನ್;
ಆದರೂ ಆ ಉಪ್ಪುನೀರಷ್ಟು ಕುರುಡು ಮಾ-
ಡದು ಕಂಗಳನ್ನವಿಲ್ಲೊಬ್ಬಗೆಯ ದ್ರೋಹಿಗಳ
ಕಾಣಬಲ್ಲವು – ಅಲ್ಲ ಅಲ್ಲ – ನಾನೀ ನನ್ನ
ಕಂಗಳನ್ನೆನ್ನತ್ತ ತಿರುಗಿಸಿದರುಳಿದವರಿ-
ಗಾಗಿರುವೆ ನಾ ದ್ರೋಹಿ ಎಂದು ಗೊತ್ತಾಗುವುದು
ಏಕೆಂದರಿಲ್ಲಿ ದೊರೆಯೊಬ್ಬನಾಭರಣಮಯ
ಕಾಯವ ನಿರಾಭರಣಗೊಳಿಸಲಾತ್ಮಾನುಮತಿ
ಇತ್ತೆ; ಮಾನ್ಯ ಯಶಸ್ಸ ಕೀಳ್ಗೈದೆ; ಸಾರ್ವಭೌ-
ಮಾಧಿಕಾರವ ದಾಸನನ್ನಾಗಿ ಮಾಡಿದೆ : ಮ-
ಹಾಭಿಮಾನದ ರಾಜರಾಜತ್ವವನ್ನು ಕೇ-
ವಲ ಪ್ರಜಾಪದಕಿಳಿಸಿಬಿಟ್ಟೆ ; ರಾಜ್ಯವ ರೈತ-
ತನದ ಮಟ್ಟಕ್ಕೆಸೆದನ್

ನಾರ್ದಂಬರ್‌ಲ್ಯಾಂಡ್: ಎನ್ನ ಪ್ರಭು,

ದೊರೆ ರಿಚರ್ಡ್ : ನಿನ್ನ ಪ್ರಭು
ನಾನಲ್ಲ; ಮಲೆತ, ಮಾನಾಪಹರಣಕೆ ನಿಂತ
ಮನುಜ, ನಾನಾವ ಮಾನವನಿಗೂ ಪ್ರಭುವಲ್ಲ.
ನನಗೆ ಹೆಸರಿಲ್ಲ, ಬಿರುದಿಲ್ಲ – ಎಂಬೆನೆ? ತಪ್ಪು;
ನಾಮಕರಣವನೆನಗೆ ಮಾಡಿಲ್ಲವೆಂದಲ್ಲ –
ಕೃತನಾಮವನು ಕಸಿದುಕೊಳ್ಳಲಾಗಿದೆ – ಅಕಟ,

ಈ ದಿನ ಮಹಾಭಾರವೆನ್ನಿಸಿದೆ; ನಾನೆಷ್ಟೊ
ಚಳಿಗಾಲಗಳ ಕಳೆದೆನಾದರೀ ದಿನವೆನ್ನ
ಕರೆದುಕೊಳ್ಳಲು ಹೆಸರನರಿಯದಾಗಿಹೆನಹಹ!
ಬೋಲಿಂಗ್‌ಬ್ರೋಕ ರವಿ; ಅವನೆದುರು ನಾನೊಬ್ಬ
ಹಿಮದಿಂದ ಸಮೆದಣಕದರಸ – ಹನಿಹನಿಯಾಗಿ
ಕರಗಬೇಕಲ್ಲವೇ? ಒಳ್ಳೆ ದೊರೆ, ದೊಡ್ಡ ದೊರೆ –
ಆದರೇನ್? ದೊಡ್ಡೊಳ್ಳೆ ದೊರೆಯಲ್ಲ – ಅಲ್ಲವೇ?
ಈಗಳೂ ಇಂಗ್ಲೆಂಡಿನಲ್ಲೆನ್ನ ನುಡಿಗೆ ಬಂ–
ಗಾರಬೆಲೆಯಿದ್ದರದು ತರಲೊಂದು ಕನ್ನಡಿಯ
ನೇರವಾಗಿದಿರೆನ್ನ; ರಾಜಾಧಿರಾಜತ್ವ–
ವನು ಕಳೆದುಕೊಂಡ ಈ ಮೊಗವಿದೆಂತಿದೆಯೆಂದು
ತೋರಿಸಲಿ ತಾ ಬಂದು.

ಬೋಲಿಂಗ್‌ಬ್ರೋಕ್ : ಯಾರಾದರೂ ಹೋಗಿ
ಕನ್ನಡಿಯ ತಂದು ಕೊಡಿ, ಕನ್ನಡಿಯ ತಂದುಕೊಡಿ
(ಜವಾನನೊಬ್ಬ ತೆರಳುತ್ತಾನೆ)

ನಾರ್ದಂಬರ್‌ಲ್ಯಾಂಡ್: ಕನ್ನಡಿಯು ಬರುವಷ್ಟರಲ್ಲಿದನ್ನೋದು ಪ್ರಭು.

ದೊರೆ ರಿಚರ್ಡ್ : ಭೂತ, ಪ್ರೇತ, ಪಿಶಾಚ! ನರಕವನು ನಾ ಸೇರು–
ವಷ್ಟರೊಳಗೇ ನೀನು ಚಿತ್ರಹಿಂಸೆಯ ಕೊಡುವೆ

ಬೋಲಿಂಗ್‌ಬ್ರೋಕ್ : ಒತ್ತಾಯಪಡಿಸದಿರು ನಾರ್ದಂಬರ ಪ್ರಭುವೆ.

ನಾರ್ದಂಬರ್‌ಲ್ಯಾಂಡ್: ಜನತೆಗೆ ಸಮಾಧಾನವಾಗದದನೆಸಗದಿರೆ

ದೊರೆ ರಿಚರ್ಡ್ : ಅವರಿಗೆ ಸಮಾಧಾನವಾಗಿಯೇ ತೀರುವುದು –
ನನ್ನಘಗಳನ್ನೆಲ್ಲ ಬರೆದಿಟ್ಟ ಪುಸ್ತಕವ
ನಾನು ಸಾಕಷ್ಟೋದಿದಾಗ – ಅಂದರೆ ನಾನು
ನನ್ನನ್ನು ಚೆನ್ನಾಗಿ ಕಂಡಾಗ – ತಿಳಿಯಿತೇ?
(ಜವಾನನು ಕನ್ನಡಿಯೊಡನೆ ಪ್ರವೇಶಿಸುತ್ತಾನೆ)
ಕನ್ನಡಿಯ ಕೊಡು ನನಗೆ, ಅದರಲ್ಲಿ ಓದುವೆನು
ಸುಕ್ಕುಗಳು ಸಾಕಷ್ಟು ಆಳವಾಗಿಲ್ಲವೇ?
ಈ ನನ್ನ ಮೊಗಕೆ ದುಮ್ಮಾನ ಬೇಕಾದಷ್ಟು

ಪೆಟ್ಟು ಕೊಟ್ಟಿದ್ದರೂ ಆಗಿಲ್ಲವೇನಿವ–
ಕ್ಕಿಂತ ಗಂಭೀರವ್ರಣಂಗಳ್? ಓ ಸ್ತುತಿಪಠನ–
ಪಾಂಡಿತ್ಯಪೂರ್ಣ ದರ್ಪಣವೆ, ಸೌಭಾಗ್ಯದಲಿ
ನನ್ನುತ್ತರಾಧಿಕಾರಿಗಳಾದ ಜನರಂತೆ
ನನ್ನನ್ನು ವಂಚಿಸುತ್ತಿರುವೆ. ತನ್ನರಮನೆಯೊಳ್
ಈರೈದು ಸಾಸಿರ ಜನರ್ಕಳನು ನಿತ್ಯವೂ
ಇಟ್ಟುಕೊಂಡಿದ್ದ ಮೊಗ ಈ ಮೊಗವೆ ನಿಜವಾಗಿ?
ನೋಳ್ಪವರು ಹೆಪ್ಪಳಿಸುವಂತೆ ನೇಸರ ಹಾಗೆ
ಪ್ರಭವಿಸುತ್ತಿದ್ದಾಸ್ಯವಿದೆಯೇನ್? ಅಸಂಖ್ಯಾಪ–
ರಾಧಗಳನೆದುರಿಸಿದ ಮೇಲಂತ್ಯದಲ್ಲೀಗ
ಬೋಲಿಂಗ್‌ಬ್ರೋಕ ಮೇಲ್ವಾಯ್ದು ಹಿಮ್ಮೆಟ್ಟಿಸಿಹ
ಮೊಗವಿದೇನ್? ಈ ಮೊಗದಿ ನಶ್ವರ ಯಶಸ್ಸು ಬೆಳ–
ಗುತ್ತಿದೆ; ಯಶಸ್ಸಿನಷ್ಟೇ ನಶ್ವರವಿದಲ್ತೆ!
(ಕನ್ನಡಿಯನ್ನು ನೆಲಕ್ಕೆ ಅಪ್ಪಳಿಸುತ್ತಾನೆ)
ಮೌನದಿಂದಿರುವರಸ, ನೋಡಿದೋ ನೋಡು ಕ–
ನ್ನಡಿ ನೂರು ಚೂರಾಗಿ ಚೆಲ್ಲಿ ಹೋಗಿಹುದಿಲ್ಲಿ.
ನನ್ನಳಲದೆಷ್ಟು ಬೇಗನೆ ನನ್ನ ಮೊಗವನ್ನು
ಹಾಳುಗೆಡಹಿತು ನೋಡು.

ಬೋಲಿಂಗ್‌ಬ್ರೋಕ್ : ನಿನ್ನ ದುಃಖದ ನೆರಳು ನಿನ್ನ ವದನದ ನೆರಳ
ನಾಶ ಮಾಡಿದೆ, ರಿಚರ್ಡ್, ನಾಶಮಾಡಿದೆ ನೋಡು.

ದೊರೆ ರಿಚರ್ಡ್ : ಹೇಳು ಮತ್ತೊಂದು ಸಲ. ನನ್ನ ದುಃಖದ ನೆರಳು
ನಾಶವಾಯ್ತೀಗ, ನಿಜ, ನನ್ನಿಯಿದು – ಅಹುದಹುದು –
ನನ್ನೆಲ್ಲ ದುಃಖವೂ ಎದೆಯಾಳದಲ್ಲಿಹುದು.
ರೋದನದ ಈ ಬಾಹ್ಯ ರೀತಿನೀತಿಗಳೆಲ್ಲ
ಚಿತ್ರಹಿಂಸಾಗ್ರಸ್ತನಾದ ಜೀವಾತ್ಮನಲಿ
ನಿರ್ನರಂ ಬಲಿಯುತಿಹ, ಕಾಣಿಸದೆ ಕುಳಿತಿರುವ
ವೆತೆಯ ನೆರಳೇ ಸರಿ. ನಿಜಾರ್ಥ ನಿನ್ನುಕ್ತಿಗಿದೆ.
ಧನ್ಯವಾದಗಳಿದೋ ನಿನಗೆ ದೊರೆ : ನೀನೆನಗೆ

ದುಃಖಿಸಲು ಕಾರಣವನೊದಗಿಸಿದ್ದಲ್ಲದೆಯೆ
ಆ ಕಾರಣಕ್ಕಾಗಿ ದುಃಖಿಸುವ ಬಗೆಯನೂ
ಕಲಿಸುತಿಹೆ – ನಿನ್ನುದಾರತೆಗೆ ನಾನಾದೆ ಋಣಿ.
ವರವೊಂದ ಬೇಡುವೆನು, ಆಮೇಲೆ ಹೊರಟು ಹೋ–
ಗುವೆ, ಮತ್ತೆ ಬಂದು ಕರಕರೆಯ ಕೊಡೆ ನಿನಗೆ ನಾ.
ಪಡೆವೆನೇ ಬೇಡಿದುದ?

ಬೋಲಿಂಗ್‌ಬ್ರೋಕ್ : ನ್ಯಾಯವಾದವ ಹಿಡಿದ ದಾಯಾದ ಸೋದರನೆ,
ಹೇಳು ಹೇಳಾವ ವರ?

ದೊರೆ ರಿಚರ್ಡ್ : ನ್ಯಾಯಸ್ಥ ದಾಯಾದ ನಾನಾದರೀಗಳೀ
ದೊರೆಗಿಂತ ಹೆಚ್ಚಿನವನಾದೆ. ನಾ ದೊರೆಯಾಗಿ
ಬಾಳುತಿರೆ ನನ್ನ ವಂದಿಗಳೆಲ್ಲರೂ ಪ್ರಜೆಗ–
ಳಾಗಿದ್ದರ್. ಎನಗೀಗ ಪ್ರಜೆಯಾದ ಮೇಲೆ ದೊರೆ–
ಯೊಬ್ಬ ಹೊಗಳಲು ನಿಂತನ್. ಅದರಿಂದ ಹೆಚ್ಚಿನವ
ನಾನಾದೆ. ನನಗೀಗ ಬೇಳ್ಪಗತ್ಯವೆ ಇಲ್ಲ!

ಬೋಲಿಂಗ್‌ಬ್ರೋಕ್ : ಆದರೂ ಕೇಳು ಕೇಳ್.

ದೊರೆ ರಿಚರ್ಡ್ : ಪಡೆವೆನೇ ಕೇಳಿದರೆ?

ಬೋಲಿಂಗ್‌ಬ್ರೋಕ್ : ಪಡೆವೆ ಖಂಡಿತವಾಗಿ

ದೊರೆ ರಿಚರ್ಡ್ : ಹಾಗಾದರಿಲ್ಲಿಂದ ಹೋಗಗೊಡು.

ಬೋಲಿಂಗ್‌ಬ್ರೋಕ್ : ಯಾವೆಡೆಗೆ?

ದೊರೆ ರಿಚರ್ಡ್ : ನೀನಿಚ್ಛೈಸುವ ಕಡೆಗೆ.
ನಿನ್ನ ಕಣ್ಣೆದುರಿಂದ ದೂರ ಹೋದರೆ ಸಾಕು.

ಬೋಲಿಂಗ್‌ಬ್ರೋಕ್ : ಯಾರಾದರೂ ಇವನ ರಾಜಬಂದೀ ಗೃಹಕೆ ಒಯ್ಯಿರಿ.

ದೊರೆ ರಿಚರ್ಡ್ ; ಇದೇನು? ನೀವೆಲ್ಲರೂ ಒಯ್ಯುವರೆ?
ಚೆನ್ನಾಯ್ತು, ಚೆನ್ನಾಯ್ತು! ನಿಜವಾದ ದೊರೆ ಬಿದ್ದ
ಕೂಡಲೇ ಚೆಂಗನೇಳಿಗೆಯಟ್ಟವೇರುವಿರಿ!
(ಕೆಲ ಪ್ರಭುಗಳೂ ದೊರೆ ರಿಚರ್ಡನೂ ರಕ್ಷಿಯೂ ಹೋಗುತ್ತಾರೆ)

ಬೋಲಿಂಗ್‌ಬ್ರೋಕ್ : ನಾಳೆ ಬುಧವಾರ ನಾವ್ ಗಂಭೀರವಾಗಿ ಕುಳಿ–
ತಾಲೋಚಿಸೋಣ ಪಟ್ಟಾಭಿಷೇಕಕ್ಕೆಮ್ಮ;
ನೀವೆಲ್ಲ, ಪ್ರಭುಗಳೆ, ಸಿದ್ಧರಾಗಿರಿ ಹೋಗಿ.
(ಪಾದ್ರಿ ಕಾರ್ಲಿಸ್ಲಿ, ವೆಸ್ಟ್ ಮಿನಿಸ್ಟರಿನಧಿಪಾದ್ರಿ ಮತ್ತು ಆಮುರ್ಲಿಗಳನ್ನುಳಿದು ಮಿಕ್ಕೆಲ್ಲರೂ ಹೋಗುತ್ತಾರೆ)

ಅಧಿಪಾದ್ರಿ : ನಾವಿಲ್ಲಿ ಕಂಡೆವೀಗ ವಿಷಾದಕರ ದೃಶ್ಯವನ್ನು.

ಕಾರ್ಲಿಸ್ಲಿ : ಬರಲಿಹ ವಿಷಾದವನ್ನೆನ್ನು – ಹುಟ್ಟಲಿಹ
ಮಕ್ಕಳೀ ದಿನವ ಮುಳ್ಳೆಂದು ಭಾವಿಸದಿರರು!

ಆಮುರ್ಲಿ : ಧಾರ್ಮಿಕೋತ್ತಮರೆ, ಈ ದುರ್ಲಾಂಛನವ ರಾಜ್ಯ–
ದಿಂದಳಿಸಲೇನಾದರೂ ರಹಸ್ಯೋಪಾಯವಿಲ್ಲವೇ?

ಅಧಿಪಾದ್ರಿ : ನನ್ನ ಪ್ರಭು, ನಾನಿಲ್ಲಿ ನನ್ನ ಮನ–
ವನ್ನ ನಿರ್ಬಂಧದಿಂದುಸಿರುವೊಡೆ ನೀ ಮೊದಲ್
ನಾ ನುಸಿರುವೆಲ್ಲವನ್ನಡಗಿಸಿಡುವೆನು ಎಂದು,
ನಾನುಸಿರ್ದೆಲ್ಲವನ್ನೂ ಮಾಡುವೆನು ಎಂದು
ಧರ್ಮಪ್ರತಿಜ್ಞೆಗೆಯ್. ನಾ ನೋಡುತಿಹೆ ನಿನ್ನ
ಹುಬ್ಬುಗಳ ತೃಪ್ತಿಯಿಂದುಬ್ಬಿದುದ, ಹೃದಯ ದುರ್–
ಭರ ದುಃಖದಿಂದ ಬಿರಿವಂತಿಹುದ, ಕಣ್ಣುಗಳು
ಕಂಬನಿಗಳನು ತುಂಬಿಕೊಂಡು ತತ್ತರಿಸುವುದ!
ಇರುಳ ಭೋಜನಕೆನ್ನ ಮನೆಗೆ ಬಾ ನಾನೊಂದು
ಸಂಚನುಸಿರುವೆನಾಗ; ಅದರಂತೆ ಮಾಡಿದರೆ
ಸಂತಸದ ದಿನವನ್ನು ನಾವೆಲ್ಲ ಕಂಡೇವು!



['ಷೇಕ್ಸ್‌ಪಿಯರಿಗೆ ನಮಸ್ಕಾರ' – ಕುವೆಂಪು ಭಾಷಾ ಭಾರತಿ ಪ್ರಾಧಿಕಾರ]

# ೪೮. ಆತ್ಮೀಯ ಸ್ನೇಹಿತ ಪಾವೆಂ

೧೯೪೭ರಲ್ಲಿ ನಾನು 'ಕರ್ಮವೀರ'ದ ಸಂಪಾದಕ ಮಂಡಲಿಗೆ ಸೇರಿದೆ. ಅದರಲ್ಲಿ ಮೊದಲು ಸಂಪಾದಕರಾಗಿದ್ದ ಎಚ್.ಆರ್. ಪುರೋಹಿತರು ಮತ್ತು ನಾನು – ಇಬ್ಬರೇ ಇದ್ದೆವು. ಪಾವೆಂ ಆಚಾರ್ಯರು 'ಸಂಯುಕ್ತ ಕರ್ನಾಟಕ'ದ ಪ್ರಿಂಟಿಂಗ್ ಸೆಕ್ಷನ್ನಿನ ಸಲಹೆಗಾರರಾಗಿದ್ದರು. ಅಂದು, ನಾನು ಸೇರುವುದಕ್ಕಿಂತ ಮೊದಲು, ಅವರು ತಿಂಗಳಿಗೆ ೩೦ ರೂಪಾಯಿಗಳ ಸಂಬಳದ ಮೇಲೆ ಕೆಲಸ ಮಾಡುತ್ತಿದ್ದರೆಂದೂ ಅವರಿಂದಲೇ ನನಗೆ ತಿಳಿದುಬಂದಿತು.

ನನಗೆ ಕೆಲಸದ ಹೊರೆ ಜಾಸ್ತಿಯಾಯಿತು. ಆಗ ಗೆಳೆಯರಾದ ಪಾವೆಂ ಆಚಾರ್ಯರ ಬುದ್ಧಿಕೌಶಲ, ಕಾರ್ಯದಕ್ಷತೆಗಳನ್ನು ಗಮನಿಸಿ ನನಗೆ ಸಂಪಾದಕತ್ವದಲ್ಲಿ ಸಹಾಯಕರನ್ನಾಗಿ ಅವರನ್ನು ತೆಗೆದುಕೊಳ್ಳಲು ಅಧಿಕಾರಿಗಳಲ್ಲಿ ಬಿನ್ನವಿಸಿಕೊಂಡೆ. ಅವರು ಅದಕ್ಕೆ ಒಪ್ಪಿ ಆಚಾರ್ಯರನ್ನು ನನ್ನ ಜೊತೆಗೆ ಕೆಲಸ ಮಾಡಲು ಕೊಟ್ಟರು. ನಾನು ನನ್ನ ಬರೆಹದ ಕೆಲ ಭಾಗಗಳನ್ನು ಅವರಿಗೆ ವಹಿಸಿಕೊಟ್ಟೆ. ಅದರಲ್ಲಿ 'ಓದುಗರೊಡನೆ ಹರಟೆ' ಎಂಬುದು ಮುಖ್ಯವಾದದ್ದು. ಅವರಿಗೆ ಲಾಂಗೂಲಾಚಾರ್ಯರೆಂಬ ಲೇಖನೀ ನಾಮವನ್ನೂ ಬಿಟ್ಟುಕೊಟ್ಟೆ. ಆ ವಿಡಂಬನ, ಟೀಕೆ ಟಿಪ್ಪಣಿಗಳ ಲೇಖನವನ್ನು ಬಹಳ ಚೆನ್ನಾಗಿ ಬರೆಯುತ್ತ ಹೋಗಿ ಕ್ರಮೇಣ ಅದು ಅವರ ಶೈಲಿವೈಶಿಷ್ಟ್ಯದಿಂದ ತುಂಬಿ ಹೆಚ್ಚು ಹೆಚ್ಚು ಜನಪ್ರಿಯವಾಗುತ್ತ ಹೋಯಿತು. ಆ ಲೇಖನಗಳನ್ನಾಯ್ದು ಮುದ್ರಿಸಿದ ಪುಸ್ತಕವೂ ಅನಂತರ ಜನಾದರಣೆಗೆ ಪಾತ್ರವಾದದ್ದು ಸರ್ವವಿದಿತ.

ಪುಸ್ತಕದ ಎಲ್ಲ ವರ್ಗಗಳ ವಿಮರ್ಶೆಯನ್ನೂ ಮೊದಲು ನಾನೇ ಮಾಡುತ್ತಿದ್ದರೂ ವರ್ಷ ಹೋದ ಹಾಗೆ ಅವರು ಶಾಸ್ತ್ರೀಯ ಗ್ರಂಥಗಳ ವಿಮರ್ಶೆಯನ್ನು (ಅಂಥ ಗ್ರಂಥಗಳು ಕನ್ನಡದಲ್ಲಿರಲಿ, ಸಂಸ್ಕೃತದಲ್ಲಿರಲಿ, ಮರಾಠಿಯಲ್ಲಿರಲಿ, ಹಿಂದಿಯಲ್ಲಿರಲಿ ಅಥವಾ ಇಂಗ್ಲೀಷಿನಲ್ಲಿರಲಿ) ನನಗೆ ವಹಿಸಿ, ಮಿಕ್ಕವುಗಳ ವಿಮರ್ಶೆಯನ್ನು ಹೆಚ್ಚಾಗಿ ಅವರೇ ಮಾಡತೊಡಗಿದರು. ಅವರ ವಿಮರ್ಶಪಟುತ್ವ ನನ್ನ ಮೆಚ್ಚುಗೆಗೆ ಪಾತ್ರವಾಯ್ತು. ನಾವಿಬ್ಬರೂ ಮುಕ್ಕಾಲುಪಾಲು ಒಂದೇ ಅಭಿಪ್ರಾಯ ಉಳ್ಳವರಾಗಿದ್ದೆವು; ಭಿನ್ನಾಭಿಪ್ರಾಯ ಬಂದಲ್ಲಿ ಚರ್ಚಿಸಿ ಏಕಮತದ ನಿರ್ಣಯಕ್ಕೆ ಬರುತ್ತಿದ್ದೆವು.

ಪುಸ್ತಕ ವಿಮರ್ಶೆಯಲ್ಲಿ ನನ್ನ ಅವರ ಮತ ಹೆಚ್ಚುಕಡಿಮೆ ಒಂದೇ ಆಗಿ ಮಾರ್ಪಡಲು ಅವರಿಗೂ ನನಗೂ ಇದ್ದ ಸಂಸ್ಕೃತ, ಕನ್ನಡ, ಇಂಗ್ಲಿಷು ಮತ್ತು ಸಾಮಾನ್ಯ ವಿಜ್ಞಾನಗಳ ಜ್ಞಾನಾನುಭವಗಳು ಒಂದೇ ಪರಂಪರೆಗೆ ಸೇರಿದ್ದೇ ಕಾರಣ. ಸಂಗೀತಾದಿ ಕಲೆಗಳಲ್ಲೂ ವೇದಾಂತ ವಿಜ್ಞಾನಾದಿಗಳಲ್ಲೂ ನಮ್ಮ general knowledge ಸಾಮಾನ್ಯ ಓದು

ಸಾಹಿತ್ಯ ವಿಮರ್ಶೆಯಲ್ಲಿ ಹೇಗೋ ಹಾಗೇ ಒಂದೇ ಬುಡಕಟ್ಟಿಗೆ ಸೇರಿದವುಗಳಾಗಿದ್ದುವು. ನಾವು ರವೀಂದ್ರನಾಥ ಠಾಕೂರರ ಮಧ್ಯಮ ಮಾರ್ಗವನ್ನು ಹಿಡಿದವರು; ಯಾವ ಧ್ರುವದತ್ತಲೂ ಯಾವುದರಲ್ಲೂ ಪೂರ್ಣವಾಗಿ ಒಲಿದವರಲ್ಲ. ನಮ್ಮ ಬುದ್ಧಿಸ್ವಾತಂತ್ರ್ಯವನ್ನು ಈವರೆಗೂ ಇಟ್ಟುಕೊಂಡೇ ಬಂದಿದ್ದೇವೆ. Call a spade a spade ಎಂಬಂತಹ ಅಪ್ರಿಯಸತ್ಯ ಹೇಳುವ ಪದ್ಧತಿ ನಮ್ಮದು. ಆದುದರಿಂದ ನಾವು ಈಗಲೂ "ನಿಷ್ಠುರಕ್ಕೆ ಕೃಷ್ಣಭಟ್ಟ"ರಾದ ಭಾರದ್ವಾಜರು.

'ಕರ್ಮವೀರ'ದಲ್ಲಿ ನಾವು ಕೆಲಸ ಮಾಡುತ್ತಿದ್ದಾಗ ದಿ. ನಾರಾಯಣ ಸಂಗಮರ ಸಂಗಮವೂ ನಮಗಾಯ್ತು. ಅವರ ಕಲಾಜ್ಞಾನ, ಪದ್ಯರಚನಾಕೌಶಲ, ಸಾಮಾನ್ಯ ಸಿದ್ಧಾಂತ ಮತ್ತು ವೈಯಕ್ತಿಕ ಸಚ್ಚಾರಿತ್ರ ನಮ್ಮಿಬ್ಬರನ್ನೂ ಮೆಚ್ಚಿಸಿದ್ದರಿಂದ ನಮ್ಮ ಮೂವರಿಗರಿಯದ ಹಾಗೆಯೇ ನಾವು ಮೂವರೂ ಪರಸ್ಪರರ ಪ್ರಭಾವಗಳಿಗೊಳಗಾದೆವು – ಎಂದರೆ ತಪ್ಪಾಗಲಿಕ್ಕಿಲ್ಲ. ನಾವು ಅಂದು Three Musketeers ಮೂವರು ಸಾಹಸಿಗರಾಗಿದ್ದೆವು. 'ತೇ ಹಿ ನೋ ದಿವಸಾ ಗತಾಃ' ಎಂಬಷ್ಟು ಸಾಹಸ, ಸಂತೋಷ, ಕಷ್ಟ ಸಹಿಷ್ಣುತೆ, ಅಭ್ಯಾಸಶೀಲತೆ, ಅಲ್ಪಧನತೃಪ್ತಿ, ಕರ್ತವ್ಯಮಗ್ನತೆ, ಅಸ್ಖಾಲಿತ್ಯ ಶೀಲಗಳನ್ನನುಸರಿಸುತ್ತ ನಾವು 'ಕರ್ಮವೀರ' ಕಾರ್ಯಾಲಯದಲ್ಲಿದ್ದುದು ಅವಿಸ್ಮರಣೀಯ.

ಉಡುಪಿಯ ಪಾಡಿಗಾರು ವೆಂಕಟರಮಣಾಚಾರ್ಯರ ಸರಳ ಜೀವನವೂ ಉದಾತ್ತ ಧ್ಯೇಯವೂ ಖಂಡಿತವಾದಿತ್ವವೂ ಪರೋಪಕಾರಬುದ್ಧಿಯೂ ವಿನಯವಂತಿಕೆಯೂ ಅತಿಥಿಸತ್ಕಾರಪರತೆಯೂ ಭ್ರಾತೃತ್ವವೂ ವಿಮರ್ಶ ವಿಚಕ್ಷಣತೆಯೂ ಇಂದಿನ ಕನ್ನಡ ನಾಡಿನಲ್ಲಿ ಬಹಳ ಸ್ವಲ್ಪ ಜನರಲ್ಲಿ ಕಂಡುಬರುತ್ತಿದೆ – ಲೇಖಕ ವಿಮರ್ಶಕ ವರ್ಗಗಳಲ್ಲಿ.

ಸ್ವವಿಚಾರಕ್ಕಿಂತ ಲೋಕಕ್ಷೇಮದ ವಿಚಾರ – ಭಾರತ ಕ್ಷೇಮದ ವಿಚಾರ ಆಚಾರ್ಯರಲ್ಲಿ ಹೆಚ್ಚು ಎಂಬುದನ್ನು ಅವರೊಡನೆ ಅನೇಕ ಸಲ ಸಂವಾದಿಸಿದ ನನ್ನ ಅನುಭವ. ನಿಷ್ಪಕ್ಷಪಾತತೆ ಕೇವಲ ಬಾಯಿಮಾತಾದ ಮತ್ತು ಧನ, ಸ್ಥಾನಮಾನಗಳ ಹಾಗೂ ಪ್ರಸಿದ್ಧಿಯ ಲೋಭ ಅನೇಕ ವಿದ್ಯಾವಂತರನ್ನು ಮತ್ಸರಗ್ರಸ್ತರನ್ನಾಗಿ ಮಾಡಿರುವ ಇಂದಿನ ಆವರಣದಲ್ಲಿ ಮಿತ್ರವರ್ಯ ವೆಂಕಟರಮಣಾಚಾರ್ಯರಂಥ 'ಅರ್ಥಕಾಮೇಷ್ವ ಸಕ್ತಾನಾಂ ಧರ್ಮಜ್ಞಾನಂ ವಿಧೀಯತೇ' ಎಂಬ ಮನೂಕ್ತಿಯಂತೆ ಬದುಕಿರುವವರು ತೀರ ವಿರಳ. ಆಳವಾದ ಶಾಸ್ತ್ರೀಯ ಮತ್ತು ಆನುಭವಿಕ ಸತ್ಯಾನ್ವೇಷಣ ಪ್ರಜ್ಞೆ ಮತ್ತು ಗುಂಪುಗಾರಿಕೆ, ಔದ್ಧತ್ಯಗಳಿಂದ ದೂರವಾಗಿರುವಿಕೆ ಅವರ ಸ್ವಭಾವದಲ್ಲಿ ಸಮರಸವಾಗಿ ಹೋಗಿದೆ. ವಿಚಾರಸ್ವಾತಂತ್ರ್ಯವು ಜನತೆಯ ಅಂತರ್ವಾಣಿಯನ್ನು ಮೀರದೆಂಬುದನ್ನೂ ಮತಸಂಖ್ಯಾಬಲದಿಂದ ಸತ್ಯನಿರ್ಣಯವಾಗದೆಂಬುದನ್ನೂ ಆಚಾರ್ಯರು ಬಲ್ಲರು. ಅವರು ನವ್ಯರೂ ಅಲ್ಲ ಅನವ್ಯರೂ ಅಲ್ಲ – ಅಭಿನವ್ಯರು, ಅಭಿಜಾತನವ್ಯರು – ಎಂದು ನನಗನ್ನಿಸಿದೆ.

ಆಚಾರ್ಯರ ಪತ್ನೀಪುತ್ರಪುತ್ರಿಯರೂ ಭಾರತೀಯ ಸಂಸ್ಕೃತಿಯ ಸದಾಚಾರವನ್ನು ಚೆನ್ನಾಗಿ ಪಾಲಿಸುತ್ತ ಬಂದವರು. ಆಚಾರ್ಯರ ಪೂರ್ವೋಕ್ತ ವೃತ್ತಿಭ್ರಾತೃತ್ವ ದ್ವಯವೂ

ಗುಣಾಃ ಪೂಜಾಸ್ಥಾನಂ ಗುಣಿಷು ನ ಚ ಲಿಂಗಂ ನ ಚ ವಯಃ ಎಂಬುದನ್ನೂ ಅಕೃತ್ವಾ ಪರಸಂತಾಪಂ ಅಗತ್ವಾ ನಮ್ರತಾಂ। ಅನುತ್ಸೃಜ್ಯ ಸತಾಂ ಮಾರ್ಗಂ ಯತ್ ಸ್ವಲ್ಪಮಪಿ ತದ್ ಬಹು ಎಂಬುದನ್ನೂ ಪಾಲಿಸುವ ಜೀವನ ಸಿದ್ಧಾಂತವನ್ನು ಅವರಂತೆಯೇ ಪಾಲಿಸುತ್ತ ಬರಲು ಅವರ ಪ್ರೇರಕತ್ವ ಕೆಲಮಟ್ಟಿಗೆ ಕಾರಣ. ಆದುದರಿಂದ ಅವರ ಮೇಲ್ಪಂಕ್ತಿ ಇಂದಿನ ಲೇಖಕರಿಗೂ ಕವಿಗಳಿಗೂ ವಿಮರ್ಶಕರಿಗೂ ಪ್ರತಿಕೋದ್ಯೋಗಿಗಳಿಗೂ ಅನುಕರಣೀಯವಾಗಿದೆ – ಎಂದು ನಾನು ಧೈರ್ಯವಾಗಿ ಹೇಳಬಲ್ಲೆ. ಅವರಿಗೆ ಜಗನ್ನಿಯಾಮಕನು ಆಯುರಾರೋಗ್ಯ ಐಶ್ವರ್ಯಗಳನ್ನು ಕೊಟ್ಟು ಇನ್ನು ಮುಂದೆಯೂ ಯುವಜನಾಂಗಕ್ಕೆ ಮತ್ತು ಅವರ ಸಮವಯಸ್ಕರಿಗೆ ಸ್ಫೂರ್ತಿದಾತರಾಗಿ ಬದುಕಲಿ ಎಂಬುದು ನನ್ನ ಹೃತ್ಪೂರ್ವಕವಾದ ಹಾರಯಿಕೆ. ಅದರಿಂದ ಜಾತ್ಯಂಧರ ಜಾತೀಯತಾ ನಿರ್ಮೂಲನದ ಕಪಟ ಪ್ರಚಾರ, ಸಮಾಜವಾದೀಯ ಸಮಾಜ ರಚನೆಯ ಬಗೆಗೆ ಗಳಹುವ ಗೋಮುಖವ್ಯಾಘ್ರತ್ವ, ಮತ್ಸರ ದ್ವೇಷ ಔದ್ಧತ್ಯ ಧಾರ್ಷ್ಟ್ಯಗಳಿಂದ ಗುಣಿಗಳನ್ನೂ ಜ್ಞಾನಿಗಳನ್ನೂ ಮೂಲೆಗೊತ್ತಿ ಅವರ ಸೇವೆ ದೇಶಕ್ಕೂ ಸಮಾಜಕ್ಕೂ ದೊರಕದಂತೆ ಮಾಡುವ ದುರಭಿರುಚಿಸಂಪನ್ನತೆ ಕಡಿಮೆಯಾದೀತೆಂದು ನನ್ನ ನಮ್ರ ಪ್ರತ್ಯಾಶೆ. ಕನ್ನಡ ಮಾತೆ ಈ ನನ್ನ ಕನಸನ್ನು ನನಸನ್ನಾಗಿಸಲಿ!



**[ಶ್ರೀ ಪಾಡಿಗಾರು ವೆಂಕಟರಮಣ ಆಚಾರ್ಯ ಸನ್ಮಾನ ಸಂಚಿಕೆ ೧೯೭೭]**

# ೪೯. ನಾ ಕಂಡ ದಿವಾಕರರು

ವ್ಯಕ್ತಿಗಿಂತ ತತ್ವ ಹೆಚ್ಚಿನದು ಎಂಬ ಮಾತು ದಿಟ. ಆದರೆ ತತ್ವದ ಅನುಭವ ನಮಗೆ ತಿಳಿದು ಬರುವುದು ವ್ಯಕ್ತಿಯ ವರ್ತನೆಯ ಮೂಲಕ. ಮನೋವಾಕ್ಕಾಯ ಕರ್ಮಗಳು ಮಾನವನ ವ್ಯಕ್ತಿತ್ವವನ್ನು ಹೊರಗೆಡಹುವ ಕನ್ನಡಿಗಳು. ಅವುಗಳಲ್ಲಿ ಕೊನೆಯದಾದ ಕರ್ಮವೆಂಬುದು ಮಂದಿಯ ದೃಷ್ಟಿಯಿಂದ ಅತಿ ಪ್ರಬಲವಾದ ಪರತಃಪ್ರಮಾಣ. ಕಾರ್ಯ ಅಥವಾ ನಡತೆಯಲ್ಲಿ ಪ್ರತ್ಯಕ್ಷಕ್ಕೆ ಬಾರದಿರುವ ಗುಣ ಮಿಕ್ಕ ಮೂರು ಕನ್ನಡಿಗಳು (ಹೊರಗಿನವರಿಗೆ ಒಬ್ಬನ ಮನವನ್ನೋದಲು ಬರದಿರುವುದರಿಂದ) ಅಥವಾ ಎರಡು ಕನ್ನಡಿಗಳಿಂದ ಎಷ್ಟೇ ಸ್ಫುಟವಾಗಿ ಹೊಳೆದರೂ ನಾಲ್ಕನೆಯದರ ಸಾಕ್ಷಿ ದೊರೆತ ಹೊರತೂ ಮನುಷ್ಯನ ಯೋಗ್ಯತೆಯ ಬಗ್ಗೆ ಇರುವ ಇತರರ ನಂಬಿಗೆ ದೃಢವಾಗಲಾರದು.

ಹಾಗೆಯೇ ನರಸ್ತುತಿಯನ್ನು ಅಥವಾ Hero Worshipನ್ನು ಮಾಡಲಾಗದೆಂದು ಹಿಂದಿನ ಹಾಗೂ ಇಂದಿನ ಹಿರಿಯರು ಹೇಳಿದ್ದುಂಟು, ನಿಜ. ಪರಸ್ಪರ ಪ್ರಶಂಸಾತ್ಮಕ ಸಂಘಗಳು ಸರ್ವದಾ ನಿಂದ್ಯ. ಅವುಗಳು ಹೊಗಳುವ ಮತ್ತು ಹೊಗಳಿಸಿಕೊಂಬ ಇಬ್ಬಣದವರಲ್ಲೂ ಇರುವ ನೀತಿಹೀನತೆಯನ್ನು ಹೊರಗೆಡಹುತ್ತವೆ. ಆದರೆ ಹತ್ತು ಜನರ ಹಿತಕ್ಕಾಗಿ ದುಡಿಯಲು ಸೊಂಟಕಟ್ಟಿ ನಿಂತ ವ್ಯಕ್ತಿಯೊಬ್ಬನು ಎಷ್ಟೇ ನಿಸ್ಪೃಹನಾದರೂ ಸ್ವಗುಣ ವರ್ಣನೆಯನ್ನಪೇಕ್ಷಿಸುವ ಚಾಪಲ್ಯವಿಲ್ಲದವನಾದರೂ (ಹಾಗಿರುವವನೇ ಸರ್ವಪೂಜ್ಯನೆಂಬುದು ಸ್ಪಷ್ಟವೇ ಇದೆ) ಆತನ ಕೃತಿಯನ್ನು ಮಾನ್ಯ ಮಾಡಿ, ಕೃತಜ್ಞತೆಯನ್ನು ಸಲ್ಲಿಸುವುದು ಸಮಾಜದ ಆತ್ಮೋದ್ಧಾರಕ್ಕೆ ಅಗತ್ಯವಾದ ಧರ್ಮ. ಅದೇ ಪ್ರಕಾರ ಅಯೋಗ್ಯರನ್ನು ಅಯೋಗ್ಯರೆಂದು ಸಾರುವುದೂ ಸಮಾಜದ ಆರೋಗ್ಯ ಉಳಿಯಲು ಅಗತ್ಯವಾದ ಕರ್ತವ್ಯ. ಈ ಇಮ್ಮೊಗದ Social Virtue ಸಾಮಾಜಿಕ ಧರ್ಮವನ್ನು ಆಚರಣೆಯಲ್ಲಿಟ್ಟುಕೊಂಡಾಗ ಮಾತ್ರ ಪೂಜ್ಯ ಪೂಜಾವ್ಯತಿಕ್ರಮ ಮತ್ತು ಅಪಾತ್ರ ಪೂಜೆ ಎಂಬ ಸಾಮಾಜಿಕ ದುರಾಚಾರ ನಿಲ್ಲುತ್ತದೆ. ಇಂಥ ಧೀರಪ್ರವೃತ್ತಿಯುಳ್ಳವರೇ ನಿಜವಾದ ವಿವೇಕಸಂಪನ್ನ ದೇಶಭಕ್ತರು.

ನನ್ನ ವಿದ್ಯಾರ್ಥಿ ದಶೆಯಲ್ಲಿ ಮಾನ್ಯ ದಿವಾಕರರು ಮೊದಲು ಪರಿಚಿತರಾದುದು ಅವರ 'ಉಪನಿಷತ್ಪ್ರಕಾಶ' ಮುಂತಾದ ವಿಚಾರಪ್ರಚೋದಕವಾದ ತಿಳಿವೊತ್ತಗೆಗಳಿಂದ. ಅವರನ್ನಾಗ ದೂರದಿಂದ ಕಂಡಿದ್ದೆ. ಅವರ ತ್ಯಾಗವೀರ ಜೀವನದ ಕತೆಯನ್ನು ಗೆಳೆಯರಿಂದ ಕೇಳಿದ್ದೆ; 'ಕರ್ನಾಟಕದ ಗಾಂಧಿ' ಎಂದು ಕೂಡ ಅವರನ್ನು ಕರೆದದ್ದು ನನ್ನ ಕಿವಿಯನ್ನು ಮುಟ್ಟಿತ್ತು. ಸತ್ಯಾಗ್ರಹ ಚಳವಳಿಯಲ್ಲಿ ಮಹಾಧ್ವರ್ಯುಗಳಾಗಿ ದುಡಿದ ಅವರ ನಿರಹಂಕಾರ ಮುಖ ಆಕರ್ಷಕವಾಗಿತ್ತು. ಆ ಸಂತತನದ ಮುಖಮುದ್ರೆ ಆಗಲೇ ಅವರಲ್ಲಿ ಮೂಡಿತ್ತು.

ಅನಂತರ ಕೆಲವರ್ಷಗಳು ಕಳೆದವು. ೧೯೪೦ರ ಬಳಿಕ ಹುಬ್ಬಳ್ಳಿಯಲ್ಲಿದ್ದ ಅವರ ಅಧ್ಯಾತ್ಮ ಕಾರ್ಯಾಲಯವನ್ನು ಪ್ರವೇಶಿಸುವ ಸುಯೋಗವೊಮ್ಮೆ ಶ್ರೀ ಮೊಹರೆ ಹನುಮಂತರಾಯದ ದಯದಿಂದ ದೊರಕಿತು. ಅವರದೇ ಆದ 'ಕರ್ಮವೀರ'ವೆಂಬ ವಾರಪತ್ರಿಕೆಯ ಸಂಪಾದಕರ ಬಳಗದಲ್ಲಿ ಸೇರಿದೆ. ಮೊದಲನೆಯ ದಿನವೇ ಶ್ರೀ ದಿವಾಕರರ ಭೆಟ್ಟಿ ಅವರ ಖೋಲಿಯಲ್ಲಾಯ್ತು. ದೇಶೀಯ ಉಡುಪಿನಲ್ಲಿ ದೇಶಿಯ ಬೈಠಕ್ ವ್ಯವಸ್ಥೆಯಲ್ಲಿ 'ಸಾದಾ' ಆಗಿ ಕುಳಿತಿದ್ದ ಅವರನ್ನು ವಂದಿಸಿ ಕುಳಿತೆ. ಅನಂತರ ಮರುಕ್ಷಣದಲ್ಲಿ ಅವರ ಆತ್ಮೀಯ ಸರಳ ಮಾತುಕತೆ ಕೇಳಿದೆ. ನಮ್ಮ ದೇಶದ ರಾಜಕೀಯ ಧೋರಣೆ ಮುಂತಾದ ವಿವಿಧ ವಿಷಯಗಳು ಹಾಯ್ದು ಹೋದವು. ಸ್ವಾತಂತ್ರ್ಯ ಸಮರದಲ್ಲಿ ಅವರ ಕರ್ಮವೀರತ್ವವನ್ನು ಪ್ರಕಟಿಸಿದ 'ಕರ್ಮವೀರ'ದ ಕಾರ್ಯ ನನಗೆ ಅಚ್ಚುಮೆಚ್ಚಿನದೆನಿಸಿತು. ಆಗೀಗ ಅವರ ಮಿತ್ರ ಸಂಮಿತಿಯ ಸಲಹೆ, ಸೂಚನೆಗಳು ದೊರಕುತ್ತಿದ್ದವು. ಆ ವ್ಯವಹಾರದಲ್ಲಿ ಅವರು ಇತರರನ್ನು ನಡೆಸಿಕೊಂಬ ಸರಳತನ, ಸಾದಾತನ, ಸಹಾನುಭೂತಿಪರತೆ, ನಿರಾಗ್ರಹ ಬುದ್ಧಿ, ಅನುಭವ ವೈಶಾಲ್ಯ, ವಿಚಾರವಿನಿಮಯಶೀಲ ಇವು ನನಗೆ ಚೆನ್ನಾಗಿ ಪರಿಚಿತವಾದವು. ಅನ್ಯರ ಸುಖದುಃಖ, ಹಿತಾಹಿತಗಳನ್ನು ಚಿಂತಿಸಿ ಯಥಾಶಕ್ತಿ ಪರಾನುಕೂಲವನ್ನು ಕಲ್ಪಿಸುವ ಅವರ ಮನೀಷೆ ಪ್ರತಿಯೊಂದು ಚಿಕ್ಕಪುಟ್ಟ ಸಂದರ್ಭದಲ್ಲೂ ವ್ಯಕ್ತವಾಗುತ್ತಿತ್ತು.

ಆ ಬಳಿಕ ದಿವಾಕರರು ಕೇಂದ್ರದಲ್ಲಿ ಸುದ್ದಿ ಮತ್ತು ಆಕಾಶವಾಣಿ ಇಲಾಖೆಯ ಮಂತ್ರಿಗಳಾಗಿ ದಿಲ್ಲಿಗೆ ತೆರಳಿದರು. ಅಲ್ಲಿಂದಲೇ ನಮ್ಮ ಪತ್ರಿಕೆಗೆ ಸಂಬಂಧಿಸಿದ ಸಲಹೆ, ಸೂಚನೆ, ವಿಚಾರ ಸ್ವೀಕಾರ ಸಾಗುತ್ತಿದ್ದವು. ಪತ್ರಿಕೆಗಳ ಮಟ್ಟವನ್ನು ಕಾಯ್ದು ಕೊಂಬ ಬಗ್ಗೆ ಅವರ ಪ್ರಕಾರ ಕೆಳತರಗತಿಯ ಕತೆಗಳನ್ನು, ವಾರ ಭವಿಷ್ಯವನ್ನು ಪ್ರಕಟಿಸಕೂಡದು; ನಿಷ್ಪಕ್ಷಪಾತವಾಗಿ ಸತ್ಯಸಂಗತಿಗಳನ್ನು ಅತಿಶಯೋಕ್ತಿಗಳಿಗೆಡೆಗೊಡದೆ ಬರೆಯಬೇಕು; ವ್ಯವಹಾರೋಪಯೋಗಿಯಾದ ವೈಜ್ಞಾನಿಕ ಅಂಶಗಳನ್ನು ಸಾಮಾನ್ಯರಲ್ಲಿ ಪ್ರಸರಿಸಬೇಕು; ಸರ್ವರ ಅಭ್ಯುದಯದ ದರ್ಶನ ಬರೆವಣಿಗೆಯ ಹಿನ್ನೆಲೆಯಲ್ಲಿರಬೇಕು; ಲೋಕ ಶಿಕ್ಷಣದ ಇತರ ಅಂಗಗಳಾದ ಶಿಲ್ಪ, ಇತಿಹಾಸ, ರಾಜಕಾರಣ ಮುಂತಾದ ಇತರ ವಿಷಯಗಳಲ್ಲಾದರೂ ಉನ್ನತಮಟ್ಟದ, ಹಿತ–ಮಿತ–ಮೃದು ಶೈಲಿಯ ಬರಹಗಳು ಪ್ರಕಟವಾಗಬೇಕು.

ಕೆಲ ಚಿಕ್ಕ ಪ್ರಕರಣಗಳಿಂದ ದೊಡ್ಡ ವ್ಯಕ್ತಿಯ ಸ್ವಭಾವದ ಮೇಲೆ ಬೆಳಕು ಬೀಳುವುದುಂಟು. ಅಂಥ ಕೆಲ ಸಂಗತಿಗಳು ನನ್ನ ನಿದರ್ಶನಕ್ಕೆ ಬಂದಿವೆ. ಅವರ ಏಕಮಾತ್ರ ಪುತ್ರ 'ಅನಂತಬಾಬು' (ಚಿಕ್ಕಂದಿನಲ್ಲಿ) ಕಮ್ಯುನಿಸ್ಟ್ ಸಾಹಿತ್ಯವನ್ನು ಸಂಗ್ರಹಿಸಿಕೊಂಡು ಕೆಲ ಗೆಳೆಯರ ಜೊತೆಗೆ ಅದನ್ನು ಅಭ್ಯಸಿಸುತ್ತಿದ್ದನೆಂಬ ಸುದ್ದಿ ತಂದೆಗೆ ತಿಳಿಯಿತು. ಆದರೆ ಆ ಬಗ್ಗೆ ಅವರು ಮಗನಿಗೆ ಯಾವ ಬುದ್ಧಿವಾದವನ್ನು ಹೇಳ ಹೋಗಲಿಲ್ಲ. ಜ್ಞಾನಾರ್ಥಿಯಾಗಿ ಓದುವ ಕಾರ್ಯಕ್ಕೆ ವಿಘ್ನ ತರುವುದು ಶಿಕ್ಷಣದ ಲಕ್ಷಣವಲ್ಲ. ವಿವಿಧಾಭಿಪ್ರಾಯಗಳನ್ನು ಅವಲೋಕಿಸಿದ ಅನಂತರ ವ್ಯಕ್ತಿ ಸ್ವತಃ

ಯುಕ್ತಾಯುಕ್ತವನ್ನು ನಿರ್ಣಯಿಸಬೇಕು, ಸತ್ಯಾಸತ್ಯವನ್ನು ಪರಾಮರ್ಶಿಸಬೇಕು.

ಮಂತ್ರಿತ್ವದಲ್ಲಿದ್ದಾಗಲೇ ದಿಲ್ಲಿಯಿಂದ ಮೊದಲ ಬಾರಿಗೆ ಹುಬ್ಬಳ್ಳಿಗೆ ದಿವಾಕರರು ಆಗಮಿಸಿದರು. 'ಸಂಯುಕ್ತ ಕರ್ನಾಟಕ' ಕಾರ್ಯಾಲಯದ ಒಕ್ಕಡೆಯಲ್ಲೇ ಅವರ ಖಾಸಗಿ ಕೋಣೆಯಿತ್ತು. ಅದು ಯಥಾಪೂರ್ವ ಜಮಖಾನ ದಿಂಬುಗಳಿಂದ ಅಲಂಕೃತವಾಗಿತ್ತು; ಅಲ್ಲಿ ಯಾವ ಪಾಶ್ಚಾತ್ಯ ಆಧುನಿಕತೆಯೂ ಕಾಣಿಸದು. ಕಾರ್ಯಕರ್ತರನ್ನು ದಿವಾಕರರು ಸಹೋದರ ಪ್ರೇಮದಿಂದ ಕಂಡು ಮಾತಾಡಿದಾಗ ಎಷ್ಟೋ ಜನ ಸಂತಸದಿಂದ ಕಂಬನಿ ದುಂಬಿತ್ತು. ಅವರು ದಿಲ್ಲಿಯಲ್ಲಿರುವುದರ ಬದಲು ಹುಬ್ಬಳ್ಳಿಯಲ್ಲೇ ಹಿರಿಯಣ್ಣನಂತೆ ನಿತ್ಯವೂ ತಮ್ಮೊಡನಿದ್ದರೆ ಎಷ್ಟು ಚೆನ್ನಾಗುತ್ತಿತ್ತೆಂದು ಎಷ್ಟೋ ಕೆಲಸಗಾರರಿಗೆ ಅನಿಸಿತ್ತು; ಆದರೆ ದೆಲ್ಲಿಯಲ್ಲಿದ್ದು ಇವರು ಇನ್ನೂ (ಅಸಂಖ್ಯ) ಹೆಚ್ಚು ಜನರ ಹಿತವನ್ನು ಸಾಧಿಸುತ್ತಿದ್ದರೆಂದು ನೆನೆದು ಸಮಾಧಾನ ತಾಳಿದರು. ನವರಾತ್ರಿಯ ಸಮಯದಲ್ಲಿ ಅವರು ಸ್ವಹಸ್ತದಿಂದ ಖಾದಿ ಸಮವಸ್ತ್ರವನ್ನು ಕಾರ್ಯಾಲಯದ ಕೆಲಸಗಾರರಿಗೆ ಪ್ರೀತಿ ಪ್ರತೀಕವಾಗಿ ಕೊಡುತ್ತಿದ್ದುದನ್ನು ಈಗಲೂ ನೆನೆದುಕೊಳ್ಳುತ್ತಾರೆ "ಸಂಯುಕ್ತ ಕರ್ನಾಟಕ"ದ ಉದ್ಯೋಗಸ್ಥರು. ಸ್ವಾಮಿ-ಭೃತ್ಯ ಭಾವವನ್ನು ಎಲ್ಲೂ ತೋರಗೊಡದೆ ಮಿತ್ರತ್ವ ಸಹೋದರತ್ವಗಳಿಂದ ನೌಕರರನ್ನು ನಡೆಸಿಕೊಂಬ ಪ್ರಜಾಪ್ರಭುತ್ವ – ಸಹಜವಾದ ನೀತಿಯನ್ನು ಅವರಿಂದ ಕಲಿತುಕೊಳ್ಳಬೇಕು. ಆದುದರಿಂದ ರಾಜ್ಯಪಾಲರಾಗಿರುವ ಅವರು ನಿವೃತ್ತರಾದ ಮೇಲಾದರೂ ಪುನಃ ತಮ್ಮ ಪತ್ರಿಕಾಲಯಕ್ಕೆ ಬಂದು ಉತ್ಸಾಹವರ್ಧಕ ಶಕ್ತಿಯಾಗಿ ನವೋದಯಕ್ಕೆ ಕಾರಣರಾದಾರೆಂದು ಎಷ್ಟೋ ಜನ ಹಾರಯಿಸುತ್ತಿದ್ದರೆ ಆಶ್ಚರ್ಯವಲ್ಲ.

ಒಮ್ಮೆ ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದಾಗ ಜೊತೆಯ ಪಯಣಿಗ ಬಾಟಲಿಯನ್ನು ಬಾಯಿಗೆ ಎತ್ತಿದ್ದನ್ನು ದಿವಾಕರರು ಕಂಡರು. ಕೂಡಲೆ ಅವರು ಬಾಟಲಿಯನ್ನು ಅವನ ಕೈಯಿಂದ ಕಸಿದು ಹೊರಗೆಸೆದು ಬಿಟ್ಟರು! ಆ ಶ್ರೀಮಂತನು ಮಾತಾಡದೆ ಕುಳಿತ ದಿವಾಕರರನ್ನು ಕಂಡು ಕಕ್ಕುಬೆಕ್ಕಾದನು. ಕೆಲವೇಳೆಯ ಬಳಿಕ ಅವರನ್ನೇ ನೀವಾರೆಂದು ಕೇಳಿ ತಿಳಿದ ಕೂಡಲೆ ಕೃತಜ್ಞತಾಭಾರದಿಂದ ಅಂದಿನಿಂದ ತಾನು ಆ ಚಟವನ್ನು ಬಿಡುವುದಾಗಿ ಪ್ರತಿಜ್ಞೆ ಮಾಡಿದನು. ಭಾರತದ ಪ್ರತಿಪ್ರಜೆಯೂ ಇಂಥ ಧೀರ ಹಾಗೂ ನೇರ ಸಾಮಾಜಿಕ ಕರ್ತವ್ಯಪರತೆಯನ್ನು ಬೆಳೆಸಿಕೊಂಡಲ್ಲದೆ ಸದ್ಯದ ಅಧಃಪತಿತ ಪರಿಸ್ಥಿತಿ ನಿವಾರಣೆಯಾಗಲಾರದು. 'ನಮಗೇಕೆ ಬೇಕು? ನಾವು ಅಂಥ ಕೆಲಸವನ್ನು ಮಾಡದಿದ್ದರೆ ಸರಿ' ಎಂಬ ಸಜ್ಜನಿಕೆ ವೈಯಕ್ತಿಕವಲ್ಲದೆ ಸಾಮಾಜಿಕವಲ್ಲ. ಯಾವ ವ್ಯಕ್ತಿಯೂ ಅಸಾಮಾಜಿಕನಲ್ಲವಾದ್ದರಿಂದ ಅವನು ತನ್ನ ವೈಯಕ್ತಿಕ Harmlessness ಅಹಿಂಸೆಯಷ್ಟನ್ನೇ ನಡೆಸಿಕೊಂಡಿದ್ದರೆ ಸಾಲದು; ಅದರ ಗಡಿಯಿಂದ ಮುಂದೆ ಹೋಗಿ Positive virtue ವಿಧ್ಯಾತ್ಮಕ ಧರ್ಮವನ್ನೂ ಸಮಷ್ಟಿ ದೃಷ್ಟಿಯಿಂದ ಅಳವಡಿಸಿಕೊಳ್ಳಬೇಕು. ರಾಷ್ಟ್ರ ರಚನಾ ಕಾರ್ಯ ಆಗ ಮಾತ್ರ ವೇಗದಿಂದ ಸಾಗುವಂತಾಗುವುದು.

ಇನ್ನೊಮ್ಮೆ ಕೋರ್ಟಿನಲ್ಲಿ ದಿವಾಕರರು ಸಾಕ್ಷಿಗೆ ನಿಂತಾಗ ನ್ಯಾಯಾಧೀಶರು ಹೆಸರನ್ನು ಕೇಳಿದ ಬಳಿಕ ಜಾತಿಯನ್ನೂ ಕೇಳಿದರು. ಅದಕ್ಕೆ ಉತ್ತರವಾಗಿ ಅವರು "ನಾನೊಬ್ಬ ಸ್ವತಂತ್ರ ಭಾರತದ ಪ್ರಜೆ" ಎಂದಿಷ್ಟೇ ಹೇಳಿದರು. ನ್ಯಾಯಾಧೀಶರು ಮತ್ತೆ ಮತ್ತೆ ಕೇಳಿದರೂ ಅವರಿಗೆ ಸಿಕ್ಕಿದ್ದು ಅದೇ ಉತ್ತರ! ರಾಷ್ಟ್ರ ಧರ್ಮಪಾಲನೆಯ ಈ ನೀತಿಯನ್ನು ಎದುರಿಸಲಾರದೆ ನ್ಯಾಯಾಸನ ನ್ಯಾಯವೆಂದು ಸುಮ್ಮನಾಗಬೇಕಾಯಿತು. ನಿಷ್ಠೆಯಲ್ಲಿ ನೈಷ್ಠುರ್ಯವಿದೆ; ಅದೇ ಮಹಾ ಸತ್ವಸಂಪನ್ನತೆ. ರಾಷ್ಟ್ರಧರ್ಮದ ಇಂಥ ನಿಷ್ಠೆ ಎಲ್ಲರಲ್ಲೂ ನೆಲೆ ನಿಲ್ಲಬೇಕಾಗಿದೆ. 'ಆಚಾರಃ ಪರಮೋಧರ್ಮಃ' ಎಂದರೆ ಇದು ಇಂಥ ನಡತೆ. ಕೆಲಕಾಲದ ಹಿಂದೆ ಆಚಾರವು ಪುರಾಣದೊಳಗಿನ ಬದನೆಯಕಾಯಿಯಾಗಿದ್ದಂತೆ ಈಗ ಅದು ವಿಜ್ಞಾನ ಹಾಗೂ ತಜ್ಞತೆಗಳೆಂಬ ಹೊಸ ಪುರಾಣಗಳೊಳಗಿನ (ಬದನೆಯಲ್ಲದಿದ್ದರೆ) ಬಟಾಟೆಯಾಗಿದೆ. ಈ ಪರೋಪದೇಶ ಪಾಂಡಿತ್ಯದ ಕಣ್ಣು ತೆರೆಯಿಸಲು ಆಚಾರಶೀಲರು ಎದುರು ಬರಬೇಕು. ಇಲ್ಲವಾದರೆ ದೇಶದಲ್ಲಿಯ ಎಲ್ಲ ಯೋಜನೆಗಳೂ ಪ್ರಚಾರ ಯೋಜನೆಗಳಾದಾವು, ಎಲ್ಲ ಕೃತಿಗಳೂ ಪ್ರಚಾರ ಸಂಸ್ಕೃತಿಗೆ ನಿದರ್ಶನಗಳಾದಾವು; 'ಪ್ರಚಾರಃ ಪರಮೋ ಧರ್ಮಃ' ಎಂಬ ತಿದ್ದುಪಡಿಯನ್ನು ಮಾಡಬೇಕಾದೀತು.

ಯಾವ ನರನೂ 'ನಿರ್ದೋಷಾಶೇಷ ಸದ್ಗುಣ' ನೆನ್ನಿಸಿಕೊಳ್ಳಲಾರ. ಹಾಗೆ ತಮ್ಮಲ್ಲಿ ಆ, ಈ ದೋಷ ದೌರ್ಬಲ್ಯಗಳಿರುವುದು ಅಧ್ಯಾತ್ಮಕ ಸಾಧಕರಾದ ದಿವಾಕರರಿಗೇ ಮಿಕ್ಕವರಿಗಿಂತ ಸ್ಪಷ್ಟವಾಗಿಯೂ ದೃಢವಾಗಿಯೂ ಗೊತ್ತಿರಬಹುದು. ಮಹಾತ್ಮಾ ಗಾಂಧಿಯವರು ಮಹಾತ್ಮರೆಂದು ಜನಕ್ಕೆ ತೋರಿದ್ದು ಅವರ ಸ್ವದೋಷ–ಜ್ಞಾನ, ಸ್ವದೋಷೋದ್ಘಾಟನೆ, ದೋಷ ನಿವಾರಣ ಪ್ರಾಯಶ್ಚಿತ್ತ ಮುಂತಾದ ತಪಸ್ವಿವರ್ತನೆಗಳಿಂದಲೇ ಅಲ್ಲವೆ? 'ವಿದ್ವಾನ್ ವಿಪಶ್ಚಿತ್ ದೋಷಜ್ಞಃ' ಎಂಬ ಸಾಲಿನಲ್ಲಿ ಬರುವ ದೋಷಜ್ಞತೆ ಇಂದು ಕೇವಲ ಪರರಲ್ಲಿ ದೋಷಾರೋಪ ಮಾಡುವ ಕುಯುಕ್ತಿಯಾಗಿ ಕಂಡು ಬರುತ್ತಿರುವುದು ರಾಷ್ಟ್ರದ ಸಾರ್ವಾಂಗಿಕ ದೌರ್ಬಲ್ಯಕ್ಕೆ ಕಾರಣ. ಇಂಥ ಲಕ್ಷಣಕ್ಕೆ ದಿವಾಕರರು ಖಂಡಿತವಾಗಿಯೂ ಒಂದು ದೊಡ್ಡ ಅಪವಾದ. ಸ್ವದೋಷಜ್ಞತೆಯಲ್ಲಿ ಮೇಲ್ಮಟ್ಟವನ್ನು ಮುಟ್ಟಿದವನು ಮಾತ್ರ ಪರರಲ್ಲಿ ನಿಜವಾಗಿಯೂ ದೋಷವಿದ್ದರೆ ಅದೆಷ್ಟಿದೆಯೋ ಅಷ್ಟನ್ನು ಮಾತ್ರ ಕಾಣಲು ಸಮರ್ಥ.

ನಮಗೆ ಸಾಮಾನ್ಯವಾಗಿ ಮೆಚ್ಚುಗೆಗೆ ಪಾತ್ರರಾದ ಹಲಕೆಲ ವ್ಯಕ್ತಿಗಳಲ್ಲಿ Positive wickedness ವಿಧ್ಯಾತ್ಮಕ ದೌರ್ಜನ್ಯವಿಲ್ಲವಾದರೂ Positive goodness or dutifulness ವಿಧ್ಯಾತ್ಮಕ ಸದ್ಗುಣ ಸಂಪನ್ನತೆ ಅಥವಾ ಕರ್ತವ್ಯಪರತೆ ಆಯಕಟ್ಟಿನ ಸಂದರ್ಭದಲ್ಲಿ ಆಚರಣೆಯಲ್ಲಿ ಕಾಣದಾದಾಗ ಎಷ್ಟೋ ಬಾರಿ ತಳಮಳಿಸುವಂತಾಗುತ್ತದೆ. "The thing we in India have to think of this - to remove those social customs and ideals which have generated a want of self respect and a complete dependence on those above us - ಭಾರತದಲ್ಲಿಯ ನಾವು ವಿಚಾರಿಸಬೇಕಾದ

ಅಂಶವಿದು: ಸ್ವಾಭಿಮಾನ ಶೂನ್ಯತೆಯನ್ನೂ ಮೇಲಿನವರ ಮೇಲೆ ಎಲ್ಲ ಹೊಣೆಯನ್ನೂ ಹಾಕಿ ಕುಳಿತುಕೊಂಬುದನ್ನೂ ಹುಟ್ಟಿಸಿದ ಸಾಮಾಜಿಕ ಪದ್ಧತಿಗಳನ್ನೂ ಆದರ್ಶಗಳನ್ನೂ ಕಿತ್ತೊಗೆಯುವುದೇ ಆಗಿದೆ" ಎಂದ ರವೀಂದ್ರರು ನಮ್ಮ ವಿದ್ಯಾವಂತರ ಹೃದಯದ ಲಕ್ಷಣವನ್ನೇ ಸಾರಿದ್ದಾರೆ. 'ನಾಹಂ ಕರ್ತಾ ಹರಿಃ ಕರ್ತಾ' ಎಂಬ ಉಚ್ಚಧ್ಯೇಯದ ವಿಕಟ ವ್ಯಾಖ್ಯೆಯಂತಿರುವ ಈ ಪರಾವಲಂಬಿ ಮನೋಧರ್ಮ ತುಂಬಿದ ಉದ್ಯೋಗಿಗಳ ಭೀರುತ್ವದಿಂದಲೇ ನಾಡನೀತಿ ಅಧಃಪತಿತವಾದದ್ದು; ದ್ವೇಷ, ಅಸೂಯೆ, ಲಂಚವಂಚನೆಗಳು ಎಲ್ಲೆಲ್ಲೂ ಹರಡುತ್ತ ಬಂದದ್ದು. ಬರಿದೆ ವೀರಚರಿತ್ರೆಯನ್ನು ಓದಿ ಮರೆತವರಂತಿಲ್ಲ ಶ್ರೀ ದಿವಾಕರರು. ಧೀರ, ಸರಳಭಾವದ ಅಂಥ ವ್ಯಕ್ತಿಗಳ ಸಹಚರರಾಗಿ, ಸಹೋದ್ಯೋಗಿಗಳಾಗಿ, ಕಾರ್ಯ ನಿರ್ವಾಹಕರಾಗಿ ಬಾಳಿದವರ ಅಂತಃಕರಣಕ್ಕೆ ಮಾತ್ರ ಸತ್ಯಾಗ್ರಹ ಮನೋಧರ್ಮದ ವೀರರಸ ರಸ್ಯಮಾನವಾದೀತು. ನಿಜ ಸತ್ಯಾಗ್ರಹಿಗಳ ನಿತ್ಯಚರ್ಯೆ ದಿವಾಕರರಲ್ಲಿ ಎದ್ದು ಕಾಣುವುದು ಸುವೇದ್ಯ; ಅವರ ವ್ಯಕ್ತಿ ಶೀಲವೇ ಆ ರೀತಿಯಲ್ಲಿ ಬಹಳ ಕಾಲ ಪಳಗಿದ್ದರಿಂದ ಸ್ವಾಭಿಮಾನ, ಸ್ವಾವಲಂಬನ, ಅವಕ್ರ ಆಚಾರ ಅವರಿಗೆ ಸಾಧಿಸಿತು. ನಮ್ಮ ದೇಶದ ಆಡಳಿತಗಾರರಲ್ಲಿ ಎಷ್ಟೋ ಮಂದಿ ಈ ನಿಯಮಕ್ಕೆ ಅಪವಾದಗಳಾಗಿರುವುದು ದುರ್ದೈವ.

ದಿವಾಕರರ ಸತತೋದ್ಯಮ ಪ್ರವೃತ್ತಿಗೆ ಅವರು ಮಂತ್ರಿ–ರಾಜ್ಯಪಾಲ ಪದವಿಗಳಲ್ಲಿ ಇರುವಾಗಲೇ ಬರೆದು ಪ್ರಕಟಿಸಿದ ಗ್ರಂಥಗಳೇ ಸಾಕ್ಷಿ. ಅನುಕೂಲ ಸಿಕ್ಕಿತೆಂದು ಐಷಾರಾಮವನ್ನು ಹಿಡಿಯುವ ಪ್ರವೃತ್ತಿ ಅವರದಲ್ಲ; ಯಥಾ ಶಕ್ತಿ, ಯಥಾ ಸಂದರ್ಭ ಕೆಲಸ ಮಾಡುತ್ತಲೇ ಇರುವುದು ಅವರಿಗೆ ಸಹಜ. ಅವರ ತಿಳಿವಗೆಯಂತೆ ತಿಳಿನಗೆ; ತಿಳಿನಗೆಯಂತೆ ತಿಳಿವಾತು; ತಿಳಿವಾತಿನಂತೆ ತಿಳಿ ನಡೆ. ಅವರು ಕಲ್ಪನಾ ವಿಲಾಸಿಗಳಲ್ಲ; ಕಂಡದ್ದನ್ನು ಉಂಡದ್ದನ್ನು ಮಾತ್ರ ಬರೆವ ಅನುಭವಿ ಪಂಥದವರು. ಅವರ ಆಡಳಿತ ಕಾರ್ಯಗಳಲ್ಲಿ ಬಂಧುವ್ಯಾಮೋಹ ತಲೆಹಾಕಿಲ್ಲ. ಭಾರತದ ಸ್ವಾತಂತ್ರ್ಯಕ್ಕಾಗಿ ಜೀವ ಸವೆಯಿಸಿದ ಅವರು ಸ್ವಾತಂತ್ರ್ಯ ದೊರೆತದ್ದನ್ನು ಕಂಡರು. ತೋಟಿಗನು ಮಳೆ ಬಿಸಿಲಲ್ಲಿ ದುಡಿದು ಬೆಳೆದು ನಿಂತ ತೋಟವನ್ನು ಕಂಡು ಆನಂದಿಸಿದಂತೆ ಆನಂದಪಟ್ಟರು. ಕರ್ನಾಟಕ ಏಕೀಕರಣ ಅವರ ಇನ್ನೊಂದು ಹಂಬಲು. ಈ ಕಾರ್ಯಕ್ಕಾಗಿ ಅವರೂ ಅವರ ಪತ್ರಿಕೆಗಳೂ ಅವಿರತವಾಗಿ ಶ್ರಮಿಸುತ್ತ ಬಂದಿವೆ. ತಾವು ಮಾಡುತ್ತಿದ್ದೇವೆ ಎಂಬ ಅಹಂಭಾವ ಅವರಲ್ಲಿಲ್ಲ. Vanity is the foundation of the vices, of affection and common lying – ದಂಭವು ಎಲ್ಲ ದುರ್ಗುಣಗಳ ಅಡಿಗಲ್ಲು, ಎಲ್ಲ ನಟನೆಗಳ ತಳಪಾಯ ಮತ್ತು ಎಲ್ಲ ನಿತ್ಯ ಸುಳ್ಳುಗಾರಿಕೆಯ ಬುಡ, ಬೀಜ. ಈ ಒಂದೇ ಒಂದು ನಸುಗುನ್ನಿಯಿಂದ ನಾಯಕತ್ವಾಪೇಕ್ಷಿಗಳು ಸಾಮಾನ್ಯರಿಂತಲೂ ಕೀಳುಮಟ್ಟಕ್ಕಿಳಿಯುವರು. ಯಾವ ಕ್ಷೇತ್ರದಲ್ಲೇ ಆಗಲಿ ಈ ಗುಣವುಳ್ಳವರು ಅನುಯಾಯಿಗಳ ಹಿತದ ಹೆಸರಿನಲ್ಲಿ ದುಃಸ್ವಾರ್ಥರೂಪದ ಸ್ವಹಿತವನ್ನು ಮಾನಾವಮಾನಭೇದರಹಿತರಾಗಿ ಸಾಧಿಸಿಕೊಳ್ಳುತ್ತಾರೆ. ದಿವಾಕರರು ಹೆಸರಿಗನ್ವರ್ಥವಾಗಿ ಸ್ವಾತ್ಮಪ್ರಕಾಶದಿಂದ ಈ ದಂಭ ತಮಸ್ಸು ಹತ್ತಿರ ಬರದಂತೆ ಮಾಡಿಕೊಂಡಿದ್ದಾರೆ. Pride is a hidden plague – ಜಂಭವೆಂಬುದು

ಪ್ರಚ್ಛನ್ನವಾದ ಪ್ಲೇಗು ಎಂಬುದನ್ನವರು ಅರಗಿಸಿಕೊಂಡವರು. ಕೈಕೊಂಡ ಕಾರ್ಯ ಫಲಿಸಲು ಕಾಲಾವಧಿ ಹೆಚ್ಚುತ್ತ ಹೋದಾಗಲೂ ಧೈರ್ಯಗುಂದದ ತಾಳ್ಮೆ, ಅವಿಶ್ರಾಂತ ಪ್ರಯತ್ನ ಶೀಲತೆ, ಆತ್ಮಶಕ್ತಿಯಲ್ಲಿ ವಿಶ್ವಾಸ ಮತ್ತು ಸದಾಶಾವಾದಿತ್ವ ಅವರಲ್ಲಿ ಮನೆಮಾಡಿಕೊಂಡಿವೆ.

ನಾಳೆ ಶ್ರೀ ದಿವಾಕರರು ಅಧಿಕಾರಿಕ ಕರ್ತವ್ಯಕ್ಷೇತ್ರದಿಂದ ನಿವೃತ್ತರಾಗಿ ಕರ್ನಾಟಕಕ್ಕೆ ಮರಳುವುದು ಸ್ವಾಭಾವಿಕ. ಅವರ ವಯೋವೃದ್ಧತೆ ಆಗ ಅವರ ಕಾರ್ಯಯೋಜನೆಗೆಂದೂ ದೌರ್ಬಲ್ಯವಾಗಿ, ವಿಘ್ನವಾಗಿ ಪರಿಣಮಿಸದೆಂಬುದು ಅವರನ್ನು ಬಲ್ಲವರೆಲ್ಲರಿಗೂ ಗೊತ್ತು. ಪರಕೀಯ ಸರಕಾರದ ದಬ್ಬಾಳಿಕೆಗಳನ್ನು 'ಅಧ್ಯೈವವಾ ಮರಣಮಸ್ತು' ಎಂಬಂತಹ ದೃಢಪ್ರತಿಜ್ಞೆಯಿಂದ ಎದುರಿಸಿದ ಅವರ ಅಹಿಂಸಾತ್ಮಕ ಸಮರ ಚೈತನ್ಯಕ್ಕೆಂದಾದರೂ ಮುಪ್ಪು ಬರುವುದು ಉಂಟೇ? ಕನ್ನಡ ಸಾಹಿತ್ಯಾಚಾರ್ಯರಾದ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರ 'ಜೀವನ'ವನ್ನು ಅವರ ಸಂಪಾದಕೀಯದಲ್ಲೇ ಕಾಣಬೇಕು ಎಂದು ವಿಮರ್ಶಕರು ಹೇಳಿದ್ದುಂಟು. ಅಂಥ ಹಂಗುಹರಿಯಿಲ್ಲದ ನ್ಯಾಯಪಥ ದಿವಾಕರರಿಗೂ ಹೊಸದಲ್ಲ. ಆ ವೃದ್ಧ ತಾರುಣ್ಯ ದಿವಾಕರರಲ್ಲೂ ಅಳಿಯದಿದೆ. ಆದುದರಿಂದ ಮರಣದ ಮೊದಲ ನಿಮಿಷದವರೆಗೂ ಸಹಜೀವಿಗಳಾದ ರಾಷ್ಟ್ರೀಯದ ಹಿತಕ್ಕಾಗಿ ಶ್ರಮಿಸಿದ ಮಹಾತ್ಮಾ ಗಾಂಧಿಯವರಂತೆ ದಿವಾಕರರಾದರೂ ತಮ್ಮ ಆ ಸಹಜಾತಗುಣದಂತೆ ಕರ್ನಾಟಕಕ್ಕೂ ಭಾರತಕ್ಕೂ ಅನಂತರ ಜಗತ್ತಿಗೂ ಇತೋಪ್ಯತಿಶಯ ಸೇವೆಯನ್ನು ಸಲ್ಲಿಸಿಯಾರೆಂಬುದು ಉಕ್ತಿಯಲ್ಲಷ್ಟೇ ಸಂಭಾವನಾ ರೂಪವಲ್ಲದೆ ಅರ್ಥದಲ್ಲಿ ಆಜ್ಞಾರ್ಥಕವೇ (ಮಾಡಿಯೇ ಮಾಡುತ್ತಾರೆ ಎಂದರ್ಥ).

ಅರುವತ್ತರ ಗಡಿದಾಟಿದ ದಿವಾಕರರು ಅಸ್ತಾಚಲೋನ್ಮುಖ ದಿವಾಕರನಂತೆ ಸರ್ವಥಾ ಇಲ್ಲ. ತದ್ವಿರುದ್ಧವಾಗಿ ವಯಃಪರಿಣತಿಯನ್ನು ಮೀರಿದ ಆತ್ಮ ಪರಿಣತಿ ಅವರ ಚೈತನ್ಯದ ಕಳೆಯನ್ನು ಏರಿಸುತ್ತಿದೆ "ಕ್ಷೀಣಃ ಕ್ಷೀಣೋಽಪಿ ಶಶೀ ಭೂಯೋ ಭೂಯೋ ವಿವರ್ಧತೇ ನಿತ್ಯಂ" ಎಂಬುದಿಲ್ಲಿ ಸಲ್ಲದು; "ಮಂದೋ ಮಂದೋಽಪಿ ರವಿಃ, ಭೂಯೋ ಭೂಯೋ ವಿವರ್ಧತೇ ಕಾಂತಿಃ" ಎಂದೋ "ಕ್ಷೀಣಂ ಕ್ಷೀಣಮಪಿ ಬಲಂ ಭೂಯೋ ವಿವಿರ್ಧತೇಹ್ಯಾತ್ಮಾ" ಎಂದೋ ಹೇಳಬೇಕು. ದಿವಾಕರರ ತೇಜಸ್ಸೀಗ ಪಳಗಿ ಕಾಂತಿಯಾಗುತ್ತಿದೆ; ಅನುಭವ ಅನುಭಾವರೂಪ ತಾಳುತ್ತಿದೆ. ಮೌನದಲ್ಲಿಯು ಕೂಡ ಮಾತಿಗಿಂತ ಹೆಚ್ಚಿನ ಧ್ವನಿಯಿರುವ ಕೃತಿಗಳಾಗಿ ಅವರು ಕರ್ನಾಟಕದ ಏಕೀಕರಣ, ಶಿಕ್ಷಣ, ಪತ್ರಿಕೋದ್ಯಮ, ಉದ್ಯಮ – ಉದ್ಯೋಗ ಮುಂತಾದವುಗಳ ಏಳಿಗೆಗೆ ಇನ್ನಷ್ಟು ಸ್ಫೂರ್ತಿ ಕೊಡುವ ಮಹಾಶಕ್ತಿಯಾಗಿ ನಿಲ್ಲುವಂತೆ ದೇವರು ಅವರಿಗೆ ಆಯುರಾರೋಗ್ಯ ಸತ್ವಸಂಪನ್ನತೆಯನ್ನು ಕರುಣಿಸಲೆಂದು ಹೃತ್ಪೂರ್ವಕವಾಗಿ ಹಾರಯಿಸುತ್ತೇನೆ.



['ಜೀವನ' – ಸಂಪುಟ ೧೬ – ಪುಟ ೧೩೮]

# ೫೦. ಕನ್ನಡತ್ರಯ ವಿಭಾಗಯೋಗ

ಹಳಗನ್ನಡ, ನಡುಗನ್ನಡ, ಹೊಸಗನ್ನಡಗಳೆಂದು ಕನ್ನಡವನ್ನು ಮೂರು ವಿಭಾಗಗಳೆಂದು ಹೇಳುವುದು ಹಿಂದಾಯ್ತು. ಪಂಪ, ಕುಮಾರವ್ಯಾಸ, ಕಡೆಂಗೋಡ್ಲು ಶಂಕರಭಟ್ಟರು ಈ ಮೂರರ ಪ್ರಾತಿನಿಧಿಕ ಲೇಖಕರೆಂದು ಭಾವಿಸಿದರೆ ತಪ್ಪಾಗದು. ಆದರೆ ಶಂಕರಭಟ್ಟರ ಅನಂತರದ ತಲೆಮಾರುಗಳಲ್ಲಿ–ಅದರಲ್ಲೂ ನವ್ಯಕಾವ್ಯದ ಮಾರಾವತಾರವಾದ ಮೇಲೆ–ರಾಜಧಾನಿ, ಉಪ–ರಾಜಧಾನಿಗಳ ಕೇಂದ್ರಗಳಿಂದ ಹೊರಡುವ ಪತ್ರಿಕೆ–ಪುಸ್ತಕಗಳಲ್ಲಿಯ ಕನ್ನಡವು ಶಂಕರಭಟ್ಟರಿಗೆ, ಅಂಬಿಕಾತನಯದತ್ತರಿಗೆ ಅಥವಾ ಕುವೆಂಪು ಅವರಿಗೆ ಗ್ರಾಹ್ಯವಾದೀತೇ–ಸಮಗ್ರವಾಗಿ?

ಸಂಸ್ಕೃತವು 'ಅನ್ಯಭಾಷೆ' ಎಂದು ದಿವಂಗತ ಪ್ರೊ॥ ಕೃಷ್ಣಶಾಸ್ತ್ರಿಗಳೆಂದ ತಾರೀಖಿನಿಂದ ಅದು ಅನ್ಯರ ಭಾಷೆ ಎಂದು ತಿಳಿಯುವ ಹಠ ಕೆಲವರಲ್ಲಿ ಬೆಳೆಯಿತು. ವಿಶ್ವವಿದ್ಯಾನಿಲಯಗಳೂ, ಕೆಲ ಜನ ಇಂಗ್ಲೀಷ್ ಪ್ರಾಧ್ಯಾಪಕರುಗಳೂ ಸಂಸ್ಕೃತದ ಅಪಪ್ರಚಾರಕರಾಗಲು ಅಥವಾ ಸಂಸ್ಕೃತ ವಿಮುಖರಾಗಲು ಹೆಚ್ಚು ಹೆಚ್ಚಾಗಿ ಉತ್ಸಾಹಿತರಾದಂತೆ ತೋರಿತು. **ಅವರ ದೃಷ್ಟಿಯನ್ನು ಸ್ವೀಕರಿಸಿದವರಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವ ಸಂಚಿಕೆಯ ಹೆಸರಿನ ಅರ್ಥ ಹೊಳೆಯದು**. ಆಂಗ್ಲಭೂಯಿಷ್ಠತೆಯ ಆ ಪುರಸ್ಕರ್ತರು ಸಂಸ್ಕೃತ ಭೂಯಿಷ್ಠತೆಯನ್ನು ತೆಗಳಲಾರಂಭಿಸಿದ್ದರ ಫಲವಾಗಿ ಕನ್ನಡದ ಜಾಯಮಾನಕ್ಕೆ ಪರಕೀಯವಾದ ವಾಕ್ಯರಚನೆ, ಛಂದೋವಿಕಾರ, ಪದಸಂಹತಿ ಪ್ರಯೋಗ, ಸಮಾಸ ರಚನೆಗಳು ದಿನ ಬೆಳಗ್ಗೆ ಅಚ್ಚಾಗಿ ಹೊರಬರಲಾರಭಿಸಿದವು. ಈ ಪ್ರವೃತ್ತಿಯವರ ಪ್ರಕಾರ ಹಳಗನ್ನಡ–ನಡುಗನ್ನಡ ಗ್ರಂಥಗಳನ್ನು ಯಾರು ಓದುವುದೂ ಅನಾವಶ್ಯಕ; ಅವುಗಳ ಭಾಷೆ, ವಸ್ತು, ವರ್ಣನೆಗಳೆಲ್ಲವೂ ಕನ್ನಡ ಸಂಸ್ಕೃತಿಗೀಗ ತ್ಯಾಜ್ಯ ಎಂಬರ್ಥ ಎದ್ದಿತು. ವ್ಯಾಕರಣ, ತರ್ಕ, ಪರಿಭಾಷೆಗಳಲ್ಲಿ ಹಳ–ನಡು–ಹೊಸಗನ್ನಡಗಳು ಸಂಸ್ಕೃತದ ಗುರುತ್ವವನ್ನು ಎಂದೂ ಬಿಡಲಿಲ್ಲ; ಪದಪ್ರಯೋಗಗಳಲ್ಲಿಯೂ ಹಾಗೇ. ತತ್ಸಮ, ತದ್ಭವ, ದೇಶ್ಯಗಳ ಸಂಮಿಶ್ರಣ ಉಕ್ತ ಗ್ರಂಥಗಳಲ್ಲಿ ಸಾಧಾರಣ. ಷಡಕ್ಷರಿಯನ್ನು ಸಂಸ್ಕೃತ ಭೂಯಿಷ್ಠನೆಂದರೂ ಅವನ ಮಹಾಕವಿತ್ವಕ್ಕೆ ಚ್ಯುತಿ ಇರಲಿಲ್ಲ; ಆಂಡಯ್ಯ–ರಾಘವಾಂಕರು ದೇಶ ಪ್ರಾಧಾನ್ಯವನ್ನು ಹಿಡಿದರೂ ವ್ಯಾಕರಣ, ತರ್ಕ, ಛಂದೋ ನಿಯಮಗಳನ್ನು ಕಃಪದಾರ್ಥಗಳೆಂದು ಕಡೆಗಣಿಸಲಿಲ್ಲ. ಶಾಂತಕವಿಗಳೂ ಗೋವಿಂದ ಪೈಗಳೂ ಸಂಪ್ರದಾಯ ದ್ವೇಷಿಗಳಾಗಿರಲಿಲ್ಲ; ಸಂಪ್ರದಾಯದ ವಿಕಾಸವಾದಿಗಳಂತೆ ನಡೆದುಕೊಳ್ಳುವವರಾಗಿದ್ದರು.

ಬೀಜವೃಕ್ಷನ್ಯಾಯವನ್ನೇ ಮುರಿಯುತ್ತೇವೆ ಎಂಬ ರಣಗರ್ಜನೆಯ ವಿತಂಡವಾದಿಗಳು ೧೯೫೬ರಅನಂತರ ತಲೆಯೆತ್ತಿದುದರಿಂದ ಛಂದಸ್ಸು, ಲಕ್ಷಣ, ಅಲಂಕಾರ, ಭಾವ, ರಸ, ಭಾಷೆ, ಶೈಲಿ, ಪದಪದ್ಧತಿ ಮುಂತಾದ ಎಲ್ಲದರಲ್ಲೂ ಕನ್ನಡದ ಮಣ್ಣಿನ ವಾಸನೆ ಉಳಿಯದಂತೆ ನೋಡಿಕೊಳ್ಳುವ ಪಟ್ಟಣಸ್ಥ ಲೇಖಕರ ತಂಡಗಳು ಪ್ರಚಾರವನ್ನು ದೊರಕಿಸಿಕೊಂಡವು. ಈ ಪ್ರೇತನೃತ್ಯದ ದೆಸೆಯಿಂದ ಕನ್ನಡಭಾಷೆ ಪಠ್ಯಪುಸ್ತಕಗಳಲ್ಲಿ ಕೂಡ ವಿಕೃತವಾಗಿ ವಿದ್ಯಾರ್ಥಿಗಳ ಮೇಲೆ ಹೇರಲ್ಪಟ್ಟಿತು. 'ದ್ವೇಷ್ಯೋऽಪಿ ಸಂಮತಃ ಶಿಷ್ಟಃ' ಎಂಬ ಧೀರಗಂಭೀರ ದೃಷ್ಟಿ ಅಳಿಯಿತು. ಪಕ್ಷ ರಾಜಕೀಯದಂತೆ ಸ್ಥಾನ, ಮಾನ, ಧನಗಳಿಗಾಗಿ ಗುಂಪುಕಟ್ಟುವ ಕ್ಷುದ್ರ, ತಾಮಸ, ಸಂಕುಚಿತ ಸ್ವಾರ್ಥಸಾಧಕ, ಮದ–ಮೋಹ–ಮತ್ಸರಗ್ರಸ್ತ ಲೇಖನೀಧಾರಿಗಳ ದಾಳಿಗೆ ತುತ್ತಾದ ಕನ್ನಡಕ್ಕೆ ಕೆಲ 'ನವ್ಯಕಾವ್ಯಗಳು' ತಕ್ಕ ಉದಾಹರಣೆಗಳಾದವು.

ಪರಭಾಷಾ ಶಬ್ದಗಳಿಂದಲೇ ಗಿರಿಯಾಗಿ ಬೆಳೆದ, ಇಂಗ್ಲೀಷನ್ನು ಕಂಡೂಕಾಣದ, ಇಂಗ್ಲೀಷಿನ ಭಾಷಾ ಪ್ರಯೋಗ ವಿಕಾಸಕ್ರಮದ ಸ್ವಾಭಾವಿಕತೆಯನ್ನು ಮನಗಾಣದ, ಅದರ ಕೋಶಗಳಲ್ಲಿ ಕಂಡುಬರುವ Standard, Colloquy and Slang– ಅಭಿಜಾತ, ವರ್ತಮಾನ ಸಂವಾದಿಕ ಮತ್ತು ಗ್ರಾಮ್ಯ ಎಂಬ ವರ್ಗತ್ರಯದ ವಿವೇಕವನ್ನು ಅರ್ಥಮಾಡಿಕೊಳ್ಳಲು ಅನಾಸಕ್ತಿ ತಾಳಿದ 'ಸುಲಭ ಸಾಹಿತ್ಯ ಸರ್ಕಸ್ ಕಂಪೆನಿ'ಗಳ ಮಾಲಿಕರೂ, ಸದಸ್ಯರೂ ನಗರಗಳಲ್ಲಿ ಎಬ್ಬಿಸಿದ ಗಲಭೆಗಳೇ ಮಾನ್ಯ ಎನ್ನಿಸುವ ಅರಸನೊಡ್ಡೋಲಗ ಕನ್ನಡದ ಸ್ವಾಭಾವಿಕ ವಿಕಾಸಕ್ಕೆ ಕುಠಾರಪ್ರಾಯವಾಯಿತು. 'ಕಾವ್ಯಸೂತ್ರ'ದ ಪ್ರಕಾರ ಅದು 'ವಿಕೃತಕ'. ಅಂಥ ಧೃತರಾಷ್ಟ್ರರ ವಿಮರ್ಶಕತ್ತ್ವ, ಕವಿತ್ವ, ವಿಚಾರವಾದಿತ್ವ, ತಜ್ಞತ್ವಗಳಿಗೆ ಬಹುಮಾನ, ಪುರಸ್ಕಾರ, ಸ್ಥಾನ, ಮಾನ, ಅಧಿಕಾರಗಳನ್ನು ದಯಪಾಲಿಸುವ, ಸರಕಾರಿ ಹಾಗೂ ಖಾಸಗಿ ನಗರವಾಸಿಗಳ ಅಪಾತ್ರ ದಾನಬುದ್ಧಿಯ ದೆಸೆಯಿಂದ ಕನ್ನಡತನದಿಂದ ಸಾರ್ವಜನಿಕ ಕನ್ನಡಿಗರು ವಂಚಿತರಾಗಬೇಕಾಯ್ತು. ಕನ್ನಡದ ರೇಡಿಯೋ ವಾರ್ತಾ ಪ್ರಸಾರಕರ ವಾಕ್ಯೋಚ್ಚಾರದ ಏರಿಳಿತಗಳು ಕೂಡಾ ಕನ್ನಡವನ್ನು ಹೊಸತಾಗಿ ಕಲಿತ ಪರಭಾಷೇಯರ ಉಚ್ಚಾರದ ನತೋನ್ನತ ಪ್ರವಾಹಗಳನ್ನು ಹೋಲುವಂತಾದವು. ಈ ಬಗೆಯ ವಿಕಟ ಕನ್ನಡಕ್ಕೂ ಸ್ಥಾನಕೊಡಬೇಕಾದರೆ ಕನ್ನಡ ಭಾಷೆಯ ನಾಳಿನ ಇತಿಹಾಸಕಾರನು ಕನ್ನಡತ್ರಯವಲ್ಲ, **ಕನ್ನಡ ಚತುಷ್ಟಯ ಇದೆ** ಎಂದು ಉಲ್ಲೇಖಿಸಬೇಕಾದೀತು, ಅಲ್ಲವೇ?

Licenceಉಚ್ಛೃಂಖಲತೆಯನ್ನು ನಡತೆಯಲ್ಲಿ ಹೇಗೋ ಹಾಗೇ ಭಾಷೆಯ ಪ್ರಯೋಗದಲ್ಲೂ Liberty ಸ್ವಾತಂತ್ರ್ಯ ಎಂದು ಹಠ ಹಿಡಿವ ಲೇಖಕರು ಕನ್ನಡತನದಿಂದ ಬಹಳ ದೂರ ಹೋದವರು; ಪದದ ಅರ್ಥವನ್ನು ಅರಿಯದೆ ಹೊಸ 'ಆಯಾಮ' ವ್ಯಾಯಾಮಗಳಲ್ಲಿ ನಿರತರಾಗುವವರು. ಅರ್ಥಕೋಶಕ್ಕಿಂತ ಸ್ವಾರ್ಥಕೋಶಕ್ಕೇ ಅಂಥವರಲ್ಲಿ

ಪ್ರಾಧಾನ್ಯ. ಈ ಮಾತನ್ನಾಡಿದವನನ್ನು ತಿರಸ್ಕರಿಸುವ ವ್ರತವನ್ನು ಹಿಡಿದು ಸಾಗುತ್ತಿರುವ ಪೈಶಾಚಿಕ ಮನೋಧರ್ಮದವರನ್ನು ಅಂಥ ಸಮಾಜ, ಅಂಧಾಧಿಕಾರಿಗಳು ಎತ್ತಿಹಿಡಿದು ಪೂಜಿಸಿದ ಸಂದರ್ಭಗಳೂ ಉಂಟು. ಈ ಅಪೂರ್ವ ಮ್ಲೇಚ್ಛಿತಗಳಿಂದ ಅಶಾಸ್ತ್ರೀಯ ಅಭಿರುಚಿಗಳು ಕನ್ನಡ ನೆಲದಲ್ಲಿ ನವ್ಯ, ಆಧುನಿಕ, ಅಸಾಂಪ್ರದಾಯಿಕ, ವೈಜ್ಞಾನಿಕ, ವಾಸ್ತವಿಕ ಎಂಬಂತಹ ನಾನಾ ಪದಗಳ ಮೂಲಕ ಸೂಚಿತವಾಗಿ ಹಬ್ಬಲು ಯತ್ನಿಸುತ್ತವೆ. ಇವರ ಪಾಲಿಗೆ ಹಳ–ನಡುಗನ್ನಡಗಳ ಬಗ್ಗೆ ಬರೆಯುವ ಬರಹಗಳನ್ನು ಪ್ರಕಟಿಸುವುದು ಕೂಡ 'ಕೂಳಿಗೆ ಕೇಡು, ಭೂಮಿಗೆ ಭಾರ!' ನವ್ಯರಿಗೆ ಸಾಹಿತ್ಯ ಪರಿಷತ್ಪತ್ರಿಕೆ ಇನ್ನು ಮೇಲೆ ಅಸ್ಪೃಶ್ಯ ಪತ್ರಿಕೆಯಾದರೆ ನಾನೇನೂ ಆಶ್ಚರ್ಯಪಡಲಾರೆ–ಈ ಕ್ರಾಂತಿ ಕಹಳೆಗಳ ವೃತ್ತಗಳಲ್ಲಿ!

ಈ ಉಪೋದ್ಘಾತ 'ಹಿತಂ ಮನೋಹಾರಿ ಚ ದುರ್ಲಭಂ ವಚಃ' ಎಂಬುದನ್ನು ಬಲ್ಲವರಿಗೆ–ಆಯುಕ್ತವೆನ್ನಿಸದು, ಅಸಾಂದರ್ಭಿಕವೆನ್ನಿಸದು.

ಭಾಷಾಶಾಸ್ತ್ರದ ಪ್ರಕಾರ ಪ್ರಪ್ರಾಚೀನ ಕನ್ನಡದಲ್ಲಿ ಲಿಂಗವಿರಲಿಲ್ಲ, ಮಹಾಪ್ರಾಣಗಳಿರಲಿಲ್ಲ, ಪ್ರತ್ಯಯಗಳಿರಲಿಲ್ಲ, ತತ್ಸಮ–ತದ್ಭವಗಳಿರಲಿಲ್ಲ. ಈ ಸರ್ವ ಸಾಮಗ್ರಿಗಳೂ ಸಂಸ್ಕೃತದಿಂದಲೇ ಹಳ–ನಡುಗನ್ನಡಗಳು ಪಡೆದುಕೊಂಡಂಥವು. ಉಕ್ತ ಪ್ರಪ್ರಾಚೀನ ಕನ್ನಡದ ಒಂದು ಕೃತಿಯೂ ಸಮಗ್ರರೂಪದಲ್ಲಿ ಉಪಲಬ್ಧವಾಗಿಲ್ಲ. ಅಂಥ ಕೃತಿಗಳನ್ನಿಂದು ನಿರ್ಮಿಸಲು ಅಂಡಜನಾದ ಆಂಡಯ್ಯನಂತೆ ಹೊಸತಾಗಿ ಶುರುಮಾಡಬೇಕೇ? **ಹಳ–ನಡುಗನ್ನಡಗಳ ಗದ್ಯ–ಪದ್ಯ ಗ್ರಂಥಗಳಲ್ಲಿಯ ತತ್ಸಮಗಳೆಲ್ಲವನ್ನೂ ತೆಗೆದುಹಾಕಿ ಅವುಗಳ ಜಾಗಗಳಲ್ಲಿ ಆಂಗ್ಲಪದಗಳನ್ನಿಟ್ಟಾಗ ಮಾತ್ರ ಈಗಿನ ನಗರಸ್ಥ ಗಣ್ಯ ಸಾಹಿತಿಗಳಿಗೆ ಅವು ಓದಲು ತಕ್ಕವುಗಳಾದಾವೇ?** ಗಂಡಸರಾಗಿ ಎದ್ದು ನಿಂತು ಉತ್ತರ ಕೊಡಬೇಕು. ವ್ಯಕ್ತಿದ್ವೇಷದಿಂದ ಹಿಂದುಗಡೆ ತಮ್ಮ ತಮ್ಮ ಗುಂಪುಗಳಲ್ಲಿ ಗೊಣಗುವ ಕ್ಲೀಬರಿಗಿದು ರಣಾಹ್ವಾನ. ಆಂಗ್ಲ–ಕನ್ನಡಗಳ 'ರ್‍ಯಾಂಗ್ಲರ'ರಿಗೆ ಹಾಕಿದ ಸವಾಲಿದು! ಬಾಲಬಡಿಕರಿಂದಲೇ ಪ್ರಸಿದ್ಧಿಗೆ ಬಂದ ಮಹಾಕ್ಷುದ್ರ ಲೇಖಕ ಪ್ರಪಂಚಕ್ಕಿದು ಕುಠಾರಪ್ರಹಾರ! ಈ ಬಗೆಯ ಜನರಿಗೆ ಪ್ರೋತ್ಸಾಹವಿತ್ತು ಗ್ರಾಮಸ್ಥರು ತೆತ್ತ ಕರಕಂದಾಯಗಳನ್ನು ಅಪವ್ಯಯಕ್ಕೆ ಗುರಿಮಾಡಿದ, ಕನ್ನಡ ರಾಜ್ಯದ ವೇಳೆಯನ್ನು ಹಾಳು ಮಾಡಿದ ಕಪಟನಾಟಕ ಸೂತ್ರಧಾರರ ಸಾಹಿತ್ಯೋದ್ಧಾರ, ಭಾಷೋದ್ಧಾರ, ಪತ್ರಿಕೋದ್ಧಾರ, ವಿಮರ್ಶಪಾಟವಗಳ ವಿಶ್ಲೇಷಣೆ ವಿಕಟ ಕನ್ನಡಿಗರಿಂದಾಗದು. ಅವರಿಗಿದು ದುರಾಚಾರ, ಅಸಭ್ಯ, ಅಪ್ರಸ್ತುತ! ಏಕೆಂದರೆ ತಮ್ಮದು ಮಾತ್ರ 'ಸೃಜನ ಸಾಹಿತ್ಯ'–ಕನ್ನಡ ಸಾಹಿತ್ಯವಲ್ಲ. ಹಳ–ನಡುಗನ್ನಡಗಳಲ್ಲಿ 'ಸೃಜನಕೃತಿ'ಗಳಿಲ್ಲವೇ ಇಲ್ಲ!

ಆಧುನಿಕ ಆಂಗ್ಲರೂಢಿಯ ಪ್ರಕಾರ ವಿಜ್ಞಾನದಿಂದ ಇತರವೆನ್ನಿಸಿದ್ದೆಲ್ಲವೂ Creative ಕಲಾಪ್ರಾತಿಭೇಯ, ವಿಜ್ಞಾನಪ್ರಾತಿಭೇಯ ಅಥವಾ ಶಾಸ್ತ್ರಪ್ರಾತಿಭೇಯ ಅಲ್ಲ. ಈ

ರೂಢಿಯಂತೆ ಸಾಹಿತ್ಯ ವಿಮರ್ಶೆ ಕೂಡ 'ಕ್ರಿಯೇಟಿವ್'–ನವನವೋನ್ಮೇಷ ಶಾಲಿತ್ವದಿಂದ ಹುಟ್ಟಿದ್ದು. ಸಾಹಿತ್ಯದರ್ಪಣದ ಮುನ್ನುಡಿಯಲ್ಲಿ ದಿ.ಡಾ॥ ಪಿ.ವಿ.ಕಾಣೆಯವರು ಇಂಥ ಅರ್ಥ ಕೊಡುವ ಒಂದೇ ಒಂದು ಶಬ್ದವೆಂದರೆ 'ವಿದಗ್ಧ' ಎಂದು ವಿವರಿಸಿರುವುದನ್ನು ಓದಲು ಕನ್ನಡಿಗರು ಸಮರ್ಥರಾದಾರೇ? ಯಾಕಾಗಲಾರರು? 'ವೈದಗ್ಧೀ ಮಧುರ ಪ್ರಬಂಧರಸಿಕ' ಎಂಬ ಪದ ಸಂಹತಿಯಲ್ಲಿ ಕಲಾತ್ಮಕ ವಾಙ್ಮಯದ ಪ್ರತ್ಯೇಕತೆಯನ್ನು ಎತ್ತಿ ಹೇಳಲಾಗಿದೆ. **ವೈದಗ್ಧ್ಯ ಪಾಂಡಿತ್ಯಗಳು ಭಿನ್ನ**. ವಿಚಾರ, ವಿವೇಚನೆ, ತರ್ಕ, ವಿಮರ್ಶೆಗಳು ಪಾಂಡಿತ್ಯದ ಕಕ್ಷೆಯಲ್ಲಿ ಬರುತ್ತವೆ; ರಸಭಾವಾತ್ಮಕ ವಾಙ್ಮಯ ಮಾತ್ರ ವೈದಗ್ಧ ಮಧುರ ಪ್ರಬಂಧವರ್ಗಕ್ಕೆ ಸೇರುತ್ತದೆ. ವಿಕಟ ತತ್ಸಮವಾದ 'ಸೃಜನ'ದಿಂದ ವರ್ಗೀಕರಿಸಬೇಕಾದ ನವ್ಯ ವಿಮರ್ಶೆಯ ಅಗತ್ಯವು ಸ್ವಕಪೋಲ ಕಲ್ಪಿತ, ಅಂಧಾನುಕರಣ ಬುದ್ಧಿಯ ದ್ಯೋತಕ. ಆದುದರಿಂದ ಆಧುನಿಕ ಕನ್ನಡ ಯುಗವು Age of Reasonವಿಚಾರ ಪ್ರಧಾನವಾದ ಇತಿಹಾಸಾವಧಿ ಅಲ್ಲವೇ ಅಲ್ಲ–ಎಂಬುದನ್ನು ೧೯೫೬ರ ಅನಂತರದಲ್ಲಿ ಎದ್ದು ಕಾಣುವಂತೆ ಅಡ್ಡಾಡುವ ಉಪನ್ಯಾಸಕರ, ಮುನ್ನುಡಿಕಾರರ, ವಿಮರ್ಶಕರ, ಗ್ರಂಥಲೇಖಕರ ವರ್ಗಗಳಲ್ಲಿ ಕೆಲವರ ವಿಮರ್ಶೆ–ವಿವೇಚನೆ, ಕಾವ್ಯಶಾಸ್ತ್ರ ಪ್ರತಿಪಾದನೆಗಳಲ್ಲಿ ಸ್ಪಷ್ಟವಾಗಿ ಕಾಣಬಹುದು.

ಈಗ ಕಾಲೇಜಿನಲ್ಲಿ ಪಾಠ ಹೇಳುತ್ತಿರುವ ಆಚಾರ್ಯರೊಬ್ಬರು ವಿದ್ಯಾರ್ಥಿಗಳಿಗೆ ಧೈರ್ಯವಾಗಿ–**ಹಳನಡುಗನ್ನಡಗಳ ಕಾಲದಲ್ಲಿ ವಿಮರ್ಶೆ ಎಂಬುದು ಇರಲೇ ಇಲ್ಲ**– ಎಂದು ವರ್ಷಗಟ್ಟಲೆಯಾಗಿ ಹೇಳುತ್ತಲೇ ಬಂದದ್ದು ನನ್ನ ಗಮನಕ್ಕೆ ಬಂದಿದೆ. ಇವರೂ ಕನ್ನಡ ಎಂ.ಎ.! ಅಲಂಕಾರ ಶಾಸ್ತ್ರಗಳೂ ಟೀಕೆ–ವ್ಯಾಖ್ಯೆಗಳೂ ವಿಮರ್ಶೆಗಳಲ್ಲವೇ ಅಲ್ಲ ಎಂದು ಹಲವಾರು 'ಸೃಜನಶೀಲರು' ಈಗಲೂ ತಿಳಿದುಕೊಂಡಿದ್ದಾರೆ! ಇವರ ಸೃಷ್ಟಿಯು 'ಇಯಂ ವಿಸೃಷ್ಟಿಃ ಕುತ ಆಗತಾಸ್ಯಾತ್?'ಎಂದು ವೇದರ್ಷಿ ಕೇಳಿದಂತೆ ಕೇಳಬೇಕಾದ ವಿಸೃಷ್ಟಿಯಲ್ಲದೆ ಬೇರೆ ಏನಾದೀತು?

**ಸಂಸ್ಕೃತ(ತತ್ಸಮ) ಪದಗಳಿಂದ ಕೂಡಿದ ಪದ್ಯ ಜಾನಪದವಲ್ಲ–ಎಂಬುದು ಇನ್ನೊಂದು ಆಧುನಿಕ ಕರ್ಣಾಟಕೀಯ ವಿಮರ್ಶೆ**. 'ಜಾನಪದ'ದ ಲಕ್ಷಣವನ್ನು ಅವ್ಯಾಪ್ತಿ, ಅತಿವ್ಯಾಪ್ತಿ ಮತ್ತು ಅಸಂಭವಗಳೆಂಬ ದೋಷಗಳಿಂದ ದೂರವಾದ ಲಕ್ಷಣ ಕೊಟ್ಟು ವಿವರಿಸಿದವರು ಯಾರೂ ಇಲ್ಲ. 'ಭಾವಗೀತ'ದಂತೆಯೇ ಜಾನಪದ ಗೀತವೂ ನಿಷ್ಕೃಷ್ಟಾರ್ಥವನ್ನು ಶಾಸ್ತ್ರೀಯವಾಗಿ ಸೂಚಿಸುತ್ತಿಲ್ಲ. ಜಾನಪದ ಕೃತಿಗಳ ಕನ್ನಡವು ತತ್ಸಮರಹಿತವಾಗಿಲ್ಲ. ಪದಭಂಡಾರ ಭೇದದಿಂದ ಕಾವ್ಯಜಾತಿ ಭಿನ್ನವಾಗುವುದಿಲ್ಲ. ಜೊತೆಗೆ ಜಾನಪದ–ಅಜಾನಪದ ಗೀತಗಳಿಗಿಂದು ಕೆಲವೆಡೆ ಸರ್ವಾಂಶಗಳೂ ಸಮಾನವಾಗುತ್ತ ಬಂದಿರುವುದರಿಂದ ಅವು ಶಬ್ದ ಮಾತ್ರ ಭೇದವನ್ನು ಹೊಂದಿರುತ್ತವೆ. ಇಂಥ ವರ್ಗೀಕರಣದಿಂದಲೇ ಇಂಥ ವಿಮರ್ಶಕರಿಗೆ 'ವಿಚಾರಹೀನಃ ಪ್ರತಿಭಾಸಿ ಮೇ ತ್ವಂ'

ಎಂದು ಹೇಳಬೇಕಾಗುತ್ತದೆ.

'ನನಗೆ ಗೊತ್ತಿಲ್ಲದ ಯಾವ ಅವಶ್ಯಕ ಅಥವಾ ಅನಾವಶ್ಯಕ ಶಾಸ್ತ್ರವನ್ನೂ ನಾನು ಕಲಿಯಬೇಕಾಗಿಲ್ಲ' ಎಂಬ ಅಘುಷ್ಟ ಧೋರಣದಿಂದ ಆವಿಷ್ಟರಾದ ವಾಚಾಳಿಗಳ ದೆಸೆಯಿಂದ ಸಾಹಿತ್ಯ ವಿಮರ್ಶೆಯು 'ಹಂ ಕರೇ ಸೋ ಕಾಯ್ದಾ' ಆಗಿಹೋಗಿದೆ. ಎಲ್ಲರೂ ಮಹೇಂದ್ರರು, ಮಹಾದೇವರು, ಅತಿ ಬೃಹಸ್ಪತಿ–ಮಹಾಬೃಹಸ್ಪತಿಗಳು ಎಂಬ ಸ್ವಯಂ ಪ್ರಭುತ್ವ ಅಥವಾ ಸ್ವಗಣರಾಜ್ಯ ಪ್ರಭುತ್ವ ಮನಸ್ಸನ್ನು ಆಳಲು ಅವಕಾಶವನ್ನು ಕೊಟ್ಟವರು ಸ್ಥಾನಮಾನಾಧಿಕಾರಗಳಿಗೆ ಪಾತ್ರರಾಗುತ್ತಿರುವುದರಿಂದ ತುಲನಾತ್ಮಕ ಅಭ್ಯಾಸ, ಸಂಶೋಧನ, ವಿವೇಚನಗಳು ಆಭಾಸಿಕವಾಗುತ್ತ ಹೋಗಿವೆ. One man's fact is another man's fiction-ಒಬ್ಬನಿಗೆ ವಾಸ್ತವಿಕ ವಿಷಯ ಎನ್ನಿಸಿದ್ದು ಮತ್ತೊಬ್ಬನಿಗೆ ಕಲ್ಪನಾ ವಿಲಾಸ ಎಂಬಂತಾಗಿರುವುದನ್ನು ಸೂಕ್ಷ್ಮಗ್ರಾಹಿಗಳು ಕಾಣದಿರರು. ಅಭ್ಯಾಸ ಮಾಡದೆ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾಗಲು ಕೆಲ ವಿದ್ಯಾರ್ಥಿಗಳಿಗೆ ಸಾಧ್ಯವಾಗುವಂಥ ಸನ್ನಿವೇಶಗಳನ್ನು ಉಂಟು ಮಾಡಿದ್ದರಿಂದ ಸಮಗ್ರವಾಗಿ ಓದದೇ ಬರೆಯುವವರ ಸೈನ್ಯಬಲ ಹೆಚ್ಚಾಗುತ್ತ ಹೋಯ್ತು. ತಪ್ಪುಗಳನ್ನು ತೋರಿಸಿ ಕೊಡುವವರೆಲ್ಲರೂ ಆಮರಣ ಶತ್ರುಗಳು–ಎಂದು ಭಾವಿಸುವ ಅನಾತ್ಮ ನಿರೀಕ್ಷಣ ಪರರಿಂದ ಎಂಥ ಸಾಹಿತ್ಯ ಸಂಶೋಧನೆ ನಡೆದೀತು? **ತಮಗೆ ಬರುವ ಗೌರವ ಪ್ರತಿಗಳನ್ನು ಮಾತ್ರ ಅರೆಮನಸ್ಸಿನಿಂದ ಓದಿ ಅವೇ ಒಂದು ಅವಧಿಯ ಕನ್ನಡ ಸಾಹಿತ್ಯ ಎಂದು ತಿಳಿಯುವ ಮಹಾಮಹಿಮರಿರುವಾಗ,** ಅವರಿಗೆ ಗಣಪತಿ ವಿದ್ಯಾದಿಗ್ಗಜರ ಮಾನ್ಯತೆಯನ್ನು ರಾಷ್ಟ್ರೀಯ ಸಾಹಿತ್ಯ ಅಕಾಡಮಿ ಕೂಡ ಕೊಡುವಾಗ ಕನ್ನಡತ್ರಯ ವಿಭಾಗಗಳ ಯಾವ ಕೃತಿಗಳ ಲಕ್ಷಣಗಳ ತುಲನಾತ್ಮಕ ವಿಮರ್ಶೆ ಸಮರ್ಪಕವಾಗಿ ಹೊರಬಿದ್ದೀತು? ಶಿಕ್ಷಣವೇ ಇಂದು ಅಶಾಸ್ತ್ರೀಯ, ಕೃತಕಶಾಸ್ತ್ರೀಯ, ಅನೌಚಿತ್ಯ–ಅಸಾಮಂಜಸ್ಯ ಪ್ರಧಾನ. ಅಶಿಕ್ಷಿತರಿಗಿರುವ ಪಡೆನುಡಿಗಳ ಮೇಲಿನ ಪ್ರಭುತ್ವ 'ಸುಶಿಕ್ಷಿತ'ರಿಗಿಲ್ಲವಾದ ನಿದರ್ಶನಗಳು ಹಲವಾರು!

ಶಬ್ದ ಕಾಠಿನ್ಯಕ್ಕೆ ಹೆದರುವ ವಿಮರ್ಶಕರ ಓದು ಯಾವ ಮಟ್ಟದ್ದು? ಕನ್ನಡ ವಿಮರ್ಶಕಂ ಮನ್ಯರೆಷ್ಟು ಜನರಲ್ಲಿ(ಕನ್ನಡ–ಕನ್ನಡ) ಉತ್ತಮ ಶಬ್ದಕೋಶವಿದೆ? ಕೋಶದಲ್ಲಿ ದ್ರವ್ಯವಿಲ್ಲದೆ ಚೆಕ್ಕುಗಳನ್ನು ಬರೆದುಕೊಡುವವರಂತೆ ವ್ಯವಹರಿಸಬಹುದೇ? ಪದಸಂಗ್ರಹವಿಲ್ಲದೆ, ಪದಪ್ರಯೋಗತಜ್ಞತೆ ಇಲ್ಲದೆ, ಆಂಗ್ಲೇಯ ಭಾವನಾ ಸರಣಿಯನ್ನು ಅನುಸರಿಸಿ ಅಂಥವರು ಸಾಹಿತ್ಯ ಅಕಾಡಮಿ ಕೆಲವರ್ಷಗಳ ಹಿಂದೆ ಏರ್ಪಡಿಸಿದ ವಿಚಾರಗೋಷ್ಠಿಯಲ್ಲಿ 'ವಿಮರ್ಶಿಸಿ'ದಂತೆ ಹಳನಡುಗನ್ನಡಿಗರ ಸಾಹಿತ್ಯ ವಿಮರ್ಶೆ ಇರಲಿಲ್ಲ! ಕವಿಗೆ ಹೇಗೋ ಹಾಗೇ ವಿಮರ್ಶಕನಿಗೂ ೧೮ ಶಾಸ್ತ್ರಗಳ ಜ್ಞಾನ, ಲೋಕಾನುಭವ ಮತ್ತು ಕಾವ್ಯರಚನಾ ಪದ್ಧತಿಯಲ್ಲಿ ತರಬೇತು ಇರಬೇಕಾಗಿತ್ತು ಎಂಬ ಕ್ಷೇಮೇಂದ್ರೋಕ್ತಿ

ಅವರಿಗರಿಯದು. ಜೊತೆಗೆ ಅವು ಸತ್‌ಪರಂಪರೆಗೆ ಅನುಗುಣಗಳಾದ ಹೊಸತನವನ್ನು ಹೊಂದಿರಬಹುದಾಗಿತ್ತು. ಅವರಿಗೆ 'ಕಠಿನ' ಕಠಿಣವಾಗಿರಲಿಲ್ಲ; 'ಜನಾರ್ದನ' ಜನಾರ್ಧನನಾಗಿರಲಿಲ್ಲ. 'ರದ್ದಿಯಾತಿ, ವಾಪಸಾತಿ, ಠೇವಣಾತಿಗಳು' ಅವರಿಗೆ ರದ್ದು, ವಾಪಸು, ಠೇವುಗಳಾಗಿ ತೋರುತ್ತಿದ್ದವು; ಸೀತೆ 'ಸೀತಾಳು' ಆಗಿರಲಿಲ್ಲ. ಅಕ್ಕ 'ಅಕ್ಕಳು' ಆಗಿರಲಿಲ್ಲ. 'ಕರ್ಣಾಟಕ' ಕರ್ನಾಟಕವಾಗಿರಲಿಲ್ಲ. ಕುವೆಂಪುಗಳು 'ಕುವೆಂಪುರವರೆ'ಂದು ತೋರುತ್ತಿರಲಿಲ್ಲ. ಅವರಿಗೆ ಹಂಚುವಿಕೆ 'ಹಂಚಿಕೆ'ಯಾಗಿದ್ದಿಲ್ಲ. ನೀಡುವಿಕೆ 'ನೀಡಿಕೆ'ಯಾಗಿರಲಿಲ್ಲ. **'ಕನ್ನಡ ಕೈಪಿಡಿ'ಯನ್ನು** ನೋಡಿದರೆ ಹಳ–ನಡುಗನ್ನಡ ಭಾಷೆ ಹಾಗೂ ಪದಪ್ರಯೋಗಗಳು ಹೊಸತಾಗಬೇಕಾದರೆ ಸ್ವೀಕರಿಸಬೇಕಾದ ರೀತಿಗಳನ್ನು ಗುರುತಿಸಬಹುದು. ಶ್ರೀ ಜಿ.ಪಿ.ರಾಜರತ್ನಂರ 'ಯೆಂಡ್ಕುಡ್ಕ ರತ್ನ' ಕೂಡ ಕನ್ನಡ ಪ್ರಯೋಗ ಪರಂಪರೆಯ ವಿಕಾಸಮಾರ್ಗವನ್ನು ಹಿಡಿದೇ ಮಾತನಾಡುತ್ತಾನೆ; ಚತುರ್ಥ ಕನ್ನಡ ಅವನಿಗೆ ಹೊಳೆಯಲಿಲ್ಲ. ಅವರ ಪುರುಷ ಸರಸ್ವತಿ ಕೂಡ ಅಡ್ಡಹಾದಿಯನ್ನು ಹಿಡಿಯಲಿಲ್ಲ. Prose written in zigzag lines, makes Poetry–ಅಂಕು ಡೊಂಕು ಸಾಲುಗಳಿಂದ ಬರೆದ ಗದ್ಯವು ಪದ್ಯವಾಗುತ್ತದೆ ಎಂಬುದು ಅವನಿಗರಿಯದಾಗಿತ್ತು. ಅಜ್ಞಾನಿಗಳು ರಸಜ್ಞಾನ ವಿಮುಖರಾಗಿ ಹೆಣೆದ ಅರ್ಥ ಸಮರ್ಪಕ ಒಗಟುಗಳು ಅವರಿಗೆ ನವ್ಯಕಾವ್ಯವಾಗಿರಲಿಲ್ಲ. ಪರಂಪರಾ ದ್ವೇಷ ಅವರ ಕಾವ್ಯ ನಿರ್ಮಾಣಕ್ಕೆ ಪ್ರೇರಕ ಶಕ್ತಿಯಾಗಲಿಲ್ಲ. 'ಇಡಿಪಸ್ ಕಾಂಪ್ಲೆಕ್ಸ್' ಹಳ–ನಡುಗನ್ನಡಿಗರಿಗಿರಲಿಲ್ಲ. ಆದ್ದರಿಂದ ಅವರು ಶ್ರೀ ವಿ.ಜಿ.ಭಟ್ಟರು ಗುರುತಿಸಿದ Masterbation Poetryಸ್ವರತಿ ಪದ್ಯವನ್ನು ಬರೆಯಲು ಹೊರಡಲಿಲ್ಲ. ಅಂಥ ರಚನೆಗೆ ಪಂಡಿತರೂ ಪಾಮರರೂ ಅಂದು ಪ್ರೋತ್ಸಾಹ ಕೊಡಲಿಲ್ಲ. ಒಂದು ಹ್ರಸ್ವೋಚ್ಚಾರ ಕಾಲವನ್ನು ವೈಯಾಕರಣರು ೧೬ ಅಂಶಗಳನ್ನಾಗಿ ವಿಂಗಡಿಸುತ್ತಿದ್ದರಂತೆ. ಹಾಗೇ ಅನವ್ಯೇತರರ ಸಾಮಾನ್ಯಜ್ಞಾನದ ವೈಯಕ್ತಿಕ ಪ್ರಮಾಣಗಳನ್ನಿಂದು ವಿಭಾಗಿಸಬಹುದು. ಇಬ್ಬರು ಪದವೀಧರರು 'ವಿಚಾರ ವಿನಿಮಯ'ಕ್ಕೆ ಕುಳಿತರೆ ಅಂದು ಇಂದಿನಂತೆ ವೈರವು ಫಲಿಸುತ್ತಿರಲಿಲ್ಲ. ಇದು ಹಳನಡುಗನ್ನಡ ನಾಗರಿಕತೆಗಳ ಸಾಮಾನ್ಯ ಲಕ್ಷಣ. ಭಾಷೆಯು ನಾಗರಿಕತೆಯ ಮತ್ತು ಸಂಸ್ಕೃತಿಯ ವಾಹಕ, 'ಮಾಧ್ಯಮ'. ಕುಲವ ನಾಲಗೆಯರುಹುವುದು ಹೀಗೆ. ಬರಹಗಳಲ್ಲಿ ಈ ಅಂಶಗಳನ್ನು ವಿಸ್ತರಿಸುವುದು ಅಸಾಧ್ಯ; ಮುಖಾಮುಖಿಯಾಗಿ ಮಾತನಾಡಿದರೆ ಸೌಜನ್ಯಯುಕ್ತವಾದ ವಾದದಿಂದ ಈ ಅಂಶಗಳನ್ನು ಚೆನ್ನಾಗಿ ಮನವರಿಕೆ ಮಾಡಿ ಕೊಡಬಹುದು. ಪತ್ರಿಕಾ ಲೇಖನಗಳ ಸ್ಥಳಾವಕಾಶವಂತೂ ತೀರ ಸ್ವಲ್ಪ.

ದಿ.ಡಾ॥ ಡಿ.ವಿ.ಗುಂಡಪ್ಪನವರನ್ನು ಹೊಗಳದವರಿಲ್ಲ. ಆದರೆ **Admire and do otherwise**'ಹೊಗಳು, ಮೆಚ್ಚು–ಆದರೆ ಮೆಚ್ಚಿನ ವ್ಯಕ್ತಿ ಮಾಡಿದ್ದಕ್ಕಿಂತ ಬೇರೆಯಾದುದನ್ನೇ ಮಾಡು' ಎಂಬ ಅಪ್ರಾಮಾಣಿಕತೆ ಆಧುನಿಕ. ಅವರು ತಮ್ಮ 'ಸಾಹಿತ್ಯಶಕ್ತಿ'ಯಲ್ಲಿ ಸಂಸ್ಕೃತ–

ಕನ್ನಡಗಳನ್ನು ಒಟ್ಟೊಟ್ಟಿಗೇ ಕಲಿಸಬೇಕಾದ ಅಗತ್ಯವನ್ನು ಕ್ರಮವನ್ನು ವಿವರಿಸಿದ್ದಾರೆ. **ಅವರ ಸೂಚನೆಯನ್ನು ಗಣ್ಯ ಸ್ಥಳಗಳಲ್ಲಿ ಚರ್ಚೆಗೆ ಕೂಡಾ ಯಾರೂ ತೆಗೆದುಕೊಂಡಂತಿಲ್ಲ.** ಶ್ರೀಗಳಾದ ಕುವೆಂಪುಗಳೂ, ಪು.ತಿ.ನರಸಿಂಹಾಚಾರ್ಯರೂ (ಮೂರನೆಯದಾದ ಹೊಸಗನ್ನಡ ಯುಗಕ್ಕೆ ಸೇರಿದವರಾಗಿ–ನಾಲ್ಕನೆಯದಾದ ನವ್ಯಕನ್ನಡ ಯುಗ(?)ಕ್ಕೆ ಸೇರಿದವರಾಗಿ) ಸಂಸ್ಕೃತ ಭೂಯಿಷ್ಠತೆಯನ್ನು ಹಿಂದಿನವರಂತೆಯೇ–ಪಂಪನಂತೆಯೇ–ಅವನ 'ಸಾಜಮಾದ ಪುಲಿಗೆರೆಯ ತಿರುಳ್ಗನ್ನಡ'ದಲ್ಲಿಯೇ ಮುಂಬರಿಸಿದ್ದಾರೆ. ಅವರು ಸ್ಥಾನಬಲದಿಂದ ವಿರುದ್ಧ ಟೀಕೆಗೆ ಬಹಳ ಗುರಿಯಾಗಿಲ್ಲ. **ಅಸ್ವಾಭಾವಿಕವೆಂಬಷ್ಟು ಅತಿ ತತ್ಸಮ ಭೂಯಿಷ್ಠತೆಯನ್ನು ಅತ್ಯಾಂಗ್ಲ ಭೂಯಿಷ್ಠತೆಯಂತೆಯೇ ಯಾರಾದರೂ ತ್ಯಾಜ್ಯವೆನ್ನದಿರರು.** ಆದರೆ ಆಂಡಯ್ಯಚ್ಛಲದ ಅವ್ಯಾವಹಾರಿಕತೆಯನ್ನು ಯಾರೂ ಪುರಸ್ಕರಿಸರು. ಹಿಂದಿನ ಮದ್ರಾಸ್–ಮೈಸೂರು ಸರಕಾರಗಳು ನಡೆಸುತ್ತಿದ್ದ ಕನ್ನಡ ಪಂಡಿತ ಪರೀಕ್ಷೆ, ಕನ್ನಡ ವಿದ್ವತ್ ಪರೀಕ್ಷೆಗಳ ಮೂಲಕ ಆಗುತ್ತಿದ್ದಷ್ಟು ಸಂಸ್ಕಾರವಾದರೂ ಇಂದಿನ ಕನ್ನಡಾಭ್ಯಾಸಿಗಳಿಗೆ ಆಗಬೇಕು; ಆಗದಿದ್ದರೆ ಪಂಪ, ರನ್ನ, ಪೊನ್ನ, ಜನ್ನ, ಕುಮಾರವ್ಯಾಸ, ಚಾಮರಸ, ಷಡಕ್ಷರಿ, ಲಕ್ಷ್ಮೀಶ, ಬತ್ತಲೇಶ್ವರ, ರತ್ನಾಕರವರ್ಣಿ, ಮುದ್ದಣ ಮುಂತಾದವರ ಕೃತಿಗಳನ್ನು ಕನ್ನಡನಾಡಿನಿಂದ ಹೊರಗೆ ಕಳಿಸಬೇಕಾದೀತು; ಅಥವಾ ಅವುಗಳನ್ನು ಗ್ರಂಥಾಲಯದ ಕಪಾಟುಗಳಲ್ಲೇ ಇಟ್ಟು ಗೆದ್ದಲು ತಿನ್ನುವಂತೆ ನೋಡಿಕೊಳ್ಳಬೇಕಾದೀತು; ಮುಂದಿನ ತಲೆಮಾರು ತನ್ನನ್ನು ಹಿರಿಯರು ವಂಚಿಸಿದರೆಂದು ಶಾಪಕೊಟ್ಟರೆ ಅದನ್ನು ತಲೆಬಾಗಿ ಸ್ವೀಕರಿಸಬೇಕಾದೀತು!

ಸ್ವಾತಂತ್ರ್ಯೋತ್ತರ ಕರ್ಣಾಟಕದಲ್ಲಿ ತೆಗೆದುಕೊಂಡ ಸ್ವಾಚ್ಛಂದ್ಯವೂ ಆಂಗ್ಲಾನುಕರಣವೂ ಸಾಕಷ್ಟು ಅಸಮರ್ಥನೀಯವಾಗಿ ಶಿಕ್ಷಣ ಮತ್ತು ವಾಙ್ಮಯ ಕ್ಷೇತ್ರಗಳಲ್ಲಿ ಪ್ರಕಟವಾಗಿರುವುದರಿಂದ ಕನ್ನಡಿಗರ ಸಾಂಸ್ಕೃತಿಕ ಯೋಗಕ್ಷೇಮದ ದೃಷ್ಟಿಯಿಂದ ಸಾಹಿತ್ಯಪರಿಷತ್ತು ಪರಿಷತ್ಪತ್ರಿಕೆಯನ್ನು ಹಳ–ನಡುಗನ್ನಡ ವಾಙ್ಮಯ ಪ್ರಪಂಚಕ್ಕೆ ಮೀಸಲಿಟ್ಟಿರುವುದೀಗ ಸ್ತುತ್ಯ. ಆದರೆ ಹೇಗೂ ಹಳ–ನಡುಗನ್ನಡಗಳಿಗೆ ಪರಿಷತ್ಪತ್ರಿಕೆ ಮೀಸಲಾಗಿರುವುದರಿಂದ ವಿಶ್ವವಿದ್ಯಾನಿಲಯಗಳೂ 'ಓರಿಯಂಟಲ್' ಸಂಶೋಧನ ಸಂಸ್ಥೆಯೂ ಇತರ ಪ್ರಕಟನಾಲಯಗಳೂ ಕೇವಲ ತೃತೀಯವೂ ಅಲ್ಲ–ಚತುರ್ಥ ಕನ್ನಡಯುಗಕ್ಕೆ ತಮ್ಮ ಮುದ್ರಣ ಪ್ರಕಾಶನಗಳ ಸಾಧನಗಳನ್ನು ಬಳಸಿಕೊಳ್ಳಲು ನಿರ್ಧರಿಸಿದರೆ ಒಳಿತಾಗದು. ಬಹುಶಃ ಅವು ಹಾಗೆ ಮಾಡಲಾರವೆಂದು ನಂಬುತ್ತೇನೆ. ಮಾಡಿದರೆ ನಾನು ಆಶ್ಚರ್ಯ ಪಡಲಾರೆ. ಇಂದಿನ ಮಾನಸಿಕ ಆವರಣದ ನಿರ್ಮಾಣವೇ ಹಾಗಿದೆ. ಪ್ರಾಚ್ಯವಸ್ತು ಸಂಶೋಧನೆ ದೇಶದಲ್ಲೆ ಬಹಳ ಹಿಂದುಳಿದಿರಲು ಕೂಡ ನಮ್ಮ ವಾಸ್ತವ–ವರ್ತಮಾನವಾದಿಗಳ ಬಲಾತ್ಕಾರದ ಪ್ರಚಾರ ಬಹಳ ಮಟ್ಟಿಗೆ ಕಾರಣ. ಉಕ್ತಮನೋಧರ್ಮವನ್ನೊಮ್ಮೆ ಕುವೆಂಪುಗಳಿಂತೆಂದರು.

**‘ನಿನ್ನಿನ ಮೊನ್ನಿನ ಹುಡುಗರೋ ನಾವು**
**ನಮಗೇತಕೆ ಹೇಳಜ್ಜರ ಸಾವು?’**

ಹಾಗೇ ದೊರೆಸ್ವಾಮಿ ಅಯ್ಯಂಗಾರರೆಂಬ ಒಬ್ಬರು ‘ಜಯಂತಿ’ಯಲ್ಲಿ ‘ಮುದುಕರು ಬದುಕಿರಬೇಕೇ?’ಎಂಬ ಲೇಖನದಲ್ಲಿ ಅವರು ಬದುಕಿರಬಾರದೆಂದು ಪ್ರತಿಪಾದಿಸಿದ್ದರು. ಇವೆಲ್ಲ ನಾಗರಿಕತೆಗೆ ಹಿಡಿಯುವ ಕುಷ್ಠಾದಿರೋಗಗಳು. ಕುಷ್ಠ, ಮಧುಮೇಹ ಮೊದಲಾದ ರೋಗಗಳು ದೇಹಕ್ಕೆ ಮಾಡುವ ಹಾನಿಗಿಂತ ತತ್ಸದೃಶವಾದ ಮನೋರೋಗಗಳು(Prejudices–ಪೂರ್ವಗ್ರಹಾದಿಗಳು) ಮಾನವ ಸಂಸ್ಕೃತಿಗೆ ಮಾಡುವ ಹಾನಿ ಹೆಚ್ಚಿನದು.

ಸಮಾಜಶಾಸ್ತ್ರಾಭ್ಯಾಸಿಗಳು ತಮ್ಮ ಊರನ್ನೂ ತಮ್ಮ ಸುತ್ತಲಿರುವ ಸಮಾಜವನ್ನೂ ಬಿಟ್ಟು ಸಾವಿರಾರು ಮೈಲುಗಳ ದೂರದಲ್ಲಿರುವ ಪ್ರಾಚೀನಾವಶೇಷವಾದ ಬರ್ಬರ ಸಮಾಜವೊಂದನ್ನು ಆಯ್ದುಕೊಂಡು ಮನಬಂದಂತೆ ಅದರ ನೀತಿ ನಡತೆಗಳನ್ನು ಅರ್ಥಯಿಸುವ ಅನೌಚಿತ್ಯದಂತೆಯೇ ವರ್ತಮಾನ ಕನ್ನಡಿಗರ ಒಲವು ನಿಲವುಗಳು ಪ್ರಾಚೀನ ಭಾಷೆ–ಸಾಹಿತ್ಯ ಮುಂತಾದುವುಗಳ ಬಗೆಗೆ ಹೇಗಿದೆ ಎಂಬುದನ್ನರಿಯದೆ ಅವರ ಮನೋಧರ್ಮದ ಸಮಗ್ರ ಚಿತ್ರವನ್ನು ಕೊಡುವೆನೆಂಬಾತ ಶುದ್ಧ ಬೆಪ್ಪು; ಅವನು ಮಾಡುವುದು ಅನೌಚಿತ್ಯ. ಶ್ರೀಸಾಮಾನ್ಯ ಕನ್ನಡಿಗನ ಹೆಸರಿನಲ್ಲಿ ಪಟ್ಟಣಿಗರಲ್ಲಿಯ ಸಾಹಸಿಕರು ಸರ್ವಜ್ಞರಂತೆ ಸರ್ವವಿಷಯಗಳ ಬಗೆಗೂ ಹೇಳಿದ್ದೆಲ್ಲ ತಜ್ಞಾಭಿಪ್ರಾಯ ಎಂದು ತಿಳಿದುಕೊಳ್ಳುವ ಸಾರ್ವಜನಿಕ ಸಂಸ್ಥೆಗಳು ಹುಚ್ಚರ ಆಸ್ಪತ್ರೆಗಳು. ನಗರದ ಬಾಲಬಡಿಕರನ್ನೋಲಯಿಸುವ ಸಂಸ್ಥಾಪತಿಗಳಿಂದ ಪ್ರಾಚೀನ, ಮಧ್ಯಕಾಲೀನ ಅಥವಾ ಅರ್ವಾಚೀನ ಕನ್ನಡ ಭಾಷೆ–ಸಾಹಿತ್ಯಗಳ ಬಗೆಗೆ ಉಪಯುಕ್ತವಾದ ಕೆಲಸ ನಡೆಯಿಸಲು ಸಾಧ್ಯವಾಗದು.

ಹಳ ನಡುಗನ್ನಡ ಸಾಹಿತ್ಯವನ್ನೂ ಸದ್ಯದ ಸಾಹಿತ್ಯವನ್ನೂ ಶಾಸ್ತ್ರಜ್ಞರು ತುಲನಾತ್ಮಕವಾಗಿ(ನವ್ಯರ ವಕಾಲತ್ತು ವಹಿಸದೆ) ನಿಷ್ಪಕ್ಷಪಾತತೆಯಿಂದ ವಿಮರ್ಶಿಸುವುದು ಕ್ರಮಪ್ರಾಪ್ತ. **ಅದಕ್ಕೆ ತಕ್ಕ ಯೋಜನೆಯನ್ನು ತಯಾರಿಸಿ ಸಾಹಿತ್ಯ ಪ್ರಮಾಣಗಳನ್ನು ನಿರ್ದೇಶಿಸಿ ವಿದ್ವಾಂಸರನ್ನು ಕೇಳಿಕೊಂಡರೆ ಉಪಯುಕ್ತ ಸಂಶೋಧನ ಮತ್ತು ವಿಮರ್ಶೆಗಳು ಹೊರಬೀಳಬಹುದು.** ಕನ್ನಡ ಸಾಹಿತ್ಯ ಚರಿತ್ರಕಾರರು ಪರಿಷತ್ತಿನ ಈ ಕೊಡುಗೆಯನ್ನು ಬಹಳ ಅಮೂಲ್ಯವಾದದ್ದೆಂದು ಗ್ರಹಿಸದೆ ಇರಲಾರರು. ನಮ್ಮಲ್ಲಿ ಕೆಲ ಆಕಾಶವಾಣಿಗಳೂ, ಕೆಲ ಪತ್ರಿಕೆಗಳೂ ಜ್ಞಾನಲವ ದುರ್ವಿದಗ್ಧರನ್ನೇ ಆಯ್ದು ಅವರಿಂದ ಲೇಖನ, ಭಾಷಣಗಳನ್ನು ಮಾಡಿಸಿ ಕನ್ನಡ ಸಂಸ್ಕೃತಿಯ ಪರಿಚಯ ಕನ್ನಡಿಗರಿಗೆ ಸಮಗ್ರವಾಗಿ ಆಗದಂತೆ ಮಾಡಿರುವುದನ್ನು ವಿಷಾದದಿಂದ ಹೇಳಬೇಕಾಗಿದೆ. ಕೆಲ ಚಲನಚಿತ್ರಗಳನ್ನಂತೂ ಹೊಸಗನ್ನಡವೆಂದರೆ ತಿರುಕರ ಅಥವಾ ಹಿಪ್ಪಿಗಳ ಕನ್ನಡವೆಂದು ತೋರುವಂತೆ ಬಳಸಿದ್ದನ್ನು

ಖಂಡಿಸಬೇಕಾಗಿದೆ. ಕ್ಲೀಬ ಪ್ರಪಂಚದಲ್ಲಿ ನ್ಯಾಯವಾದ ಖಂಡನೆ ಮಂಡನೆಗಳಿಲ್ಲ. ಕೇವಲ ಪರಹಿಂಸಕ ಸಾಹಿತ್ಯ ರಾಜತಂತ್ರವೊಂದೇ ತನ್ನ ಪಿಸುಣ ಪರಸಿಗತನವನ್ನು ಮೆರೆಯುತ್ತದೆ! ಎದುರು ನಿಂತು ವಾದಿಸುವ ಸಾಂಸ್ಕೃತಿಕ ಪ್ರಾಗಲ್ಭ್ಯವಿಲ್ಲ. ಬೆನ್ನ ಹಿಂದೆ ಚೂರಿ ಹಾಕುವ ಬರ್ಬರ ತಂತ್ರವೊಂದೇ ಇರುತ್ತದೆ. ಭೀಷ್ಮರೆದುರು ಶಿಖಂಡಿಗಳನ್ನು ತಂದೊಡ್ಡುವ ಉಪಾಯದಿಂದಲೇ ಡಾ॥ ಡಿ.ವಿ.ಜಿ., ಡಾ॥ ಎ.ಆರ್.ಕೃಷ್ಣಶಾಸ್ತ್ರಿ, ಡಾ॥ ಡಿ.ಎಲ್.ಎನ್., ಡಾ॥ ತೀ.ನಂ.ಶ್ರೀ. ಮುಂತಾದ ಮಹಾವಿದ್ವಾಂಸರಿಂದ ಸಾಂಸ್ಕೃತಿಕವಾಗಿ ಸಿಗತಕ್ಕ ಸದುಪಯೋಗವನ್ನು ಸಾಧ್ಯವಿರುವ ಇನ್ನೂ ಹೆಚ್ಚಿನ ಪರಿಮಾಣದಲ್ಲಿ ಜನತೆಗಾಗಿ ಪಡೆದುಕೊಡಲಿಲ್ಲ. ಡಾ॥ ಬೇಂದ್ರೆಯವರಿಗೆ ಅಧ್ಯಾತ್ಮ ಕಾರ್ಯಾಲಯವನ್ನು ಧಾರವಾಡದಲ್ಲಿ ತೆರೆಯಲು ಅವಕಾಶವನ್ನು ಮಾಡಿಕೊಡದಿರುವಂತೆಯೇ ಸಾರ್ವಜನಿಕ ಹಾಗೂ ಸರಕಾರಿ ಸಂಸ್ಥೆಗಳೆಷ್ಟೋ ತೆರಿಗೆದಾರನ ಹಣವನ್ನು ಹೇಗೆ ಹೇಗೋ ವೆಚ್ಚ ಮಾಡುತ್ತಿರುವುದು ಸರ್ವವೇದ್ಯ. ಡಾ॥ ಎಸ್.ಶ್ರೀಕಂಠಶಾಸ್ತ್ರಿಗಳನ್ನೂ ಇದೇ ಮಾಲಿಕೆಗೆ ಸೇರಿಸಬಹುದು. ಇನ್ನೂ ಎಷ್ಟೋ ಜನ ಘನ ವಿದ್ವಾಂಸರ ಸೇವೆ ಇದೇ ಪ್ರಕಾರ(ಕನ್ನಡ ಭಾಷೆ ಸಾಹಿತ್ಯಗಳ ಲಕ್ಷಣ, ವಿಮರ್ಶೆ, ಚರಿತ್ರೆ, ಸಿದ್ಧಾಂತಗಳ ದೃಷ್ಟಿಯಿಂದ) ಕನ್ನಡಿಗರಿಗೆ ಸಿಗದಂತಾಗಿರುವುದು ಸ್ಪಷ್ಟ. ಪ್ರಾದೇಶಿಕ, ಜಾತೀಯ, ವ್ಯಕ್ತೀಯ ಸಂಕುಚಿತ ಮನೋಭಾವನೆಗಳಿಂದ ತುಂಬಿರುವಂತೆ ಮಾಡಿದ ರಾಜಕೀಯವು ಜ್ಞಾನಲವ ದುರ್ವಿದಗ್ಧರಿಗೆ ಮಂಗಳಾರತಿಯೆತ್ತುತ್ತಿರುವುದು ಕರ್ಣಾಟಕಕ್ಕೆ ಎಷ್ಟೋ ವೇಳೆ ಲಾಂಛನಾಸ್ಪದವೆನಿಸಿದ್ದುಂಟು. ತಾತ್ಕಾಲಿಕ ಪ್ರಸಿದ್ಧಿ ಎಂದೂ ನಾಡಿಗೆ ಕೀರ್ತಿಯನ್ನು ತರಲಾರದು ಎಂಬುದನ್ನು ನಾಡ ವಿದ್ವನ್ಮಣಿಗಳು ಬಲ್ಲರು.

ಶ್ರೀಯುತ ಬಡೆಕ್ಕಿಲ ವೆಂಕಟರಮಣ ಭಟ್ಟರ ಅನುಭವಾಮೃತ ಇಂತಿದೆ:

**ಹುಟ್ಟು ಭಾಷೆಯ ಹೊಲಬನರಿವೊಡೆ ಮನಸ್ಸಿರದೆ**
**ಕಟ್ಟುಭಾಷೆಯ ಭಾವ ಬಗೆಗೊಳದೆರಳ್‌ದೋಣಿ**
**ಗಿಟ್ಟು ಕಾಲಂ ನೀರ್ಗೆ ಬಿಳ್ದಂತೆ ಮರನೇರಿ**
**ಪಿಡಿದ ಮೇಲ್ಕೊಂಬೆಯೊಡನೆ ।**
**ಮೆಟ್ಟಿರ್ದ ಕೊಂಬೆಯುಂ ಮುರಿದುರುಳ್ವಂತಾಗಿ**
**ಸುಟ್ಟುರುಹುವನ್ನ ತಿಳಿವಿನ ದಾರಿಗಾಣಿಸದೆ**
**ಕಟ್ಟಡವಿಯಂಬೊಕ್ಕ ಕಂಗುರುಡನಂತಲೆದು**
**ಬಸವಳಿದು ಬಾಯ್ಬಿಡುವರು ॥**
**ಬಟ್ಟೆಯಂ ಸುಲಿದಲಂಕಾರಂಗಳಂ ತೆಗೆದು**

ಮೆಟ್ಟಿ ಸಂಧಿಗಳ ಮುರಿದಿಕ್ಕಿ ರೂಪಮನಳಿಸಿ
ಕಟ್ಟಾಸುರದೆ ಪರಣಮಡೆಯಾಡದೊಲ್ ಪ್ರಬಂಧವ
ರಚಿಸಿ ಧಾತುಗೆಡಿಸಿ ।
ಬಟ್ಟ ಬಯಲೊಳ್ ಕಾವ್ಯಯುವತಿಯಂ ಕೆಡವಿ ಕೆಯ್
ದಟ್ಟಿ ಕೂಗಿದೊಡಲ್ಲಿ ನಡೆಗೊಂಬ ಸಜ್ಜನರ
ದಿಟ್ಟಿ ಪರಿದಪುದೆ ನಲ್ಗಬ್ಬಿಗರ್ ಕಾಂಬರೇ
ಮಾನಿತರ ಮನವೊಲ್ವುದೆ ॥
ಅಳಿದಿರಾ ನುಡಿಯ ಸೊಬಗಂ ಪೆರರ ನುಡಿಗಲಿತು
ತುಳಿದಿರಾ ನಡೆಯ ಬೆಡಗಂ ಪೆರರ ನಡೆಗಲಿತು
ಬಳೆದಿರಾ ಕೊಟ್ಟನಿತನುಂಡು ಗಂಡಾಳಾಗಿ –
ದುಡಿದುಡಿದು ದಾರ್ಢ್ಯವರತು ।
ಕಳೆದಿರಾ ಮಾನುಷ್ಯ ಜನ್ಮಮಂ ಮೈ ಮರೆತು
ಹಿಳಿದಿರಾ ಕನ್ನಡದ ಸತ್ವಾದಿಗಳನರಿತು
ತಿಳಿದಿರಾ ಪಿಂದುಮುಂದಣ ಹೆಚ್ಚು ಕುಂದುಗಳ
ನಿನ್ನಾದೊಡಂ ಕಾಂಬುದು ॥
ಮಾತಾಡಲರಿಯದಿರೆ ಕಾವ್ಯ ಕಥನಾದಿಗಳ
ನೂತನದ ವಾಙ್ಮಯಗಳುದಯಂಗಳೆಂತು ವಿ
ಖ್ಯಾತರಹುದೆಂತು ತಾವಾರೆಂಬುದರಿಯದಿರೆ
ತಮ್ಮ ನಿಜ ಕರ್ತವ್ಯದ ।
ರೀತಿಯರಿಯದ ಮೇಲೆ ಮನುಜರೆಂತಪ್ಪರಾ
ಮಾತಿರಲಿ ನಾಡನುಡಿಯೆಂಬ ಹೆಮ್ಮರದ ಕುಡಿ
ಗೀ ತೆರಂ ಕೊಡಲಿಯಪ್ಪುದೆ ಪುಟ್ಟಿದೂರ ಪುರುಳಂ
ನೀಮೆ ಪಾಳ್ಗೆಯ್ವುದೆ ॥
ಕೂಡ ಕುಟಿಲಜ್ಞರೊಳ್ ನೋಟ ಕಿಡುಗೆಯ್ಗರೊಳ್
ಬೇಟ ಸೂಳೆಯರೊಳೊಡನಾಟ ಚಾಡಿಗರೊಳು –
ಬ್ಬಾಟ ಬಂಡರೊಳೂ ಬಡಿದಾಟ ಬಲಹೀನರೊಳ್

**ಮಾನಿಗರೊಳರೆದಾಟವು ।**
**ಆಟ ಜೂಜಾಟ ಕುಡಿದಾಟ ಜರೆದಾಟದಿಂ**
**ನೋಟಕರ ಮನವ ಬೆಗಡಾಟಕಾಟಿಸುವ ಕ**
**ರ್ಣಾಟದಾಟಂ ಜಟಾಜೂಟಧರಗರಿದೆನೆ**
**ನೃಕೀಟರಿಂದೊರೆಯಲಹುದೆ ॥**

ಕರ್ಣಾಟಕದ ಜ್ಞಾನವಯೋವೃದ್ಧರ ಅನುಭವ ಹೀಗಿರುವಾಗ ಇಂದು ಹಳ–ನಡುಗನ್ನಡ ಸಾಹಿತ್ಯಕ್ಕೆ ಯಾವ ಸ್ಥಾನವಿದೆ? ಅದರ ಸ್ಥಾನ ಅಚ್ಯುತವಾದರೂ ಅದರ ಪ್ರಯೋಜನವನ್ನು ಪಡೆಯುವವರಿಗೆ ಉಸಿರೆತ್ತಲಾಗದಂತೆ ಅಪಗನ್ನಡ ಪ್ರಚಾರ ಪಂಡಿತರ ಆಕ್ರಮಣ ಕೃತ್ಯಗಳಿಂದ ನಗರ–ಪಟ್ಟಣಗಳು ಮೇಘಚ್ಛನ್ನವಾಗಿವೆ. 'ಶಾಸ್ತ್ರವಿಚಾರಗಳನ್ನು ಅಚ್ಚಗನ್ನಡ ಪದಗಳಿಂದಲೇ ನಿರ್ವಹಿಸುವುದು ಸಾಧ್ಯವಲ್ಲ; ಸಂಸ್ಕೃತ ಶಬ್ದಗಳ ಸಹಾಯವು ಬೇಕಾಗುತ್ತದೆ' ಎಂದು ರಾವ್ ಬಹಾದೂರ್ ಆರ್.ನರಸಿಂಹಾಚಾರ್ಯರು–ಕಂಡುಹಿಡಿದ ಮೇಲೆಯೂ ಸಂಸ್ಕೃತದ ಬದಲು ಆಂಗ್ಲವನ್ನು ಆದೇಶವನ್ನಾಗಿ ತೆಗೆದುಕೊಳ್ಳಲು ಮಾಡುತ್ತಿರುವ ಕರ್ಣಾಟಕದ ಆ ಈ ವಿಶ್ವವಿದ್ಯಾನಿಲಯಗಳ ಆಗೀಗಿನ ಪ್ರಯತ್ನಕ್ಕೆ ಶಹಭಾಸೆನ್ನಬೇಡವೇ? ಸಂಸ್ಕೃತದ ನಾಲ್ಕಾಣೆ ಬೆಲೆಯ ಪುಸ್ತಕವನ್ನು ಕೂಡ ಇಂದಿನ ಕರ್ಣಾಟಕದಲ್ಲಿ ಬಾಲಬೋಧ ಲಿಪಿಯಲ್ಲಿ ಮುದ್ರಿಸಿ ಪ್ರಕಟಿಸದಿರುವ 'ಅಸಂಸ್ಕೃತ ವ್ರತ' ಮತ್ತು 'ದ್ರಾವಿಡಾಭಿಮಾನ'ಗಳು ಅರ್ಥವುಳ್ಳವುಗಳೇ? 'ಅರ್ಥ'ದ ಅರ್ಥಗಳನ್ನು ಕೂಡ ಅರಿಯಲಾರದ ಪಂಡಿತರನ್ನು ತಯಾರುಮಾಡಲು ನಿಂತ ನಮ್ಮ ವಿದ್ಯಾ ಸಂಸ್ಥೆಗಳ ನಿಯಾಮಕ ಶಕ್ತಿಗಳ ಧೃತರಾಷ್ಟ್ರತೆಗೇನೆನ್ನಬೇಕು?

ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮಾಡಲು ನಿಯಮಿಸಿದ ಸಮಿತಿಯಲ್ಲಿ ಕನ್ನಡ ಹಾಗೂ ಹಿಂದೀ ಪ್ರಾಧ್ಯಾಪಕರನ್ನು ಸೇರಿಸಲಾಗಿತ್ತಲ್ಲದೆ ಸಂಸ್ಕೃತ ಪ್ರಾಧ್ಯಾಪಕರನ್ನು ಸೇರಿಸಿದ್ದಿಲ್ಲ. ಇಂಥ ಸರಕಾರಿ ಧೋರಣೆಯಿಂದಲೇ ಪಾರಿಭಾಷಿಕ ಪದ ಸಂಗ್ರಹಕ್ಕಾಗಿ ಪಾಟ್ನಾ ನಗರದಲ್ಲಿ ನಿಯಮಿಸಲಾದ ಕೇವಲ ಹಿಂದಿ ಪಂಡಿತರ ಮಂಡಲಕಲವು ಅನುಚಿತ, ಅಯುಕ್ತ ಪದಗಳನ್ನು Provisional Technical Terms ತಾತ್ಪೂರ್ತಿಕ ಪಾರಿಭಾಷಿಕ ಪದಗಳ ಕೋಶ ವಿಭಾಗಗಳಲ್ಲಿ ಉಳಿಯುವಂತೆ ಮಾಡಿದೆ. ಇಂಥ ಅನೌಚಿತ್ಯಕ್ಕೆ ಬೆಂಗಳೂರಿನಲ್ಲಿರುವ 'ಮಧ್ಯಂತರ ಕಾರ್ಯಾಲಯ' ಒಂದು ಉದಾಹರಣೆ. 'ಮಧ್ಯಂತರ' ಎಂಬ ಪದವು ಸಂಸ್ಕೃತವೂ ಅಲ್ಲ, ಕನ್ನಡವೂ ಅಲ್ಲ. ಆ ಕಾರ್ಯಾಲಯವು ರೈಲು ಶಾಖೆಯ ಒಂದು ಉಪಕಚೇರಿ. ಡಾ॥ ಶಿವಪ್ಪನವರು ಬರೆದ ವಿಜ್ಞಾನ ಶಬ್ದಕೋಶದಲ್ಲಿ ಹೇರಳ ಅನೌಚಿತ್ಯಗಳು ಉಳಿಯಲು ಸಂಸ್ಕೃತ ವಿದ್ವಾಂಸರ ನೆರವನ್ನು ಅವರು ಪಡೆಯದುದೇ ಕಾರಣ. ಅಥವಾ ಪಂಡಿತರ ಮೂಗೊತ್ತಿ ಬಾಯಿ ತೆರೆಯಿಸಿ ಅವರ

ಮಂಜೂರನ್ನು ತಾವು ಸೂಚಿಸಿದ ಪದಗಳಿಗೆ ಪಡೆದುಕೊಂಡದ್ದೇ ಕಾರಣ. ಹಳ–ನಡುಗನ್ನಡಗಳ ಐತಿಹಾಸಿಕ ಯುಗಗಳಲ್ಲಿ ಇಂಥ ಅವೈಜ್ಞಾನಿಕತೆ ಇರಲಿಲ್ಲ. ಅದರಿಂದಲೇ ಕನ್ನಡದ ಅಲಂಕಾರಶಾಸ್ತ್ರ, ವೈದ್ಯಶಾಸ್ತ್ರ, ತತ್ತ್ವಶಾಸ್ತ್ರ, ಪಾಕಶಾಸ್ತ್ರ ಮುಂತಾದ ಶಾಸ್ತ್ರಗ್ರಂಥಗಳಲ್ಲಿ ಸರ್ವಗ್ರಾಹ್ಯವೆನ್ನಿಸುವ ಪಾರಿಭಾಷಿಕ ಪದಗಳನ್ನೇ ನಾವಿಂದು ಕಾಣುತ್ತೇವೆ. **ಕನ್ನಡದ ಜಾಯಮಾನಕ್ಕೆ ಸಂಸ್ಕೃತ ಒಗ್ಗಿದಷ್ಟು ಇಂಗ್ಲಿಷ್ ಒಗ್ಗದು.** 'ಪ್ರಬುದ್ಧ ಕರ್ಣಾಟಕ'ದ 'ಮೆಂಡೆಲ್' ವಿಶೇಷ ಸಂಚಿಕೆ ಈ ಮಾತಿಗೆ ದೊಡ್ಡ ಉದಾಹರಣೆಯಾಗಿ ನಿಂತಿದೆ. ಅದರಲ್ಲಿ ಸೋಸುವುದಕ್ಕೆ ಸಹ 'ಫಿಲ್ಟರ್ ಮಾಡುವುದು ಎಂಬ ಪ್ರಯೋಗವಿದೆ. ಅದರಿಂದಲೇ 'ರಸಯಜ್ಞ'ವು–

'ಆಂಗ್ಲಾಕ್ಷರಾಗಿ ಲಾಂಗ್ ಲೈಫು ಕನ್ನಡಕೆ ಎಂಬರನ್ನು ಕಂಡೆ' ಎಂದು ಜರೆದಿದೆ. ದಿ॥ ಕೈಲಾಸಂ ಅವರಂತೆ ಉಕ್ತ ಕವನ ಸಂಗ್ರಹವೂ ಕನ್ನಡ ನಾಗರಿಕತೆಗೆ ಹಿಡಿದ ಗ್ರಹಣದ ಕಲೆಗಳನ್ನು ಒಂದೊಂದನ್ನಾಗಿ ವಿಡಂಬಿಸಿದೆ. ಅದನ್ನು ಕಂಡೂ ಕಾಣದಂತಿರುವವರನ್ನೂ ತರಾಟೆಗೆ ತೆಗೆದುಕೊಂಡಿದೆ–ಕೊನೆಯ ಸಾಲಿನಲ್ಲಿ('ಕಾಣ್ಕೆ'ಯಲ್ಲಿ). ಆದರದು ಮಾಸ್ಟರ್ ಹಿರಣ್ಣಯ್ಯನವರ 'ಲಂಚಾವತಾರ' ನಾಟಕದಂತಾಯ್ತು; ಲಂಚಗುಳಿಗಳೂ ಆ ನಾಟಕಕ್ಕೆ ದುಡ್ಡು ಕೊಟ್ಟು ಹೋಗಿ ಅದೆಲ್ಲ ತಮ್ಮ ಶೀಲದ ನಿಂದೆಯಲ್ಲ–ಎಲ್ಲ 'ಜನರಲ್' ಎಂದು ಸಂತೋಷದಿಂದ ನಕ್ಕು ನಲಿದು ಮನೆಗೆ ಹಿಂದಿರುಗಿದಂತಾಯ್ತು.

'ಸಂಸ್ಕೃತದ ಈ ಸ್ವೀಕರಣಗಳು ಕನ್ನಡ ಶಬ್ದಕೋಶದ ಬಹು ಪ್ರಧಾನ ಭಾಗವಾಗಿವೆ. ಅವುಗಳಿಲ್ಲದೆ ಕನ್ನಡವು ಉನ್ನತ ಭಾವಗಳನ್ನಾಗಲಿ, ಉದಾತ್ತ ಅಭಿಪ್ರಾಯಗಳನ್ನಾಗಲಿ ಅಭಿವ್ಯಕ್ತ ಮಾಡಲಾರದು' ಎಂದಿರುವುದು ಡಾ॥ ಎಂ.ಚಿದಾನಂದ ಮೂರ್ತಿ.('ಸಂಶೋಧನ ತರಂಗ'–ಪುಟ ೭೧) ಮೂರ್ತಿಗಳು ಹೇಳಿದ್ದು ತೀರ ಮೂರ್ಖರಿಗಾಗಿ; ಉಳಿದವರಿಗೆ ಸಾವಿರಾರು ಉದಾಹರಣೆಗಳು ಕನ್ನಡದ ಆಡುಮಾತಿನಲ್ಲೇ ದೊರಕುತ್ತವೆ. ಅವು Cultural Borrowing ಸಾಂಸ್ಕೃತಿಕವಾಗಿ ಕಡ ತೆಗೆದುಕೊಂಡ ಬಗೆಯವು. ಅದರಿಂದಲೇ ರಾಶಿ ರಾಶಿಯಾಗಿ ಇಂಗ್ಲಿಷ್ ಪದಗಳನ್ನು ಬಳಕೆಗೆ ತೆಗೆದುಕೊಂಡರೆ ಆಗ ಸಾಂಸ್ಕೃತಿಕ ಬದಲಾವಣೆ ಒಂದು ಕನ್ನಡ ಜನಾಂಗದಲ್ಲಿ ಉಂಟಾಗಿದೆ ಎಂದರೆ ತಪ್ಪಾಗದು. ಈ ರೀತಿಯಿಂದ ನೋಡಿದ್ದಾದರೆ ಆಂಗ್ಲಸಂಸ್ಕೃತಿಗೆ ಮಾರಿಹೋಗುವ ದಾಸಬುದ್ಧಿ ಹಳ–ನಡುಗನ್ನಡಿಗರಿಗಿರಲಿಲ್ಲವೆಂಬುದು ಗೊತ್ತಾಗುತ್ತದೆ. ಸಂಸ್ಕೃತದ ಸಂಸ್ಕೃತಿ ಕರ್ಣಾಟಕೇತರವಲ್ಲ. ಆದರೆ ಆಂಗ್ಲಸಂಸ್ಕೃತಿ ಕರ್ಣಾಟಕೇತರ, ಭಾರತೇತರ, ಅನಾರ್ಯ, ಮ್ಲೇಚ್ಛ. ಈ ಅಂಶವನ್ನು ಗಮನಿಸದಿರುವವರು ರವೀಂದ್ರನಾಥ ಠಾಕೂರರೆಂದಂತೆ ಯೂರೋಪೀಯತೆಯನ್ನು ಆಧುನಿಕತೆ ಎಂದು ಮೋಸಹೋದಂಥವರು ಎಂದರೆ

ತಪ್ಪಾಗಲಾರದು. ಆಂಗ್ಲ–ಕನ್ನಡಗಳ ಬೆರಕೆಯನ್ನು 'ಪುರುಷ ಸರಸ್ವತಿ'ಯಿಂದ ಅರಿತುಕೊಳ್ಳಬಹುದು:

**ವರ್ತುರ್ ನೋಟೀಸಿಂಗು ನಗಿಸುವ**

**ಮರ್ತಿಗೀ ಕನ್ನಡದೊಳಾಫುಲ್**

**ಡರ್ತುರ್ ಮೈಗಾಡ್ ಪುರಿಸ ಸರಸತಿ ಓಯಸಿಸ್ಸು ಕಣಾ ।**

**ಬರ್ತುರ್ ತಾವರೆಪುರದ ಕರಿಮದ**

**ರರ್ತಿನಲಿ ಈ ಕವಿಯ ಫೇಮಿನ**

**ಗರ್ತುರ್ ಗಣನಾತೀತ ತುದಿಗಳು ಹೆವನು ಹೆಲ್ಲುಗಳು ॥**

ಇಂಥ ಕನ್ನಡವೀಗ ವಿಜ್ಞಾನದ ಹೆಸರಿನಲ್ಲಿ ಹೊರಬಿದ್ದ ಹಲವಾರು ಹೊಸಗನ್ನಡ ಗ್ರಂಥಗಳಲ್ಲಿ ಮೈದೋರಿದೆ. ಇದು ಕನ್ನಡಿಗರ ದಾಸ್ಯ ಅಥವಾ ಕ್ಲೈಬ್ಯ ಎನ್ನದೆ ಗತ್ಯಂತರವಿಲ್ಲ. ಸಾಹಿತ್ಯ ವಿಮರ್ಶೆಯಲ್ಲಿ ಕೂಡ ಗೋಕಾಕರಂಥವರು ನಿವಾರ್ಯವಾಗಿ(Mood) 'ಮೂಡು'ಗಳನ್ನು ಬಳಸಿದ್ದುಂಟು. ಶಬ್ದಗಳನ್ನೇ ಇಡಿಇಡಿಯಾಗಿ ತೆಗೆದುಕೊಂಡರೂ ಅಷ್ಟೇ, 'ಮಧುಚಂದ್ರ' ಆಂಗ್ಲ ಮೇಳನುಡಿಗಳನ್ನು ಭಾಷಾಂತರಿಸಿ ತೆಗೆದುಕೊಂಡರೂ ಅಷ್ಟೇ–ಅವೆಂದೂ ದೇಶ್ಯಗಳಾಗಲಾರವು, ಕನ್ನಡವಾಗಿ ಅರಗಲಾರವು. Honeymoon ಭಾರತದ ಸಂಸ್ಕೃತಿಯಲ್ಲಿ ಇರುವುದೇ? ಇನ್ನು ಮೂರ್ತಿಗಳು Spontaneous ಎಂಬುದಕ್ಕೆ 'ಚಟುಲ' ಎಂಬ ಭಿನ್ನಾರ್ಥಕ ಸಂಸ್ಕೃತ ಪದವನ್ನು(ಪೂರ್ವೋಕ್ತ ಗ್ರಂಥದ ೧೧೨ನೇ ಪುಟ) ಬಳಸಿದ ನೀತಿಯನ್ನು ವಿದ್ವಾಂಸರು ಎತ್ತಿ ಹಿಡಿಯಲಾರರು. 'ಚಟುಲ'ಕ್ಕೆ Trembling, unsteady, moving about, shaking, fickle, inconstant, fine, beautiful ಮತ್ತು lightning ಎಂಬಿವುಗಳೇ ಅರ್ಥಗಳು. Spontaneityಯು ಸ್ವಯಂಭೂತತೆ, ಸ್ವಯಂಭವತೆ, ಅವಶೋತ್ಥಾನ, ಅನೀರಿಕ್ಷಿತಾವಿರ್ಭಾವ, ಬಾಹ್ಯಪ್ರೇರಣರಹಿತ ಅಭಿವ್ಯಕ್ತಿ, ಅಸಂಕಲ್ಪಿತ ಸಮುತ್ಸರಣ, ಸ್ವಾಭಾವಿಕ ಸಂಸ್ಫುರಣ, ಅಕೃತಕ ಪ್ರಸೂತತೆ.

ಅನೇಕ ಹಳ–ನಡುಗನ್ನಡಿಗಳೂ ರಾಘವಾಂಕನಂತೆ 'ಉಭಯಕವಿ ಕಮಲರವಿಗಳು' ಎಂದು ಸ್ಥೂಲವಾಗಿ ಹೇಳಬಹುದು. ಕೊನೆಯ ಪಕ್ಷ ತಪ್ಪದೆ ಅವರು ಉಭಯ ಭಾಷಾ ಕೋವಿದರಂತೂ ಆಗಿರುತ್ತಿದ್ದರೆಂಬುದು ಸ್ಪಷ್ಟ. ಸಂಸ್ಕೃತ ಬಹಿಷ್ಕಾರದ ಹೆಮ್ಮೆಯ ಹೊಸಗನ್ನಡಿಗರು ಹಳ–ನಡುಗನ್ನಡ ಪರಂಪರೆಯ ನಿಜವಾದ ವಾರಸುದಾರರಾಗಲಾರರು. ಕನ್ನಡವು ಸಂಸ್ಕೃತದಿಂದ ಬೆಳೆದಂತೆ ಇಂಗ್ಲೀಷಿನಿಂದ ಬೆಳೆಯಲಾರದು. ಇಂಥ ಸಾಂಸ್ಕೃತಿಕ ಸೂಕ್ಷ್ಮಾಂಶಗಳನ್ನು ಹಿಂದಿ, ಮರಾಠಿ ಮುಂತಾದ ಭಾಷೆಗಳನ್ನಾಡುವ ಜನರು ಎಂದೋ ಅರಿತು ಅರಗಿಸಿಕೊಂಡು ಬಿಟ್ಟಿದ್ದಾರೆ. ಹಿಂದಿ–ಮರಾಠಿಗಳು ದ್ರಾವಿಡ

ಭಾಷೆಗಳಲ್ಲವಾಗಿರಬಹುದು. ಆದರೆ ದ್ರಾವಿಡಗಳೆಲ್ಲವೂ 'ಭಾಷೆ' ಎಂಬ ಪದವನ್ನು ಸಂಸ್ಕೃತದಿಂದಲೇ ತೆಗೆದುಕೊಂಡಿವೆ–ಇಂಗ್ಲೀಷಿನಿಂದಲ್ಲ. 'ದ್ರಾವಿಡ ಲಾಂಗ್ವೇಜು' ಅಪ–ರೂಪ, ಅಸು–ಭಗ, ಅರುಚಿ–ಕರ, ಹಳ–ನಡುಗನ್ನಡಿಗರಿಗೆ 'ಇಂಗ್ಲಿಷ್ ಛಪ್ಪಡಿಯ ಭಾರಾಘಾತ'ವನ್ನು ಎದುರಿಸಬೇಕಾದ ಒತ್ತಾಯವಿರಲಿಲ್ಲ. ಸಂಸ್ಕೃತ ಛಪ್ಪಡಿ ಸಾತ್ಮ್ಯಭಾವದಿಂದ ಕೂಡಿ ಆಘಾತವನ್ನುಂಟುಮಾಡದಾಯಿತು: ಈಗ ಮಾಡುತ್ತಿದೆ ಎಂಬ ತಿರುಬೊಬ್ಬೆ ಆತ್ಮಘಾತಕವಾದದ್ದು–ಅಸಂಬದ್ಧ ಪ್ರಲಾಪ. ಈ ಅಂಶವು 'ಆರಕ್ಷಕ'(Policeman) ಬಂದ ಮೇಲೂ ಗೊತ್ತಾಗದಿದ್ದರೆ ಕನ್ನಡಿಗನ ಕನ್ನಡತನ ಪ್ರಶ್ನಾರ್ಥಕ ಚಿಹ್ನಕ್ಕೆದುರಾದೀತು. ಕುಲಪತಿಯು ಕುಲಾಧಿಪತಿಯಾದ ಮೇಲೂ ಉಪಕುಲಪತಿಯು ಕುಲಪತಿಯಾದ ಮೇಲೂ ನಮ್ಮಲ್ಲಿಯ ಕೆಲ ಜನರಿಗೆ ಜ್ಞಾನೋದಯವಾಗದಿದ್ದರೆ ಅವರ ಬಗ್ಗೆ ಕನಿಕರಪಡಬೇಕಾಗುತ್ತದೆ!

ಹಳಗನ್ನಡವು ನಡುಗನ್ನಡವಾಗಿ ರೂಪಾಂತರ ಹೊಂದಿದಾಗ ಅದರ ಅಭಿಜಾತ್ಯ ಅಳಿಯಲಿಲ್ಲ; ಹಾಗೇ ನಡುಗನ್ನಡ ಹೊಸಗನ್ನಡವಾಗಿ ಬದಲಾದ ಮೇಲೂ ಅದರ ಕರ್ಣಾಟ ಗಾಂಭೀರ್ಯ ಹೋಗಲಿಲ್ಲ. ಆದರೆ 'ಚತುರ್ಥ ಕನ್ನಡ'ದ ಈ ದಶಕದಲ್ಲಿ ಅಥವಾ ದ್ವಿದಶಕದಲ್ಲಿ ಅಭಿಜಾತ್ಯವನ್ನು ಅಳಿಯಿಸುವಂತಹ ಸಂಸ್ಕೃತಿ–ಪದಪ್ರಯೋಗಗಳು ರಾಜೋಪರಾಜಧಾನಿಗಳಲ್ಲಿ ತಲೆದೋರಿದವು. ಈ ದುಷ್ಟ ಪ್ರವೃತ್ತಿಯನ್ನು ನಿಲ್ಲಿಸಲು ಜನಭಾಷೆಯನ್ನು(ಜಾನಪದವೂ ಅಲ್ಲ, ಆಂಗ್ಲಭೂಯಿಷ್ಠವೂ ಅಲ್ಲ) ರೂಢಿಸುವ ಪ್ರಚಾರ ಭರದಿಂದ ಸಾಗಬೇಕಾಗಿದೆ. ಇದು ಜನಕಾವ್ಯಯುಗ. ಅಭಿಜಾತ ಪದ ಸಂಗ್ರಹದ ಪ್ರವೃತ್ತಿಯಿಂದ ಪ್ರತಿಯೊಬ್ಬ ಬರಹಗಾರನೂ ತನ್ನ ಭಾಷಾ ಪ್ರಯೋಗಶಕ್ತಿಯನ್ನು ಹೆಚ್ಚಿಸಿಕೊಳ್ಳಬೇಕು. ಈ ಅಭ್ಯಾಸದ ತಪಸ್ಸಿಗೆ ಹಳ–ನಡುಗನ್ನಡ ಮಹಾಕೃತಿಗಳ ಅಧ್ಯಯನ–ಅಧ್ಯಾಪನಗಳು ಅತ್ಯುಪಕಾರಿಗಳಾಗುತ್ತವೆ.

ಅನವ್ಯ ಹೊಸಗನ್ನಡದ ಕಾವ್ಯಪಾಕ, ಕಾವ್ಯಶಯ್ಯೆಗಳು ಇನ್ನೂ ರೂಪಿತವಾಗದಿರುವುದರಿಂದ ಅಥವಾ ಅಸ್ಫುಟವಾಗಿ ಮೂಡಿಬರುತ್ತಿರುವುದರಿಂದ ಅವುಗಳ ಹೊಲಬನ್ನು ಚೆನ್ನಾಗಿ ತೋರಿಸುವಲ್ಲಿ ಹೆಚ್ಚು ಹೆಚ್ಚು ಕೃತಕೃತ್ಯರಾದ ಹಿರಿಯ ಕವಿಗಳ ಸುಮಧುರ ಕೃತಿಗಳನ್ನು ಹಳ–ನಡುಗನ್ನಡಗಳ ಕೃತಿಗಳೊಡನೆಯೇ ಅಭ್ಯಸಿಸುವುದು ಉತ್ತಮ. ನವ್ಯವೊಂದು ಕಿರಾತಾವತಾರ; ಅದೀಗ ಮೂಡಿದ್ದೂ ಆಯ್ತು, ಮುಳುಗಿದ್ದೂ ಆಯ್ತು. ದಿನಪತ್ರಿಕೆಗಳಲ್ಲಿ ಬರುವ ಅಸಂಬದ್ಧ ಪ್ರಲಾಪಗಳು ನವ್ಯವೂ ಅಲ್ಲ, ಕನ್ನಡವೂ ಅಲ್ಲ–ಲಾಂಛನಾಸ್ಪದ ಪದಪದ್ಧತಿಗಳು. ಹಲಕೆಲ ಸಂಪಾದಕರೂ ಪ್ರಕಾಶಕರೂ ಕನ್ನಡನಾಡಿನಲ್ಲಿ ಈಗ ಅವಿವ್ರತರಾಗಿರುವುದು ದುರ್ದೈವ. ಅವರಿಗೂ ಕನ್ನಡಭಾಷೆಗೂ ಇರುವ ಸಂಬಂಧ ತಂತುಮಾತ್ರ–ಕ್ರಯವಿಕ್ರಯಾತ್ಮಕ–ಉದರಂಭರಾತ್ಮಕ.

ಜಗನ್ನಾಥ ಪಂಡಿತನೆಂದಂತೆ ಕೇಳಿದ ಕೂಡಲೇ ಇದು ಕವನ, ಇದಲ್ಲ-ಎಂಬಷ್ಟು ಭಾಷಾವೈಶಿಷ್ಟ್ಯ, ಶೈಲಿವೈಶಿಷ್ಟ್ಯಗಳು ಹಳ ನಡುಗನ್ನಡ ಕಾವ್ಯಾರಾಮದಲ್ಲಿ ಬೆಳೆದು ನಿಂತದ್ದುಂಟು, ಸಂಸ್ಕೃತ ಸಾಧಿಸಿದ್ದ ಈ ಭಾಷಾ ಪರಿಪಾಕವನ್ನು ಹಳಗನ್ನಡ ಅಷ್ಟೇ ಸಮರ್ಥವಾಗಿ ಸಾಧಿಸಿತು. ನಡುಗನ್ನಡವೂ ಹಿಂದೇಟು ಹಾಕಲಿಲ್ಲ. ಕುವೆಂಪುಗಳ ಗದ್ಯ ಪ್ರಬಂದಗಳು ಕೆಲಮಟ್ಟಿಗೆ ಈ ಕಾವ್ಯಪರಿಪಾಕದ ಸ್ವರೂಪವನ್ನು ಉದಾಹರಿಸುತ್ತವೆ. ಶ್ರೀ ಅರವಿಂದರು 'ಮಂತ್ರ' ಅತ್ಯುನ್ನತ ಕಾವ್ಯವೆಂದದ್ದು ಇಲ್ಲಿ ಸ್ಮರಣೀಯ. ಅದರ ಅತಿಪಾಂಚಾಲೀತ್ವವು ಅತಿ ಮಾನಸ ಪ್ರಜ್ಞಾಸ್ತರಗಳಿಂದ ಪ್ರೇರಿತವಾಗಿರುವುದು ಭಾಷೆಯೊಂದರ ಪರಮಸಿದ್ಧಿಯೆನ್ನಿಸುತ್ತದೆ. ಹಳ-ನಡುಗನ್ನಡಗಳಲ್ಲಿ ಕೆಲವೆಡೆಯಾದರೂ ಕಾಣಬಹುದಾದ ಈ ಗುಣವನ್ನು ಮೆಚ್ಚಿ ಅಂಬಿಕಾತನಯದತ್ತರು ಹೊಸಗನ್ನಡ ಮಂತ್ರಗಳನ್ನು ಪ್ರಾಯೋಗಿಕವಾಗಿ ಬರೆದದ್ದು ಸುವೇದ್ಯ.

ಹಳಗನ್ನಡ ಭಾಷೆಯ 'Word music ಶಬ್ದ ಸಂಗೀತ' ಮಿಗಿಲಾದದ್ದು. ಅದರಲ್ಲದು ಅದ್ವಿತೀಯ, ಉಪಮಾತೀತ. ಹಾಗೇ ನಡುಗನ್ನಡದ ನುಡಿಬೆಡಗು(ರಾಘವಾಂಕ-ಕುಮಾರವ್ಯಾಸರು ತೋರಿಸಿದಂತೆ) ಅದ್ವಿತೀಯ, ಅನ್ಯಾದೃಶ. ಅದೇ ಪ್ರಕಾರ ಹೊಸಗನ್ನಡಕ್ಕೇನಾದರೂ ವೈಶಿಷ್ಟ್ಯವುಂಟೇ? ಶ್ರೀ ಕುವೆಂಪುಗಳ ಕಾವ್ಯ ಪ್ರಯೋಗ ಶಾಲೆಯಲ್ಲಿ ಉಕ್ತ ಅಭಾವವನ್ನು ತುಂಬಿಕೊಳ್ಳಲೆಂದು ಹಳ-ನಡು-ಹೊಸಗನ್ನಡಗಳ ಸಂಮಿಶ್ರಣವನ್ನು ಮಾಡಲಾಯ್ತು. ನಾದಲೋಲ ಬೇಂದ್ರೆಯವರು ಹಳಗನ್ನಡದ ಬಿಂದುವನ್ನು ಬಿಟ್ಟುಕೊಟ್ಟು ನಡು-ಹೊಸಗನ್ನಡಗಳ ಸಂಮಿಶ್ರಣ ಹಾಗೂ ಸಂಸ್ಕೃತ ಭಾಷಾಗಣದ ಅಂತ್ಯಪ್ರಾಸ ಪದ್ಧತಿಯನ್ನು ಕನ್ನಡದ ದ್ವಿತೀಯಪ್ರಾಸ ಪದ್ಧತಿಯೊಡನೆಯೇ ಸ್ವೀಕರಿಸಿ ನಾದಮಾಧುರ್ಯದಲ್ಲಿ ಅಪೂರ್ವ ಯಶಸ್ಸನ್ನು ಸಂಪಾದಿಸಿದರು. ಈ ಪದ್ಧತಿಯನ್ನೇ ಹರುಕುಮುರುಕಾಗಿ ನವ್ಯಾತಿ ನವ್ಯರೂ ಅನುಸರಿಸಿದರು. ಭಾಷೆಯ ನಾದದ ಅರ್ಥಸೂಚಕತೆಯನ್ನು ಅದ್ವಿತೀಯವಾಗಿ ಉಪಯೋಗಿಸಿಕೊಂಡದ್ದಕ್ಕೆ **ಪಾಂಚಾಲೀ ಶೈಲಿಯೆನ್ನುತ್ತಾರೆ**. ಸಂಸ್ಕೃತದಲ್ಲಿ ಜಯದೇವ ಕವಿಯು ಪಾಂಚಾಲಿಯ ನಿರುಪಮ ಉದಾಹರಣೆಯನ್ನು (ಗೀತಗೋವಿಂದ ಕಾವ್ಯವನ್ನು) ಬರೆದು ತೋರಿಸಿದ್ದಾನೆ. ಈ ಜಗತ್ತಿನಲ್ಲಿ ಜರ್ಮನ್ ಭಾಷೆಯಲ್ಲಿ ಮಾಡಿದ ಅದರ ಭಾಷಾಂತರವೊಂದೇ ಒಂದು ಮೂಲಕ್ಕೆ ಹತ್ತಿರ ಹತ್ತಿರ ಎನ್ನುವಷ್ಟು ನಾದಸಾಂಕೇತಿಕತೆಯನ್ನು ಮೂಡಿಸುತ್ತದೆ ಎಂದು ಹೇಳಲಾಗಿದೆ. ಸಂಗೀತ ಸಾಹಿತ್ಯಗಳ ಅರ್ಥಧ್ವನಿಯ ಸಮಶಕ್ತಿ ಅಲ್ಲಿ ಐಕ್ಯವಾಗಿ ರಸೋತ್ಕರ್ಷಕಾರಕವಾಗಿದೆ.

ಶಬ್ದವು ಅರ್ಥದ ಶರೀರ. ಅವೆರಡೂ ಪಾರ್ವತೀಪರಮೇಶ್ವರಂತಿರುವುದು ಕಾಲಿದಾಸೋಕ್ತವಾದ ವಸ್ತುಸತ್ಯ. ಆದ್ದರಿಂದ ಶಬ್ದಶುದ್ಧಿಯ ಬಗೆಗೆ ಹಳ-ನಡುಗನ್ನಡಿಗರು ಹೆಚ್ಚು ಗಮನ ಕೊಡುತ್ತಿದ್ದರು. ನವ್ಯರಾಜ್ಯದಲ್ಲಿ ಶಬ್ದವು ಕಾಲಿಗೆ ತಗುಲಿಸಿಕೊಳ್ಳುವ

ಎಕ್ಕಡ; ಅದನ್ನು ಬೇಕಾದ ಹಾಗೆ ಮೆಟ್ಟಬಹುದು. ಅದಕ್ಕೆ ತೊಡಿಸಿದ ಈ 'ಜಾತ್ಯತೀತತೆ' ರಸಜ್ಞತೆಯಿಂದ ದೂರವಾಗಿದೆ. ವಾಕ್‌ಶುದ್ಧಿ, ಮನಃಶುದ್ಧಿ, ದೇಹಶುದ್ಧಿಗಳು ಪರಸ್ಪರ ಪ್ರಭಾವಿಗಳು. ಮೊದಲನೆಯ ಎರಡಂತೂ ಅತ್ಯಂತ ನಿಕಟವರ್ತಿಗಳು. **ಶುದ್ಧಿಮಿಮುಖತೆಯು ಅನಾಗರಿಕತೆಯ ಬೀಜ,** ಅನಾಗರಿಕತೆಯು ನರಕ.

ಮನುಸ್ಮೃತಿಯಲ್ಲಿ ವರ್ಣಧರ್ಮ, ಆಶ್ರಮಧರ್ಮ, ದೇಶಧರ್ಮ, ಕುಲಧರ್ಮಗಳನ್ನು ಹೇಳಲಾಗಿದೆ. 'ಕಾಲಧರ್ಮ' ಎಂಬುದು ಕೆಲವರ ಸ್ವೇಚ್ಛಾಕೃತ. ಕಾಲಕ್ಕೆ ಕ್ರಿಯಾಧರ್ಮವಲ್ಲದೆ ಬೇರೆಯೊಂದಿಲ್ಲ. ಕ್ರಿಯೆ ಪರಂಪರಾ ಸತ್ಯವುಳ್ಳದ್ದು. ಅಸತ್ ಪರಂಪರೆ ಅಧೋಗತಿಕಾರಕ. ಸದಸದ್ವಿವೇಕವು ಅನುಭವಗಳ ತುಲನೆಯಿಂದ ಲಭ್ಯ. ಅನುಭವ ವೈವಿಧ್ಯ ಅನುಭವ ಗಾಂಭೀರ್ಯಗಳಿಲ್ಲದವರ ವಾದ–ವಿವಾದಳು ನಿಷ್ಫಲ ಅಥವಾ ದುಷ್ಫಲ. ಆದುದರಿಂದ ಭಾಷಾಭಿಜಾತ್ಯದ ಮಟ್ಟವನ್ನು ಕನ್ನಡತ್ರಯದಲ್ಲಿ ಗುರುತಿಸಲು ಬೇಕಾದ ಧೀಮಂತಿಕೆಯನ್ನು ಬೆಳೆಯಿಸಿಕೊಳ್ಳುವ ಶಿಕ್ಷಣ ಕನ್ನಡ ಮಕ್ಕಳಿಗೆ ದೊರಕುವಂತಾಗಬೇಕು. ಅರಗಿಳಿಯೋದಿನಿಂದ ಯಾವ ಉಪಯೋಗವೂ ಆಗದು. ನ್ಯಾಯವಾದ ಕಾವ್ಯ ಶಿಕ್ಷಣ ಕ್ರಮದ ಬಗೆಗೆ ದಂಡಿಯ ಕಾವ್ಯಾದರ್ಶವು ಒಂದು ಮಾದರಿಯಾಗಿದೆ. ಕನ್ನಡದಲ್ಲಿ ನೃಪತುಂಗ ಬರೆದ ಕವಿರಾಜಮಾರ್ಗವು ಅದರ ಒಂದು ಅನುಕರಣ. ಹೊಸಗನ್ನಡದಲ್ಲಿ ಇನ್ನು ಮುಂದಾದರೂ ಕವಿರಾಜಮಾರ್ಗಗಳೂ, ಪ್ರಬಂಧ ರಾಜಮಾರ್ಗಗಳೂ, ವಿಮರ್ಶರಾಜಮಾರ್ಗಗಳೂ ಬಂದರೆ ಮಾತ್ರ ವಿಶೃಂಖಲ ಗ್ರಂಥ ರಚನಾ ಪ್ರವೃತ್ತಿಗೆ ಕಡಿವಾಣ ಬಿದ್ದೀತು. ಇಲ್ಲವಾದರೆ ಓದುಗನಿಗೆ ಗೊಂದಲ; ಬರಹಗಳ ಶೈಲಿಯ ಹಾಗೂ ತಿರುಳಿನ ಉತ್ತಮಾಧಮ ಮಧ್ಯಮತೆಗಳ ಭೇದವನ್ನು ಗುರುತಿಸಲಾಗದ ಮಂಕುತಿಮ್ಮ ಪ್ರಜ್ಞೆಯ ಉದಯ! ಇದನ್ನು 'Mass Education ಸ್ತೋಮಶಿಕ್ಷಣ' ಎಂದು ಹಿಗ್ಗಿ ಸಮಾಧಾನಪಟ್ಟುಕೊಳ್ಳುವುದು ತಜ್ಞರ ಆತ್ಮವಂಚನೆ. ಹಳ–ನಡುಗನ್ನಡಗಳ ಮಹಾಕಾವ್ಯಕೃತಿಗಳ ರಾಜಮಾರ್ಗದ ಅಧ್ಯಯನದಿಂದ ಮಾತ್ರ ಹೊಸಗನ್ನಡದ ಹೊಸತನ ಕನ್ನಡವಾಗಿ ವಿಕಾಸಹೊಂದೀತು; ಅನ್ಯಥಾ ಅಸಂಭವ !



**[ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ೧೯೭೭]**

# ಅನುಬಂಧಗಳು

## ಪ್ರೊ.ಬಿ.ಎಚ್.ಶ್ರೀಧರ : ಜೀವನದ ಮುಖ್ಯ ಘಟನೆಗಳು

| | | |
|---|---|---|
| ಜನನ | : | ೨೪ ಏಪ್ರಿಲ್ ೧೯೧೮ |
| | | ಬಿಜೂರು ಗ್ರಾಮ (ಅವಿಭಜಿತ ದಕ್ಷಿಣ ಕನ್ನಡ)ದ ಬವಲಾಡಿಯಲ್ಲಿ |
| ತಂದೆ | : | ಸೀತಾರಾಮ ಹೆಬ್ಬಾರ |
| ತಾಯಿ | : | ನಾಗಮ್ಮ |
| ತಂಗಿಯರು | : | ರುಕ್ಮಿಣಿ, ಸುಶೀಲ, ರಮ |
| ಶಿಕ್ಷಣ | | |
| ಪ್ರಾಥಮಿಕ | : | ಬಿಜೂರಿನ ಪ್ರಾಥಮಿಕ ಶಾಲೆಯಲ್ಲಿ |
| ಮಾಧ್ಯಮಿಕ | : | ಮಿಡಲ್ ಸ್ಕೂಲ್, ಸೊರಬ (೩ ವರ್ಷ) ಮಿಡಲ್ ಸ್ಕೂಲ್, ಸಾಗರ (೧ ವರ್ಷ) |
| ಪ್ರೌಢ | : | ಮುನಿಸಿಪಲ್ ಹೈಸ್ಕೂಲ್, ಸಾಗರ, ಎಸ್.ಎಸ್.ಎಲ್.ಸಿ. ಶಿವಮೊಗ್ಗ ಕೇಂದ್ರದಲ್ಲಿ |
| ಇಂಟರ್ ಮಿಡಿಯಟ್ | : | ಮೈಸೂರಿನ ಯುವರಾಜ ಕಾಲೇಜಿನಲ್ಲಿ |
| ಬಿ.ಎ. (ಆನರ್ಸ್) | : | ಮೈಸೂರಿನ ಮಹಾರಾಜ ಕಾಲೇಜಿನಲ್ಲಿ (೧೯೪೧)ರಲ್ಲಿ ರಾಜ್ಯಕ್ಕೆ ಮೊದಲಿಗನಾಗಿ ಉತ್ತೀರ್ಣ ಪೂರ್ಣ ಕೃಷ್ಣರಾವ್ ಬಂಗಾರದ ಪದಕ ನವೀನಂ ರಾಮಾನುಜಾಚಾರ್ಯ ಬಂಗಾರದ ಪದಕ 'ಕವಿಯೂ ವಿಜ್ಞಾನಿಯೂ' ಪ್ರಬಂಧಕ್ಕೆ ಹೊನ್ನಸೆಟ್ಟಿ ಬಹುಮಾನ |
| ಎಂ.ಎ. ಆನರ್ಸ್ | : | ಮಹಾರಾಜ ಕಾಲೇಜು, ಮೈಸೂರು. |
| ವಿವಾಹ | : | ಮೇ (೧೯೪೬) ರಮಾದೇವಿಯವರೊಡನೆ |

ಮಕ್ಕಳು : ಸುಮಾ, ಪ್ರತಿಭಾ, ವಿಜಯಾ, ರಾಜಶೇಖರ, ರಾಜೇಶ್ವರಿ

ವೃತ್ತಿ : ಪುಣೆಯ ಫೀಲ್ಡ ಕಂಟ್ರೋಲರ್ ಆಫ್ ಮಿಲಿಟರಿ ಎಕೌಂಟ್ಸ್ ಆಫೀಸಿನಲ್ಲಿ ಒಂದು ವರ್ಷ 'ಗುಮಾಸ್ತಗಿರಿ' (೧೯೪೨)

* ಭಟ್ಕಳದ ಇಸ್ಲಾಮಿಯ ಆಂಗ್ಲೋ ಉರ್ದು ಹೈಸ್ಕೂಲಿನಲ್ಲಿ ಸಹ ಶಿಕ್ಷಕರಾಗಿ ೪ ವರ್ಷ ಹಾಗೂ ಹೆಡ್ ಮಾಸ್ತರ್ ಆಗಿ ಒಂದು ವರ್ಷ

* 'ಕರ್ಮವೀರ' ವಾರಪತ್ರಿಕೆ (ಹುಬ್ಬಳ್ಳಿ)ಯ ಉಪಸಂಪಾದಕರಾಗಿ (೧೯೪೭–೫೧)

* ಕುಮಟದ ಕೆನರಾ ಕಾಲೇಜಿನಲ್ಲಿ ಸಂಸ್ಕೃತ ಪ್ರಾಧ್ಯಾಪಕ (೧೯೫೧–೬೨)ರಾಗಿ

* ಶಿರಸಿಯ ಎಂ.ಎಂ. ಕಲಾ–ವಿಜ್ಞಾನ ಮಹಾವಿದ್ಯಾಲಯದಲ್ಲಿ ಉಪ ಪ್ರಾಚಾರ್ಯರಾಗಿ (೧೯೬೨–೬೯) ಸಂಸ್ಕೃತ ಮತ್ತು ಕನ್ನಡ ಪ್ರಾಧ್ಯಾಪಕರಾಗಿ.

* ಸಿದ್ಧಾಪುರದ ಎಂ.ಜಿ.ಸಿ. ಕಾಲೇಜಿನಲ್ಲಿ ಪ್ರಾಚಾರ್ಯರಾಗಿ (೧೯೬೯–೭೬)

* ಶಿರಸಿಯ ಮಾಡರ್ನ್ ಎಜ್ಯುಕೇಷನ್ ಸೊಸೈಟಿಯ ಆನರರಿ ಮೆನೇಜರ್‌ಗಾಗಿ ೧೫–೬–೧೯೮೨ ರವರೆಗೆ

ನಿಧನ : ಏಪ್ರಿಲ್ ೨೪, ೧೯೯೦

ಪ್ರಕಟಣೆಗಳು : ೧೯ನೇಯ ವಯಸ್ಸಿನಲ್ಲಿ ಇಂಟರ್ ಮೀಡಿಯಟ್ ಓದುತ್ತಿದ್ದಾಗ ಬೆಂಗಳೂರಿನ 'ಸುಬೋಧ' ರಾಮರಾಯರ ಕರೆಯ ಮೇರೆಗೆ ಬರೆದು ಪ್ರಕಟಿಸಿದ ಚಂಪಕಮಾಲಾ ವೃತ್ತದಲ್ಲಿದ್ದ ಕವನ ಮೊದಲ ಪ್ರಕಟಣೆ. ೧೯೯೦ರಲ್ಲಿ ಕೈಗಾ ಅಣು ವಿದ್ಯುತ್ ಸ್ಥಾವರ ಕುರಿತು 'ನಾಗರಿಕ' ಪತ್ರಿಕೆಯಲ್ಲಿ ಕೊನೆಯ ಲೇಖನ. ಈ ಮಧ್ಯದಲ್ಲಿ ೫೦ಕ್ಕೂ ಹೆಚ್ಚು ಪುಸ್ತಕಗಳು, ನೂರಾರು ಲೇಖನಗಳು ಪ್ರಕಟವಾದವು.

**ಪ್ರಶಸ್ತಿ/ಗೌರವಗಳು**

ಕಾವ್ಯಸೂತ್ರ : ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ

ತೀ.ನಂ.ಶ್ರೀ ಸ್ಮಾರಕ ಬಹುಮಾನ

ಮೈಸೂರು ವಿ.ವಿ. ಸುವರ್ಣ ಮಹೋತ್ಸವ ಬಹುಮಾನ

ರಾಷ್ಟ್ರಸೂತ್ರ : ರಾಜ್ಯ ಸರಕಾರ ಅನುದಾನ

ಮೂರು ಸಾವಿರ ಮಠ, ಹುಬ್ಬಳ್ಳಿ, ಬಹುಮಾನ

ಜ್ಞಾನಸೂತ್ರ : ಹುಬ್ಬಳ್ಳಿಯ ಲೋಕ ಶಿಕ್ಷಣ ಟ್ರಸ್ಟ್ ಬಹುಮಾನ

ಮಾನಸ ದರ್ಪಣ : ಮದ್ರಾಸ್ ಕ್ರಿಶ್ಚಿಯನ್ ಟೆಕ್ಸ್ಟ್‌ಬುಕ್ ಕಮಿಟಿ ಬಹುಮಾನ

ನೌಕಾಗೀತ : ಕೇಂದ್ರ ಸರಕಾರದ ಸಂರಕ್ಷಣಾ ಶಾಖೆ ಬಹುಮಾನ

ರಸಯಜ್ಞ : ದೇವರಾಜ ಬಹಾದೂರ ಬಹುಮಾನ

ಮನುಸ್ಮೃತಿ (ರಾಜಧರ್ಮ) : ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಪದವಿ ತರಗತಿ ಪಠ್ಯಪುಸ್ತಕ

೫೫ನೇಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಪತ್ರಿಕಾ ಗೋಷ್ಠಿ ಅಧ್ಯಕ್ಷ ಉ.ಕ. ಜಿಲ್ಲಾ ಮೂರನೆಯ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ (೧೯೭೪)

ಕುಂದಾಪುರದಲ್ಲಿ 'ಜೇಸೀ' ಸನ್ಮಾನ (೧೯೮೦)

ಶಿರಸಿಯ ರೋಟರಿ ಕ್ಲಬ್ ಸನ್ಮಾನ (೧೯೮೭)

ಶಿರಸಿಯ 'ರಂಗ ಸಂಗ' ಕಲಾರಂಗದವರಿಂದ ಪೌರ ಸನ್ಮಾನ (೧೯೮೭)

ಯುಗ ಪುರುಷದ ಬಳಗದಿಂದ ಕಿನ್ನಗೋಳಿಯಲ್ಲಿ ಸನ್ಮಾನ (೧೯೮೮)

# ಬಿ.ಎಚ್.ಶ್ರೀಧರ ಕೃತಿ ಸೂಚಿ

**೧. ಕಾವ್ಯ**

| | | |
|---|---|---|
| ಮೇಘನಾದ | ಸಾಹಿತ್ಯ ಮಂದಿರ, ಮೈಸೂರು | ೧೯೪೫ |
| ಕಿನ್ನರಗೀತ | ಕಥಾಂಜಲಿ ಗ್ರಂಥಮಾಲೆ, ಬೆಂಗಳೂರು | ೧೯೪೭ |
| ಅಮೃತಬಿಂದು | ಸಂಯುಕ್ತ ಕರ್ನಾಟಕ ಕಾರ್ಯಾಲಯ, ಹುಬ್ಬಳ್ಳಿ | ೧೯೪೯ |
| ಮಂಜುಗೀತ | ಲೇಖಕರು, ಕುಮಟ | ೧೯೫೮ |
| ರಸಯಜ್ಞ | ವಿದ್ಯಾರಣ್ಯ ಪ್ರಕಾಶನ ಸಂಸ್ಥೆ, ಶಿರಸಿ | ೧೯೬೪ |
| ಮುತ್ತುರತ್ನ | ಸುಲಭ ಸಾಹಿತ್ಯ ಪ್ರಕಾಶನ, ಕುಮಟ | ೧೯೬೮ |
| | (ಮ.ಮು. ೧೯೮೩) | |
| ನೌಕಾಗೀತ | 'ಸಮಗ್ರ'ದ ಸಂಪುಟ – ೧ರಲ್ಲಿ | ೨೦೧೩ |
| ಕದಂಬ ವೈಭವ | ಪ್ರಬುದ್ಧ ಕರ್ನಾಟಕದಲ್ಲಿ | ೧೯೭೦; |
| | ಸಾಹಿತ್ಯ ಮಂದಿರ ಶಿರಸಿ | ೧೯೮೭ |
| ಕಂಟಕಾರಿ ಮಹಾಕಾವ್ಯಂ | ದೀನಬಂಧು ಪ್ರಕಾಶನ, ಹೊನ್ನಾವರ | ೧೯೮೧ |
| ಜಾತವೇದ | ಪಿ.ಎ.ಎನ್. ಪಬ್ಲಿಷರ್ಸ್, ಬೆಂಗಳೂರು | ೧೯೮೪ |
| ಅಮೃತಬಿಂದು (ಶ್ರೀಧರ ಕಾವ್ಯ ವಾಚಿಕೆ) | ಸಾಹಿತ್ಯ ಪರಿಷತ್ತು ಬೆಂಗಳೂರು | ೨೦೦೭ |

**೨. ಯಕ್ಷಗಾನ**

ಯಕ್ಷಗಾನ ಪಂಚರಾತ್ರ ವಾರ್ಧಿಕ್ಯ, ಶಿರಸಿಯ 'ಧ್ಯೇಯನಿಷ್ಠ ಪತ್ರಕರ್ತ' ದಿನಪತ್ರಿಕೆಯಲ್ಲಿ ೫–೧೨–೧೯೯೩ ರಿಂದ ೮–೫–೧೯೯೪ರ ವರೆಗೆ ಪ್ರತಿ ಭಾನುವಾರ

ಕರ್ನಾಟಕ ಯಕ್ಷಗಾನ ಅಕಾಡಮಿ, ಬೆಂಗಳೂರು — ೨೦೨೦

**೩. ನಾಟಕ**

ಮಯೂರ ಶರ್ಮ, ಯುಗಪುರುಷ ಪ್ರಕಟಣಾಲಯ, ಕಿನ್ನಿಗೋಳಿ — ೧೯೮೮

ಸೋಮಾರಿಗಳ ಕ್ಲಬ್ (ಅಪ್ರಕಟಿತ) — ೧೯೮೭

**೪. ಆತ್ಮಕಥೆ**

ಜೀವಯಾನ, ಬಿ.ಎಚ್.ಶ್ರೀ. ಸಾಹಿತ್ಯ ಪ್ರಶಸ್ತಿ ಸಮಿತಿ, ಶಿರಸಿ ೧೯೯೪

**೫. ವಿನೋದ–ವಿಡಂಬನೆ**

| | | |
|---|---|---|
| ಬೇತಾಳಗಳ ಕುಣಿತ } | ಸರ್ವೋದಯ ಸಾಹಿತ್ಯ ಮಾಲೆ, ಹುಬ್ಬಳ್ಳಿ | ೧೯೫೧ |
| | ತೇಜು ಪಬ್ಲಿಕೇಷನ್ಸ್, ಬೆಂಗಳೂರು | ೨೦೨೦ |
| ಭಾಷಣಗಳ ಭೈರವರ ಒಡ್ಡೋಲಗ | ಎ.ಎಂ.ಜಿ. ಸಾಹಿತ್ಯ ಪ್ರಕಾಶನ, ಉಡುಪಿ | ೧೯೬೬ |

**೬. ವಿಮರ್ಶೆ**

| | | |
|---|---|---|
| ಬೇಂದ್ರೆ | ಎಂ.ಜಿ.ಎಂ. ಕಾಲೇಜು ಉಡುಪಿ | ೧೯೫೬ |
| ಹೊಸಗನ್ನಡ ಸಾಹಿತ್ಯ ಶೈಲಿ | ಪ್ರತಿಭಾ ಗ್ರಂಥಮಾಲೆ, ಧಾರವಾಡ | ೧೯೫೭ |
| ಕವೀಂದ್ರ ರವೀಂದ್ರ | ಶಶಿ ಪ್ರಕಾಶನ, ಬೆಂಗಳೂರು | ೧೯೫೯ |
| ಕಾವ್ಯಸೂತ್ರ | ವಿದ್ಯಾರಣ್ಯ ಗ್ರಂಥ ಪ್ರಕಾಶನ, ಶಿರಸಿ | ೧೯೬೮ |
| ಪ್ರತಿಭೆ | ರವೀಂದ್ರ ಪ್ರಕಾಶನ, ಕಾರ್ಗಲ್ | ೧೯೭೮ |
| ಸಂಸ್ಕೃತಗಳ ಕನ್ನಡಗಳ ಬಾಂಧವ್ಯ | ಅಖಿಲ ಕರ್ನಾಟಕ ಸಂಸ್ಕೃತ ಪರಿಷತ್ ಮಂಗಳೂರು | ೧೯೮೧ |
| ಪಸರಿಪ ಕನ್ನಡಕ್ಕೊಡೆಯನೀಗ ದರಾಂಕಿತ ಬೇಂದ್ರೆ | ಶ್ರೀಮಾತಾ ಪ್ರಕಾಶನ ಧಾರವಾಡ | |
| ಜನ್ನ (ಸಂ.ವಿ.ಸಿ) | ಐ.ಬಿ.ಎಚ್.ಪ್ರಕಾಶನ ಬೆಂಗಳೂರು | ೧೯೭೫ |
| ಭಾವನಾ ಸಮನ್ವಯ | ಬಂಡಾಯ ಪ್ರಕಾಶನ – ಅರೆಅಂಗಡಿ | ೨೦೦೯ |

**೭. ವೈಚಾರಿಕ**

| | | |
|---|---|---|
| ಭಾರತೀಯ ನಾಗರಿಕತೆಗೆ | ಪ್ರಸಾರಾಂಗ | ೧೯೫೯ |
| ಮನುವಿನ ಕೊಡುಗೆ | ಕ.ವಿ.ವಿ. ಧಾರವಾಡ (ಮರುಮುದ್ರಣ) | ೧೯೭೧ |
| ಪಂಚಮುಖಿ } | ಅಂತರಂಗ ಕಾರ್ಯಾಲಯ, ಉಡುಪಿ | ೧೯೫೫ |
| | ತೇಜು ಪಬ್ಲಿಕೇಷನ್ಸ್, ಬೆಂಗಳೂರು | ೨೦೨೦ |
| ವಿದೇಶದ ತಿಳಿವಳಿಕೆಗಳು | ರಾಮಕೃಷ್ಣ ಪ್ರಿಂಟಿಂಗ್ ವರ್ಕ್ಸ್, ಕುಮಟ | ೧೯೫೯ |
| ಜ್ಞಾನಸೂತ್ರ | ವಿದ್ಯಾರಣ್ಯ ಗ್ರಂಥ ಪ್ರಕಾಶನ, ಶಿರಸಿ | ೧೯೬೯ |
| ಮಾನಸದರ್ಪಣ (ಹನುಮಂತರಾವ್ ಅವರೊಂದಿಗೆ) | ಸಮಾಜ ಪುಸ್ತಕಾಲಯ, ಧಾರವಾಡ | ೧೯೭೩ |

| | | |
|---|---|---|
| ರಾಷ್ಟ್ರಸೂತ್ರ | ವಿಶ್ವ ಪ್ರಕಾಶನ, ಹುಬ್ಬಳ್ಳಿ | ೧೯೭೪ |
| ವಿಚಾರ ವಿಜಯ | ರವೀಂದ್ರ ಪುಸ್ತಕಾಲಯ, ಕಾರ್ಗಲ್ | ೧೯೮೧ |
| ಭಾರತೀಯ ಮೂರ್ತಿಶಿಲ್ಪ | ರಂಗಸಂಗ, ಕಲಾರಂಗ–ಶಿರಸಿ | ೧೯೮೮ |

**೮. ಇತಿಹಾಸ**

| | | |
|---|---|---|
| ಬನವಾಸಿಯ ಕದಂಬರು | ಶತಮಾನೋತ್ಸವ ಸಮಿತಿ, ಬನವಾಸಿ (ಎಲ್.ಟಿ. ಶರ್ಮಾರೊಂದಿಗೆ) | ೧೯೬೬ |
| ಬನವಾಸಿಯ ಇತಿಹಾಸ | ಸಾಹಿತ್ಯ ಮಂದಿರ, ಶಿರಸಿ | ೨೦೦೪ |

**೯. ಇತರೆ**

| | | |
|---|---|---|
| ಮಯೂರ ಶರ್ಮ | ಐ.ಬಿ.ಎಚ್. ಪ್ರಕಾಶನ, ಬೆಂಗಳೂರು (ಮರುಮುದ್ರಣ ೧೯೭೧) | ೧೯೭೧ |
| ಕೌಶಿಕ ರಾಮಾಯಣ | ಐ.ಬಿ.ಎಚ್. ಪ್ರಕಾಶನ, ಬೆಂಗಳೂರು | ೧೯೭೨ |
| ರಮಣ ಮಹರ್ಷಿ | ಸುಲಭ ಸಾಹಿತ್ಯ ಪ್ರಕಾಶನ, ಕುಮಟ | ೧೯೬೯ |
| ಉತ್ತರ ಕನ್ನಡ ಜಿಲ್ಲೆಯ | ಪ್ರೇಕ್ಷಣೀಯ ಸ್ಥಳಗಳು | (ಉಪಲಬ್ಧವಿಲ್ಲ) |
| ಬನವಾಸಿಯ ಕೈಪಿಡಿ | ಬನವಾಸಿ ಮಧುಕೇಶ್ವರ ಉತ್ಸವಮೂರ್ತಿ ಜೀರ್ಣೋದ್ಧಾರ ಸಮಿತಿ | ೧೯೭೧ |
| ಸಾಹಿತ್ಯ ಚಿಂತನ | (ಮಂಜುವಾಣಿಯಲ್ಲಿ ಧಾರಾವಾಹಿಯಾಗಿ) | ೧೯೮೧–೮೩ |
| ಶಿವಪುರಾಣ | (ಮಂಜುವಾಣಿಯಲ್ಲಿ ಧಾರವಾಹಿಯಾಗಿ) | ೧೯೮೪–೮೮ |
| ವೇದರಹಸ್ಯಸಾರ | ರಾಜಶೇಖರ ಹೆಬ್ಬಾರ, ಶಿರಸಿ | ೨೦೦೩ |

**೧೦. ಅನುವಾದ**

(ಇಂಗ್ಲಿಷಿನಿಂದ)

ಭಾರತೀಯ ರಾಜ್ಯಧರ್ಮದ ಸತ್ವ ಮತ್ತು ಸ್ವರೂಪ

(ಆರವಿಂದರ The Foundations of Indian Culture (ಭಾಗ–೧) ಅನುವಾದ)

ಎನ್.ಆರ್. ರಾವ್‌ರೊಂದಿಗೆ ಸುಲಭ ಸಾಹಿತ್ಯ ಪ್ರಕಾಶನ, ಕುಮಟ ೧೯೫೫

ಭಾರತೀಯ ವಾಙ್ಮಯ

(ಅರವಿಂದರ The Foundations of Indian Culture (ಭಾಗ–೨) ಅನುವಾದ)

ಎನ್.ಆರ್.ರಾವ್‌ರೊಂದಿಗೆ ಸುಲಭ ಸಾಹಿತ್ಯ ಪ್ರಕಾಶನ, ಕುಮಟ ೧೯೫೭

ಟಿ.ಎಸ್.ಈಲಿಯಟ್ (ಎ.ಸಿ.ಬ್ರ್ಯಾಡ್ ಬ್ರೂಕ್‌ರ T.S.Eliot ಅನುವಾದ)
ಎಂ.ಜಿ.ಎಂ. ಕಾಲೇಜು ಉಡುಪಿ. ೧೯೫೭

ಸ್ವಾತಂತ್ರ್ಯ ಮೀಮಾಂಸೆ
(ಜೆ.ಎಸ್. ಮಿಲ್ಲರ On Liberty ಅನುವಾದ ಎನ್.ಆರ್. ರಾವ್‌ರೊಂದಿಗೆ)
ಲೇಖಕರು – ಕುಮಟ ೧೯೬೧

ಮಾತೃಶ್ರೀ (ಪಶುಪತಿಯವರ On the Mother Divine ಅನುವಾದ)
ಶ್ರೀ ಅರವಿಂದೋ ಸೊಸೈಟಿ, ಶಿವಮೊಗ್ಗ ೧೯೭೫

ವೇದರಹಸ್ಯ (ಶ್ರೀ ಅರವಿಂದರ The Secret of the Veda ಅನುವಾದ)
ಶಿವಾ ಆಫ್‌ಸೆಟ್ ಪ್ರಿಂಟರ್ಸ್, ಬೆಳಗಾವಿ ೨೦೧೭

ನೆಹರೂ ಉವಾಚ (ಉಪಲಬ್ಧವಿಲ್ಲ)

ರಮಣ ಮಾರ್ಗ ಭಾಗ ೧ ಮತ್ತು ಭಾಗ –೨
(ಶ್ರೀ ಸಾಧು ಓಂ ಅವರ The Path of Ramana Part-1 & Part 2 ಅನುವಾದ)
ತೇಜು ಪಬ್ಲಿಕೇಷನ್ಸ್, ಬೆಂಗಳೂರು ೨೦೧೯

**ಅನುವಾದ (ಸಂಸ್ಕೃತ)**

ಕಾಳಿದಾಸ ಕಾವ್ಯ ಸೌರಭ ರೋಟರಿ ಕ್ಲಬ್, ಕುಮಟ (ಉಪಲಬ್ಧವಿಲ್ಲ) ೧೯೬೨
ಕುಂದಮಾಲೆ (ನಾಟಕ) ಗೀತಾ ಬುಕ್ ಹೌಸ್, ಮೈಸೂರು ೧೯೬೭
ಸಂಸ್ಕೃತ ಸುಭಾಷಿತ ಸಂಗ್ರಹ ಪ್ರಸಾರಾಂಗ, ಕ.ವಿ.ವಿ. ಧಾರವಾಡ ೧೯೭೧
ರಾಜಧರ್ಮ ಪ್ರಸಾರಾಂಗ, ಕ.ವಿ.ವಿ. ಧಾರವಾಡ ೧೯೭೪
(ಮನುಸ್ಮೃತಿ ೭ನೇ ಅಧ್ಯಾಯದ ಅನುವಾದ – ಟಿಪ್ಪಣಿ, ಪೀಠಿಕೆ ಸಹಿತ ಬಿ.ಆರ್.ಮೋಡಕರೊಂದಿಗೆ)

**೧೧. ಸಂಪಾದಿತ**

ನವರತ್ನ (ಮಿಸಲೆನಿ) ಸುಲಭ ಸಾಹಿತ್ಯ ಪ್ರಕಾಶನ, ಕುಮಟ (ವರ್ಷ ನಮೂದಿಸಿಲ್ಲ)

ಬವವಾಡಿ ಹಿರಿಯಣ್ಣ ಹೆಬ್ಬಾರ್ ವಿರಚಿತ
ಭಾನುಮತಿ ಕಲ್ಯಾಣ (ಯಕ್ಷಗಾನ) ಕಾವ್ಯಾಲಯ ಪ್ರಕಾಶಕರು, ಮೈಸೂರು ೧೯೫೮

ರಸೋ ವೈ ಸಃ (ಹಿರಿಯಣ್ಣ ಹೆಬ್ಬಾರರ ಯಕ್ಷಗಾನ ಮತ್ತು ಭಕ್ತಿ ಸ್ತೋತ್ರಗಳು)
'ಸಾಹಿತ್ಯ ಮಂದಿರ' ಶಿರಸಿ ೧೯೮೭

# ಬಿ.ಎಚ್. ಶ್ರೀಧರ ಸಮಗ್ರ ಸಾಹಿತ್ಯ
# ತೇಜು ಪಬ್ಲಿಕೇಷನ್ಸ್ – ಬೆಂಗಳೂರು

**ಸಂಪುಟ ೧ – ಕಾವ್ಯ – ೨೦೧೩**

**ಸಂಕಲಿತ ಕೃತಿಗಳು:** ೧. ಮೇಘನಾದ ೨. ಕಿನ್ನರಗೀತ ೩. ಅಮೃತಬಿಂದು ೪. ರಸಯಜ್ಞ ೫. ಮುತ್ತುರತ್ನ ೬. ನೌಕಾಗೀತ ೭. ಕದಂಬವೈಭವ ೮. ಕಂಟಕಾರಿ ಮಹಾಕಾವ್ಯಂ ೯. ಜಾತವೇದ.

**ಸಂಪುಟ ೨ – ವಿಮರ್ಶೆ – ೨೦೧೩**

**ಸಂಕಲಿತ ಕೃತಿಗಳು:** ೧. ಬೇಂದ್ರೆ ೨. ಹೊಸಗನ್ನಡ ಸಾಹಿತ್ಯ ಶೈಲಿ ೩. ಕವೀಂದ್ರ ರವೀಂದ್ರ ೪. ಕಾವ್ಯಸೂತ್ರ ೫. ಜನ್ನ ೬. ಪ್ರತಿಭೆ ೭. ಪಸರಿಪ ಕನ್ನಡಕ್ಕೊಡೆಯನೀಗ ದರಾಂಕಿತ ಬೇಂದ್ರೆ

**ಸಂಪುಟ ೩ – ವಿಚಾರ – ೨೦೧೪**

**ಸಂಕಲಿತ ಕೃತಿಗಳು:** ೧. ಭಾರತೀಯ ನಾಗರಿಕತೆಗೆ ಮನುವಿನ ಕೊಡುಗೆ ೨. ವಿದೇಶದ ತಿಳಿವಳಿಕೆಗಳು ೩. ಭಾವನಾ ಸಮನ್ವಯ ೪. ಜ್ಞಾನಸೂತ್ರ ೫. ಮಾನಸದರ್ಪಣ ೬. ರಾಷ್ಟ್ರಸೂತ್ರ ೭. ವಿಚಾರವಿಜಯ ೮. ಸಂಸ್ಕೃತ – ಕನ್ನಡಗಳ ಬಾಂಧವ್ಯ ೯. ಭಾರತೀಯ ಮೂರ್ತಿಶಿಲ್ಪ

**ಸಂಪುಟ ೪ – ಸಂಕೀರ್ಣ – ೨೦೧೭**

**ಸಂಕಲಿತ ಕೃತಿಗಳು:** ೧. ಭಾಷಣ ಭೈರವರ ಒಡ್ಡೋಲಗ ೨. ಸೋಮಾರಿ ಕ್ಲಬ್ ೩. ಯಕ್ಷಗಾನ ಪಂಚರಾತ್ರ ೪. ಬನವಾಸಿಯ ಕೈಪಿಡಿ ೫. ಬನವಾಸಿಯ ಕದಂಬರು ೬. ಮಯೂರಶರ್ಮ (ಇತಿಹಾಸ) ೭. ಕನ್ನಡದ ಪ್ರಥಮ ಸಾರ್ವಭೌಮ ಮಯೂರಶರ್ಮ (ನಾಟಕ) ೮. ಕೌಶಿಕ ರಾಮಾಯಣ (ಕಾವ್ಯಸಂಗ್ರಹ) ೯. ಜೀವಂಯಾನ ೧೦. ಸಹ್ಯಾದ್ರಿ ದರ್ಶನ ೧೧. ಜೀವನಚರಿತ್ರೆ ೧೨. ಸಂಸ್ಮರಣೆ

**ಸಂಪುಟ ೫ – ಅನುವಾದ ೧ – ೨೦೧೮**

**ಸಂಕಲಿತ ಕೃತಿಗಳು (ಸಂಸ್ಕೃತದಿಂದ):** ೧. ದಿಙ್ನಾಗ ಕವಿ ವಿರಚಿತ 'ಕುಂದಮಾಲೆ' (ನಾಟಕ) ೨. ಸಂಸ್ಕೃತ ಸುಭಾಷಿತ ಸಂಗ್ರಹ ೩. ಮನುಸ್ಮೃತಿ (ರಾಜಧರ್ಮ) – ಅಧ್ಯಾಯ ೭ ೪. ಶಿವಪುರಾಣ ('ಶಿವಪುರಾಣ'ದ ಸಾರ)

**ಸಂಪುಟ ೬ – ಅನುವಾದ – ೨ – ೨೦೧೯**

**ಸಂಕಲಿತ ಕೃತಿಗಳು – (ಇಂಗ್ಲೀಷ್‌ನಿಂದ):** ೧. ಭಾರತೀಯ ರಾಜ್ಯಧರ್ಮದ ಸತ್ವ ಮತ್ತು ಸ್ವರೂಪ ೨. ಭಾರತೀಯ ವಾಙ್ಮಯ ೩. ಟೀ.ಎಸ್. ಈಲಿಯಟ್ ೪. ಸ್ವಾತಂತ್ರ್ಯ ಮೀಮಾಂಸೆ ೫. ಮಾತೃಶ್ರೀ

## ಶ್ರೀಧರರ ನೆನಪು

ಶ್ರೀಧರರ ನೆನಪು ಚಿರಂತನವಾಗಿ ಉಳಿಯುವಂತೆ ಮಾಡಲು ಅವರ ಕುಟುಂಬದವರು ಶಿಷ್ಯರು ಹಾಗೂ ಅಭಿಮಾನಿಗಳ ಪರವಾಗಿ ಡಾ.ಟಿ.ನಾರಾಯಣ ಭಟ್, ಎಚ್.ಆರ್.ಅಮರನಾಥ, ಕಿರಣಭಟ್, ವಿಷ್ಣುಹೆಗಡೆ ಹಾಗೂ ರಾಜಶೇಖರ ಹೆಬ್ಬಾರ, ಜಗದೀಶ ಭಂಡಾರಿ, 'ಬಿ.ಎಚ್.ಶ್ರೀಧರ ಸಾಹಿತ್ಯ ಪ್ರಶಸ್ತಿ ಸಮಿತಿಯನ್ನು ರೂಪಿಸಿ ಪ್ರತಿ ವರ್ಷ ಕನ್ನಡದ ಉತ್ತಮ ಸಾಹಿತ್ಯ ಕೃತಿಗೆ ಬಹುಮಾನ ನೀಡುವ ವ್ಯವಸ್ಥೆ ಮಾಡಿದ್ದಾರೆ (೧೯೯೧ ರಿಂದ) –ಸಿ.ಎನ್.ಹೆಗಡೆ, ಸಿ.ಆರ್.ಶಾನಭಾಗ, ಯು.ಎ.ಐತಾಳ, ವಿಠಲ ಭಂಡಾರಿ, ಶ್ರೀಪಾದ ಭಟ್, ಯಶವಂತ ನಾಯಕ ಇವರು ಸದಸ್ಯರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

# ಬಿ.ಎಚ್.ಶ್ರೀಧರ ಸಾಹಿತ್ಯ ಪ್ರಶಸ್ತಿ ಪುರಸ್ಕೃತರು

| ವರ್ಷ | ಪ್ರಶಸ್ತಿ | ಕೃತಿ | ಅಧ್ಯಕ್ಷತೆ |
|---|---|---|---|
| ೧೯೯೧ | ನಾ.ಮೊಗಸಾಲೆ | ಪ್ರಭವ (ಕಾವ್ಯ) | ಕೀರ್ತಿನಾಥ ಕುರ್ತಕೋಟಿ |
| ೧೯೯೨ | ಗಿರೀಶ ಕಾರ್ನಾಡ | ತಲೆದಂಡ (ನಾಟಕ) | 'ಎನ್ಕೆ' ಕುಲಕರ್ಣಿ |
| ೧೯೯೩ | ಪಿ.ಲಂಕೇಶ ಹಾಗೂ | ಅಕ್ಕ (ಕಾದಂಬರಿ) | |
| | ದು.ನಿಂ.ಬೆಳಗಲಿ | ದೇವದಾಸಿ (ಕಾದಂಬರಿ) | ಶಿವರಾಮ ಕಾರಂತ |
| ೧೯೯೪ | ಪುರುಷೋತ್ತಮ ಬಿಳಿಮಲೆ | ಶಿಷ್ಟ ಪರಿಶಿಷ್ಟ (ವಿಮರ್ಶೆ) | ಕೆ.ವಿ.ಸುಬ್ಬಣ್ಣ |
| ೧೯೯೫ | ಎಚ್.ಎಸ್.ವೆಂಕಟೇಶಮೂರ್ತಿ | ಎಷ್ಟೊಂದು ಮುಗಿಲು (ಕವನ) | ಪಾಟೀಲ ಪುಟ್ಟಪ್ಪ |
| ೧೯೯೬ | ಜಿ.ಎಸ್.ಆಮೂರ | ಕನ್ನಡ ಕಥನ ಸಾಹಿತ್ಯ ಕಾದಂಬರಿ ವಿಮರ್ಶೆ | ಪ್ರಸನ್ನ |
| ೧೯೯೭ | ಜಯಂತ ಕಾಯ್ಕಿಣಿ | ಅಮೃತಬಳ್ಳಿ ಕಷಾಯ (ಕಥಾಸಂಕಲನ) | ವೇಣುಗೋಪಾಲ |
| ೧೯೯೮ | ಸವಿತಾ ನಾಗಭೂಷಣ | ಸ್ತ್ರೀಲೋಕ (ಕಾದಂಬರಿ) | ಸಿ.ಎನ್.ರಾಮಚಂದ್ರನ್ |
| ೧೯೯೯ | ಕೆ.ವಿ.ನಾರಾಯಣ | ಬೇರು–ಕಾಂಡ–ಚಿಗುರು (ವಿಮರ್ಶೆ) | ವಿಷ್ಣುನಾಯ್ಕ |
| ೨೦೦೦ | ಪ್ರತಿಭಾ ನಂದಕುಮಾರ್ | ಕವಡೆ ಆಟ (ಕವನ) | ಗಿರಡ್ಡಿ ಗೋವಿಂದರಾಜ್ |
| ೨೦೦೧ | ಕೆ.ರಾಘವೇಂದ್ರರಾವ್ | Imagining the unimaginable communities | ಟಿ.ನಾ.ಭಟ್ |
| ೨೦೦೨ | ಮೊಗಳ್ಳಿ ಗಣೇಶ | ಭೂಮಿ (ಕಥಾ ಸಂಕಲನ) | ಬರಗೂರು ರಾಮಚಂದ್ರಪ್ಪ |
| ೨೦೦೩ | ಶಿವರಾಮ ಪಡಿಕ್ಕಲ್ | ನಾಡು ನುಡಿಯ ರೂಪಕ (ವಿಮರ್ಶೆ) | ಬಿ.ಎ.ಸನದಿ |
| ೨೦೦೪ | ಚಿಂತಾಮಣಿ ಕೊಡ್ಲೆಕೆರೆ | ತಲೆಮಾರಿನ ಕೊನೆಯ ಕೊಂಡಿ | ಜಯಂತ ಕಾಯ್ಕಿಣಿ |
| ೨೦೦೫ | ಎ.ಎನ್.ಪ್ರಸನ್ನ | ರಥಸಪ್ತಮಿ (ಕಥಾಸಂಕಲನ) | ಜಿ.ಎಸ್.ಆಮೂರ |
| ೨೦೦೬ | ಎಸ್.ದಿವಾಕರ | ನಾಪತ್ತೆಯಾದ ಗ್ರಾಮಾಫೋನ್ ಮತ್ತು ಇತರ ಪ್ರಬಂಧಗಳು (ವೈಚಾರಿಕ ಗದ್ಯ) | ಶಂಭು ಹೆಗಡೆ |
| ೨೦೦೭ | ಎಸ್.ಮಂಜುನಾಥ | ಕಲ್ಲ ಪಾರಿವಾಳಗಳ ಬೇಟ (ಕವನ) | ಚಿಂತಾಮಣಿ ಕೊಡ್ಲೆಕೆರೆ |
| ೨೦೦೮ | ಗಿರಡ್ಡಿ ಗೋವಿಂದರಾಜ್ | ಹಿಡಿಯದ ಹಾದಿ (ಪ್ರಬಂಧ) | ಕಿ.ರಂ.ರಾಮಚಂದ್ರನ್ |
| ೨೦೦೯ | ಅಶೋಕ ಹೆಗಡೆ | ವಾಸನೆ, ಶಬ್ದ, ಬಣ್ಣ ಇತ್ಯಾದಿ (ಕಥಾ ಸಂಕಲನ) | ಸಿ.ಎನ್.ರಾಮಚಂದ್ರನ್ |
| ೨೦೧೦ | ಪ್ರಸನ್ನ ಹೆಗ್ಗೋಡು | ಬಾಲಗೋಪಾಲ (ಕಾದಂಬರಿ) | ಲಕ್ಷ್ಮೀಶ ತೋಳ್ಪಾಡಿ |

| | | | |
|---|---|---|---|
| ೨೦೧೧ | ಆರ್.ಪಿ.ಹೆಗಡೆ | ಸಮಗ್ರ ಸಾಧನೆಗೆ | ಜಯಂತ ಕಾಯ್ಕಿಣಿ |
| ೨೦೧೨ | ವಿವೇಕ ಶಾನಭಾಗ | ವಿಶಿಷ್ಟ ಸಾಹಿತ್ಯ | ಗೋಪಾಲಕೃಷ್ಣ ಪೈ |
| ೨೦೧೩ | ರಾಜೇಂದ್ರ ಚೆನ್ನಿ | ಸಮಗ್ರ ಸಾಧನೆಗೆ | ಎಮ್. ರಮೇಶ |
| ೨೦೧೪ | ಭುವನೇಶ್ವರಿ ಹೆಗಡೆ | ಸಮಗ್ರ ಸಾಧನೆಗೆ | ವೈದೇಹಿ |
| ೨೦೧೫ | ಕೆ.ವಿ. ಅಕ್ಷರ | ಸಮಗ್ರ ಸಾಧನೆಗೆ | ಟಿ.ಪಿ. ಅಶೋಕ |
| ೨೦೧೬ | ಕೆ. ಸತ್ಯನಾರಾಯಣ | ಸಮಗ್ರ ಸಾಧನೆಗೆ | ಗಿರಡ್ಡಿ ಗೋವಿಂದರಾಜ |
| ೨೦೧೭ | ನಾಗೇಶ ಹೆಗಡೆ | ಸಮಗ್ರ ಸಾಧನೆಗೆ | ಪ್ರಕಾಶ ಭಟ್ಟ |
| ೨೦೧೮ | ಎಸ್.ಆರ್. ವಿಜಯಶಂಕರ | ಸಮಗ್ರ ಸಾಧನೆಗೆ | ಎಚ್.ಎಸ್. ವೆಂಕಟೇಶಮೂರ್ತಿ |
| ೨೦೧೯ | ಅಬ್ದುಲ್ ರಶೀದ್ | ಸಮಗ್ರ ಸಾಧನೆಗೆ | ರಾಜೇಂದ್ರ ಚೆನ್ನಿ |
| ೨೦೨೦ | ಕೃಷ್ಣಮೂರ್ತಿ ಹನೂರು | ಸಮಗ್ರ ಸಾಧನೆಗೆ | |

* ಡಾ.ಟಿ.ಪಿ.ಅಶೋಕ, ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಸುವರ್ಣ, ಗೌರೀಶ ಕಾಯ್ಕಿಣಿ, ಡಾ.ಆರ್.ಪಿ.ಹೆಗಡೆ, ಪ್ರೊ.ಜಿ.ಎಸ್.ಅವಧಾನಿ, ಡಾ.ಆರ್.ವಿ.ಭಂಡಾರಿ, ಡಾ.ಎಂ.ಜಿ.ಹೆಗಡೆ, ಪ್ರೊ.ಎಂ.ರಮೇಶ, ರಾಜಶೇಖರ ಹೆಬ್ಬಾರ, ಡಾ.ಶ್ರೀಪಾದ ಭಟ್ ಇವರೆಲ್ಲ ನಿರ್ಣಾಯಕರಾಗಿ ಕಾರ್ಯನಿರ್ವಹಿಸಿದ್ದಾರೆ.

## ಬಿ.ಎಚ್.ಶ್ರೀಧರ ಶಿಕ್ಷಣ ಪ್ರಶಸ್ತಿ ಪುರಸ್ಕೃತರು

(೨೦೦೫ ರಿಂದ ಕೃಷ್ಣ ಲೋಕರೆಯವರು ನೀಡಿದ ಮೂಲಧನದಿಂದ ಆರಂಭವಾದ ಈ ಪ್ರಶಸ್ತಿಗೆ ಸಿದ್ಧಾಪುರದ ಎಂ.ಜಿ.ಸಿ. ಕಾಲೇಜಿನ ಬಿ.ಎ. ಭಾಗ–೩ ರಲ್ಲಿ ಪ್ರಥಮರಾದ ವಿದ್ಯಾರ್ಥಿಗೆ ಪ್ರತಿವರ್ಷ ನೀಡಲಾಗುತ್ತಿದೆ.)

| | |
|---|---|
| ೨೦೦೫ | ವರದುರ್ಗಾ ಭಟ್ |
| ೨೦೦೬ | ಪ್ರಜ್ಞಾ ಭಟ್ |
| ೨೦೦೭ | ಪ್ರಜ್ಞಾ ಹೆಗಡೆ |
| ೨೦೦೮ | ಗೀತಾ ನಾಯ್ಕ |
| ೨೦೦೯ | ವೆಂಕಟೇಶ ನರಸಿಂಹ ಹೆಗಡೆ |
| ೨೦೧೦ | ಮಧುಲತಾ ಗೌಡರ್ |
| ೨೦೧೧ | ಸಿ.ಆರ್.ರೇಷ್ಮಾ |
| ೨೦೧೨ | ಶ್ರುತಿ ಭಟ್ |

| | |
|---|---|
| ೨೦೧೩ | ಕಾವ್ಯಶ್ರೀ ನಾಯ್ಕ |
| ೨೦೧೪ | ಆಶಾ ಹೆಗಡೆ |
| ೨೦೧೫ | ಲೋಹಿತ್ ಮಹಾಲೆ |
| ೨೦೧೬ | ಮಾಲತಿ ನಾಯ್ಕ |
| ೨೦೧೭ | ಇಂದಿರಾ ಸಬ್ನೀಸ್ |
| ೨೦೧೮ | ಸೀಮಾ ನಾಯ್ಕ |
| ೨೦೧೯ | ಪ್ರಜ್ವಲಾ ಚಂದ್ರಹಾಸ ಶೇಟ್ |
| ೨೦೨೦ | ಭಾಗ್ಯಶ್ರೀ ಆನಂದ ದೊಡ್ಮನೆ |
| ೨೦೨೧ | ಪ್ರೀತಿ ನಾಯ್ಕ |
| ೨೦೨೨ | ಮೀನಾಕ್ಷಿ ನಾಯ್ಕ |

# ಚಿತ್ರಸಂಪುಟ



ಬಿ.ಎಚ್. ಶ್ರೀಧರರು – ನಿಷ್ಕಪಟ ನಗು



ಬಿ.ಎಚ್. ಶ್ರೀಧರರು – ಮಾತಿನ ಓಘದಲ್ಲಿ




(ಎಡದಿಂದ) ಕುಳಿತವರು – ರಮಾದೇವಿ. ಬಿ.ಎಚ್.ಶ್ರೀ, ಮೊಮ್ಮಗ ರಮಣ,
ಟಿ.ಎಮ್. ಸುಬ್ಬರಾಯ, ರಾಜಶೇಖರ ಹೆಬ್ಬಾರ, ಸಾವಿತ್ರಿ (ಸೊಸೆ), ಮೊಮ್ಮಗ ಬ್ರಹ್ಮಾನಂದ




ಕುಂದಾಪುರದಲ್ಲಿ ಕನ್ನಡ ಸಾಹಿತ್ಯೋತ್ಸವ – ಕಾರಂತರೊಂದಿಗೆ ಕಾರ್ಯಕ್ರಮ – ೧.೧೧.೧೯೮೮




'ಭಾರತೀಯ ಮೂರ್ತಿಶಿಲ್ಪ' ಪುಸ್ತಕ ಬಿಡುಗಡೆ (೧೯೮೮) ಸಮಾರಂಭದಲ್ಲಿ ಕಲಾವಿದ ಆರ್.ಜಿ. ರಾಯ್ಕರ, ಡಾ. ಟಿ. ನಾರಾಯಣಭಟ್ ಹಾಗೂ ಬಿ.ಎಚ್.ಶ್ರೀಧರ



ಅಭ್ಯಾಸ ನಿರತ ಬಿ.ಎಚ್.ಶ್ರೀಧರರು




೨೬.೪.೧೯೮೭ರ ಸನ್ಮಾನ – ನಿಂತವರು – ಶ್ರೀ ಎಲ್.ಆರ್. ಭಟ್, ಅವರ ಪತ್ನಿ ನಳಿನಿ (ಭಾರತೀಸುತರ ಮಗಳು), ಕುಳಿತವರು – (ಎಡದಿಂದ) ಶಂತರ ಕಾರಂತ (ಅಳಿಯ), ರಾಜಶೇಖರ ಹೆಬ್ಬಾರ (ಮಗ), ರಮಣ (ಮೊಮ್ಮಗ), ಸಚಿನ್ (ತಂಗಿಯ ಮೊಮ್ಮಗ), ಶ್ರೀಧರರು, ರಮಾದೇವಿ, ಸುಶೀಲೆ (ತಂಗಿ), ವಿಜಯಾ (ಮಗಳು)



ಬಿ.ಎಚ್.ಶ್ರೀಧರ, ರಮಾದೇವಿ, ಬ್ರಹ್ಮಾನಂದ (ಮೊಮ್ಮಗ)



ಮಗಳು ಪ್ರತಿಭಾ ಮತ್ತು ಅಳಿಯ ರಮೇಶ ವೈದ್ಯರೊಂದಿಗೆ ಶ್ರೀಧರ ದಂಪತಿ



ಶಿವರಾಮಕಾರಂತರಿಂದ ಬಿ.ಎಚ್. ಶ್ರೀಧರರಿಗೆ ಸಿದ್ದಾಪುರದಲ್ಲಿ ನಡೆದ
ಸನ್ಮಾನ ಸಮಾರಂಭದಲ್ಲಿ ಮಾತನಾಡುತ್ತಿರುವ ಬಿ.ಎಚ್. ಶ್ರೀ



ಶಿವರಾಮಕಾರಂತರಿಂದ ಶ್ರೀಧರರಿಗೆ ಸನ್ಮಾನ (ಸಿದ್ದಾಪುರ – ೧೯೭೪)



ಸಿದ್ದಾಪುರದ ಎಮ್.ಜಿ.ಸಿ. ಕಾಲೇಜಿನಲ್ಲಿ ನಡೆದ ಕಾರ್ಯಕ್ರಮವೊಂದರಲ್ಲಿ
ಕೆ.ವಿ. ಸುಬ್ಬಣ್ಣನವರೊಂದಿಗೆ ಪ್ರಿನ್ಸಿಪಾಲ್ ಶ್ರೀಧರರು




ಸಿದ್ದಾಪುರದ ಎಮ್.ಜಿ.ಸಿ. ಕಾಲೇಜಿನ ಕಾರ್ಯಕ್ರಮದಲ್ಲಿ
ಚಿತ್ರನಟ ಉದಯಕುಮಾರರೊಂದಿಗೆ ಬಿ.ಎಚ್.ಶ್ರೀಧರ

ಸಿದ್ದಾಪುರದ ಕಾಲೇಜಿನ ಕಾರ್ಯಕ್ರಮವೊಂದರಲ್ಲಿ ಬಿ.ಎಚ್.ಶ್ರೀ,
ರಾಜ್ಯಪಾಲ ಧರ್ಮವೀರ, ಶ್ರೀ ರಾಮಕೃಷ್ಣ ಹೆಗಡೆ ಮತ್ತಿತರು



ಮುಖ್ಯಮಂತ್ರಿ ವೀರೇಂದ್ರ ಪಾಟೀಲರಿಗೆ ಶ್ರೀಧರರಿಂದ ಗೌರವಾರ್ಪಣೆ



ಶಿವರಾಮಕಾರಂತರಿಗೆ ಮಾಲಾರ್ಪಣೆ ಮಾಡುತ್ತಿರುವ ಶ್ರೀಧರರು




ಸಿದ್ದಾಪುರದ ಕಾಲೇಜಿನ ಶಿಲನ್ಯಾಸ ಕಾರ್ಯಕ್ರಮ (ಎಡದಿಂದ) – ಬಿ.ಎಚ್.ಶ್ರೀ,
ರಾಮಕೃಷ್ಣ ಹೆಗಡೆ, ಗಣೇಶ ಹೆಗಡೆ ಮತ್ತಿತರು



ಕವಿ ಬೇಂದ್ರೆ ಮತ್ತಿತರೊಡನೆ ಉಪಹಾರ ಸೇವನೆ



ಶಿವಮೊಗ್ಗದಲ್ಲಿ ಬೇಂದ್ರೆಯವರಿಂದ ಸನ್ಮಾನ



ಗೋಪಾಲಕೃಷ್ಣ ಅಡಿಗರೊಂದಿಗೆ (ನಾಲ್ಕನೆಯವರು) ಕುಮಟೆಯ ಕೆನರಾ ಕಾಲೇಜಿನಲ್ಲಿದ್ದಾಗ




೨೬.೪.೧೯೮೭ರಂದು ಶ್ರೀಧರರ ೭೦ನೇ ಹುಟ್ಟುಹಬ್ಬದಂದು ಶಿರಸಿಯಲ್ಲಿ ನಡೆದ ಸನ್ಮಾನದ ಚಿತ್ರ.
(ಎಡದಿಂದ) – ಜಿ.ವಿ. ಭಟ್, ಡಿ.ಎನ್. ಶಾನಭಾಗ, ಬಿ.ಎಚ್.ಶ್ರೀ, ರಮಾದೇವಿ



ಬಿ.ಎಚ್.ಶ್ರೀಧರ (೧೯೬೮ರ ಸುಮಾರಿಗೆ)



ಹುಬ್ಬಳ್ಳಿಯ 'ಕರ್ಮವೀರ' ವಾರಪತ್ರಿಕೆಯ ಉಪಸಂಪಾದಕರಾಗಿದ್ದಾಗಿನ ಬಿ.ಎಚ್.ಶ್ರೀ (೧೯೪೭–೫೧)



ಕುಮಟೆಯಲ್ಲಿ ವಾಸವಿದ್ದ ಮನೆಯೆದುರು (೧೯೫೧–೧೯೬೨)



ಮೈಸೂರಿನ ಮಹಾರಾಜ ಕಾಲೇಜಿನ ದಿಗ್ಗಜ ಪ್ರಾಧ್ಯಾಪಕರೊಂದಿಗೆ ಶಿಷ್ಯ ಶ್ರೀಧರ
(ನಿಂತವರದಲ್ಲಿ (ಬಲಗಡೆಯಿಂದ) ಎರಡನೇ ಸಾಲಿನಲ್ಲಿ ಮೊದಲನೆಯವರು)



ಸಭೆಯೊಂದರಲ್ಲಿ ಬಿ.ಎಚ್. ಶ್ರೀಧರರು ಮಾತನಾಡುತ್ತಿರುವುದು



ಕುಮಟೆಯ ಸಾಹಿತ್ಯ ಸಮ್ಮೇಲನದಲ್ಲಿ – (ನಿಂತವರು) – ಬಿ.ಎಚ್. ಶ್ರೀಧರ, ವೈಎನ್.ಕೆ. (ಕುಳಿತವರು)
– ಗೋಪಾಲಕೃಷ್ಣ ಅಡಿಗ, ತ.ರಾ.ಸು., ರಾಮಚಂದ್ರ ಶರ್ಮ, ಸು.ರಂ. ಎಕ್ಕುಂಡಿ



ಪೂರ್ವದಲ್ಲಿ ಅಂಧಶ್ರದ್ಧೆ ಹಾವಳಿಯನ್ನು ನಡೆಸಿದ್ದರೆ, ಇಂದು ವಿಚಾರಾಂಧತೆ ಜೀವನವನ್ನು ಬಾಧಿಸುತ್ತಿದೆ. ಕುಶ್ರದ್ಧೆಯಿಂದ ಹಾಳಾಗುವುದೂ ಒಂದೇ, ಕುವಿಚಾರದಾಸ್ಯದಿಂದ ಹಾಳಾಗುವುದೂ ಒಂದೇ. ಅಹಂಕಾರಿಗಳಿರುವಲ್ಲಿ ಯಾವುದೂ ಸ್ವಸ್ವರೂಪದಲ್ಲಿ ಶುದ್ಧವಾಗಿ ಉಳಿಯದು. ಅದರ ಬಣ್ಣ ಎಲ್ಲ ತತ್ವಕ್ಕೂ ಅಂಟಿ ಅದು ಮನುಷ್ಯರ ಆಚಾರವನ್ನು ಕಲುಷಿತಗೊಳಿಸದಿರದು. ಶ್ರೀರಮಣರ ಪ್ರಕಾರ ಈ ಅಹಂಕಾರವೇ ಮಾಯೆ, ಮನ. ಇದೇ ಎಲ್ಲ ಹಾನಿಗೂ ಹೇತು. ಆದುದರಿಂದ ಮನದಿಂದ ಎಲ್ಲ ವಿಚಾರಗಳನ್ನೂ ಹೊರಹಾಕಬೇಕಾಯಿತು. ಹಾಗಲ್ಲದೆ ಅದು ಹಲ್ಲು ಮುರಿದ ಹಾವಾಗದು. ಆ ಹಲ್ಲು ಮುರಿಯುವ ಕಾರ್ಯವಾದರೋ "ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್‌ದೃಢಂ। ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಂ" ಎಂದು ಅರ್ಜುನ ಹೇಳಿದಂತೆ ಅತ್ಯಂತ ಕಠಿಣ. ಕೆಲವೊಮ್ಮೆ ವಿಚಾರದ ಸುಷ್ಠುತ್ವ – ದುಷ್ಟತ್ವಗಳು ಅನಿರ್ಣೇಯಗಳಾಗಿಬಿಡುತ್ತವೆ. ಏಕೆಂದರೆ ವಿಚಾರಕ್ಕೆ ವ್ಯಕ್ತಿಹಿತ, ಸಮಾಜಹಿತ, ರಾಷ್ಟ್ರಹಿತ, ವರ್ಗಹಿತ, ಕುಟುಂಬಹಿತ, ಜಾತಿಹಿತ ಮುಂತಾದ ಅನೇಕ ಸರ್ಪಗಳು ಪರಿಬಂಧಗಳಾಗುತ್ತವೆ. ಆದುದರಿಂದ ಸರ್ವರೂ ಸರ್ವದೇಶಕಾಲ–ಸಂದರ್ಭಗಳಲ್ಲೂ ಆಚರಣೀಯವೆಂಬಂಥ ಒಂದೇ ಒಂದು ಪರಿಶುದ್ಧ ವಿಚಾರವೂ ಆತ್ಮಸಾಕ್ಷಿಯಾಗಿ ಸಿಕ್ಕದು. ಪ್ರಪಂಚಪ್ರಜ್ಞೆಯುಳ್ಳ ಮನದ ವಿಚಾರ ವ್ಯಂಜಿಸುವ ಸತ್ಯ ಸರ್ವಥಾ ನ್ಯೂನ, ಅವ್ಯಾಪಕ, ಅಸಾರ್ವತ್ರಿಕ ಎಂದು ತಿಳಿದ ಮನ "ನ ಧರ್ಮೋ ನ ಚಾರ್ಥೋ ನ ಕಾಮೋ ನ ಮೋಕ್ಷಃ। ಚಿದಾನಂದ ರೂಪಃ ಶಿವೋಹಂ" ಎಂಬ ಅವಧೂತ ಸ್ಥಿತಿಯನ್ನಲ್ಲದೆ ಮತ್ತೇನನ್ನು ಹಿಡಿದೀತು?

– ವಿಚಾರಕ್ಕೆ ಬಹಿಷ್ಕಾರ!

– ಬಿ.ಎಚ್. ಶ್ರೀಧರ

ಬಾಗೂರು ಮಾರ್ಕಂಡೇಯ




ತೇಜು ಪಬ್ಲಿಕೇಷನ್ಸ್